ಬೆಳಗಾವಿ ಜಿಲ್ಲೆಯ ಜನರಿಗೆ, ಆ ಜಿಲ್ಲೆಯಾಚೆಯ ಜನರಿಗೆ ಗುರು, ತಂದೆ, ಬಂಧು, ಬಳಗ—ಎಲ್ಲ ಆಗಿದ್ದ ಆ ಮಹಾತ್ಮನನ್ನುಳಿದು ಬೆಳಗಾವಿ ಜಿಲ್ಲೆಯನ್ನು ಊಹಿಸುವುದಾದರೂ ಹೇಗೆ ? ನಾನಂತೂ ಮಂಕಾಗಿ ಬಿಟ್ಟಿದ್ದೆ. ತಂದೆಯವರು ಹೋದರು, ಮೃತ್ಯುಂಜಯಪ್ಪಗಳು ಹೋದರು, ಈಗ ಮಹಾಂತ ಶಿವಯೋಗಿಗಳು ಹೋದರು. ಸರ್ವವೂ ಶೂನ್ಯವಾಗಿ ತೋರಿತಾಗ !

## ಮಂತ್ರಿಗಳ ನಿರಂತರ ಯಾತ್ರೆ :

ಬರಗಾಲ ಕಾಮಗಾರಿಗಳು ಯಶಸ್ವಿಯಾಗಿ ಮುಗಿಯುತ್ತ ಬಂದಂತೆ ಮಂತ್ರಿಗಳ ಸವಾರಿ ಬಂದದ್ದೇ ಬಂದದ್ದು ! ಎಲ್ಲರೂ ತಮ್ಮದೂ ಮುಖ ತೋರಿಸಿ, ತಾವೂ ಅವರಿಗಾಗಿ ಮಹತ್ತರವಾದುದನ್ನೇ ಮಾಡಿದೆವೆಂಬುದನ್ನು ಪರೋಕ್ಷವಾಗಿ ಹೇಳಿ ಹೋಗಬೇಕೆನ್ನುವವರೇ ! ಬಂದವರ ಹಿಂದೆ ತಿರುಗುವುದು, ತೋರಿಸಿದುದನ್ನೇ ತೋರಿಸುವುದು, ಹೇಳಿದುದನ್ನೇ ಹೇಳುವುದು ನಡೆಯಿತು. ಜನರೂ ಬೇಸತ್ತರು, ನಾನೂ ಬೇಸತ್ತೆ. ಎಲ್ಲರೂ ರೈತರ ಮನವಿಗಳನ್ನು ಬೆಂಗಳೂರಿಗೆ ಒಯ್ದು ಅಲ್ಲಿ ಅವುಗಳಿಗೆ ಅಜ್ಞಾತವಾಸದ ವ್ಯವಸ್ಥೆ ಮಾಡುವವರೇ ! ಉಳಿದವರು ಸುಮ್ಮನೇ ಹೋದರೆ ಅರ್ಥಮಂತ್ರಿ ಘೋರ್ಪಡೆಯವರು ಅನರ್ಥ ಮಾಡಿಹೋದರು ! ಅದುವರೆಗೆ ಎಲ್ಲಿಯೂ ಆಹಾರ ಧಾನ್ಯಗಳ ಕೊರತೆ ತಲೆದೋರದಂತೆ, ಬೆಲೆಗಳು ಮೇಲೇರದಂತೆ ನೋಡಿಕೊಂಡಿದ್ದೆ. ವರ್ತಕರ ಸಹಕಾರವೂ ಸಾಕಷ್ಟು ಪ್ರಮಾಣದಲ್ಲಿ ಸಿಕ್ಕಿದ್ದಿತು. ಯಾವುದೇ ಅಗತ್ಯ ವಸ್ತುವಿನ ಬೆಲೆಯೇರಿದರೂ ಅವರನ್ನು ಕರೆದು ಅದು ತಗ್ಗುವಂತೆ ಏರ್ಪಾಟು ಮಾಡಿ ಕಳಿಸುತ್ತಿದ್ದೆ. ಆದರೆ ಅರ್ಥಮಂತ್ರಿಗಳು ಮುಚ್ಚಿಟ್ಟ ಧಾನ್ಯ ಸಂಗ್ರಹಗಳ ಮೇಲೆ ದಾಳಿಗಳನ್ನೇಕೆ ಮಾಡಿಲ್ಲವೆಂದು ರೇಗಿದರು. "ಅವುಗಳ ಅರಿವು ನಮಗಿದೆ ; ಪ್ರಸಂಗಾನುಸಾರ ಅವುಗಳನ್ನು ವಶಪಡಿಸಿಕೊಳ್ಳುತ್ತೇವೆ ; ಈಗ ಕೊರತೆಯ, ಬೆಲೆಯೇರಿಕೆಯ ಸಮಸ್ಯೆಯೇ ಇಲ್ಲ ; ನನ್ನ ಜಿಲ್ಲೆಯ ಜವಾಬದಾರಿ ನನ್ನದು. ದಯವಿಟ್ಟು ನನ್ನ ನಿರ್ಣಯ ನಾನೇ ತೆಗೆದುಕೊಳ್ಳಲು ಬಿಡಿ" ಎಂದು ಪರಿಪರಿಯಿಂದ ತಿಳಿಸಿ ಹೇಳಿದರೂ ಗೋರ್ಕಲ್ಲ ಮೇಲೆ ಮಳೆಗರೆದಂತಾಯಿತು. "ಇಂದು ರಾತ್ರಿ ದಾಳಿ ನಡೆಯಲೇಬೇಕು ; ಬೆಳಗಾವಿಯ ಹಾಗೂ ಹಳ್ಳಿಗಳ ಯೋಗ್ಯದರದ ಅಂಗಡಿಗಳಿಗೆ ದಾಳಿಗಳ ಮೂಲಕ ವಶಪಡಿಸಿಕೊಂಡ ಧಾನ್ಯಗಳ ವಿತರಣೆಯಾಗಲೇಬೇಕು" ಎಂದು ಹಟ ಹಿಡಿದರು. "ಇಂದಿನ ದಾಳಿಯಲ್ಲಿ ದೊರೆತುದು ಒಂದು ದಿನಕ್ಕೆ ಸಾಕಾಗಬಹುದು; ಧಾನ್ಯ ಸಂಗ್ರಹಗಳೆಲ್ಲ ಭೂಗತವಾಗಿಬಿಟ್ಟರೆ ಮುಂದೆ ಎಲ್ಲಿಂದ ಆಹಾರ ಧಾನ್ಯಗಳನ್ನು ಪೂರೈಸುವುದು—ಈ ಅಂಗಡಿಗಳಿಗೆ ?" ಎಂದು ಕೇಳಿದೆ. ನಾಳೆಗೇ ಹುಬ್ಬಳ್ಳಿಯ ಫುಡ್ ಕಾರ್ಪೊರೇಷನ್‌ಗೆ ಲಾರಿಗಳನ್ನು ಕಳಿಸಿರಿ ; ಎಷ್ಟು ಬೇಕಾದರೂ ಅಲ್ಲಿ ದೊರೆಯುತ್ತದೆ," ಎಂದು ಎದೆತಟ್ಟಿ ಹೇಳಿದರು, ಅಂದು ರಾತ್ರಿ ಬೆಳಗಾವಿಯಲ್ಲೆಲ್ಲ ದಾಳಿ ನಡೆಸಿದೆವು. ಸಿಕ್ಕ ಆಹಾರ ಧಾನ್ಯಗಳು ಮುನ್ನೂರು ಮೂಟೆಗಳು

ಮಾತ್ರ: ನಿರೀಕ್ಷಿಸಿದ್ದಂತೆ ಜಿಲ್ಲೆಯಲ್ಲೆಲ್ಲ ಧಾನ್ಯ ಸಂಗ್ರಹಗಳು 'ಕಾಣೆ'ಯಾಗಿ ಬಿಟ್ಟುವು! ಹುಬ್ಬಳ್ಳಿಗೆ ಇಪ್ಪತ್ತೊಂದು ಲಾರಿಗಳನ್ನು ಕಳಿಸಿದೆ. ಎಲ್ಲವೂ ಹೇಗೆ ಹೋಗಿದ್ದುವೋ ಹಾಗೆ ಬಂದುಬಿಟ್ಟುವು! ಅಲ್ಲಿ ಒಂದು ಒಡಕು ಕಾಳೂ ಇರಲಿಲ್ಲ! ಇಂಗ್ಲೆಂಡಿನಲ್ಲಿ ಅರ್ಥಶಾಸ್ತ್ರ ಓದಿದ್ದ ನಮ್ಮ ಅರ್ಥಮಂತ್ರಿಗಳ ಕ್ರಮ ವ್ಯರ್ಥವಾಗಿ ದ್ದಿತು. ಅಲ್ಲ, ಅನರ್ಥವಾಗಿದ್ದಿತು. ಮುಂದೇ ಈ ಮಹಾಶಯರೇ ಸೊಂಡೂರಿನಲ್ಲಿ ಗಣಿ ಕಾರ್ಮಿಕರಿಗಾಗಿ ಹತ್ತು ಹಾಸಿಗೆಗಳ ಆಸ್ಪತ್ರೆಯೊಂದನ್ನು ಕಟ್ಟಿಸಲು ನಿವೇಶನ ವೊಂದನ್ನು ದಾನವಾಗಿ ಕೊಡಬೇಕೆಂದು ಕಾರ್ಮಿಕ ಮಂತ್ರಿ ಅಜೀಜ್ ಸೇಠ್ ಸಾಹೇಬರು ಸ್ವತಃ ಹೋಗಿ ಕೇಳಿದಾಗ ಸೊಂಡೂರಿನಲ್ಲಿ ನನ್ನದೆನ್ನುವ ನಿವೇಶನವೇ ಇಲ್ಲವೆಂದು ಹೇಳಿಬಿಟ್ಟರು. ಊರಲ್ಲೆಲ್ಲ ಅವರ ಜಾಗಗಳೇ ಇದ್ದರೂ! ಇವರ ಬಗ್ಗೆಯೇ ಬರೆಯುವುದು ಬೇಕಾದಷ್ಟಿದೆ. ಆದರೆ ಇಲ್ಲಿ ಅದಕ್ಕೆ ಅನುವು ಇಲ್ಲ.

ಈ ಆಘಾತದಿಂದ ಚೇತರಿಸಿಕೊಳ್ಳುವಷ್ಟರಲ್ಲಿ ಇನ್ನೊಂದು ಆಗಬಾರದುದು ಆಗಿ ಹೋಯಿತು. ನಾಲ್ಕು ದಿನಗಳಲ್ಲಿಯೇ ಮತ್ತೊಬ್ಬ ರಾಜ್ಯ ಸಚಿವರು ಬಂದರು. ವಿಭಾಗಾಧಿಕಾರಿಗಳ ಚೇಂಬರಿನಲ್ಲಿ ಇನ್ನೊಂದು ಅಧಿಕಾರಿಗಳ ಸಮ್ಮೇಳನ ಅವರಿಗಾಗಿ. ಅದುವರೆಗೆ ಅಂಥ ಎಷ್ಟು ಸಮ್ಮೇಳನಗಳಾಗಿದ್ದುವೋ! ರಾಜ್ಯ ಸಚಿವರು ಕೊರಳು ಮುಚ್ಚಿದ ಕಾಲರು ಬಿಚ್ಚುತ್ತ, ಪಕ್ಕದಲ್ಲಿ ಕುಳಿತಿದ್ದ ವಿಭಾಗಾಧಿಕಾರಿಗಳಿಗೆ 'ಸೆಕೆ' 'ಫ್ಯಾನ್' ಎಂದರು. ವಿಭಾಗಾಧಿಕಾರಿಗಳೇ ಅಡರಾಸಿ ಹೋಗಿ 'ಫ್ಯಾನ್' ಹಾಕಿ ದರು. ನಾನು ಭೂಮಿಯಲ್ಲಿಳಿದು ಹೋದೆ. ಇನ್ನು ಬೆಳಗಾವಿಯಲ್ಲಿರಬಾರದೆನ್ನಿ ಸಿತು. ಒಂದು ತಿಂಗಳ ರಜೆಗೆ ಬರೆದುಕೊಂಡೆ. ಎರಡೇ ದಿನಗಳಲ್ಲಿ ಪಂಚಾಯತಿ ಸಮ್ಮೇಳನಕ್ಕಾಗಿ ಸಚಿವ ಕೆ. ಎಚ್. ಪಾಟೀಲರು ಬಂದರು. ತುಂಬಿದ ಸಭೆಯಲ್ಲಿ ನಾನು ಮಾಡಿದ್ದ ಜನಕಲ್ಯಾಣ ಕಾರ್ಯಗಳನ್ನು ಪ್ರಶಂಸಿಸಿ "ಜಿಲ್ಲೆಯ ಪ್ರಜೆಗಳ ಪರವಾಗಿ ಕೇಳಿಕೊಳ್ಳುತ್ತೇನೆ, ಪುರಾಣಿಕರು ರಜೆ ರಹಿತಗೊಳಿಸಬೇಕು." ಎಂದು ಹೇಳಿ ದರು. ಒಪ್ಪಿದೆ. ಅವರು ಹೇಳಿದ್ದ ಒಂದು ಹೊಸ ಕಾರ್ಯ ಆರಂಭಿಸಿದೆ; ಮಂಗಳೂರಿನ ರಾಸಾಯನಿಕ ಗೊಬ್ಬರ ಕಾರ್ಖಾನೆಗೆ ಒಂದು ಲಕ್ಷ ರೂಪಾಯಿ ಷೇರು ಭಂಡವಾಳ ಕೂಡಿಸಿದೆ. ಹದಿನೈದೇ ದಿನಗಳಲ್ಲಿ ನನ್ನನ್ನು ಬೆಂಗಳೂರಿಗೆ ಕಾರ್ಮಿಕ ಕಮೀಷನರನ್ನಾಗಿ ವರ್ಗಾಯಿಸಿದ ಆಜ್ಞೆ ಬಂದಿತು! ಆಗ ಕಾರ್ಮಿಕ ವಿವಾದಗಳು ಹೆಚ್ಚಿದ್ದುವಲ್ಲದೆ ಹಿಂಸಾತ್ಮಕವಾಗಿ ಪರಿಣಮಿಸಿದ್ದುವೆಂದೂ, ನಾನೇ ಅವುಗಳನ್ನು ಪರಿಹರಿಸಬಲ್ಲೆನೆಂದೂ ಹೊರಗೆ ಕೊಟ್ಟ ಕಾರಣ. ಆದರೆ ಒಳಗಿನ ಕಾರಣ ಬೇರೆ ಯಿದ್ದಿತು. ಅದನ್ನು ಬರೆದು ನನ್ನ ಬರವಣಿಗೆಯನ್ನು ಕರಿದುಗೊಳಿಸಿಕೊಳ್ಳಲಾರೆ! ಹತ್ತೂ ಅಭಿವೃದ್ಧಿ ಮಂಡಳಿಗಳ ಅಧ್ಯಕ್ಷರೂ, ಮಹಾರಾಷ್ಟ್ರೀಯರೇ ಬಹು ಸಂಖ್ಯೆ ಯಲ್ಲಿದ್ದ ಬೆಳಗಾವಿಯ ನಗರ ಸಭೆಯ ಅಧ್ಯಕ್ಷರೂ ಏಕಕಂಠದಿಂದ ಇನ್ನೊಂದು ವರ್ಷವಾದರೂ ನನ್ನನ್ನು ಅಲ್ಲಿ ಉಳಿಸಲು ಕೇಳಿಕೊಂಡರು. ಯಾರೂ ಕಿವಿಗೊಡ ಲಿಲ್ಲ ಅದಕ್ಕೆ. ನನಗೆ ಆನಂದವೇ ಆಗಿದ್ದಿತು. ಕೂಡಲೇ ಹೊರಟು ಬರಬೇಕೆಂದು

ಆಜ್ಞೆಯೂ ಆಗಿದ್ದಿತು. ನನ್ನ ಕೊನೆಯ ಮಗಳು ಭಾರತಿಗೆ ಆಪರೇಷನ್ ಮಾಡಿ ಹೆರಿಗೆ ಮಾಡಿಸಿದರು. ಇನ್ನೂ ಅವಳು ಒಂದು ತಿಂಗಳ ಬಾಣಂತಿ. ಗಾಯ ಹಸಿಯಾಗಿಯೇ ಇದ್ದಿತು. ಆ ತಾಯಿ–ಮಗುವನ್ನು ವಿಮಾನದಲ್ಲಿ ಕಳಿಸಲು ಹೇಳಿ, ಹೆಂಡತಿ ಮಗ ಸೊಸೆಯನ್ನು ಅಲ್ಲಿಯೇ ಬಿಟ್ಟು ಬೆಂಗಳೂರಿಗೆ ಬಂದುಬಿಟ್ಟೆ. ಮಗ ಇಂಡಾಲಿನಲ್ಲಿ ಕೆಲಸಕ್ಕೆ ಸೇರಿದ್ದ. ಅವನನ್ನೂ, ಸೊಸೆ ಲತಾ ಪುರಾಣಿಕಳನ್ನೂ ಇಂಡಾಲ್ ಕಾಲನಿಯ ಕಿರಿಯ ಮನೆಯೊಂದರಲ್ಲಿ ಬಿಟ್ಟು, ಭಾರತಿ–ರಶ್ಮಿಯರನ್ನು ವಿಮಾನ ಮೂಲಕ ಕಳಿಸಿ, ಸಾಮಾನು ಕಟ್ಟಿಸಿ ಲಾರಿಯ ಮೂಲಕ ಕಳಿಸಿ, ಸ್ವಂತದ ಕಾರಿನಲ್ಲಿ ತಾನೊಬ್ಬಳೇ ಬೆಂಗಳೂರಿಗೆ ಬಂದಳು ಗಿರಿಜಾ—ನನ್ನ ಗಿರಿಜಾ! ನನ್ನನ್ನು ಬೀಳ್ಕೊಡುವ ಸಮಾರಂಭಗಳಲ್ಲಿ ಹೊಗಳಿದ ಕೆಳಗಿನ ಅಧಿಕಾರಿಗಳಾರೂ ಆಕೆಯ ಸಹಾಯಕ್ಕೆ ಹೋಗಿರಲಿಲ್ಲ! ಏನು ಬೀಳ್ಕೊಡುವ ಸಮಾರಂಭಗಳವು–ಜಿಲ್ಲೆಯ ತುಂಬ, ಎಲ್ಲ ಭಾಷೆಗಳ, ಎಲ್ಲ ಮತಗಳ, ಎಲ್ಲ ಉದ್ಯೋಗಗಳ ಜನರಿಂದ! ಆದರೆ ಇವಾವೂ ನನ್ನ ಹೆಂಡತಿ ಏಕಾಕಿಯಾಗಿ ಅಲ್ಲಿಂದ ಹೊರಡುವ ಸಿದ್ಧತೆ ನಡೆಸಿದ್ದಾಗ ಆಕೆಗೆ ಉಪಯೋಗವಾಗಲಿಲ್ಲ! ಆ ಆಪತ್ಕಾಲದಲ್ಲಿ ನೆರವಾದವರೊಬ್ಬರೇ–ಶ್ರೀ ಎನ್.ಎಸ್. ಪೈ ಅವರು, ಅವರ ಕುಟುಂಬದವರು. ಇಂದಿಗೂ ಅವರು ನಮ್ಮ ಅತ್ಯಂತ ಆತ್ಮೀಯ ಹಿತಬಂಧುಗಳು.

ಮೊದಲು ಡಿ. ಸಿ. ಬಂಗ್ಲೆಯಲ್ಲಿ ಯಾವಾಗಲೂ ಕಾಣುತ್ತಿದ್ದರಂತೆ ಕಂದಾಯ ಇಲಾಖೆಯ ಮೂರನೆಯ ದರ್ಜೆಯ ಅಧಿಕಾರಿಗಳು. ನಾನಿರುವ ವರೆಗೆ ಅತ್ತ ಅವರನ್ನು ಸುಳಿಯಗೊಟ್ಟಿರಲಿಲ್ಲ ನಾನು. ಅದೇ ಸಿಟ್ಟಿನಿಂದಲೋ ಏನೋ–ಅವರಾರೂ ಹೊರಳಿ ನೋಡಲಿಲ್ಲ ಆ ಕಡೆಗೆ ಆಗ. ಆದರೆ ಅತ್ಯಂತ ಆತ್ಮೀಯವಾದ ಬೀಳ್ಕೊಡುವ ಸಮಾರಂಭಗಳನ್ನು ಏರ್ಪಡಿಸಿದ್ದ ಬೆಳಗಾವಿಯ ನಗರ ಸಭೆ, ಬಾರ್ ಅಸೋಸಿಯೇಷನ್, ಪತ್ರಿಕಾಕರ್ತರ ಸಂಘ, ಕನ್ನಡ ಬರಹಗಾರರ ಸಂಘ, ಜೈನ ಮುಸಲ್ಮಾನ ಸಮಾಜಗಳು, ವಿವಿಧ ಸಂಘ ಸಂಸ್ಥೆಗಳನ್ನು ಮರೆಯುವುದು ಹೇಗೆ? ಆ ಹಳ್ಳಿಗಳ ಜನರ ಮುಗ್ಧ ಹೃದಯಗಳನ್ನು ಮರೆಯುವುದು ಹೇಗೆ? ಬೆಳಗಾವಿ ಮಹಾರಾಷ್ಟ್ರಕ್ಕೆ ಸೇರಲೇಬೇಕೆಂದು ಹೋರಾಡುತ್ತಿದ್ದ ಮಹಾರಾಷ್ಟ್ರೀಯ ಮುಖಂಡರೇ ಮನೆಯ ವರೆಗೆ ಬಂದು ತಮ್ಮ ಮೆಚ್ಚಿಗೆ ಸೂಚಿಸಿದುದನ್ನು ಮರೆಯುವುದು ಹೇಗೆ? ನನ್ನ ಕೋರಿಕೆಯಂತೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಬೆಳಗಾವಿಯ ನಗರ ಸಭೆ ಐದು ಸಾವಿರ ರೂಪಾಯಿಗಳನ್ನೂ, ಕೆ. ಹನುಮಂತಯ್ಯನವರಿಗೆ ಮಾನಪತ್ರವನ್ನೂ ಕೊಟ್ಟುದನ್ನು ಮರೆಯುವುದು ಹೇಗೆ? ಡಾ. ಹಾ. ಮಾ. ನಾಯಕರ ಅಧ್ಯಕ್ಷತೆಯಲ್ಲಿ ಪರಿಷದಧ್ಯಕ್ಷ ಜಿ. ನಾರಾಯಣರೇ "ಇದು ಜಿಲ್ಲಾ ಸಾಹಿತ್ಯ ಸಮ್ಮೇಳನವಲ್ಲ, ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ," ಎಂದು ಉದ್ಗರಿಸುವಂತೆ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಜರುಗಿಸಿದಾಗ ಮಹಾರಾಷ್ಟ್ರೀಯರೂ ಅವಕ್ಕೆ ನೆರವಾದುದನ್ನು ಮರೆಯುವುದು ಹೇಗೆ?

**ಮರಳಿ ಬೆಂಗಳೂರಿಗೆ:**

ಕಾರ್ಮಿಕ ಮಂತ್ರಿಗಳಾದ ಅಜೀಜ್‌ಸೇಠ್ ಸಾಹೇಬರು ಬಹಳ ಕೋಪಿಷ್ಠರೆಂದು ಹಲವರು ಹೆದರಿಸಿದ್ದರು ನನ್ನನ್ನು. ಆದರೆ ನನ್ನನ್ನು ಮಾತ್ರ ಬಹಳ ಪ್ರೀತ್ಯಾದರ ಗಳೊಡನೆ ನೋಡಿಕೊಂಡರವರು. ನಾನೂ ಚಾರ್ಜು ವಹಿಸಿಕೊಂಡ ದಿನದಿಂದಲೇ ಅಗ್ನಿಶಾಮಕ ಯಂತ್ರದಂತೆ ಕಾರ್ಯತತ್ಪರನಾದೆ. ಬೆಂಗಾಲ್ ಲ್ಯಾಂಪ್ಸ್, ಎಚ್.ಎಮ್.ಟಿ., ಎವ್ಕೋ ಮೊದಲಾದ ಕಾರಖಾನೆಗಳಲ್ಲಿ ಹಿಂಸಾಕಾಂಡ ನಡೆದು ದಲ್ಲದೆ ಅಗ್ನಿದೇವನೂ ಅಲೆದಾಡಿದ್ದ. ಮೊದಲು ಎವ್ಕೋ ವಿವಾದವನ್ನು ಕೈಗೆತ್ತಿ ಕೊಂಡೆ. ಕಾರ್ಮಿಕರ ಪರವಾಗಿ ಮದ್ರಾಸಿನ ಕುಚೇಲರ್ ಬಂದಿದ್ದರು. ಅವರು ಪ್ರಚಂಡ ಮುಖಂಡರು. ಎರಡು ದಿನ ಬಿಟ್ಟೂ ಬಿಡದೆ ನಡೆಸಿದ ಸಂಧಾನದ ಫಲವಾಗಿ ಒಪ್ಪಂದವೊಂದಕ್ಕೆ ಅಂಕಿತ ಹಾಕಿದರು ಮಾಲಿಕ ಕಾರ್ಮಿಕರಿಬ್ಬರೂ. ಈ ಸುದ್ದಿ ಹರಡುತ್ತಲೆ ಸಂಧಾನಗಳ ಸುಗ್ಗಿಯೇ ಶುರುವಾಯಿತು. ಒಂದೊಂದಾಗಿ ಸಂಧಾನ ಗಳು ಫಲಿಸತೊಡಗಿದುವು. ಬೆಂಗಳೂರು, ದಾವಣಗೆರೆ, ಹರಿಹರ, ಹುಬ್ಬಳ್ಳಿ, ದಾಂಡೇಲಿ, ಗೋಕಾಕ ಮೊದಲಾದ ಕಡೆಗಳಲ್ಲಿ, ಕಾಫೀ ತೋಟಗಳಲ್ಲಿ, ಚಹಾ ತೋಟಗಳಲ್ಲಿ–ಎಲ್ಲೆಲ್ಲಿ ಕಾರ್ಮಿಕ ಅಶಾಂತಿಯಿದ್ದಿತೋ ಅಲ್ಲಲ್ಲಿ ಒಪ್ಪಂದಗಳು ಉಂಟಾಗಿ ಶಾಂತಿ ಮರಳಿತು. ಎಚ್.ಎಮ್.ಟಿ.ಯ ವಿವಾದ ಮಾತ್ರ ವಿಶೇಷ ತಂತ್ರವೊಂದನ್ನು ಉಪಯೋಗಿಸುವಂತೆ ಮಾಡಿತು. ಯಾವುದು ಪ್ರಾತಿನಿಧಿಕ ಕಾರ್ಮಿಕ ಸಂಸ್ಥೆಯೆಂಬು ದನ್ನು ನಿರ್ಧರಿಸಲು ಗುಪ್ತ ಮತದಾನ ಪದ್ಧತಿಯ ಮೇರೆಗೆ ಅಭಿಪ್ರಾಯ ಸಂಗ್ರ ಹಣೆಯ ಸಲಹೆ ಮುಂದಿಟ್ಟೆ. ನಾನೇ ರಿಟರ್ನಿಂಗ್ ಆಫೀಸರ್ ಆಗಿ ಆಯ್ಕೆ ನಡೆಸುವುದಾದರೆ ಒಪ್ಪುವುದಾಗಿ ಎಲ್ಲ ಕಾರ್ಮಿಕ ಸಂಘಗಳ ನೇತಾರರೂ ಹೇಳಿದರು. ನಾನೇ ರಿಟರ್ನಿಂಗ್ ಆಫೀಸರ್ ಆಗಿ ಸಾರ್ವತ್ರಿಕ ಚುನಾವಣೆಗಳನ್ನು ನಡೆಸುವಷ್ಟೇ ಅಚ್ಚುಕಟ್ಟಾಗಿ ಚುನಾವಣೆ ನಡೆಸಿದೆ. ಚುನಾವಣೆಯ ಫಲಿತಾಂಶವನ್ನು ಎಲ್ಲರೂ ಒಪ್ಪಿಕೊಂಡರು. ಅಲ್ಲಿಗೆ ಆ ವಿವಾದ ಮುಕ್ತಾಯಗೊಂಡಿತು. ಕೈಗಾರಿಕಾ ಸಂಬಂಧ ಗಳ ಕ್ಷೇತ್ರದಲ್ಲಿ ಇದೊಂದು ಹೊಸ ರೀತಿ **(Blazing a New trail in Industrial Relations)** ಎಂದು ಹಿಂದೂ ಪತ್ರಿಕೆಯಲ್ಲಿ ಎಚ್.ಎಮ್.ಟಿ.ಯ ವರದನ್ ಅವರು ವಿಸ್ತೃತ ಲೇಖನ ಬರೆದರು. ಆ ವರ್ಷದ ಅಸೆಂಬ್ಲಿಯ ಆಯವ್ಯಯ ಪತ್ರಿಕೆಯ ಅಧಿವೇಶನದಲ್ಲಿ ಕಾರ್ಮಿಕ ಇಲಾಖೆಯ ಬೇಡಿಕೆಗಳು ಬಂದಾಗ ಇಲಾಖೆಯ, ಇಲಾಖೆಯ ಮುಖ್ಯಾಧಿಕಾರಿಯ ಸಾಧನೆಗಳ ಪ್ರಶಂಸೆ ನಡೆಯಿತು.

ಕನಿಷ್ಠ ವೇತನ ಕಾನೂನು ಹುಟ್ಟಿದಾಗಿನಿಂದ ಅದರ ಪ್ರಯೋಜನ ಪಡೆದಿದ್ದವ ರೆಷ್ಟು ಅಸಂಘಟಿತ ಕಾರ್ಮಿಕರೋ ಅದರ ಮುಮ್ಮಡಿ, ನಾಲ್ವಡಿ ಜನರು ಆದರಿಂದ ಲಾಭ ಹೊಂದುವಂತೆ ಮಾಡಿದೆ. ಅಸಂಘಟಿತ ರಂಗದ ಕಾರ್ಮಿಕರ ಸ್ಥಿತಿ ಶೋಚ ನೀಯವಾಗಿದ್ದಿತು. ಸಂಘಟಿತ ಕ್ಷೇತ್ರದ ಕಾರ್ಮಿಕರಿಗೆ ಸಾಮೂಹಿಕ ಸಂಧಾನದ, ಮುಷ್ಕರದ, ನ್ಯಾಯಾಲಯನಿರ್ಣಯದ ಹಕ್ಕುಗಳಿದ್ದು ಅವರು ಅವುಗಳನ್ನು

ಸಮರ್ಥವಾಗಿ ಉಪಯೋಗಿಸಿಕೊಳ್ಳುತ್ತ, ತಮ್ಮ ಸ್ಥಿತಿಯನ್ನು ಸುಧಾರಿಸಿಕೊಳ್ಳುತ್ತ ನಡೆದಿದ್ದರೂ ಅಸಂಘಟಿತ ಕ್ಷೇತ್ರದ ಕಾರ್ಮಿಕರು ಅನಾಥರಂತಿದ್ದರು. ಅವರಿಗಾಗಿಯೇ ಇದ್ದ ಕನಿಷ್ಠ ವೇತನ ಕಾನೂನಿನ ಉಪಯೋಗವನ್ನು ಅವರ ಪರವಾಗಿ ಅಷ್ಟಾಗಿ ಮಾಡಿರಲಿಲ್ಲ. ಅದಕ್ಕೆ ಆದ್ಯತೆಯನ್ನು ನೀಡಿದೆ. ಬೀಡಿ ಕಾರ್ಮಿಕರಿಂದಲೇ ಪ್ರಾರಂಭಿಸಿದೆ. ಆಗ ಒಂದು ಸಾವಿರ ಬೀಡಿ ಕಟ್ಟಿದರೆ ಎರಡುವರೆ ರೂಪಾಯಿಗಳು ದೊರೆಯುತ್ತಿದ್ದುವು ಅವರಿಗೆ. ಅವರ ಕನಿಷ್ಠ ವೇತನವನ್ನು ಒಮ್ಮೆಗೇ ಐದು ರೂಪಾಯಿಗಳಿಗೆ ಏರಿಸಿದೆ. ಒಂದು ಅಂದಾಜಿನ ಪ್ರಕಾರ ಪ್ರತಿ ವರ್ಷ ಹದಿನೆಂಟು ಕೋಟಿ ರೂಪಾಯಿಗಳು ಮೊದಲಿಗಿಂತ ಹೆಚ್ಚು ಬೀಡಿ ಕಾರ್ಮಿಕರ ಕೈಸೇರತೊಡಗಿದುವು. ಸಂಪಾದನೆಯ ಸಮುಚಿತ ವಿತರಣೆಗೆ ಎಂಥ ಸುಲಭ ಮಾರ್ಗವಿದು– ಎಂದೆನಿಸಿತು ನನಗೆ. ಬೇರೆ ಬೇರೆ ರಂಗಗಳ ಅರಕ್ಷಿತ ಕಾರ್ಮಿಕರ ಕನಿಷ್ಠ ವೇತನ ನಿಗದಿಯ ಕಾರ್ಯವನ್ನು ಒಂದು ಪವಿತ್ರ ಕರ್ತವ್ಯವೆಂದು ಭಾವಿಸಿ ತ್ವರಿತ ಕ್ರಮಗಳನ್ನು ಕೈಕೊಂಡೆ. ಕೃಷಿ ಕಾರ್ಮಿಕರ, ಹೋಟೇಲು ಕಾರ್ಮಿಕರ, ಸಿನಿಮಾ ಮಂದಿರಗಳ ಕಾರ್ಮಿಕರ, ಅಗರಬತ್ತಿ ಕಾರ್ಮಿಕರ, ಲೋಕೋಪಯೋಗಿ ಇಲಾಖೆಯ ಕಾರ್ಯಗಳ ಕಾರ್ಮಿಕರ, ಹೊಲಿಗೆ ಕಾರ್ಮಿಕರ, ಇನ್ನೂ ಅನೇಕ ರಂಗಗಳ ಕಾರ್ಮಿಕರ ಕನಿಷ್ಠ ವೇತನಗಳು ನಿಗದಿಯಾದುವು. ಇನ್ನೂ ಅನೇಕ ರಂಗಗಳ ಕಾರ್ಮಿಕರ ಕನಿಷ್ಠ ವೇತನ ನಿಗದಿಗೊಳಿಸುವ ಸಲುವಾಗಿ ಸಮಿತಿಗಳು ರಚಿತವಾದುವು.

## ನ್ಯೂಯಾರ್ಕಿನಲ್ಲಿ

ರಾಜ್ಯದ ಬಹುದೊಡ್ಡ ಉದ್ಯಮಗಳಲ್ಲೊಂದಾದ ಜವಳಿ ಗಿರಣಿಗಳ ಉದ್ಯಮದಲ್ಲಿಯ ವೇತನಶ್ರೇಣಿ ವಿಚಿತ್ರವಾದುದಾಗಿದ್ದಿತು. ತಿಂಗಳಿಗೆ ನಾಲ್ವತ್ತು ರೂಪಾಯಿಗಳಿಂದ ಮುನ್ನೂರು ರೂಪಾಯಿಗಳವರೆಗೆ ಅನೇಕ ಶ್ರೇಣಿಗಳಿದ್ದವು ಅದರಲ್ಲಿ. ಅವೆಲ್ಲವುಗಳನ್ನು ಪರಿಶೀಲಿಸಿ ಯೋಗ್ಯ ವೇತನ ಶ್ರೇಣಿಗಳನ್ನು ಸೂಚಿಸಲು ಸರಕಾರ ನನ್ನ ಅಧ್ಯಕ್ಷತೆಯಲ್ಲಿ ಒಂದು ಉಚ್ಚಾಧಿಕಾರ ಸಮಿತಿಯನ್ನು ರಚಿಸಿತು. ಆದರೆ ಅನೇಕ ಸಭೆಗಳಾದವು. ಕಾರ್ಮಿಕ ಪ್ರತಿನಿಧಿಗಳ ಬೇಡಿಕೆ ಹಾಗೂ ಮಾಲಿಕರ ಪರಮಾವಧಿ ನೀಡಿಕೆಗಳ ಮಧ್ಯದ ಕಂದಕ ದೂರಾಗಲೇ ಇಲ್ಲ. ನನ್ನ ಎಲ್ಲ ಸಾಮರ್ಥ್ಯವನ್ನೂ ಉಪಯೋಗಿಸಿ ಕೊನೆಗೂ ಸರ್ವಸಮ್ಮತವಾದ ವರದಿಯೊಂದನ್ನು ಸಿದ್ಧಗೊಳಿಸಿದೆ. ಅದರ ಪ್ರಕಾರ ತಿಂಗಳಿಗೆ 150 ಹಾಗೂ ಅದಕ್ಕೂ ಹೆಚ್ಚು 250 ಹಾಗೂ ಅದಕ್ಕೂ ಹೆಚ್ಚು, 350 ಹಾಗೂ ಅದಕ್ಕೂ ಹೆಚ್ಚು –ಈ ಮೂರೇ ಶ್ರೇಣಿಗಳಿದ್ದುವು. ವಿಮಾನ ನಿಲ್ದಾಣದಲ್ಲಿ ಅದಕ್ಕೆ ಅಂಕಿತ ಹಾಕಿ ನಾನು ಸಪತ್ನೀಕನಾಗಿ ನ್ಯೂಯಾರ್ಕಿಗೆ ಹೊರಟೆ– ನಾಲ್ಕು ತಿಂಗಳುಗಳ ವಿಹಾರೀ ವೀಸಾ ಪಡೆದು. ಆಗ ನನ್ನ ಮಗಳು ಡಾ॥ ಶಿವಗೀತಾ ಪೂಜಾರಿ, ಅಳಿಯ ಡಾ. ಗಂಗಾಧರ ಪೂಜಾರಿ ನ್ಯೂಯಾರ್ಕಿನಲ್ಲಿ ಕೆಲಸಮಾಡುತ್ತಿದ್ದರು. ಅವರ ಒತ್ತಾಯದಕರೆಗೆ ಓಗೊಟ್ಟು ಅಲ್ಲಿಗೆ ಹೋದೆವು. ನ್ಯೂಯಾರ್ಕ

ನಗರವನ್ನು ಸಹಜವಾಗಿಯೆ ವಿವರವಾಗಿ ನೋಡಿದೆವು. ವಾಷಿಂಗ್‌ಟನ್ನಿನಲ್ಲಿ ಮೂರು ದಿನ, ಫಿಲಡೆಲ್ಫಿಯಾದಲ್ಲಿ ಎರಡುದಿನ, ವ್ಹರ್ಜೀನಿಯಾ ರಾಜ್ಯದಲ್ಲಿ ಹಿರೇಮಠ ದಂಪತಿಗಳೊಡನೆ ಒಂದು ದಿನವಿದ್ದು ನ್ಯೂಯಾರ್ಕಿಗೆ ಮರಳಿದೆವು. ಸರಕಾರ ಆ ವರದಿ ಸ್ವೀಕರಿಸಿ ಆರ್ಡರು ಹೊರಡಿಸಿದ್ದ ಸಂತೋಷದ ಸುದ್ದಿ ಬಂದಿತು. ತಿಂಗಳಿಗೆ ನಾಲ್ವತ್ತು ರೂಪಾಯಿ ಪಡೆಯುತ್ತಿದ್ದ ಸಾವಿರಾರು ಕಾರ್ಮಿಕರಿಗೆ ಒಮ್ಮೆಗೆ ನೂರೈವ್ವತ್ತು ರೂಪಾಯಿಗಳು ಸಿಕ್ಕುವಂತಾದುದನ್ನು ನೆನೆದು ಪುಲಕಿತನಾದೆ. ಅದೇ ಸಂತೋಷದಲ್ಲಿ ರೇಡಿಯೋ ಸಿಟಿಗೆ ಹೋಗಿ ಸಿನಿಮಾ, ಸಾಮೂಹಿಕನೃತ್ಯ, ಬೊಂಬೆಯಾಟ ನೋಡಿ ಬಂದೆ.

ಮಗಳು–ಅಳಿಯರ ಒಲುಮೆಯು ಫಲವಾಗಿ ಬೋಸ್ಟನಿನಿಂದ ಓರ್ಲೆಂಡೋದ ವರೆಗೆ ಅಮೆರಿಕೆಯ ಅನೇಕ ಪ್ರೇಕ್ಷಣೀಯ ನಗರಗಳನ್ನೂ, ಜಂಗಲ್ ಹೆಬಿಟಾಟ್, ಡಿಸ್ನಿಲ್ಯಾಂಡ್, ಸೀವರ್ಲ್ಡ್, ಪ್ಯಾರೊಟ್ ಜಂಗಲ್, ನಾಸಾ ಮೊದಲಾದ ಅದ್ಭುತ ರಮ್ಯ ಸ್ಥಳಗಳನ್ನೂ, ಕೆನಡಾದ ಮಾಂಟ್ರಿಯಲ್, ಓಟಾವಾ, ಟೊರೆಂಟೋ ನಗರ ಗಳನ್ನೂ, ನಯಗಾರಾ ಜಲಪಾತವನ್ನೂ, ಇಂಗ್ಲೆಂಡಿನ ಲಂಡನ್, ಆಕ್ಸ್‌ಫರ್ಡ್, ಹ್ಯಾರೋಗೇಟ್, ಷೇಕ್ಸ್‌ಪಿಯರನ ಮನೆ ಮೊದಲಾದುವನ್ನೂ, ಪ್ಯಾರಿಸ್, ಬ್ರುಷೆಲ್ಸ್, ಆಮಸ್ಟರ್‌ಡಮ್ ಮೊದಲಾದ ನಗರಗಳನ್ನೂ ನೋಡಿ ನಲಿದೆವು, ಅವೆಲ್ಲ ವುಗಳ ವರ್ಣನೆಗೆ ಪ್ರತ್ಯೇಕ ಪುಸ್ತಕವೇಬೇಕು. ನಾಲ್ಕು ತಿಂಗಳುಗಳು ನಾಲ್ಕುದಿನ ಗಳಂತೆ ಕಳೆದುವು. ವಾಲ್ಟ್‌ವ್ಹಿಟ್‌ಮನ್‌ನ ಮನೆ, ಷೇಕ್ಸ್‌ಪಿಯರ್ ಹುಟ್ಟಿದ ಮನೆ, ವ್ಹಿಕ್ಟರ್ ಹ್ಯೂಗೋನ ಮನೆ, ವರ್ಡ್ಸ್‌ವರ್ತ್‌ನ ಪ್ರಿಯಸರೋವರ ಇತ್ಯಾದಿಗಳನ್ನು ನೋಡಿದುದಂತೂ ನನ್ನ ಭಾಗ್ಯವಿಶೇಷವೆಂದೇ ಭಾವಿಸಿದ್ದೇನೆ.

ಡಾ. ಬಿ. ಡಿ. ಜತ್ತಿಯವರ ಅಪೇಕ್ಷೆಯ ಮೇರೆಗೆ ನ್ಯೂಯಾರ್ಕಿನಲ್ಲಿ ಬಸವ ಸಮಿತಿಯೊಂದನ್ನು ಸ್ಥಾಪಿಸಿದ್ದು, ಹ್ಯಾಲಿಕಾಪ್ಟರಿನಲ್ಲಿ ಸುತ್ತಿ ನ್ಯೂಯಾರ್ಕ ನಗರವನ್ನು ನೋಡಿದ್ದು, ಜಲಾಂತರ್ಗತ ನೌಕೆಯಲ್ಲಿ ಸಮುದ್ರ ಪರ್ಯಟನ ಮಾಡಿದ್ದು, ಅಲ್ಲಿಯ ವನಭೋಜನ ಕೇಂದ್ರಗಳಲ್ಲಿ ಕಳೆದ ರಾತ್ರಿಗಳು, ಮಿಯಾಮಿ ನಗರದಲ್ಲಿ ಕಳೆದ ದಿನಗಳು, ಆ ಕಡಲತೀರ, ಆ ಈಜುಗೊಳಗಳು, ಆ ಸೂರ್ಯಸ್ನಾನನಿರತ ಹೆಣ್ಣು ಗಂಡುಗಳು,– ಫ್ಲೋರಿಡಾ ಸ್ಟೇಟಿನಲ್ಲಿ ಕಂಡ ಸಾವಿರಾರು ಎಕರೆ ಕ್ಷೇತ್ರವನ್ನು ವ್ಯಾಪಿಸಿದ ಮಾವಿನ, ಸಿಹಿಲಿಂಬೆಯ, ಕಿತ್ತಳೆಯ, ತೆಂಗಿನ ತೋಟಗಳು–ಬೇಡ, ಬರೆಯುತ್ತ ಹೋದರೆ ನಿಲ್ಲಿಸುವುದೇ ಕಷ್ಟವಾದೀತು. ಇಲ್ಲಿಗೆ ಇದಕ್ಕೆ ಪೂರ್ಣವಿರಾಮ ಹಾಕಲೇಬೇಕು.

## ಮರಳಿ ಭಾರತಕ್ಕೆ

ಮುಂಬೈ ನಿಲ್ದಾಣದಲ್ಲಿಳಿದಾಗ ವಿದೇಶಗಳಲ್ಲಿ ನೋಡಿದ್ದ ದಿಕ್ಕುತಪ್ಪಿಸುವ ನಿಲ್ದಾಣಗಳ ಮುಂದೆ ಅದೊಂದು ಗೊಂಬೆಗುಡಿಯಾಗಿ ತೋರಿತು. ಆದರೂ ಸ್ವದೇಶದಲ್ಲಿ ಮತ್ತೆ ಕಾಲಿರಿಸಿದಾಗ ಎದೆ ಕುಣಿಯುತ್ತಿತ್ತು. ನ್ಯೂಯಾರ್ಕಿನಲ್ಲಿದ್ದಾಗ

ಪೊವ್ಮೊಗ ಹುಟ್ಟಿದ್ದ. ಬೆಂಗಳೂರು ತಲುಪಿದ ದಿನವೇ ಅವನ ನಾಮಕರಣ ಸಮಾರಂಭ. ನಾವು ನಾಸಾ (ಕೇಪ್ ಕೆನ್ನಡಿಯಲ್ಲಿ) ನೋಡಿದ್ದುದರ ಸ್ಮಾರಕವಾಗಿ 'ಗಗನೇಂದ್ರ' ಎಂಬ ಹೆಸರನ್ನು ಸೂಚಿಸಿದೆವು. 'ಗಗನ' ಎಂದು ಹೆಸರಿಟ್ಟರು. ಮತ್ತೆ ಚಿ॥ ವಿಜಯಾ, ಅವಳ ಪತಿ ನಂದೀಶ್ವರ, ಮಗಳು ಪಲ್ಲವಿ, ಚಿ॥ ಭಾರತಿ, ಪತಿ ಮೃತ್ಯುಂಜಯಪ್ಪ, ಮಕ್ಕಳು ರಶ್ಮಿ ವಿದ್ಯಾ ಇವರೊಡನೆ ಕೂಡಿ ಕಳೆದ ಕೆಲವು ರಸಮಯದಿನಗಳು, ತಂದಿದ್ದ ಕಾಣಿಕೆ ವಸ್ತುಗಳ ವಿತರಣೆ: ಮತ್ತೆ ನೊಗಕ್ಕೆ ಹೆಗಲು.

ನಾನು ಕಾರ್ಮಿಕ ಕಮೀಷನರನಾಗಿದ್ದುದರ ಜೊತೆಗೆ ಕೇಂದ್ರ ಸರಕಾರದ ಪರವಾಗಿ ಗಣಿಕಾರ್ಮಿಕರ ಕಲ್ಯಾಣಕ್ಕೋಸ್ಕರವಾಗಿ ಇದ್ದ ಸೆಸ್ ಮತ್ತು ವೆಲ್ಫೇರ್ ಕಮೀಷನರನಾಗಿಯೂ ಕೆಲಸಮಾಡುತ್ತಿದ್ದೆ. ಮೊದಲು ಸಿಮೆಂಟು ಕಾರಖಾನೆಗಳಿಗೆ ಹೊಂದಿ ಇದ್ದ ಗಣಿಗಳ ಕಾರ್ಮಿಕರಿಗಾಗಿ ಮನೆ ಕಟ್ಟಿಸಿಕೊಡುವ, ಕುಡಿಯುವ ನೀರು ಪೂರೈಸುವ, ಅವರ ಮಕ್ಕಳಿಗೆ ಸಮವಸ್ತ್ರಗಳನ್ನೂ ವಿದ್ಯಾರ್ಥಿವೇತನಗಳನ್ನೂ ನೀಡುವ, ಅವರಿಗಾಗಿ ಸಂಚಾರೀ ಆಸ್ಪತ್ರೆಗಳನ್ನು ನಡೆಸುವ ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡಿದ್ದೆ. ಹೊಸಪೇಟೆಯ ಹತ್ತಿರ ಕಾರಗನೂರಿನಲ್ಲಿ ಗಣಿ ಕಾರ್ಮಿಕರಿಗಾಗಿಯೇ ೨೫ ಹಾಸಿಗೆಗಳು, ಕ್ಷಕಿರಣಯಂತ್ರ ಇತ್ಯಾದಿಗಳಿಂವ ಸುಸಜ್ಜಿತವಾಗಿದ್ದ ಆಸ್ಪತ್ರೆಯೊಂದನ್ನು ಕಟ್ಟಿಸಿದುದು ಕೈಕೊಂಡ ಕಾರ್ಯಗಳಲ್ಲಿಯೇ ದೊಡ್ಡದು. ಒಟ್ಟು ೨೫ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಕುಡಿಯುವ ನೀರಿನ ವ್ಯವಸ್ಥೆ, ಡಾಕ್ಟರರ, ಸಿಬ್ಬಂದಿಯವರ ವಾಸಗೃಹಗಳು ಇತ್ಯಾದಿಗಳನ್ನೊಳಗೊಂಡು ನಿರ್ಮಿತವಾದ ಆ ಆಸ್ಪತ್ರೆ ಭಾರತದಲ್ಲಿಯೇ ಆ ಮಾದರಿಯ ಆಸ್ಪತ್ರೆಗಳಲ್ಲಿ ಎರಡನೆಯದಾಗಿದ್ದಿತು. ಆಗ ಉಪರಾಷ್ಟ್ರಪತಿಗಳಾಗಿದ್ದ ಡಾ॥ ಬಿ. ಡಿ. ಜತ್ತಿಯವರಿಂದ ಅದರ ಉದ್ಘಾಟನೆ ಮಾಡಿಸಿದೆ. ಮುಖ್ಯಮಂತ್ರಿಗಳಾಗಿದ್ದ ಡಿ. ದೇವರಾಜ ಅರಸರು ಅಧ್ಯಕ್ಷತೆ ವಹಿಸಲು ಒಪ್ಪಿದ್ದರು. ಕೊನೆಯ ಗಳಿಗೆಯಲ್ಲಿ ಬರಲಿಲ್ಲ. ಕೇಂದ್ರದಲ್ಲಿ ಕಾರ್ಮಿಕ ಇಲಾಖೆಯ ರಾಜ್ಯ ಸಚಿವರಾಗಿದ್ದ ಶ್ರೀ ಬಾಲಗೋವಿಂದ ವರ್ಮರು ಅಧ್ಯಕ್ಷತೆ ವಹಿಸಿ ಮಾತನಾಡಿ ಕರ್ನಾಟಕದಲ್ಲಿ ಗಣಿಕಾರ್ಮಿಕರಿಗಾಗಿ ಆಗಿದ್ದಷ್ಟು ಕಲ್ಯಾಣ ಕಾರ್ಯಗಳು ಭಾರತದ ಬೇರಾವ ಭಾಗದಲ್ಲಿಯೂ ಆಗಿಲ್ಲವೆಂದು ಮುಕ್ತಕಂಠದಿಂದ ಪ್ರಶಂಸಿಸಿದರು. ಅದುವರೆಗೆ ೧,೫೦೦ ಎರಡೆರಡು ಕೋಣೆಯ ಮನೆಗಳು ಸಿದ್ಧವಾಗಿದ್ದುವು. ಒಂದೊಂದಕ್ಕೆ ಹನ್ನೆರಡು ಸಾವಿರ ರೂಪಾಯಿಗಳು ಖರ್ಚಾಗಿದ್ದವು. ಕಲ್ಲಿನಗೋಡೆ, ತೇಗಿನ ಬಾಗಿಲು ಕದ ಕಿಟಕಿಗಳಿಂದ ಸಿದ್ಧವಾಗಿದ್ದ ಆ ಮನೆಗಳಲ್ಲಿ ಉಳ್ಳವರೂ ಸಂಕೋಚವಿಲ್ಲದೆ ಇರಬಹುದಾಗಿದೆ. ಮುಂದೆ ಬಾಲಗೋವಿಂದ ವರ್ಮರಿಂದಲೇ ಅಮ್ಮಸಂದ್ರ ಗಣಿಕಾರ್ಮಿಕರಿಗಾಗಿ 100 ಮನೆಗಳ ಯೋಜನೆಗೆ ಅಡಿಗಲ್ಲನ್ನಿಡಿಸಿದೆ. ಒಳ್ಳೆಯ ಕೆಲಸಕ್ಕೆ ಸಿಕ್ಕುವ ಪ್ರತಿಫಲವೆಂದರೆ ಇನ್ನಷ್ಟು ಕೆಲಸವೆಂದು ಹೇಳುತ್ತಾರೆ. ನನಗೂ ತಮಿಳುನಾಡು, ಆಂಧ್ರರಾಜ್ಯಗಳ ಹೆಚ್ಚಿನ ಕೆಲಸವನ್ನು ವಹಿಸಿಕೊಡಲಾಯಿತು. ಆ

ಎರಡು ರಾಜ್ಯಗಳಲ್ಲಿಯೂ ಗಣಿ ಕಾರ್ಮಿಕರಿರುವೆಲ್ಲಿಗೆ ಹೋಗಿ ಅಲ್ಲಿಯೂ ಗೃಹ ನಿರ್ಮಾಣ, ಸಂಚಾರೀ ಆಸ್ಪತ್ರೆ, ಕುಡಿಯುವ ನೀರಿನ ಪೂರೈಕೆ, ಸಮವಸ್ತ್ರ ಹಾಗೂ ವಿದ್ಯಾರ್ಥಿ ವೇತನಗಳ ವಿತರಣೆ ಇತ್ಯಾದಿ ಕಾರ್ಯಗಳನ್ನೂ ಪ್ರಾರಂಭಿಸಿದೆ.

ಆಂಧ್ರದಲ್ಲಿ ಇದೇ ಕಾರ್ಯ ಪೂರೈಸಿ ಹೈದರಾಬಾದಿನಿಂದ ಬೆಂಗಳೂರಿಗೆ ಹೊರಟಿದ್ದೆ. ಆ ಕಾರ್ಮಿಕ ಮಂತ್ರಿಗಳಾಗಿದ್ದ ಎಸ್. ಎಂ. ಯಹ್ಯಾಸಾಹೇಬರು ಮರುದಿನ ಬೆಳಗಿನ ವಿಮಾನದಿಂದ ಬರುವುದಾಗಿ ಹೇಳಿ ನನ್ನೊಡನೆ ಅವರ ಧರ್ಮ ಪತ್ನಿ, ಸೋದರಿ, ಭಾವಂದಿರನ್ನು ಕಳಿಸಿಕೊಟ್ಟರು. ಒಂದು ಕಾರಿನಲ್ಲಿ ನಾವೆಲ್ಲರೂ; ಇನ್ನೊಂದು ಜೀಪಿನಲ್ಲಿ ಅಧೀನಾಧಿಕಾರಿಗಳಾದ ಶ್ರೀ ಸಿದ್ಧೇಶಿ, ನಾಗಯ್ಯಸೆಟ್ಟಿ ಮೊದಲಾದವರು. ಕರ್ನೂಲಿನಲ್ಲಿ ಊಟಮಾಡಿದಾಗ ರಾತ್ರಿ ಒಂಬತ್ತು ಗಂಟೆ. ಆ ರಾತ್ರಿ ಅಲ್ಲಿಯೇ ಇದ್ದು ಬೆಳಗಿನ ಜಾವದಲ್ಲಿ ಬೆಂಗಳೂರಿನ ಪ್ರಯಾಣ ಮುಂದು ವರಿಸೋಣವೆಂದು ಎಷ್ಟು ಹೇಳಿದರೂ ಭಾವಂದಿರು ಕೇಳಲಿಲ್ಲ. ರಾತ್ರಿಯಲ್ಲಿಯೇ ಹೊರಟು ಬಿಟ್ಟರು. ಕರ್ನಾಟಕದ ಗಡಿ ಕೇವಲ 15 ಕಿಲೋಮಿಟರು ಉಳಿದ್ದಿತು. ಒಮ್ಮಿಂದೊಮ್ಮೆಗೆ ಮುಸಲಧಾರೆಯ ಮಳೆ ಸುರಿಯತೊಡಗಿತು. ಅದರಲ್ಲಿಯೇ ಮುಂದುವರಿಯಲು ಹಟ ಹಿಡಿದರವರು. ಒಂದೆರಡು ಫರ್ಲಾಂಗು ಹೋಗುವಷ್ಟ ರಲ್ಲಿ ಹಳ್ಳವೊಂದರಲ್ಲಿ ಕಾರು ಸಿಕ್ಕು ಹಾಕಿಕೊಂಡು ಬಿಟ್ಟಿತು. ಅದನ್ನು ತಳ್ಳಲು ಹೋದ ಸಿದ್ಧೇಶಿ ನಾಗಯ್ಯ ಶೆಟ್ಟರು ಪ್ರವಾಹದ ಪಾಲಾಗಿ ಬಿಡುತ್ತಿದ್ದರೇನೋ –ಗನ್‌ಮನ್ ಡ್ರೈಯ್ವರರು ಎಳೆದುಕೊಂಡರು. ರಾತ್ರಿಯೆಲ್ಲ ಮಳೆ ಧೋ ಧೋ ಎಂದು ಸುರಿಯಿತು. ಕಾರಿನ ಗಾಜುಗಳನ್ನೇರಿಸಿಕೊಂಡು ದೈವದ ಮೇಲೆ ಭಾರ ಹಾಕಿ ಕಣ್ಮುಚ್ಚಿಕುಳಿತುಕೊಂಡೆವೆಲ್ಲರೂ. ಆಗೊಮ್ಮೆ ಈಗೊಮ್ಮೆ ಮಿಂಚಿದಾಗ ಕಾರಿನ ಕನ್ನಡಿಗಳೊಳಗಿಂದ ಕಾರಿನ ಸುತ್ತಲೂ ನೀರುಭೋರ್ಗರೆಯುತ್ತ ಹರಿಯುತ್ತಲಿದ್ದುದು ಕಾಣುತ್ತಿತ್ತು. ಆಗ ಮೈ ನಡುಗುತ್ತಿತ್ತು. ಹಿಂದೆ ಪ್ರಾಣಾಪಾಯದಿಂದ ಪಾರಾದ ಘಟನೆಗಳೆಲ್ಲ ಸ್ಮೃತಿಪಟಲದ ಮೇಲೆ ಸುಳಿದು ಹೋಗುತ್ತಿದ್ದುವು. ಇದಾಗಲೇ ವಿವರಿಸಿದ ಅಪಘಾತಗಳಲ್ಲದೆ ಇನ್ನೂ ಕೆಲವು ಅಪಾಯಗಳಿಂದ ಪಾರಾಗಿದ್ದೆ. ಶಿಕ್ಷಣ ಇಲಾಖೆಯಲ್ಲಿದ್ದಾಗ ಸೋಮನಾಥ ದೇವಾಲಯ ನೋಡಲು ಹೋಗಿದ್ದೆ ಕುಟುಂಬ ಸಮೇತ. ಅಲ್ಲಿ ಮಾರ್ಗದರ್ಶಿ ವಿದ್ಯುದ್ದೀಪವೊಂದರ ಸಹಾಯದಿಂದ ನಮಗೆ ಒಳಗಿನ ಭಾಗಗಳನ್ನು ತೋರಿಸಿ ವಿದ್ಯುದೀಪವನ್ನು ಕೆಳಗಿರಿಸಿದ್ದ. ನನ್ನ ಎಂಟುವರ್ಷಗಳ ಮಗ ಪ್ರಸನ್ನಕುಮಾರ ತಾನೂ ಅದನ್ನೆತ್ತಿಕೊಂಡು ತೋರಿಸಲು ಹೋದ. ಚೀರಿ ದೀಪದೊಡನೆ ಬಿದ್ದು ಬಿಟ್ಟ. ಏನಾಯಿತೆಂದು ನೋಡಲು ಹೋಗಿ ಅವನನ್ನು ಎಬ್ಬಿಸ ಹೋದೆ. ನನ್ನ ಮೈಯೊಳಕ್ಕೂ ಶಾಖ ಸಿಡಿಯಿತು. ನಾನೂ ಚೀರಿದೆ. ಹೆಂಡತಿ ಅಳುತ್ತ ಬಂದು ನನ್ನನ್ನು ಎಳೆದಳು. ಅವಳಿಗೂ ವಿದ್ಯುದಾಘಾತ. ಮಾರ್ಗದರ್ಶಿ ಓಡಿ ಹೋಗಿ 'ಸ್ವಿಚ್' ತೆಗೆಯದಿದ್ದರೆ ನಾವು ಮೂವರೂ ಮರುನಿಮಿಷದಲ್ಲಿ ಮರಣವನ್ನಪ್ಪುತ್ತಿದ್ದೆವು! "ಆಗ ಉಳಿಸಿತು ದೈವ:

ಅನೇಕ ರಸ್ತೆ ಅಪಘಾತಗಳಲ್ಲಿಯೂ ಉಳಿಸಿತು! ಈಗ ಉಳಿಸುವುದೆ ?" ಎಂದು ನನ್ನನ್ನು ನಾನೇ ಕೇಳಿಕೊಂಡೆ. ಉತ್ತರ ಯಾರು ಹೇಳಬೇಕು ? ಸುತ್ತಲಿನ ಪ್ರವಾಹದ ರಭಸವನ್ನು ನೋಡಿದರೆ ಯಾವ ಕ್ಷಣದಲ್ಲಾದರೂ ನಾವು ಕುಳಿತಿದ್ದ ಕಾರನ್ನು ಕೊಚ್ಚಿಕೊಂಡು ಹೋಗಬಹುದಿತ್ತು ಅದು. ಆದರೆ ಇನ್ನೂ ನಮ್ಮ 'ಖಟ್ಲೆ ತುಂಬಿರಲಿಲ್ಲ !' ಕಾರಿನ ಮುಂದಿನ ಚಕ್ರಗಳು ಅಡ್ಡಗಲ್ಲುಗಳಲ್ಲಿ ಸಿಕ್ಕಿಹಾಕಿಕೊಂಡಿದ್ದುವು. ಬೆಳತನಕ ಮಳೆ ಬಡಿದರೂ, ಬೆಳತನಕ ಪ್ರವಾಹ ಜಡಿದರೂ ಕಾರು ಅಲ್ಲಿಂದ ಮಿಸುಕಿರಲಿಲ್ಲ ! ಇನ್ನೊಮ್ಮೆ ಜೀವದಾನವಾಗಿತ್ತು ನನಗೆ ! ರಾತ್ರಿಯೆಲ್ಲ ಉಳಿದವರ ಮನಸ್ಸಿನಲ್ಲಿ ಏನೇನು ನಡೆದಿದ್ದಿತೋ ನಾನರಿಯೆ–ನನ್ನ ವಿಚಿತ್ರ ಮನಸ್ಸಿನಲ್ಲಿ ಮಾತ್ರ ಒಂದು ಹೊಸ ವಚನ ರಚನೆಗೊಂಡಿದ್ದಿತು—ಹಿಂದೊಮ್ಮೆ ಇದೇರೀತಿ ಮಳೆಗೆ ಸಿಕ್ಕಿದ್ದಾಗ 'ಮಳೆ' ಎಂಬ ಕವಿತೆ ಮನದಲ್ಲಿ ಮೂಡಿದ್ದಂತೆ ! "ಸಿಂಗರಿಸಿಕೊಂಡುದೇನೋ ಸರಿ, ಮದುವಳಿಗೆ–ಆದರೆ ಬರುವನೇ ಮದುವಳಿಗ ನಿನ್ನ ಬಳಿಗೆ ? ವಾರಿಯುದ್ದಕ್ಕೂ ಮರಮಳೆಯಂತೆ, ಕೆರೆಕಟ್ಟೆಗಳೆಲ್ಲ ಒಡೆದು ದಾರಿಯಲ್ಲಿ ನೀರೇ ನೀರಂತೆ, ಸೇತುವೆಗಳು ಕುಸಿದು ವಾಹನ ಸಂಚಾರ ಸ್ಥಗಿತವಂತೆ. ಸಿಂಗರಿಸಿಕೊಂಡೇನೋ ನಿಂತೆ, ನಿಂತಂತೆ 'ಬರುವನೋ ಬಾರನೋ' ಎಂಬ ಚಿಂತೆ !" ಹೀಗೆ ಸಾಗಿದ್ದಿತು ಆ ವಚನ !

ಬೆಳಗಾಗುತ್ತಲೇ ದಾರಿಕಾರರನ್ನು ಒಲಿಸಿ ಕಾರನ್ನೆಳೆಸಿದೆವು ಆಚೆದಂಡೆಗೆ. ಆದರೆ ಅಲ್ಲಿಂದ ತುಸು ದೂರ ಮುಂದೆ ಹೋಗುತ್ತಲೆ ಇನ್ನೊಂದು ದೊಡ್ಡಹಳ್ಳ ಎದುರಾಯಿತು. ದಡಸೂಸಿ ಹರಿಯುತ್ತಲಿದ್ದಿತು. ಅಲ್ಲೆಲ್ಲಿಯೋ ಕೆರೆ ಒಡೆದು ಅದರ ನೀರೂ ಬಂದು ಸೇರಿ ಹೊಲಗಳಲ್ಲೆಲ್ಲ ನೀರು ಹರಡಿದ್ದಿತು. ಮುಂದೆ ನೆರೆ ಬಂದ ಹಳ್ಳ, ಹಿಂದೆ ಹುಚ್ಚು ಹೊನಲಿನ ಹಳ್ಳ, ಆಚೆ ಈಚೆ ನೀರು ತುಂಬಿದ ಹೊಲಗಳು. ನಡುವೆ ನಾವಿದ್ದ ದಿನ್ನೆ! ಆ ದಿನ್ನೆಯೂ ಕಳಚಿದರೆ ? ದೇವರೇ ಗತಿ ! ಸುದೈವದಿಂದ ಮತ್ತೆ ಮಳೆಯಾಗಲಿಲ್ಲ. ಹಸಿವಿನಿಂದ ತಡೆದೆವು. ಆಗ ಪುಣ್ಯಕ್ಕೆ ಒಂದು ಆಂಧ್ರದ ಬಸ್ಸು ಬಂದಿತು. ಅದರಲ್ಲಿ ಮಂತ್ರಿಗಳ ಪರಿವಾರ ಕಳಿಸಿಬಿಟ್ಟೆ. ಬಸ್ಸು ಹಳ್ಳದಾಟಲು ಹಿಗ್ಗಿದೆ. ಅವರು ಬೆಂಗಳೂರು ತಲುಪಿದ ಮೇಲೆಯೇ ಎಲ್ಲರಿಗೂ ಏನಾಯಿತೆಂಬುದು ತಿಳಿದದ್ದು. ಯಹ್ಯಾಸಾಹೇಬರ ಆದೇಶದಂತೆ ಗೌರಿಬಿದನೂರಿನಿಂದ ಸಬ್ ಇನ್ಸ್‌ಪೆಕ್ಟರ್ ಬಂದರು–ನಾಲ್ಕು ಪೇದೆಗಳು, ಒಂದು ಲಾರಿ, ತೆಂಗಿನ ಹಗ್ಗ, ಹಾರೆ ಗುದ್ದಲಿಗಳೊಡನೆ. ಮೊದಲು ನಮ್ಮನ್ನಾಚೆಗೆ ಸಾಗಿಸಿದರು. ಹಸಿದಿದ್ದ ನಮಗೆಂದು ತಂದಿದ್ದ ತಿಂಡಿಯಲ್ಲಿ ಅರ್ಧದಷ್ಟನ್ನು ಅದಾಗಲೇ ಬಕ್ಕರಿಸಿಬಿಟ್ಟಿದ್ದ ಆ ಘಾಟಿ ಮುದುಕ ಸಬ್ ಇನ್ಸ್‌ಪೆಕ್ಟರ್ ! ತಿಂದು ಗೊತ್ತವರಿಗೆ, ತಿನಿಸಿ ಗೊತ್ತೆ ? ಅಲ್ಲಿಂದ ಗೌರಿಬಿದನೂರಿಗೆ ಬಂದು ಊಟ ಮಾಡಿ ಬೆಂಗಳೂರಿಗೆ ಹಿಂದಿರುಗಿದಾಗ ಹೊಸದಿನ ಪ್ರಾರಂಭವಾಗಿದ್ದಿತು !

ತುರ್ತುಪರಿಸ್ಥಿತಿಯ ತುರ್ತು ಕಾರ್ಯಗಳು ಕೆಲವನ್ನು ಮಾಡಬೇಕಾಗಿದ್ದಿತು. ಅವುಗಳಲ್ಲಿ ಜೀತದಾಳುಗಳ ವಿಮೋಚನೆಯ ಕಾರ್ಯವೂ ಒಂದಾಗಿದ್ದಿತು. ಮೈಸೂರಿ

ನಲ್ಲಿ ಈ ಬಗ್ಗೆ ಒಂದು ವಿಚಾರಗೋಷ್ಠಿಯನ್ನೇ ಏರ್ಪಡಿಸಿದೆ. ಆ ಮಾದರಿ ಗೋಷ್ಠಿ ಅದೊಂದೇ ಆಗಿದ್ದಿತು ಆಗ ಭಾರತದಲ್ಲಿ. ಕೇಂದ್ರ ಸರಕಾರದ ಅಧಿಕಾರಿಗಳೂ ಭಾಗವಹಿಸಿದ್ದರು. ಕೃಷಿ ಕಾರ್ಮಿಕರ ವೇತನವರ್ಧನೆ ಇನ್ನೊಂದು ಕಾರ್ಯ ವಾಗಿದ್ದಿತು. ಹೆಚ್ಚಿಸಿ ಬಹಳ ದಿನಗಳಾಗಿರದಿದ್ದರೂ ಮತ್ತೆ ಶೇಕಡಾ 30ರಷ್ಟು ಹೆಚ್ಚಿಸಲು ಪ್ರಸ್ತಾವ ಕಳಿಸಿದೆ. ಆಗ ಮಂತ್ರಿಗಳಲ್ಲೊಬ್ಬರಾಗಿದ್ದ ಎಚ್. ಎಂ. ಚೆನ್ನಬಸಪ್ಪನವರು ನನ್ನ ಮೇಲೆ ರೇಗಿದರು. "ನನ್ನ ಮೇಲೆ ರೇಗಿ ಏನು ಫಲ, ಗಂಡಸುತನವಿದ್ದರೆ ಸಚಿವ ಸಂಪುಟದ ಸಭೆಯಲ್ಲಿ ವಿರೋಧಿಸಿರಿ," ಎಂದು ಉತ್ತರ ವಿತ್ತೆ. ಕಾರಖಾನೆಗಳ ಆಡಳಿತದಲ್ಲಿ ಕಾರ್ಮಿಕರೂ ಪಾಲುಗೊಳ್ಳುವಂತೆ ಮಾಡುವುದು ಇನ್ನೊಂದು ಕಾರ್ಯವಾಗಿದ್ದಿತು. ಅದನ್ನೂ ತಕ್ಕಮಟ್ಟಿಗೆ ಸಾಧಿಸಿದೆ. ಹೆಂಡದ ಮರ ಕೆತ್ತುವವರಿಗಾಗಿ ಕನಿಷ್ಠ ವೇತನದ ಸಲಹೆ ಕಳಿಸಿದೆ. ಅದು ಅಬ್ಕಾರಿ ಇಲಾಖೆ ಯಿಂದ ಮರಳಿ ಬರಲೇ ಇಲ್ಲ. ಗುಮಾಸ್ತರ, ಮಾರುಕಟ್ಟೆಗಳ ಕೆಲಸಗಾರರ–ಇನ್ನೂ ಅನೇಕರ ಕನಿಷ್ಠ ವೇತನಕ್ಕಾಗಿ ಸೂಚನೆಗಳನ್ನು ಕಳಿಸಿದೆ. ಅವುಗಳೆಲ್ಲ ಎಲ್ಲಿ ಕೊಳೆಯು ತ್ತಿವೆಯೋ ! ನನ್ನ ಕೈಲಾದುದನ್ನು ನಾನು ಮಾಡಿದೆ. ಅದು ಪೂರ್ಣವಾಗಲಿ, ಬಿಡಲಿ–ವ್ಯಥೆಯೇಕೆ ?

ಮುಗಿಸುವ ಮುನ್ನ ಬೆಳಗಾವಿಯ ಗೆಳೆಯರು ನನ್ನ ೫೫ನೆಯ ಹುಟ್ಟುಹಬ್ಬ ವನ್ನಾಚರಿಸಿ 'ಕಾವ್ಯಾನಂದ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಿದುದನ್ನಿಲ್ಲಿ ಸ್ಮರಿಸಬೇಕು. ಆ ಮುನ್ನ ವಿಜಾಪುರದ ಗೆಳೆಯರು 'ಕಾವ್ಯಶ್ರೀ' ಎಂಬ ಚಿಕ್ಕದಾದರೂ ಚೊಕ್ಕವಾದ ಅಭಿನಂದನ ಗ್ರಂಥ ಅರ್ಪಿಸಿದ್ದರು ; ಕಲಬುರಗಿಯ "ಜೀವನ ವಿಕಾಸ'ದ ಗೆಳೆಯರು 'ಜೀವನ ವಿಕಾಸ'ದ ಒಂದು ವಿಶೇಷ ಸಂಚಿಕೆ ಹೊರಡಿಸಿದ್ದರು. ಆದರೆ ಮಿರ್ಜಿ ಅಣ್ಣಾರಾಯರೂ, ಕೃಷ್ಣಕೊಲ್ಹಾರ ಕುಲಕರ್ಣಿಯವರೂ ಶ್ರದ್ಧೆಯಿಂದ ಸಂಪಾದಿಸಿದ ಈ ಅಭಿನಂದನ ಗ್ರಂಥ ಗಾತ್ರ ಗುಣಗಳೆರಡರಲ್ಲಿಯೂ ದೊಡ್ಡದಾಗಿ ದ್ದಿತು. ಅದರ ಬಿಡುಗಡೆ ಮಾಡಲು ಆಗ ಭುವನೇಶ್ವರದಲ್ಲಿ ರಾಜ್ಯಪಾಲರಾಗಿದ್ದ ಡಾ. ಬಿ. ಡಿ. ಜತ್ತಿಯವರು ಬೆಳಗಾವಿಯವರೆಗೆ ಬಂದುದು ಅವರ ದೊಡ್ಡತನಕ್ಕೆ ಸಾಕ್ಷಿ.

ಸೇವಾಜೀವನ ಮುಗಿಯುತ್ತ ಬಂದುದು ಹಿಗ್ಗಿನ ಬುಗ್ಗೆಯಾಗಿದ್ದಿತು ನನಗೆ. ವಚನವೊಂದನ್ನು ಬರೆದೆ : "ಸುಖದೊಡನೆ ಸರಸವಾಡುವಾಗಿನ ದುಃಖವನ್ನು ಅನುಭವಿಸಿದೆ ; ದುಃಖದೊಡನೆ ಹೋರಾಡುವಾಗಿನ ಸುಖವನ್ನು ಅನುಭವಿಸಿದೆ ; ಸುಖದುಃಖಗಳ ಸುದ್ದಿಯನ್ನೇ ಮರೆತಾಗಿನ ಆನಂದವನ್ನೂ ಅನುಭವಿಸಿದೆ ! ಗೆಲವನ್ನು ದಕ್ಕಿಸಿಕೊಳ್ಳುವಾಗಿನ ದುಃಖವನ್ನು ಅನುಭವಿಸಿದೆ ; ಸೋಲಿನೊಡನೆ ಸೆಣಸುವಾಗಿನ ಸೊಗವನ್ನು ಅನುಭವಿಸಿದೆ ; ಸೋಲು-ಗೆಲವುಗಳನ್ನು ಮೀರಿದಾಗಿನ ಮನಃಪ್ರಸಾದ ವನ್ನೂ ಅನುಭವಿಸಿದೆ ! ಸಿರಿಯ ಸೆರೆಯಲ್ಲಿ ಸವೆದೆ, ಬಡತನದ ಸೈಪನ್ನು ಸವಿದೆ,

ಸ್ಮೃತಿಯ ಸಂಜನ್ನು ಗುಟುಕರಿಸಿದೆ, ನೀದೆಯ ತನಿಯನ್ನು ಮುಕ್ಕಳಿಸಿದೆ, ಸ್ವತಂತ್ರಧೀರ ಸಿದ್ಧೇಶ್ವರಾ, ಸೇವಾಜೀವನದ ಶಿಕ್ಷೆಯನ್ನೂ ಮುಗಿಸಲಿಹೆನಯ್ಯ–ಅನತಿದೂರದಲ್ಲಿ !"

ಕೊನೆಗೊಮ್ಮೆ-ಜೂನ್ ೧೯೭೬ರಲ್ಲಿ–ಸೇವಾಜೀವನದ ಶಿಕ್ಷೆಯನ್ನು ಮುಗಿಸಿ ಕಾರಾಗಾರದಿಂದ ಹೊರಬಂದೆ. ಅಂತು ನಿಶ್ಚಿಂತೆಯಿಂದ ಮಲಗಿದವನು ಹದಿನಾರು ಗಂಟೆ ಸತತವಾಗಿ ನಿದ್ರಿಸಿ ಮೇಲೆದ್ದೆ. ದೇಶದ ಜನರಿಗೆಲ್ಲ ಆಗಸ್ಟ್, ೧೯೪೭ಕ್ಕೆ ಸ್ವಾತಂತ್ರ್ಯ ಸಿಕ್ಕಿದ್ದರೆ ನನಗೆ ೧೯೭೬ರಲ್ಲಿ ಸಿಕ್ಕಿದ್ದಿತು ಸ್ವಾತಂತ್ರ್ಯ! ಅಂದಿನಿಂದ ಬಸವ ಸಮಿತಿಯ 'ಬಸವ ಪಥ' 'ಬಸವ ಜರ್ನಲ್'ಗಳ ಪ್ರಧಾನ ಸಂಪಾದಕನಾಗಿ, ಅಲ್ಲಿಯ ಸಂಶೋಧನ–ಪ್ರಕಟನಾ ವಿಭಾಗದ ನಿರ್ದೇಶಕನಾಗಿ ಸೇವೆ ಸಲ್ಲಿಸುತ್ತಲಿದ್ದೇನೆ. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಗಳಲ್ಲಿ, ಕನ್ನಡದ ಎಲ್ಲ ಕಾರ್ಯಗಳಲ್ಲಿ ಭಾಗ ವಹಿಸುತ್ತಲಿದ್ದೇನೆ. ಎಲ್ಲ ಮತಗಳವರ ಪ್ರೀತಿ ವಿಶ್ವಾಸಗಳು ನನಗೆ ದೊರೆತಿರುವುದು ನನ್ನ ಭಾಗ್ಯವೆಂದು ಭಾವಿಸಿದ್ದೇನೆ. ಮುಸಲ್ಮಾನ ಬಾಂಧವರು ಕನ್ನಡ ಭಾಷೆ ಯಲ್ಲಿ ಪ್ರಕಟವಾದ ಪವಿತ್ರ ಕುರಾಣದ ಮೊದಲ ಪ್ರತಿಯನ್ನು ಸಾರ್ವಜನಿಕ ಸಭೆಯಲ್ಲಿ ನನಗೆ ಅರ್ಪಿಸಿದುದು, ಬೆಳಗಾವಿಯಲ್ಲಿ ಒಂದೇ ಒಂದು ಸಲ ನಾನು ಪುರಂದರದಾಸರ ಮೇಲೆ ಮಾತನಾಡಿದುದನ್ನು ಕೇಳಿ ಉತ್ತರಾದಿಮಠದ ಜಗದ್ಗುರುಗಳವರು ಇಂದಿಗೂ ನನ್ನ ಮೇಲೆ ವಾತ್ಸಲ್ಯ ಸುಧೆಯನ್ನೆರೆಯುತ್ತಿರು ವುದು, ಧರ್ಮಸ್ಥಳದ ಸಾಹಿತ್ಯ ಸಮ್ಮೇಳನಕ್ಕೊಮ್ಮೆ, ಸರ್ವಧರ್ಮ ಸಮ್ಮೇಳನ ಕ್ಕೊಮ್ಮೆ ಅಲ್ಲಿಯ ಧರ್ಮಾಧಿಕಾರಿಗಳು ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿದುದು, ಹೊಂಬುಜದ ಶ್ರೀಗಳವರು ಅಲ್ಲಿಯ ಸಾಹಿತ್ಯ ಸಮ್ಮೇಳನಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಆಹ್ವಾನಿಸಿದುದು, ಬೆಂಗಳೂರಿನ ಗೆಳೆಯರು ಡಾ. ಶಂ. ಬಾ. ಜೋಶಿ ಸನ್ಮಾನ ಸಮಿತಿಗೆ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿದುದು ನನ್ನ ಭಾಗ್ಯವಲ್ಲದೆ ಇನ್ನೇನು ? ಕರ್ನಾಟಕದ ವಿಶ್ವವಿದ್ಯಾಲಯವು ನನಗೆ ಗೌರವ ಡಾಕ್ಟರೇಟ್ ಹಾಗೂ ಪ್ರೊ॥ ಮಳವಾಡ ಪ್ರಶಸ್ತಿಗಳನ್ನು ನೀಡಿದುದೂ, ರಾಜ್ಯ ಸರಕಾರ ನನ್ನ 'ಮಾನಸ ಸರೋವರ'ಕ್ಕೆ ಪ್ರಥಮ ಪುರಸ್ಕಾರವನ್ನು ನೀಡಿದುದೂ, ಭಾರತ ಸರಕಾರ ನನ್ನ ಮಕ್ಕಳ ಪದ್ಯಗಳ ಸಂಕಲನಕ್ಕೆ ಪುರಸ್ಕಾರ ನೀಡಿದುದೂ, ರಾಜ್ಯ ಸಾಹಿತ್ಯ ಅಕಾಡೆಮಿ ನನಗೆ ಪ್ರಶಸ್ತಿ ನೀಡುವುದಲ್ಲದೆ ನನ್ನ 'ವಚನೋದ್ಯಾನ'ಕ್ಕೆ ಅತ್ಯುತ್ತಮ ಪುಸ್ತಕ ಪುರಸ್ಕಾರ ನೀಡಿದುದೂ, ಕಲಕತ್ತೆಯ ಭಾರತೀಯ ಭಾಷಾ ಪರಿಷತ್ತು 'ವಚನೋದ್ಯಾನ'ಕ್ಕೆ ಬಿಲ್ವಾರಾ ಪ್ರಶಸ್ತಿ ನೀಡಿದುದೂ, ಡಾ. ನಟೇಶರ ಆಗ್ರಹದ ಮೇರೆಗೆ ನಾನು ಬರೆದಿದ್ದ ಗೇಯನಾಟಕ 'ಗಿರಿಜಾ ಕಲ್ಯಾಣ' ರಾಷ್ಟ್ರೀಯ ಕಾರ್ಯಕ್ರಮಕ್ಕಾಗಿ ಆಯ್ಕೆಗೊಂಡುದೂ ವಿಶ್ವಕವಿ ಕುವೆಂಪು ಅವರ ೭೫ನೆಯ ಹುಟ್ಟು ಹಬ್ಬದ ರಾಜ್ಯಮಟ್ಟದ ಸಮಿತಿಗೆ ಡಾ, ದೇ. ಜ. ಗೌ., ಡಾ॥ ಆರ್. ಸಿ. ಹಿರೇಮಠರೊಡನೆ ನಾನೂ ಕಾರ್ಯದರ್ಶಿಯಾದುದೂ, ಶ್ರೀ ಜಿ. ನಾರಾಯಣರ ಒತ್ತಾಯದಿಂದಾಗಿ ದೆಹಲಿಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಗೋಷ್ಠಿಯೊಂದಕ್ಕೆ

ಅಧ್ಯಕ್ಷನಾದುದೂ, ಹೈದರಾಬಾದಿನಲ್ಲಿ ನಡೆದ ಪಂಚಭಾಷಾ ಕವಿಸಮ್ಮೇಳನಕ್ಕೆ ಅಧ್ಯಕ್ಷನಾದುದೂ ನನ್ನ ಭಾಗ್ಯವಲ್ಲದೆ ಇನ್ನೇನು ? ಇನ್ನು ಸಾಹಿತ್ಯ ಕ್ಷೇತ್ರದ ಹಿರಿಯರೆಲ್ಲ ನನ್ನ ಏಳಿಗಾಗಿ ನೀಡಿದ ಹರಕೆ ಹಸಾದಗಳ ಬಗ್ಗೆ ಏನು ಹೇಳಲಿ ?

**ಭಾಗ್ಯ ನನ್ನದು :**

ನಾನು ದ್ಯಾಂಪುರದಂಥ ಕಿರುಹಳ್ಳಿಯಲ್ಲಿ ಹುಟ್ಟಿ ಬೆಂಗಳೂರಿನಂಥ ಮಹಾನಗರಕ್ಕೆ ಬಂದು ನೆಲೆಸಿರುವುದು ನನಗೇ ವಿಸ್ಮಯವನ್ನುಂಟುಮಾಡುವ ಬೆಳವಣಿಗೆ. ನಿವೃತ್ತನಾದ ಮೇಲೆ ಹುಟ್ಟೂರಿನಲ್ಲಿಯೇ ನೆಲೆಸಬೇಕೆಂಬಾಸೆ ಬಹಳ ಹಿಂದೆಯೇ ಹೊರಟು ಹೋಗಿತ್ತು. ಹುಟ್ಟೂರು ಬಡತನದ ಬೇಗೆಯಲ್ಲಿ ಉರಿದು ಸುಟ್ಟೂರಾಗಿದ್ದಿತು. ಆ ಬಡತನವನ್ನು ನಿವಾರಿಸಲು ಸಾಧ್ಯವಿಲ್ಲ, ಅದರ ನಡುವೆ ಜೀವಿಸಲೂ ಸಾಧ್ಯವಿಲ್ಲವೆನಿಸಿತು ನನಗೆ. ಅಂತೆಯೇ ಹೈದರಾಬಾದಿನಲ್ಲಿ ಮನೆಯೊಂದನ್ನು ಕೊಂಡೆ. ರಾಜ್ಯ ಪುನರ್ರಚನೆಯಾಗಲು ಅದನ್ನು ಮಾರಿ ಕಲಬುರಗಿಯಲ್ಲಿ ಮನೆ ಕಟ್ಟಬೇಕೆಂದೆ. ಆದರೆ ಬೆಂಗಳೂರಿನವನಾಗಬೇಕೆಂದು ನಿಯತಿ ನಿರ್ಣಯಿಸಿತ್ತು. ಹಳ್ಳಿಗನು ಹೋಗಿ ನಾಗರಿಕನಾಗಿದ್ದೇನೆ. ಹೃದಯವಿನ್ನೂ ಹಳ್ಳಿಯಲ್ಲಿದೆ, ದೇಹ ಮಹಾನಗರವಿದರಲ್ಲಿದೆ ! ಆದಷ್ಟು ಹಿರಿಯ ಸಾಹಿತಿಗಳ, ಕವಿಗಳ ಸಂಗದಲ್ಲಿ ದಿನಗಳೆವ ಬಯಕೆ. ಇದೇ ಉದ್ದೇಶದಿಂದಲೇ ಡಾ. ವಿ. ಕೃ. ಗೋಕಾಕರ ಅಧ್ಯಕ್ಷತೆಯಲ್ಲಿ ಒಂದು ವ್ಯಾಸಂಗ ಸಮಿತಿಯನ್ನು ಕಟ್ಟಿಕೊಂಡು ತಿಂಗಳಿಗೊಬ್ಬ ಮಹಾಕವಿಯ ಬಗ್ಗೆ ಪರಿಣತರಿಂದ ಪ್ರಗಲ್ಭ ಉಪನ್ಯಾಸಗಳನ್ನು ಕೇಳುವ ವ್ಯವಸ್ಥೆ ಮಾಡಿಕೊಂಡೆ–ಡಾ. ಕೆ. ಮುದ್ದಣ್ಣ, ಶ್ರೀ ಜಯತೀರ್ಥ ರಾಜಪುರೋಹಿತ ಮೊದಲಾದ ಮಿತ್ರರೊಡನೆ. ಅರವಿಂದ, ರವೀಂದ್ರ, ಹೋಮರ್, ಮಿಲ್ಟನ್, ಇಕಬಾಲ, ಡ್ಯಾಂಟೆ, ವರ್ಜಿಲ್, ವಾಲ್ಟ್‌ವ್ಹಿಟಮನ್, ಸೂರದಾಸ ಮೊದಲಾದವರ ಬಗ್ಗೆ ಬಹುಕಾಲ ನೆನಪಿನಲ್ಲಿ ಉಳಿವ ಉಪನ್ಯಾಸಗಳನ್ನು ಕೇಳಿದೆವು. ಎಚ್. ಎಲ್. ನಾಗೇಗೌಡರ ಪ್ರಭಾವದಿಂದ ಜಾನಪದ ಜಗತ್ತಿನಲ್ಲಿಯೂ ವಿಹರಿಸುತ್ತಲಿದ್ದೇನೆ. ಇನ್ನೊಂದು ವಚನ ಸಂಗ್ರಹ, ಇನ್ನೊಂದು ಕವನ ಸಂಗ್ರಹ, 'ಮರುಳಸಿದ್ಧನ ಕಂತೆ' ಇವಿಷ್ಟನ್ನು ಮುಗಿಸಬೇಕೆಂದಿದ್ದೇನೆ.

ನನ್ನ ಸಾಹಿತ್ಯ ಕೃಷಿಯ ಬಗ್ಗೆ, ಕೃತಿಗಳ ಬಗ್ಗೆ ಇಲ್ಲಿ ಏನನ್ನೂ ಹೇಳಹೋಗಿಲ್ಲ. ನಾಡಿನ ವಿಖ್ಯಾತ ವಿದ್ವಾಂಸರು ಆ ಕಾರ್ಯ ಮಾಡಿದ್ದಾರೆ. ಇದು ನನ್ನ ನಿನ್ನೆಗಳತ್ತ ಹೊರಳು ನೋಟ ಮಾತ್ರ. ಒಲ್ಲೆ ಒಲ್ಲೆನೆಂದು ಬರೆಯಲು ಮೊದಲು ಮಾಡಿದಾಗ "ಬರೆಯುವಂಥದೇನಿದೆ–ಈ ಸಾಮಾನ್ಯ ಜೀವನದಲ್ಲಿ ?" ಎಂದೆನಿಸಿದ್ದಿತು. ಈಗ ಇನ್ನೂ ಇದರ ಹತ್ತರಷ್ಟು ಬರೆಯುವುದು ಉಳಿದುಬಿಟ್ಟಿತೆನಿಸಿದೆ. ನಿಜ, ನನ್ನ ನಿನ್ನೆಗಳು ನನ್ನೊಬ್ಬನನ್ನೇ ಕಂಡಿಲ್ಲ, ನನ್ನೊಡನೆ ಸಾವಿರ ಸಾವಿರ ಹಳ್ಳಿಗಳನ್ನು, ಲಕ್ಷ ಲಕ್ಷ ಹಳ್ಳಿಗರನ್ನು, ಈ ನಾಡಿನ ಎಲ್ಲ ಜಿಲ್ಲಾ ಕೇಂದ್ರಗಳನ್ನು, ಮುಕ್ಕಾಲುಪಾಲು ಶಾಲೆ ಕಾಲೇಜುಗಳನ್ನು, ಸಂಘ ಸಂಸ್ಥೆಗಳನ್ನು, ಪಂಡಿತ ಪಾಮರರನ್ನು ಕಂಡಿವೆ.

ಆದುದರಿಂದ ಅವುಗಳು ಹೇಳಬೇಕಾದುದು ಇನ್ನೂ ಬಹಳಷ್ಟು ಇದೆ. ಆದರೆ ಎಲ್ಲವನ್ನೂ ಹೇಳಲು ಯಾರಿಗೆ ಸಾಧ್ಯವಾಗುತ್ತದೆ? ಆದುದರಿಂದ ಇದನ್ನು ನನ್ನ ನಿನ್ನೆಗಳೊಡನೆ ಕಣ್ಣು ಮುಚ್ಚಾಲೆಯೆಂದು ಕರೆದಿದ್ದೇನೆ. ನನಗೆ ಕಹಿಯೆನಿಸಿದುದರ ಕಣ್ಣು ನಾನು ಮುಚ್ಚಿರಬಹುದು. ನನ್ನ ಕಣ್ಣನ್ನು ಮರವೆ ಮುಚ್ಚಿರಬಹುದು. ಅಂತೂ ಇಲ್ಲಿ ಬಂದಿರುವುದೆಲ್ಲ ಮಹತ್ವವಾದುದೇನಲ್ಲ, ಇಲ್ಲಿ ಬರದಿದ್ದುದೆಲ್ಲ ಮಹತ್ವವಿಲ್ಲದುದೇನಲ್ಲ.

ಈ ನನ್ನ ನಿನ್ನೆಗಳು ನನ್ನಂತೆ ನಾನೂರು ಕೋಟಿ ನರರಿಗೂ ನಿನ್ನೆಗಳಾಗಿವೆ. ಅವರವರ ನಿನ್ನೆಗಳು ಅವರವರಿಗೆ ಇತ್ತುದನ್ನು ಅವರೆಲ್ಲರೂ ಬರೆದಾಗ ವಿರಾಟ್ ಜೀವನದ ಅರುಂಧತೀ ದರ್ಶನವಾದರೂ ಆದೀತು. ಅದು ಹೇಗೆ ಸಾಧ್ಯ? ಈಗ ಬರವಣಿಗೆಗೆ ಒಳಗಾದುದಷ್ಟರಿಂದಲೇ ವಿಶ್ವಜೀವನ ಅದೆಷ್ಟು ಅದ್ಭುತ, ಅದೆಷ್ಟು ಅಪಾರ, ಅದೆಷ್ಟು ವಿಸ್ಮಯಕರವೆಂದೆನ್ನಿಸದೇ ಇರಲಾರದು–ಅದರ ಏಕಸಹಸ್ರಾಂಶ ವನ್ನಾದರೂ ಓದಿದವರಿಗೆ. ಓದುವುದರಿಂದಾಗುವ ಉಪಾಕಾರವಿಷ್ಟೇ: ನಾನೊಂದು ಬಿಂದು ಈ ಮಹಾಸಿಂಧುವಿನಲ್ಲಿ ಎಂಬುದರ ಅರಿವು. ಬಿಂದು ಮಾತ್ರವಾದರೂ ಸಿಂಧುವಿನಿಂದ ಅಭಿನ್ನ. ಸಾಗರ ಸಮಸ್ತದ ವಿಸ್ತಾರವೆಲ್ಲಕ್ಕೂ ಹಕ್ಕುದಾರ. ಅದರ ಅಲೆಯೊಂದರ ಅಂಗವಾಗಿ ಅದರ ಈ ತೀರದಿಂದ ಆ ತೀರಕ್ಕೆ ಹೊರಟ ಪಯಣಿಗ! ಪಯಣವನ್ನು ಮುಗಿಸಿಯೇ ತೀರುವೆನೆಂದು ಹೇಗೆ ಹೇಳೀತು ಆ ಹನಿ? ಆದರೂ, ಪಯಣ ಮುಗಿಯಲಿ, ಮುಗಿಯದಿರಲಿ, ನಾನು ನಡೆದಷ್ಟರೊಳೆ ನನ್ನ ಸಫಲತೆಯೆಂಬ ನಂಬಿಕೆ ಅದಕ್ಕಿದ್ದರೆ ಸಾಕು!

ಒಟ್ಟಿನಲ್ಲಿ ಸಂತೃಪ್ತ ನಾನು. ನನ್ನೊಡನೆ ಬದುಕಿದವರಿಗಿದ್ದಂತೆ ಬಾಪೂಜಿಯ ಬಾನೆತ್ತರ ವ್ಯಕ್ತಿತ್ವದ ಬಾವುಟದ ಕೆಳಗೆ ಭಾರತವು ಸ್ವತಂತ್ರವಾದುದನ್ನು ನೋಡುವ ಭಾಗ್ಯ ಇನ್ನಾರಿಗಿದೆ? ನಿಜಾಮನ ಅರಸೊತ್ತಿಗೆಯೇ ನಿರ್ನಾಮವಾದುದನ್ನು ನೋಡುವ ಭಾಗ್ಯ ಇನ್ನಾರಿಗಿದೆ? ಕನ್ನಡ ನಾಡು ಒಂದಾದುದನ್ನು ಕಾಣುವ ಭಾಗ್ಯ ಬೇರಾರಿಗಿದೆ? ನಮ್ಮ ಕನಸುಗಳೆಲ್ಲ ನನಸಾಗಿಲ್ಲ. ನಿಜ. ಆದರೆ ಅದಕ್ಕೆ ಕಾರಣರೂ ನಾವೇ ಅಲ್ಲವೆ? ನಮ್ಮ ನಮ್ಮ ಪಾಲಿನ ಕರ್ತವ್ಯವನ್ನು ನಾವೆಲ್ಲ ನಿರ್ವಹಿಸಿದ್ದರೆ ಇಷ್ಟರಲ್ಲಿ ಈ ರಾಷ್ಟ್ರ ಇಹಲೋಕದ ನಂದನವಾಗುತ್ತಿದ್ದಿತೇನೋ! ಆದರೆ ಕೀಳು ರಾಜಕಾರಣ ಹತ್ತು ಮುಖದ ರಾವಣನಾಗಿ, ಸ್ವಾರ್ಥ ಶೂರ್ಪನಖಿಯ ಮಾತ ಕೇಳಿ, ಸುಗುಣವೆಂಬ ಸೀತೆಯನ್ನು ಕದ್ದು ಶೋಕವನದಲ್ಲಿಟ್ಟುಬಿಟ್ಟಿರುವನೆಂದೂ, ಸಾಹಿತ್ಯದ ಆಂಜನೇಯ ಅವಳನ್ನು ಹುಡುಕಿ, ಸಂಸ್ಕೃತಿಯ ಶ್ರೀರಾಮ ಅವಳನ್ನು ಗೆದ್ದುತರಬೇಕೆಂದೂ ಈ ಅಲ್ಪನ ಆಸೆ! ಆ ಆಸೆಯನ್ನಿರಿಸಿಕೊಂಡು ಬದುಕಿದೆ; ಆ ಆಸೆಗೆ ತಕ್ಕಂತೆ ಕೈಲಾದಷ್ಟು ದುಡಿದೆ. ಈಗ ದುಡಿದಷ್ಟರಿಂದ, ಪಡೆದಷ್ಟರಿಂದ ಒಂದು ವಿಧದ ತೃಪ್ತಿ.

ನನಗೆ ಒಳ್ಳೆಯದನ್ನು ಮಾಡಿದವರನ್ನು ನೆನಪಿನಲ್ಲಿರಿಸಿಕೊಂಡಂತೆ ನನಗೆ ಕೇಡು ಮಾಡಿದವರನ್ನು ಇರಿಸಿಕೊಂಡಿಲ್ಲ. ಅವರನ್ನು ಮರೆಯುತ್ತ ಬಂದಿದ್ದೇನೆ! ಯಾಕೆ? ನಾನೂ ಎಲ್ಲ ಕಾಲದಲ್ಲಿಯೂ ಎಲ್ಲರಿಗೂ ಒಳ್ಳೆಯದನ್ನೇ ಮಾಡಿರಲಾರೆ. ತಿಳಿದಾಗಲಿ, ತಿಳಿಯದೆ ಆಗಲಿ ಕೆಲವರಿಗಾದರೂ ಕೇಡನ್ನು ಮಾಡಿರಬೇಕು, ಇಲ್ಲವೆ ಆಗುತ್ತಿದ್ದ ಕೇಡಿಗೆ ಅಡ್ಡಬರಲು ನನ್ನಿಂದ ಸಾಧ್ಯವಿದ್ದೂ ಅಡ್ಡಬರದೆ ಹೋಗಿರಬೇಕು. ಆದುದರಿಂದ ಅವರ ಕ್ಷಮೆಯನ್ನಿಲ್ಲಿ ಕೋರಿಬಿಟ್ಟರೆ ಸಾಕು, ಇನ್ನು:

ಮುಂದೆ ಹೊಗಳುವರಾರೊ ಹಿಂದೆ ನಿಂದಿಪರಾರೊ
ಬಂಧು ಭಾವವ ನಟಿಸಿ ಸುಲಿವರಾರೋ!
ಮಂದಿಯಲಿ ಮಾನವನು ಕಳೆಯಲೆಳಸುವರಾರೊ
ವಂದಿಸೆಲ್ಲರನೊಮ್ಮೆ-ಮರುಳಸಿದ್ಧ!

ಚಾಡಿ ಹೇಳುವರಾರೊ ಕಾಡಿ ಪೀಡಿಪರಾರೊ
ನೋಡಿ ಕರುಬುವರಾರೊ ನಿಷ್ಕಾರಣಂ
ಕೇಡಗೈಯುವರಾರೊ ಸೇಡ ಬಯಸುವರಾರೊ
ಹಾಡಿಹರಸೆಲ್ಲರನು-ಮರುಳಸಿದ್ಧ!

ಕನ್ನಡದಿಂದ ಕನ್ನಡಿಗರ ಏಳಿಗೆ, ಕನ್ನಡಿಗರಿಂದ ಕರ್ನಾಟಕದ ಏಳಿಗೆ ಬೇಗ ಆಗಲಿ!

# ವಚನ ಪರಂಪರೆ ಮತ್ತು ಸಿದ್ಧಯ್ಯ ಪುರಾಣಿಕರು

**ಡಾ || ಎಸ್. ಜಿ. ಘಿವಾರಿ,** ಎಂ.ಎ., ಪಿಎಚ್.ಡಿ.

ಕನ್ನಡಕ್ಕೆ ವಿಶ್ವಸಾಹಿತ್ಯದ ಘನತೆ ಗೌರವಗಳನ್ನು ತಂದಿತ್ತ ಕೀರ್ತಿ ವಚನ ವಾಙ್ಮಯಕ್ಕೆ ಸಲ್ಲುತ್ತದೆ. ಈ ವಚನಗಳು ಅಂಕಿತವನ್ನೊಳಗೊಂಡ ಶರಣರ ಉತ್ಕಟ ಅನುಭಾವಗೀತಗಳು. ಅವು ಭಾವಗೀತೆಯ ಭಾವ ತೀವ್ರತೆಯನ್ನೂ ವಸ್ತುವಿನ ಏಕ ಮುಖತೆಯನ್ನೂ ವ್ಯಕ್ತಿನಿಷ್ಠೆಯ ಹೆಚ್ಚಳವನ್ನೂ ನಿಚ್ಚಳವಾಗಿ ಒಳಗೊಂಡಿವೆ. ಅವು ಗಳಲ್ಲಿ ಕಾವ್ಯಧರ್ಮ ಮತ್ತು ಮಾನವಧರ್ಮಗಳ ತಿರುಳು ಸಮರಸಗೊಂಡು ಸುಂದರ ವಾದ ಭಾವಾಭಿವ್ಯಕ್ತಿಯನ್ನು ಪಡೆದಿದೆ. ಅವು ನೇರವಾಗಿ ಸಹೃದಯರ ಹೃದಯ ವನ್ನು ಮುಟ್ಟಿ ಆನಂದವನ್ನು ನೀಡಬಲ್ಲ ಸತ್ಕಾವ್ಯದ ಉಜ್ವಲ ಜ್ಯೋತಿಸ್ವರೂಪಗಳಾಗಿ ಬೆಳಗಿವೆ. ಅವುಗಳಿಗೆ ಜಾತಿಮತ ಜನಾಂಗದ ಕಟ್ಟುನಿಟ್ಟಿಲ್ಲ. ದೇಶಭಾಷೆಯ ಪರಿಮಿತ ಮೇರೆಯಿಲ್ಲ. ಕಾಲದ ಪರಿಧಿಗೂ ಅವು ಒಳಪಡುವುದಿಲ್ಲ. ಅವು ಮಾನ ವರ ಭಾವದ ಮುಸುಕನ್ನು ಓಸರಿಸಿ, ಮನಸ್ಸಿನ ಸಂಕುಚಿತ ನಿಲವನ್ನು ತೊಲಗಿ ಸುತ್ತವೆ. ಸತ್ಯಪ್ರೇಮ, ನೀತಿನಿಷ್ಠೆ, ಸಮತೆಸ್ಮರಣೆ, ಅನುಭವ-ಸ್ವಾನುಭಾವ ಮೊದಲಾದ ಉದಾತ್ತ ಭಾವನೆಗಳನ್ನು ಉದ್ದೀಪನಗೊಳಿಸುತ್ತವೆ. ಜೀವನದ ಶಾಶ್ವತ ಮೌಲ್ಯಗಳನ್ನು ತೋರಿಸುತ್ತವೆ. ಸತ್ಯಸೌಂದರ್ಯದ ಸಾಕ್ಷಾತ್ಕಾರವನ್ನು ಮಾಡಿಸುತ್ತವೆ. ಇಂತಹ ಮಹತ್ಕಾರ್ಯವನ್ನು ಕನ್ನಡ ನಾಡಿನೊಳಗೆ ಹನ್ನೆರಡನೆಯ ಶತಮಾನದಲ್ಲಿ ಸಹಜವಾಗಿ ಸಾಧಿಸಿದ ಈ ವಚನರಚನಾಸಂಪ್ರದಾಯ ಕನ್ನಡ ಸಾಹಿತ್ಯಕ್ಕೆ ಒಂದು ವಿಶಿಷ್ಟವಾದ ಕೊಡುಗೆಯಾಗಿ ನಿಂತಿದೆ. ನವೀನ ದೃಷ್ಟಿಯ ವಚನ ಸೃಷ್ಟಿ ಸುಮಾರು ಹನ್ನೊಂದನೆಯ ಶತಮಾನದಲ್ಲಿ ಆದ್ಯರಿಂದ ಆರಂಭಗೊಂಡು ಬಸವಾದಿ ಮಹಾನುಭಾವಿಗಳ ಕಾಲಕ್ಕೆ ಮಹೋನ್ನತಿಯನ್ನು ಪಡೆದು, ಒಂದು ಸಜೀವ ಸತ್ಪರಂಪರೆಯಾಗಿ ಇಂದಿಗೂ ಮುಂದುವರೆದಿದೆ. ಅದರ ಚರಿತ್ರೆಯ ಕಥನಕ್ಕೆ ತೊಡಗುವ ಕೆಲವು ಮೂಲಭೂತ ವಿಚಾರಗಳನ್ನು ಅರಿಯಲು ಯತ್ನಿಸಬಹುದಾಗಿದೆ.

ನಿಬಿಡಾರಣ್ಯದಲ್ಲಿಯ ನದಿಯ ಮೂಲವನ್ನು ಹುಡುಕುವುದು ಇಂದಿನ ವಿಜ್ಞಾನ ಯುಗದ ಮಾನವರಿಗೆ ಅಸಾಧ್ಯವಾದ ಕೆಲಸವೇನಲ್ಲ. ಆದರೆ ಕನ್ನಡ ನಾಡಿನಲ್ಲಿ ಒಂದು ವಿಶಿಷ್ಟವಾದ ಸಾಹಿತ್ಯ ಪ್ರಕಾರವಾಗಿ ಪ್ರವಹಿಸುತ್ತಿರುವ ವಚನ ಸಾಹಿತ್ಯ ವಾಹಿನಿಯ ಆದಿಯನ್ನು ಅರಸುವುದು ಅತಿ ಕಠಿಣವಾದ ಕಾರ್ಯ, ಅಷ್ಟೇ ಅಲ್ಲ, ಅದು ಅಸಾಧ್ಯವೆಂದೇ ತೋರುತ್ತದೆ. ಹನ್ನೆರಡನೆಯ ಶತಮಾನದ ಬಸವಾದಿ ಶರಣರ ವಚನ ರಚನೆಯ ಪರಂಪರೆಗೆ ಅವರಿಗಿಂತಲೂ ಪೂರ್ವದಲ್ಲಿದ್ದ ಅನೇಕ ಆದ್ಯರ (ಶರಣರ) ವಚನಗಳೇ ಆಸ್ತಿವಾರ. ಈ ಆದ್ಯರು ರಚಿಸಿರಬಹುದಾದ ವಚನಗಳ ಸಂಖ್ಯೆ ಲೆಕ್ಕವಿಲ್ಲದಷ್ಟು. ಅವುಗಳಲ್ಲಿ ಬಹುಪಾಲು ವಚನಗಳು ಮತಮತಗಳ ಸಂಘರ್ಷಣೆ ಯಿಂದ ಉದ್ಭೂತವಾದ ದ್ವೇಷಾಸೂಯೆಯ ಅಗ್ನಿಗೆ ಆಹುತಿಯಾಗಿಯೊ ಅಥವಾ ಮೂಢಭಕ್ತಿಯ ಅಜ್ಞಾನದ ಫಲವಾಗಿ ಕ್ರಿಮಿಕೀಟಗಳಿಗೆ ಆಹಾರವಾಗಿಯೊ ಇಲ್ಲವೆ ಕಾಲನ ಕರಾಳ ದವಡೆಗೆ ಬಲಿಯಾಗಿಯೊ ವಿನಾಶವನ್ನು ಹೊಂದಿರಬೇಕು. ಹೀಗೆ ಪ್ರಳಯ ರಕ್ಕಸನ ದಾಡೆಯಿಂದ ದಾಟಿ ಬಂದು ಅವಿನಾಶಿಯಾದ ಆದ್ಯರ ವಚನಗಳು ಅತಿ ವಿರಳ. ಆದರೂ ಅವುಗಳ ಬೆಲೆ ಅತ್ಯಮೂಲ್ಯ. 'ಆದ್ಯರ ವಚನ ಪರುಷ–ಕಂಡಯ್ಯ ! ಅಧರಕ್ಕೆ ಕಹಿ, ಉದರಕ್ಕೆ ಸಿಹಿ,[1], '...........ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪನೀರನುಂಬುವನ ವಿಧಿಯಂತೆ ಆಯಿತ್ತೆನ್ನ ಮತಿ ಕೂಡಲಸಂಗಮದೇವಾ'[2]ಬಸವಣ್ಣನವರ ಈ ಉಕ್ತಿಗಳು ಆದ್ಯರ ವಚನಗಳ ಹಿರಿಮೆ ಯನ್ನು ಸಾರುತ್ತವೆ. ಹಾಗೆಯೆ ಚೆನ್ನಬಸವಣ್ಣನವರ–

'ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ,
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ,
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ,
ಅಜಗಣ್ಣನ ಐದು ವಚನಕ್ಕೆ ಕೂಡಲಚೆನ್ನಸಂಗಯ್ಯನಲ್ಲಿ
ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ
ಕಾಣಾ ಸಿದ್ಧರಾಮಯ್ಯ !'[3]

ಈ ವಚನ ಆದ್ಯರು ರಚಿಸಿರಬಹುದಾದ ಅಸಂಖ್ಯ ವಚನಗಳನ್ನು ನಿರ್ದೇಶಿಸುತ್ತದೆ. ಹಾಗೆಯೆ, ಅನುಭಾವದ ಭಾವಸಂಪತ್ತಿಯನ್ನು ಪಡೆದ ಶರಣರ ನಿಲವನ್ನು ಸೂಚಿಸು ತ್ತದೆ. ಬಸವಾದಿ ಪ್ರಮುಖ ವಚನಕಾರರು ಆದ್ಯರ ಈ ಆಧ್ಯಾತ್ಮಿಕ ಗದ್ಯಗೀತ ಗಳನ್ನು ವಚನಗಳೆಂದು ಕರೆದರೆಂದು ತೋರುತ್ತದೆ. ಹಾಗೂ ಈ ತೆರನಾದ ಸಾಹಿತ್ಯ ಪ್ರಕಾರದ ರಚನೆಗೆ ಅನಂತರ 'ವಚನ'–ವೆನ್ನುವ ವಿಶಿಷ್ಟವಾದ ಹೆಸರು ಬಳಕೆಯಲ್ಲಿ

---

1. 'ವಚನ ಸಾಹಿತ್ಯದ ಸಂಗ್ರಹ' ಸಂ : ಫ಼ಹಸನೂರಮಠ ಪು-೬, ವ-೧೬.
2. ಅದೇ ಪು-೮, ವ-2೬.
3. ಹಲಗೆಯಾರ್ಯನ ಶೂನ್ಯಸಂಪಾದನೆಯ ಕಾಗದ ಪ್ರತಿ, ೧೦೫ ವ. ೧೧೬೨.

ಬಂದು ರೂಢವಾಗಿರಬೇಕು. ಆದ್ಯರಲ್ಲಿ ಬಹುಶಃ–'ವಚನ'ವೆನ್ನುವ ಪದಪ್ರಯೋಗ ಪ್ರಚಲಿತವಿದ್ದಂತಿಲ್ಲ. ಅವರು ಇಂತಹ ರಚನೆಗಳಿಗೆ ಶರಣರ 'ಸೂಳ್ನುಡಿ'–ಯೆಂದು ಕರೆಯುತ್ತಿದ್ದರು.

"ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ.
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ.
ನಿಮ್ಮ ಶರಣರ ಸೂಳ್ನುಡಿಯು ಒಂದರಗಳಿಗೆ ಇತ್ತಡೆ
ನಿಮ್ಮ ನಿತ್ತೆ ಕಾಣಾ ರಾಮನಾಥಾ ![4]

ದಾಸಿಮಯ್ಯನ ಈ ವಚನ ಮೇಲಿನ ವಿಚಾರಕ್ಕೆ ಸಾಕ್ಷಿಯಾಗಿದೆ. ಇನ್ನು 'ಸೂಳ್ನುಡಿ' ಎಂಬುದರ ಅರ್ಥವನ್ನು ಗ್ರಹಿಸಬೇಕು. 'ಸೂಳ್ನುಡಿ' ಅಂದರೆ ತಿರುಳುಳ್ಳ ಮಾತು, ತತ್ವ, ಎನ್ನುವುದು ನಿಘಂಟು ಕೊಡುವ ಶಬ್ದಾರ್ಥ. ಜೀವನಾನುಭವದ ಸಾರವನ್ನು ಸೂರೆಗೊಂಡು ತತ್ತ್ವಸ್ವರೂಪವನ್ನು ಪಡೆದು ಆನಂದಮಯವಾಗಿ ಹೊರ ಹೊಮ್ಮಿದ ಶರಣರ ಶಬ್ದಸಮೂಹವೇ 'ಸೂಳ್ನುಡಿ' ಎನ್ನುವ ಅಭಿಪ್ರಾಯ ದಾಸಿಮಯ್ಯನ ಮೇಲಿನ ವಚನದಲ್ಲಿ ಧ್ವನಿತವಾಗುತ್ತದೆ. ಆದ್ಯರ ಈ 'ಸೂಳ್ನುಡಿ'ಯೆ ಬಸವಾದಿಗಳಲ್ಲಿ 'ವಚನ'ವೆಂಬ ಅಭಿದಾನವನ್ನು ಪಡೆದು ರೂಢವಾಯಿತು.

'ವಚ್'–ಎಂಬ ಸಂಸ್ಕೃತ ಧಾತುವಿನಿಂದ ನಿಷ್ಪನ್ನವಾದ ನಾಮರೂಪವೆ 'ವಚನ' ನುಡಿ ಅಥವಾ ಮಾತು–ಎನ್ನುವುದು ಅದರರ್ಥ. ಹಳಗನ್ನಡ ಚಂಪೂ ಮಹಾಕಾವ್ಯಗಳಲ್ಲಿ ಛಂದೋನಿಯಮಕ್ಕೆ ಒಳಪಡದೆ ಬಿಡಿ ಬಿಡಿಯಾದ ನುಡಿಗಳಿಂದ ರಚನೆಗೊಂಡ ಸಾಹಿತ್ಯಪ್ರಕಾರಕ್ಕೆ 'ವಚನಗದ್ಯ'–ಎಂದು ಕರೆಯುತ್ತಿದ್ದರು. ಈ ವಚನ ಗದ್ಯಕ್ಕೂ ಮತ್ತು ಶರಣರು ಸೃಜಿಸಿದ ವಚನಗಳಿಗೂ ಬಹಳಷ್ಟು ಭೇದವಿದೆ. ಶರಣರ "ವಚನವೆನ್ನುವುದು ಒಂದು ವಿಶಿಷ್ಟ ಜಾತಿಯ ಬರೆಹ. ಅದು ಗದ್ಯಪದ್ಯಗಳ ಮಧ್ಯದ ಒಂದು ಪ್ರಭೇದ. ಹೇಳುವುದನ್ನು ಸಂಕ್ಷಿಪ್ತವಾಗಿ, ನೇರವಾಗಿ, ಎಲ್ಲರಿಗೂ ತಿಳಿಯುವಂತೆ ಅದು ನಿರೂಪಿಸಬಲ್ಲುದು"[5] "ವಚನವೆಂಬುದು ಭಾವಗೀತ ಲಕ್ಷಣದಿಂದ ಕೂಡಿದ ಅನುಭಾವಗದ್ಯ"[6] "ವಚನ ಒಂದು ಸಾಹಿತ್ಯ ಪ್ರಕಾರ. ಅಂಕಿತವನ್ನೊಳಗೊಂಡ ಈ ಅನುಭಾವೀ ಗದ್ಯಗೀತಗಳು ಇಂದಿನ ನಮ್ಮ ಅನುಭವಗಳಿಗೂ ಹೊಳಪುಕೊಟ್ಟು ಕಾಲದೇಶಗಳ ಕಟ್ಟನ್ನು ಒಡೆಯಬಲ್ಲ ಶಕ್ತಿಯ ಕಿಡಿಗಳು"[7] ವಚನಗಳ "ಈ ಗದ್ಯ ಕ್ಲಿಪ್ತ ಛಂದಸ್ಸನ್ನು ತೊರೆದಿದ್ದರೂ ಅದರ ಮೈಕಟ್ಟು ಅಛಂದವಾದುದಲ್ಲ. ಅದು ಗದ್ಯರೂಪಧಾರಣಮಾಡಿದ್ದರೂ ಕಾವ್ಯತ್ವವನ್ನು ಬಿಟ್ಟಿಲ್ಲ. ಆ ಗದ್ಯದ ಪ್ರಕಾ

4. 'ವಚನ ಸಾಹಿತ್ಯ ಸಂಗ್ರಹ' ಪು-೬, ವ-೧೫.
5. 'ಬಸವಣ್ಣನವರು' ಡಾ॥ ಎಂ. ಚಿದಾನಂದಮೂರ್ತಿ ಪು-೧೪೨.
6. 'ಕನ್ನಡ ಸಾಹಿತ್ಯ ಚರಿತ್ರೆ' ರಂ. ಶ್ರೀ ಮುಗಳಿ ಪು-೧೪೭.
7. 'ವಚನೋದ್ಯಾನ'–ಹಾ. ಮಾ. ನಾಯಕ ಪುಟ vii.

ರಾಂತವೇ ವಚನಸಾಹಿತ್ಯವಾಗಿ ಹೂ ಬಿಟ್ಟಿತು. ವಚನಗಳು ಆ ಗದ್ಯದಿಂದ ಹೊಮ್ಮಿದ ಬಿಡಿ ಬಿಡಿಯ ಕಿಡಿ ಹೂಗಳು"[8] ಈ ವಚನ ಸಾಹಿತ್ಯಕ್ಕೆ ಮೂಲಸಿಧಿ ಅದರ ಬಾಹ್ಯರೂಪವಲ್ಲ, ಅದರ ಧಾರೆಯುಲ್ಲ, ಅನುಭಾವವೇ ಅದರ ಅಂತರಂಗ. ಆ ಶಿವಾನುಭವ ತಂತಾನೆ ಅರಳಿ ವಚನಸಾಹಿತ್ಯವಾಗುತ್ತದೆ."[9] ಒಟ್ಟಿನಲ್ಲಿ ಶರಣರ "ಸ್ವಾನುಭಾವಗೀತೆಗಳೆ ವಚನಗಳು"[10]. ಆಧುನಿಕ ವಿಮರ್ಶಕರು ವಚನಗಳ ಬಗೆಗೆ ವ್ಯಕ್ತಪಡಿಸಿದ ಅಭಿಪ್ರಾಯಗಳಿವು.

ವಚನಕಾರರ ದೃಷ್ಟಿಯಲ್ಲಿ ವಚನಗಳ ಸ್ವರೂಪವೆಂತಹದು ? ಅವುಗಳ ನೆಲೆ ಬೆಲೆಯೇನು? ಈ ಪ್ರಶ್ನೆಗಳಿಗೆ ಸಮರ್ಪಕ ಉತ್ತರವನ್ನು ವಚನಗಳಲ್ಲಿಯೇ ಹುಡುಕುವುದು ಯುಕ್ತಿ ಯುಕ್ತವಾಗಿದೆ. "ಕೆರೆ ಹಳ್ಳ ಬಾವಿಗಳು ಮೈದೆಗೆದರೆ, ಗೊಳ್ಳೆ ಗೊರಚೆ ಚಿಪ್ಪುಗಳು ಕಾಣಬಹುದು. ವಾರಿಧಿ ಮೈದೆಗೆದರೆ ರತ್ನಂಗಳು ಕಾಣಬಹುದು. ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ (ಅವರ ವಚನದಲ್ಲಿ) ಲಿಂಗವೆ ಕಾಣಬಹುದು"[11]—ಎಂದು ಹೇಳುತ್ತಾರೆ ಬಸವಣ್ಣನವರು. ಅಲ್ಲದೆ ಶರಣರ (ನುಡಿ) ವಚನ, ಹೇಗಿರಬೇಕೆಂಬುದನ್ನು ಅವರಿಂದಲೇ ಕೇಳಿ—"ನುಡಿದರೆ ಮುತ್ತಿನಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು. ನುಡಿದರೆ ಲಿಂಗ ಮೆಚ್ಚಿ "ಅಹುದಹುದೆನ" ಬೇಕು. ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯಾ ?"[12] ಲಿಂಗದ ನಡೆ, ಲಿಂಗದ ನುಡಿ, ಲಿಂಗಸ್ವರೂಪವೇ ತಾನಾಗಿದ್ದ ನಿಲವೇ ಶರಣನ ನಿಲವು. ಅದರ ಸ್ವರೂಪವೆ ವಚನ. ಇದು ವಚನದ ನಿರ್ವಚನ. "ಮರ್ತ್ಯಲೋಕದವರ ಮನದ ಮೈಲಿಗೆಯ ಕಳೆಯಲೆಂದು ಗೀತಮಾತೆಂಬ ಜ್ಯೋತಿಯ ಬೆಳಗಿಕೊಟ್ಟರು ಕೂಡಲ ಚನ್ನಸಂಗನ ಶರಣರು"[13]—ವಚನ ಶರಣರ ಗೀತಮಾತು. ಅದು ಪರಂಜ್ಯೋತಿ ಸ್ವರೂಪವಾಗಿದ್ದು ಮಾನವರ ಮನದ ಕಾಳಿಕೆಯನ್ನು ನಿವಾರಿಸುತ್ತದೆ. ಇದು ಚೆನ್ನಬಸವಣ್ಣನವರ ಅನುಭವದ ವಚನ. 'ತನ್ನ ತಾನರಿದು ನುಡಿದ ಶರಣನ ನುಡಿಯೆಲ್ಲ (ವಚನವೆಲ್ಲ) 'ಪರತತ್ವ'. ಅದು 'ಜ್ಯೋತಿರ್ಲಿಂಗ'[14]—ಎಂದು ಸಾರುತ್ತದೆ ಪ್ರಭುವಿನ ದಿವ್ಯವಾಣಿ. ಸ್ವಾನುಭಾವವೇ ವಚನದ ಅಂತರಂಗ ; ಅದೇ ಅದರ ಸ್ಥಾಯೀಭಾವವೂ ಅಹುದು. ಅದು ಲೌಕಿಕ

8. ಕುವೆಂಪು ಲೇಕನ 'ಪ್ರಬುದ್ಧ ಕರ್ನಾಟಕ' ಸಂಪುಟ-೩೧. ಸಂಚಿಕೆ ೧
9. ಶ್ರೀ ಮೂಜಗಂ ಅವರ "ಚಿತ್ಸುಮನ" ಮುನ್ನುಡಿ ಡಾ॥ ಆರ್. ಸಿ. ಹಿರೇಮಠ ಪುಟ ೪.
10. 'ವಚನ ಸಾಹಿತ್ಯ ಸಂಗ್ರಹ' ಭೂಸನೂರಮಠ ಮುನ್ನುಡಿ ಪುಟ CXV.
11. ಅದೇ ಪುಟ ೮, ವ-೨೩.
12. ಅದೇ ಪುಟ ೬,-೭ವ-೧೭.
13. ಅದೇ ಪುಟ ೭, ವ-೧೯.
14. ಅದೇ ಪುಟ ೭, ವ-೨೦, ೨೧.

ಅಲೌಕಿಕಗಳನ್ನು ಒಂದುಗೂಡಿಸುವ ಸೋಪಾನ. ಇಂತಹ ಉಜ್ವಲ ಅನುಭಾವೀ ಸಾಹಿತ್ಯ ಕನ್ನಡದಲ್ಲಿದ್ದುದು ಕನ್ನಡಿಗರೆಲ್ಲರ ಪುಣ್ಯ. ಅದರ ಪ್ರಭಾವದಿಂದಲೆ ಉತ್ತರ ಕರ್ನಾಟಕದಲ್ಲಿ ವ್ಯಕ್ತಿಯ ಪರಿಚಯ ಮಾಡಿಕೊಡುವಾಗ–ಅವನು 'ವಚನಿಕ'–ಎಂದು ಹೇಳುತ್ತಾರೆ. ಅದರ ಅರ್ಥ—'ಆ ವ್ಯಕ್ತಿ ನುಡಿದಂತೆ ನಡೆಯುವವ, ತನ್ನ ಮಾತು ಮತ್ತು ಕೃತಿಗಳಲ್ಲಿ ಭಿನ್ನತೆಯಿಲ್ಲದವ, ಆಚಾರವಿಚಾರಗಳೊಂದಾದವ'—ಇದು ವಚನ ಪರಂಪರೆಯ ಪ್ರಭಾವ, ಕನ್ನಡದ ಜಾನಪದ ಕವಿ ಸರ್ವಜ್ಞ ಅವನು ನಾಡಿನ ತುಂಬೆಲ್ಲ ಸಂಚರಿಸಿ ಸಂಪಾದಿಸಿದ ಲೌಕಿಕ ಅನುಭವವನ್ನು ತ್ರಿಪದಿಗಳಲ್ಲಿ ಹಾಡಿದ್ದಾನೆ. ಅವುಗಳಲ್ಲಿ ಅವನ ಅನುಭಾವ ಸಂಪತ್ತಿದೆ. ಸರ್ವಜ್ಞಾಂಕಿತ ಈ ತ್ರಿಪದಿಗಳನ್ನೂ ಸರ್ವಜ್ಞನ ವಚನಗಳು ಎಂದೇ ಕರೆಯುತ್ತಾರೆ.

ತಮಿಳು ಶಿವಭಕ್ತರ ಉತ್ಕಟ ಭಕ್ತಿಯ ಮೂಲಸೆಲೆಯ ಜಲವನ್ನು ಹೀರಿ ಕನ್ನಡ ನಾಡಿನ ಶರಣರ ಸೂಳ್ನುಡಿಗಳು ಅಂಕುರಿಸಿದವು. ಆದ್ಯರ ಈ ಸೂಳ್ನುಡಿಗಳೇ ವಚನಗಳಿಗೆ ಆದಿ. ಅವುಗಳ ಪ್ರಭಾವದಿಂದ ಪ್ರೇರಿತರಾದ ಬಸವಾದಿ ಅನೇಕ ಶಿವಶರಣರು ವಚನ ಸಾಹಿತ್ಯ ಬೆಳೆಯನ್ನು ಹುಲುಸಾಗಿ ಬೆಳೆದರು. ಕಲ್ಯಾಣ ಪಟ್ಟಣದಲ್ಲಿ ಈ ವಚನಕಾರ ಶರಣರ ಅನುಭವ ಮಂಟಪ ಸ್ಥಾಪನೆಯಾಯಿತು. ಆ 'ಅನುಭವ ಮಂಟಪದ ದಿವ್ಯಾಗಾರದಲ್ಲಿ ಬಸವಣ್ಣನವರ ಭಕ್ತಿಯ ಬೆಳಗಿನಲ್ಲಿ ಶಿವಶರಣರು ಅಸಂಖ್ಯಾತರಾದರು ; ವೀರಶೈವ ಧರ್ಮ ತತ್ತ್ವ ಸಮಾಜಗಳಲ್ಲಿ ನವನವೋನ್ಮೇಷಶಾಲಿಯಾದ ಚೈತನ್ಯವುಂಟಾಗುವುದಕ್ಕೆ ಕಾರಣರಾದರು.[15] ಈ ವಚನಕಾರರು 'ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಯ ಬೀಜಗಳನ್ನು ನಾಡಿನ ತುಂಬ ತೂರಿದರು. ಸರ್ವ ಸಮಾನತೆ, ಏಕದೇವತ್ವದ ಮತ್ತು ನೀತಿನಿಷ್ಠೆಯ ಮಂತ್ರ ಸಾರಿದರು. ಈ ವಚನಕಾರರಿಂದ ಕರ್ನಾಟಕದಲ್ಲಿ ಒಂದು ಉಜ್ವಲ ಅಧ್ಯಾತ್ಮಿಕ ಮತ್ತು ನೈತಿಕ ಪರಂಪರೆ ಪ್ರಾರಂಭವಾಯಿತು. ಅದರಿಂದ ನಾಡು ನುಡಿ ಜನ ಈ ತ್ರಿಕೂಟ ಪಾವನವಾಯಿತು'[16]

ಆದ್ಯರ ಸೂಳ್ನುಡಿಗಳ ಪ್ರಯೋಗದಿಂದ ಪ್ರಾರಂಭವಾದ ವಚನ ರಚನೆ, ಬಸವಾದಿ ಶರಣರ ಕಾಲದಲ್ಲಿ ವಚನ ಸಾಹಿತ್ಯದಲ್ಲಿ ಪರಂಪರೆಯಾಗಿ ಪ್ರಖ್ಯಾತಿಯನ್ನು ಪಡೆಯಿತು. 'ಹಿಂದೆ ಹಿಂದಿನ ಆಚಾರ ವಿಚಾರ, ಭಾವ ಭಾಷೆ, ತತ್ತ್ವಸಂಸ್ಥೆ ಇವೇ ಮೊದಲಾದ ಮಾನವ ಜೀವನದ ಚಟುವಟಿಕೆಗಳು ಕಾಲಪ್ರವಾಹದ ಕೂಡ ಮುಂದೆ ಮುಂದಿನ ಪೀಳಿಗೆಗೆ ಹರಿದು ಹೋಗುವುದೇ ಪರಂಪರೆ ಇಲ್ಲವೆ ಸಂಪ್ರದಾಯ. ಮಾನವ ಜೀವನದಲ್ಲಿ ಪರಂಪರೆ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಈ ಪರಂಪರೆ

---

15. 'ಷಟ್‌ಸ್ಥಲ ಜ್ಞಾನ ಸಾರಾಮೃತ'–ಚಾರಿತ್ರಿಕ ವಿವೇಚನೆ ಪುಟ ೧
ಸಂ. ಡಾ॥ ಆರ್. ಸಿ. ಹಿರೇಮಠ,

16. 'ಕನ್ನಡ ಸಾಹಿತ್ಯದ ಇತಿಹಾಸ' ಡಾ. ರಂ. ಶ್ರೀ ಮುಗಳಿ ಪುಟ ೨೩

ಯನ್ನು ಬಿಟ್ಟು ಜೀವನ ವ್ಯವಹಾರ ನಡೆಯುವುದು ಕಷ್ಟ ; ಅಸಾಧ್ಯವೆಂದೂ ಹೇಳಬಹುದು. ಮಾನವ ಜೀವನದಲ್ಲಿ ಪರಂಪರೆಯ ಪ್ರಾಬಲ್ಯ ಇಷ್ಟಿದ್ದರೂ, ಪರಂಪರೆಯ ಮೂಲ ಚೈತನ್ಯ ಶಕ್ತಿ ಪ್ರಯೋಗವೇ ಎಂಬುದು ಎಂದೂ ಮರೆಯತಕ್ಕ ಮಾತಲ್ಲ. ಪರಂಪರೆ ಪ್ರಯೋಗದ ಶಿಶು. ವಿಜಯಶಾಲಿಯಾದ ಸತ್ವಯುತವಾದ ಮುಂದು ಮುಂದಿನ ವೇಳೆಗೆ ಅನುಸರಿಸತಕ್ಕ ಪ್ರಯೋಗದ ಕೂಸು ಪರಂಪರೆ. ಪ್ರಮಾಣ ಪುರುಷರ ಪ್ರಯೋಗಗಳೇ ಮುಂದಿನವರಿಂದ ಅನುಕರಿಸಲ್ಪಟ್ಟು ಪರಂಪರೆಯಾಗುತ್ತದೆ.'[17] ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡಿನೊಳಗೆ ಬಸವಾದಿ ಅನೇಕ ಶರಣರ ವಚನ ರಚನೆ ವಿಪುಲವೂ ಸತ್ವಯುತವೂ ಆಗಿ, ಅಂದಿನ ಜನಾಂಗದ ಮೇಲೆ ಮುದ್ರೆಯನ್ನೊತ್ತಿ ಜನಜಾಗ್ರತಿಯನ್ನು ಉಂಟುಮಾಡಿತು. ವಚನ ಸಾಹಿತ್ಯ ಪರಂಪರೆಯನ್ನೂ ಸ್ಥಾಪಿಸಿತು.

ಏಕಕಾಲಕ್ಕೆ ಆಕಾಶದಲ್ಲಿ ಅಗಣಿತ ನಕ್ಷತ್ರಗಳು ಗೋಚರಿಸುವಂತೆ, ಈ ಶತಮಾನದಲ್ಲಿ ಕರ್ನಾಟಕದೊಳಗೆ ಅನೇಕ ಅನುಭಾವೀ ಶರಣರು ವಿಜೃಂಭಿಸಿದರು. ಅವರು ರಚಿಸಿದ ಅಸಂಖ್ಯ ವಚನಗಳ ಪ್ರಭಾವದಿಂದ ಎಲ್ಲೆಡೆ ಹೊಸ ಆಚಾರ ವಿಚಾರಗಳು ತಲೆಯೆತ್ತಿದವು. ಜನರಲ್ಲಿ ನೂತನ ಚೇತನ ಸಂಚಾರವಾದಂತಾಯಿತು, ಹೀಗೆ ವಚನಸಾಹಿತ್ಯದ ಹುಲುಸಾದ ಬೆಳೆಯನ್ನು ರಾಶಿಮಾಡಿ ಶರಣರು ಜನರ ಮನಮನಗಳ ಮನೆಗೆ ಕೊಂಡೊಯ್ಯುವಷ್ಟರಲ್ಲಿ, ಕಳ್ಳರು ಬಂದು ಮನೆಗೆ ಕನ್ನ ಹಾಕಿದಂತೆ, ಕನ್ನಡ ನಾಡಿನ ಇದೇ ಭಾಗದಲ್ಲಿ ರಾಜಕೀಯ ವಿಪ್ಲವವು ಸಂಭವಿಸಿತು. ಬಿಜ್ಜಳರಾಯನ ಕೊಲೆ ಹಾಗೂ ಉತ್ತರದಿಂದ ಒದಗಿ ಬಂದ ಮಹಮ್ಮದೀಯರ ಭಯಂಕರ ಧಾಳಿಗಳಿಂದ ಕೊಲೆ ಸುಲಿಗೆ ರಕ್ತಪಾತಗಳು ವ್ಯಾಪಕವಾಗಿ ನಡೆದವು. ಜನರು ಭಯಭೀತರಾಗಿ ಪ್ರಾಣರಕ್ಷಣೆಗಾಗಿ ಸುರಕ್ಷಿತ ಸ್ಥಳಗಳಿಗೆ ಪಲಾಯನಗೈದರು. ಅದರ ಪರಿಣಾಮವಾಗಿ ಶರಣಧರ್ಮಕ್ಕೂ ವಚನಸಾಹಿತ್ಯಕ್ಕೂ ಬಲವಾದ ಆಘಾತವುಂಟಾಯಿತು. ಅವರ ಸಾಮಾಜಿಕ ಕ್ರಾಂತಿಕಾರ್ಯ ಅಪೂರ್ಣವಾಗಿ ಗುಪ್ತಗಾಮಿಯಾಯಿತು.[18]

ಬಸವಾದಿ ಶರಣರಿಂದ ಪ್ರಾರಂಭವಾದ ವಚನ ಸಾಹಿತ್ಯ ಪರಂಪರೆ ಮತ್ತು ಸಾಮಾಜಿಕ ಹಾಗೂ ಧಾರ್ಮಿಕ ಪರಿವರ್ತನೆ ರಾಜಕೀಯ ರಕ್ತಕ್ರಾಂತಿಯ ಮೂಲಕ ಕಲ್ಯಾಣ ಕೇಂದ್ರದಿಂದ ಭಗ್ನವಾದ ಮೇಲೆ ಅದರ ಪುನರುಜ್ಜೀವನಕ್ಕೆ ಅವಕಾಶ

---

17. 'ವರ್ಧಂತಿ'–'ಪರಂಪರೆ ಮತ್ತು ಪ್ರಯೋಗ' ಪುಟ ೪೯, ೫೧
ಲೇ ; ಪ್ರೊ॥ ಸಂ. ಶಿ. ಭೂಸನೂರಮಠ

18. 'ಶೂನ್ಯಸಂಪಾದನೆ–ಪ್ರಸ್ತಾವನೆ ಪುಟ ೧ ಸಂ. ಫ. ಗು. ಹಳಕಟ್ಟಿ ಹಾಗೂ ನೋಡಿ 'Vijayanagar Sex centanary commemoration Vol. I. P. P. 350, 392. ಶ್ರೀ ಡಿ. ಎಲ್. ನರಸಿಂಹಾಚಾರ ಅವರ ಲೇಖನ 'Kannada Literature under Vijayanagar'.

ದೊರೆತುದುದು ೧೫ನೆಯ ಶತಮಾನದಲ್ಲಿ. ಆಗ ಅಳಿದುಳಿದ ವಚನರಾಶಿಯನ್ನು ಹುಡುಕಿ ತೆಗೆಯುವುದು, ಸಂಗ್ರಹಿಸುವುದು, ಸಂಸ್ಕರಿಸುವುದು ಅವುಗಳನ್ನು ಸ್ಥಲ ವಿಭಾಗವಾಗಿ ಸಂಕಲನಗೈಯುವುದು ಮತ್ತು ಅವುಗಳಿಗೆ ವ್ಯಾಖ್ಯಾನ, ಟೀಕೆ, ಟಿಪ್ಪಣಿ ಗಳನ್ನು ಬರೆಯುವುದು ಹಾಗೂ ಅವುಗಳ ಆಧಾರದಿಂದ ಕಾವ್ಯಪುರಾಣಾದಿ ಕೃತಿಗಳನ್ನು ರಚಿಸುವುದು ಇವೇ ಮೊದಲಾದ ಕಾರ್ಯಗಳು ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ರಭಸದಿಂದ ನಡೆದವು. ಬಸವಾದಿ ಶರಣರ ಕಾಲವು ವಚನ ಸಾಹಿತ್ಯ ಪರಂಪರೆಯ ನಿರ್ಮಾಣಕಾಲವಾದರೆ ೧೫ನೆಯ ಶತಮಾನವು ಆ ವಚನ ಸಾಹಿತ್ಯ ರಾಶಿಯ ವಿಮರ್ಶಾಕಾಲವಾಗಿದೆ.

ಈ ಕಾಲದಲ್ಲಿ ಲೆಕ್ಕವಿಲ್ಲದಷ್ಟು ವೀರಶೈವ ಧರ್ಮಗ್ರಂಥಗಳು ರಚನೆಗೊಂಡವು. ಅವುಗಳಲ್ಲಿ ಮಹಾಲಿಂಗದೇವನ 'ಏಕೋತ್ತರ ಶತಸ್ಥಲ', ಕುಮಾರ ಬಂಕನಾಥನ ಸಟೀಕಾ 'ಪ್ರಭುದೇವರ ವಚನಗಳು', ಜಕ್ಕಣಾರ್ಯನ 'ನೂರೊಂದು ಸ್ಥಲ', ಕಲ್ಲುಮಠದ ಪ್ರಭುದೇವನ 'ಲಿಂಗಲೀಲಾವಿಲಾಸ ಚಾರಿತ್ರ' ಮತ್ತು 'ಪ್ರಭುದೇವರ ಮಂತ್ರಗೌಪ್ಯಟೀಕೆ' ಹಾಗೂ 'ಶೂನ್ಯಸಂಪಾದನೆ' ಈ ಮೊದಲಾದ ಸಂಕಲನಗಳು ಶಾಸ್ತ್ರೀಯ ದೃಷ್ಟಿಯಿಂದ ರೂಪತಾಳಿದ ಕೃತಿಗಳು. ಲಕ್ಕಣ್ಣ ದಂಡೇಶನ 'ಶಿವತತ್ತ್ವ ಚಿಂತಾಮಣಿ', ಚಾಮರಸನ 'ಪ್ರಭುಲಿಂಗಲೀಲೆ' ಮತ್ತು ಮಗ್ಗೆಯ ಮಾಯಿದೇವನ 'ಶತಕತ್ರಯ', ಏಕೋತ್ತರಶತಸ್ಥಲ ಷಟ್ಪದಿ', 'ಷಟ್‌ಸ್ಥಲಗದ್ಯ' ಮೊದಲಾದ ದಾರ್ಶನಿಕ ಕಾವ್ಯಗಳೂ ನಿರ್ಮಾಣಗೊಂಡವು. ಕಲ್ಯಾಣದ ವಾತಾವರಣ ಪುನರಾ ವರ್ತನಗೊಂಡು, ನೂರೊಂದು ವಿರಕ್ತರ ತಪಸ್ಸಿನ ಪ್ರಭಾವದಿಂದ, ಕನ್ನಡನಾಡಿನಲ್ಲಿ ಮತ್ತೊಮ್ಮೆ ಜನ ಜಾಗೃತಿಯುಂಟಾಯಿತು. ಆದರೆ ಸ್ವತಂತ್ರ ವಚನ ರಚನೆಯ ಕಾರ್ಯವನ್ನು ಯಾರೂ ಕೈಗೊಳ್ಳದಿರುವುದು ಈ ಯುಗದ ಒಂದು ಕೊರತೆಯಾಗಿ ತೋರುತ್ತದೆ. ಈ ಕಾಲದ ಮಹನೀಯರೆಲ್ಲ ವಚನ ಧರ್ಮದ ಮಹತಿಯನ್ನು ಚೆನ್ನಾಗಿ ಬಿಂಬಿಸಲು ಸಮರ್ಥವಾಗಿ ಕಾರ್ಯಮಾಡಿದರೆಂದು ಹೇಳಬಹುದು.

ಅನಂತರ ಕೆಲವು ವರ್ಷಗಳಲ್ಲಿಯೇ ಅಂದರೆ ಹದಿನೈದನೆಯ ಶತಮಾನದ ಉತ್ತರ ಭಾಗದಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಅನೇಕ ಶಿಷ್ಯರಿಂದೊಡ ಗೂಡಿ ಕನ್ನಡ ನಾಡಿನಲ್ಲಿ ವ್ಯಾಪಕವಾಗಿ ಶರಣಧರ್ಮ ಪ್ರಚಾರ ಕಾರ್ಯವನ್ನು ಕೈಕೊಂಡರು. ಅವರ ಹಿರಿತನದಲ್ಲಿ ಶಿವಯೋಗ ಸಾಧನೆ, ವಚನ ರಚನೆ, ಶರಣ ಧರ್ಮ ಪ್ರಚಾರ ಮತ್ತು ಪ್ರಸಾರ ಕಾರ್ಯಗಳು ಸಮರ್ಥವಾಗಿ ನಡೆದವು. ಸಿದ್ಧಲಿಂಗ ಶಿವಯೋಗಿಗಳು ಸ್ವರಚಿತ ೭೦೧ ವಚನಗಳುಳ್ಳ 'ಷಟ್‌ಸ್ಥಲ ಜ್ಞಾನ ಸಾರ ಮೃತ' ಎಂಬ ಕೃತಿ ರಚನೆ ಮಾಡಿದರು. ಅಲ್ಲದೆ ನಿಂತುಹೋಗಿ ಗುಪ್ತಗಾಮಿ ಯಾಗಿದ್ದ ವಚನ ವಾಹಿನಿಗೆ ಚಾಲನೆಕೊಟ್ಟು ವಚನಸಾಹಿತ್ಯ ಪರಂಪರೆ ಮುಂದುವರಿ ಯುಲು ಮಾರ್ಗವನ್ನು ಕಲ್ಪಿಸಿಕೊಟ್ಟರು. ಅವರ ವಚನಗಳಲ್ಲಿ ಶಿವಯೋಗ ಸಾಧನೆಯು

ದಿವ್ಯಾನುಭವದ ಸ್ವಾನುಭಾವವು ಸುಂದರವಾಗಿ ಅಭಿವ್ಯಕ್ತಿಯನ್ನು ಪಡೆದಿದೆ. ಆದರೆ ಅವುಗಳಲ್ಲಿ ಈ ಪೂರ್ವದಲ್ಲಿದ್ದ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವ, ಅಕ್ಕ ಮಹಾದೇವಿ ಮೊದಲಾದ ವಚನಕಾರರ ವಚನಗಳಲ್ಲಿ ಅನುಭಾವದ ತೀವ್ರತೆಯು ಜೊತೆಗೆ ದೊರೆಯುವ ಸರಳತೆ, ಮೆರಗು, ಮಾಧುರ್ಯ, ಪ್ರಸನ್ನತೆ, ಲಾಲಿತ್ಯಾದಿ ಗುಣಗಳು ಅಷ್ಟು ನಿಬಿಡವಾಗಿ ಕಂಡು ಬರುವುದಿಲ್ಲ. ಇದು ಬಹುಶಃ ಅಪರಿಹಾರ್ಯವೇನೋ. ಈ ಸಿದ್ಧಲಿಂಗ ಶಿವಯೋಗಿಗಳ ಪರಂಪರೆ ಸುಮಾರು ೧೭ನೆಯ ಶತಮಾನದವರೆಗೆ ನಡೆದುಕೊಂಡು ಬಂದಿದೆ. ಅವರ ಬಹು ಶಿಷ್ಯ ಪರಂಪರೆಯಲ್ಲಿ ಪಲವರು ವಚನಗಳನ್ನು ರಚಿಸಿದ್ದಂತೆ ತಿಳಿದು ಬರುತ್ತದೆ. ಅದರಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರನು ४೦೦ಕ್ಕೂ ಅಧಿಕ ವಚನಗಳನ್ನು ಬರೆದಿದ್ದಾನೆ. ಗುಮ್ಮಳಾಪುರದ ಸಿದ್ಧಲಿಂಗೇಶನು 'ಷಟ್‌ಸ್ಥಲ ಲಿಂಗಾಂಗ ಸಂಬಂಧದ ನಿರ್ವಚನ' ಎಂಬ ಕೆಲವು ವಚನಗಳನ್ನು ರಚಿಸಿದ್ದಾನೆ. ಹಾಗೆಯೆ, ಪಂಡಿತನಾದ ಘನಲಿಂಗನೆಂಬ ಶಿಷ್ಯನೂ ವಚನಗಳನ್ನು ಬರೆದಿದ್ದಾನೆ. ಈ ಘನಲಿಂಗನ ವಚನಗಳಲ್ಲಿ ಅನುಭಾವದ ತೀವ್ರತೆಯೊಂದಿಗೆ ಸಾಹಿತ್ಯಕ ಲಕ್ಷಣಗಳೂ ತೋರುತ್ತವೆ. ಅಲ್ಲದೆ ಅವುಗಳಲ್ಲಿ ಬಸವಾದಿ ವಚನಕಾರರ ಅನುಕರಣೆ ತಲೆದೋರಿದ್ದರೂ ಆವನ ಪ್ರತಿಭೆ ಪಾಂಡಿತ್ಯ ಮತ್ತು ಅನುಭಾವ ಸಂಪತ್ತು ನಿಚ್ಚಳವಾಗಿ ಒಡಮೂಡಿವೆ.

ಜೇವರಿಗೆಯ ಷಣ್ಮುಖ ಶಿವಯೋಗಿಗಳು ೧೭ನೆಯ ಶತಮಾನದಲ್ಲಿ ಆಗಿಹೋದ ಶ್ರೇಷ್ಠ ವಚನಕಾರರು. ಕರ್ನಾಟಕದ ವಚನ ವಾಙ್ಮಯ ಚರಿತ್ರೆಯಲ್ಲಿ ಅವರ ಸ್ಥಾನ ಉನ್ನತವಾಗಿದೆ. ಅವರ ಅಖಂಡೇಶ್ವರಾಂಕಿತ ವಚನಗಳು ಅನುಭಾವ ಮತ್ತು ಅಭಿವ್ಯಕ್ತಿ ಈ ಎರಡೂ ದೃಷ್ಟಿಯಿಂದ ಮಹತ್ವವನ್ನು ಪಡೆದು ಜನಪ್ರಿಯವಾಗಿವೆ. ಅಲ್ಲದೆ ಬಸವಾದಿ ಮಹಾನುಭಾವಿಗಳ ವಚನಗಳ ಎತ್ತರವನ್ನು ಏರಬಲ್ಲ ಸಾಮರ್ಥ್ಯವನ್ನೂ ಅವು ಹೊಂದಿವೆ. 'ಅವರ ಲೋಕಾನುಭವ ಲೋಕ ಕಾರುಣ್ಯಗಳು ಓದುಗರ ಮನಸ್ಸನ್ನು ಸೂರೆಗೊಳ್ಳುತ್ತವೆ. ಅವರ ಯೋಗಸಾಧನೆ ಮತ್ತು ಅನುಭಾವಗಳನ್ನು ಅಭಿವ್ಯಕ್ತಗೊಳಿಸಲು ಸಹಾಯಕವಾದ ವಚನ ರಚನೆಯ ಸಿದ್ಧಿಯೂ ಅವರಿಗೆ ಲಭಿಸಿದೆ'[19] 'ಅಖಂಡೇಶ್ವರ ವಚನಗಳೆಂದರೆ ಹದಿನೇಳನೆಯ ಶತಮಾನದ ಸಾಹಿತ್ಯೋದ್ಯಾನದ ಸರಸಿಯಲ್ಲಿ ಹೊಚ್ಚಹೊಸ ಗಂಧದೊಡನೆ ಅರಳಿದ ಅಚ್ಚ ತಾವರೆಗಳು'[20] ಈ ಷಣ್ಮುಖ ಶಿವಯೋಗಿಗಳ ತರುವಾಯ ಕೆಲವು ವಚನಕಾರರು ಆಗಿಹೋಗಿದ್ದಾರೆ. ಅವರಲ್ಲಿ ನಿಃಕಲ ಕಾಡಸಿದ್ದೇಶ, ಎಚ್ಚರಿಕೆಯ ಮುಕ್ತಣ್ಣ,

19. 'ಜೇವರಗಿ ಜ್ಯೋತಿ'–'ಜ್ಞಾನ ಜ್ಯೋತಿ ಷಣ್ಮುಖ ಶಿವಯೋಗಿ'– ಡಾ. ತಿಪ್ಪೇರುದ್ರಸ್ವಾಮಿ.

20. ಅದೇ 'ಕನ್ನಡ ಸಾಹಿತ್ಯದಲ್ಲಿ ಷಣ್ಮುಖ ಶಿವಯೋಗಿಗಳ ಸ್ಥಾನ'– ಡಾ. ಸಿದ್ಧಯ್ಯ ಪುರಾಣಿಕ.

ವಿರಕ್ತ ಷಡಕ್ಷರಯ್ಯ ಮುಂತಾದವರು ಪ್ರಮುಖರು. ಅವರೆಲ್ಲರ ಮೇಲೆ ಷಣ್ಮುಖ ಶಿವಯೋಗಿಗಳ ಪ್ರಭಾವವನ್ನು ವೆಗ್ಗಳವಾಗಿ ಗುರುತಿಸಬಹುದು. 'ಈ ದೃಷ್ಟಿಯಿಂದ ನೋಡಿದರೆ ವಚನ ವಾಙ್ಮಯದಲ್ಲಿ ಷಣ್ಮುಖ ಶಿವಯೋಗಿಗಳ ಸ್ಥಾನ ಉನ್ನತವಾಗಿದೆ. ಕರ್ನಾಟಕ ವಚನ ಸಾಹಿತ್ಯ ಪರಂಪರೆಗೆ ಸೀಮಾಪುರುಷರಾಗಿ, ತಮ್ಮ ಕಾಲದ ಹಾಗು ಅನಂತರದ ವಚನ ಸೃಷ್ಟಿಗೆ ಯುಗ ಪುರುಷರಾಗಿ, ಕನ್ನಡ ಸಾಹಿತ್ಯದಲ್ಲಿ ಮಹತ್ವದ ಸ್ಥಾನವೊಂದಕ್ಕೆ ಪಾತ್ರರಾಗಿದ್ದಾರೆ. ಯಾವ ನಾಡಿನಲ್ಲಿ ಮೊದಲು ದೇವರ ದಾಸಿ ಮಯ್ಯನು ವಚನಗಳನ್ನು ರಚಿಸಿದನೋ ಅದೇ ನಾಡಿನಲ್ಲಿ (ಕೊನೆಯು) ಷಣ್ಮುಖ ಶಿವಯೋಗಿಗಳು ವಚನಗಳನ್ನು ಬರೆದರು. ಇದರಿಂದಾಗಿ ಸಗರ ನಾಡಿನ ಶರಣರು ವಚನ ಸಾಹಿತ್ಯದ ಇತಿಹಾಸದಲ್ಲಿ ಮಾತೃಸ್ಥಾನದಲ್ಲಿದ್ದಾರೆ, ಅವರ ವಚನ ರಚನೆ ಚಾರಿತ್ರಿಕ ದೃಷ್ಟಿಯಿಂದ ಮಾತ್ರವಲ್ಲದೆ ಧಾರ್ಮಿಕ, ಸಾಂಸ್ಕೃತಿಕ ಸಾಹಿತ್ಯಕ ದೃಷ್ಟಿಯಿಂದಲೂ ಮಹತ್ವದ ಸ್ಥಾನ ಪಡೆದಿವೆ'[21]

ಕರ್ನಾಟಕದ ಪ್ರಾಚೀನ ವಚನಸಾಹಿತ್ಯ ಪ್ರಕಾರವು ಶರಣರ ಧರ್ಮತತ್ತ್ವ, ನೀತಿ, ಅನುಭಾವ, ಸಮಾಜಸುಧಾರಣೆ ಮೊದಲಾದ ಉದ್ದೇಶಗಳಿಗೆ ಮೀಸಲಾಗಿತ್ತು. ಹದಿನೇಳನೆಯ ಶತಮಾನದ ಷಣ್ಮುಖ ಶಿವಯೋಗಿಗಳ ಹಾಗೂ ಅವರ ಪ್ರಭಾವಕ್ಕೆ ಒಳಗಾದ ಅನುಯಾಯಿಗಳ ವಚನಗಳ ರಚನೆಯೊಂದಿಗೆ ಈ ವಚನ ಸಾಹಿತ್ಯ ಪರಂಪರೆ ನಿಂತು ಹೋಗಲಿಲ್ಲ. ಅದು ಈ ಶತಮಾನದಲ್ಲಿಯೂ ಮುಂದು ವರಿದುದನ್ನು ಕಾಣಬಹುದು. ಅಲ್ಲದೆ ಈ ವಚನ ಸಾಹಿತ್ಯ ಪ್ರಕಾರದ ವ್ಯಾಪ್ತಿಯೂ ವಿಶಾಲವಾಗಿದೆ. ಹಿಂದಿನ ವಚನ ಸಾಹಿತ್ಯ ಪರಂಪರೆ ಶ್ರೀ ಜಚನಿ, ಶ್ರೀ ಮೂಜಗಂ, ಶ್ರೀ ಶಿವಕುಮಾರ ಸ್ವಾಮಿಗಳು, ಶ್ರೀ ಮಹಾದೇವ ಬಣಕಾರ, ಶ್ರೀ ವಿಜಯ ಕುಮಾರ, ಮಾತೆ ಮಹಾದೇವಿ ಮೊದಲಾದ ಇಂದಿನವರ ರಚನೆಗಳಲ್ಲಿ ಅವಿಷ್ಕಾರ ವನ್ನು ಪಡೆದಿದೆ. ಅವರು ಶರಣ ಧರ್ಮವನ್ನು ಅವಲಂಬಿಸಿ, ವಚನಕಾರರು ಹಾಕಿ ಕೊಟ್ಟ ಮಾರ್ಗದಲ್ಲಿ ನಡೆದು ತಮ್ಮ ಸಾಧನೆಯ ಜೀವನದ ಮುಖಾಂತರ ಕಂಡು ಕೊಂಡ ತಮ್ಮ ಅಧ್ಯಾತ್ಮಿಕ ಅನುಭವಗಳಿಗೆ ವಚನ ಸ್ವರೂಪವನ್ನು ಕೊಟ್ಟಿದ್ದಾರೆ. ಅವರ ವಚನಗಳು ಅಂಕಿತಗಳನ್ನು ಒಳಗೊಂಡ ಅನುಭಾವೀ ಗೀತಗಳೇ ಆಗಿವೆ. ಅಲ್ಲದೆ ಅವು ಅವರು ಸಾಧಿಸಿ ನಿಂತ ಅವರ ನಿಲುವುಗಳನ್ನೇ ಬಿಂಬಿಸುತ್ತವೆ. ಇನ್ನು ವಚನ ಸಾಹಿತ್ಯ ಪ್ರಕಾರದ ವಿಶಾಲ ವ್ಯಾಪ್ತಿಯನ್ನು–ಶ್ರೀ ಎಸ್.ವಿ. ರಂಗಣ್ಣ, ಶ್ರೀ ಡಿ.ವಿ. ಗುಂಡಪ್ಪ, ಶ್ರೀ ಪರಮೇಶ್ವರಭಟ್ಟ, ಶ್ರೀ ಸಿದ್ಧಯ್ಯ ಪುರಾಣಿಕ ಮೊದಲಾದವರ ಕೃತಿಗಳಲ್ಲಿ ಕಾಣಬಹುದು. ಅವರು ತಮ್ಮ ಬದುಕಿನ ವೈವಿಧ್ಯಮಯ ಅನುಭವಗಳಿಗೆ ಅಭಿವ್ಯಕ್ತಿಯನ್ನು ಒದಗಿಸಲು ವಚನ ಮಾಧ್ಯಮದ ಪ್ರಯೋಗವನ್ನು ನಡೆಸಿದರೆಂದು

---

21. ಜೇವರಗಿ ಜ್ಯೋತಿ 'ವಚನ ಸಾಹಿತ್ಯದ ಸೀಮಾ ಪುರುಷ ಷಣ್ಮುಖ ಶಿವಯೋಗಿ' ಡಾ. ಎಸ್. ವಿದ್ಯಾಶಂಕರ.

ತೋರುತ್ತದೆ. ಅವರ ವಚನಗಳು ಅಂಕಿತ ಮತ್ತು ವಚನ ಲಕ್ಷಣಗಳನ್ನು ಹೊಂದಿದ್ದರೂ ಅವುಗಳ ಅಂತರಂಗ ಅನುಭಾವಕ್ಕೆ ಮಾತ್ರ ಸೀಮಿತವಾಗಿಲ್ಲ. ಅವುಗಳಲ್ಲಿ ಜೀವನದ ಬಹುಮುಖ ಅನುಭವಗಳನ್ನು ಅಭಿವ್ಯಕ್ತಿಗೊಳಿಸುವಲ್ಲಿ ಹೊಸತನವಿದೆ; ಸಮಕಾಲೀನ ಸಾಮಾಜಿಕ ಪ್ರಜ್ಞೆಯಿದೆ; ವಿಶ್ವಸತ್ಯದ ಸಂಶೋಧನೆಯ ಪ್ರಯತ್ನವೂ ಇದೆ.

ಶ್ರೀ ಸಿದ್ಧಯ್ಯ ಪುರಾಣಿಕರ 'ವಚನೋದ್ಯಾನ'-ದ ವಚನಗಳಲ್ಲಿ ಈ ಮೇಲಿನ ಸಕಲ ಲಕ್ಷಣಗಳೂ ಬಂದಿವೆ. ಅಷ್ಟೇ ಅಲ್ಲದೆ, ಅವುಗಳಲ್ಲಿ ಅವರ ವ್ಯಕ್ತಿ ವಿಶಿಷ್ಟವಾದ ಅಭಿನಿವೇಶವಿದೆ. ಅವರ ಈ ವಿಶೇಷತೆಯೇ ಅವರಿಗೆ ವಚನ ಸಾಹಿತ್ಯ ಸೃಷ್ಟಿಯಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಟ್ಟಿದೆ.

ಸ್ನಿಗ್ಧಸ್ನೇಹ, ಸಹಜ ಸೌಜನ್ಯ, ಕೃತಕತೆಯ ಸೋಂಕರಿಯದ ಸದ್ವಿನಯ ಈ ಸದ್ಗುಣಗಳ ಸಾಕಾರವೇ ಸಿದ್ಧಯ್ಯ ಪುರಾಣಿಕರು – ಎಂದರೆ ಅತಿಶಯೋಕ್ತಿ ಆಗಲಾರದು. ಏಕೆಂದರೆ ಅವರ ಈ ವ್ಯಕ್ತಿತ್ವ ಸಿದ್ಧಿಗೆ, ಅವರ ಜನನ, ಶಿಕ್ಷಣ, ಸಂಸ್ಕಾರ ಮತ್ತು ಜೀವನ ಕಲಿಸಿದ ಪಾಠಗಳೇ ಮೂಲಕಾರಣ. ಶರಣ ಧರ್ಮ ಅನುಯಾಯಿಗಳ ಮನೆತನದಲ್ಲಿ ಅವರು ಜನಿಸಿದರು. ಅದರ ಪರಂಪರೆಯ ಪರಿಸರದಲ್ಲಿಯೆ ಬೆಳೆದರು. ಬುದ್ಧಿ ಹೃದಯಗಳನ್ನು ವಿಕಾಸಗೊಳಿಸುವ ಶಿಕ್ಷಣದ ಸಾರವನ್ನು ಹೀರಿದರು. ರಕ್ತಗತವಾಗಿ ಬಂದ ಸಾಂಪ್ರದಾಯಿಕ ಆಚಾರ ವಿಚಾರ, ಇಂದಿನ ಶಿಕ್ಷಣ ಹಾಗೂ ಜನಾಂಗದ ನಿಕಟ ಸಂಪರ್ಕದಿಂದ ಅರಿತ ಜೀವನಮೌಲ್ಯಗಳ ತಾಕಲಾಟದಲ್ಲಿ ಸಂಸ್ಕಾರಗೊಂಡರು. ಬದುಕು ಒದಗಿಸಿದ ಕ್ಷಣಗಳ ಸೂಕ್ಷ್ಮನಿರೀಕ್ಷೆಯಿಂದ ಜೀವನಾನುಭವಗಳನ್ನು ಪಡೆದರು. ಹೀಗೆ ಅವರು ಕಂಡುಂಡ ಬಾಳಿನ ಕಹಿಸಿಹಿ ಅನುಭವಗಳ ರಸಾಯನವನ್ನು ಹಾಗೂ ಅದರ ಮಾಧುರ್ಯವನ್ನು ಅವರ ಸಾಹಿತ್ಯಕೃತಿಗಳಲ್ಲಿ ಕಾಣಬಹುದು. ಅವರ ಕವನ ಸಂಗ್ರಹಗಳಲ್ಲಿ ಈ ಮನೋಭಾವದ ತೀವ್ರ ಅನುಭವವನ್ನು ಅವರು ಅಭಿವ್ಯಕ್ತಗೊಳಿಸಿದ್ದಾರೆ. 'ಶರಣ ಚರಿತಾಮೃತ,' 'ಸಿದ್ಧರಾಮ' 'ಬಸವಣ್ಣನವರ ಜೀವನ ಮತ್ತು ಸಂದೇಶ' ಈ ಚರಿತ್ರೆಗಳು ವಚನ ವಾಙ್ಮಯದಲ್ಲಿ ಸಿದ್ಧಯ್ಯ ಪುರಾಣಿಕರು ನಡೆಸಿದ ಆಳವಾದ ಚಿಂತನ ಮಂಥನದ ಪ್ರತಿಫಲಗಳಾಗಿವೆ. 'ಕಲ್ಲೋಲ ಮಾಲೆ' ಮುಕ್ತಕ ಜಾತಿಯ ಅನುಭಾವ ಗೀತಗಳ ಸಂಕಲನ. ಅದರಲ್ಲಿ ಪುರಾಣಿಕರ ವಚನ ಸೃಷ್ಟಿಯ ಮುಂಬೆಳಗು ಮೂಡಿದೆ.

'ಕಲ್ಲೋಲಮಾಲೆ'ಯಲ್ಲಿ ಕವಿಯ ಹೃದಯಸಮುದ್ರದ ಆಳದಿಂದ ನೆಗೆದೆದ್ದು ಆಡುವ ಅನುಭವದ ಅಲೆಗಳ ಲೀಲೆಯನ್ನು ಕಾಣಬಹುದು. ಅಲ್ಲಿಯ ಪ್ರತಿಯೊಂದು ಲಹರಿಯೂ ಸ್ವತಂತ್ರವಾಗಿ, ಸ್ವಚ್ಛಂದದ ಕಾಂತಿಯಿಂದ ಕೂಡಿ ಸ್ವಯಂಪೂರ್ಣತೆಯನ್ನು ಪಡೆದಿವೆ. ಈ ತರಂಗಮಾಲೆಯ ಓಟ ಲಲಿತ, ಮಧುರ ಹಾಗೂ ಮನೋಹರ.

'ಬೆಳೆವುದದು ಭೂಮಿಗುಣ
  ಬೆಳೆದು ಬೆಳಕಾಗುವುದೆ ಬಾಳಗುಣವು
ಮೊಳೆವುದದು ಬೀಜಗುಣ
  ಬೆಳೆದು ಸವಿಯಾಗುವುದೆ ಕಾಳಗುಣವು
ಉರಿವುದದು ಅಗ್ನಿಗುಣ
  ಉರಿದು ಬೆಳಕಾಗುವುದೆ ಜ್ಯೋತಿಗುಣವು
ಸವಿಯುಹುದು ನುಡಿಯುಗುಣ
  ಸವಿಯು ಬೆಳಕಾಗುವುದೆ ಗೀತಗುಣವು'[22]

ಕವಿಯ ಸಂವೇದನೆಯೆ ಸ್ಪಂದಿಸಿ, ಗೇಯಯುತವಾಗಿ ಹೊರಹೊಮ್ಮಿ ಗೀತವಾಗುವ ಬಗೆಯನ್ನು ಪುರಾಣಿಕರು ಅರ್ಥವತ್ತಾಗಿ ಹೇಳುತ್ತಾರೆ. ಈ ಗೀತೆಯಲ್ಲಿ ಬರುವ ಸಾದೃಶ್ಯಗಳ ಸರಮಾಲೆ ಸಹೃದಯರ ಬುದ್ಧಿಗೆ ಹೊಳೆದು, ಭಾವಕ್ಕೆ ಗಮ್ಯವಾಗಿ ರಮ್ಯತೆಯನ್ನು ಪಡೆಯುತ್ತದೆ. ಅಲ್ಲದೆ ಕವಿಯ ಈ ಅನುಭವ, ಗೀತೆಯ ಲಕ್ಷಣವನ್ನೂ ಪ್ರಭಾವಯುತವಾಗಿ ಬಿಂಬಿಸುತ್ತದೆ.

ಜೀವನದ ಜಟಿಲತೆಯನ್ನು ಕಂಡ ಕವಿಯ ಮನಸ್ಸು ವಿಹ್ವಲಗೊಳ್ಳುತ್ತದೆ; ಸಮಾಧಾನಕ್ಕಾಗಿ ಹಾತೊರೆಯುತ್ತದೆ. ಪರಿಸರ ಕಲಿಸುವ ಪಾಠದಿಂದ ಸಹನೆಯನ್ನು ತಾಳುತ್ತದೆ. ಅದರ ಭಾವಾಭಿವ್ಯಕ್ತಿಯ ಸೊಬಗನ್ನು ಕೆಳಗಿನ ಗೀತೆ ಹೇಗೆ ಕನ್ನಡಿಸುತ್ತದೆ ನೋಡಿ :

'ಈ ವನದಿ ಮಂದಾರ
  ಆಗೊಮ್ಮೆ ಈಗೊಮ್ಮೆ
ಈ ಮನೆಯ ಸಿಂಗಾರ
  ಆಗೊಮ್ಮೆ ಈಗೊಮ್ಮೆ
ಈ ಮನದ ಝೇಂಕಾರ
  ಆಗೊಮ್ಮೆ ಈಗೊಮ್ಮೆ
ಆನಂದದವತಾರ
  ಆಗೊಮ್ಮೆ ಈಗೊಮ್ಮೆ
ಒಳ್ಳೆಯದು ಎಲ್ಲವೂ
  ಆಗೊಮ್ಮೆ ಈಗೊಮ್ಮೆ
ಜೀವನವು ಸಾಗುವುದು
  ಹಾಗೊಮ್ಮೆ ಹೀಗೊಮ್ಮೆ'[23]

---

22. 'ಕಲ್ಲೋಲ ಮಾಲೆ'–ಪುಟ ೧೩, ಗೀತ ೧೨.
23. 'ಕಲ್ಲೋಲ ಮಾಲೆ'–ಪುಟ ೩, ಗೀತ ೨.

ಇಲ್ಲಿ ಶಬ್ದಗಳ ಪುನರಾವರ್ತನವಿದ್ದರೂ ಅವುಗಳಲ್ಲಿ ಒಂದು ಮೆರಗಿದೆ. ಅಲ್ಲದೆ ಭಾವಾಭಿವ್ಯಕ್ತಿ ಅನುಭವದ ಆಳವನ್ನೂ ಸಂಪನ್ನತೆಯನ್ನೂ ಹೆಕ್ಕಿದಷ್ಟು ಹಿರಿದಾಗಿ ಸುತ್ತದೆ.

ಜಗತ್ತು, ಜೀವ, ಅವುಗಳ ವಿವಿಧ ಅವಸ್ಥೆಗಳು ಹಾಗೂ ಅವುಗಳಲ್ಲಿ ಹೊರ ಹೊಮ್ಮುವ ಅನುಭವಗಳ ಸಾರವನ್ನು ಸಂಕ್ಷೇಪಿಸಿ ಸೂತ್ರಪ್ರಾಯವಾಗಿ ಹೇಳುವ ಗೀತೆ ಸ್ವಾರಸ್ಯಪೂರ್ಣವಾಗಿದೆ.

'ಶೈಶವವೆಂದಿತು :
'ನಾನು ಲೀಲಾಲೋಲೆ'
ಬಾಲ್ಯವೆಂದಿತು :
'ನಾನು ಕ್ರೀಡಾಶಾಲೆ'
ತಾರುಣ್ಯವೆಂದಿತು :
'ನಾನು ಒಲವಿನ ಉಯ್ಯಾಲೆ'
ವಾರ್ಧಕ್ಯವೆಂದಿತು :
'ನಾನು ಅನುಭವದ ಕಣ್ಣುಮುಚ್ಚಾಲೆ'
ವೃದ್ಧಾಪ್ಯವೆಂದಿತು :
'ನಾನು ಭಕ್ತಿಯ ಜಪಮಾಲೆ'
ಜಗತ್ತು ಕೂಗಿ ಹೇಳಿತು :
'ನಾನು ಕರ್ತವ್ಯದ ಯಜ್ಞಶಾಲೆ'[24]

ಅನುಭವದ ತಿರುಳನ್ನು ಸೂಚ್ಯವಾಗಿ ಸೂತ್ರರೂಪದಲ್ಲಿ ಹೇಳುವ ಕಲೆ ಇಲ್ಲಿಯ ಗೀತಗಳಲ್ಲಿ ಸಾಧಿಸಿರುವುದನ್ನು ಕಾಣಬಹುದು. ಹಾಗೆಯೇ, ಬಾಳಿನ ಆಳಕ್ಕೆ ಇಳಿದು, ಅಲ್ಲಿ ಜೀವನ ಮೌಲ್ಯಗಳ ಸಂಶೋಧನೆಗೆ ತೊಡಗುವ ಕವಿಯ ಮನೋಧರ್ಮವು ಈ ಕೆಳಗಿನ ಗೀತೆಯಲ್ಲಿ ಲಭಿಸುತ್ತದೆ.

'ಬಾಳಕಡಲಲಿ ಮುಳುಗಿ ಮೂರು ಮುತ್ತನು ತಂದೆ
'ಸ್ನೇಹ, ಸೈರಣೆ, ಸಮತೆ' ಎಂದು ಕರೆದೆ !
ಬಾಳ ಬನದಲಿ ತಿರುಗಿ ಮೂರು ಫಲಗಳ ತಂದೆ
'ದಿಟ, ಚೆಲುವು, ಒಲವುಗಳು' ಎಂದು ಒರೆದೆ !
ಬಾಳಿನಾಗಸದಲಿ ಮೂರು ನಕ್ಷತ್ರಗಳು
'ಒಲಿ, ಒಲಿಸು, ಕೂಡಿನಲಿ' ಎಂದು ಹೆಸರು !

---

24. ಕಲ್ಲೋಲ ಮಾಲೆ, ಪುಟ ೬, ಗೀತ ೫.

ಬಾಳ ಭಾಂಡಾರದಲಿ ಮೂರು ರತ್ನಗಳುಂಟು–
'ನೆನಿಕೆ, ನಯ, ನಂಬಿಕೆ'– ಗಳೆಂದು ಉಸಿರು !"[25]

ಜೀವನ ಕವಿಗೆ ಹೃದಯ ಸಂಪನ್ನತೆಯನ್ನು ಒದಗಿಸಿಕೊಟ್ಟಿದೆ ; ಸದ್ಭಾವ ಸುಗಂಧ ವನ್ನೂ ಪ್ರೇಮ ಮಧುವನ್ನೂ ಅಲ್ಲಿ ತುಂಬಿದೆ.

'ಬದುಕಿನ ಕುಲುಮೆಯಲ್ಲಿ ಬೆಂದು ಸಂಸ್ಕಾರಗೊಂಡ ಮಾನವನ ದುರ್ಗುಣಗಳು ಸದ್ಗುಣಗಳಾಗುತ್ತವೆ; ಅವನ ಕರ್ಮ ನಿರ್ಮಲ ಧರ್ಮವಾಗುತ್ತದೆ. ಕೊನೆಗೆ ಅವನ ಹಮ್ಮುಬಿಮ್ಮುಗಳೂ ಸುಟ್ಟು ಅವನು ಶಿವನೇ ಆಗುತ್ತಾನೆ'[26] ಆಗ ಅವನಿಗೆ 'ಈ ಮಣ್ಣು, ಹೊನ್ನು, ಹೆಣ್ಣು, ತನು, ಮನ, ಧನ–ಎಲ್ಲವೂ ಅಹಿತಗಳಾಗಿ ತೋರುವುದಿಲ್ಲ'. ಅಷ್ಟೇ ಅಲ್ಲದೆ ಅವು ಅವನ ವ್ಯಕ್ತಿತ್ವ ವಿಕಾಸಕ್ಕೆ ಸಹಾಯಕಾರಿ ಗಳಾಗುತ್ತವೆ. ಈ ಭಾವವು 'ಯಾರು ಅಹಿತರು ನಿನಗೆ ಈ ಮೂವರೊಳಗೆ ?' ಎನ್ನುವ ಗೀತೆಯಲ್ಲಿ ಸ್ಫುರಿಸುತ್ತದೆ. 'ಈಶಾವಾಸ್ಯಮಿದಂ ಸರ್ವಂ,' 'ಸರ್ವಂ ಖಲ್ವಿದಂ ಬ್ರಹ್ಮ'–ಎನ್ನುವ ಅನುಭಾವ ಅಲ್ಲಿ ಗಟ್ಟಿಗೊಳ್ಳುತ್ತದೆ.[27] ಆಗ :—

'ಜಗವೆ ದೇಗುಲ ಜೀವದೇವನು
ಜೀವನವೆ ಆರಾಧನೆ
ಹಗಲು ದೀಪವು ರಾತ್ರಿ ಅಕ್ಷತೆ
ಗೈದುದೆಲ್ಲವು ಸಾಧನೆ'[28]

ಹೀಗೆ ಲೌಕಿಕ ಅನುಭವಗಳ ಅಡಿಪಾಯದ ಮೇಲೆ ಅನುಭಾವ–ಕಟ್ಟಡ ನಿರ್ಮಾಣ ಗೊಳ್ಳುತ್ತಿರುವ ಲಕ್ಷಣಗಳು ಈ 'ಕಲ್ಲೋಲ ಮಾಲೆ'ಯಲ್ಲಿ ಅಲ್ಲಲ್ಲಿ ದೊರೆಯುತ್ತವೆ. ಸಿದ್ಧಯ್ಯ ಪುರಾಣಿಕರ ವ್ಯಕ್ತಿತ್ವ ವಿಕಾಸಗೊಂಡು ಪರಿಪಕ್ವವಾಗುತ್ತಿರುವ ಕುರುಹುಗಳೂ ಅಲ್ಲಿವೆ.

ಎಡೆಯೂರ ಶಿವಯೋಗಿ ಸಿದ್ಧಲಿಂಗೇಶ್ವರರ ದಿವ್ಯಾನುಗ್ರಹದ ಪ್ರೇರಣೆಯ ಫಲವಾಗಿ ರಚನೆಗೊಂಡು, ಕ್ರಮವಾಗಿ 'ಜೀವನ ವಿಕಾಸ'–ದಲ್ಲಿ ಪ್ರಕಟಗೊಂಡ ೫೨೫ ವಚನಗಳ ಸಂಗ್ರಹವೇ ಡಾ॥ ಸಿದ್ಧಯ್ಯಪುರಾಣಿಕರ 'ವಚನೋದ್ಯಾನ'. ಅಲ್ಲಿಯ ವಚನಗಳು 'ಸ್ವತಂತ್ರಧೀರ ಸಿದ್ಧೇಶ್ವರ–'ನ ಅಂಕಿತದ ಮುದ್ರೆಯನ್ನು ಒಳಗೊಂಡಿವೆ. ಅವುಗಳಲ್ಲಿ ವಚನಕಾರ ಸಿದ್ಧಯ್ಯನವರ ಮನೋಧರ್ಮವೂ ವಚನಗಳ ರೂಪ ಸ್ವರೂಪವೂ ಸುಂದರವಾಗಿ ಅಭಿವ್ಯಕ್ತಿಯನ್ನು ಪಡೆದಿವೆ. ಪುರಾಣಿಕರ ಆರಾಧ್ಯದೈವ

---

25. 'ಕಲ್ಲೋಲ ಮಾಲೆ'–ಪುಟ ೭. ಗೀತ ೬
26. ಅದೇ ಪುಟ ೧೮, ಗೀತ ೧೭.
27. ಅದೇ ಪುಟ ೨೩, ಗೀತ ೨೨.
28. ಅದೇ ಪುಟ ೨೭, ಗೀತ ೨೬.

'ಸಿದ್ಧೇಶ್ವರ' ಅವನು ಉಪನಿಷತ್ತು ಹೇಳುವಂತೆ –'ಏಕೋ ವಶೀ ಸರ್ವಭೂತಾಂತರಾತ್ಮಾ' – ಸರ್ವವ್ಯಾಪಿ ಆತ್ಮತತ್ವಸ್ವರೂಪನಾಗಿದ್ದಾನೆ — 'ತಮಾತ್ಮಸ್ಥಂ ಯೇ ಅನುಪಶ್ಯಂತಿ ಧೀರಾಃ'– ಆ ಸರ್ವಗತ ತತ್ವಸ್ವರೂಪವನ್ನು ಅನುಭವಗಮ್ಯಮಾಡಿಕೊಳ್ಳುವವರೆ ನಿಜವಾದ ಧೀರರೆನ್ನಿಸಿಕೊಳ್ಳುತ್ತಾರೆ. 'ತೇಷಾಂ ಸುಖಂ ಶಾಶ್ವತಂ ನೇತರೇಷಾಂ' — ಅಂಥ ಧೀರರಿಗೆ ಮಾತ್ರ ಶಾಶ್ವತಸುಖವು (ಆತ್ಮಾನಂದವು) ಲಭಿಸುತ್ತದೆ. ಅಲ್ಲದೆ ಇವರು ಯಾವ ಇತಿ ಮಿತಿಗಳಿಗೆ ಒಳಗಾಗದೆ ಸರ್ವತಂತ್ರ ಸ್ವತಂತ್ರರು[29] ಆಗಿರುತ್ತಾರೆ. ಈ ಅಧ್ಯಾತ್ಮಿಕ ದೃಷ್ಟಿ ಇಲ್ಲಿಯ ವಚನಗಳಲ್ಲಿ ಸ್ಫುರಿಸುತ್ತದೆ.

"ನನಗೆ ತೋರಿದಂತೆ ಬರೆದರೆ
ಅದು ರಚನೆ,
ನೀನು ತೋರಿಸಿದಂತೆ ಬರೆದರೆ
ಅದು ವಚನವಯ್ಯ" —ವ. ೮೭ ಪು.೪೭.

ಹಾಗೆಯೆ, 'ಪುರಾಣಿಕರ ಸಿದ್ಧೇಶ್ವರ'–ನ ಗುಣವಾಚಕ 'ಸ್ವತಂತ್ರ ಧೀರ' ನಮ್ಮ ಕಾಲದ ಮಹಾಲಕ್ಷಣವನ್ನು ಸೂಚಿಸುತ್ತದೆ. ಸ್ವತಂತ್ರ ಪ್ರವೃತ್ತಿ, ಧೀರ ಗುಣಗಳು ಆಧುನಿಕ ಬದುಕನ್ನು ಆಳುತ್ತವೆ. ಅವು ಹೊಸಕಾಲದ ಬದುಕಿನ ಸೂತ್ರಗಳಾಗಿವೆ. ರಾಷ್ಟ್ರಗಳಷ್ಟೆ ಸ್ವಾತಂತ್ರ್ಯ ಪಡೆಯುವುದಲ್ಲ, ವ್ಯಕ್ತಿಜೀವನ ವಿಧಾನವೇ ಇಂದು ಸ್ವತಂತ್ರ ಮಾರ್ಗದ್ದು. ಚಂದ್ರಲೋಕದ ಆಚೆಗೂ ಹೋಗುವ ಧೀರರು ನಮ್ಮ ಸಮಕಾಲೀನರು. ಈ ಜೀವನೋದ್ದೇಶಗಳಿಗೆ ಪುರಾಣಿಕರ ಸಿದ್ಧೇಶ್ವರ ಪ್ರೇರಕನೂ ಪೋಷಕನೂ ಆಗಿದ್ದಾನೆ. ಅವನ ಸ್ಫೂರ್ತಿಯ ಫಲವೆ ಇಲ್ಲಿನ ವಚನಗಳು' ಎಂದು ಡಾ॥ ಹಾ. ಮಾ. ನಾಯಕರು ಅಭಿಪ್ರಾಯಪಡುತ್ತಾರೆ. ಒಟ್ಟಿನಲ್ಲಿ ಸಿದ್ಧಯ್ಯ ಪುರಾಣಿಕರ ವಚನಗಳಲ್ಲಿ ಅವರ ಇಂದಿನ ಯುಗದ ವೈಜ್ಞಾನಿಕ ಸ್ವತಂತ್ರ ಮನೋಧರ್ಮವು, ಹಿಂದಿನ ಪರಂಪರಾಗತ ಸಹಜ ಅನುಭಾವ ದೃಷ್ಟಿಯೊಂದಿಗೆ ಸಾಮರಸ್ಯವನ್ನು ಹೊಂದಿ, ನೂತನ ರೀತಿಯಲ್ಲಿ ಅಭಿವ್ಯಕ್ತಿಯನ್ನು ಪಡೆದಿದೆ. ಈ ಸಮನ್ವಯ ದೃಷ್ಟಿಯ ಸೃಷ್ಟಿಯಲ್ಲಿಯೆ ಅವರ ವಚನಗಳ ವೈಶಿಷ್ಟ್ಯವಡಗಿದೆ.[30]

ಪುರಾಣಿಕರಿಗೆ ಪ್ರಿಯವಾದ ಸಪ್ತವಸ್ತುಗಳೆ, ಸಮಕಾಲೀನ ಸಾಮಾಜಿಕ ಪ್ರಜ್ಞೆಯ ಫಲವಾಗಿ, ಆಧುನಿಕ ಭಾವ ಭಾಷೆಯ ಸ್ವರೂಪವನ್ನು ಪಡೆದು ವಚನ

---

29 ನಿನಗೆ ಶರಣು ಹೋದರೆ ಸ್ವಾತಂತ್ರ್ಯವಯ್ಯಾ

30 ವಚನೋದ್ಯಾನದ ವಚನ ನೋಡಿ ;

"ವಿಜ್ಞಾನಿಯ ಬುದ್ಧಿ,
ತತ್ತ್ವಜ್ಞಾನಿಯ ಮನ,
ಕವಿಯ ಹೃದಯವ ಕರುಣಿಸಯ್ಯ!" ವ. ೧೫೭, ಪುಟ ೭೯.

ಗಳಾಗಿ ರೂಪ ತಳೆದಿವೆ. ಅವು ಆಧುನಿಕರ ಹಾಗೂ ಸಿದ್ಧಯ್ಯನವರ ಆತ್ಮಸಾಕ್ಷಾತ್ಕಾರಕ್ಕೆ ಉಚಿತ ಮಂತ್ರಗಳಾಗಿ ಪರಿಣಮಿಸಿವೆ.

"'ಭಾರತ--ಕರ್ನಾಟಕ'
ಇದು ನನ್ನ ಸಪ್ತಾಕ್ಷರೀ ಮಂತ್ರವಯ್ಯ ;
'ಕನ್ನಡ–ಬಸವ'
ಇದು ನನ್ನ ಷಡಕ್ಷರೀ ಮಂತ್ರವಯ್ಯ ;
'ಸತ್ಯ–ಸೌಂದರ್ಯ'
ಇದು ನನ್ನ ಪಂಚಾಕ್ಷರೀ ಮಂತ್ರವಯ್ಯ ;
'ಪ್ರೀತಿ-ನೀತಿ'
ಇದು ನನ್ನ ಚತುರಕ್ಷರೀ ಮಂತ್ರವಯ್ಯ ;
'ಜನತೆ'
ಇದು ನನ್ನ ತ್ರ್ಯಕ್ಷರೀ ಮಂತ್ರವಯ್ಯ ;
'ಕಾವ್ಯ'
ಇದು ನನ್ನ ದ್ವ್ಯಕ್ಷರೀ ಮಂತ್ರವಯ್ಯ ;
'ನೀ'
ಇದು ನನ್ನ ಏಕಾಕ್ಷರೀ ಮಂತ್ರವಯ್ಯ ;
ಸ್ವತಂತ್ರ ಧೀರ ಸಿದ್ಧೇಶ್ವರಾ !" —ವ. ೪೨. ಪು.೨೪

ಈ ಸಪ್ತವಸ್ತುಗಳ ಸ್ವರೂಪ–ದರ್ಶನವೆ ಇಲ್ಲಿನ ವಚನಗಳ ತಿರುಳಾಗಿದೆ.

ಸರ್ವರ ಹೃದಯಗಳಲ್ಲಿ ಹುದುಗಿರುವ ಸಿದ್ಧೇಶ್ವರನ ಸಾಕ್ಷಾತ್ಕಾರಕ್ಕಾಗಿ, ಸಿದ್ಧಯ್ಯನವರ ಹೃದಯವೂ ಹಂಬಲಿಸುತ್ತದೆ. ಆ ದಿವ್ಯಾತ್ಮದ ಅನಂತ ಪ್ರಭೆಯನ್ನು ಕಾಣುವ ಜೀವಾತ್ಮನ ಬಯಕೆಯ ಆತುರಕಾತುರಗಳ ಮಿಡಿತ ಅವರ ವಚನಗಳಲ್ಲಿ ತೋರುತ್ತದೆ.

"ಬೀಜದ ಬಸಿರಿನ ಮೊಳೆಯದ ಬಳ್ಳಿಯ
ಮೂಡದ ಹೂವಿನ ಕಂಪಿನಂತಿಹೆಯೇನಯ್ಯ ?
ನವಿಲಿನ ಮೊಟ್ಟೆಯ ಹೊಟ್ಟೆಯೊಳಡಗಿಹ
ಗರಿಗಳ ಕಣ್ಣಿನ ಬಣ್ಣದಂತಿಹೆಯೇನಯ್ಯ ?
ಅಳಿದ ಚಿತ್ರಕನ ಉದ್ದೇಶಿತ ಚಿತ್ರದ
ಚೆಲುವು ಚಿಮ್ಮಿಸುವ ನಲವಿನಂತಿಹೆಯೇನಯ್ಯ ?
ಬಂಜೆಯ ಸ್ವಪ್ನದಿ ಸುಳಿಯುವಕಂದನ
ಮುದ್ದು ಮೊಗದ ಮಂದಹಾಸದಂತಿಹೆಯೇನಯ್ಯ ?
ಕಾಣದ ಕಾಮಧೇನುವಿನ ಕರೆಯದ ಹಾಲಿನ

ಕಡೆಯುದ ಬೆಣ್ಣೆಯು ಸವಿಯುಂತಿಹೆಯೇನಯ್ಯ ?
ಸ್ವತಂತ್ರಧೀರ ಸಿದ್ಧೇಶ್ವರಾ,
ಈಡೇರದ ಆಸೆಗಳ ಚಿತಾಭಸ್ಮದಿ ಬೆಳೆದ
ಹೊಸ ಆಸೆಯು ಕಣ್ಣಿನ ಕಾಂತಿಯುಂತಿಹೆಯೇನಯ್ಯ ?"
— ವ.೪. ಪು.೨.

ಅನುಭವ ಅನುಭಾವವಾಗಿ ಹೃದಯಗೀತವಾಗುತ್ತದೆ. ಅದರ ಆತ್ಮಕಥೆ ಅಭಿವ್ಯಕ್ತಿಗೆ ಹಾತೊರೆಯುತ್ತದೆ. ಆಗ ಭಾವ ಭಾಷೆಗಳಿಗೆ ಉಜ್ವಲತೆಯ ಮೆರಗು ಲಭಿಸುತ್ತದೆ.

ಮಾನವ ತನ್ನ ತಾನರಿಯದೆ, ತನ್ನಬಿಟ್ಟು ಅನ್ಯವಲ್ಲದ ಆ ಸಿದ್ಧೇಶ್ವರನನ್ನು ಅರಸಲು ಅರಿಯಲು ತವಕಿಸುವುದು ವ್ಯರ್ಥಸಾಹಸ. ಅದಕ್ಕಾಗಿ ಮೊದಲು ತನ್ನ ತಾನರಿದು, ತನ್ನ ಮೂಲ ಸ್ವರೂಪನೇ ಆದ ಆ ಸಿದ್ಧೇಶರನನ್ನು ಅರಿಯಲು ಕಲಿಯಬೇಕು. ಸಿದ್ಧಯ್ಯನವರ ಈ ಅನುಭವ – 'ನನ್ನನರಿತಿದ್ದರೆ ನಿನ್ನನರಿಯದಿರುತಿದ್ದೆನೆ ?"(೪೯) "ನನ್ನನರಿದು, ನನ್ನರಿವಿನಿಂದ ನಿನ್ನನರಿದು, ನಿನ್ನಿಂದ ಎಲ್ಲವನರಿದು, ಅರಿವಾಗಿ ಅರಿವ ಬೆರೆದು ಬಯಲಾಗುವುದನ್ನು ಕುರುಣಿಸು" (೪೮)' "ಯಾರು ನನ್ನನ್ನು ಅರಿಯದಿದ್ದರೂ ನಾನು ನನ್ನನ್ನು ಅರಿಯುವಂತೆ ಅನುಗ್ರಹಿಸಯ್ಯ" (೩.೨) ಮೊದಲಾದ ವಚನಗಳಲ್ಲಿ ಪ್ರಕಟಗೊಂಡಿದೆ.

ವ್ಯಕ್ತಿ ತನ್ನನ್ನು ತಾನರಿಯಲು ತೊಡಗಿದಾಗ, ಅವನಲ್ಲಿ, ತಾನು ಇಲ್ಲಿಯವರೆಗೆ ಸಾಗಿಸಿದ ಜೀವನದ ವಿಮರ್ಶೆ ನಡೆಯುತ್ತದೆ. ವ್ಯರ್ಥಕಾಲಹರಣ ಮಾಡಿದ ಬಗೆಗೆ ಪಶ್ಚಾತ್ತಾಪ ಮೂಡುತ್ತದೆ. ಅದರ ಹಿಂದಿನ ಕುಂದುಕೊರತೆಗಳ ಅರಿವುಂಟಾಗುತ್ತದೆ.

"ನಾನು ಕಳೆದ ಐವತ್ತು ವತ್ಸರಗಳಲ್ಲಿ
ಹಸಿವೆ, ತೃಷೆ, ವಿಷಯ, ಆಸೆ
ಆಮಿಷಗಳಿಗಾಗಿ ವರುಷ ವರುಷ,
ವಿರಾಮ, ವಿನೋದ, ಆಮೋದ,
ವಿಲಾಸ, ವಿಹಾರಗಳಿಗಾಗಿ, ವರುಷ ವರುಷ,
ಮೋಜು, ಮೆರವಣಿಗೆ, ಹರಟೆ,
ಆತ್ಮಸ್ತುತಿ, ಪರನಿಂದೆಗಳಿಗಾಗಿ ಮಾಸ ಮಾಸ,
ಸುವಿಚಾರ, ಸದಾಚಾರ, ಸತ್ಕೃತಿಗಳಿಗಾಗಿ ದಿವಸ, ದಿವಸ,
ನಿನಗಾಗಿ ಕಳೆದ ಕಾಲ ಮಾತ್ರ ನಿಮಿಷ, ನಿಮಿಷವಯ್ಯ-
ಸ್ವತಂತ್ರ ಧೀರ ಸಿದ್ಧೇಶ್ವರಾ !" ವ.೧೪೭, ಪು. ೭೪.

ಆಗ ಅವನು ತನ್ನ ಸರ್ವವನ್ನೂ ಆ ಮಹಾಚೇತನಕ್ಕೆ ಅರ್ಪಿಸುತ್ತಾನೆ. ತನ್ನ ಕೀಳರಿಮೆಯನ್ನು ಕಳೆದುಕೊಂಡು ಬೆಳಗುವುದನ್ನು ಕಂಡುಕೊಳ್ಳುತ್ತಾನೆ.

"ಕಿರಿಯನದಿ ಶರಾವತಿ ಕಾಳಿಗಳು ; ಆದರೆ,
ಅವು ನೀಡಿರುವ ನೀಡಲಿರುವ ವಿದ್ಯುಚ್ಛಕ್ತಿ, ಕಿರಿದೇನಯ್ಯಾ ?
ಕಿರಿಯ ವಿಮಾನ 'ನ್ಯಾಟ್' ; ಆದರೆ,
ಅದರ ಯುದ್ಧೋಪಯೋಗಿತ್ವ ಕಿರಿದೇನಯ್ಯಾ ?
ಕಿರಿಯ ಆಳು ಲಾಲಬಹಾದ್ದೂರ-ಜಿ ; ಆದರೆ,
ಅದರ ಶೀಲ ಶಕ್ತಿ ಕಿರಿದೇನಯ್ಯಾ ?
ಕಿರಿಯ ಉಪನಿಷತ್ತು ಈಶೋಪನಿಷತ್ತು ; ಆದರೆ,
ಅದರ ಅರ್ಥಪ್ರಪಂಚ ಕಿರಿದೇನಯ್ಯಾ ?
ಸ್ವತಂತ್ರ ಧೀರ ಸಿದ್ಧೇಶ್ವರಾ,
ಕಿರಿಯರಲ್ಲಿ ಕಿರಿಯನಾನು-
ಕಿರಿತನವೇ ನಾನು ! ಆದರೆ,
ನಿನ್ನತನಕ್ಕೆ ನೆಲೆಯಾದ
ನನ್ನತನ ಕಿರಿದೇನಯ್ಯಾ ?" —ವ. ೧೦೫. ಪು. ೫೪

–ಹೀಗೆ ಎಚ್ಚರಗೊಂಡ ಜೀವಾತ್ಮ, ಸ್ವತಂತ್ರನಾಗಿ ಸ್ವಯಂಪ್ರಭೆಯ ಬೆಳಗಿನಲ್ಲಿ ಸ್ವಚ್ಛಂದವಾಗಿ ವಿಹಾರಗೈದು ಸ್ವಾನುಭಾವಿಯಾಗಲು ಪರಿತಪಿಸುವ ಸುಂದರ ಚಿತ್ರವನ್ನು ಕೆಳಗಿನ ವಚನದಲ್ಲಿ ನೋಡಬಹುದು.

"ಪಂಜರದಲ್ಲಿರುವ ಈ ಪಂಚವರ್ಣದ ಪಕ್ಷಿಗೆ
ಆಗಾಗ ಹಾರಾಡುವ ಸ್ವಾತಂತ್ರ್ಯ ;
ಆಮೇಲೆ ಪಂಜರದಲ್ಲಿ ಪಾರತಂತ್ರ್ಯ !
ಇದೇ ಅದರ ಕೊರಗಿಗೆ ಕಾರಣ,
ಇದೇ ಅದರ ಬದುಕಿನ ಹೂರಣ !
ಪಂಜರದಲ್ಲಿಯೇ ಉಳಿದು
ಪೆಪ್ಪಲೋಘನ ಪಕ್ಷಿಯಾಗುವಂತಿಲ್ಲ,
ವನದ ಗಿಳಿಯಾಗಿ ಹಾರಿ ಸ್ವಚ್ಛಂದತೆಗೆ ಸಾಕ್ಷಿಯಾಗುವಂತಿಲ್ಲ !
ಈ ಅತಂತ್ರತೆ ಸ್ವತಂತ್ರತೆಗಳ ಕಲಸುಮೇಲೋಗರವನ್ನೇ
ಉಂಡು ಬದುಕೆನ್ನುವಿಯೇನಯ್ಯಾ—
ಸ್ವತಂತ್ರಧೀರ ಸಿದ್ಧೇಶ್ವರಾ ? ವ. ೨೭೭, ಪು. ೧೩೯.

ಶರಣಧರ್ಮ ಪರಂಪರೆಯ ಪ್ರಭಾವದಿಂದ ಪ್ರೇರಣೆಪಡೆದು, ಆತ್ಮಾನುಭೂತಿಯ ದಿವ್ಯಾಪೇಕ್ಷೆಯಿಂದ ಹಂಬಲಿಸುವ ಚೇತನವೊಂದರ ಆತ್ಮಕಥೆ ಪುರಾಣಿಕರ ವಚನಗಳಲ್ಲಿ ಚೇತೋಹಾರಿಯಾಗಿ ಮೂಡಿಬಂದಿದೆ. ಇಲ್ಲಿನ ಮೂಲವಸ್ತು ಇಂದು ನಿನ್ನೆಗೆ ಮಾತ್ರ ಸೀಮಿತವಾದುದಲ್ಲ. ಅದು ಸದಾಕಾಲಕ್ಕೂ ಶಾಶ್ವತವಾಗಿರುವ

ಚಿರಂತನ ಸ್ವರೂಪವನ್ನು ಪಡೆದಿರುವಂಥದು. ಅದಕ್ಕೆ ದೇಶಕಾಲ ಜನಾಂಗಗಳ ಯಾವ ಕಟ್ಟುನಿಟ್ಟೂ ಅನ್ವಯಿಸುವುದಿಲ್ಲ. ಆದರೆ ಅದರ ನಿರ್ವಹಣೆಯ ರೀತಿಯಲ್ಲಿ ಮಾತ್ರ ಹೊಸತನ ತೋರಬಹುದು. ಹಾಗೆಯೆ, ಸಿದ್ಧಯ್ಯನವರ ವಚನಗಳಲ್ಲಿ, ಅವರು ಜೀವಿಸಿರುವ ಜನಾಂಗ, ದೇಶ, ಕಾಲ, ಪರಿಸರ, ಪ್ರಭಾವ ಮೊದಲಾದವುಗಳ ಪರಿಣಾಮವನ್ನು ಗುರುತಿಸಬಹುದು. ಶಾಶ್ವತ ಸತ್ಯದ ಸಂಶೋಧನೆಯೊಂದಿಗೆ ಸಮಕಾಲೀನ ಸಮಾಜದ ಏರುಪೇರುಗಳ ಸುಂದರ ಚಿತ್ರಣವನ್ನು ಅವುಗಳಲ್ಲಿ ಕಾಣಬಹುದು.

ಸಿದ್ಧಯ್ಯನವರ ವಚನಗಳಲ್ಲಿ ಆತ್ಮಸಾಕ್ಷಾತ್ಕಾರದ ಆವಿಷ್ಕರಣದೊಂದಿಗೆ ಸಾಮಾಜಿಕ ವಿವೇಚನೆ ಮತ್ತು ಲೋಕವಿಮರ್ಶೆಗಳು ಹಾಸುಹೊಕ್ಕಾಗಿ ಬಂದಿವೆ. ಅವ್ಯವಸ್ಥೆಯಿಂದ ಕೂಡಿದ ಇಂದಿನ ಸಮಾಜದಲ್ಲಿ ಮನೆಮಾಡಿಕೊಂಡಿರುವ ದುರವಸ್ಥೆಗೆ ಅವರ ಮನಸ್ಸು ಅಸಮಾಧಾನಗೊಳ್ಳುತ್ತದೆ. ನಾಗರಿಕತೆಯ ಸೋಗಿನಲ್ಲಿ ಇಂದಿನ ಸಮಾಜ, ಮಾನವ ಸಹಜ ಸದ್ಭಾವನೆಗಳನ್ನು ಕಳೆದುಕೊಂಡು ಹೀನ ಬದುಕನ್ನು ಬಾಳುತ್ತಿರುವುದು ಅವರಿಗೆ ಅಸಹ್ಯವಾಗಿ ತೋರುತ್ತದೆ.

ವಿದ್ಯೆ ಬಂತು, ವಿನಯ ಹೋಯ್ತು ;
ಬುದ್ಧಿ ಬಂತು, ಶ್ರದ್ಧೆ ಹೋಯ್ತು ;
ಶ್ರದ್ಧೆ ಬಂತು, ವಿವೇಚನೆ ಹೋಯ್ತು ;
ಸಂಮೃದ್ಧಿ ಬಂತು, ಸಂಸ್ಕೃತಿ ಹೋಯ್ತು ;
ವಿಜ್ಞಾನ ಬಂತು, ಸಮಾಧಾನ ಹೋಯ್ತು ;
ಶರೀರ ಸ್ವಾಸ್ಥ್ಯ ಬಂತು, ಚಿತ್ತ ಸ್ವಾಸ್ಥ್ಯ ಹೋಯ್ತು ;
ದೀರ್ಘಾಯುಷ್ಯ ಬಂತು, ಜೀವನ ಸ್ವಾರಸ್ಯ ಹೋಯ್ತು ;
ಬೋಧನೆ ಬಂತು, ಸಾಧನೆ ಹೋಯ್ತು ;
ಮಾತು ಬಂತು, ಕೃತಿ ಹೋಯ್ತು ;
ಜಾತಿ ಬಂತು, ಪ್ರೀತಿ ಹೋಯ್ತು ;
ಸ್ವಾತಂತ್ರ್ಯ ಬಂತು, ಸೌಜನ್ಯ ಹೋಯ್ತು ;
ಸಿದ್ಧಯ್ಯ ಪುರಾಣಿಕ ಬಂದ
ಸ್ವತಂತ್ರ ಧೀರ ಸಿದ್ಧೇಶ್ವರ ಹೋದ ! —ವ.೧೦೦, ಪು.೫೭.

ಇಂದು ವಿಶ್ವದ ಹಲವು ರಾಷ್ಟ್ರಗಳು ಅಪನಂಬಿಗೆಯ ಫಲವಾಗಿ ಹಾಗೂ ಸ್ವಾರ್ಥ ಸಾಧನೆಯ ಏಕೈಕ ಗುರಿಯಿಂದ ತೀರ ಅವನತಿಗಿಳಿದು, ಕೆಲವೊಂದು ಹಾಸ್ಯಾಸ್ಪದ ಹವ್ಯಾಸಗಳನ್ನು ಬೆಳೆಸಿಕೊಂಡಿವೆ–ಎನ್ನುತ್ತಾರೆ ಪುರಾಣಿಕರು :

ಬರ್ಲಿನ್– ಗೋಡೆಯನ್ನು ಕಟ್ಟಿ
ನಗರವನ್ನು ಒಡೆದರಾಗಲಿ

ಜರ್ಮನ್-ಜನಾಂಗವನ್ನು ಒಡೆದರೇನಯ್ಯಾ ?
ಚೀಣಾ-ಗೋಡೆಯನ್ನು ಕಟ್ಟಿ
ಇನ್ನೇನ ತಡೆದರೂ
ವಿಚಾರ ವಾಹಿನಿಯನ್ನು ತಡೆಯಲಾದಿತೇನಯ್ಯಾ ?
ಸಾಗರಗಳ ದಿಗ್ಬಂಧನಗೈದು
ಸರಕು ಸಾಗಾಟಗಳ ತಡೆಯುಬಹುದಾಗಲಿ
ಆಶೋತ್ತರಗಳ ಓಡಾಟವನ್ನು ತಡೆಯುಬಹುದೇನಯ್ಯಾ ?
ಹರಡುವ ಗಂಧಕ್ಕೆ ಗಡಿಗಳನ್ನು ಹಾಕುವ ಹವ್ಯಾಸ,
ಹಬ್ಬುವ ಬೆಳಕಿಗೆ ಬಂಧನಗಳನ್ನು ಬಿಗಿವ ಹವ್ಯಾಸ,
ಚೆಲ್ಲವರಿದ ಒಲವಿಗೆ ಎಲ್ಲೆಗಳನ್ನು ರಚಿಸುವ ಹವ್ಯಾಸ,
ನಿನ್ನ ಕರುಣೆಗೆ ಗೋಡೆಗಳನ್ನು ಕಟ್ಟುವ ಹವ್ಯಾಸ,
ಹಾಸ್ಯಾಸ್ಪದ ಹವ್ಯಾಸಗಳಲ್ಲವೇನಯ್ಯಾ—
ಸ್ವತಂತ್ರ ಧೀರ ಸಿದ್ಧೇಶ್ವರಾ ? —ವ.೧೯೭, ಪು.೯೮.

ಹಾಗೆಯೆ, ಪ್ರಜೆಗಳ ಕ್ಷೇಮಾಭಿವೃದ್ಧಿಗೆ ಯೋಜನೆಗಳನ್ನು ಕೈಕೊಳ್ಳಬೇಕಾದ ಸರಕಾರ, ಜನರಿಂದ ಅಧಿಕಾರ ಗದ್ದುಗೆಯೇರಿ, ದರ್ಪದಿಂದ ಮೆರೆಯುತ್ತ, ಸ್ವಹಿತ ಸಾಧನೆಗೆ ತೊಡಗಿ, ಜನತೆಯು ಮೇಲೆ ಎಸಗುತ್ತಿರುವ ದೌರ್ಜನ್ಯಗಳ ಸ್ವರೂಪವನ್ನು ಸಿದ್ಧಯ್ಯನವರ :– "ಮೂಕಜನತೆಯು ಆಗುಹೋಗುಗಳನ್ನು ಸುಲಿಗೆಗಾರರ ಕೈಗೆ ಕೊಡುವುದೆ ಅಯ್ಯ ?" (೩೨೫) "ಸರ್ಕಾರ ದರೋಡೆಕಾರನಾದಾಗ ನೌಕರರು ನರ ಭಕ್ಷಕರಾಗದಿರುವರೇನಯ್ಯ ? ಸಚಿವರೇ ಸುಲಿಗೆಗಾರರಾದಾಗ ಆಪ್ತಸಹಾಯಕರು ಡಕಾಯತರಾಗರೇನಯ್ಯ ?" (೩೩೨) "ಊರಿಗೊಂದು ವಾಗ್ದಾನಮಾಡಿ ನೂರ ಕ್ಕೊಂದನ್ನೂ ನೆರವೇರಿಸದಿದ್ದರೆ ಡಂಗುರ ಹೊಡೆದವನಿಗಿಂತ ಕಡೆಯಲ್ಲವೆ ಅವನು ?" (೩೫೯) "ಈ ಕದ್ದುಣ್ಣುವ ಕದೀಮರ ಕಳ್ಳಭಕ್ತಿಯ ಕಂಡು ಕದ್ದು ನಗುತ್ತಿರುವಿ ಯೇನಯ್ಯಾ ? ನಕ್ಕರೆ ಸಾಲದು, ಇಕ್ಕಯ್ಯಾ ಅವರನ್ನು ಇಕ್ಕುಳದೊಳಗೆ" (೩೬೧) "ತಮ್ಮ ಅಧಿಕಾರಕ್ಕೆ ವಯೋಮಿತಿಯೇ ಇರಕೂಡದೆನ್ನುವವರು ಬಡ ಶಿಕ್ಷಕರ ವಯೋ ಮಿತಿಯನ್ನೇಕೆ ಇಳಿಸುವರಯ್ಯಾ ?"–ಈ ಮೊದಲಾದ ವಚನಗಳಲ್ಲಿ ಕಾಣಬಹುದು. ಅಲ್ಲಿ ಸಮಾಜದಲ್ಲಿ ಇಂದು ತೋರುತ್ತಿರುವ ಅಸಮಾನತೆ, ನಡೆಯುತ್ತಿರುವ ಅನ್ಯಾಯು ಗಳಿಗೆ ಪ್ರತಿಭಟಿಸುವ ಪುರಾಣಿಕರು ಸರ್ವೋದ್ಧಾರ ಸಮಾಜ ನಿರ್ಮಾಣದ ವಿಚಾರ ಕ್ರಾಂತಿಗೆ ಆಹ್ವಾನವೀಯುತ್ತಾರೆ.

ಸ್ವತಂತ್ರ ಧೀರ ಸಿದ್ಧೇಶ್ವರಾ,
ಹೋಮರನಂಥ ವಿಶ್ವಕವಿಗಳು ಭಿಕ್ಷೆಬೇಡಬೇಕು,
ಹೆಂಡ ಮಾರುವವರು ಲಕ್ಷಾಧೀಶರಾಗಬೇಕು–
ಇದೇ ನಿನ್ನ ಸಾಮಾಜಿಕ ನ್ಯಾಯುವೇನಯ್ಯಾ ?

ದುಡಿದವರಿಗೆ ದುಗ್ಗಾಣಿ, ದುಡಿಸಿಕೊಳ್ವರಿಗೆ ಅಷ್ಟೈಶ್ವರ್ಯ,
ಇದುವೆ ನಿನ್ನ ಆರ್ಥಿಕ ವ್ಯವಸ್ಥೆಯೇನಯ್ಯಾ ?
ಮಾನವೋದ್ಧಾರಕರಿಗೆ ವಿಷದ ಬಟ್ಟಲು, ಗುಂಡು–
ಮಾನವೋತ್ಪೀಡಕರಿಗೆ ಸುಖಸಂಪದ–
ಇದೇ ನಿನ್ನ ನೀತಿ ನಿಯಮವೇನಯ್ಯಾ ?
ಇರಲಾರದು, ಇರಬಾರದು ?
ಇದ್ದರೆ ಇದರ ತಪ್ಪು ಯಾರದು ?
ನಿನ್ನ ಹೆಸರಿನಲ್ಲಿ ಇಷ್ಟು ದಿನ ಇವು ಬದುಕಿದುದೇ ತಪ್ಪು,
ನಿನ್ನ ಹೆಸರಿಗೆ ಇವುಗಳಿಂದ ಕಪ್ಪು,
ಇನ್ನಾದರೂ ಒಪ್ಪು !
ನೀನು ಒಪ್ಪು, ಬಿಡು, ನಾವು ಮಾತ್ರ
'ಶಿವಮಯ ಶಕ್ತಿ, ಶಕ್ತಿಮಯ ಶಿವ'—ದ ಗುರಿಯ,
ಸರ್ವರಿಗೆ ಸಮಾನಾವಕಾಶದ ಗುರಿಯ,
ಸರ್ವೋದ್ಧಾರದ, ಸರ್ವಜನಸುಖದ ಗುರಿಯ
ಮುಟ್ಟಿಯೇ ತೀರುವೆವು,
ನಾವು ನಮ್ಮನು ಮೀರುವೆವು !" —ವ.೩೨೭, ಪು.೧೬೭.

ಒಟ್ಟಿನಲ್ಲಿ– "ಪುರಾಣಿಕರ ವಚನಗಳಲ್ಲಿ ಬಹುಧರ್ಮಗಳಿಲ್ಲ, ಒಂದೇ ಧರ್ಮ, ಅದು ಜೀವನಧರ್ಮ. ಬಹುಮತಗಳಿಲ್ಲ, ಒಂದೇ ಮತ, ಅದು ಮಾನವ ಮತ. ಬಹು ಪಥಗಳಿಲ್ಲ, ಒಂದೇ ಪಥ, ಅದು ಶಿವಪಥ".* "...... ಒಂದು ಮತ, ಶಾಸ್ತ್ರ, ತತ್ವಗಳ ಪಡಿಯಚ್ಚಿನ ಮೇಲೆ ಈ ವಚನಗಳ ರಚನೆಯಾಗಿಲ್ಲ. ಲೌಕಿಕ ಜೀವನಾನುಭವದ, ವಾಸ್ತವಿಕ ಜಗತ್ತಿನ ಆಗುಹೋಗುಗಳ ಸುತ್ತ ಹೆಣೆದುಕೊಂಡು ಬಂದುದರಿಂದ ಜನಸಾಮಾನ್ಯರಿಗೂ ಅರ್ಥವಾಗುವಂತಿದೆ. ಭಾವ ಮಾಧುರ್ಯದ ಸರಳರಗಳೆಯ ಸ್ವಚ್ಛಂದ ಇಲ್ಲಿಯ ವಚನಗಳಲ್ಲಿ ಅಡಕವಾಗಿದೆ. ವೈಜ್ಞಾನಿಕ ದೃಷ್ಟಿ, ನವ ನಾಗರಿಕತೆಯ ದೃಶ್ಯಗಳು ಚೆಲ್ಲವರಿದಿವೆ. ಸರ್ವಮತ, ಪಂಥ, ಭಾಷಾಜನರ ನೇರ ಸಂಪರ್ಕದ ಪ್ರತಿಫಲವಾಗಿ ಜನಮನವನ್ನು ಹೊಕ್ಕು ಅರಿತ ಶ್ರೀ ಪುರಾಣಿಕರ ಅನುಭವದ ರಸಘಟ್ಟಿ ಪ್ರತಿಭೆಯೊಂದಿಗೆ ಹೊರಬಂದು ಈ ವಚನಗಳಲ್ಲಿ ಧ್ವನ್ಯಾರ್ಥ ಪಡೆದು ಧನ್ಯವಾಗಿದೆ. ಕವಿ ಹೃದಯದ ಶಬ್ದಾರ್ಥಭಾವಗಳ ಮಧುರಮಿಲನ ಇಲ್ಲಿ ಲಾಸ್ಯವಾಡಿದೆ.§"

---

* 'ವಚನೋದ್ಯಾನ' ಮುನ್ನುಡಿ, ಪುಟ xvii–ಡಾ. ಹಾ. ಮಾ. ನಾಯಕ.
§ ಅದೇ, ಹಿನ್ನುಡಿ –ಡಾ. ಎಂ. ಎಸ್. ಲಠ್ಠೆ.

ವಚನ ಸಾಹಿತ್ಯ ಪರಂಪರೆಯ ಸತ್ವವನ್ನು ಹೀರಿ, ಆಧುನಿಕ ಜೀವನಾನುಭವಗಳ ಅಡಿಪಾಯದ ಮೇಲೆ ರೂಪಗೊಂಡ 'ಮಾನವತಾವಾದ' ದೊಂದಿಗೆ ಸಾಮರಸ್ಯವನ್ನು ಸಾಧಿಸಿ, ನೂತನ ರೀತಿಯಲ್ಲಿ ಹೃದಯಂಗಮವಾಗಿ ಅಭಿವ್ಯಕ್ತಿಯನ್ನು ಪಡೆದ ಪುರಾಣಿಕರ ವಚನಗಳು ವೈಶಿಷ್ಟ್ಯವನ್ನು ಪಡೆದಿವೆ.

# 'ವಚನೋದ್ಯಾನ'ದ ವೈಶಿಷ್ಟ್ಯ

**ಚೆನ್ನವೀರ ಕಣವಿ**

ಶ್ರೀ ಸಿದ್ಧಯ್ಯ ಪುರಾಣಿಕರು ಈಗಾಗಲೆ ತಮ್ಮ ನಾಲ್ಕೈದು ಕವನ ಸಂಗ್ರಹಗಳ ಮೂಲಕ ಭಾವಗೀತೆಯ ಪ್ರಕಾರದಲ್ಲಿ ಸಾಕಷ್ಟು ಕೃಷಿಗೈದವರು. ಸೃಷ್ಟಿಯಲ್ಲಿಯ 'ಆನಂದ ನಿಕ್ಷೇಪ'ವನ್ನು ಗುರುತಿಸಿ, ಅದರ ಸವಿ ಹಾಗೂ ಛವಿಯ ಸಂದೇಶವನ್ನು ಕಾವ್ಯದ ಮೂಲಕ ಸಾರುತ್ತ ಬಂದವರು. ಮಾನವ ಸಹಜವಾದ ಸ್ನೇಹ, ಕರುಣೆ, ಸಹಕಾರ, ಸಹನೆ ಮೊದಲಾದ ಗುಣಗಳನ್ನು ಮೈಗೂಡಿಸಿಕೊಂಡ ಮಾನವತೆಯಲ್ಲಿ ಅವರಿಗೆ ಹೆಚ್ಚಿನ ಆಸ್ಥೆ ಹಾಗೂ ನಂಬಿಕೆ. ಕಲ್ಪನೆಯ ನಾವೀನ್ಯ, ಮಾತಿನ ನಿರರ್ಗಳತೆ, ಸದ್‌ಭಾವದ ಆವೇಗ ಅವರ ಕಾವ್ಯದಲ್ಲಿ ಒಡೆದು ಕಾಣುವ ಅಂಶಗಳಾಗಿವೆ. 'ಭಾವ ಬುದ್ಧಿಯು ಹಸೆಗೆ ನಿಲ್ಲುವ' ಹಾಗಿರುವ ಯಶಸ್ವಿ ಕವನಗಳನ್ನೂ ನೀಡಿದ್ದಾರೆ. ಮೊದಮೊದಲು ಅಂಶತಃ ಕಾಣಿಸುತ್ತಿದ್ದ ಸಾಮಾಜಿಕ ಪ್ರಜ್ಞೆ ಬರಬರುತ್ತ ಅವರ ಅನಿರ್ಬಂಧವಾದ ಅಭಿವ್ಯಕ್ತಿಯಲ್ಲಿ ಪ್ರಮುಖ ಸ್ಥಾನವನ್ನು ಪಡೆಯುತ್ತ ಬಂದಿರುವುದನ್ನೂ ಕಾಣಬಹುದು. ಅವರ ಕಾವ್ಯ ರಚನೆಯಲ್ಲಿ ಬೇಂದ್ರೆಯವರು ಈ ಮೊದಲೇ ಗುರುತಿಸಿದ 'ಭಾವನೆಯ ವಾಯುವೇಗ, ಬುದ್ಧಿಯ ಅಗ್ನಿಗುಣ ಹಾಗೂ ತತ್ತ್ವಗಳ ತೂಕ'—ಇವುಗಳಿಗೆ ತಕ್ಕ ಅಭಿವ್ಯಕ್ತಿ ಮಾಧ್ಯಮವನ್ನು ಸಿದ್ಧಯ್ಯನವರು ವಚನ ರೂಪದಲ್ಲಿ ಕಂಡುಕೊಂಡದ್ದು ಕನ್ನಡದ ಸುದೈವವೆಂದು ಹೇಳಬಹುದು. ಕಾವ್ಯಪ್ರಯೋಗದಲ್ಲಿ ಅವರು ಇದುವರೆಗೆ ಅನುಭವಿಸಿದ ಅರಕೆಗಳೆಲ್ಲವನ್ನೂ 'ವಚನೋದ್ಯಾನ'ದ ೫೨೫ ವಚನಗಳಲ್ಲಿ ತುಂಬಿಕೊಡಲು ಪ್ರಯತ್ನಿಸಿ ಯಶಸ್ವಿಯಾಗಿರುವುದಲ್ಲದೆ ವಚನ ಪ್ರಕಾರದ ಹೊಸ ಸಾಧ್ಯತೆಗಳನ್ನು ತೋರಿಸಿಕೊಡುವಲ್ಲಿಯೂ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ.

ಶಿವಶರಣರ ವಚನ ಸಾಹಿತ್ಯ ಆನಂತರದ ಕವಿಗಳ ಮೇಲೆ ತನ್ನ ಪ್ರಭಾವವನ್ನು ಒಂದಿಲ್ಲ ಒಂದು ರೀತಿಯಲ್ಲಿ ಬೀರುತ್ತಲೇ ಬಂದಿರುವುದು ನಿಜವಾದರೂ[1] ಅದು

---

1. "ಒಂದು ಎತ್ತರವಾದ ಗೋಪುರದ ಗಂಟೆಯ ದನಿ, ಬಹು ದೂರದವರೆಗೂ ಅನುರಣಿತವಾಗುವಂತೆ, ಹನ್ನೆರಡನೆಯ ಶತಮಾನದ ವಿಚಾರಕ್ರಾಂತಿಯ ಶಿಖರದಿಂದ ಹೊಮ್ಮಿದ ಈ ದನಿ, ಶತಶತಮಾನಗಳ ಮೂಲಕ ಹಾದು ಬಂದು ಇನ್ನೂ ಅನುರಣಿತವಾಗುತ್ತಲೇ ಇದೆ."
—'ಅನುರಣನ' 1978, ಡಾ. ಜಿ. ಎಸ್. ಶಿವರುದ್ರಪ್ಪ, ಮುನ್ನುಡಿಯಲ್ಲಿ.

ಮೂಲಪ್ರಕಾರದಲ್ಲಿಯೇ ಹೊಸಗನ್ನಡದಲ್ಲಿ ಒಂದು ಅಭಿವ್ಯಕ್ತಿಯ ಕ್ರಮವಾಗಿ ಮತ್ತೆ ರೂಪುಗೊಂಡಿರುವುದು ಗಮನಾರ್ಹವಾಗಿದೆ. ಸಮಕಾಲೀನ ಸಂವೇದನ ಗಳಿಂದ ತೂಗಿಸಿಕೊಂಡು, ಹೊಸ ಕಾಲದ ಭಾವಸೂಕ್ಷ್ಮಗಳನ್ನು ಒಳಗೊಂಡು, ಆಯಾ ಲೇಖಕರ ಕೈಗುಣ, ಮೈಗುಣಕ್ಕೆ ತಕ್ಕಂತೆ ವಚನ ರಚನೆಯ ವಿಧಾನ, ಹೊಸ ಹೊಸ ವಿನ್ಯಾಸವನ್ನು ಪಡೆಯುತ್ತಿರುವುದನ್ನು ಇಂದು ಕಾಣುತ್ತಿದ್ದೇವೆ. ಹೀಗೆ ವಚನ ರೂಪವನ್ನು ತಮ್ಮೆಲ್ಲ ಶಕ್ತಿ ಸಾಮರ್ಥ್ಯಗಳಿಂದ ಇಂದಿನ ನಮ್ಮ ಎಲ್ಲ ಬಗೆಯ ಅನುಭವಗಳಿಗೆ ಒಡ್ಡಿ, ಒಡಮುರಿದೇಳುವಂತೆ ಮಾಡಿದ ನಾಲ್ಕೈದು ಜನ ಪ್ರಮುಖ ರಲ್ಲಿ ಸಿದ್ಧಯ್ಯನವರ ಸಾಧನೆ ಎದ್ದುಕಾಣುವಂತಹದು. ಬದುಕಿನ ನೇರ ಸಂಪರ್ಕ ದೊಂದಿಗೆ ಪರಿಸರಕ್ಕೆ ತೋರುವ ಪ್ರತಿಕ್ರಿಯೆಯಲ್ಲಿ, ಹೃದಯದ ಆಳದಿಂದ ಹೊರ ಹೊಮ್ಮುವ ನಿವೇದನದಲ್ಲಿ, ವಿಜ್ಞಾನವನ್ನೂ, ತತ್ವಜ್ಞಾನವನ್ನೂ ಕವಿಹೃದಯ ದೊಂದಿಗೆ ಕಸಿಗೊಳಿಸಿ, ಅನುಭಾವದ ಹೊಳಹು ಹಾಕುವಲ್ಲಿ, ಯಾವ ಗಡಿ— ನುಡಿಯೂ ಅಡ್ಡಿ ತಾರದ ಮುಕ್ತ ಮಾನಸದಲ್ಲಿ, ಲೋಕದ ಆಗುಹೋಗುಗಳ ವಿಮರ್ಶೆಯಲ್ಲಿ, ಆತ್ಮ ನಿರೀಕ್ಷಣೆಯಲ್ಲಿ, ತಾವು ನಂಬಿ ತಮ್ಮದನ್ನಾಗಿಸಿಕೊಂಡುದರ ಗಟ್ಟಿತನದಲ್ಲಿ ಮತ್ತು ಅದರ ಚಿಂತನ ಲಹರಿಯಲ್ಲಿ, ಹಾಗೂ ನುಡಿಯ ಬೆಡಗನ್ನು ಅರ್ಥವತ್ತಾಗಿ ಮೂಡಿಸುವಲ್ಲಿ ಸಿದ್ಧಯ್ಯನವರು ತಮ್ಮ ವೈಶಿಷ್ಟ್ಯವನ್ನು ಮೆರೆದಿ ದ್ದಾರೆ. ಶರಣರ ವಚನಗಳ ಸಾರಸತ್ವವನ್ನು ತಣಿಹೀರಿ ಹೊಸ ಕಾಲದ ಬಣ್ಣ ಬೆಡಗುಗಳಿಂದ 'ವಚನೋದ್ಯಾನ'ದ ಹೂವುಗಳಿಗೆ ಹೊಸ ಕಳೆ ಬಂದಿದೆ. ಕೆಲವೇ ಉದಾಹರಣೆಗಳಿಂದ ಅದನ್ನು ಮನಗಾಣಿಸಿ ಕೊಡುವುದು ಈ ಚಿಕ್ಕ ಲೇಖನದ ಉದ್ದೇಶವಾಗಿದೆ.

ಅನೇಕ ವಾದಗಳು ತಾಂಡವಾಡುತ್ತಿರುವ, ಹಲವಾರು ಬೋಧೆಗಳು ಬೀದಿ ಗಿಳಿದಿರುವ ಕಾಲ ಇದು. ಇವುಗಳ ಮಧ್ಯದಲ್ಲಿ ತನ್ನ ಹಾದಿಯನ್ನು ಕಂಡುಕೊಳ್ಳುತ್ತ ತನ್ನತನವನ್ನು ಕಾಪಾಡಿಕೊಳ್ಳುವುದು ಅತ್ಯಂತ ಕಷ್ಟದ ಕೆಲಸ. ಈ ಸಂದರ್ಭದಲ್ಲಿ :

ಆ ಹಾದಿ ಈ ಹಾದಿಯೆಂದು
ಬಿತ್ತಲು ಭೂಮಿಯೇ ಉಳಿಯದಂತಾದರೆ ಹೇಗಯ್ಯ ?
ಆ ಬೀದಿ ಈ ಬೀದಿಯೆಂದು
ಮನೆ ಕಟ್ಟಲು ಸ್ಥಳವೇ ಉಳಿಯದಂತಾದರೆ ಹೇಗಯ್ಯ ?
ಆ ವಾದ ಈ ವಾದವೆಂದು
ಮನೆಮಾತಿಗೇ ವೇಳೆ ಉಳಿಯದಂತಾದರೆ ಹೇಗಯ್ಯ ?
ಆ ಬೋಧೆ ಈ ಬೋಧೆಯೆಂದು
ತಿಳಿದಷ್ಟೂ ತಿಳಿಗೆಡುತ್ತ ಹೋದರೆ ಹೇಗಯ್ಯ ?

ಎಂದು ಇವರ ಮನಸ್ಸು 'ಸ್ವತಂತ್ರಧೀರ ಸಿದ್ಧೇಶ್ವರ[೭]ನಲ್ಲಿ ಕಳಕಳಿಯಿಂದ ಕೇಳು ತ್ತದೆ. ಈ ಪ್ರಶ್ನೆಗಳಲ್ಲಿಯ ಮಾತಿನ ಧಾಟಿ ಎಷ್ಟೊಂದು ಶಕ್ತಿಯುತವಾಗಿದೆಯೆಂದರೆ ಹಾಗೆ ಮಾಡುವುದು ತಕ್ಕ ರೀತಿಯಲ್ಲ ಎಂಬುದನ್ನು ಅದರ ಧ್ವನಿಯೇ ನಿರೂಪಿಸು ತ್ತದೆ. ಹಾಗೆಯೇ ಬಿತ್ತಲು ಭೂಮಿ, ಮನೆ ಕಟ್ಟಲು ಸ್ಥಳ, ಮನೆಮಾತಿಗೆ ವೇಳೆ— ಇವು ಸ್ವತಂತ್ರವಾದ ಅಸ್ತಿತ್ವವನ್ನು ಎತ್ತಿಹೇಳುವ ಪದಗಳಾಗಿ ನಿಂತು ಮೇಲಿನ ಮಾತನ್ನು ಸಮರ್ಥಿಸುತ್ತವೆ. ಈ ಸಂಬೋಧನೆ ಮುಂದೆ ಬಿನ್ನಹಕ್ಕೆ ತಿರುಗುತ್ತದೆ :

ದಿನಕ್ಕೊಂದು ಮಡಿಯಲ್ಲಿ ನೆಡಬೇಡವಯ್ಯ
ನಿನ್ನ ಈ ಬಡ ಸಸಿಯನ್ನು !
ದಿನಕ್ಕೊಬ್ಬರ ಕೈಗೆ ಕೊಡಬೇಡವಯ್ಯ
ನಿನ್ನ ಈ ಬಡ ಸಿಸುವನ್ನು !

ಬಡ ಸಸಿ, ಹಾಗೂ ಬಡ ಸಿಸುವಿನ ಪ್ರತಿಮೆಗಳ ಔಚಿತ್ಯವನ್ನು ಇಲ್ಲಿ ಪರಿಭಾವಿಸ ಬೇಕು. ಅವಿನ್ನೂ ಬೆಳೆದು ಬಲಗೊಂಡು ತಮ್ಮ ಅಸ್ತಿತ್ವವನ್ನು ಮೆರೆಯಬೇಕಾ ದವುಗಳು. ಅಂಥವನ್ನು ದಿನಕ್ಕೊಂದು ಮಡಿಯಲ್ಲಿ ನೆಡುವುದರಿಂದ, ದಿನಕ್ಕೊಬ್ಬರ ಕೈಗೆ ಕೊಡುವುದರಿಂದ ಅದು ಹೇಗೆ ಸಾಧ್ಯವಾದೀತು ? ವಚನ ಕೊನೆಗೊಳ್ಳುವುದು ಅಂತಃಕರಣದ ಆದೇಶದಿಂದ :

ನಿನ್ನ ಹಾದಿಯಲ್ಲಿ ನಡೆಸು
ನಿನ್ನ ಬೋಧೆಯನ್ನು ಕುಡಿಸು
ನನ್ನಿಯೊಂದನೆ ನುಡಿಸು.

ಹೀಗೆ ತನ್ನದೇ ಆದ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ ಹಂಬಲ ಸಂಬೋಧನೆ, ಬಿನ್ನಹ, ಆದೇಶಗಳ ತಿರುವಿನೊಂದಿಗೆ ಅವಕ್ಕೆ ತಕ್ಕ ಆಕಾರವನ್ನೂ ಈ ವಚನ ತಾನಾಗಿಯೇ ಪಡೆದುಕೊಂಡಿದೆ. ಈ ಬಗೆಯ ರಚನಾ ವಿಧಾನವು ಆಯಾ ಅನಿಸಿಕೆ, ಆಲೋಚನೆ, ಅನುಭವಗಳ ಅಭಿವ್ಯಕ್ತಿಗೆ ತಕ್ಕಂತೆ ರೂಪುಗೊಂಡಿರುವುದನ್ನು ಇಲ್ಲಿಯ ಅನೇಕ ವಚನ ಗಳಲ್ಲಿ ಕಾಣಬಹುದು.

ಬರಿಯ ಅರಿವಿನಿಂದೇನು ಪ್ರಯೋಜನ ? ಅದು ತನ್ನ ಅನುಭಾವವನ್ನು ಆಶ್ರಯಿಸಿ ನೆಲೆಗೊಂಡಾಗ ಮಾತ್ರ ನಿಜದ ಅರಿವಾಗಬಲ್ಲುದಷ್ಟೆ ? ಶರಣರ ನಿಲವನ್ನೇ ಈ ವಚನಕಾರರೂ ತಾಳಿದ್ದರೂ ಅದನ್ನು ಸ್ವಾನುಭವದ ಎರಕದಲ್ಲಿ ಹೀಗೆ ಮೂಡಿ ಸುತ್ತಾರೆ :

---

೭. "ಪುರಾಣಿಕ ಸಿದ್ಧೇಶ್ವರ'ನ ಗುಣವಾಚಕ 'ಸ್ವತಂತ್ರಧೀರ' ನಮ್ಮ ಕಾಲದ ಮಹಾ ಲಕ್ಷಣವನ್ನು ಸೂಚಿಸುತ್ತದೆ. ಸ್ವತಂತ್ರ ಪ್ರವೃತ್ತಿ, ಧೀರಗುಣಗಳು ಆಧುನಿಕ ಬದುಕನ್ನು ಆಳುತ್ತಿವೆ. ಅವು ಹೊಸ ಕಾಲದ ಬದುಕಿನ ಸೂತ್ರಗಳಾಗಿವೆ."
—'ವಚನೋದ್ಯಾನ'ದ ಮುನ್ನುಡಿಯಲ್ಲಿ, ಡಾ. ಹಾ. ಮಾ. ನಾಯಕ.

ನೆಲದಲ್ಲಿ ಹೋಗದ ನೇಗಿಲಿಗೆ ಬೆಲೆ ಎಲ್ಲಿ ?
ಅನುಭಾವವನ್ನು ಆಶ್ರಯಿಸದ ಅರಿವಿಗೆ ನೆಲೆ ಎಲ್ಲಿ ?
ಕಲ್ಲಿನಲ್ಲಿ ಕಂಡರಿಸಿದ ಒರತೆಗೆ ಸೆಲೆ ಎಲ್ಲಿ ?
ಹೊಲೆಯಲ್ಲಿ ಹುಟ್ಟಿದ ಜೀವಿಗೆ ಹೊಲೆ ಎಲ್ಲಿ ?
ಆಕಾಶದ ಕೊಪ್ಪರಿಗೆಗೆ ಒಲೆ ಎಲ್ಲಿ ?
ಬಯಲ ಮತ್ಸ್ಯವ ಹಿಡಿಯೆ ಬಲೆ ಎಲ್ಲಿ ?
ಸ್ವತಂತ್ರ ಧೀರ ಸಿದ್ಧೇಶ್ವರಾ, ನಿನ್ನ ನಿರಾಕರಿಸಿ, ನಾನಿರಬಲ್ಲೆನೆಂದರೆ
ಕಡಲ ಬಿಟ್ಟು ಅಲೆ ಎಲ್ಲಿ ?

ಒಂದು ಪದ ಹೆಚ್ಚು ಒಂದು ಪದ ಕಡಮೆಯಾಗದಂತೆ ಪ್ರಾಸಾನುಪ್ರಾಸಕ್ಕೆ ಭಾಷೆಯನ್ನು ಹದವಾಗಿ ಬಳಸಿಕೊಂಡು, ಒಂದೊಂದು ವಾಕ್ಯದಲ್ಲಿಯೂ ಮಾತಿನ ತೂಕವನ್ನು ಕಾಯ್ದುಕೊಂಡಿರುವುದು ಇಂಥ ವಚನಗಳಲ್ಲಿ ಕಣ್ಣಿಗೆ ಕಟ್ಟುತ್ತದೆ ; ಕಿವಿಗೂ ತಟ್ಟುತ್ತದೆ.

ಇಲ್ಲಿಯ ವಚನಗಳಿಗೆ ಕವಿಹೃದಯವೇ ಪ್ರಧಾನವಾಗಿದ್ದು ದೈವೀಶ್ರದ್ಧೆ ಹಾಗೂ ಜೀವನಶ್ರದ್ಧೆ ಎರಡೂ ಅದಕ್ಕೆ ತಳಹದಿಯಾಗಿವೆ. 'ಬಾಳಿನ ಬಾನಿನಲ್ಲಿ ಬುದ್ಧಿಯೇ ಭಾನು, ಶ್ರದ್ಧೆಯೇ ಶಶಿಯಾಗಲಯ್ಯಾ' ಎಂದು ಆಶಿಸಿರುವ ಈ ವಚನಕಾರರ ಕೋರಿಕೆ ಧ್ವನಿಪೂರ್ಣವಾಗಿದೆ. ಆಧುನಿಕ ಕಾಲದ ವೈಚಾರಿಕ ನಿಲವು, ಅಳವಡಿಸಿಕೊಳ್ಳಬೇಕಾದ ಜೀವನದ ಮೌಲ್ಯಗಳು ಶ್ರದ್ಧೆಯ ತಂಬೆಳಕಿನಲ್ಲಿಯೇ ಪ್ರತಿಫಲಿಸಿವೆ. ಅರ್ಥ--ಅನುಭವಗಳ ಸಮರಸವನ್ನೂ ಹೊಳೆವು—ತಿಳಿವುಗಳ ಪರಿಣಯವನ್ನೂ ಸಾಧಿಸುವುದೇ ಇವರ ಧ್ಯೇಯವಾಗಿರುವುದರಿಂದ ಪ್ರತಿಯೊಂದು ವಸ್ತುವಿನ ನಿರ್ವಹಣೆಯಲ್ಲಿಯೂ ಅದು ಎದ್ದು ಕಾಣುತ್ತದೆ. ಹಾಗೆಯೇ 'ಉಳ್ಳವರಿಗೆ ಎಲ್ಲರೂ ಎಲ್ಲವೂ ಉಂಟು. ಇಲ್ಲದವರಿಗೆ ಮಾತ್ರ ನೀನೊಬ್ಬನೇ ಅಯ್ಯ ! ಇಲ್ಲದವರ ಕೈಬಿಡದಿರಯ್ಯ' ಎಂಬ ಪ್ರಾರ್ಥನೆ ಆಧುನಿಕ ಸಂದರ್ಭದಲ್ಲಿ ಇನ್ನೂ ಅರ್ಥಪೂರ್ಣವಾಗಿದೆ.

ಜೀವನದ ಆಳವಾದ ಅರಿವು–ಅನುಭವ, ಅದರ ವಿವೇಚನೆ–ವಿಮರ್ಶೆ ಹಲವಾರು ವಚನಗಳ ಬಂಧದಲ್ಲಿ ಬಿಗಿವಡೆದಿದೆ :

ದಿನ ದಿನ ಗುಡಿಸಿಯೂ ದಿನ ದಿನ ಕಸ
ಈ ಮನೆಯಲ್ಲಿ ;
ದಿನ ದಿನ ಉಣಿಸಿಯೂ ದಿನ ದಿನ ಹಸಿವೆ
ಈ ತನುವಿನಲ್ಲಿ ;
ದಿನ ದಿನ ಹಿಗ್ಗು, ದಿನ ದಿನ ಕುಗ್ಗು
ಈ ಮನದಲ್ಲಿ ;

ಈ 'ಅಂತವಿಲ್ಲದ ವಿರೋಧಾಭಾಸದ, ಕೊನೆಯಿಲ್ಲದ ಕಣ್ಣುಮುಚ್ಚಾಲೆಯ ಪರಮ ರಹಸ್ಯವೇನು ?' ಎಂದು ಒಮ್ಮೆ ಚಿಂತಿಸಿದರೆ ;

ಬಿತ್ತುವಾಗೊಂದು ಹಿಗ್ಗು,
ಬೆಳೆಯುವಾಗೊಂದು ಹಿಗ್ಗು,
ಬೆಳೆಯ ಕಾಯುವಾಗೊಂದು ಹಿಗ್ಗು,
ಬೆಳೆಯ ಕುಯ್ಯುವಾಗೊಂದು ಹಿಗ್ಗು,
ರಾಶಿ ಮಾಡುವಾಗೊಂದು ಹಿಗ್ಗು,
ಆಯ ಕೊಡುವಾಗೊಂದು ಹಿಗ್ಗು,
ಉಳಿದುದ ಉಣುವಾಗೊಂದು ಹಿಗ್ಗು !

ಹೀಗೆ ತಿಳಿದವರು ಹಿಗ್ಗಿಸಿದಷ್ಟೂ ಹಿಗ್ಗುವ ದರ್ಶನವನ್ನು. ಬಿತ್ತಿ ಬೆಳೆದುಣ್ಣುವ ಒಂದು ಕ್ರಿಯೆಯ ಬೆಳವಣಿಗೆಯ ಸುಗ್ಗಿಯ ವಿವಿಧ ಹಂತಗಳ ಪ್ರತಿಮೆಯ ಮೂಲಕ ಸಹಜವಾಗಿ ಮೂಡಿಸಲಾಗಿದೆ. ಒಂದು ಮಾತನ್ನು ಗಟ್ಟಿಗೊಳಿಸಲು ಒಮ್ಮೊಮ್ಮೆ ಒಂದಕ್ಕೆ ಹತ್ತು ಉದಾಹರಣೆಗಳು ಸಾಲಾಗಿ ನಿಲ್ಲುವುದುಂಟು. ಅಂಥಲ್ಲಿ ಹೂವು ಬೇರೆಯಾದರೂ ಒಂದೇ ಮಾಲೆಯಲ್ಲಿ ಅಳವಟ್ಟು ಅವರ ಸೊಬಗನ್ನು ಹೆಚ್ಚಿಸುವ ತವಕವನ್ನು ಕಾಣುತ್ತೇವೆ. ಬಾಳಿನ ಸಾರ್ಥಕತೆಯಿರುವುದು ಬುದ್ಧಿ ಹಾಗೂ ಭಾವನೆ ಯೆರಡರ ಬಲದಿಂದಲೇ ಎಂಬುದನ್ನು ಪ್ರಶ್ನೆಗಳ ಮೂಲಕವೆ ನಿರೂಪಿಸುವ ಶಕ್ತಿ ಅವರ ದೃಷ್ಟಾಂತಗಳಿಗಿದೆ :

ಹಕ್ಕಿಯ ಹಾರಾಟ
 ಪಕ್ಕದ ಬಲದಿಂದಲೋ ಪ್ರಾಣದ ಬಲದಿಂದಲೊ ?
ಬೀಜದ ಮೊಳೆತ
 ಭೂಮಿಯ ಬಲದಿಂದಲೋ ನೀರಿನ ಬಲದಿಂದಲೊ ?
ನೋಡುವವನ ನೋಟ
 ಕಣ್ಣಿನ ಬಲದಿಂದಲೋ ಬೆಳಕಿನ ಬಲದಿಂದಲೊ ?
ಬಾಳಿನ ಸಾರ್ಥಕತೆ
 ಬುದ್ಧಿಯ ಬಲದಿಂದಲೋ ಭಾವನೆಯ ಬಲದಿಂದಲೊ ?
 ಎರಡರ ಬಲದಿಂದಲೆಂದಾತ
 ನಮ್ಮ ಸ್ವತಂತ್ರಧೀರ ಸಿದ್ಧೇಶ್ವರ !

ಒಂದೊಂದು ಭಾವ, ಆಲೋಚನೆಗಳೂ ಸಮರ್ಥವಾದ ನೂತನ ರೂಪಕ ಗಳಲ್ಲಿಯೇ ಮೈದಾಳಿ ತಮ್ಮ ನಿಲವನ್ನು ಪರಿಣಾಮಕಾರಿಯಾಗಿ ಅರಳಿಸಿರುವುದನ್ನು 'ವಚನೋದ್ಯಾನ'ದಲ್ಲಿ ಕಣ್ಣಿಟ್ಟ ಕಡೆಯಲ್ಲೆಲ್ಲ ಕಾಣಬಹುದು :

ಹಾಳಾದ ಬಾಳಿನ ಹಾಳು ಮಣ್ಣಿನಲ್ಲಿಯೇ
ಹಣ್ಣಾಗದ ಹಾರೈಕೆಗಳ ಗೊರಟೆಗಳನ್ನೂರಿ
ಕೃತಕೃತ್ಯತೆಯ ಕೈತೋಟವನ್ನು ಬೆಳೆಸುವೆನಯ್ಯ—

೦ ೦ ೦

ನನ್ನ ನೋವಿನ ಕೆನೆಯನ್ನು
ನಿನ್ನ ನಾಮದ ಮಂಥಾನದಿಂದ ಕಡೆದು
ನಲವಿನ ನವನೀತವ ಪಡೆವೆನಯ್ಯಾ !

೦ ೦ ೦

ಹಾಜರಿ ಹಾಕುತ್ತಲೆ ಓಡಿ ಹೋಗುವ ಬಾಲಕನಂತೆ ನಲವು.
ಹಾಜರಿದ್ದು ಕಲಿಯುವ ಬಾಲಕನಂತೆ ನೋವು—
ಜೀವನದ ಪಾಠಶಾಲೆಯಲ್ಲಿ.

೦ ೦ ೦

ನಿನ್ನ ಉದ್ರಿ ಖಾತೆಯಲ್ಲಿ ನನ್ನ ಹೆಸರೇ ಮೊದಲ ಪುಟದಲ್ಲಿ !
ಉಳಿದವರು ಅಷ್ಟಿಷ್ಟು ಬಾಕಿ ಮುಟ್ಟಿಸಿದರೂ
ನಾನು ಒಂದು ಪೈಸೆಯನ್ನೂ ಪಾವತಿ ಮಾಡಿಲ್ಲವಯ್ಯಾ !

೦ ೦ ೦

ಕಲಿತ ವಿದ್ಯೆ, ದೊರೆತ ಕೆಲಸಗಳ
ನಡುವಣ ವಿರಸ ದಾಂಪತ್ಯವೇ
ಇರವಿನ ಉರುಟುತನಕ್ಕೆ ಸೆಲೆಯಾಗಿಹುದಯ್ಯ.

ಜೀವನದ ಆಳದಲ್ಲಿರುವ ನೋವು ಹಾಗೂ ಬದುಕಿಗೆ ಅದರಿಂದ ಒದಗಿರುವ ಬೆಲೆಯನ್ನು, ಅನುಭವದ ಪಕ್ವತೆಯಿಂದ ಭಾವಕ್ಕೆ ತಕ್ಕ ಭಾಷೆಯಲ್ಲಿ ಹಿಡಿದಿಡುವ ಕಡೆದಿಡುವ ರೀತಿಯನ್ನು ಗಮನಿಸಿ—

ಇನ್ನೇನೋ ಇಲ್ಲದೆ ಬದುಕಬಲ್ಲೆ,
ನೋವಿಲ್ಲದೆ ಬದುಕಲಾರೆನಯ್ಯಾ !
ಕೂರ್ಪರನಗಲಿದ ನೋವು. ಗುರಿಯ ಮುಟ್ಟದ ನೋವು,
ಆಸೆ ಅರಳದ ನೋವು, ಒಲವು ಫಲಿಸದ ನೋವು,
ನಿನ್ನನರಿಯದ ನೋವು, ನನ್ನ ಮರೆಯದ ನೋವು
ಒಂದೊಂದೂ ಊಟೆಯಯ್ಯಾ ಜೀವನದ ಝರಿಗೆ !
ಬಾಳು ಎಚ್ಚರಗೊಳ್ಳುವುದಯ್ಯ ನೋವಿನ ಕರೆಗೆ !
ನೋವೆ ನಾವೆಯಯ್ಯ ಬದುಕಿನ ತೊರೆಗೆ !
ನೋವಿನ ಹೂವಿನ ಮಧುವಿಗೆ
ಮಧುಕರನಾಗುವ ಭಾಗ್ಯವ ಕರುಣಿಸಯ್ಯಾ
ಸ್ವತಂತ್ರ ಧೀರ ಸಿದ್ಧೇಶ್ವರಾ !

'ನೋವಿಲ್ಲದೆ ಬದುಕಲಾರೆ' ಎಂದು ಪ್ರಾರಂಭದಲ್ಲಿ ವಿಚಿತ್ರವೆಂದು ತೋರುವ ಭಾವ ಮುಂದಿನ ಮೂರು ಸಾಲುಗಳಲ್ಲಿ ಬದುಕಿನ ಒಳಪದರುಗಳನ್ನು ಮಡಿಕೆ ಕೆಡದಂತೆ ಮೆಲ್ಲಗೆ ಎತ್ತಿ ತೋರಿಸಿ, ಮತ್ತೆ ಮುಂದಿನ ಮೂರು ಸಾಲುಗಳಲ್ಲಿ ಜೀವನವನ್ನು ಸರಿಯಾಗಿ ಅರ್ಥಮಾಡಿಕೊಂಡಿರುವ ಬಗೆಯನ್ನು ದೃಢವಾಗಿ ನಿರೂಪಿಸಿ, ಕೊನೆಯ ಸಾಲುಗಳಲ್ಲಿ ನೋವಿನ ಹೂವಿಗೆ ಮಧುಕರನಾಗುವ ಕೋರಿಕೆಯಿಂದ ಮೇಲಿನ ಭಾವ ದೇವಾಲಯಕ್ಕೆ ಕಳಸವಿಟ್ಟಂತೆ ಮುಕ್ತಾಯಗೊಳ್ಳುತ್ತದೆ. ರಚನೆಯ ದೃಷ್ಟಿಯಿಂದಲೂ ಕಡೆದ ಬುಗುರಿಯಂತೆ ಈ ವಚನ ಸ್ವಯಂಪೂರ್ಣವಾಗಿ ಕಂಗೊಳಿಸುತ್ತದೆ.

ವಚನ ಪ್ರಕಾರವನ್ನು ಹೊಸ ಸಾಧ್ಯತೆಗಳಿಗೂ ಅವಕಾಶ ಮಾಡಿಕೊಂಡವರಲ್ಲಿ ಶ್ರೀ ಸಿದ್ಧಯ್ಯನವರೂ ಒಬ್ಬರು. ಸಮಕಾಲೀನ ಸಂವೇದನೆಯಿಂದೊಡಗೂಡಿದ ಭಾವಾಲೋಚನೆಗಳಲ್ಲಿ ಇದು ಒಡೆದು ಕಾಣುತ್ತದೆ. ಧಾರ್ಮಿಕ ಆಡಂಬರದ ಮೂಲಕ ಭ್ರಷ್ಟಾಚಾರವನ್ನು ಮುಚ್ಚಲೆತ್ನಿಸುವ, ಕಳ್ಳಭಕ್ತರ ಕದೀಮತನವನ್ನು ಚಿತ್ರಿಸುವ ಸಂದರ್ಭವನ್ನು ನೋಡಬಹುದು :

ಲಂಚದ ಹಣದಿಂದ ಪಂಚಾಮೃತವ ತರುವರಾರೋ.
ಕಾಳಸಂತೆಯ ಹಣದಿಂದ ಪಲ್ಲಕ್ಕಿ ಕೊಡಿಸುವರಾರೋ
ಖೊಟ್ಟಿ ಪರ್ಮಿಟ್ಟಿನ ಹಣದಿಂದ ಗೋಪುರವ ಕಟ್ಟಿಸುವರಾರೋ,
ಕಂಟ್ರೋಲಿನ ಕಾಂಚಾಣದಿಂದ ಕಳಸವಿಡಿಸುವರಾರೊ
ಈ ಕದ್ದುಣ್ಣುವ ಕದೀಮರ ಕಳ್ಳಭಕ್ತಿಯ ಕಂಡು
ಕದ್ದು ನಗುತ್ತಿರುವಿಯೇನಯ್ಯಾ ?
ನಕ್ಕರೆ ಸಾಲದು, ಇಕ್ಕಯ್ಯಾ ಅವರನ್ನು ಇಕ್ಕುಳದೊಳಗೆ
ಸ್ವತಂತ್ರ ಧೀರ ಸಿದ್ಧೇಶ್ವರಾ !

ಕವಿ ಹೀಗೆ ಜನತೆಯ ನಾಲಗೆಯಾಗುತ್ತಾನೆ. ಅವರ ಸಂಕಟಕ್ಕೆ ಸಾಕ್ಷಿಯಾಗುತ್ತಾನೆ ಎಂಬುದಕ್ಕೆ ಕೊನೆಯ ಸಾಲು ನಿಷ್ಠುರವಾದ ನಿದರ್ಶನ. ಕಂಪ್ಯೂಟರ್ ಮಾನವ ಹಾಗೂ ಕೃತ್ರಿಮ ಜೀನ್ಸ್ ಮಾನವ ನಿರ್ಮಾಣಗೊಂಡು ದೇವನಿರ್ಮಿತ ಮಾನವರಿಗೆ ಸವಾಲು ತೂರಿ ನಿಂತಿರುವುದನ್ನು ಕಂಡಾಗ—

ಸಂಕರಧಾನ್ಯ, ಸಂಕರಪುಷ್ಪ, ಸಂಕರ ಫಲಗಳು ಬಂದಿವೆ.
ಸಂಕರ ತಳಿಯೂ ಬರಲಿದೆಯೇನಯ್ಯಾ ?
ಬಂದರೆ ಅದರ ಇತಿಮಿತಿಗಳೇನಯ್ಯಾ ?

ಎಂಬ ಆತಂಕ ಸಹಜವೇ ಆಗಿದೆ. 'ನಿನ್ನನ್ನುಳಿದ ಮತಿಯ ಪ್ರಗತಿ ಪ್ರಚ್ಛನ್ನ ದುರ್ಗತಿಯೇನಯ್ಯಾ ?' ಎಂಬ ಎಚ್ಚರಿಕೆ ಇಲ್ಲಿ ಗಮನಾರ್ಹವಾಗಿದೆ.

ಸ್ವತಂತ್ರಧೀರ ಸಿದ್ಧೇಶ್ವರನ ಆರಾಧಕನಾದ ಈ ಕವಿಯ ವ್ಯಕ್ತಿತ್ವ ಎಂಥದು ? ಕಾಲಪ್ರವಾಹದ ಜೊತೆಗೆ ತೇಲಿ ಹೋಗುವಂಥದಲ್ಲ ಅದು—

ಗತಕಾಲವೆ, ನಿನ್ನನ್ನು ಪ್ರೀತಿಸಬಲ್ಲೆ ಪೂಜಿಸಲಾರೆ ನಾನು ;
ವರ್ತಮಾನವೆ, ನಿನ್ನನ್ನು ಆದರಿಸಬಲ್ಲೆ ಅರ್ಚಿಸಲಾರೆ ನಾನು ;
ಭವಿಷ್ಯತ್ತೆ, ನಿನ್ನನ್ನು ಸ್ವಾಗತಿಸಬಲ್ಲೆ ಸಮಾರಾಧಿಸೆ ನಾನು ;
ಕಾಲವೆ ನಿನ್ನ ಕೆಳೆ ಬೇಕು, ಆಳಿಕೆ ಬೇಡ ನನಗೆ !
ನಿನ್ನ ಪ್ರವಾಹ ಕೊಂಡೊಯ್ದುತ್ತ ತೇಲಲು
ಸತ್ತ ಮೀನೇನಲ್ಲ ನಾನು.
ನಿನಗೆ ಬೇಕಾದತ್ತ ನೀನೆಳೆ, ನನಗೆ ಬೇಕಾದತ್ತ ನಾನೀಸುವೆ !

ಕಾಲವನ್ನು ಕುರಿತು ಒಂದು ಆದರ್ಶವಾದ ನಿಲವನ್ನು ಕವಿ ತಾಳಿದ್ದಾನೆ. ಇಂಥ ಸಂದರ್ಭದಲ್ಲಿ ವಚನದ ಅಂಕಿತ ಸಾರ್ಥಕವಾಗುತ್ತದೆ. ಈ ಬಗೆಯ ವೀರಕ್ಕೆ ತಕ್ಕ ವಿನಯವೂ ಮನೆಮಾಡಿಕೊಂಡಿರುವುದರಿಂದ ಇಲ್ಲಿಯ ಒಟ್ಟು ಭಾವಕ್ಕೆ ಬಲ, ಹೊಸ ಹೊಳಪು ಬಂದಿದೆ :

ನನಗೆ ಬಯಸದೆ ಬಂದ ಪದವಿಗಳೆಲ್ಲ
ನಿನ್ನ ಕರುಣೆಯ ಕುರುಹಲ್ಲದೆ
ನನ್ನ ಘನತೆಯ ಗುರುತಲ್ಲ ತಂದೆ !
ಹಿಡಿಮಣ್ಣಿನಲ್ಲಿ ಕಿಡಿಯೊಂದನಿರಿಸಿ ಕಳಿಸಿದೆ
ಕಿಡಿ ಪುಟಗೊಂಡು ಅಗ್ನಿಯಾಗಿ
ಈಗ ಬೆಳಕಾಗಲು ಹಾರೈಸುತ್ತಿದೆಯಯ್ಯಾ !

ಈ ಹಾರೈಕೆ, ಈ ಅರಿವು, ಒಂದೊಂದು ವಚನವನ್ನೂ ಒಂದೊಂದು ಹಣತೆಯಂತೆ ಬೆಳಕಿನ ಕುಡಿಯಾಗಿ ಹೊಳೆಯಿಸುತ್ತಿವೆ. ಇಲ್ಲಿಯ ಭಕ್ತಿ ಕುರುಡಲ್ಲ, ಕುರುಡು ಗೊಳಿಸುವುದೂ ಅಲ್ಲ. 'ಬದುಕಿನ ಬರಡನಳಿಸು'ವಂಥದು.

ಉರಿವ ಕರ್ಮ, ಉರಿಸುವ ಜ್ಞಾನ
ಎರಡೂ ಸೇರಿ ಬದುಕಿಸುವ ಭಕ್ತಿಯಾಯಿತ್ತಯ್ಯಾ !

ಎಂಬುದಾಗಿ ಶರಣರ ಜ್ಞಾನ ಮತ್ತು ಕ್ರಿಯೆಗಳ ಸಮನ್ವಯವನ್ನೇ ಸಾರುವಂಥದು.

ಇಲ್ಲಿಯ ಹಲವಾರು ವಚನಗಳು ನಮ್ಮ ಮನಸ್ಸನ್ನು ಸೆಳೆದು ಹೃದಯದಲ್ಲಿ ನೆಲೆಯೂರಿ ನಿಲ್ಲುವಂತಾಗುವುದು. ಶಂಕೆಗಳನ್ನು ನಿವಾರಿಸಿ ಒಂದು ಬಗೆಯ ತೃಪ್ತಿ ಯನ್ನು ನೀಡುವುದು ಅವು ಕಲಾಕೃತಿಯಾಗಲು ಹವಣಿಸುತ್ತಿರುವುದರಿಂದಲೇ—

ಹಕ್ಕಿಯ ಗೂಡೊಂದು ಕಲಾಕೃತಿ, ಹಾವಿನ ಬೀಡೊಂದು ಕಲಾಕೃತಿ,
ಜೇಡನ ಬಲೆಯೊಂದು ಕಲಾಕೃತಿ, ಜೇನಿನ ಹುಟ್ಟೊಂದು ಕಲಾಕೃತಿ,
ನಿನ್ನ ಪ್ರತಿಯೊಂದು ಕೃತಿಯೂ ಕಲಾಕೃತಿಯಯ್ಯಾ !
ನನ್ನ ಒಂದು ಕೃತಿಯಾದರೂ ಕಲಾಕೃತಿಯಾಗುವಂತೆ,

ಅದು ಕಲಾಕೃತಿಯಾಗಿ ಹೊಮ್ಮಿದಾಗ
ಹೆಮ್ಮೆ, ಹಮ್ಮು, ಬಿಮ್ಮುಗಳು ನನ್ನನ್ನು
ಆವರಿಸದಂತೆ ಅನುಗ್ರಹಿಸಯ್ಯಾ

ಎಂಬುದು ನಿಜವಾದ ಕಲಾವಿದನ ಕೋರಿಕೆ. ಎಷ್ಟೊಂದು ಅನಿಸಿಕೆಗಳು, ಎಷ್ಟೊಂದು ಆಕರಗಳು, ಎಷ್ಟೊಂದು ಆಲೋಚನೆಗಳು, ಎಂಥೆಂಥ ಅನುಭವಗಳು ಇಲ್ಲಿ ಅಭಿವ್ಯಕ್ತಿಗೊಂಡಿರುವುದು. ಡಾ. ಹಾ.ಮಾ. ನಾಯಕರು ಅರ್ಥವತ್ತಾಗಿಯೇ ನುಡಿದಿರುವಂತೆ, 'ಇದು ಕಾಡನ್ನು ಸೋಸಿ ಉದ್ಯಾನ ಮಾಡಿದ ಕಲಾಕಾಯಕ'. 'ಬಹಳ ಎಚ್ಚರಿಕೆಯಿಂದ ಒಂದೊಂದು ಸಾಲನ್ನೂ ತೀಕ್ಷ್ಣ ಪರೀಕ್ಷಣಕ್ಕೆ ಗುರಿಪಡಿಸುತ್ತ ಮುಂದುವರಿದಿದ್ದೇನೆ' ಎಂಬ ಲೇಖಕರ ಮಾತನ್ನು ಇಲ್ಲಿಯ ವಚನ ರಚನೆಯ ವಿಧಾನದಲ್ಲಿ ವಿವಿಧ ವಿನ್ಯಾಸದಲ್ಲಿ ಒರೆಹಚ್ಚಿ ನೋಡಬಹುದಾಗಿದೆ. "ಕವಿಯಾಗಿ, ಪುರಾಣಿಕರು ಇದುವರೆಗು ಅನ್ವೇಷಿಸುತ್ತಿದ್ದ, ಒಂದು ಕಾವ್ಯಪ್ರಯೋಗ ಪರಿಣತಿಯನ್ನು ಈ ವಚನೋದ್ಯಾನದಲ್ಲಿ ಸಾಧಿಸಿಕೊಂಡಿದ್ದಾರೆ" ಎಂಬ ಡಾ. ಜಿ. ಎಸ್. ಶಿವರುದ್ರಪ್ಪನವರ ಅಭಿಪ್ರಾಯ[3] ಸಿದ್ಧಯ್ಯನವರ ಸಾಧನೆಯ ವಿಶಿಷ್ಟತೆಯನ್ನು ಸಮರ್ಪಕವಾಗಿ ಸೂಚಿಸುತ್ತದೆ.

3. 'ಸಾಹಿತ್ಯ ವಾರ್ಷಿಕ'–1977, ಪುಟ 274.

# ‘ವಚನೋದ್ಯಾನ’ದಲ್ಲಿ ಜೀವನ ದರ್ಶನ

ಎಂ. ಶಶಿಕಲಾ

ಉದ್ಯಾನಗಳು ನಾಗರಿಕ ಜೀವನದ ಸೊಬಗು ಹಾಗೂ ಶಾಂತಿಯ ತಾನಗಳು. ಜಟಿಲ ಜೀವನದ ಹೊಗೆಸುತ್ತಿ ಉಸಿರುಗಟ್ಟಿದ ಮನುಷ್ಯನಿಗೆ ಆರೋಗ್ಯಕರವಾದ, ಆಹ್ಲಾದಕರವಾದ ವಾಯುವಿಹಾರಕ್ಕೆಂದಿರುವ ಸ್ಥಳ ‘ವಚನೋದ್ಯಾನ.’ ಈ ವನದ ತಂಪಿನಲ್ಲಿ ಬಾಳಿನ ಬೇಗೆಯ ನೆನಹು ಮರುಕಳಿಸುವುದಾದರೂ ಅದು ನೆನಪಿನ ಕಲಾತ್ಮಕ ಭಾವಚಿತ್ರ. ಬದುಕು ಹಿರಿದಾಗಲು ನೆರವಾಗುವ ಸಾಹಿತಿಯೊಬ್ಬನ ವಿಶ್ಲೇಷಣಾತ್ಮಕ ಜೀವನ–ವರದಿ.

ಶ್ರೀ ಸಿದ್ಧಯ್ಯ ಪುರಾಣಿಕರ ‘ವಚನೋದ್ಯಾನ’ ಬೆಂಗಳೂರಿನ ಲಾಲ್‌ಬಾಗಿನಂತೆ. ಒಳಹೊಕ್ಕರೆ ಹೊರಗಿನ ಸದ್ದುಗದ್ದಲದ ಇರುವು ಕಣ್ಮರೆಯಾಗಿ, ಎದುರಿಗೆ ಹಸಿರು ವನರಾಜಿ ವಿರಾಜಿಸುತ್ತದೆ. ಬಣ್ಣ ಬಣ್ಣದ ಹೂ, ಬಳ್ಳಿ, ಪೊದರು ಬಿದುರು ಮೊದಲಾಗಿ, ಎಲ್ಲವೂ ಒಂದೊಂದು ಹೊಸ ಸೊಬಗಿನಿಂದ ಕೂಡಿ ವೈವಿಧ್ಯಮಯ ನೂತನ ಅನುಭವವುಂಟುಮಾಡುತ್ತವೆ. ಪ್ರಾರಂಭದಲ್ಲಿ ಸ್ವಾನುಭವದ ವಚನಗಳಿದ್ದು ಪುಟಶಿರುವಿದಂತೆ ಬೃಹದಾಕಾರ ತಾಳುತ್ತವೆ. ವೈಯಕ್ತಿಕ ಭಾವಗಳು ಲೋಕಾನುಭವದ ಸಾಗರದೊಡನೆ ಸಂಗಮಿಸಿ ವಿಶೇಷ ಸಮೃದ್ಧಿಯಿಂದ ಕಂಗೊಳಿಸುತ್ತವೆ.

ಪುರಾಣಿಕರಿಗೆ ದೀರ್ಘಕಾಲದ ವಿಸ್ತೃತ ಜೀವನಾನುಭವವಿದೆ. ಭಾರತದ ಸ್ವಾತಂತ್ರ್ಯಪೂರ್ವಕಾಲದ ಚಳುವಳಿ, ತ್ಯಾಗ, ನಿಷ್ಠೆ, ದೇಶಪ್ರೇಮದಿಂದ ಕೂಡಿದ ಭಾರತೀಯರೆಲ್ಲ ಒಂದಾಗಿ, ಪ್ರಾಣಪಣಕ್ಕೆ ಹಚ್ಚಿ ಹೋರಾಡಿದುದನ್ನೂ ಕಂಡಿದ್ದಾರೆ. ಅನಂತರದಲ್ಲಿ ಸ್ವರಾಜ್ಯದ ಆಳ್ವಿಕೆಯಲ್ಲಿ ಬಡತನ–ಅನ್ನ ಅರಿವೆ ಅರಿವುಗಳ–ಬಡತನ ಹೃದಯದ ಬಡತನದ ಬೇಗೆಯಲ್ಲಿ ಬಳಲುತ್ತಿರುವ ಜನತೆಯನ್ನು ಕಾಣುತ್ತಿದ್ದಾರೆ. ಸರಕಾರದ ಉನ್ನತ ಅಧಿಕಾರಿಯಾಗಿ ದೇಶದ ಆರ್ಥಿಕ, ಆಡಳಿತದ ಒಳಹೊರಗನ್ನು ಅರಿತವರಾಗಿದ್ದಾರೆ. ಸದ್ಗೃಹಸ್ಥರಾಗಿ ಪ್ರಾಪಂಚಿಕ ಜೀವನದ ಸುಖದುಃಖಗಳನ್ನು ಅನುಭವಿಸಿದ್ದಾರೆ. ಕವಿಯಾಗಿ ಲೋಕದ ಅಂತರಂಗವನ್ನು ಅರಿತಿದ್ದಾರೆ. ಈ ಶತಮಾನದ ವಿಜ್ಞಾನದ ಮಹತ್ತರ ಸಾಧನೆ, ಸೌಕರ್ಯಗಳು, ಇದರಿಂದ ಮಾನವ

ಜೀವನ ವಿಚಾರಗಳ ಮೇಲಾದ ಪ್ರಭಾವಗಳನ್ನೂ ಗಮನಿಸಿದ್ದಾರೆ. ಬಸವನ ಭಕ್ತರಾಗಿ ಅಂತರಂಗ ವಿಮರ್ಶೆಯನ್ನೂ ಲೋಕಜೀವನ ವಿಶ್ಲೇಷಣೆಯನ್ನು ಮಾಡಿ ಮಾನವನಿಗೆ ಹಿತವಾವುದೆಂಬುದನ್ನು ಸೂಚಿಸಿದ್ದಾರೆ. ಬುದ್ಧಿಜೀವಿಯಾದ ಅವರು ಇಂದಿನ ವಿಪರಿತ ವಿಚಾರಸರಣಿಯು ಗೈದ ದೂಷಿತ ಪರಿಣಾಮದ ವಿವರಣೆ ನೀಡಿದ್ದಾರೆ. ಮಾನವ ಮರೆಯುತ್ತಿದ್ದ ಮಾನವೀಯತೆ, ಹೃದಯ ಸಂಪನ್ನತೆ, ಮತ್ತು ವಿವೇಕ ವನ್ನು ಎಚ್ಚರಿಸುವ ಪ್ರಯತ್ನ ಕೈಕೊಂಡಿದ್ದಾರೆ. ಶ್ರದ್ಧಾವಂತ ಭಾರತೀಯರಾಗಿ ಭಾರತದ ಭವಿತವ್ಯ ನಿರ್ಮಾಣಕ್ಕೆ ಕೈಕೊಳ್ಳಬೇಕಾದ ಯೋಜನೆಯ ವಿಚಾರ ತಿಳುಹಿ ಅದರ ಯಶಸ್ಸಿಗಾಗಿ ಸ್ವತಂತ್ರ ಧೀರ ಸಿದ್ಧೇಶ್ವರನಲ್ಲಿ ಪ್ರಾರ್ಥಿಸಿದ್ದಾರೆ.

ಒಂದು ಸಾಹಿತ್ಯಕೃತಿ ಓದುಗನಿಗೆ ಆತ್ಮೀಯವೆನಿಸಬೇಕಾದರೆ ಅಲ್ಲಿ ಅಭಿವ್ಯಕ್ತ ವಿಚಾರಗಳು, ಭಾವಾನುಭಾವಗಳು ತನಗೆ ಕಂಡಂತಹವು ಎನಿಸಬೇಕು. ಅಪರಿಚಿತತೆ ಆಕರ್ಷಕವೂ ಅಲ್ಲ ಅಪೇಕ್ಷಿತವೂ ಆಗಿರದು. ಇಂದಿನ ಕಾಲದಲ್ಲಿ ತೆರೆದ ಕಣ್ಣು, ಮತ್ತು ಮನಸ್ಸಿನಿಂದ ಸಮಾಜದಲ್ಲಿ ಬಾಳುತ್ತಿರುವ ವ್ಯಕ್ತಿಯ ವಿಚಾರ, ಅನಿಸಿಕೆಗಳು ವರ್ಣಮಯವಾಗಿ ಇಲ್ಲಿ ಅರಳಿವೆ; ಈ ಬೇಡಿಕೆ ವ್ಯಕ್ತಿಗಳೆಲ್ಲರ ಆಪೇಕ್ಷೆ. 'ವಿಜ್ಞಾನಿಯ ಬುದ್ಧಿ, ತತ್ತ್ವಜ್ಞಾನಿಯ ಕವಿಯ ಹೃದಯ ; ದುಡಿತದ ಬಟ್ಟಲು. ತಿಳಿವಿನ ಹಾಲು, ಒಲವಿನ ಸಕ್ಕರೆ ; ನಯದ ನೌಕೆ, ನಂಬಿಕೆಯ ಹುಟ್ಟು,' ಬಾಳ ನೌಕೆ ಸಾಗಲು ಇವು ಬೇಕಲ್ಲವೆ !

ಈ ವಚನ ರಚನೆಗೆ ಪ್ರೇರಣೆ ಬದುಕು. ಸಮಕಾಲೀನ ವಿಚಾರವಾಹಿನಿ, ಬಸವ ಭಕ್ತಿ ಪರೋಕ್ಷವಾಗಿ ಮತ್ತು ಲೇಖಕರು ಹೇಳಿರುವಂತೆ ಸನ್ಮಿತ್ರರ ಸದಾಗ್ರಹ, ನಿತ್ಯಜೀವನ, ಪತ್ರಿಕೆಗಳ ಸಮಾಚಾರ ಸುದ್ದಿಗಳು, ತಾನೂ ಕಂಡು ಕೇಳಿದ ಸಮಸ್ಯೆಗಳು ಹೀಗೆ ಬದುಕಿನ ವಿವಿಧ ಭಾಗಗಳೂ, ಭಾವಗಳು ಇಲ್ಲಿ ಪ್ರಕಟಗೊಂಡಿವೆ. ಅವುಗಳನ್ನು ವಿಮರ್ಶಿಸುವಲ್ಲಿ ಲೇಖಕರ ಜೀವನದೃಷ್ಟಿ, ಎಂತಹದೆಂಬುದು ತಿಳಿದುಬರುವುದು. "ಭ್ರಷ್ಟಾಚಾರವೇ ಶಿಷ್ಟಾಚಾರದ ವೇಷತೊಟ್ಟಿದೆ, ಶೀಲಶೂನ್ಯತೆಯೇ ಸಭ್ಯತೆಯ ಉಡುಪು ಉಟ್ಟಿದೆ...ಹುಸಿಪ್ರಚಾರ ಕಸಕ್ಕೆ ಕಸವರದ ಸ್ಥಾನ ಕೊಟ್ಟಿದೆ...ಸ್ವೈರವೃತ್ತಿ ಸ್ವಾತಂತ್ರ್ಯದ ಸಮಾಧಿ ಕಟ್ಟುತ್ತಿದೆ...ವಿಕಾರ ವಿಚಾರದ ತಲೆಯನ್ನು ಕುಟ್ಟಿದೆ...ಇದು ಬಿಡುಗಡೆಯ ಹೊಲದ ಬೆಳಸು, ಇದಾಗದಿರಲಿ ದೇಶವಾಸಿಗಳಿಗೆ ವಿಷದ ಉಣಿಸು" ವಸ್ತುಸ್ಥಿತಿಯ ವಿವರಣೆಯಲ್ಲಿ ವೈಪರೀತ್ಯದ ಅರಿವು ಕಂಡುಬರುತ್ತದೆ. ಕೊನೆಯಲ್ಲಿಯ ಅಭಿಪ್ರಾಯದಲ್ಲಿ ದೇಶಕ್ಕೆ ಮಾರಕವಿದು ಎನ್ನುವಾಗಲೂ, ಅವನತಿಯ ಗೊಬ್ಬರ ದಿಂದ ಉನ್ನತಿಯ ಸಿರಿಬೆಳಸಾಗಲೆಂಬುದರಿಂದ ಇಂದಿನದು ಉತ್ತಮ ಸ್ಥಿತಿಯಲ್ಲ ವೆಂಬುದನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ಹತ್ತು ವರುಷದ ಹಿಂದೆ ಎಲ್ಲೆಲ್ಲಿಯೂ ಬರದ ಹಾವಳಿ. ಒಣಬರ, (ಅನಾವೃಷ್ಟಿ), ಹಸಿಯಬರ, (ಅತಿವೃಷ್ಟಿ) ಪತ್ರಿಕೆ ಯಲ್ಲಿ ಅದೇ ಸುದ್ದಿ; ಎಲ್ಲರ ಬಾಯಲ್ಲಿಯೂ ಅದೇ ಮಾತು. ಎಲ್ಲಿ ಹೋದರೂ

ಬರದ ಭೀಕರ ದೃಶ್ಯ. ವಚನಕಾರರಿಗೆ ಹೊರಗಿನ ಬರ ಕಂಡಂತೆ ಒಳಗಿನ ಬರವೂ ಕಂಡಿದೆ.

ಅಲ್ಲಿ ಬರ ಇಲ್ಲಿ ಬರ ಎಲ್ಲಿಲ್ಲ ಬರ
ಕೆಲಸದ ಬರ, ಕಾಳಿನ ಬರ, ಕಣಿಕೆಯ ಬರ, ಕುಡಿವ ನೀರಿಗೂ ಬರ,
ಹೊರಗೆ ಅನಾವೃಷ್ಟಿ ಅತಿವೃಷ್ಟಿ ತಂದಿರುವ ಭೌತಿಕ ಬರ
ಒಳಗೆ ಅಸಂಯಮ, ಅಸಹನೆ, ಅತಿರೇಕಗಳು ತಂದ ಆತ್ಮಿಕಬರ
ಪ್ರೀತಿಯ ಬರ, ನೀತಿಯ ಬರ, ರೀತಿಯ ಬರ
ಆತ್ಮೌಪಮ್ಯದ ಬರ, ಸಾತ್ವಿಕತೆಯ ಬರ, ಸಹಾನುಭೂತಿಯ ಬರ
ಒಂದು ಬರವಿಲ್ಲದಲ್ಲಿ ಇನ್ನೊಂದು ಬರದ ಅಧಿಕಾರ
ಒಮ್ಮೊಮ್ಮೆ ಎರಡೂ ಬರಗಳ ಸಮ್ಮಿಶ್ರ ಸರಕಾರ".

ವೈಯಕ್ತಿಕ ವಿಚಾರ, ಲೋಕವಿಮರ್ಶೆಗಳು ಇರುವುವು. ಈ ವಚನಗಳು ಆತ್ಮಗೀತೆಗಳೂ ಅಗಿರುವಂತೆ ಲೋಕಗೀತೆ, ಆಧ್ಯಾತ್ಮಗೀತೆಗಳೂ ಆಗಿರುವುವು.

ಆತ್ಮೌಪಮ್ಯದ ಕಾಣ್ಮೆಯ ಪ್ರಯತ್ನದಲ್ಲಿ ತೊಡಗಿರುವುದೇ ಜೀವನ. ಕಂಡಷ್ಟೂ ಆತ್ಮದರೂಪ ಉನ್ನತವಾಗುತ್ತಲೇ ಇರುವುದು. ತನ್ನನರಿವುದು ಈ ದಿಶೆಯಲ್ಲಿ ಮೊದಲ ಹೆಜ್ಜೆ; ಲೋಕವನ್ನರಿವುದು ಎರಡನೆಯದು; ಲೋಕೇಶ್ವರನ ಕಾಣುವುದು ಮುಂದಿನ ಹೆಜ್ಜೆ. ತನ್ನಲ್ಲಿ ಅವನನ್ನರಸುವುದು ಮೇಲಿನ ಹೆಜ್ಜೆ. ಹೀಗೆ ಸಾಗುತ್ತದೆ ಜೀವನ. "ನಾನಿಲ್ಲದ ಮುನ್ನ ನೀನಿದ್ದೆಯೆಂದು ನಂಬದಯ್ಯ ನನ್ನ ಮನ." ಅರ್ಥೈಸುವರಿಲ್ಲದೆ ಇದ್ದ ಅರ್ಥದಂತೆ, ಪರಮಾತ್ಮನಿದ್ದೂ ಅವನನ್ನರಿಯದ ಮನವಿಲ್ಲದಿದ್ದರೆ ಅವನೂ ಇಲ್ಲದಂತೆಯೆ, ಅಲ್ಲವೆ. ಪುರಾಣಿಕರು ಈಶ್ವರನನ್ನು ಧೀರ ಸ್ವತಂತ್ರ ಸಿದ್ಧನ ರೂಪದಲ್ಲಿ ಕಂಡಿದ್ದಾರೆ. ಧೀರತೆಯಿಂದ ಸ್ವಾತಂತ್ರ್ಯ, ಇದನ್ನು ಪಡೆದ ಸಿದ್ಧ, ಇವನು ಶಾಶ್ವತ, ಸತ್ಯ, ರಸ ಕೆರಸ, ಚೆಲುವಿಗೆ ಚೆಲುವಾದ ಸಚ್ಚಿದಾನಂದ ಚೇತನ. ವಿಶ್ವದೇಹ ವಿಶ್ವಾತ್ಮನಾಗಿ ವಿಶ್ವಾತೀತನವ. ಅವನೇ ಹರಿಹರ ಸಿದ್ಧ ಬುದ್ಧ ಎಲ್ಲಾ. ಪರಮಾತ್ಮ ಒಂದು ಜಾತಿಮತದವನಲ್ಲ ಎಲ್ಲ ಮತದವನೂ ಅವನು, ಎಲ್ಲಾ ನಾಮಗಳು ಅವನವೇ. ಮನುಷ್ಯನೇ ಜಾತ್ಯಾತೀತನಾಗಿರುವಾಗ ದೇವರು ಅದಕ್ಕಂಟಿಕೊಳ್ಳುವುದುಂಟೆ! ಈಶ್ವರನು ಲೋಕದ ಸಮರ್ಥ ಸಂಯೋಜಕ. 'ಜೀವರಾಶಿ ಹುಟ್ಟಿಸುವ ಮುನ್ನ' ಅದಕ್ಕೆ ಬೇಕಾಗುವ ಎಲ್ಲಾ ವ್ಯವಸ್ಥೆಯನ್ನು ಮಾಡಿದ್ದಾನೆ, ಅನ್ನ-ನೀರು, ಅನಿಲ-ತೈಲ, ಔಷಧ-ಖನಿಜ ಇತ್ಯಾದಿ.

ಈ ಪರಾಶಕ್ತಿಯ ಪ್ರಕಟರೂಪ ಪ್ರಕೃತಿ. 'ನೀನೊಲಿದರೆ ಬ್ರಹ್ಮಗಿರಿಯಲ್ಲಿಯೂ ಕಾವೇರಿ ಕನ್ನಿಕೆಯರು ಉದಿಸುವರು. ನೀನೊಲಿಯದಿರೆ ನೂರಾರು ಅಡಿ ಬೋರು ಮಾಡಿದರೂ ನೀರು ದೊರೆಯದು...ಹೆಚ್ಚೇನು, ತಾನೆ ನಿನ್ನಿಂದ ತಾನೆ ಕಾಣದ ಸ್ವತಂತ್ರ ಧೀರ ಸಿದ್ಧೇಶ್ವರ ಕಾಣುವಂತಾದುದು.' ದೇವ

ಸೃಷ್ಟಿ ಚೆಲುವಿನ ಆಗರ. ಬೆಟ್ಟಬಾನು ಬಯಲು ಸಾಗರ. ಹೂತ ವನ ಫಲಿತವೃಕ್ಷ, ಮಧುರ ಸ್ವನ, ನಿತ್ಯನವೀನ ರೇಖಾವೈಖರಿ. ವರ್ಣವಿನ್ಯಾಸ ದೇವನ ಸೃಷ್ಟಿ ಚಿತ್ರದಲ್ಲಿ. ಆದರೆ ನರನು ಇಂದು ಇವೆಲ್ಲಕ್ಕೆ ವಿಮುಖನಾಗಿದ್ದಾನೆ. ಅದರಿಂದಾಗಿ ಅವನಲ್ಲಿ ಬರಡುತನ, ಕೊರಡುತನ, ಉರುಟು ಒರಟತನುಗಳುಂಟಾಗಿವೆ. ಈ ಅಪ್ರತಿಮ ಸೊಬಗಿನಲ್ಲಿ ಸುಖಕಾಣದ ಕಣ್ಣು ಕಿವಿ ಮನಗಳು ಮತ್ತಾವುದರಲ್ಲಿ ಚೆಲುವು ಕಾಣಬಹುದು. ಸತ್ವಯುತ ಬೀಜ, ಸುವೃಕ್ಷ, ಸುಫಲ. ಕಹಿಬೀಜದಿಂದ ಸಿಹಿಫಲ ವಾಗಬಹುದೆ ? 'ಯದ್ಭಾವಂ ತದ್ಭವತಿ' ದ್ವೇಷ ಮತ್ಸರ ತುಂಬಿದ ಮನದ ಕಾರ್ಯ, ಪ್ರೀತಿ ನಲುಮೆಯುಳ್ಳವನ ಚೆಲುವಿನ ಸೃಷ್ಟಿಗೆ ಸಮನಾದೀತೆ ?

'ತನುವಿನ ಕುರೂಪ, ಮನದ ಕುರೂಪ
ನುಡಿಯ ಕುರೂಪ ನಡೆಯ ಕುರೂಪ
ಆಡಳಿತದ ಕುರೂಪ ರಾಜಕೀಯದ ಕುರೂಪ

ಎನಿತು ಕುರೂಪಗಳು ನರರು ನಿರ್ಮಿಸಿದ ನಾಗರಿಕತೆಯಲ್ಲಿ ಒಂದೇ ಎರಡೇ? ಈ ಈ ನಾಗರಿಕತೆ ಕುರೂಪಗಳ ಕೂಪ. ಸೌಂದರ್ಯಾರಾಧನೆ, ನಿಸರ್ಗಾರಾಧನೆ, ವಿಶ್ವನಾಥನ ಪೂಜೆಯೆ ಆಗಿರುವುದು.

ಈಶ್ವರನಂತೆ ಆರಾಧ್ಯವಾದುದು ದೇಶ, ನಾಡು ದೇಶಪ್ರೇಮ ರಾಷ್ಟ್ರಭಕ್ತಿ ಈ ಯುಗದ ಒಂದು ಮೌಲ್ಯ. ರಾಜಕೀಯ ಆಡಳಿತವು ಪ್ರಬಲವಾಗಿ ಬೆಳೆದು ಸಂಘಟಿತವಾದ ಜನಬಲವನ್ನು ಉಂಟುಮಾಡಿತು. ಪುರಾಣಿಕರು ಅನೇಕ ವಚನ ಗಳಲ್ಲಿ ಭಾರತ, ಕರ್ನಾಟಕದ ಬಗ್ಗೆ ಅತೀವ ಪ್ರೀತಿಯನ್ನು ವ್ಯಕ್ತಪಡಿಸಿರುವರು. 'ಭಾರತವು ಸಂಕ್ಷಿಪ್ತ ಬ್ರಹ್ಮಾಂಡ'. ಜಗಜ್ಜನನಿ ತಾಯಿ ಭಾರತೆ ಎಂದು ಸಂಬೋಧನೆ. 'ಕನ್ನಡ ನಾಡಿನಲ್ಲಿ ಜನ್ಮವ ಬೇಡಿಕೊಂಡರೆ ಎಲ್ಲವನ್ನೂ ಬೇಡಿಕೊಂಡಂತೆ–ಮರು ಹುಟ್ಟಾದರೆ ಕನ್ನಡ ನಾಡಿನಲ್ಲಿಯೇ ಆಗಬೇಕು (ಮಲ್ಲಿಗೆ ಮರುದುಂಬಿಯಾಗಿ ಅಲ್ಲ ವಂತೆ). ಸುರಭಿಯಾಗಿ ಗೊಬ್ಬರವಾಗಿ ಕೃಷಿಋಷಿಯನ್ನು ಸೇವಿಸಲು, ಸುಟ್ಟರೆ ವಿಭೂತಿಯಾಗಿ ಹರಭಕ್ತರ ನೊಸಲ ಸಿಂಗರಿಸಲು ದೇಶದ ಸುಗತಿ ಸಮೃದ್ಧಿಯ ಬಗೆಯೂ ಹೇಳಿದ್ದು ಇದೆ. ಪರಿಶ್ರಮ ಐಕ್ಯ. ಅಚಲ ಮನೋನಿಶ್ಚಯಗಳಿಂದ ಏನು ತಾನೆ ಸಾಧ್ಯವಾಗದು. ಆದರೆ ಎಲ್ಲ ಬೇಡವಾದುವು ಬಂದಿವೆ "ತತ್ತ್ವರಹಿತ ರಾಜಕಾರಣ ಶ್ರಮರಹಿತ ಸಂಪತ್ತು, ನೀತಿಹೀನ ವ್ಯಾಪಾರ, ಶೀಲಶೂನ್ಯ ಶಿಕ್ಷಣ, ಮನಸ್ಸಾಕ್ಷಿಯಿಲ್ಲದ ಭೋಗ, ಮನುಷ್ಯತ್ವ ವಿರಹಿತ ವಿಜ್ಞಾನ, ತ್ಯಾಗವಿಹೀನ ಪೂಜನ– ಬೇಡವೆಂದ ಬಲಿಯಾದ ಬಾಪೂಜಿ; ವಿಷಮತೆಯ ವಿಷವೃಕ್ಷ ಕಡಿದಷ್ಟು ಕೊನರು ತ್ತಿದೆಯೆಂಬ ಆತಂಕ ಮನಕ್ಕೆ "ಸ್ವಂತ ಚಿಂತನೆಗಂಜಿ ಸ್ವನಿರ್ಣಯಕ್ಕೆ ಹಿಂಜರಿದು. ಯಾರನಾದರೂ ನಂಬಿ ನಿಶ್ಚಿಂತರಾಗಿರುವ ನಿರ್ಮಾನುಷತೆ ತೊಲಗಲಯ್ಯ ಈ ದೇಶ ದಿಂದ (ವ, ೪೫೨) ಎಂದು ಬೇಡಿಕೊಳ್ಳುತ್ತಾರೆ.

ಪ್ರಾಣಿಕರು ಬುದ್ಧಿಜೀವಿಯಾಗಿರುವಂತೆ ಭಾವನಾಶೀಲರೂ ಆಗಿದ್ದಾರೆ. ವಚನವನ್ನು ನಂಬಿಕೊಂಡಂತೆ ಕ್ರಿಯೆಯನ್ನು ನೆಮ್ಮಿಕೊಂಡದ್ದೂ ತಿಳಿದುಬರುವುದು. ಬಾಳಬಂಡಿಗೆ ಬುದ್ಧಿ ಭಾವಗಳೆರಡು ಗಾಲಿಗಳು; ಶೀಲವೇ ಶೀಲ "ಬಾಳ ಸಾರ್ಥಕತೆ ಬುದ್ಧಿಯ ಬಲದಿಂದಲೊ ಭಾವದ ಬಲದಿಂದಲೊ ಎರಡರ ಬಲದಿಂದಲೊ" ಬುದ್ಧಿಬಳ್ಳಿಗೆ ಸಂಶಯದ ಹೂ. ಫಲವಾಗದ ಹೂವದು. ಕ್ರಿಯೆ ಜೊತೆಗೂಡಿದರೆ ಆಗದಕ್ಕೆ ಫಲರುಚಿ. ಓದಿಸಿ ಬೋಧಿಸಿ ವಾದಿಸುವುದಕ್ಕಿಂತ, ಅರಿತು ಆಚರಿಸಿ ಆದರ್ಶವಾಗುವುದು ಮೇಲು" ನಿಷ್ಕ್ರಿಯ ಜ್ಞಾನಿಗಿಂತ, ಸಕ್ರಿಯ ಸಾಮಾನ್ಯ ಶ್ರೇಷ್ಠ.

ಈ ಯುಗದಲ್ಲಿ ಮಾನವ ಗುರುತಿಸಿ ರೂಢಿಸಿಕೊಂಡ ಗುಣಗಳಲ್ಲಿ 'ಸ್ವಾತಂತ್ರ್ಯ ಬಹುಮುಖ್ಯವಾದುದು. ಮೊದಲೆಂದೂ ಸಾಧ್ಯವಾಗದೇ ಇದ್ದುದ್ದು. ಈ ಶತಮಾನದಲ್ಲಿ ದೊರೆತಿದೆ. ಪರಕೀಯರ ಆಡಳಿತದಿಂದ ಬಿಡುಗಡೆ' ಎಲ್ಲಾರೀತಿಯ ಗುಲಾಮಗಿರಿಯಿಂದ ದೂರ. ಅಂಧಶ್ರದ್ಧೆ ಮತಾದಿಗಳ ಕಪಿಮುಷ್ಠಿಯಿಂದ ಮುಕ್ತಿ. ದೇಶಗಳ ಸ್ವಾತಂತ್ರ್ಯ ಸ್ತ್ರೀ ಸ್ವಾತಂತ್ರ್ಯ ಹೀಗೆ ಎಲ್ಲೆಲ್ಲೂ ಸ್ವಾತಂತ್ರ್ಯದ ಘೋಷಣೆ. ಇದು ಮಾನವನ ಬದುಕಿಗೊಂದು ಹೊಸಬೆಲೆಯಿಂದ **(Live and let live)** ಬದುಕು ಬದುಕಗೊಡು ಎಂತಹ ಕಷ್ಟ ಸಹಿಸಿಯೂ ಬದುಕು ತಾನು ಬದುಕುವುದೆಂದರೆ ಅನ್ಯರನ್ನು ಬದುಕಗೊಡುವುದೆಂದೇ ಅರ್ಥ. ಜೀವಿ ತಾನೊಬ್ಬನೇ ಇರಲಾರನು ಎಲ್ಲರೂ ಬೇಕು. 'ನನಗಾಗಿ ಎಲ್ಲರೂ ಎಂಬ ಸ್ವಾರ್ಥ ಬಿಟ್ಟು ಎಲ್ಲರಿಗಾಗಿ ನಾನೆಂಬುದನ್ನು ಬೆಳೆಸಿಕೊಳ್ಳಬೇಕು. ನಾನೆಲ್ಲರಿಗಾಗೆಂಬುದು ಸಮಷ್ಟಿಭಾವದ ಬೀಜ. ಸೋಪಲಿಜಂನ ಮೂಲಸೂತ್ರ ಸ್ವಾರ್ಥತ್ಯಾಗ ಸೇವಾಭಾವದ ಮುಖ್ಯಾಂಶ. ಆತ್ಮೌಪಮ್ಯ ಸಾಧಕ. ಮಾನವನ ವಿಕಾಸಕ್ಕೆ ಕಾರಣವೂ ಇದೆ. ಬದುಕಿಗೊಂದು ಗುರಿಬೇಕು, ಹಿರಿಯ ಗುರಿ ಸಾಧನೆಗಾಗಿ ಜೀವನ ವ್ಯತಿತವಾಗಬೇಕು 'ನಾಚಿನೇಳ್ಗೆಗೂ ಇಲ್ಲ ನುಡಿಯ ಮೇಲ್ಮೆಗೂ ಸಲ್ಲದ ಜೀವನಕ್ಕೆ ಬೆಲೆ ಯಾವುದಯ್ಯಾ" "ಏನ ಹೇಳಿದೆವು ಕೇಳಿದೆವೆಂಬುದು ಮುಖ್ಯವಲ್ಲ ಹೇಗೆ ಬಾಳಿದೆವೆಂಬುದು ಮುಖ್ಯ".

ನವ್ಯ ನವೀಕರಣದ ಸದ್ದುಗದ್ದಲ, ಇತ್ತೀಚೆಗೆ ಹೆಚ್ಚಾಗುತ್ತಿದೆ. ನಿತ್ಯ ಹೊಸದು ಬೇಕು. ಹಳದರಿಂದಲೇ ಹೊಸದರ ಜನ್ಮ. ಹಳೆಯದರ ರೂಪಾಂತರ ಹೊಸತು. "ಹಳೆಯ ಮರ ಹೊಸ ಚಿಗುರು(ವ.೪೨೭,೪೨೮)ಪಳೆಧಾತು ಹೊಸನಾಣ್ಯ. ಹಳೆತತ್ತ್ವ ಹೊಸ ನಿರೂಪಣೆ(ವ.೨೦೧)ಅದನ್ನೆ ಹೊಸದೆಂದು ಸ್ವೀಕಾರವಾಗುವುದು. ನವೀಕರಣ ಕೂಗೆಬ್ಬಿಸುವವರು ಮಾನವೀಕರಣದತ್ತ ಲಕ್ಷವೀಯಲೆಂಬುದು ಬರಹಗಾರನ ಬಯಕೆ. ಇದು ವಿಜ್ಞಾನ ಯುಗ. ವೈಜ್ಞಾನಿಕ ಸಂಶೋಧನೆಯಿಂದ ಜೀವನ ಸೌಕರ್ಯ ಸಾಕಷ್ಟು ಲಭಿಸಿದೆ. ಎಲ್ಲೆಲ್ಲೂ ಯಾಂತ್ರೀಕರಣವಾಗುತ್ತಿದೆ. "ಕೃಷಿಯ ಯಾಂತ್ರೀಕರಣ, ಕೈಗಾರಿಕೆಯ ಯಾಂತ್ರೀಕರಣನ, ಮನೆ ಮನೆಯ ಯಾಂತ್ರೀಕರಣದ ಉಬ್ಬಿನಲ್ಲಿ, ಮಾನವೀಕರಣಕ್ಕೆ ಮಹತ್ವವಿಲ್ಲವಾಯಿತ್ತೇನಯ್ಯಾ. ಅಣುವಿನ ವಿಭಜನೆ, ಮನದ

ವಿಶ್ಲೇಷಣೆ, ಕುಟುಂಬಯೋಜನೆಗಳ ಅಬ್ಬರದಲ್ಲಿ ಸ್ನೇಹ ಸಂಯೋಜನೆಗೆ ಸಮಯ ವಿಲ್ಲದಾಯಿತೇನಯ್ಯಾ" ಇದು ಈ ಯುಗದ ಮುಖ್ಯ ಸಮಸ್ಯೆ. ಎಲ್ಲದರ ಯಾಂತ್ರೀ ಕರಣದೊಂದಿಗೆ ಮನುಷ್ಯನೂ ಯಂತ್ರವಾಗುತ್ತಿದ್ದಾನೆ. ಇದು ಕಂಪ್ಯೂಟರ ಮಾನವ ಯುಗದಕಡೆಗೆ ಮುಂದುವರಿಯುತ್ತಿದೆ. ಬೇರೆ ಸಮಸ್ಯೆಗಿಂತಲೂ ಮಾನವ ತನ್ನ ಮಾನವೀಯತೆಯನ್ನು ಕಳೆದುಕೊಳ್ಳುತ್ತಿರುವುದು ಕ್ಲಿಷ್ಟ ಸಮಸ್ಯೆಯಾಗುತ್ತಿದೆ. ಅದಾಗುವುದು ಬೇಡ. ಹೃದಯ ಸಂಪನ್ನತೆ ಹೆಚ್ಚಿಸಿಕೊಳ್ಳಲಿ. ಮಾನವೀಯತೆ ಉಳಿಸಿಕೊಳ್ಳಲೆಂಬುದು ಪುರಾಣಿಕರ ಹಾರೈಕೆ. 'ತಜ್ಞತೆ ಬೆಳೆಯುತ್ತಿದ್ದಂತೆ ಕೃತಜ್ಞತೆ ಅಳಿಯುತ್ತಿದೆಯಯ್ಯಾ. ವ್ಯಕ್ತಿಗೌರವ ಹೆಚ್ಚುತ್ತಿರುವಂತೆಯೇ ಪರಸ್ಪರ ಗೌರವ ಅಳಿಯುತ್ತಿದೆಯಯ್ಯಾ ಸುಖ ಸಂಪದ ವರ್ಧಿಸುತ್ತಿರುವಂತೆ ಶಾಂತಿ ಸಂತೃಪ್ತಿಗಳು ಲುಪ್ತವಾಗುತ್ತಿವೆ'. ಹೀಗಾಗದೇ ಹೃದಯರಸ ಹೆಚ್ಚಲಿ. ಪ್ರೀತಿ ವರ್ಧಿಸಲಿ. ಸ್ನೇಹ ಸುರಿಯಲಿ, ಎಲ್ಲರೂ ಎಲ್ಲರ ಮೇಲೆ ರೊಚ್ಚಿಗೆದ್ದಿದ್ದಾರೆ ಯಾಕೆ ಈ ರೊಚ್ಚು ?

'ಎದೆಯ ಮೆಚ್ಚು ಮಾಯವಾಗಿ ಹೊಟ್ಟೆಯ ಕಿಚ್ಚು ಕಿಡಿಗೆದರಿದರೆ
ಹುಚ್ಚರ ಆಸ್ಪತ್ರೆಯಾಗದೇನಯ್ಯಾ ಜಗವೆಲ್ಲ'.

ಮನದಲ್ಲಿಯ ಚಿಲುಮೆಯ ಒರತೆ ಬತ್ತಿ ಹೋಗುತ್ತಿದೆ. ರೊಚ್ಚು ಹೆಚ್ಚುತ್ತಿದೆ ಅಷ್ಟೇ.

ಆತುರದ ಹೆಚ್ಚಳ. ಶೀಘ್ರಗಾಮಿತ್ವ, ಎಲ್ಲವೂ ಬೇಗ ಆಗಬೇಕು. ತಾಳು ವುದು ಆಗದು. ಆ ತೆರದ ಆಹಾರ ಪಾನೀಯ, ವಾಹನ ಮುಂತಾದ ಎಲ್ಲಾ ಸೌಕರ್ಯಗಳು ಉಂಟಾಗುತ್ತಿವೆಯಾದರೂ ಪುರಾಣಿಕರ ದರ್ಶನ ಬೇರೊಂದೆ ಆಗಿರು ವುದು. ಕ್ಷಿಪ್ರವಾಗಿ ಬೇಕೆಂದರೆ ಸಿಕ್ಕುವುದು ಚಪ್ಪರದ ಬದನೆಕಾಯಿ, ಬೆಲೆಯುಳ್ಳದು ಬೇಗ ದೊರೆಯದು. ಕಾಲಾವಕಾಶಬೇಕು. ತಾಳ್ಮೆಬೇಕು. ತಾಳಿಕೊಳ್ಳುವುದೇ ತಪ! ತಪದಿಂದ ಪರಿಪಕ್ವತೆ. ಮಗು ಬೇಕೆಂದರೆ ನವಮಾಸ ಕಾಯಬೇಕು. ಆತುರ ಮಾಡಿದರೆ? ರುಚಿಯಾದ ಫಲಕ್ಕಾಗಿ ಕಾಯಬೇಕು. ಇಲ್ಲದಿರೆ ಕಸುಗಾಯಿ, ಒಳ್ಳೆಯ ಬತ್ತಕ್ಕಾಗಿ ಕಾಯಬೇಕು, ಇಲ್ಲದಿದ್ದರೆ ಹೊಟ್ಟು ಇಲ್ಲ ಹಿಟ್ಟು ಅಲ್ಲದ ಜೊಳ್ಳು ದೊರೆಯುವುದು. ಅಂತೆಯೆ ಮಾನವ ಪರಿಪೂರ್ಣತೆಯೂ ದುರ್ಲಭ. ಪರಿಪೂರ್ಣನಾಗದಿದ್ದರೆ ಇರಲಿ ಪರಿಪಕ್ವವಾದರೂ ಆಗಲೆಂಬುದು ಹಾರೈಕೆಯಿದೆ. ಪರಿಪಕ್ವನಾಗುವುದೆಂದರೆ ಒತ್ತಿ ಹಣ್ಣು ಮಾಡುವುದಲ್ಲ, ತಪನದಿಂದ ಪಕ್ವಗೊಳ್ಳುವುದು. ಈ ಪರಿಪಕ್ವ ಮನ ಉಂಟಾದರೆ ಜನತೆಯ ಎಷ್ಟೋ ದುಃಖ ದೂರವಾಗುತ್ತವೆ, ಆತಂಕ ಕೊನೆಗೊಳ್ಳು ತ್ತದೆ.

ನಾಗರಿಕತೆ, ಪ್ರಗತಿ, ವಿಜ್ಞಾನದ ಹೆಸರಿನಲ್ಲಿ ಜೀವನ ಮೌಲ್ಯಗಳು ತಲೆಕೆಳ ಗಾಗುತ್ತಿರುವುದನ್ನು ಗಮನಿಸಿದ ಪುರಾಣಿಕರು ಅದೆಷ್ಟೋ ವಚನಗಳಲ್ಲಿ ಅವನ್ನು ತಿಳಿಸಿ

ಕೊಡಲು, ಉಳಿಸಿಕೊಳ್ಳಲು ಹೆಣಗಿದುದು ಕಂಡು ಬರುವುದು. ಹೀಗಾದ ದುಸ್ಥಿತಿಯನ್ನು ಕಂಡು ದುಃಖಿಸಿದುದು ಇದೆ.

'ಭ್ರಷ್ಟಾಚಾರವೇ ಶಿಷ್ಟಾಚಾರದ ವೇಷತೊಟ್ಟಿದೆ
ಶೀಲ ಶೂನ್ಯತೆಯೇ ಸಭ್ಯತೆಯ ಉಡುಪುಟ್ಟಿದೆ
ಶೋಷಣೆಯೇ ಸೌಮ್ಯವಾದದ ಸೋಗುಹಾಕಿದೆ
ಮೋಸವೇ ಲೇಸಿನ ಆಭಾಸ ಹುಟ್ಟಿಸಿದೆ
ಹುಸಿ ಪ್ರಚಾರ ಕಸಕ್ಕೆ ಕಸವರದ ಸ್ಥಾನಕೊಟ್ಟಿದೆ
ಜಾತೀಯತೆ ರಾಷ್ಟ್ರೀಯತೆಗೆ ನಿಧಿಗೆ ಸಿದ್ಧಗೊಳಿಸುತ್ತಿದೆ
ಸ್ವೈರವೃತ್ತಿ ಸ್ವತಂತ್ರಕ್ಕೆ ಸಮಾಧಿ ಕಟ್ಟುತ್ತಿದೆ'.

ಇಂತಹದೆಲ್ಲ ದೇಶವಾಸಿಗಳಿಗೆ ವಿಷದ ಉಣಿಸಾಗುತ್ತಿದೆ. ಇದಾಗಬಾರದು. "ಹಣ ಹರಟುತ್ತಿರುವಾಗ ಗುಣ ತೆಪ್ಪಗಿರದೇ ಇನ್ನೇನು ಮಾಡುವುದಯ್ಯಾ. ಮಾತು ಬೊಬ್ಬೆಯಿಕ್ಕಿ ಅಬ್ಬರಿಸುತ್ತಿರುವಾಗ ಕೃತಿ ಕಂಗೆಡದೆ ಮತ್ತೇನ ಮಾಡುವುದಯ್ಯಾ". ಅತಿ ಸ್ವಾರ್ಥ ಹಣದ ಉಬ್ಬರ, ರಾಜಕೀಯದ ಅಬ್ಬರ, ಬಡತನದ ಬವಣೆ, ಶೋಷಣೆ, ಹೃದಯ ಹೀನತೆ ಮೊದಲಾದವುಗಳಿಂದ ಈ ಜೀವನ ಯಾತನಾಮಯವಾಗಿದೆ. ಇದೆಲ್ಲವನ್ನು ಬಿಟ್ಟು ಒಳ್ಳೆಯತನ, ಒಳ್ಳೆಯ ಶಿಕ್ಷಣ, ಯೋಜನೆ ಹಾಕಿಕೊಂಡು ಬಾಳಿ ಜೀವನಸೌಖ್ಯ ಸಾಧಿಸಬೇಕೆನ್ನುವರು.

ಸಾಮರಸ್ಯ ಸಾಧಿಸಬೇಕು. ಪರಿವರ್ತನೆ ಕಾಲದ ಗುಣ. ಅದು ಆಗುತ್ತಲೇ ಇರುತ್ತದೆ. ಆದರೆ ಮಾನವಹಿತಕ್ಕಾಗಿ ಪರಿವರ್ತನೆಯಾಗುವಂತೆ ಮಾಡಬೇಕು. 'ಸ್ಥಿರ, ಅಸ್ಥಿರ' ಎರಡೂ ಹರನ ವರ. ಯಾವುದಾದರೂ ಆಗಲಿ, ಮನದ ಸ್ಥಿರತೆ ಕಾಯ್ದುಕೊಳ್ಳಬೇಕು. ಎಲ್ಲಾ ಕ್ಷೇತ್ರಗಳಲ್ಲಿ ನಡೆಯುತ್ತಿರುವ ಅಪಮೌಲ್ಯ **(devaluation)** ತಡೆಗಟ್ಟಬೇಕು. "ಶಿಕ್ಷಣ ಸಾರ್ವತ್ರೀಕರಣವಾಗಲಿ. ಆದರೆ ಸಾಧಾರಣೀಕರವಾಗದಿರಲಯ್ಯ...ಶಿಕ್ಷಣ ನಮ್ಮ ಕಣ್ಣೂ ಆಗಲಿ, ಕಾಲೂ ಆಗಲಿ ಪ್ರಗತಿ ಪಥವೂ ಜೀವನ ರಥವೂ ಸೈಪಿನ ಶಪಥ ವಾಗಲಿ" ಆದರೆ ಸರ್ವಾಧಿಕಾರಿಯ ಸೊತ್ತಾಗದಿರಲಿ. ಎಲ್ಲವೂ ಸರ್ವರ ಹಿತಸಾಧಕವಾಗಲೆಂಬುದು ಪುರಾಣಿಕರ ಹಾರೈಕೆ. ಇದು ಅವರ ಜೀವನ ದರ್ಶನ.

ಎಲ್ಲ ತನುಗಳ ಮನೆಗಳ ಒಳಗಡೆ
ನಿನ್ನ ಕರುಣೆಯ ಕಿರಣ ಪ್ರವೇಶಿಸಲಿ.
ಎಲ್ಲ ಮನಗಳ ಕಟ್ಟೆಕೆರೆಗಳಿಗೆ
ನಿನ್ನ ಒಲವಿನ ಹೊನಲು ಹರಿಯಲಿ.

ಎಲ್ಲೆಡೆಯೊಳಿರುವ ನೀನು
ಎಲ್ಲರೊಳು ದಿವ್ಯ ಪ್ರೇರಣೆಯಾಗಿ
ನನ್ನಿ ನಲ್ಮೆ ಚೆಲವು ನಲವುಗಳ
ಸುಗ್ಗಿಯನೆ ಬರಿಸಯ್ಯ.

# ಡಾ. ಸಿದ್ಧಯ್ಯ ಪುರಾಣಿಕರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ

ನೀಲಮ್ಮ ಕತ್ನಳ್ಳಿ, ಎಂ.ಎ.

ವಚನಗಳೆಂದರೆ ಶರಣರು ಆಡಿದ ಅನುಭವದ ಮಾತುಗಳು. ಅದರಲ್ಲಿ ಒಂದು ಮಾತೂ ವ್ಯರ್ಥವಾಗಿರದೆ, ಮಾತು ವಚನದಂತೆ, ಪ್ರಮಾಣದಂತೆ ಇರುವುದರಿಂದಲೇ, ಆ ಮಾತಿಗೆ ವಚನವೆಂದು ಕರೆದಿರುವುದು ಉಚಿತವಾಗಿದೆ. ಯಾರ ನಡೆಯಲ್ಲಿ ನುಡಿ, ನುಡಿಯಲ್ಲಿ ನಡೆ ಹಾಸು ಹೊಕ್ಕಾಗಿ, ಅನುಭಾವದ ಮೆರಗಿನಿಂದ ನುಡಿಗಡಣವಾಗಿ ಹೊರಹೊಮ್ಮಿ ಬರುವುದೋ ಅದುವೇ ವಚನ. ಅಥವಾ ಮಾತು. ಈ ಮಾತೇ ಮಂತ್ರ, ಜ್ಯೋತಿ, ಈ ಚಿಜ್ಯೋತಿಯ ಬೆಳಕಿನಲ್ಲಿ ಜನ ಜನ ಜತೆಗೂಡಿ ಇಡಿಯಾಗಬೇಕು. ಅಂತರಂಗ ಸ್ನೇಹದ ಗುಡಿಯಾಗಬೇಕು. ಮಾನವತೆ ಮೂರ್ತಿವೆತ್ತು ಆರಾಧನೆಗೊಳ್ಳಬೇಕು. ಇದು 'ವಚನೋದ್ಯಾನ'ದ ರಸಋಷಿಯ ಹೃದಯ ಹಂಬಲ.

ಡಾ. ಸಿದ್ಧಯ್ಯ ಪುರಾಣಿಕರು ಒಂದು ಕಡೆ, ಕನ್ನಡ ನಾಡಿನ ಮಹೋನ್ನತ ಕವಿಗಳಾಗಿ, ವಚನಕಾರರಾಗಿ ಅಖಂಡ ಕನ್ನಡಿಗರ ಪ್ರೀತಿಗೆ ಪಾತ್ರರಾದರೆ, ಇನ್ನೊಂದು ಕಡೆ ದಕ್ಷ, ಸಮರ್ಥ ಅಧಿಕಾರಿಗಳಾಗಿ, ನೊಂದವರ, ಬೆಂದವರ ಬಂಧುಗಳೆನಿಸಿಕೊಂಡಿದ್ದಾರೆ. ಹೀಗೆ ಕಾವ್ಯರಚನೆ ಹಾಗೂ ಆಡಳಿತ ಎರಡೂ ಕಾಯಕವನ್ನು ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆಯಿಂದ ನಿರ್ವಹಿಸಿ, ನಿಜವಾದ ಶರಣ ಜೀವನವನ್ನು ಅಪ್ಪಿ, ಅಪ್ಪಟ ಅಪರಂಜಿಯಾಗಿ ಬಾಳಿ ಬೆಳಗಿದ ಕೀರ್ತಿ ಇವರದು.

ಹರೆಯದ ಹುಮ್ಮಸ್ಸಿನಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿ ರಾಷ್ಟ್ರ ಭಕ್ತಿಯನ್ನು ಮೆರೆದ ಇವರು, ದಾಸ್ಯದ ಉರುಳಿನಿಂದ ಬಳಲಿ ಬೆಂಡಾದ ಪ್ರಜಾಕೋಟಿಯು, ಪ್ರೀತಿ–ವಿಶ್ವಾಸ, ಸುಖ–ಶಾಂತಿಯಿಂದ ಬಾಳಬೇಕೆಂದು ಹಂಬಲಿಸಿ, ಅದಕ್ಕಾಗಿ ಅಹರ್ನಿಶಿ ದುಡಿದರು. ಗಾಂಧೀಜಿಯವರು ಕಟ್ಟಬಯಸಿದ ರಾಮರಾಜ್ಯ ಇದಾಗಬೇಕೆಂದು ಅವಿಶ್ರಾಂತ ಶ್ರಮಿಸಿದರು. ಆದರೆ ಏನಾಗಬೇಕಾಗಿತ್ತೋ ಅದು ಆಗದೇ ಇದ್ದಾಗ, ಇವರ ಶರಣ ಹೃದಯ ಸಿಡಿಮಿಡಿಗೊಂಡು ಹೊರಹೊಮ್ಮಿ ಬಂದ ನುಡಿಗಡಣವಿದು.

"ವಿದ್ಯೆ ಬಂತು, ವಿನಯ ಹೋಯ್ತು.
ಬುದ್ಧಿ ಬಂತು, ಶ್ರದ್ಧೆ ಹೋಯ್ತು.
ಶ್ರದ್ಧೆ ಬಂತು, ವಿವೇಚನೆ ಹೋಯ್ತು.
ಸಮೃದ್ಧಿ ಬಂತು, ಸಂಸ್ಕೃತಿ ಹೋಯ್ತು.
ಶರೀರ ಸ್ವಾಸ್ಥ್ಯ ಬಂತು. ಚಿತ್ತಸ್ವಾಸ್ಥ್ಯ ಹೋಯ್ತು.
ದೀರ್ಘಾಯುಷ್ಯ ಬಂತು. ಜೀವನ ಸಾಮರಸ್ಯ ಹೋಯ್ತು.
ಬೋಧನೆ ಬಂತು. ಕೃತಿಯು ಹೋಯ್ತು.
ಜಾತಿ ಬಂತು, ಪ್ರೀತಿ ಹೋಯ್ತು.
ಸ್ವಾತಂತ್ರ್ಯ ಬಂತು ಸೌಜನ್ಯ ಹೋಯ್ತು
ಸಿದ್ಧಯ್ಯ ಪುರಾಣಿಕ ಬಂದ
ಸ್ವತಂತ್ರ್ಯ ಧೀರ ಸಿದ್ಧೇಶ್ವರ ಹೋದ."

ಜೀವನದಲ್ಲಿ ನಯ. ವಿನಯ, ಶ್ರದ್ಧೆ, ಸೇವೆ, ವಿವೇಚನೆ, ಸಂಸ್ಕೃತಿ-ಸತ್ಕೃತಿ, ಸಾಮರಸ್ಯ, ಪ್ರೀತಿ. ಸೌಜನ್ಯಗಳನ್ನು ಕಳೆದುಕೊಂಡರೆ, ಆತ್ಮಸಾಕ್ಷಾತ್ಕಾರವನ್ನು ಕಳೆದುಕೊಂಡಂತೆಯೇ. ಯಾವ ಯಾವ ಸದ್ಗುಣಗಳಿಂದ ಬಾಳಿಗೆ ಕಂಪು, ಜೀವನಕ್ಕೆ ಪೆಂಪು ದೊರೆಯುವುದೋ ಅವಿಲ್ಲದ ಸ್ವರಾಜ್ಯ ಸುರಾಜ್ಯವಾಗಲಿಕ್ಕಿಲ್ಲ – ವಿದ್ಯೆಯೊಡನೆ ವಿನಯ, ಸಮೃದ್ಧಿಯೊಡನೆ ಸಂಸ್ಕೃತಿ, ಜಾತಿಯೊಡನೆ ಪ್ರೀತಿ ಬೆರೆತರೆ, ಸ್ವಾತಂತ್ರ್ಯದೊಡನೆ ಸೌಜನ್ಯ ಬಂದು ನಮ್ಮ ಪ್ರಜಾರಾಜ್ಯ ರಾಮರಾಜ್ಯವಾಗುವುದರಲ್ಲಿ ಸಂದೇಹವಿಲ್ಲವೆಂದು ಮನಮುಟ್ಟುವಂತೆ ಹೇಳಿದ್ದಾರೆ. ಜನರಲ್ಲಿ ರಾಷ್ಟ್ರೀಯ ಪ್ರಜ್ಞೆ ಮೂಡಿಸಿ ಬದುಕಿನ ದಾರಿ ತೋರಿದ್ದಾರೆ.

ಈ ಬದುಕು ನೋವಿನಿಂದ ಕೂಡಿದ್ದು. ನಂಜಿನಿಂದ ತುಂಬಿದ್ದು. ಅದಕ್ಕಾಗಿಯೇ ಅವರು ನೋವನ್ನು ಹೀಗೆ ಆಹ್ವಾನಿಸಿದ್ದಾರೆ–

"ಏನಿಲ್ಲದೆ ಬದುಕಬಲ್ಲೆ
ನೋವಿಲ್ಲದೆ ಬದುಕಲಾರೆನಯ್ಯ
ಕೂರ್ಪರ ಅಗಲಿದ ನೋವು
ಗುರಿಯ ಮುಟ್ಟದ ನೋವು
ಆಶೆ ಅರಳದ ನೋವು
ಒಲವು ಫಲಿಸದ ನೋವು
ನಿನ್ನನರಿಯದ ನೋವು, ನನ್ನ ಮರೆಯದ ನೋವು
ಒಂದೊಂದು ಊಟೆಯಯ್ಯ ಜೀವನದ ಝರಿಗೆ !
ಬಾಳು ಎಚ್ಚರವಾಗುವುದಯ್ಯ ನೋವಿನ ಕರೆಗೆ
ನೋವೇ ಸಾಪೆಯಯ್ಯಾ ಬದುಕಿನ ತೊರೆಗೆ

ನೋವಿನ ಹೂವಿನ ಮಧುವಿಗೆ
ಮಧುಕರನಾಗುವ ಭಾಗ್ಯವ ಕರುಣಿಸಯ್ಯ
ಸ್ವತಂತ್ರ ಧೀರ ಸಿದ್ಧೇಶ್ವರ"

ಈ ಜೀವನ ಹೋರಾಟದಿಂದ ಕೂಡಿದ್ದು. ಬದುಕಿನಲ್ಲಿ ಕೇವಲ ಸುಖ-ಶಾಂತಿ, ಸಮೃದ್ಧಿಗಳಿದ್ದರೆ ಜೀವನ ನೀರಸವಾಗುವುದು ಖಂಡಿತ. ಬದುಕಿಗೆ ಮೆರಗು ಬರ ಬೇಕಾದರೆ ಕೊರಗು ಅತ್ಯವಶ್ಯ. ಸುಟ್ಟಷ್ಟೂ ಬಂಗಾರ ಪರಿಶುದ್ಧವಾಗುವಂತೆ, ಕಷ್ಟಗಳಿದ್ದಷ್ಟೂ ಮನುಷ್ಯನ ವ್ಯಕ್ತಿತ್ವ ದೊಡ್ಡದಾಗುತ್ತದೆ – ಮನಸ್ಸು ವಿಶಾಲವಾಗುತ್ತದೆ– ಅಂತೆಯೇ ಈ ಕವಿಗೆ ಜಗದ ನಂಜು ಕುಡಿದು ನಂಜುಂಡನಾಗುವ ಹೆಬ್ಬಯಕೆ. ಅದಕ್ಕಾಗಿಯೇ "ಏನಿಲ್ಲವೆ ಬದುಕಬಲ್ಲೆ. ನೋವಿಲ್ಲದೆ ಬದುಕಲಾರೆನಯ್ಯ" ಎಂದು ಸ್ವತಂತ್ರಧೀರ ಸಿದ್ಧೇಶ್ವರನಲ್ಲಿ ಮನಃಬುಗುವಂತೆ ಮನವಿ ಮಾಡಿಕೊಂಡಿದ್ದಾರೆ.

"ತುಕ್ಕು ಹಿಡಿದು ಉಳಿವುದಕ್ಕಿಂತ
ತಿಕ್ಕಿ ಬಳಸಿ ಅಳಿವುದು ಮೇಲಯ್ಯ
ಹುಳುಹತ್ತಿ ಕೊಳೆವುದಕ್ಕಿಂತ
ಭೂಮಿಯಲ್ಲಿ ಬೆರೆತು ಮೊಳೆವುದು ಮೇಲಯ್ಯ
ಇಟ್ಟು ನುಸಿ ಮುಟ್ಟಿ ನಶಿಸುವುದಕ್ಕಿಂತ
ತೊಟ್ಟು ತೊಳೆದು ಹರಿವುದು ಮೇಲಯ್ಯ
ಉಂಡು ಮಲಗಿ ಬೊಜ್ಜು ಬೆಳೆಸುವುದಕ್ಕಿಂತ
ದುಡಿದು ಮಾಡಿ ಮಡಿವುದು ಮೇಲಯ್ಯ
ಓದಿ ಬೋಧಿಸಿ ವಾದಿಸುವುದಕ್ಕಿಂತ
ಅರಿತು ಆಚರಿಸಿ ಆದರ್ಶವಾಗುವುದು ಮೇಲಯ್ಯ
ಸ್ವತಂತ್ರ ಧೀರ ಸಿದ್ಧೇಶ್ವರ
ಮಣಿಯನೆಣಿಸಿ ದಣಿಯುವುದಕ್ಕಿಂತ
ಜನರ ತಣಿಸಿ ಕುಣಿವುದು ಮೇಲಯ್ಯ"

ಈ ವಚನದಲ್ಲಿ ಪುರಾಣಿಕರು ಬಾಳ ಸೂತ್ರದ ಸುರುಳಿಯನ್ನೇ ಬಿಚ್ಚಿಟ್ಟಿದ್ದಾರೆ– ಜಗದ ಜೀವಿಗಳು ಬದುಕಿನಲ್ಲಿ ಸದುಪಯೋಗಕ್ಕಿಂತ, ದುರುಪಯೋಗಕ್ಕೆ ಹೆಚ್ಚು ಪಾಲಾಗುತ್ತಾರೆ – ಸ್ವಾರ್ಥದಿಂದ ಕೂಡಿದ ನಮ್ಮ ದೃಷ್ಟಿಗೆ ಅದು ಗೋಚರವಾಗುವುದಿಲ್ಲ– ನಾಳೆ, ನಾಡದ್ದು ಎಂದು ಬರಕ್ಕೆ ಬುತ್ತಿಯಕಟ್ಟಿ ಕೆಡಿಸಿದ್ದೇ ಹೆಚ್ಚಾಗಿದೆ– ಹಳಸಿದ್ದೇ ಬಹಳವಾಗಿದೆ.

ಜಂಗು ತಿಂದು ಕಬ್ಬಿಣ ಕೆಟ್ಟಂತೆ, ಹುಳ ಹತ್ತಿ ಕಾಳು ಹಾಳಾದಂತೆ, ನುಶಿಗಡಿದು ರೇಷ್ಮೆ ವಸ್ತ್ರ ತೂತು ಬಿದ್ದು ಛಿದ್ರ ಛಿದ್ರವಾದಂತೆ– ಮಾನವ ನಶಿಸಿ ಹೋಗುವ ಈ ದೇಹವನ್ನು ನೆರೆನಂಬಿ, ತುಂಬಿಬಾರದ ನಷ್ಟಕ್ಕೀಡಾಗುತ್ತಿದ್ದಾನೆ. ಜಂಗು ತಿನ್ನುವ

ಬದಲು ಕಬ್ಬಿಣ ತಿಕ್ಕಿ ಬಳಸಿ, ಸವೆದು ಸಾರ್ಥಕವಾಗಬೇಕು. ಭೂಮಿಯಲ್ಲಿ ಬಿದ್ದ ಬೀಜ ಮೊಳೆತು ಮರವಾಗಬೇಕು. ಸಕಲ ವಸ್ತ್ರಾಭರಣಗಳನ್ನು ತಿಕ್ಕಿ, ತೊಳೆದು, ಉಜ್ಜಿ, ಹಸನುಗೊಳಿಸಿ ತೊಟ್ಟು ನಲಿಯಬೇಕು. ಮಾನವ ಜೀವನದಲ್ಲಿ ದುಡಿದು, ಗಳಿಸಿ ತನ್ನ ಜೀವನವನ್ನು ಸಾರ್ಥಕಗೊಳಿಸಿಕೊಳ್ಳುವಂತೆ, ಪರಿಸ್ಥಿತಿಗೆ ತಕ್ಕಂತೆ ವಸ್ತುಗಳನ್ನು ಬಳಸಿ, ಅರಿದು, ಆಚರಿಸಿ, ಆದರ್ಶಪ್ರಾಯನಾಗಬೇಕು–ಕೇವಲ ಡಂಭಾಚಾರದಿಂದ ಜಪ–ತಪ ಮಾಡಿ ಓದಿ ತಿಳಿದವರೆಂದು ಹೆಮ್ಮೆಪಟ್ಟು, ವಾದಿಸಿ, ಕೊನೆಗೆ ಏನನ್ನೂ ಸಾಧಿಸದೆ ಶೋಧಿಸದೆ ತುಕ್ಕು ಹಿಡಿದ ಕಬ್ಬಿಣಕ್ಕಿಂತ, ಹುಳುಹತ್ತಿದ ಕಾಳಿಗಿಂತ, ನುಶಿಗಡೆದ ವಸ್ತ್ರಕ್ಕಿಂತ ಕೀಳಾಗಿ ಹೋಗುವುದು ಬೇಡವೆಂದು ಹೇಳಿದಾರೆ.

"ಸಾಯುವವರೆಗೂ ಶಾಸ್ತ್ರ ಹೇಳಿದರೇನು
ಸುಳ್ಳು ಹೇಳುವುದು ಬಿಡಲಿಲ್ಲ ಶಾಸ್ತ್ರಿಗಳ ಬಾಯಿ
ಸಾಯುವವರೆಗೂ ಪೂಜೆ ಮಾಡಿದರೇನು
ಭಕ್ತರ ಶೋಷಿಸುವುದು ಬಿಡಲಿಲ್ಲ ಪೂಜಾರಿಯ ಕೈ
ಹಲವು ಅರಸೊತ್ತಿಗೆಗಳು ಬಂದು ಹೋದಡೇನು
ಹಳ್ಳಿಗರ ಕೂಗು ಕೇಳಲಿಲ್ಲ ಡಿಳ್ಳಿಯ ಕಿವಿ
ಹಲವು ವರ್ಗಾವರ್ಗಿಗಳು ನಡೆದಿದ್ದರೇನು,
ಶ್ರೀಸಾಮಾನ್ಯರ ಕಂಗಾಲತನ ಕಾಣಲಿಲ್ಲ ಅಧಿಕಾರಿಯ ಕಣ್ಣು
ಹಲವು ಸಲ ನಗರಾಧ್ಯಕ್ಷನಾದಡೇನು
ಕೊಳಚೆ ಪ್ರದೇಶದ ದುರ್ಗಂಧವ ಅರಿಯಲಿಲ್ಲ ಪ್ರಥಮ ನಾಗರಿಕನ ಕೂಗು
ಸ್ವತಂತ್ರ ಧೀರ ಸಿದ್ಧೇಶ್ವರ, ಅಮೀಬಾ ಅರಿವಿನ ಜನ್ಮ ಪಡೆದಡೇನು
ಮೂಲ ವಿಕಾರಗಳ ಮರೆಯಲಿಲ್ಲ, ತೊರೆಯಲಿಲ್ಲ ಮೊಂಡಮಾನವ"

ಎಂದಿನಿಂದಲೂ ಸಮಾಜದ ಹಲವು ಹಂತದಲ್ಲಿ ದೊಡ್ಡವರೆಂಬ ಪ್ರತಿಷ್ಠಿತ ವ್ಯಕ್ತಿಗಳೇ ಹಲವು ಸಲ ಜನರನ್ನು ಸುಲಿಗೆ, ಶೋಷಣೆಗಳಿಗೆ ಗುರಿಪಡಿಸುತ್ತಿದ್ದಾರೆ. ಭೂಮಂಡಲವನ್ನು ಪರಿಪಾಲಿಸುವ ಅರಸನಿಗೆ ಪ್ರತ್ಯಕ್ಷ ದೇವತೆಯೆಂದು ಬಗೆದು ನಡೆದುಕೊಳ್ಳುವ ಕಾಲ ಇಂಗಿ ಹೋಗಿ. ಪ್ರಜಾ ಪ್ರಭುತ್ವ ಬಂದರೂ ಪ್ರಥಮ ಪ್ರಜೆಯ ಕೂಗು ಪ್ರಜಾಪ್ರತಿನಿಧಿಗೆ ಕೇಳಿಸದಂತಾಗಿದೆ. ಭರದಿಂದ ಬದಲಿಸುತ್ತಿರುವ ಇಂದಿನ ಸಮಾಜದಲ್ಲಿ ಶ್ರೀಸಾಮಾನ್ಯನು ಕಟ್ಟಿಕೊಂಡು ಬಂದ ಕಂಗಾಲದ ಗಂಟು ಮಾತ್ರ ಬದಲಿಸಲಿಲ್ಲ. ಇನ್ನೂ ಅವನ ಶೋಷಣೆ ಅವ್ಯಾಹತವಾಗಿ ನಡೆದೇ ಇದೆ. ಏನು ಬದಲಿಸಿದರೂ 'ಮೂಲ ವಿಕಾರಗಳ ಮರೆಯಲಿಲ್ಲ, ತೊರೆಯಲಿಲ್ಲ ಈ ಮೊಂಡ ಮಾನವ' ಎಂದು ಮಮ್ಮಲ ಮರುಗಿದ್ದಾರೆ. ಶ್ರೀಸಾಮಾನ್ಯನಿಗೋಸ್ಕರ ಕೊರಗಿದ್ದಾರೆ.

"ಹಸಿರಿದ್ದಲ್ಲಿ ಹಸಿರು ಹುಟ್ಟಿಸುವುದು ಮಾನವಗುಣ
ಹಸಿರಿದ್ದಲ್ಲಿ ಮೆದ್ದು ಮಲಗುವುದು ಪಶುಗುಣವಯ್ಯ
ಕೆಟ್ಟದ್ದು ಸರಿಪಡಿಸುವುದು ಮಾನವಗುಣ
ಸರಿಯಿದ್ದುದನ್ನು ಕೆಡಿಸುವುದು ದಾನವ ಗುಣವಯ್ಯ
ಕಸದಲ್ಲಿಯೇ ರಸ ಹುಟ್ಟಿಸುವುದು ಮಾನವಗುಣ
ಅರಿತವರನ್ನು ಅನಾದರಿಸುವುದು ಅಸುರ ಗುಣವಯ್ಯ
ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದು ಮಾನವಗುಣ
ಉಪಕಾರಿಗೆ ಅಪಕಾರವೆಸಗುವುದು ದೈತ್ಯಗುಣವಯ್ಯ
ಮಲಗಿದ್ದರೆ ಕುಳಿತು, ಕುಳಿತಿದ್ದರೆ ನಿಂತು, ಬಂದವರಿಗೆ ಸ್ಥಳ
ನೀಡುವುದು ಮಾನವಗುಣ
ಇನ್ನೊಬ್ಬರ ಸ್ಥಳವನ್ನು ಆಕ್ರಮಿಸಿ ಕಾಲುಚಾಚಿ ಮಲಗುವುದು
ನಿಶಾಚರ ಗುಣವಯ್ಯ
ಸ್ವತಂತ್ರಧೀರ ಸಿದ್ಧೇಶ್ವರಾ. ದುಃಖಿತರ ಕಂಬನಿ ತೊಡೆವುದು
ಮಾನವಗುಣ
ಸುಖಿಗಳಿಗೂ ಕಂಬನಿ ಬರಿಸುವುದು ರಾಕ್ಷಸ ಗುಣವಯ್ಯ."

ಪಚ್ಚಗಿದ್ದಲ್ಲಿ ತಿಂದು, ಬೆಚ್ಚಗಿದ್ದಲ್ಲಿ ಮಲಗುವ ಸೋಮಾರಿಗಳೇ ಎಲ್ಲ ಕಡೆಗೂ ಸಿಗುತ್ತಾರೆ. ಉಂಡಮನೆಯ ಗಳ ಎಣಿಸುವರಿಗೇನು ಕೊರತೆಯಿಲ್ಲ. ಇವರೆಲ್ಲರಲ್ಲಿ ನಾವು ಕಾಣುವುದು ಪಶುತನವನ್ನು, ಕೃತಘ್ನತೆಯನ್ನು, ರಾಕ್ಷಸೀ ಪ್ರವೃತಿಯನ್ನು. ಇಂಥವರ ಮಧ್ಯದಲ್ಲಿ ಸಿಕ್ಕು ಮಾನವತೆ ವಿಲಿವಿಲಿ ಒದ್ದಾಡುತ್ತದೆ. ಇಂದು ಮಾನವ ತನ್ನ ಜೀವನದ ಚಿರಂತನ ಮೌಲ್ಯಗಳನ್ನು ಕಳೆದುಕೊಂಡು ಕಡುಕಷ್ಟಕ್ಕೀಡಾಗಿ ಅರ್ಥ ಹೀನನಾಗಿದ್ದಾನೆ. ಪಶುವಾಗಿದ್ದಾನೆ, ದಾನವನಾಗಿದ್ದಾನೆ. ದಾನವನಾದ ಮಾನವನು ದೇವನಾಗುವುದು ಇಂದು ಎಲ್ಲಕ್ಕಿಂತ ಬಹು ಅವಶ್ಯವಿದೆ. ಅದಕ್ಕಾಗಿ ಅವನು ಹಸಿರು ಕ್ರಾಂತಿಗೆ ನಾಂದಿ ಹಾಕಿ, ಕಸದಲ್ಲಿ ರಸ, ವಿಷದಲ್ಲಿ ಅಮೃತವನ್ನು ತೆಗೆದು ಸುತ್ತಲಿದ್ದ ವರನ್ನು ಹತ್ತಿರ ಕರೆದು, ಅವರ ಕಷ್ಟ–ಕಾರ್ಪಣ್ಯಗಳಲ್ಲಿ ಭಾಗಿಯಾಗಿ, ಸಾಂತ್ವನವ ನೀಡಿ ಸಂತೈಸಿ, ಮಹೋನ್ನತ ವ್ಯಕ್ತಿಯಾಗಿ, ಒಂದು ಶಕ್ತಿಯಾಗಿ ಕಾಣಬೇಕು. ಇದು ಕವಿಯ ಆಶಯ, ಅಂತೆಯೇ ಅವರು ಇನ್ನೊಂದು ಕಡೆ,

"ಒಳಿತನ್ನು ಮಾಡಿದವರಿಗೆ ಒಳಿತು ಮಾಡುವವ ಮಾನವ, ಒಳಿತನ್ನು ಮಾಡದವರಿಗೂ ಒಳಿತನ್ನು ಮಾಡುವವ ಮಹಾಮಾನವ, ಕೆಡಕನ್ನು ಮಾಡಿದವರಿಗೂ ಒಳಿತನ್ನು ಮಾಡುವವ ದೇವ ಮಾನವರು" ಎಂದು 'ಮಾನವತೆ'ಯ ಬಗ್ಗೆ ಅರ್ಥ ಪೂರ್ಣವಾಗಿ ವಿವರಿಸಿದ್ದಾರೆ–ವಿವೇಚಿಸಿದ್ದಾರೆ.

"ಬದುಕುವದು ಸುಲಭ
ಬಾಳುವುದು ಬಹಳ ಕಠಿಣವಯ್ಯ
ಮನುಜನಾಗುವುದು ಸುಕರ
ಮಾನವನಾಗುವುದು ಬಹಳ ದುಷ್ಕರವಯ್ಯ
ಗೃಹ ಕಟ್ಟುವುದು ಘನಕಾರ್ಯವೇನಲ್ಲ-
ಗೃಹಸ್ಥನಾಗುವುದು ಕರ ಕಷ್ಟವಯ್ಯ
ಮದುವೆಯಾಗುವುದು ಮೋಜಿನ ವಿಷಯ
ಸಂಸಾರ ಸಾಗಿಸುವುದು ಗೋಜಿನ ವಿಷಯುವಯ್ಯ
ಗಳಿಸುವುದು ಬಹಳ ಸುಲಭ
ಆನಂದಿಸುವುದು ಅಪರೂಪವಯ್ಯ
ಉಪಕಾರ ಮಾಡುವುದು ಅರಿದೇನಲ್ಲ
ಉಪಕಾರ ಸ್ಮರಿಸುವುದು ವಿರಳವಯ್ಯ
ಸ್ವತಂತ್ರ ಧೀರ ಸಿದ್ಧೇಶ್ವರಾ ನಿನ್ನ ನಾಮ ಜಪಿಸುವುದು ಬಲು ಹಗುರ,
ನಿನಗೆ ಮನ ಒಪ್ಪಿಸುವುದು ಬಹು ಕಠಿಣವಯ್ಯ"

ಈ ವಚನದಲ್ಲಿ ಪುರಾಣಿಕರು ಬಾಳ ಕಡಲನ್ನು ಕಡೆದು ನವನೀತ ತೆಗೆದು ಸಮಾಜ ಪುರುಷನ ಮುಂದೆ ಇಟ್ಟಿದ್ದಾರೆ-ಪ್ರತಿಯೊಬ್ಬ ವ್ಯಕ್ತಿ ತನಗೆ ಲಬಿಸಿರುವ ಸುಖ-ಸಂತೋಷಗಳನ್ನು, ಕಷ್ಟ-ಕಾರ್ಪಣ್ಯಗಳನ್ನು, ತಾನು ಸಾಧಿಸಿರುವ ಕಾರ್ಯಕಲಾಪ ಗಳನ್ನು, ತಾನು ಶೋಧಿಸಿರುವ ಮಹತ್ತು-ಬೃಹತ್ತನ್ನು ಇನ್ನೊಮ್ಮೆ ಪರಾಮರ್ಶಿಸಿ, ಒಳಗಣ್ಣು ತೆರೆದು ನೋಡಬೇಕು ನಮ್ಮ ಬಾಳನ್ನು, ನಮ್ಮನ್ನು ನಾವೇ ಒರೆಗಲ್ಲಾಗಿ ತಿಕ್ಕಿ ಅರಿತುಕೊಳ್ಳಬೇಕು, ಅರೆಗಲ್ಲಾಗಿ ಅರೆದು ನೋಡಬೇಕು-ಆಗ ನಾವು, ಏನು ಮಾಡಿದೆವು, ಹೇಗೆ ನಡೆದೆವು, ಹೇಗೆ ಗಳಿಸಿದೆವು, ಹೇಗೆ ಬಳಸಿದೆವು, ಹೇಗೆ ಗೆದ್ದೆವು, ಏನಾಗಿದ್ದೆವು' ಎಂಬ ಅರಿವು ಮೂಡಿ ಬರುವುದು.

ಮಾನವನು ಹುಟ್ಟಿ ಬಂದಮೇಲೆ ಜೀವಿಸಲೇಬೇಕು, ಬದುಕಲೇಬೇಕು. ಅದು ಅವನ ಆದ್ಯ ಕರ್ತವ್ಯ. ಬದುಕುವುದೂ ಒಂದು ಕಲೆ. ಅದನ್ನು ಸಾಧಿಸುವುದು ಜೀವಿಯ ಪರಮಗುರಿ-ಇದು ಎಲ್ಲರಿಗೂ ಸಾಧಿಸಲು ಸಾಧ್ಯವಿಲ್ಲ. ಸುಲಭವೂ ಅಲ್ಲ-ಅದು ಅವನ ಪೂರ್ವಾರ್ಜಿತ ಪುಣ್ಯ. ದೈವೀಕೃಪೆ. ಗುರು-ಹಿರಿಯರ ಅನು ಗ್ರಹವೂ ಬೇಕೆಂದು ಹೇಳುತ್ತಾರೆ. ಹೀಗೆ ದೈವದ ಬೆಂಬಲ, ಪ್ರಯತ್ನದ ಹಂಬಲ ದಿಂದ ಬಾಳು ಬಂಗಾರ, ಜೀವನ ಶೃಂಗಾರ ಮಾಡಿಕೊಂಡವರೂ ಇದ್ದಾರೆ. ಇನ್ನು ನಾನಾ ತಾಪತ್ರಯಕ್ಕೀಡಾಗಿ, ಕಡು ಕಷ್ಟದಲ್ಲಿ ಸಿಲುಕಿ ತೊಳಲಿ, ಬಳಲುವವರಿಗೇನು ಕೊರತೆಯಿಲ್ಲ. ಇಂಥ ಅಭಾಗಿಗಳ ಕಂಡು, "ಬದುಕು ಜೀವಿಯೇ ಬದುಕು, ಕುತ್ತುಗಳ ತುತ್ತನುಂಗಿ ಬದುಕು, ನಿರಾಶೆಗಳ ನಂಜನೀಂಟಿ ಬದುಕು, ಏನಾದರೂ ಮಾಡಿ, ಎಂತಾದರೂ ಬದುಕು" ಎಂದು ನೊಂದು ನಿರಾಶನಾದ, ಬೆಂದು ಬೇಗುದಿಗೊಂಡ

ಜೀವಿಯ ಎದೆಯಲ್ಲಿ ಬದುಕಿನ ಗಂಧ ತೇಯ್ದು ಅಮೃತದ ಗುಟಿ ಹಾಕಿ ಚೇತನ ಗೊಳಿಸಿದ್ದಾರೆ.

"ಬಾ ದುಃಖವೇ ನನ್ನ ಉಸಿರಾಗು ನೀನು
ಬಾ ನಿರಾಶೆಯೇ ನನ್ನ ಆಶೆಯಾಗು ನೀನು
ಬಾ ಹಾನಿಯೇ ನನ್ನ ಲಾಭವಾಗು ನೀನು
ಬಾ ಅಕೀರ್ತಿಯೇ ನನ್ನ ಕೀರ್ತಿಯಾಗು ನೀನು
ಬಾ ತೆಗಳಿಕೆಯೇ ನನ್ನ ಹೊಗಳಿಕೆಯಾಗು ನೀನು
ಸ್ವತಂತ್ರ ಧೀರ ಸಿದ್ಧೇಶ್ವರನ ನಂಬಿದ ನನಗೆ
ಬೇರಾವುದು ಬೇಡಾವುದು ? ಇಷ್ಟವಾವುದು
ಅನಿಷ್ಟವಾವುದು ?"

ಜೀವನ ಸುಖ-ದುಃಖಗಳ ಆಗರ, ಸಾಗರ. ಸುಖದಲ್ಲಿ ಹಿಗ್ಗದೇ, ಕಷ್ಟದಲ್ಲಿ ಕುಗ್ಗದೇ, ಹೊಗಳಿಕೆ-ತೆಗಳಿಕೆಗಳಲ್ಲಿ ನಲಿದು, ನಿರಾಶನಾಗದೇ, ಲಾಭ-ನಷ್ಟಗಳಲ್ಲಿ, ತನ್ನೆದೆಯ ತೂಕವನ್ನು ಕಳೆದುಕೊಳ್ಳದೇ ಸದಾ ಸಮಾಧಾನದಿಂದ ಸಂತಸದಿಂದ ಇರಬೇಕು-ಇದೇ ಯೋಗ, ಭೋಗ-ಸಮನ್ವಯ ದೃಷ್ಟಿ.

"ಈ ವಿಶಾಲವಾದ ವಿಶ್ವದಲ್ಲಿ ನಾನೊಬ್ಬನೇ ಬದುಕಿಲ್ಲ, ನನ್ನೊಬ್ಬನಿಗಾಗಿಯೇ ಈ ಲೋಕವಿಲ್ಲ, ನಾನು ಒಂಟಿಯಾಗಿ ಬದುಕುವಂತಿಲ್ಲ, ನಾಲ್ವರಿಗಂಟಿಕೊಳ್ಳದೇ ಜೀವಿಸುವಂತಿಲ್ಲ, ಲಕ್ಷಜನ ಅಪ್ರತ್ಯಕ್ಷವಾಗಿ ದುಡಿಯದೇ ನನಗೆ ಬೇಕಾದುದೆಲ್ಲವ ಪಡೆಯುವಂತಿಲ್ಲ". ಎಂದು ಹಲವು ಜನರನ್ನು ಹತ್ತಿರ ಕರೆದು ಹೇಳಿದ ಮಾತುಗಳು ಎಷ್ಟು ಹಿತವಾಗಿವೆ–ಮಿತವಾಗಿವೆ.

"ನಿತ್ಯ ಹಲವು ಹನ್ನೆರಡು ಜನರ
ಹಲವು ಸಲ ಕಾಣುವೆ ಓ ಜೀವಿ
ನಿನ್ನ ನೀನೇ ಕಾಣುವಿಯಾ ಒಮ್ಮೆಯಾದರೂ
ದಿನ ದಿನವೂ ಇಣಕಿ ಹಣಿಕಿ ನೋಡದೆ ಅನ್ಯರ ಬಾಳಿನೊಳಕ್ಕೆ
ನಿನ್ನ ಬದುಕ ಬೆದಕಿ ನೋಡಿದೆಯಾ ಒಮ್ಮೆಯಾದರೂ.
ಅನ್ಯರ ಹೃದಯೇಂಗಿತವನ್ನರಿಯಲು ಹಾತೊರೆವೆ ಹವಣಿಸುವೆ
ಹಲ್ಲಣಿಸುವೆ, ನಿನ್ನೆದೆಯನರಿತುಕೊಳ್ಳಲು ಹಾರೈಸಿದೆಯಾ ಒಮ್ಮೆ
ಯಾದರೂ
ಇವನಾರು ಇವನಾರು ಇವನಾರು ಎಂದು ನೀನು ಕೇಳದ ದಿನವಿಲ್ಲ
ನಾನಾರು ? ಎಂದು ಅರಿದೆಯಾ ಒಮ್ಮೆಯಾದರೂ.
ಅವರವರ ಅವಗುಣಗಳನೆತ್ತಿ ತೋರಿಸುವೆ ನಿತ್ಯ
ನಿನ್ನ ದುರ್ಗುಣಗಳತ್ತ ದೃಷ್ಟಿ ಹರಿಸಿದೆಯಾ ಒಮ್ಮೆಯಾದರೂ.

ನೀನು ಸ್ವತಂತ್ರ ಧೀರ ಸಿದ್ಧೇಶ್ವರನ ದಾನವುಣ್ಣದ ದಿನವಿಲ್ಲ
ಅವನ ನೀ ನಿಜವಾಗಿ ನಂಬಿದೆಯಾ ಒಮ್ಮೆಯಾದರೂ"

ಜೀವನವನ್ನು ಒಳಹೊಕ್ಕು, ಬಾಳನ್ನು ಆಳಕ್ಕಿಳಿದು ನೋಡದೇ, ಪರೀಕ್ಷಿಸದೇ, ಅವರು ಹಾಗೆ, ಇವರು ಹೀಗೆ ಎಂದು ತನ್ನ ತನವನ್ನು ಕಳೆದುಕೊಂಡು ತಿರುಗುವ ಕುನ್ನಿ ಮಾನವನಿಗೆ, 'ನಿನ್ನ ದುರ್ಗುಣಗಳತ್ತ ದೃಷ್ಟಿ ಹಾಯಿಸಿದೆಯಾ ಒಮ್ಮೆ ಯಾದರೂ' ಎಂದು ಕಿವಿ ಹಿಂಡಿ ಕೇಳಿದ್ದಾರೆ-'ಗುಡ್ಡದಷ್ಟು ಪುಸ್ತಕಗಳನ್ನು ಓದಿ ಕಡ್ಡಿಯಷ್ಟು ಕೆಲಸ ಮಾಡದಿದ್ದರೆ ಪುಸ್ತಕದ ಕಪಾಟಿಗಿಂತ ಕಡೆಯಲ್ಲವೇ ? ಎಂದು ಮೂದಲಿಸಿದ್ದಾರೆ.' ಊರಿಗೊಂದು ವಾಗ್ದಾನಮಾಡಿ ನೂರಕ್ಕೊಂದನ್ನು ನೆರವೇರಿಸ ದಿದ್ದರೆ ಡಂಗುರ ಹೊಡೆವವನಿಗಿಂತ ಕೀಳಲ್ಲವೇ ? ಎಂದು ಗದ್ದರಿಸಿದ್ದಾರೆ.

'ಭದ್ರವಿರುವುದನ್ನು ಛಿದ್ರಿಸುತ್ತ, ಗಟ್ಟಿಯಾವುದನ್ನೂ ಮಾಡದೇ ಇರುವವ ಮೂಷಿಕನಿಗಿಂತ ಹೇಸಿಯಲ್ಲವೇ ? ಎಂದು ಹೀಯಾಳಿಸಿದ್ದಾರೆ. ದೋಷಗಳನ್ನು ಮಾತ್ರ ದೊಡ್ಡದಾಗಿ ತೋರಿಸಿ, ಲೇಸುಗಳನ್ನು ಲೆಕ್ಕಿಸದಿರೆ ದೂಷಕನಿಗಿಂತಲೂ ದೋಷಿಯಲ್ಲವೆ ? ಎಂದು ಎಚ್ಚರಿಸಿದ್ದಾರೆ. ಅಂತರ-ರಾಷ್ಟ್ರೀಯ ವೇದಿಕೆಗಳಿಂದ, ವಿಶ್ವ ಬಂಧುತ್ವ. ಉಪದೇಶಿಸಿ ಮನೆಯ ಜನರಲ್ಲಿಯೇ ಜಗಳ ಹಚ್ಚಿದರೆ ಠಕ್ಕರ ಗುರುವಲ್ಲವೇ ? ಎಂದು ಮನನೊಂದು ನುಡಿದಿದ್ದಾರೆ. ಇಷ್ಟೆಲ್ಲ ಜ್ಞಾನವಿಟ್ಟುಕೊಂಡು ಸಾಲದ್ದಕ್ಕೆ 'ವಿಜ್ಞಾನಿಯೆಂದು ಜಂಬಕೊಚ್ಚಿಕೊಂಡು,' ಬೆಕ್ಕು ಅಡ್ಡ ಹಾಯುತ್ತಲೇ ಗಕ್ಕನೇ ನಿಂತರೆ, ಅಜ್ಞಾನಿಗಿಂತ ಕಡೆಯಲ್ಲವೇ ? ಎಂದು ಗಹಗಹಿಸಿ ನಕ್ಕಿದ್ದಾರೆ'- ಹೀಗೆ ಸಮಾಜದಲ್ಲಿ ಅಡಗಿದ್ದ ದೋಷಗಳನ್ನು ಒಂದೊಂದಾಗಿ ತೆಗೆದು, ಎಳೆ ಎಳೆ ಯಾಗಿ ಬಿಡಿಸಿ ಇಳೆಯ ಮಾನವಗೆ ತಿಳಿವು ನೀಡಿದ್ದಾರೆ.

ಎಲ್ಲಕ್ಕಿಂತಲೂ ಇಂದು ನಮ್ಮ ಸಮಾಜ ಜೀವನದ ವ್ಯವಸ್ಥೆ ತೀರಾ ಕೆಟ್ಟು ಹೋಗಿದೆ. ಇದರಿಂದ ಸಂಘಜೀವಿಯಾದ ಮಾನವ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಲುಕಿ ಕೊಂಡಿದ್ದಾನೆ. ಯಾರು ತನಗೆ ಹಿತವರು, ಯಾರ ಮಾತು ಕೇಳಬೇಕು ಎಂಬುದು ತಿಳಿಯದಾಗಿದೆ. ಎಲ್ಲದರಲ್ಲಿಯೂ ಅನುಮಾನ, ಅಪವಾದಗಳನ್ನು ಎದುರಿಸುತ್ತಿದ್ದಾನೆ. ಇಷ್ಟೊಂದು ಕ್ಲಿಷ್ಟತೆ ತಲೆದೋರಿರುವುದು.

"ತತ್ವರಹಿತ ರಾಜಕಾರಣ, ಶ್ರಮರಹಿತ ಸಂಪತ್ತು, ನೀತಿಹೀನ ವ್ಯಾಪಾರ, ಶೀಲಶೂನ್ಯ ಶಿಕ್ಷಣ, ಮನಸಾಕ್ಷಿಯಿಲ್ಲದ ಭೋಗ, ಮನುಷ್ಯತ್ವರಹಿತ ವಿಜ್ಞಾನ, ತ್ಯಾಗವಿಹೀನ ಪೂಜನ"ದಿಂದಲೇ. ಈ ಸಪ್ತಪದಿಯನ್ನು ಅನುಷ್ಠಾನಕ್ಕೆ ತರದಿದ್ದರೆ ನಮ್ಮ ದೇಶಕ್ಕೆ ನಷ್ಟ ಖಂಡಿತವೆಂದು ಪೂಜ್ಯ ಗಾಂಧೀಜಿಯವರು ಹೇಳಿದ ಮಾತು ಅಕ್ಷರಶಃ ಸತ್ಯವಾಗಿದೆ ಈ ಮಾತನ್ನು ಮನಗಂಡೇ ಪುರಾಣಿಕರು,

"ಮುಖಂಡರೆ ಶಿಖಂಡಿಗಳಾದರೆ
ಹಿಂಬಾಲಕರು ಇನ್ನೇನಾಗಬೇಕಯ್ಯ

ಶ್ರೇಷ್ಠರೇ ಕನಿಷ್ಠರಾದರೆ, ಕನಿಷ್ಠರು ಮತ್ತೇನಾಗಬೇಕಯ್ಯ
ರಕ್ಷಕರೇ ಭಕ್ಷಕರಾದರೆ, ರಾಕ್ಷಸರು ಎಲ್ಲಿಗೆ ಮುಟ್ಟಬೇಕು"

ಎಂದು ಪ್ರಶ್ನಿಸಿದ್ದಾರೆ. ಅಲ್ಲದೆ,

"ಕೆಲವರು ಸ್ವತಂತ್ರವಾಗಿರಲೆಂದು ಬಹುಜನರು ಬಂಧನದಲ್ಲಿ
ಬಳಲಬೇಕೇನಯ್ಯ, ಕೆಲವರು ಒಡೆಯರಾಗಿರಲೆಂದು
ಬಹುಜನರು ಬಡವರಾಗಿಯೇ ಬಳಲಬೇಕೇನಯ್ಯ
ಕೆಲವರು ಉಪ್ಪರಿಗೆಗಳಲ್ಲಿರಬೇಕೆಂದು ಬಹುಜನರು ತಿಪ್ಪೆಗಳಲ್ಲಿಯೇ
ತೊಳಲ ಬೇಕೇನಯ್ಯ
ಕೆಲವರು ಅರಿವಿನ ದೊರೆಗಳಾಗಿರಬೇಕೆಂದು ಬಹುಜನರು
ಮರಳಿನ ಕುರಿಗಳಾಗಿಯೇ ಉಳಿಯಬೇಕೇನಯ್ಯ
ಕೆಲವರು ಶ್ರೇಷ್ಠರೆನಿಸಿ ಮೆರೆಯಬೇಕೆಂದು
ಬಹುಜನರು ಕನಿಷ್ಠರಾಗಿಯೇ ಕೊಳೆಯಬೇಕೇನಯ್ಯ
ಬಹುಜನ ಹಿತಾಯ, ಬಹುಜನ ಸುಖಾಯ, ಎಂಬುದು
ಗಗನ ಕುಸುಮವಾಗಿಯೇ ಬೆಳೆಯಬೇಕೇನಯ್ಯ
ಹೇಳಯ್ಯಾ ಹೇಳಯ್ಯಾ ಎಂದು ನಿನ್ನ ಸೃಷ್ಟಿಯಲ್ಲಿ ವಿಷಮತೆಯ
ಗರಗಸವಳ್ಳಿ ಅಳಿದು ಸಮತೆಯ ಬಯಕೆಯ ಬಳ್ಳಿ ಬೆಳೆವುದು
ಹೇಳಯ್ಯ ಸ್ವತಂತ್ರ ಧೀರ ಸಿದ್ಧೇಶ್ವರಾ"

ಪಟ್ಟಭದ್ರ ಹಿತಾಶಕ್ತಿಗಳ ಎದೆಯ ಗುಂಡಿಗೆ ಅರಳುವಂತೆ ಕಾವು ಕೊಟ್ಟಿದ್ದಾರೆ–ಓಟು ಕೊಟ್ಟಿಲ್ಲ —

"ಓಟುಗಳ ಬೆಲೆ ಬೆಳೆಯುತ್ತಿದೆ
ನೋಟುಗಳ ಬೆಲೆ ಇಳಿಯುತ್ತಿದೆಯಯ್ಯ
ಎಲ್ಲವೂ ತುಟ್ಟಿಯಾಗುತ್ತಿದೆ
ಮಾನವ ಮಾತ್ರ ಅಗ್ಗವಾಗುತ್ತಲಿಹನಯ್ಯ
ಭೂವ್ಯೋಮಾಕಾಶಗಳ ಅಂತರ ಕಡಿಮೆಯಾಗುತ್ತಿವೆ
ಮನುಜ ಮನುಜರ ನಡುವೆ ಅಂತರ ಹೆಚ್ಚುತ್ತಿದೆಯಯ್ಯ
ವಿದ್ಯೆಬುದ್ಧಿ, ವಿಜ್ಞಾನ ಪರಿಜ್ಞಾನ ಹೆಚ್ಚುತ್ತಿವೆ
ಪ್ರೀತಿ ಮೈತ್ರಿ, ವಿಶ್ವಾಸಗಳ ಪ್ರಸಾರ, ಪ್ರಚಾರ ಹೆಚ್ಚುತ್ತಿವೆ
ಬಗೆಯ ವಿಸ್ತರಣೆ ಕಡಿಮೆಯಾಗುತ್ತಿಹುದಯ್ಯ
ಊರೂರಿಗೆ ಯೋಜನೆಗಳು ಮೊರೆಯುತ್ತಿವೆ
ಮನ ಮನಗಳ ಸಂಯೋಜನೆ ಮರೆಯುತ್ತಿದೆಯಯ್ಯ
ಮನೆ ಮನೆಗೂ ರೇಡಿಯೋ, ಟೆಲಿವಿಜನ್ ಬರುತ್ತಿವೆ

ನರ ನರರ ಸಂಬಂಧ ಕರಗುತ್ತಿದೆಯಯ್ಯ
ಸ್ವತಂತ್ರ ಧೀರ ಸಿದ್ದೇಶ್ವರಾ ಹೊರಗೆ ಸಿರಿ ಹೆಚ್ಚಿದಷ್ಟೂ
ಒಳಗೆ ಬಡತನ ಬೆಳೆಯುತ್ತಿದೆಯಯ್ಯ"

ತತ್ವರಹಿತ ರಾಜಕಾರಣದಿಂದ ಮಾನವ ಜೀವನ ಅಗ್ಗವಾಗಿ, ಜೀವನಾವಶ್ಯಕ ವಸ್ತುಗಳ ಬೆಲೆ ಹೆಚ್ಚಾಗತೊಡಗಿದೆ—ವಿಜ್ಞಾನದಿಂದ ಜಗತ್ತು ಕಿರಿದಾಗಿದೆ. ಮನುಜ, ಮನುಜರ ನಡುವೆ ಅಂತರ ಹೆಚ್ಚಾಗತೊಡಗಿದೆ-ಸೌಲತ್ತುಗಳು ಹೆಚ್ಚಿದಂತೆ, ದೌಲತ್ತಿನ ಆಶೆ ಹೆಚ್ಚಾಗಿದೆ-ಅದರಿಂದ ಹೊರಗಿನ ಸಿರಿ ಹೆಚ್ಚಿ, ಒಳಗಿನ ಬಡತನದ ಬೇರು ಆಳಕ್ಕಿಳಿದಿದೆ-ಆದರೂ ಮಾನವ ಇಂದು ಪ್ರಗತಿಯ ಹೆಸರಿನಲ್ಲಿ ಪ್ರಳಯದತ್ತ ಸಾಗಿದ್ದಾನೆ. ಒಮ್ಮೆ ಅವನು ನೈಜಸ್ಥಿತಿಯನ್ನು ನೋಡಿಕೊಂಡು ಮುಂದುವರಿಯಲೆಂದು ಸಮಾಜ-ಜೀವನದ ನಿಲುಗನ್ನಡಿಯನ್ನು ಇಲ್ಲಿ ಎತ್ತಿ ಹಿಡಿದಿದ್ದಾರೆ. ಪುಣ್ಯವಿದ್ದವರು ನೋಡಿಕೊಂಡು ಮುಂದುವರಿಯಲಿ —

"ಉಂಡುದಕ್ಕಿಂತ ಉಳಿಸಿದ ಎಂಜಲು ಹೆಚ್ಚು
ಕೆಲವರ ಬೆಳ್ಳಿ ತಟ್ಟೆಗಳಲ್ಲಿ
ಬಳಿದು ತಂದ ಎಂಜಲವೇ ಪರಮ ಪ್ರಸಾದ
ಅಸಂಖ್ಯ ಅಭಾಗಿಗಳ ಮಣ್ಣು ಮಿಟ್ಟೆಗಳಲ್ಲಿ
ಏನು ಕುಡಿದರೆ ಹಸಿವೆಯಾದೀತೆಂಬ ಚಿಂತೆ ಹಲವರಿಗೆ
ಏನು ತಿನ್ನುವುದು ಹಸಿವೆ ಹಿಂಗಿಸಲು ಎಂಬ ಚಿಂತೆ ಬಹುಜನರಿಗೆ
ಅಜೀರ್ಣವಾಗಿ ಆಸ್ಪತ್ರೆಗೆ ಹೋಗುವವರು ಕೆಲವರು,
ಹಸಿವೆಯಿಂದ ಕುಸಿದು ಆಸ್ಪತ್ರೆಗೆ ಸೇರುವವರು ಬಡಜನರು
ಹಸಿವೆಯೇ ಇಲ್ಲ ಎನ್ನುವವರಿಗೆ ಹಸಿವೆಯ ಹಸಾದವನ್ನಿತ್ತು
ಹಸಿವೆಯೇ ಹಿಂಗದೆಂಬುವವರಿಗೆ ಸಾಕಷ್ಟು ಅಶನವನ್ನು ನೀಡಾ
ಸ್ವತಂತ್ರ ಧೀರ ಸಿದ್ಧೇಶ್ವರಾ"

"ಬಡವ ಬಲ್ಲಿದರಲ್ಲಿದ್ದ ವ್ಯಷ್ಟಿ-ಸಮಷ್ಟಿ ಜೀವನದ ಸ್ಪಷ್ಟ ಚಿತ್ರಣ ಇಲ್ಲಿ ಒಡಮೂಡಿಬಂದಿದೆ. ಒಬ್ಬರಿಗೆ ಒಂದಿದ್ದರೆ, ಮತ್ತೊಬ್ಬರಿಗೆ ಮತ್ತೊಂದಿಲ್ಲ-ಜಗದ ಈ ವೈಚಿತ್ರ್ಯಕ್ಕೆ ಬೇಸತ್ತು, ಜನರ ಈ ತಾಪತ್ರಯ ಕಳೆಯಯ್ಯಾ ಎಂದು ಸ್ವತಂತ್ರ ಧೀರ ಸಿದ್ಧೇಶ್ವರನ ಮೊರೆಹೊಕ್ಕಿದ್ದಾರೆ. ಒಬ್ಬರ ಎಂಜಲು ತಿನ್ನಲಾರೆನೆನ್ನುವ, ಇನ್ನೊಬ್ಬರದನ್ನು ಕಸಿದು ತಿನ್ನಲಾರೆನೆನ್ನುವ, ಎಂಥ ಸಂಕಟ ಬಂದರೂ, ದುಡಿದೇ ತಿನ್ನುವ, ಪಡೆದುದರಲ್ಲಿ ಹರಿದು—ಹಂಚಿ ತಿನ್ನುವ ಹಸನಾದ, ಹದನಾದ ಬುದ್ಧಿ, ಬಲ ಈ ನರನಿಗೆ ಬರಲಿ ಹೊಸಕಾಲದ ಶುಭೋದಯವಾಗಲಿ ಎಂದು ಹಾತೊರೆದಿದ್ದಾರೆ"-ಅಂತೆಯೇ

"ಇನ್ನೊಬ್ಬರ ಕೈತುತ್ತು ಕಸಿದು ತಿನ್ನುವುದಕ್ಕಿಂತ
ಹಸಿದಿರುವುದೇ ಹಸನವಯ್ಯ
ಇನ್ನೊಬ್ಬರ ಹೆಸರು ಕೆಡಿಸಿ ಹೆಸರಾಗುವುದಕ್ಕಿಂತ
ಹೆಸರಿಲ್ಲದಿರುವುದೇ ಹಸನವಯ್ಯ
ಇನ್ನೊಬ್ಬರ ತುಳಿದು ಮುಂದೆ ಹೋಗುವುದಕ್ಕಿಂತ
ಹಿಂದೆ ಉಳಿದಿರುವುದೇ ಹಸನವಯ್ಯ
ಅನ್ಯರ ಹಿತದಲ್ಲಿ ಅವಿರತ ತನ್ನ ಹಿತವನ್ನು ಕಾಣದವ
ತನ್ನ ಹಿತವನ್ನೇ ತಿಳಿಯದ ತಿಳಿಗೇಡಿಯಯ್ಯ
ಸ್ವತಂತ್ರ ಧೀರ ಸಿದ್ಧೇಶ್ವರ"

ಇನ್ನೊಂದು ಕಡೆ,

"ದುರಾಚಾರಿಯಾದ ಪಂಡಿತನಿಗಿಂತ
ಸದಾಚಾರಿಯಾದ ಪಾಮರನೇ ಮೇಲಯ್ಯ
ಹರಿದು ತಿನ್ನುವ ಬಲ್ಲಿದನಿಗಿಂತ
ಹಂಚಿ ಉಣ್ಣುವ ಬಡವನೇ ಲೇಸಯ್ಯ
ಸಣ್ಣತನದ ಸಾಹಿತಿಗಿಂತ
ದೊಡ್ಡತನದ ಓದುಗನೇ ವಂದ್ಯನಯ್ಯ"

ಎಂದು ಹೇಳಿದ್ದು ಔಚಿತ್ಯಪೂರ್ಣವಾಗಿದೆ ಇನ್ನು ಸಮಾಜದಲ್ಲಿ ಕಾಣಿಸಿಕೊಳ್ಳುವ ಅಪೂರ್ಣತೆ, ಅಸಮಾನತೆಗಳನ್ನು ಕುರಿತು,

"ಮುತ್ತು ಅರಿಸಿಯ ಕೊರಳ ಹಾರ ಸೇರುತ್ತದೆ
ಮುತ್ತನಿತ್ತ ಸಿಂಪು ಮಾತ್ರ ಇದ್ದಲ್ಲಿಯೇ ಒದ್ದಾಡುತ್ತದೆ...
ರೈತ ಬೆಳೆದುದೆಲ್ಲ ಏನೇನೋ ಆಗಿ ಎಲ್ಲೆಲ್ಲೋ ಹೋಗುತ್ತದೆ
ಆದರೆ ಬೆಳೆದ ರೈತ ಮಾತ್ರ ಇದ್ದಲ್ಲಿಯೇ ಉಳಿಯುತ್ತಾನೆ..."

ಹೀಗೆ ಜೀವನದಲ್ಲಿ ಯಾರು ಯಾರೋ ಮುಂದೆ ಬಂದು, ಯಾವುದು ಯಾವುದೋ ಎಲ್ಲಿಗೋ ಹೋಗಿ ಮುಟ್ಟಿದರೂ, ಪ್ರತ್ಯಕ್ಷ ಕಷ್ಟದ ಕುಲುಮೆಯಲ್ಲಿ ಒದ್ದಾಡುವವರು, ಹೊರಳಾಡುತ್ತಿರುವವರು ಮಾತ್ರ ಇದ್ದಲ್ಲಿಯೇ ಇರುತ್ತಾರೆ, ಇರುತ್ತವೆ. ಇದು ನಿನ್ನ ಸೃಷ್ಟಿಯ ಪ್ರಗತಿಯ ಲಕ್ಷಣವೇ ! ಏನು ಹೇಳು !! ಎಂದು ಕೇಳಿದ್ದಾರೆ.

'ಹೋಮರನಂಥ ವಿಶ್ವಕವಿಗಳು ಭಿಕ್ಷೆಬೇಡಬೇಕು
ಹೆಂಡ ಮಾರುವವರು ಲಕ್ಷಾಧೀಶರಾಗಬೇಕು
ಇದೇ ನಿನ್ನ ಸಾಮಾಜಿಕ ನ್ಯಾಯವೇನಯ್ಯ
ದುಡಿದವರಿಗೆ ದುಗ್ಗಾಣಿ, ದುಡಿಸಿಕೊಳ್ಳುವವರಿಗೆ ಅಷ್ಟೈಶ್ವರ್ಯ
ಇದುವೇ ನಿನ್ನ ಆರ್ಥಿಕ ವ್ಯವಸ್ಥೆ ಏನಯ್ಯ

ಮಾನವೋದ್ಧಾರಕರಿಗೆ ವಿಷದ ಬಟ್ಟಲು, ಗುಂಡು,
ಮಾನವೋತ್ಪೀಡಕರಿಗೆ ಸುಖ ಸಂಪದ
ಇದೇ ನಿನ್ನ ನೀತಿಯೇನಯ್ಯ"

ಎಂದು ಸಿಡಿಲಿನಂತೆ ಗುಡುಗಿದ್ದಾರೆ. ಎಂದಿನಿಂದಲೂ ನಡೆದು ಬಂದ ಅನ್ಯಾಯ, ಅನಾಚಾರ, ಅಪ್ರಾಮಾಣಿಕತೆಗಳನ್ನು ಪ್ರತಿಭಟಿಸಿದ್ದಾರೆ. ಒಳ್ಳೆಯವರ ಜೀವನ, ಅವರು ಅನುಭವಿಸುವ ಕಷ್ಟ, ನುಂಗುವ ನಂಜನ್ನು ನೀನು ನೋಡಿಯೂ ನೋಡದಂತೆ ಕುಳಿತಿರುವೆಯಲ್ಲ ! ಭಲೇ ! ನೀನೊಬ್ಬ ಸಿದ್ಧ; ಇಂಥದರಲ್ಲಿ ನೀನೇ ಪ್ರಸಿದ್ಧ.

"ಹೆಂಡದ ಹರವಿಯನ್ನು ಪೂಜಿಸುವವರು ಹಲವರುಂಟು
ಹಾಲಿನ ಹರವಿಯನ್ನು ಗೌರವಿಸುವವರ ಹೆಚ್ಚಿಸಯ್ಯ
ಹಣಕ್ಕೆ ಅಡ್ಡ ಬೀಳುವವರಿಗೆ ಕೊರತೆಯಿಲ್ಲ
ಗುಣಕ್ಕೆ ಮಣಿಯುವವರ ಹೆಚ್ಚಿಸಯ್ಯ
ಗೆದ್ದ ಎತ್ತಿನ ಬಾಲ ಹಿಡಿಯುವವರು ಸಾಕಷ್ಟಿದ್ದಾರೆ
ಬಿದ್ದ ಎತ್ತಿನ ಆರೈಕೆ ಮಾಡುವವರ ಹೆಚ್ಚಿಸಯ್ಯ
ಉಳ್ಳವರ ಓಲೈಸುವವರು ಬೇಕಾದಷ್ಟಿದ್ದಾರೆ
ಇಲ್ಲದವರಿಗೆ ಉಳು ಬಾಳು ಒದಗಿಸುವವರ ಹೆಚ್ಚಿಸಯ್ಯ"

ತನ್ನತನವೆಂಬುದಿಲ್ಲದೆ ಪ್ರಸಂಗ ಬಂದಂತೆ ಅಧಿಕಾರದಲ್ಲಿರುವವರ ಬೆನ್ನು ಹತ್ತುವ, ಮೂರ್ಖ ಮಾನವರನ್ನು ಕಂಡು ಕನಲಿದ್ದಾರೆ. ನಿಮಗೆಲ್ಲ ಬುದ್ಧಿ ಭೇಟಿಯಾಗ ಬೇಕಾದರೆ ಇನ್ನೆಷ್ಟು ಕಾಲ ಬೇಕು ? ಎಂದು ಕೊರಗಿದ್ದಾರೆ – ಇನ್ನು ಮೇಲಾದರೂ ನೀವು, "ದುಷ್ಟರ, ಭ್ರಷ್ಟರ ದಾಸರಾಗಿ ಮೃಷ್ಟಾನ್ನ ಸೇವಿಸುವುದಕ್ಕಿಂತ, ಸಜ್ಜನರ ಸೇವಿಸಿ, ಮಜ್ಜಿಗೆ ಅಂಬಲಿ ಉಂಬುದು ಲೇಸು, ಮಾನಹೀನರಾಗಿ ನೂರು ವರುಷ ಬದುಕುವುದಕ್ಕಿಂತ, ಮಾನಧನರಾಗಿ ಮೂರುದಿನ ಬದುಕಬೇಕೆಂದು ಕರೆ ಕೊಟ್ಟಿದ್ದಾರೆ–

"ಎಲ್ಲ ಪ್ರಾಣಿಗಳಿಗೂ ಒಂದೊಂದೆ ಪ್ರಾಣಿತನ
ಒಂದೊಂದೇ ಪಶುಗುಣ
ನನಗೇಕೆ ಇನಿತೊಂದು ಪಶುಗುಣಗಳನ್ನಿತ್ತಿಹೆಯಯ್ಯ
ವಿಷಯದ ಹಸಿರು ಮೆಲುವಾಗ ಹಸು, ಮೇಕೆ, ಹುಲ್ಲೆ
ಕಾಮದ ಬೂದಿಯಲ್ಲಿ ಹೊರಳಾಡುವಾಗ ಕತ್ತೆನಾನಯ್ಯ
ಒಡೆಯ ನುಡಿದಾಗೊಮ್ಮೆ ಕೌಲೆತ್ತು ನಾನಾಗುವೆ
ಆಮಿಷದ ಅಡಗನಗಿವಾಗ ನಾಯಿಯಯ್ಯ
ಮದವೇರಿದಾಗ ಮದ್ದಾನೆ, ಕುಟಿಲಧ್ಯಾನದಲ್ಲಿರುವಾಗ ಬಕ
ಕಳ್ಳ ತಂತ್ರಕ್ಕಿಳಿವಾಗ ನರಿ, ಕದ್ದು ಕುಡಿವಾಗ ಬೆಕ್ಕು,
ಕಚ್ಚುವಾಗ ಹಾವು, ಕುಕ್ಕುವಾಗ ಹದ್ದು, ಕುಟುಕುವಾಗ ಚೇಳು,

ಪಸಿವಾದಾಗ ತೋಳ, ದೂಷಕವಾದಾಗ ಮೂಷಕ
ಶೋಷಕನಾದಾಗ ಕೀಟಕ, ಮಸದ ಕೈಗೊಂಬೆಯಾದಾಗ ಮರ್ಕಟ
ಎನಿತೊಂದು ಪಶುತನಗಳ ಪಶುಗುಣಗಳ ಮೊಟ್ಟೆ ನಾನು
ನನ್ನ ಪ್ರಾಣಿಗುಣಗಳು, ನಿನ್ನ ಕಲ್ಯಾಣಗುಣಗಳಾಗಿ
ಪರಿವರ್ತಿತ ವಾಗಲಯ್ಯ ಸ್ವತಂತ್ರ ಧೀರ ಸಿದ್ಧೇಶ್ವರಾ"

ಕಾಡಾರಣ್ಯದಲ್ಲಿ ಅದೆಷ್ಟೊ ಕ್ರೂರಮೃಗಗಳು, ಕಾಡು ಪಶುಗಳು ಸ್ವೇಚ್ಛೆಯಾಗಿ ಅಲೆಯುತ್ತಿದ್ದಂತೆ, ಮಾನವನ ಅಂತರಂಗದಲ್ಲಿ ಅಡಗಿ ಅಲೆಯುತ್ತಿದ್ದ ಅದೆಷ್ಟೋ ಪಶು, ಪ್ರಾಣಿಗಳನ್ನು, ಒಳಗಣ್ಣು ತೆರೆದು ನೋಡಿದ್ದಾರೆ ಪುರಾಣಿಕರು. ನನ್ನಲ್ಲಿ ಎಷ್ಟೊಂದು ಪಶುತನ ಅಡಗಿಸಿರುವೆ ತಂದೆ ! ಎಂದು ಮರುಗಿದ್ದಾರೆ, ಕೊರಗಿದ್ದಾರೆ.

ದಡ್ಡತನದಿಂದ ಅಡ್ಡದಾರಿ ತುಳಿಯುತ್ತಿದ್ದ ರಾಜಕುಮಾರರ, ಮನಃ ಪರಿವರ್ತನೆಗಾಗಿ, ವಿಷ್ಣುಶರ್ಮನು ಪಂಚತಂತ್ರ ಕಥೆಗಳನ್ನು ಹೇಳುತ್ತಾನೆ. ಇಲ್ಲಿ ಬರುವ ಎಲ್ಲ ಪ್ರಾಣಿಗಳಿಗೆ, ಮನುಷ್ಯತ್ವದ ಆರೋಪ ಹೊರಿಸಿ ಕಥೆಗಳನ್ನು ಹೆಣೆದಂತೆ, ಪುರಾಣಿಕರು ಈ ವಚನದಲ್ಲಿ ಮನುಷ್ಯನ ಸ್ವಭಾವಕ್ಕೆ ತಕ್ಕಂತೆ ಒಂದೊಂದು ಪ್ರಾಣಿಗಳನ್ನು ನಿದರ್ಶನಕ್ಕಾಗಿ ತಂದು ನಿಲ್ಲಿಸುತ್ತಾರೆ. ಮಾನವನಲ್ಲಿ ಎಷ್ಟೊಂದು ಪ್ರಾಣಿತನ, ಪಶುಗುಣವನ್ನು ತಂದೊಟ್ಟಿ ಮಾನವತೆಯನ್ನು ಎಲ್ಲಿ ಅಡಗಿಸಿಟ್ಟಿರುವೆ. ಈ ಮಾನವತೆಯ ಪ್ರಕಟಣೆಗಾಗಿ ಈ ಪರೀಕ್ಷೆಯನ್ನು ಒಡ್ಡಿರುವಿಯಾ ?– ತಂದೆ ! ಅಡಿಗಡಿಗೆ ನೀನೊಡ್ಡಿದ ಈ ಸತ್ತ್ವ ಪರೀಕ್ಷೆಯಲ್ಲಿ "ನನ್ನತನ" ಕಳಕೊಂಡು ಪ್ರಾಣಿತನ ಉಳಿದರೆ ನಾನೊಬ್ಬ ಹುಸಿ ಹೊಂಡ– ಜಗದ್ಭಂಡ – ಎನಿಸದಿರು ಎಂದು ಸಿದ್ಧ ಪುರುಷನಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ– ಹಾಗೇ ಮುಂದುವರಿದು– ಹೀಗೆಂದ ಮಾತ್ರಕ್ಕೆ ನೀನು ನನ್ನನ್ನು ಅಲಕ್ಷಿಸಿರುವಿಯೆಂದು, ಬುದ್ಧಿಪೂರ್ವಕವಾಗಿ ಪರೀಕ್ಷಿಸುತ್ತಿರುವಿ ಎಂದು ಆರೋಪಿಸಲಾರೆ. ನೀನು ನನ್ನ ಕರೆದೆ, ಎಚ್ಚರಿಸಿದೆ, ಅಧಿಕಾರದ ಅಬ್ಬರದಲ್ಲಿ, ಶ್ರೀಮಂತಿಕೆಯ ಸೊಕ್ಕಿನಲ್ಲಿ, ನಿನ್ನ ಧ್ವನಿ ನನಗೆ ಕೇಳಿಸಲಿಲ್ಲ. ನಿನ್ನ ರೂಪ ನಾನೋಡಲಿಲ್ಲ. ಅದನ್ನು ನಾವು ಅವರ ಮಾತಿನಲ್ಲೇ ಕೇಳೋಣ

"ನೀನೆನ್ನ ಕರೆಯಲಿಲ್ಲವೆನ್ನಲೆ ? ಎನ್ನೆ
ನೀನು ಕರೆದೆ, ಮತ್ತೆ ಮತ್ತೆ ಕರೆದೆ
ಅನಾಥ ಶಿಶುವಿನ ಆಕ್ರೋಶವಾಗಿ ಕರೆದೆ
ಮಹಾರೋಗಿಯ ನರಳಿಕೆಯಾಗಿ ಕರೆದೆ
ಪರಿತ್ಯಕ್ತೆಯ ಕಂಬನಿಯಾಗಿ ಕರೆದೆ
ಬಡವನ ನಿಟ್ಟುಸಿರಾಗಿ ಕರೆದೆ
ಪತಿತನ ಪದಹೃತನ ಕ್ರಂದನವಾಗಿ ಕರೆದೆ

ಭಗ್ನ ಮಾನವನ ಉದ್ವಿಗ್ನ ಸ್ವರವಾಗಿ ಕರೆದೆ
ಯಾವ ಸ್ವರದಿಂದ ಕರೆದರೂ ಕಿವಿಗೊಡದ ಮೊಂಡ ನಾನಯ್ಯ
ಪಾಖಂಡಿ ನಾನಯ್ಯ ಸಿರಿಯ ತೇಗಿನಲ್ಲಿ, ಸುಖದ ಕೇಕೆಯಲ್ಲಿ
ವಿಲಾಸದ ಸಿಳ್ಳಿನಲ್ಲಿ, ಅಧಿಕಾರದ ಅಬ್ಬರದಲ್ಲಿ, ಬಲದ ಉಲುಹಿನಲ್ಲಿ
ಕರೆಯಲು ನಿನಗೆ ಇಷ್ಟವಿಲ್ಲ
ನಿನಗೆ ಪ್ರಿಯವಾದ ದುಃಖಿತರ ಸ್ವರದಲ್ಲಿ ಕರೆದರೆ ನನಗೆ ಕೇಳಿಸುವುದಿಲ್ಲ
ಎಂತಯ್ಯಾ, ಎಂದಯ್ಯಾ, ನನಗೆ ನಿನ್ನ ಸ್ವರ ಕೇಳಿಸುವುದು ?
ಹೇಗಯ್ಯಾ, ಯಾವಾಗಯ್ಯಾ, ನಾನು ನಿನ್ನ ಹತ್ತಿರವಾಗುವುದು
ಸ್ವತಂತ್ರ ಧೀರ ಸಿದ್ಧೇಶ್ವರಾ"

"ನೀನೋ ಹಿರಿದಪ್ಪ ಅಂಗಡಿಯನಿಕ್ಕಿ ಕುಳಿತಿರುವೆ
ಆದರೆ ನಾನಲ್ಲಿಗೆ ಗ್ರಾಹಕನಾಗಿ ಬರಲಾರೆನಯ್ಯ
ನನ್ನ ಕಲಬೆರಕೆಯ ಸರಕು ಅಲ್ಲಿ ಸಲ್ಲದೆಂಬ ಸಂಕೋಚ
ನಿನ್ನ ಸರಕಿಗೆ ತರಲು ನೀನೊಪ್ಪುವ ನಾಣ್ಯ ನನ್ನಲಿಲ್ಲವೆಂಬ ನಾಚಿಕೆ
ನಿತ್ಯ ಹೊರಡುವೆ ನಿನ್ನ ಅಂಗಡಿಯತ್ತ
ನಿತ್ಯ ಮರಳುವೆ ಅರ್ಧ ದಾರಿಯಲ್ಲೇ
ಒಂದನ್ನು ಕೊಟ್ಟು, ನಿನ್ನ ಅಂಗಡಿಯ ಏನೆಲ್ಲವನ್ನು
ಕೊನೆಗೆ ನಿನ್ನನ್ನೂ ಕೊಳ್ಳಬಹುದು
ಆದರೆ ಅದನ್ನು ಕೊಡಲು ಸಿದ್ಧನಾಗದ ಸಿದ್ಧಯ್ಯ
ಆವ ಮುಖದಿಂದ ನಿನ್ನ ಅಂಗಡಿಯತ್ತ ಬರಬಲ್ಲನಯ್ಯ
ಸ್ವತಂತ್ರ ಧೀರ ಸಿದ್ಧೇಶ್ವರಾ"

ಜಗವೆಂಬುದು ಒಂದು ಅಂಗಡಿ-ಇದರ ಸೂತ್ರಧಾರನೇ ಅಂಗಡಿಕಾರ. ಈ ಅಂಗಡಿಯಲ್ಲಿ ಅನುಭಾವವೆಂಬ ರತ್ನ, ನಡೆ - ನುಡಿಗಳೆಂಬ ವಜ್ರ - ವೈಢೂರ್ಯ, ಮಾತು-ಮೌನಗಳೆಂಬ ಬೆಳ್ಳಿ-ಬಂಗಾರ ನಿತ್ಯ ದಿನಸಿಗಳಾದ ಬೇಳೆ-ಬೆಲ್ಲ, ಎಣ್ಣೆ-ಬೆಣ್ಣೆ-ಚಿನ್ನದದಿರು, ಬೆತ್ತ-ಬಿದಿರು, ಇನ್ನೇನು ಬೇಕೋ ಬಾಳುವೆಗೆ ಅದೆಲ್ಲವೂ ತವನಿಧಿಯಾಗಿ ತುಂಬಿದೆ– ಒಪ್ಪ ಓರಣರಾಗಿ ಜೋಡಿಸಿದೆ–ಈ ಅಂಗಡಿಗೆ ಬಂದು ಸಾಮಾನು ಕೊಂಡುಕೊಳ್ಳಲು ನನ್ನಲ್ಲಿ 'ಕಾಯಕ'ದ ಹಾಗ ಇಲ್ಲ ಕಪ್ಪು ಹಣದ ಕಂತೆಯಿದೆ –ನನ್ನ ದಿನಸು ಮಾರಲು ಬರಲೇ ಎಲ್ಲವೂ ಕಲಬೆರಕೆ. ಛಿ ! ನಾಚಿಕೆ– ಈ ಅಂಗಡಿಕಾರ ತುಂಬ ಜಾಣ– ನಿತ್ಯ ದುಡಿಮೆಯ ನಿಷ್ಠೆಯ ಹಣವಿದ್ದರೆ ಮಾತ್ರ ಸಾಮಾನು ಕೊಡುವನು–ಇಲ್ಲವೆಂದರೆ ಇಲ್ಲವೆನ್ನುವುದಿಲ್ಲ– ಆದರೆ ಲೆಕ್ಕ ಮಾತ್ರ ಚಾಚೂ ತಪ್ಪದೇ ಬರೆದಿಡುವನು– ಅಂತೆಯೋ ಹೀಗೆ ಹೇಳುತ್ತಾರೆ.

"ನಿನ್ನ ಉದ್ದರಿಯ ಖಾತೆಯಲಿ
ನನ್ನ ಹೆಸರೇ ಮೊದಲ ಪುಟದಲಿ
ಉಳಿದವರು ಅಷ್ಟಿಷ್ಟು ಉದ್ದರಿಯ ಮುಟ್ಟಿಸಿದರೂ
ನಾನೊಂದು ಪೈಸೆಯನ್ನೂ ಪಾವತಿ ಮಾಡಲಿಲ್ಲವಯ್ಯ
ಬಡ್ಡಿ ಕೇಳದ ದೊಡ್ಡ ಮನದ ಶೆಟ್ಟಿ ನೀನು
ಬಡ್ಡಿ ಹಾಕಿದ್ದರೆ ಏನಾಗುತ್ತಿದ್ದೆನೋ ?
ಏಸು ಜನ್ಮ ಬಡ್ಡಿಗಾಗಿಯೇ ದುಡಿಯುತ್ತಿದ್ದೆನೋ
ಉದ್ದರಿಗಾಗಿ ನನ್ನನ್ನು ಮಾರುವ, ಕೊಳ್ಳುವ, ಕೌಶಿಕ, ನಕ್ಷತ್ರಕ
ವೀರ ಬಾಹುಕರನ್ನು ಕಳಿಸಯ್ಯ ಸ್ವತಂತ್ರ ಧೀರ ಸಿದ್ದೇಶ್ವರಾ"

"ನಿನ್ನಡಿಯ ಹತ್ತಿರ ಎಡೆ ಪಡೆದ ಸುದಿನ ಸನ್ನಿಹಿತವಾಗಲಿ ಎಂದು ಹಂಬಲಿಸಿ ಹೊರಟಿದ್ದಾರೆ ರಹದಾರಿಯಲ್ಲಿ-ಎಲ್ಲಿಗೆ ಮುಟ್ಟಿಸುವನೋ, ಕೊನೆಗೆ ಎಲ್ಲಿಗಾದರೂ ಮುಟ್ಟಿಸು-ಮುಟ್ಟಿದಲ್ಲಿ ನೀನಿರು"

ಎಂದು ಆತ್ಮಗೀತೆಯನ್ನು ಹಾಡಿದ್ದಾರೆ. ಅವರ ಅಸ್ಖಲಿತ ವಾಣಿಯಿಂದ ವಚನ ಗಂಗೆ ನಿರರ್ಗಳವಾಗಿ ಹರಿದು ಬಂದು ಕಾರಂಜಿಯಂತೆ ಪುಟಿಯುತ್ತದೆ. 'ವಚನೋದ್ಯಾನ' ಲೋಕಾನುಭವದಿಂದ ಹಚ್ಚ ಹಸಿರಾಗಿದೆ. ಆತ್ಮಾನುಭವದಿಂದ ನಿತ್ಯ ನೂತನವಾಗಿದೆ. ಕವಿಯ ಪರಿಪಕ್ವ ಮನದ ಅಭಿವ್ಯಕ್ತಿಯಾಗಿದೆ. ಈ ವಚನಗಳಲ್ಲಿ ಅವರ ಮಹೋನ್ನತ ವ್ಯಕ್ತಿತ್ವ ಮೂಡಿನಿಂತು, ಓದುಗರು ಮಂತ್ರಮುಗ್ಧರಾಗಿ ತಲೆ ಬಾಗುತ್ತಾರೆ.

ಇವರ ವಚನಗಳು ಲೌಕಿಕ ಜೀವನಾನುಭವದ, ವಾಸ್ತವಿಕ ಜಗತ್ತಿನ ಆಗು ಹೋಗುಗಳ ಸುತ್ತ ಹೆಣೆದುಕೊಂಡು ಬಂದುದರಿಂದ ಜನಸಾಮಾನ್ಯರಿಗೂ ಅರ್ಥವಾಗುತ್ತವೆ. ಮನುಷ್ಯ ಏನೆಲ್ಲ ತಿಳಿಯದಿದ್ದರೂ, ತನ್ನನ್ನು ತಾನು ತಿಳಿಯಬೇಕು, ತಿದ್ದಿಕೊಳ್ಳಬೇಕು, ಎಂಬ ಕವಿಯ ಸಂದೇಶ ಇಲ್ಲಿ ವ್ಯಕ್ತವಾಗಿದೆ. ನಾವೆಲ್ಲರೂ ಕಲಿಯಬೇಕಾದ ಮೊದಲ ಪಾಠವೆಂದರೆ 'ಮಾನವ'ರಾಗುವುದು. ಆಚಾರ ವಿಚಾರಗಳೊಂದಾದಾಗ ಬದುಕಿಗೊಂದು ಸಾರ್ಥಕತೆ, ವ್ಯಕ್ತಿತ್ವಕ್ಕೊಂದು ಬೆಲೆ ಬರುತ್ತದೆ. ಹಾಗೇ ತಾವು ಬದುಕಿ ಉಳಿದವರಿಗೂ ಬದುಕಿ ಜೀವನ ಸಾರ್ಥಕ ಮಾಡಿಕೊಳ್ಳಲು ಹೇಳಿದ್ದಾರೆ.

# 'ವಚನೋದ್ಯಾನ'ದಲ್ಲಿ ಆತ್ಮಚಿಂತನೆ–ಒಂದು ಪರಿಶೀಲನೆ

ಬೈರಮಂಗಲ ರಾಮೇಗೌಡ

ಪ್ರಕಾಶಕರಾರೂ ತಾವಾಗಿಯೇ ಪ್ರಕಟಿಸಲು ಮುಂದೆ ಬರದಿದ್ದ ದುರ್ಭರ ಸ್ಥಿತಿಯಲ್ಲಿ ಸಿದ್ಧಯ್ಯ ಪುರಾಣಿಕರು ತಾವೇ ಹಣ ಹಾಕಿ 'ವಚನೋದ್ಯಾನ'ವನ್ನು ಬೆಳಕು ಕಾಣಿಸುವ ಸಾಹಸ ಮಾಡಿದರು. ಅವರ ಶ್ರಮ, ಸಾಹಸಗಳಿಗೆ ತತ್‌ಕ್ಷಣವೇ ಯೋಗ್ಯ ಪ್ರತಿಫಲ ದೊರೆಯಲಿಲ್ಲ. ೧೯೭೭ ರಲ್ಲೇ ಪ್ರಕಟಗೊಂಡರೂ ವಿಮರ್ಶಕರ ಅವಜ್ಞೆಗೆ ಗುರಿಯಾಗಿ ಸಹೃದಯರ ಬಳಿ ಸುಳಿಯದಿದ್ದ 'ವಚನೋದ್ಯಾನ' ಮಹತ್ವದ ರಚನೆಯೆಂದು ಪರಿಗಣಿತವಾಗಲು ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪ್ರಾಪ್ತವಾಗುವವರೆಗೆ ಕಾಯಬೇಕಾಯಿತು. ಇದೀಗ ಕಲ್ಕತ್ತಾದಲ್ಲಿರುವ ಭಾರತೀಯ ಭಾಷಾ ಪರಿಷತ್ತಿನ ಹನ್ನೊಂದು ಸಾವಿರ ರೂಪಾಯಿಗಳ ಮೊದಲ ಬಹುಮಾನ ಸಂದಮೇಲಂತೂ 'ವಚನೋದ್ಯಾನ'ದ ಬೇಡಿಕೆ ದಿಢೀರನೆ ಏರಿತು. ಗ್ರಂಥ ಕುರಿತ ಚರ್ಚೆ, ವಿಮರ್ಶೆಗಳು ಎಲ್ಲ ಕಡೆಯೂ ಕಾಣಿಸಿಕೊಂಡವು. ಭಾರತೀಯ ಭಾಷೆ—ಸಾಹಿತ್ಯಗಳಿಗೆ ಪ್ರೋತ್ಸಾಹ ನೀಡುವ ಮತ್ತು ವಿವಿಧ ಭಾಷೆಗಳ ನಡುವೆ ಪರಸ್ಪರ ತಿಳುವಳಿಕೆ ವರ್ಧಿಸುವಂತೆ ಮಾಡುವ ಉದ್ದೇಶವನ್ನೊಳಗೊಂಡ ಭಾಷಾ ಪರಿಷತ್ತಿನ ಬಹುಮಾನವನ್ನು ಗಳಿಸಿಕೊಂಡ ಮೇಲಾದರೂ 'ವಚನೋದ್ಯಾನ' ತನ್ನ ಶ್ರೇಷ್ಠತೆಯನ್ನು ಸಾಬೀತುಪಡಿಸಿಕೊಂಡದ್ದು, ಕನ್ನಡಿಗರ ದೃಷ್ಟಿ ಆ ಗ್ರಂಥದತ್ತ ಹೊರಳುವಂತಾದದ್ದು ಸಮಾಧಾನಪಟ್ಟುಕೊಳ್ಳಬೇಕಾದ ವಿಚಾರ.

'ವಚನೋದ್ಯಾನ'ವನ್ನು ಓದಿ ಮುಗಿಸುತ್ತಿದ್ದಂತೆ ಒಂದು ವಿಚಾರ ಎಲ್ಲರಿಗೂ ಮನದಟ್ಟಾಗುತ್ತದೆ : ಸಿದ್ಧಯ್ಯ ಪುರಾಣಿಕರಿಗೆ ಬದುಕಿನ ವಿವಿಧ ನೆಲೆಗಳ ಸಾಂದ್ರವೂ ಸಮಗ್ರವೂ ಆದ ಅನುಭವವಿದೆ. ಎರಡೂ ದಡಗಳನ್ನು ತಬ್ಬಿ ಹರಿಯುವ ಮಳೆಗಾಲದ ತುಂಬು ಹೊಳೆಯಂತೆ ಅವರು ತಮ್ಮ ಅನುಭವದ ವ್ಯಾಪ್ತಿಗೆ ನಿಲುಕುವ ಎಲ್ಲ ವಿಚಾರಗಳ ಮಂಥನವನ್ನು ವಚನಗಳ ರೂಪದಲ್ಲಿ ನೀಡಿದ್ದಾರೆ. ಈ ಎಲ್ಲ ವಚನಗಳ ಹಿನ್ನೆಲೆಯಲ್ಲಿರುವುದು ಹೇಳಿಕೊಳ್ಳಬೇಕೆನ್ನುವ ಚಟವಾಗಲೀ ಉಪದೇಶ ನೀಡಬೇಕೆನ್ನುವ ಆಕಾಂಕ್ಷೆಯಾಗಲೀ ಅಲ್ಲ ; ಹೇಳಬೇಕಾದುದು ಅನಿವಾರ್ಯ ಎನ್ನುವಂಥ ಒಳಗಿನ

ಒತ್ತಡ. ತನ್ನನ್ನು ತಾನು ಒರೆಗಲ್ಲಿಗೆ ತಿಕ್ಕಿಕೊಳ್ಳುವ, ತನ್ನೊಳಗೆಲ್ಲಾ ಬಹಿರಂಗ ಗೊಳಿಸಿಕೊಂಡು ಸಮಾಧಾನಿಯಾಗುವ ವಿನಯಿಯೂ ವಿವೇಕಿಯೂ ಆದ ಭಕ್ತ ನೊಬ್ಬನ ಆತ್ಮ ನಿವೇದನೆಯಂತೆ ಈ ವಚನಗಳು ಕಂಡುಬರುತ್ತವೆ.

'ವಚನೋದ್ಯಾನ'ದ ವಚನಗಳು ನಿರ್ದಿಷ್ಟ ಗುರಿಯೊಂದರತ್ತ ಮುಖ ಮಾಡಿ ಹೊರಟವುಗಳೇನೂ ಅಲ್ಲ. ಪ್ರವಾಸ ಹೊರಟ ನಿಜವಾದ ಯಾತ್ರಿಕನೊಬ್ಬ ದಾರಿ ಯಲ್ಲಿ ತನಗೆದುರಾದ ವಸ್ತುಗಳನ್ನೆಲ್ಲಾ ತೆರೆದ ಮನಸ್ಸಿನಿಂದ, ತಿಳಿಯುವುದು ಬಹಳಿದೆ ಎನ್ನುವ ತಿಳುವಳಿಕೆಯಿಂದ, ತಿಳಿಯದ ಈ ಬದುಕು ನಿಷ್ಫಲ ಎನ್ನುವ ಕುತೂಹಲ ಪೂರಿತ ಒತ್ತಡದಿಂದ ವಿಶ್ಲೇಷಣೆಗೊಳಪಡಿಸುವಂಥ, ಆ ವಿಶ್ಲೇಷಣೆಯಿಂದ ತಾನು ಈವರೆಗೆ ತಿಳಿದುಕೊಂಡಿದ್ದರಲ್ಲಿ ನಿಜವೆಷ್ಟು? ಹುಸಿಯೆಷ್ಟು? ಕಂಡದ್ದೆಷ್ಟು? ಕಾಣದುದೆಷ್ಟು? ಎನ್ನುವುದರ ಪ್ರಾಮಾಣಿಕ ಅರಿವನ್ನು ಮೂಡಿಸಿಕೊಳ್ಳುವಂಥ ಮನೋಭಾವ ಈ ವಚನಗಳಲ್ಲಿದೆ. ಎಷ್ಟೋ ಜನಕ್ಕೆ ಪ್ರವಾಸ ಎನ್ನುವುದು ಮನಸ್ಸಿನ ಕಾಮನೆಗಳನ್ನು ಪೂರೈಸಿಕೊಳ್ಳುವ, ತೀಟೆಗಳನ್ನು ತೀರಿಸಿಕೊಳ್ಳುವ, ಹುಂಬರೆದುರು ತಮ್ಮ ಹೆಮ್ಮೆ—ದೊಡ್ಡಸ್ತಿಕೆಗಳನ್ನು ಪ್ರದರ್ಶಿಸಿಕೊಳ್ಳುವ ಕ್ಷುಲ್ಲಕ ಸಾಧನ ಮಾತ್ರ ಆಗಿಬಿಡುತ್ತದೆ. ಆದರೆ ಪುರಾಣಿಕರ ಬದುಕಿನ ಅನಂತ ಪಯಣ ಇಂಥ ಗೆರೆಯೊಂದಕ್ಕೆ ಸೀಮಿತವಾದುದಾಗಿರದೆ ತನ್ನೆಲ್ಲ ಅರೆಕೊರೆಗಳನ್ನು ತುಂಬಿಕೊಂಡು ಹೃದಯ ಪರಿಷ್ಕಾರಗೊಳಿಸಿಕೊಳ್ಳುವುದಲ್ಲದೆ ಓದುಗರನ್ನೂ ಆ ಕಡೆಗೆ ಕೊಂಡೊಯ್ಯುವ, ಜಾಗೃತರಾಗಿಸುವ ಮಹತ್ವದ ಉದ್ದೇಶವನ್ನೂ ಒಳಗೊಂಡಿದೆ. ಆದರೆ ಇದು ಓದು ಗರಿಗೆ ಬಲವಂತದ ಮಾಘಸ್ನಾನವಾಗಿರದೆ ಹಾವನ್ನು ತಲೆದೂಗಿಸುವ ಪುಂಗಿಯ ನಾದದಂತಿರುವುದು ಪುರಾಣಿಕರ ಸಹಜವೂ ಶ್ರೇಷ್ಠವೂ ಆದ ವಚನ ರಚನಾ ಕೌಶಲ್ಯಕ್ಕೆ ಸಾಕ್ಷಿಯಾಗಿದೆ.

'ವಚನೋದ್ಯಾನ'ದಲ್ಲಿ ಪುರಾಣಿಕರು ಏನೇನನ್ನು ಹೇಳಿದ್ದಾರೆ ಎಂದು ಲೆಕ್ಕ ಹಾಕುವುದು ನಿಜಕ್ಕೂ ಶ್ರಮಸಾಧ್ಯವಾದ ಕೆಲಸ. ಅವರು ಹೇಳದಿರುವುದು ಯಾವು ದರ ಬಗೆಗೆ ಎಂದು ಹುಡುಕ ಹೊರಟರೆ ನಮ್ಮ ಕೆಲಸ ಬಹು ಸುಲಭವಾಗುತ್ತದೆ, ಯಾಕೆಂದರೆ ಅವರು ಹೇಳದೇ ಉಳಿಸಿರುವ ವಿಚಾರ ಬಹುಶಃ ಯಾವುದೂ ಇಲ್ಲ. 'ವಚನೋದ್ಯಾನ'ದ ನಾನಾ ಬಗೆಯ ಪುಷ್ಪಗಳ ಕಂಪನ್ನು ಆಘ್ರಾಣಿಸುತ್ತಾ, ಎದೆ ತುಂಬಿಕೊಳ್ಳುತ್ತಾ ಸಾಗಿದೆವೆಂದರೆ ನಮಗೆ ಅಲ್ಲಿಂದ ಹಿಂದಿರುಗುವ ಮನಸ್ಸೂ ಉದ್ಯಾನದಲ್ಲಿ ನಾವು ಕಳೆದ ಸಮಯದ ಪರಿವೆಯೂ ಇರದೆ, ನಾವು ದರ್ಶಿಸಿದ ಪುಷ್ಪರಾಜಿಗಳ ಕಂಪು, ಸೊಂಪು, ಬಣ್ಣ, ಎತ್ತರ, ಸಮೃದ್ಧಿಯಲ್ಲಿ ಮೈಮರೆತಿರು ತ್ತೇವೆ. ವಚನೋದ್ಯಾನದಲ್ಲಿ ಅನುಭವಿಸಿದ ಆನಂದವೇ ಸಾಕು: ಅನುಭವದ ಲೆಕ್ಕ ಯಾರಿಗೆ ಬೇಕು ಎನಿಸಿಬಿಡುತ್ತದೆ. ಅವರು ಹೇಳದೇ ಉಳಿಸಿರುವ, ಹೃದಯಕ್ಕೆ ತಾಕಿಸದೇ ಇರುವ ವಸ್ತು—ವಿಚಾರ ಬಹುಶಃ ಯಾವುದೂ ಇಲ್ಲ. ಎಲ್ಲ ಸಂಗತಿಗಳ

ಬಗೆಗೂ ಕೈಯಾಡಿಸಿದ್ದಾರೆನ್ನುವುದೇ ಈ ಕೃತಿಯ ಹೆಗ್ಗಳಿಕೆ ಎನ್ನುವ ತಪ್ಪು ನಿರ್ಧಾರಕ್ಕೆ ತಲುಪಿಬಿಟ್ಟೆವಾದರೆ 'ವಚನೋದ್ಯಾನ'ದ ಮೌಲ್ಯ ದಿಢೀರನೆ ಕುಸಿದು ಬಿಡುತ್ತದೆ. ತಾವು ತಿಳಿದ ವಿಚಾರವನ್ನು ಮಥಿಸುವಲ್ಲಿ, ತಿಳಿಯದ್ದನ್ನು ತಿಳಿಯ ಬೇಕೆಂದು ಹಂಬಲಿಸುವಲ್ಲಿ, ಗೊತ್ತಿರದ್ದನ್ನು ಗೊತ್ತಿಲ್ಲ ಎಂದು ಒಪ್ಪಿಕೊಳ್ಳುವಲ್ಲಿ, ಅನುಭವದ ಗಾಢತೆಯನ್ನು ಸಮರ್ಥ ಮಾತುಗಳಲ್ಲಿ ಹಿಡಿದಿರಿಸುವಲ್ಲಿ, ಸಹೃದಯರ ಭಾವನೆಗಳು ಸ್ಪಂದನಗೊಳ್ಳುವಂತೆ ಮಾತುಗಳಿಗೂ ಕಾವ್ಯದ ಸ್ಪರ್ಶಕೊಡುವಲ್ಲಿ, ಸಂದರ್ಭೋಚಿತ ಹೋಲಿಕೆಗಳನ್ನು ಬಹು ಸಹಜವಾಗಿ ನೀಡುವಲ್ಲಿ, ಪುಟ್ಟ ಪುಟ್ಟ ವಚನಖಂಡಗಳಲ್ಲಿ ಹಿರಿದರ್ಥ ತುಂಬಿ ಹೇಳುವ ಜಾಣ್ಮೆಯಲ್ಲಿ, ವಸ್ತುವಿಗೆ ತಕ್ಕ ಭಾಷೆ—ಭಾಷೆಗೆ ತಕ್ಕ ಮಾತಿನ ಬಳಕು ಮೂಡಿಸುವಲ್ಲಿ ಹೃದಯವನ್ನು ಅಖಂಡ ವಾಗಿ ವ್ಯಾಪಿಸಿ ಅಲ್ಲೇ ನೆಲೆಗೊಳ್ಳುವಂಥ ಅಪರೂಪದ ಚಿತ್ರಣಗಳನ್ನು ರೇಖಿಸುವಲ್ಲಿ ಸಿದ್ಧಯ್ಯ ಪುರಾಣಿಕರ ಪ್ರತಿಭೆ ಚೆಲ್ಲವರಿದಿದೆ. ಅವರ ಈ ಅನನ್ಯ ಸಾಧಾರಣ ಸಾಮರ್ಥ್ಯವೇ ವಚನೋದ್ಯಾನವನ್ನು ಒಂದು ಮಹತ್ವದ ಕೃತಿಯಾಗಿಸುವಲ್ಲಿ ಸಹಕಾರಿಯಾಗಿದೆ.

ಬದುಕಿನ ದಟ್ಟ ಅನುಭವದಿಂದ ಮಾಗಿದ, ಪರಿಪಾಕಗೊಂಡ ಹೃದಯವೊಂದರ ಚಿಂತನಾವೈಭವವನ್ನು ನಾವು ವಚನೋದ್ಯಾನದಲ್ಲಿ ದರ್ಶಿಸುತ್ತೇವೆ. ಪುರಾಣ, ಚರಿತ್ರೆ, ಧರ್ಮ, ಅಧ್ಯಾತ್ಮ, ಚಲನಚಿತ್ರ, ನಾಟಕ, ರಾಜಕೀಯ, ಸಮಾಜ, ವಿಜ್ಞಾನ, ದೇವರು, ಮೂಢನಂಬಿಕೆ, ಕವಿ, ಕಾವ್ಯ, ಆಹಾರ, ವಸ್ತ್ರ, ಶ್ರೀಮಂತಿಕೆ, ಬಡತನ, ಬುದ್ಧಿವಂತಿಕೆ, ನೀತಿ—ಹೀಗೆ ವಚನೋದ್ಯಾನದ ವ್ಯಾಪ್ತಿಯಲ್ಲಿ ಸೂಕ್ಷ್ಮ ಗ್ರಾಹಿಯಾದ ಮನಸ್ಸೊಂದು ಗ್ರಹಿಸಬಹುದಾದ ಎಲ್ಲ ವಸ್ತು—ವಿಚಾರಗಳೂ ಬರುತ್ತವೆ. ಎಲ್ಲದರ ಬಗೆಗೂ ಹೇಳಲೇಬೇಕೆನ್ನುವ ಹಟಮಾರಿತನ ಸಿದ್ಧಯ್ಯ ಪುರಾಣಿಕರಿಗಿದ್ದಂತೆ ತೋರುವುದಿಲ್ಲ ; ಏಕೆಂದರೆ ಇಲ್ಲಿನ ಯಾವುದೇ ವಿಚಾರವಾಗಲೀ, ವರ್ಣನೆಯಾಗಲೀ, ಹೋಲಿಕೆಯಾಗಲೀ ಬಲವಂತವಾಗಿ ಹಿಡಿದು ಕಟ್ಟಿದಂತೆ ಭಾಸವಾಗುವುದಿಲ್ಲ. ಎಲ್ಲವೂ ಸಹಜ ವಾತಾವರಣದಲ್ಲಿ, ಉಚಿತ ಸನ್ನಿವೇಶಗಳಲ್ಲಿ ಮೈತಳೆದಿವೆ. ಹೀಗೆ ಎಲ್ಲವನ್ನೂ ತನ್ನದಾಗಿಸಿಕೊಳ್ಳುವ, ಎಲ್ಲದರಲ್ಲೂ ತನ್ನನ್ನೇ ಕಂಡುಕೊಳ್ಳುವ, ಬದುಕಿನ ಅಸಂಗತಗಳಿಗೆ ಸಾವಿರ ಕೋಟಲೆಗಳಿಗೆ ಮಿಡಿಯುವ ಸಿದ್ಧಯ್ಯ ಪುರಾಣಿಕರು ವಿಶ್ವಮಾನವ ಚೇತನಕ್ಕೆ ಒಂದು ದಿವ್ಯ ಆದರ್ಶವಾಗಿ ನಿಲ್ಲುತ್ತಾರೆ.

'ವಚನೋದ್ಯಾನ'ದ ವಚನಗಳ ಹಿನ್ನೆಲೆಯಲ್ಲಿ ವಿನಯ, ವಿಧೇಯತೆಗಳ ಸಾಕಾರ ಮೂರ್ತಿಯಾಗಿರುವ ಹೃದಯಸಂಪನ್ನನೊಬ್ಬನನ್ನು ಕಾಣುತ್ತೇವೆ. ಪ್ರತಿ ವಚನದ ಬೆನ್ನನ್ನೂ ಹತ್ತುವ ಈ ವಿನಯ ವಿಧೇಯತೆಗಳು ಸ್ವಲ್ಪ ಅತಿಯಾದವೇನೋ ಎಂದು ಸಹಜವಾಗಿಯೇ ಅನ್ನಿಸುತ್ತದೆ. ಆದರೆ ಈ ವಿನಯ ವಿಧೇಯತೆಗಳನ್ನು ಪುರಾಣಿಕರ ವ್ಯಕ್ತಿತ್ವದೊಂದಿಗೆ ಸಾದೃಶ್ಯಗೊಳಿಸಿದಾಗ ನಮ್ಮ ಅನಿಸಿಕೆ ಹುಸಿಯೆನ್ನು

ವುದು ಥಟ್ಟನೆ ಗೋಚರಗೊಳ್ಳುತ್ತದೆ. ಪುರಾಣಿಕರ ಹೃದಯ ಸಂಪನ್ನತೆ, ಇನ್ನೊಬ್ಬರ ಬದುಕು-ವ್ಯಕ್ತಿತ್ವವನ್ನು ಒಳಹೊಕ್ಕು ದರ್ಶಿಸುವ ಸಾಮರ್ಥ್ಯ ಅವರ ವಿನಯಶೀಲ ನೆಯ ಗುಣದಿಂದಲೇ ಪ್ರಾಪ್ತವಾಗಿರುವಂಥದ್ದು. ಸರ್ಕಾರದ ಉನ್ನತ ದರ್ಜೆಯ ಅಧಿಕಾರಿಯಾಗಿದ್ದಾಗಲೂ ಅಧಿಕಾರ ಚಲಾಯಿಸಬೇಕೆನ್ನುವ ದರ್ಪ, ದೊಡ್ಡಸ್ತಿಕೆ ಮೆರೆಸಬೇಕೆನ್ನುವ ಹಮ್ಮು, ಉನ್ನತಾಧಿಕಾರದ ಠೀವಿ ಅವರ ಹತ್ತಿರ ಸುಳಿಯಲಿಲ್ಲ. ಜೀವನದ ಏರಿಳಿತಗಳಲ್ಲಿ ಉಬ್ಬದ-ತಗ್ಗದ ಸಮಾಧಾನ ಮನಸ್ಥಿತಿಯ ಮಾನವನಾಗಿ ಅವರು ಬದುಕಿದ್ದಾರೆ. ಉನ್ನತಾಧಿಕಾರದಲ್ಲಿದ್ದಾಗಲೂ ಅವರು ಸೇವಕನಂತೆಯೇ ದುಡಿದು ನಿಜವಾದ ದೇಶಸೇವೆ, ಸಮಾಜಸೇವೆ, ಮಾನವ ಸೇವೆ, ಮಾಡಿದ್ದಾರೆ. ಹಾಗಾಗಿ ಅವರ ವಚನಗಳ ಅನಿವಾರ್ಯ ಭಾಗವಾಗಿ ಕಂಡುಬರುವ ವಿನಯಶೀಲತೆ, ಸಜ್ಜನಿಕೆ, ಹೃದಯ ವೈಶಾಲ್ಯಗಳು, ಹುಸಿತೋರಿಕೆಯ, ಪ್ರದರ್ಶನಾಕಾಂಕ್ಷೆಯ, ಆಷಾಡಭೂತಿತನದ ಗುಣಗಳಾಗಿರದೆ ಅವರ ವ್ಯಕ್ತಿತ್ವದಲ್ಲೇ ರಕ್ತಗತವಾಗಿರುವಂಥ ಅಮೂಲ್ಯ ನಿಧಿಯಾಗಿವೆ. ವಿನಯಶೀಲತೆ ಅವರ ಹೃದಯಕ್ಕೆ ಹಿಡಿದ ರನ್ನಗನ್ನಡಿ ಯಾಗಿದೆ.

'ವಚನೋದ್ಯಾನ'ದ ಪುಷ್ಪಗಳಲ್ಲಿ ಕಂಡುಬರುವ ಜೀವನಾನುಭವ ಮತ್ತು ಕಾವ್ಯ ಸೌಂದರ್ಯಗಳು ಅತ್ಯುನ್ನತವಾದವುಗಳು. ಬದುಕಿನ ಗಾಢ ಅನುಭವ, ತಲ ಸ್ಪರ್ಶಿಯಾದ ಅಧ್ಯಯನ, ಸಂವೇದನಾಶೀಲ ನಿರೂಪಣೆ, ಬದುಕಿನ ಬೇರುಗಳತ್ತ ಸೂಕ್ಷ್ಮನೋಟ, ಆತ್ಮ ನಿರೀಕ್ಷಣಾ ದೃಷ್ಟಿ-ಅವರ ವಚನಗಳಲ್ಲಿ ವಿಶೇಷವಾಗಿ ಕಂಡು ಬರುತ್ತವೆ. ಅಗೋಚರ ಶಕ್ತಿಯೊಂದು ನಮ್ಮೆಲ್ಲ ಕ್ರಿಯೆಗಳ ಹಿಂದಿದೆ, ಅದೇ ನಮ್ಮನ್ನು ಅನವರತ ಕಾಯುತ್ತಿದೆ ಎನ್ನುವ ಮುಗ್ಧ ಭಕ್ತನೊಬ್ಬನ ಪರಮಶ್ರದ್ಧೆ ವಚನಗಳುದ್ದಕ್ಕೂ ಎದ್ದು ಕಾಣುತ್ತದೆ.

ಧ್ವನಿರಮ್ಯತೆಯಿಂದ, ಸಲಿಲ ಪ್ರವಹನದಿಂದ, ಉಕ್ತಿ ಸೊಬಗಿನಿಂದ ಓದುಗರ ಮನವನ್ನು ಸೂಜಿಗಲ್ಲಿನಂತೆ ತಮ್ಮತ್ತ ಸೆಳೆದುಕೊಳ್ಳುವ ಹಲವಾರು ವಚನಗಳು 'ವಚನೋದ್ಯಾನ'ದಲ್ಲಿವೆ. ವಿಮರ್ಶಕರನ್ನು ಸಹೃದಯರನ್ನು ಬಹುವಾಗಿ ಆಕರ್ಷಿಸಿ ರುವ ವಚನವೊಂದು ಹೀಗಿದೆ :

ವಿದ್ಯೆ ಬಂತು, ವಿನಯ ಹೋಯ್ತು ;
ಬುದ್ಧಿ ಬಂತು, ಶ್ರದ್ಧೆ ಹೋಯ್ತು ;
ಶ್ರದ್ಧೆ ಬಂತು, ವಿವೇಚನೆ ಹೋಯ್ತು ;
ಸಮೃದ್ಧಿ ಬಂತು, ಸಂಸ್ಕೃತಿ ಹೋಯ್ತು :
ವಿಜ್ಞಾನ ಬಂತು, ಸಮಾಧಾನ ಹೋಯ್ತು ;
ಶರೀರಸ್ವಾಸ್ಥ್ಯ ಬಂತು, ಚಿತ್ತ ಸ್ವಾಸ್ಥ್ಯ ಹೋಯ್ತು ;
ದೀರ್ಘಾಯುಷ್ಯ ಬಂತು, ಜೀವನ ಸ್ವಾರಸ್ಯ ಹೋಯ್ತು ;

ಬೋಧನೆ ಬಂತು, ಸಾಧನೆ ಹೋಯ್ತು ;
ಮಾತು ಬಂತು, ಕೃತಿಯು ಹೋಯ್ತು ;
ಜಾತಿ ಬಂತು, ಪ್ರೀತಿ ಹೋಯ್ತು ;
ಸ್ವಾತಂತ್ರ್ಯ ಬಂತು, ಸೌಜನ್ಯ ಹೋಯ್ತು ;
ಸಿದ್ಧಯ್ಯ ಪುರಾಣಿಕ ಬಂದ,
ಸ್ವತಂತ್ರಧೀರ ಸಿದ್ಧೇಶ್ವರ ಹೋದ.

ಮೊಗೆದಷ್ಟೂ ಅರ್ಥಧಾರೆಯನ್ನು ಚಿಮ್ಮುವ ಒರತೆಯಾಗಿ ಬಗೆದಷ್ಟೂ ಬಂಗಾರದ ಅದುರನ್ನು ಬಚ್ಚಿಟ್ಟುಕೊಂಡಿರುವ ಗಣಿಯಾಗಿ ಈ ವಚನ ಕಂಡು ಬರುತ್ತದೆ. ಒಳಹೊಗುವ ಸಾಮರ್ಥ್ಯವಿದ್ದಷ್ಟೂ ಓದುಗ ನಾನಾರ್ಥ ಪರಂಪರೆಗಳನ್ನು ದಕ್ಕಿಸಿ ಕೊಳ್ಳುತ್ತಾ ಪುರಾಣಿಕರ ವಚನ ರಚನಾ ವೈಖರಿಗೆ ಬೆರಗುಗೊಳ್ಳುತ್ತಾನೆ. ನಮ್ಮ ಬುದ್ಧಿಯ ಮಟ್ಟ ಎತ್ತರಕ್ಕೇರಿದಂತೆಲ್ಲ, ನಾವು ವೈಜ್ಞಾನಿಕವಾಗಿ ಅದ್ಭುತ ಪ್ರಗತಿ ಗಳನ್ನು ಸಾಧಿಸಿದಂತೆಲ್ಲ ಅವುಗಳೊಡನೆಯೆ ಉನ್ನತಿಗೇರಬೇಕಿದ್ದ ಮಾನವೀಯ ಮೌಲ್ಯಗಳು ಹೇಗೆ ಅಧಃಪತನಗೊಳ್ಳುತ್ತಿವೆಯೆನ್ನುವ ಕಟು ವಾಸ್ತವ ಸ್ಥಿತಿಯೊಂದನ್ನು ಈ ಸಾಲುಗಳು ನಮ್ಮ ಕಣ್ಣೆದುರು ಬಿಡಿಸಿ ತೋರಿಸುತ್ತವೆ. ಬೇಕಾದುದರ ಸ್ಥಾನ ದಲ್ಲಿ ಬೇಡವಾದದ್ದೂ ಸಹಜವಾದುದರ ಸ್ಥಾನದಲ್ಲಿ ಕೃತಕವಾದದ್ದೂ ಹೇಗೆ ತುಂಬಿ ಕೊಳ್ಳುತ್ತಿದೆಯೆನ್ನುವುದನ್ನು ಈ ಮಾತುಗಳು ಸರಳವಾಗಿ ಆದರೆ ಸಮರ್ಥವಾಗಿ ಬಿಂಬಿಸುತ್ತವೆ. ಕೃತಕತೆಯನ್ನೇ ನಿಜವೆಂದು ಅಪ್ಪಿಕೊಳ್ಳುವ, ಒಪ್ಪಿಕೊಳ್ಳುವ ಹೀನ ದೆಸೆಗೆ ನಾವಿಳಿದಿದ್ದೇವೆ. ಒಂದು ಹೋಗಿ ಇನ್ನೊಂದು ಬಂದುದನ್ನು ಬೆರಳು ಮಾಡಿ ತೋರಿಸುವುದಷ್ಟೇ ಸಿದ್ಧಯ್ಯ ಪುರಾಣಿಕರ ಉದ್ದೇಶವಾಗಿರದೆ ಹಳೆ ಬೇರು ಹೊಸ ಚಿಗುರು ಕೂಡಿ ಮರ ಸೊಬಗಿನಿಂದ ಕಂಗೊಳಿಸಬೇಕು, ದಾರಿಹೋಕರಿಗೆ ನೆರಳು ಹಣ್ಣು ಹೂವು ನೀಡಿ ಸಾರ್ಥಕಗೊಳ್ಳಬೇಕು ಎನ್ನುವ ಮಾನವೀಯ ಕಳಕಳಿ ಅವರದಾಗಿದೆ. ವಿದ್ಯೆ ಕಲಿತ ಮಾನವ ತನ್ನ ಜ್ಞಾನದಿಗಂತವನ್ನು ವಿಸ್ತರಿಸಿಕೊಳ್ಳು ವುದು ತಪ್ಪಲ್ಲ. ಆದರೆ ವಿನಯ ಸೌಜನ್ಯಗಳಿಲ್ಲದ ಮಾನವನಿಗೆ ವಿದ್ಯೆ ಭೂಷಣ ವೆನಿಸದು. ವಿದ್ಯೆಗೆ ವಿನಯವೂ ವಿನಯಕ್ಕೆ ವಿದ್ಯೆಯೂ ಪೂರಕವಾಗಿದ್ದಾಗಲೇ ಅವುಗ ಳನ್ನೊಳಗೊಂಡ ಮಾನವನಿಗೆ ಶೋಭೆ. ಹಾಗೆಯೇ ಬುದ್ಧಿ ಚಿಗುರಿದ ಮಾನವನಲ್ಲಿ ಕಲಿಯಬೇಕೆನ್ನುವ ಶ್ರದ್ಧೆ, ಜ್ಞಾನದ ಹಸಿವು ಮಾಯವಾಗುತ್ತಿದೆ. ಶ್ರೀಮಂತಿಕೆಯ ಮದ ತಲೆಗೇರಿದರೆ ದುರ್ಗುಣಗಳ ಭೂತ ಬೆನ್ನು ಹತ್ತುತ್ತದೆ. ಮಾತಾಡುವುದು ಜಾಸ್ತಿಯಾದಾಗ ಮೈಗಳ್ಳತನ ಅಡಿಯೂರಿ ಮಾಡಬೇಕಾದ ಕೆಲಸ ಮೂಲೆ ಹಿಡಿಯಿತು. ಸ್ವಾರ್ಥಸಾಧನೆಯ ಸಲುವಾಗಿ ಜಾರಿಗೆ ಬಂದ ವ್ಯಕ್ತಿಪೂಜೆ, ಮನಸ್ಸಿಗೆ ಸಮಾಧಾನ ವನ್ನೂ ಬದುಕಿಗೆ ಭರವಸೆಯನ್ನೂ ನೀಡುತ್ತಿದ್ದ ದೇವರ ಪೂಜೆಯನ್ನು ಹಿಮ್ಮೆಟ್ಟಿ ಸಿತು. ಹೀಗೆ ನಾವು ಸ್ವಾರ್ಥ, ಕ್ಷಣಿಕಸುಖ, ಸೌಲಭ್ಯಾಕಾಂಕ್ಷೆ, ಮೈಗಳ್ಳತನ, ಚಪಲ– ಇತ್ಯಾದಿಗಳಿಗೆ ಪಕ್ಕಾಗಿ ಜೀವನದ ಎಲ್ಲ ರಂಗಗಳಲ್ಲಿಯೂ ಕೃತಕತೆಯ ಆಕ್ರಮಣ

ನಿರಂತರವಾಗಿ ನಡೆಯುತ್ತಿದೆ. ಈ ಅಸಹಜ ಸಂಕೋಲೆಗಳಿಂದ ಬಿಡಿಸಿಕೊಂಡು ನಾವು ಮಾನವರಾಗಿಯೇ ಬದುಕೋಣ. ಮಾನವತೆಯನ್ನೇ ಉಸಿರಾಡೋಣ ಎನ್ನುವ ತಹತಹ ಇಲ್ಲಿದೆ.

ಮಾನವಧರ್ಮದಲ್ಲಿ ಅಚಲ ವಿಶ್ವಾಸವಿರಿಸಿಕೊಂಡ, ಅದನ್ನೇ ಉಸಿರಾಡುತ್ತಿರುವ ಧೀಮಂತ ಚೇತನವೊಂದು ಸ್ವತಂತ್ರಧೀರ ಸಿದ್ಧೇಶ್ವರನ ಎದುರು ತನ್ನನ್ನು ಬಹಿರಂಗಗೊಳಿಸಿಕೊಳ್ಳುತ್ತಾ, ಸಾಮಾಜಿಕ ರೀತಿನೀತಿಗಳ ವರದಿಯೊಪ್ಪಿಸುವ ಮೂಲಕ ತನ್ನ ವ್ಯಕ್ತಿತ್ವ ವಿವೇಚನೆ ಮತ್ತು ಸಾಮಾಜಿಕ ವಿಮರ್ಶೆಗಳನ್ನು ಒಟ್ಟೊಟ್ಟಿಗೇ ಸಾಧಿಸುವ ಪರಿಯನ್ನು ಇಲ್ಲಿನ ವಚನಗಳಲ್ಲಿ ಕಾಣಬಹುದು. "ಸರ್ವರಿಗೆ ಸಮಾನಾವಕಾಶದ ಗುರಿಯು, ಸರ್ವೋದ್ಧಾರದ, ಸರ್ವಜನ ಸುಖದ ಗುರಿಯು ಮುಟ್ಟಿಯೇ ತೀರುವ" ಛಲತೊಟ್ಟ ಸಿದ್ದಯ್ಯ ಪುರಾಣಿಕರು "ಬೀಜದ ಬಸಿರಿನ ಮೊಳೆಯದ ಬಳ್ಳಿಯು ಮೂಡದ ಹೂವಿನ ಕಂಪಿನಂತಿಹೆಯೇನಯ್ಯಾ ?" ಎಂದು ಸ್ವತಂತ್ರ ಧೀರ ಸಿದ್ಧೇಶ್ವರನ ಸಾಕ್ಷಾತ್ಕಾರಕ್ಕಾಗಿ ಹಂಬಲಿಸುತ್ತಾರೆ ; "ನಾನು ಕಳೆದ ಐವತ್ತು ವತ್ಸರಗಳಲ್ಲಿ ಹಸಿವೆ, ತೃಷೆ. ವಿಷಯ, ಆಸೆ. ಆಮಿಷಗಳಿಗಾಗಿ ವರುಷ ವರುಷ"ಗಳನ್ನು ವ್ಯರ್ಥ ಕಳೆದು ತನ್ನನ್ನು ತಾನು ಅರಿಯಲು ಯತ್ನಿಸದಿದ್ದುದಕ್ಕಾಗಿ ಗೋಳಿಡುತ್ತಾರೆ ; "ಮಾನವೇತಿಹಾಸದಲ್ಲಿ ನಡೆಯದಷ್ಟು ಯುದ್ಧಗಳು ನನ್ನೊಳಗೆ ನಡೆದಿವೆಯಯ್ಯ" ಎಂದು ಬದುಕಿನ ಸಂಘರ್ಷವನ್ನು ಪರಿಚಯಿಸುತ್ತಾರೆ ; "ನಿನ್ನ ತಿಗರಿಗೆ ಮಣ್ಣು ಮಾಡಿಕೊಳ್ಳಯ್ಯ ನನ್ನನ್ನು, ನಿನ್ನ ಭಟ್ಟಿಗೆ ಅವಿರು ಮಾಡಿಕೊಳ್ಳಯ್ಯ ನನ್ನನ್ನು" ಎನ್ನುವ ಮೂಲಕ ಕರ್ತವ್ಯ ಸಾಧನೆಯಲ್ಲಿ ಮಾನವ ನಾನಾ ಬಗೆಯ ಕಷ್ಟನಷ್ಟ ತ್ಯಾಗಗಳಿಗೆ ಸಿದ್ಧನಾಗಿರಬೇಕೆಂದು ಎಚ್ಚರಿಸುತ್ತಾರೆ ; "ಹೋಮರ ನಂಥ ವಿಶ್ವಕವಿಗಳು ಭಿಕ್ಷೆ ಬೇಡಬೇಕು ಹೆಂಡ ಮಾರುವವರು ಲಕ್ಷಾಧೀಶರಾಗಬೇಕು" ಎನ್ನುವ ಮೂಲಕ ಸಾಮಾಜಿಕ ಅಸಮತೆ, ಅನ್ಯಾಯಗಳ ಬಗೆಗೆ ತೀವ್ರ ಅಸಮಾಧಾನ ತಾಳುತ್ತಾರೆ ; "ಸರ್ಕಾರ ದರೋಡೆಕಾರನಾದಾಗ ನೌಕರರು ನರ ಭಕ್ಷಕರಾಗದಿರುವರೇನಯ್ಯ ? ಸಚಿವರೇ ಸುಲಿಗೆಗಾರರಾದಾಗ ಆಪ್ತ ಸಹಾಯಕರು ಡಕಾಯಿತರಾಗರೇನಯ್ಯ?" ಎಂದು ಪ್ರಶ್ನಿಸುವ ಮೂಲಕ ನಮ್ಮಲ್ಲಿ ವ್ಯಾಪಕವಾಗಿ ಹರಡಿಕೊಂಡಿರುವ ಭ್ರಷ್ಟಾಚಾರವೆನ್ನುವ ವಿಷವೃಕ್ಷದ ಬೇರುಗಳತ್ತ ಕೊಡಲಿ ಬೀಸುತ್ತಾರೆ ; "ಗುಂಪು ಗುಂಪಾಗಿ ಬೆಳೆದರೂ ಗುಂಪುಗಾರಿಕೆಯು ಗಾಂಪತನವಿಲ್ಲ ಗುಂಪುಮರಗಳಲ್ಲಿ" ಎಂದು ಹೇಳುವ ಮೂಲಕ ಮನುಷ್ಯ ಹೇಗೆ ಬದುಕುಬೇಕೆನ್ನುವುದಕ್ಕೆ ಮರಗಳಿಂದ ಪಾಠ ಹೇಳಿಸುತ್ತಾರೆ; "ಏನೇನೋ ಅವತಾರಗಳನ್ನು ಎತ್ತಿರುವೆಯಂತೆ, ಈಗ ಹಸಿದವರ ಮುಂದೆ ರೊಟ್ಟಿಯಾಗಿ ಅವತರಿಸು" ಎನ್ನುವ ಮೂಲಕ ಅವತಾರಗಳ ಅರ್ಥಹೀನತೆ, ನಮ್ಮ ದೇಶದ ಬಹುಪಾಲು ಜನರು ಹೊಟ್ಟೆಗಿಲ್ಲದೆ ನರಳುತ್ತಿರುವ ಪರಿಸ್ಥಿತಿ, ಹೊಟ್ಟೆಗಿಲ್ಲದ ಆ ಜನಕ್ಕೆ ರೊಟ್ಟಿಯನ್ನಾದರೂ ದೊರಕಿಸಿಕೊಡುವುದರಲ್ಲಿರುವ ಸಾರ್ಥಕ್ಯವನ್ನು ಒತ್ತಿ ಹೇಳುತ್ತಾರೆ ; "ಹತ್ತಿ ವಸ್ತ್ರವಾಗಿ, ಗೋಧಿ ಬಿಸ್ಕ

ತ್ತಾಗಿ, ಕಡಲೆ ಪುಟಾಣಿಯಾಗಿ ರೈತ ಬೆಳೆದುದೆಲ್ಲ ಏನೇನೋ ಆಗಿ ಎಲ್ಲೆಲ್ಲಿಗೋ ಹೋಗುತ್ತದೆ. ಆದರೆ ಬೆಳೆದ ರೈತ ಮಾತ್ರ ಇದ್ದಲ್ಲಿಯೇ ಕೊಳೆಯುತ್ತಾನೆ"— ಎನ್ನುವ ಮೂಲಕ ದೇಶದ ಜನರ ಹೊಟ್ಟೆ ತುಂಬಿಸಲು, ಮೈಮುಚ್ಚಲು, ಅಲಂಕರಿಸಿ ಕೊಳ್ಳಲು ನಿರಂತರ ಶ್ರಮಿಸುವ ರೈತ ಮಾತ್ರ ಕಿಂಚಿತ್ತೂ ಸುಧಾರಿಸದೆ, ಹೊಟ್ಟೆಗೆ–ಬಟ್ಟೆಗೆ ಇಲ್ಲದೆ ಪರಿತಪಿಸುವಂಥ ಕರಾಳ ಪರಿಸ್ಥಿತಿಯೊಂದನ್ನು ಹೃದಯ ತಾಕುವ ಹಾಗೆ ಹಿಡಿದಿರಿಸಿದ್ದಾರೆ ; ವಿಜ್ಞಾನಿಯೆಂದು ಜಂಬ ಕೊಚ್ಚಿಕೊಂಡು ಬೆಕ್ಕು ಅಡ್ಡ ಹಾಯುತ್ತಲೇ ಗಕ್ಕನೆ ನಿಂತರೆ ಮಡ್ಡರಿಗಿಂತ ಕಡೆಯಲ್ಲವೆ ಅವನು ?" ಎಂದು ಪ್ರಶ್ನಿಸುವ ಮೂಲಕ ನಮ್ಮಲ್ಲಿರುವ ಹುಸಿ ವಿಜ್ಞಾನಿಗಳನ್ನು, ಬದುಕಿನಲ್ಲಿ ಹಾಸು ಹೊಕ್ಕಾಗಿ ಕಾಲು ಚಾಚಿಕೊಂಡಿರುವ ಮೂಢನಂಬಿಕೆಗಳನ್ನು ಛೇಡಿಸುತ್ತಾರೆ.

ಹೀಗೆ ಆಧುನಿಕ ಅನುಭಾವ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿರುವ 'ವಚನೋದ್ಯಾನ'ದ ವಚನಗಳಲ್ಲಿ ಆತ್ಮಚಿಂತನೆ ಸ್ಥಾಯಿಯಾಗಿರುವುದು ಕಂಡು ಬರುತ್ತದೆ. ನಮ್ಮ ಭಾವಗಳಿಗೆ ಕಚಗುಳಿಯಿಟ್ಟು ಹೃದಯದ ಬಾಗಿಲು ಬಡಿದು ಮೆಲ್ಲನೊಳನುಸುಳಿ ಬಹುಕಾಲ ಅಲ್ಲೇ ಸ್ಥಾಪಿತವಾಗುವಂಥ ಮಧುರವೂ ಆಕರ್ಷಕವೂ ಅರ್ಥಪೂರ್ಣವೂ ಆದ ಮಾತುಗಳು ಈ ವಚನಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಸಂಕ್ಷಿಪ್ತ ನಿರೂಪಣೆ, ತೀಕ್ಷ್ಣತೆ. ವಿವೇಕ ಪೂರ್ಣತೆಗಳ ಲಕ್ಷಣದಿಂದಾಗಿ ಈ ವಚನಖಂಡಗಳು ಜನಪದ ಗಾದೆಗಳ ಪರಿಣಾಮವನ್ನು ಬೀರುವಷ್ಟು ಸಾಮರ್ಥ್ಯವನ್ನು ಹೊಂದಿವೆ. ಅಂತರಂಗವನ್ನು ವ್ಯಾಪಿಸಿಕೊಂಡ ಅನುಭಾವ ತಂತಾನೆ ಅರಳಿ ವಚನಗಳ ರೂಪ ತಳೆದಿರುವುದನ್ನು ನಾವಿಲ್ಲಿ ಕಾಣಬಹುದಾಗಿದೆ. ಯಾವುದೇ ಒಂದು ಧರ್ಮದ ತತ್ವ ನಿರೂಪಣೆಗೆ. ಆಚರಣೆಗಳ ಚಿತ್ರಣಕ್ಕೆ ಬಲಿಯಾಗುವುದರಿಂದಲೇ ಮಾನವಧರ್ಮದ ನೆಲೆಗಟ್ಟಿನಲ್ಲಿ ವಚನೋದ್ಯಾನದ ವಚನಗಳಿಗೆ ವಿಶೇಷ ಮಹತ್ವವಿದೆ. ಕೈಗೆಟುಕುವ ಜೀವನದ ಅನುಭವಗಳು ಮತ್ತು ಸಾಧನೆಗಳಿಂದಾಗಿ ಈ ವಚನಗಳಿಗಳಿಗೆ ಅನಭಾವದ ಹೊಳಪು ಬಂದಿದೆ. ಜೀವನದ ನಿಗೂಢ ರಹಸ್ಯಗಳನ್ನು ಬಗೆಯುವ ಮೂಲಕ ಸತ್ಯಶೋಧನೆಗೆ ತೊಡಗುವ ವಚನಗಳಿಂದ ಅಧ್ಯಾತ್ಮಾನುಭವಕ್ಕೆ ಹೆಚ್ಚಿನ ಬೆಲೆ ಬಂದಿದೆ. ಪುರಾಣಿಕರು ನಿರ್ಮಿಸಿಕೊಂಡಿರುವ 'ಸ್ವತಂತ್ರ ಧೀರ ಸಿದ್ಧೇಶ್ವರ' ಎನ್ನುವ ಅಂಕಿತ ನಮ್ಮ ಬದುಕನ್ನು ರೂಪಿಸಿ, ಮುನ್ನಡೆಸುತ್ತಿರುವ ಸ್ವತಂತ್ರ ಪ್ರವೃತ್ತಿ ಮತ್ತು ಧೀರಗುಣಗಳನ್ನು ಸಂಕೇತಿಸುತ್ತದೆ. ಸ್ವತಂತ್ರ ಪ್ರವೃತ್ತಿ, ಧೀರಗುಣಗಳು ಆಧುನಿಕ ಬದುಕಿನ ಸೂತ್ರಗಳಾಗಬೇಕೆನ್ನುವ ಆಶಯವನ್ನು ಈ ಅಂಕಿತ ಧ್ವನಿಸುತ್ತದೆ.

ಹೀಗೆ ಸಿದ್ಧಯ್ಯ ಪುರಾಣಿಕರ ಆತ್ಮಚಿಂತನೆಯ ನಾನಾ ಮುಖಗಳನ್ನು ಪರಿಚಯಿಸುವ 'ವಚನೋದ್ಯಾನ'ದ ವಚನಗಳನ್ನು ಕುರಿತು ಎಷ್ಟು ಹೇಳಿದರೂ ಕಡಿಮೆಯೇ ಎನಿಸುತ್ತದೆ. ತನ್ನನ್ನು ತಾನು ಅರಿಯಲು ಹಂಬಲಿಸುವುದರ ಜೊತೆಗೆ ಅಖಂಡ

ಅನುಭವದ ಮಾನದಂಡದಿಂದ ಸಮಾಜ ವಿಮರ್ಶೆಗೂ ತೊಡಗುವ ಚೇತನವೊಂದರ ಹೃದಯಗೀತೆಗಳಿಗಿರುವ 'ವಚನೋದ್ಯಾನ' ಕನ್ನಡ ಸಾಹಿತ್ಯಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿದೆ. ವಚನವೊಂದರಲ್ಲಿ ಪುರಾಣಿಕರೇ ಅಭಿಪ್ರಾಯಪಟ್ಟಿರುವಂತೆ ಮುನ್ನುಡಿ ಓದಿಯೋ, ಸಾದರ ಸ್ವೀಕಾರವನ್ನೋದಿಯೋ ವಾದ—ವಿವಾದಗಳನ್ನೆತ್ತದೆ ಮೂಲ ಗ್ರಂಥವನ್ನೋದಿ ಅರಗಿಸಿಕೊಂಡವರಿಂದ 'ವಚನೋದ್ಯಾನ'ದ ಸಂಬಂಧದಲ್ಲಿ ಸಹೃದಯತೆಯಿಂದ ಕೂಡಿದ ಪ್ರಾಮಾಣಿಕ ವಿಮರ್ಶೆಗಳು ಹೊರಬರಲೆಂದು ಆಶಿಸುತ್ತೇನೆ.

# ವಚನೋದ್ಯಾನ: ಒಂದು ಸಾಂಸ್ಕೃತಿಕ ವಿಶ್ಲೇಷಣೆ

**ವಸಂತ ಕುಷ್ಟಗಿ**

ಕನ್ನಡ ಸಾಹಿತ್ಯವು ವಿಶ್ವಸಾಹಿತ್ಯಕ್ಕೆ ಕೊಡಬಹುದಾದ ಕೊಡುಗೆಗಳಲ್ಲಿ ಅತ್ಯಂತ ಮಹತ್ವದ ಕೊಡುಗೆಯೆಂದರೆ ವಚನ ಸಾಹಿತ್ಯ. ಅದು ಬದುಕಿನ ಮೌಲ್ಯಗಳನ್ನು ನೀಡುವ ಕಣಜವಾಗಿದೆ, ವಿಶೇಷವಾಗಿ ಅಂತರಂಗ ಬಹಿರಂಗಗಳನ್ನು ಒಂದೆಯಾಗಿ ಸುವ ಸಾತ್ವಿಕ ತೇಜಸ್ಸನ್ನೂ ಹೊಂದಿದೆ. ಆದ್ದರಿಂದ ಅದಕ್ಕೆ ಸಾರ್ವಕಾಲಿಕ ಮೌಲ್ಯ ಬಂದಿದೆ. ಜೊತೆಗೆ ಅದು ಎಲ್ಲರಿಗೂ ಎಂದೆಂದಿಗೂ ಜೀವಸಂಜೀವಿನಿಯಾಗಿದೆ. ಈ ಬಗೆಯ ಸಾಹಿತ್ಯ ಪ್ರಕಾರವು ಹನ್ನೆರಡನೆಯ ಶತಮಾನದಲ್ಲಿ ವಿಶೇಷ ಪ್ರಭಾವವನ್ನು ಬೀರಿ ಸುವರ್ಣ ಯುಗವನ್ನೇ ನಿರ್ಮಿಸಿತು. ಸಂಸ್ಕೃತಿಯ ಸತ್ವವನ್ನು ಎತ್ತಿ ತೋರಿಸಿ, ತುಂಬು ಬಾಳಿಗೆ ದೀಕ್ಷೆಯನ್ನು ನೀಡಿತು. ಮನುಷ್ಯ ಆಲಸಿಯಾಗಿರದೆ, ಕಾಯಕಕರ್ಮಿಯಾಗಿ, ಸ್ವಾವಲಂಬಿಯಾಗಿ, ಯಾರಿಗೂ ಭಾರವಾಗದೆ, ಬದುಕಬೇಕೆಂಬ ವಿಚಾರಪ್ರಣಾಲಿಕೆಯನ್ನು ಪ್ರಸಾರಕ್ಕೆ ತಂದು ಆತನ ಭಾಗ್ಯವನ್ನು ತೆರೆಸಿತು. ಅಂತೆಯೇ ಇಂತಹ ಸಜೀವ ಸಾಹಿತ್ಯದ ಪ್ರಕಾರವನ್ನು ೨೦ನೆಯ ಶತಮಾನದಲ್ಲಿಯೂ, ಅನೇಕ ಗಣ್ಯಲೇಖಕರು ಅದನ್ನು ಬಳಸಿಕೊಂಡು ಬೆಳೆಸಿಕೊಂಡು ಬರಲು ಸಾಧ್ಯವಾಯಿತು. ಅಂತಹರಲ್ಲಿ ಶ್ರೀ ಜಚನಿ, ಶ್ರೀ ಎಸ್. ವಿ. ರಂಗಣ್ಣ, ಶ್ರೀ. ಎಸ್. ವಿ. ಪರಮೇಶ್ವರಭಟ್ಟ ಹಾಗೂ ಡಾ. ಸಿದ್ಧಯ್ಯ ಪುರಾಣಿಕರು ಪ್ರಮುಖರು.

ಡಾ. ಸಿದ್ಧಯ್ಯ ಪುರಾಣಿಕರ 'ವಚನೋದ್ಯಾನ'ವು ಈ ಶತಮಾನದ ವಚನ ಸಾಹಿತ್ಯದಲ್ಲಿಯೇ ಅಪರೂಪವಾದ ಗ್ರಂಥ. ಹನ್ನೆರಡನೆಯ ಶತಮಾನದ ಸತ್ವವನ್ನು ಇಪ್ಪತ್ತನೆಯ ಶತಮಾನದ ಬದುಕಿನೊಳಗೆ ತುಂಬುವ ಸಮರ್ಥಕೃತಿ. ಅದರಲ್ಲಿಯೂ ಇಂದು. ಬದುಕು ತನ್ನ ನಿಜವಾದ ಗತಿಯನ್ನೇ ಕಳೆದುಕೊಂಡು ಹುಚ್ಚಾಪಟ್ಟೆ, ಸ್ವೇಚ್ಛೆಯಾಗಿ ಕುಣಿಯುತ್ತಿರುವಾಗ ವಚನೋದ್ಯಾನವು ಅದರ ಅಂತರಂಗಕ್ಕೂ ಕೈಗನ್ನಡಿ ಹಿಡಿದು ಅದನ್ನು ಸುಂದರಗೊಳಿಸಲು ಹವಣಿಸಿರುವುದು ಗಮನಾರ್ಹವಾದ ವಿಷಯ. ವಿನಯ, ಶ್ರದ್ಧೆ, ವಿವೇಚನೆ, ಸಮಾಧಾನ, ಸಾಧನೆ, ಪ್ರೀತಿ, ಸೌಜನ್ಯ

ಗಳು ಮಾಸಿಹೋಗಿ ಭವಿಷ್ಯವನ್ನೇ ಕಳೆದುಕೊಂಡ ಇಡೀ ದೇಶ, ಇಡೀ ಜನಾಂಗ ಅಸ್ತವ್ಯಸ್ತವಾಗಿರುವ ಈ ಸಂದರ್ಭದಲ್ಲಿ ಇದು ಅಂತರಂಗದ ಚೆಲುವಿಗೆ ಹಿಡಿದಿರುವ ತುಕ್ಕನ್ನು ಬಿಡಿಸಲೂ ಪ್ರಯತ್ನಿಸಿದೆಂಬುದನ್ನು ಮರೆಯಕೂಡದು. ಅದಕ್ಕಾಗಿ ಈ ಗ್ರಂಥವು ಹುದುಗಿ ಹೋಗಿರುವ ಬದುಕಿನ ಸಂಸ್ಕೃತಿಯನ್ನು ಉತ್ಖನನದಿಂದ ಎತ್ತಿ ತೋರಿಸಿ, ಜಗತ್ತನ್ನೇ ಜೀರ್ಣೋದ್ಧಾರಗೊಳಿಸಲು ದಿಟ್ಟವಾದ ಹೆಜ್ಜೆಗಳನ್ನಿಟ್ಟಿದೆ, ಸಂಸ್ಕೃತಿಯೆಂದರೆ ತಾನೊಬ್ಬನೇ ಉಂಡು ಉಟ್ಟು ದರ್ಪದಿಂದ ಕಾಲ ನೂಕುವುದೆಂದರ್ಥ ವಲ್ಲ. ಅದರ ನಿಜವಾದ ವಿಶ್ಲೇಷಣೆಯನ್ನು ಈ ಗ್ರಂಥವು ಸಮರ್ಪಕವಾಗಿ ನೀಡಿದೆ. ಅನೇಕ ಸಲ ನಾವು ನಾಗರಿಕತೆಯನ್ನೇ ಸಂಸ್ಕೃತಿಯೆಂದು ಭ್ರಮಿಸುವುದುಂಟು. ಹಾಗಾಗ ಬಾರದೆಂದು

"ಮನೆಯು ಸಿರಿವಂತಿಕೆ
ನಾಗರಿಕತೆಯ ಪ್ರತೀಕ
ಮನದ ಸಿರಿವಂತಿಕೆ
ಸಂಸ್ಕೃತಿಯ ಸಂಕೇತವಯ್ಯ
ನಡಿಗೆ ನಾಗರಿಕತೆ, ನೃತ್ಯ ಸಂಸ್ಕೃತಿ
ಮಾತು ನಾಗರಿಕತೆ, ಗೀತೆ ಸಂಸ್ಕೃತಿ
ಬಣ್ಣ ನಾಗರಿಕತೆ, ಚಿತ್ರ ಸಂಸ್ಕೃತಿ
ಶಿಲೆ ನಾಗರಿಕತೆ, ಶಿಲ್ಪ ಸಂಸ್ಕೃತಿ
ಸ್ವತಂತ್ರಧೀರ ಸಿದ್ಧೇಶ್ವರಾ
ಕರ್ಮ ನಾಗರಿಕತೆ ಕಾಯಕ ಸಂಸ್ಕೃತಿಯಯ್ಯಾ!"

ಎಂದು ಸ್ಪಷ್ಟಪಡಿಸುವ ವಚನೋದ್ಯಾನದ ಈ ಒಂದು ವಚನವು ಸಂಸ್ಕೃತಿ ನಾಗ ರಿಕತೆಗಳ ಸ್ಪಷ್ಟ ಕಲ್ಪನೆಯನ್ನು ನೀಡುವ ಅಮೌಲ್ಯವಾದ ವ್ಯಾಖ್ಯೆಯೆಂದು ನಾನು ಪರಿಗಣಿಸಿದ್ದೇನೆ. ಇಲ್ಲಿ ಬರುವ ನೃತ್ಯ, ಗೀತೆ; ಚಿತ್ರ, ಶಿಲ್ಪ ಕಾಯಕಗಳೆಲ್ಲ ಮನದ ಸಿರಿವಂತಿಕೆಯ ಪ್ರತೀಕ. ಅಂತೆಯೇ ಮನದ ಸಿರಿವಂತಿಕೆಯೇ ಸಂಸ್ಕೃತಿ. ಇದು ಸರಳ ಸೌಜನ್ಯಗಳಿಂದ ತುಂಬಿದ ತಿಳಿಯಾದ ವ್ಯಾಖ್ಯೆ.

ದುರದೃಷ್ಟಕರವಾದ ಇಂದಿನ ಸಮಾಜದಲ್ಲಿ ಎಂತಹ ಒಳ್ಳೆಯ ವ್ಯಕ್ತಿಯೂ ಬರಡಾಗಿದ್ದಾನೆ. ಆತನ ಬಗೆಗೆ ಕನಿಕರ ತೋರುತ್ತ,

"ಸೃಷ್ಟಿ ಸೌಂದರ್ಯಕ್ಕೆ ಕಣ್ಣು ಕುರುಡಾಗಿಹವು;
ನೂರು ಮರಗಳ ನೂರು ಸ್ವರಗಳಿಗೆ ಕಿವಿ ಕಿವುಡಾಗಿಹವು;
ಬಿಲಿಯುವೆ ಬರುವ ಪರಿಮಳಗಳಿಗೆ ಮೂಗು ಎರವಾಗಿಹುದು;
ಮಲಯಜದ ಮೃದು ಸ್ಪರ್ಶಕ್ಕೆ ತ್ವಚ ಉರುಟಾಗಿಹುದು;
ಸಾರೋಕ್ತಿ ಸವಿನುಡಿಗಳಿಗೆ ನಾಲಗೆ ನಾಸ್ತಿಯಾಗಿಹುದು;

ಸದ್ಭಾವನೆಗಳಿಗೆ ಹೃದಯು, ಸುವಿಚಾರಗಳಿಗೆ ಚಿತ್ತ
ಬತ್ತಿ ಹೋಗಿಹವು!
ಎಂಥ ಬರಡುತನ, ಕೊರಡುತನ
ಉರುಟುತನ, ಒರಟುತನ
ಬಂದಿತಯ್ಯ ಬಾಳಿಗೆ!

ಎಂದು ನಿಟ್ಟುಸಿರು ಬಿಡುವ ಪುರಾಣಿಕರು ಸುಸಂಸ್ಕೃತ ಮಾನವನಲ್ಲಿರಬೇಕಾದ ಲಕ್ಷಣಗಳೇನು ? ಗುಣಗಳೇನು? ಎಂದು ವಿವೇಚನೆ ಮಾಡಿ ಹೆಜ್ಜೆ ಹೆಜ್ಜೆಗೆ ಮನಕ್ಕೆ ತಟ್ಟುವಂತೆ ಹೇಳುತ್ತ ಆಧುನಿಕ ಮಾನವನ ಉದ್ಧಾರ ಮಾಡಲು ಅಣಿಯಾಗಿದ್ದಾರೆ. ಆ ಆಣಿ ಮುತ್ತುಗಳನ್ನು ಇಲ್ಲಿ ಅಯ್ದುನೋಡುವುದು, ನಮ್ಮ ಮನದ ಕಣ್ಣಿಗೆ ಬೆಳಕನ್ನುಣಿಸುವ ಸಂಸ್ಕಾರವೇ ಸರಿ.

ನಾನೇ ದೇವರು ಎಂದು ಹೇಳುವ ಹಿರಣ್ಯಕಶ್ಯಪುವಿನಂತೆ ನಮ್ಮ ಬದುಕು. ನಮ್ಮ ಆಧುನಿಕ ಗುರುಗಳೂ ಅಂತಹರೇ. ಹೀಗಿರುವುದು ಸುಸಂಸ್ಕೃತ ಪರಿಸರದ ಲಕ್ಷಣವಲ್ಲ. ಅದಕ್ಕಾಗಿ ನಾವು ಎಷ್ಟೇ ವೈಜ್ಞಾನಿಕವಾಗಿ ಘನತೆಗಳನ್ನು ಸಾಧಿಸಿದ್ದರೂ, ಪರಾತ್ಪರ ಶಕ್ತಿಯೊಂದಿದೆಯೆಂಬುದನ್ನು ಮರೆಯಕೂಡದು. ಅದರಂತೆ ಆ ಶಕ್ತಿಯ ನಿಜವಾದ ಕಲ್ಪನೆಯನ್ನೂ ನಾವು ಮಾಡಿಕೊಂಡಿರಬೇಕು. ಅದು,

"...ರಸಕೆ ರಸ, ಚೆಲುವಿಗೆ ಚೆಲುವು, ನನ್ನಿಗೆ ನನ್ನಿಯಾದ,
ಸಚ್ಚಿದಾನಂದವೆ,
ಅನಾದಿ ಅನಂತವೆ
ಏಕಮೇವಾದ್ವಿತೀಯವೆ,
ವಿಶ್ವಗೇಹ, ವಿಶ್ವದೇಹ, ವಿಶ್ವಾತ್ಮ, ವಿಶ್ವಾತೀತವೆ,"

ಸರಿ. ಆ ಶಕ್ತಿಗೆ ನಾಮರೂಪಗಳಿಲ್ಲ. ಅದರ ಅಸ್ತಿತ್ವದ ನೆಲೆಯನ್ನು ಅರಿತರೆ, ಒರೆದರೆ, ಬರೆದರೆ, ಊಹಿಸಿದರೆ, ಭಾವಿಸಿದರೆ, ಕಲ್ಪಿಸಿದರೆ, ತಿಳಿದುಕೊಳ್ಳಲು ಸಾಧ್ಯವಿಲ್ಲ. ಅದು ಇವೆಲ್ಲವುಗಳಿಂದ ಅತೀತ. ಅದು ನಿರಾಕಾರ. ಸಾಕಾರ. ಅದು ಪ್ರಪಂಚದ ಅನಂತರೂಪಗಳಲ್ಲಿ ಕಂಡೂ ಕಾಣದೆ ಇರುವುದು. ಆದರೆ ಆ ಶಕ್ತಿಯ ಸಾಕ್ಷಾತ್ಕಾರವು ನಮ್ಮ ನಂಬಿಗೆಯ ಆಳವನ್ನು ಅವಲಂಬಿಸಿದೆ. ಅದನ್ನೊಮ್ಮೆ ಅತ್ತಿತ್ತ ಮಿಸುಕದೆ, ನಂಬಿದರೆ ಸಾಕು. ಸಂಸಾರವೆಂಬ ಅಂಬುಧಿಯು ಮೇಕೆದಾಟು ; ವಿಶ್ವದ ಪ್ರಶ್ನಾರ್ಥಕ ಚಿಹ್ನೆ ತೆರೆದ ಪುಸ್ತಕ ; ಕತ್ತಲೆಯೂ ಬೆಳಕು ; ಅರ್ಥಹೀನ ಬದುಕಿನ ಉಸಿರಾಟ ಅರ್ಥದ ನವಿಲಾಟ ; —ಅಂತೆಯೇ ಈ ಮಾತುಗಳನ್ನು ಮನನ ಮಾಡಿಕೊಂಡು,

"ನನ್ನ ನನಸಿನ ನೌಕೆಗೆ
ನೀನೇ ನಾವಿಕನಾಗಯ್ಯಾ;
ನನ್ನ ಕನಸಿನ ಪುಷ್ಪಕಕ್ಕೆ
ನೀನೇ ಚಾಲಕನಾಗಯ್ಯಾ;
ನನ್ನ ಮನಸಿನ ಬಿಳಿಯಾನೆಗೆ
ನೀನೇ ಮಾವುತನಾಗಯ್ಯಾ;
ನನ್ನ ಕಲ್ಪನೆಯ ಕ್ಷಿಪಣಿಗೆ
ನೀನೇ ನಿಯಂತ್ರಕನಾಗಯ್ಯಾ;
ನನ್ನ ತನು-ಮನ-ಪ್ರಾಣ-ಜೀವನ
ಚಿಂತನ ಅಂತರ್ಮಂಥನಗಳಿಗೆ
ನೀನೇ ಆಧಾರ, ನೀನೆ ಆಶ್ರಯವಾಗಿರಯ್ಯಾ—"

ಎಂದು ಶರಣು ಹೋದರೆ, ಇಂಥ ಕಲಿಯುಗದ ಈ ಶತಮಾನದಲ್ಲಿಯೂ ಮನುಷ್ಯನಿಗೆ ಸಂಸ್ಕೃತಿಯ ಭದ್ರ ತಳಹದಿ ಸಿಕ್ಕು, ಮುಕ್ತಿಯು ಸನ್ನಿಹಿತವಾಗುವುದರಲ್ಲಿ ಸಂದೇಹವಿಲ್ಲ.

ಇಂಥ ಪರಾತ್ಪರ ಶಕ್ತಿಯನ್ನು ಬಲವಾಗಿ ನಂಬಿದವನೇ ಭಕ್ತ–ಆ ಭಕ್ತನೇ ಸುಸಂಸ್ಕೃತ. ಆತನ ನಡೆಯೇ ಸಂಸ್ಕೃತಿ. ಹೀಗಾಗಿ ಆತನು "ನಾನೇನೂ ನಿನ್ನ ಶಕ್ತಿಗಾಗಿ ಹಂಬಲಿಸಿಲ್ಲ ; ನೀನು ಮಾತ್ರ ನನ್ನ ಭಕ್ತಿಗಾಗಿ ಕಾದಿಹೆಯಂತೆ. ಹೌದೆ ?" ಎಂದು ಪ್ರಶ್ನೆ ಕೇಳುತ್ತ ಸತಿಪತಿ ಭಾವದಲ್ಲಿ ತನ್ನ ಮನಸ್ಸನ್ನು ಪರಾತ್ಪರ ಶಕ್ತಿಯಲ್ಲಿ ತಾದಾತ್ಮ್ಯಗೊಳಿಸುತ್ತಾನೆ. ಈ ರೀತಿಯ ಸಾಧನೆಯಲ್ಲಿ ಆ ಶಕ್ತಿಯೊಡನೆ,

"ನಾನು ಎಚ್ಚರಿದ್ದಾಗ ನೀನು ಮಲಗಿದೆ
ನಾನು ಮಲಗಿದಾಗ ನೀನು ಎಚ್ಚತ್ತೆ ನೋಡಾ !
ನಾನು ನನಗೆ ಹತ್ತಿರವಾದಾಗ ನಿನಗೆ ದೂರವಾದೆ,
ನಿನಗೆ ಹತ್ತಿರವಾದಾಗ ನನಗೆ ಎರವಾದೆ ನೋಡಾ !
ನನಗೆ ಮಾತನಾಡಲು ಮನಸ್ಸಾದಾಗ ನಿನಗೆ ಮೌನವ್ರತ,
ನಿನಗೆ ಮಾತನಾಡಬೇಕೆನಿಸಿದಾಗ ನನಗೆ ಮೌನವ್ರತ ನೋಡಾ !
ನಾನಿದ್ದಾಗ ನೀನಿರಲಿಲ್ಲ, ನೀನಿದ್ದಾಗ ನಾನಿರಲಿಲ್ಲ,
ಇಬ್ಬರೂ ಕೂಡುವುದೇ ಕೂಡಿಬರಲಿಲ್ಲ !
ಇದೆಂಥ ಇಜ್ಜೋಡಿನ ಸಂಸಾರ ಇನಿಯ ?
ಇದೆಂಥ ವಿಪರೀತ ಸತಿಪತಿತ್ವ ಎರೆಯ ?
ಕೂಡಿದರೆ ಸತಿಯನ್ನೇ ಇಲ್ಲವಾಗಿಸುವ ಪತಿನೋಡವ್ವ"

ಎಂದು ಸರಸಸಲ್ಲಾಪ ನಡೆಸುತ್ತ ಬಹುಸೂಕ್ಷ್ಮವಾಗಿರುವ ಪರಾತ್ಪರ ಶಕ್ತಿಯನ್ನು ಬಗೆಯ ಕಣ್ಣಿಗೆ ತೆರೆದು ತೋರಿಸುವ ವಿಧಾನವು ನಿಚ್ಚಳವಾಗಿದೆ. ಅದು ಹೃದಯ

ಸಂಸ್ಕಾರವನ್ನು ಹೆಚ್ಚಿಸಿ, ಸಂಸ್ಕೃತಿಯ ಮೌಲ್ಯಗಳನ್ನಲ್ಲಿ ಜೋಡಿಸಿ, ಆತನನ್ನು ಸಂಪೂರ್ಣ ಮಾನವನಾಗುವುದರ ಕಡೆಗೆ ನಡೆಸುತ್ತದೆ.

ಸಂಪೂರ್ಣ ಮಾನವನಾಗುವುದರ ಕಡೆಗೆ ಹೆಜ್ಜೆಯಿಟ್ಟ ಈ ಮನುಷ್ಯ ಅರ್ಥಾತ್ ಭಕ್ತನು, ಬುದ್ಧಿಯ ಬದರಿಯ ದಾರಿಯಲ್ಲಿ ಸಾಗಿ, ನಾನು 'ನಾನಾಗುವುದರಲ್ಲಿ ಪೂರ್ಣತ್ವವನ್ನು ಪಡೆಯುತ್ತಾನೆ. ಇಂತಹನು ಪರಮಾತ್ಮನೊಡನೆ' 'ನನಗೆ ಬೇಕಾದುದ ನಾನೇ ಬಾಯಿಬಿಟ್ಟು ಕೇಳಬೇಕೆ ?' ಎಂದು ಆತ್ಮೀಯವಾಗಿ ನಡೆದುಕೊಳ್ಳಲು ಪ್ರಾರಂಭಿಸುತ್ತಾನೆ. ದಿನಕ್ಕೊಬ್ಬರ ಕೈಗೆ ತನ್ನನ್ನು ಕೊಡದಂತೆ ಒಂದೇ ಮಾರ್ಗದಲ್ಲಿ ಸಾಗಿದಂತೆಯೂ. ನನ್ನಿಯೊಂದನೆ ನುಡಿಸುವಂತೆಯೂ ಕೇಳಿಕೊಳ್ಳುತ್ತಾನೆ. ಕಡಲು ಬಿಟ್ಟು ಅಲೆ ಇರದ ರೀತಿಯಲ್ಲಿ ಆತನೊಡನೆ ಒಂದಾಗಲು ಸಮರ್ಪಣ ಭಾವವನ್ನು ತಾಳಿ.

"ತಂತಿಗಳಲ್ಲಿ ಸುನಾದವಿದೆ—
ಸೋರೆದಂಡಿಗೆಗಳಿಗೆ ಬಿಗಿದಾಗ ಮಾತ್ರ ;
ಚರ್ಮದಲ್ಲಿ ಸುನಾದವಿದೆ—
ವಾದ್ಯಗಳ ಮೈಗಳಿಗೆ ಬಿಗಿದಾಗ ಮಾತ್ರ ;
ಬಿಲ್ಲಿನಲ್ಲಿ ಬಾಣಬಿಡುವ ಶಕ್ತಿಯಿದೆ—
ನಾರಿಯಿಂದ ಬಿಗಿದಾಗ ಮಾತ್ರ ;
ನನ್ನಲ್ಲಿಯೂ ನಿನ್ನರಿವ ಶಕ್ತಿಯಿದೆ—
ನಿನ್ನಡಿಗಳಿಗೆ ನನ್ನ ಬಿಗಿದಾಗ ಮಾತ್ರ..."

ಎಂದು ಅದರ ಸಾಧ್ಯತೆಯ ಕಡೆಗೆ ಸಂಪೂರ್ಣ ಒಲುವನ್ನು ಹೊತ್ತಿಸಿಕೊಂಡು ಹೊತ್ತಾಗಲು ಆರಂಭಿಸುತ್ತಾನೆ. ಅಂತಹನು, 'ಜೀವನ ವಿಕಾಸದ ಸುಳಿದೆಗೆವ ಸರಪಳಿಯಲ್ಲಿ ಮುರಿದಗೋಣಸು ನಾನಾಗದಿರಲಯ್ಯಾ' ಎಂಬ ಹಂಬಲದೊಡನೆ ಬದುಕಿನಲ್ಲಿ ಶ್ರದ್ಧೆಯನ್ನು ತಾಳಲು ನಿಶ್ಚಯಿಸುತ್ತಾನೆ. "ಸ್ಥಿತಪ್ರಜ್ಞನಾಗಲು ಶಪಥ ವನ್ನೇನೂ ಮಾಡಿಲ್ಲ ; ಅದು ನನಗೆ ನುಂಗಲಾಗದ ತುತ್ತು ತಂದೆ !" ಎಂದು ಹೇಳುವಷ್ಟರ ಧೈರ್ಯವನ್ನು ತಾಳಲಾರಂಭಿಸುತ್ತಾನೆ. ಕೊನೆಗೆ, "ನಿನ್ನರಿವುದೇ ಸ್ವರ್ಗ, ನಿನ್ನ ಮರೆವುದೇ ನರಕ ; ನಿನ್ನ ನೆನಹೇ ಜೀವನ, ನಿನ್ನ ಮರಹೇ ಮರಣ" "ನೀನು ಮಾತ್ರ ಬೇಡುವುದು ಸ್ವಲ್ಪ, ನೀಡುವುದು ಬಹುಳವಯ್ಯಾ" "ನೀನು ತೋರಿಸಿದಂತೆ ಬರೆದರೆ ಅದು ವಚನ" ಎಂದು ಪರಮಾತ್ಮನ ದೊಡ್ಡಗುಣದ ಅರಿವನ್ನು ತಾಳಿಕೊಂಡು ಸಂಸ್ಕೃತಿಯ ಸತ್ವಗಳನ್ನು ಅಳವಡಿಸಿಕೊಳ್ಳತೊಡಗುತ್ತಾನೆ.

ಸಂಸ್ಕೃತಿಯ ಸತ್ವಗಳಲ್ಲಿ, ಅನೇಕತೆಯಲ್ಲಿ ಏಕತೆಯನ್ನು ಕಾಣುವ ಸಮನ್ವಯ ದೃಷ್ಟಿಯನ್ನು ಹೊಂದಬೇಕಾದುದು ಪ್ರಮುಖವಾದುದು. 'ಹೆಣೆದ ಹೂಗಳು ಹಲವಾದರೂ ಹಾರ ಒಂದೇ' ಎಂಬಂತೆ ಪರಮಾತ್ಮನನ್ನು ಪೂಜಿಸುವ, ಪ್ರಾರ್ಥಿಸುವ,

ಯಜಿಸುವ, ಭಜಿಸುವ ರೀತಿ ನೂರಾದರೂ ಉದ್ಧಾರ ಒಂದೇ ಎಂಬುದನ್ನು ತಿಳಿದು ಕೊಂಡಿರುವುದೇ ಅದರ ಮತಿತಾರ್ಥ. ಆದರೆ ಪ್ರತಿಯೊಬ್ಬನು ತಾನು ಹಿಡಿದ ಮಾರ್ಗವೊಂದನ್ನೇ ಅನುಚೂನವಾಗಿ ನಡೆದು, ಇನ್ನೊಂದನ್ನು ಹಳಿಯದೆ ಸಾಗಬೇಕು. ಆಗ ಮಾತ್ರ ಅವನು, 'ಒಂದು ಅಡಿಕೆಗೆ ಕೊಳ್ಳುವವರಿಲ್ಲವೆಂದೂ... ಈ ಬಡ ಒತ್ತಕರಡು ಹರಳಯ್ಯನ ತೊಡೆಯು ಚರ್ಮವಾಗಬಲ್ಲುದೇ' ಎಂದು. ಹಂಬಲಿಸಬೇಕಾಗಿಲ್ಲ. ಮನಸ್ಸನ್ನು ಗೆದ್ದು ಜಗದಾಗುಹೋಗುಗಳಿಗೆ ಕಾರಣತಾನಲ್ಲ ವೆಂದು ತಿಳಿದುಕೊಂಡು, "ಕಿರಿಯರಲ್ಲಿ ಕಿರಿಯ ನಾನು—ಕಿರಿತನವೇ ನಾನು ! ಆದರೆ ನಿನ್ನತನಕ್ಕೆ ನೆಲೆಯಾದ ನನ್ನತನ ಕಿರಿದೇನಯ್ಯಾ" ಎಂಬ ಅರ್ಥಪೂರ್ಣ ವಿಶ್ವಾಸ ದೊಡನೆ ಸಾಗುವುದೇ ಸುಸಂಸ್ಕೃತಮಾರ್ಗ. ಈ ಸಾಮರಸ್ಯ ಸಮನ್ವಯ ಮಾರ್ಗದ ಬಗೆಗೆ,

"ಗಂಡ ಬಯಸಿದುದನ್ನೇ ಹೆಂಡತಿ ಹೇಳದೆಯೆ ಮಾಡಿದಾಗ
ಆ ಅಡುಗೆಯ ರುಚಿಯೆಷ್ಟು? !
ಸತಿ ಬಯಸಿದುದನ್ನೇ ಪತಿ ಹೇಳದೆಯೇ ತಂದಾಗ
ಆ ಒಡವೆಯ ಅಮೂಲ್ಯತೆಯೆಷ್ಟು? !"

ಎಂದು ಹೇಳು ಸಾಮಾನ್ಯ ನಿತ್ಯಬಳಕೆಯ ಅಪರೂಪದ ಮಾತುಗಳು ಹೃದಯವನ್ನು ಬಿಂಬಿಸುತ್ತವೆ.

ಸಂಸ್ಕೃತಿಯ ಮೂಲ ಸತ್ವಗಳನ್ನು ಜೀವನದಲ್ಲಿ, ಪೂರ್ಣಮಾನವನಾಗಬೇಕೆಂಬ ವ್ಯಕ್ತಿಯು ಅಳವಡಿಸಿಕೊಳ್ಳುತ್ತಿರುವಾಗ ಆತನು ತನ್ನ ಆತ್ಮವಿಶ್ಲೇಷಣೆಯನ್ನು ಮಾಡಿಕೊಳ್ಳುತ್ತ ಸಾಗಬೇಕಾಗುವುದು. ತಾನು ಬಾಳುತ್ತಿರುವ ಸಮಾಜದಲ್ಲಿಯ ಏರುಪೇರುಗಳನ್ನು ತಿದ್ದಿಕೊಂಡು, ಸಮತಲನಾಗಿ ಸಾಮರಸ್ಯ ಪಡೆಯಬೇಕಾಗುವುದು. ಅದಕ್ಕಾಗಿ ಆತನು ಮೂಲತಃ ಸಮಯಕ್ಕೆ ಮಹತ್ವ ಕೊಡಬೇಕು. ಅದನ್ನು ವ್ಯಾಸಂಗಕ್ಕೆ, ಸತ್ಸಂಗಕ್ಕೆ, ಸತ್ಕರ್ಮಕ್ಕೆ ಮೀಸಲಾಗಿರಿಸಬೇಕು. ಈ ಲೋಕದಲ್ಲಿ ಮೂರು ದಿವಸದ ಬದುಕೇ ಏಕಾಗವಲ್ಲದೇಕೆ, ಲೇಸೆನಿಸಿಕೊಂಡು ಅದನ್ನೇ ನಾಕವಾಗಿಸಿ ಕೊಳ್ಳಬೇಕು. ಇದನ್ನು ಸಾಧಿಸಲು, ಕಾಯಕ ಕೈಲಾಸವೆಂದು ನಂಬಿ ನಡೆದರೆ ಮಾತ್ರ ಸಾಧ್ಯ. ಹಿಂದೆ ಇದ್ದ ಕಾಯಕ ಮಹತ್ವವು ಇಂದು ನಮ್ಮಲ್ಲಿ ಮಾತಿನ ಮಲ್ಲಿಗೆ ಯಾಗಿದೆ. ಆದರೆ ಅದು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹೃದಯದ ಮಲ್ಲಿಗೆಯಾಗಿದೆ. ಪುನಃ ನಾವು ಈಗ ಕಾಯಕದ ವೌಲ್ಯವನ್ನು ಅರಿತು, 'ಮಾಡಿ ಮಾಡಿ ಮಡಿವುದನ್ನು ಅರಿತು, ಆಚರಿಸಿ,' ಆದರ್ಶವಾಗಿ ಬಾಳಬೇಕಾಗಿದೆ ಮತ್ತು ಕಾಯಕದಲ್ಲಿ ನಿರತನಾದ ವ್ಯಕ್ತಿ, 'ಈ ದಿನವಲ್ಲ, ಈ ಕ್ಷಣ ಮಿಗಿಲೆಂದು ನಂಬು ; ಕ್ಷಣ ಕ್ಷಣದಲ್ಲಿ ನಿನ್ನದೇನಾ ದರೂ ತುಂಬು' ಎಂಬುವ ಮಾತಿಗೆ ತಾತ್ವಿಕವಾಗಿ ಸತ್ವವನ್ನು ತುಂಬುತ್ತ ಸದಾ ಸಾಗಬೇಕಾಗುತ್ತದೆ. ಹೀಗೆ ಸಾಗಿದಾಗ ಒಳ್ಳೆಯ ಜೀವನ, ಒಳ್ಳೆಯ ನಡತೆ,

ಒಳ್ಳೆಯ ನುಡಿಗಳು ಅಂತರಂಗದ ಚೆಲುವನ್ನು ಹೆಚ್ಚಿಸುತ್ತವೆ. ಅದ್ದರಿಂದ ಹಿಂದೆ ವಚನಕಾರರು ದುಡಿಮೆಗೆ ಮಹತ್ವಕೊಟ್ಟಂತೆ–ಇಂದು ನಾವೂ ಅದರ ಬೆಲೆಯನ್ನರಿತು ನಡೆದು ಮೇಲು-ಕೀಳುಗಳನ್ನು ಹೊಡೆದುಹಾಕಬೇಕಾಗಿದೆ. 'ಬದುಕು, ಬದುಕಗೊಡು ; ಬದುಕಗೊಡು, ಬದುಕು !' ಎಂದು ಹಾಡುತ್ತಾ ದುಡಿಯಬೇಕಾಗಿದೆ. ಎಂದರೆ ಕರ್ನಾಟಕವು ಪುನಃ ಪುನಃ ವಿಶ್ವದಲ್ಲಿ ಬಂಗಾರದ ಮಳೆಯನ್ನು ಸುರಿಸಲು ಸಮರ್ಥವಾಗುತ್ತದೆ.

ಗಂಭೀರವಾದ ಒಳ್ಳೆಯ ದುಡಿಮೆಯಿಂದ ಒಳ್ಳೆಯ ಬದುಕು ನಿರ್ಮಾಣವಾದಾಗ, ಅಲ್ಲಿ ಬದುಕಿನ ಹೋರಾಟವು ಸ್ಪರ್ಧೆ–ಈರ್ಷ್ಯೆಗಳ ಬೆಂಕಿ ಬೆಟ್ಟವಾದರೂ ಬಾಳಿನ ಬೆಲೆಗಳು ಬೂದಿಯಾಗಲಾರವು ; ನಗು–ಅಳುವುಗಳನ್ನು ಸರಿಸಿದರೂ ಸಮಾಧಾನದ ನೆಲೆಗಟ್ಟು ನಿರ್ಮಾಣವಾಗಿರುತ್ತದೆ ; ಕಾಯಕವೇ ನಾಯಕನಾಗಿ, ಕಾಯಕದ ನಾಯಕನೇ ತಾನಾಗಿ ವ್ಯಕ್ತಿರೂಪುಗೊಳ್ಳುತ್ತಾನೆ ; ಸತ್ತವರ ಸುಂದರ ಸ್ಮಾರಕದ ಜೊತೆಗೆ ಇದ್ದವರ ಉದ್ಧಾರವಾಗುತ್ತದೆ ; ಸಿರಿ, ಶ್ರಮ, ಸುಖಗಳ ಜೊತೆಗೆ ಶೀಲ, ಸೃಜನ, ಸಂಸ್ಕೃತಿಗಳ ಸುವರ್ಣ ಸಂಪುಟವು ಅಂಗೈನೆಲ್ಲಿಯಾಗುತ್ತದೆ ; ಬೆವರಿನ ಬೆಲೆ, ಕಣ್ಣೀರಿನ ಬೆಲೆ, ಸಹನೆ, ಸಂಯಮ, ಸ್ವಾರ್ಥತ್ಯಾಗ, ಸೇವಾಯೋಗಗಳ ಬೆಲೆ ಗೊತ್ತಾಗಿ ಅಂತಃಸತ್ವವು ಸ್ವಯಂಚೇತನವಾಗಿ ಕಂಗೊಳಿಸತೊಡಗುತ್ತದೆ. ಆ ಸ್ವಯಂ ಚೇತನವು ತನ್ನ ಸುತ್ತಲಿನ ಪರಿಸರವನ್ನು ಸುಂದರಗೊಳಿಸುತ್ತದೆ. ಇಂತಹ ಪರಿಸರವನ್ನೇ ಸುಸಂಸ್ಕೃತ ರಾಷ್ಟ್ರದ ಭದ್ರತಳಹದಿಯೆಂದು ವಚನೋದ್ಯಾನವು ತೋರಿಸಿಕೊಟ್ಟಿದೆ.

ಈ ವಚನೋದ್ಯಾನವು ಸುಸಂಸ್ಕೃತ ರಾಷ್ಟ್ರದ ಭದ್ರತಳಹದಿಯನ್ನು ಹಾಕಿ ಕೊಡುವುದೆಂದರೆ ಸುಸಂಸ್ಕೃತ ರಾಷ್ಟ್ರಕನ ನಿರ್ಮಾಣದಲ್ಲಿ ವಿಶಿಷ್ಟವಾದ ಪಾತ್ರವನ್ನು ವಹಿಸಿರುವುದು. ಆದು ಮಹತ್ತರವಾದುದು ಏಕೆಂದರೆ ಇದೊಂದು ವಿಶ್ವಮಾನವನ ಸಂಸ್ಕೃತಿಯನ್ನು ವಿಶ್ಲೇಷಿಸಿ ಹೇಳುವ ಗೀತಾಬೋಧೆ. ಆಧುನಿಕ ರೀತಿ-ನೀತಿಗಳ ಮೌಲ್ಯಿಕ ಸತ್ಯಗಳನ್ನು ಅಳವಡಿಸಿಕೊಂಡು ಹೇಳುವ ತ್ರಿಕಾಲಾಬಾಧಿತ ಚಿರಬಾಳಿನ ಸೊಗಸನ್ನೆಲ್ಲ ಚಿತ್ರಿಸಿರುವ ಕಲಾಕುಂಜ. ಅದರ ಅಂತರಂಗದ ಸೌಂದರ್ಯದಲ್ಲಿಯೇ ಪರಮಾತ್ಮನ ಸಾಕ್ಷಾತ್ಕಾರ. ತನ್ನರಿವಿನ ದಾರಿಯ ಬೆಳಕಿನಲ್ಲಿಯೇ ತಾನು ಈ ಉದ್ಯಾನದಲ್ಲಿ ಸಾಗಿದಾಗ, 'ಇನ್ನೊಬ್ಬರ ಕೈಯ ತುತ್ತು ಕಸಿದು ತಿನ್ನುವುದಕ್ಕಿಂತ, ಹಸಿದಿರುವುದೇ ಅಸನವಯ್ಯ: ಇನ್ನೊಬ್ಬರ ಹೆಸರ ಕೆಡಿಸಿ ಹೆಸರಾಗುವುದಕ್ಕಿಂತ ಹೆಸರಿಲ್ಲದಿರುವುದೇ ಪಸಿನವಯ್ಯಾ" ಎಂಬ ತನ್ನ ಹಿತವನ್ನು ಕಾಣುತ್ತಾನೆ. ಈ ವಿಶಾಲ ವಿಶ್ವದಲ್ಲಿ ನಾನೊಬ್ಬನೇ ಬದುಕಿಲ್ಲ, ನನ್ನೊಬ್ಬನಿಗಾಗಿಯೇ ಈ ಲೋಕವಿಲ್ಲವೆಂದು ಮನಗಾಣುತ್ತಾನೆ. ಎಲ್ಲ ದೇಶ, ಭಾಷೆ, ವರ್ಗ, ಮತ, ಜನರನ್ನೆಲ್ಲ ತನ್ನವರೆನ್ನುವ ಆತ್ಮೀಯತೆಯನ್ನು ಪಡೆಯುತ್ತಾನೆ. ಇಷ್ಟೆಲ್ಲ ಅಂತರಂಗದ ಸೊಗಸು ಆತನಲ್ಲಿ

ಬೆಳಗಬೇಕಾದರೆ, ಆತನಲ್ಲಿ ಪ್ರೀತಿಸುವ ಹೃದಯವೊಂದಿರಬೇಕು. ಆದರಿಂದ ಹಂಚಿ ತಿನ್ನುವ ಬಡವನ ಬಗೆಗೆ, ಸದಾಚಾರಿಯಾದ ಪಾಮರನ ಬಗೆಗೆ ಪರೋಪಕಾರಿ ಸಂಸಾರಿಯ ಬಗೆಗೆ, ಅದಮ್ಯ ಅಭಿಮಾನ ಮೂಡುತ್ತದೆ. ಮಾನಹೀನನಾಗಿ ಪದ್ದಿನಂತೆ ಬದುಕುವುದಕ್ಕಿಂತ ಮಾನಧನನಾದ ಅಭಿಮನ್ಯು ತಾನಾಗುತ್ತಾನೆ. ಎಲ್ಲರೂ ತನಗಾಗಿ ಎಂಬ ಅಧರ್ಮದ ಬದಲಾಗಿ ತಾನು ಎಲ್ಲರಿಗಾಗಿ ಎಂಬ ವಿಶ್ವಧರ್ಮವನ್ನು ತನ್ನದಾಗಿಸಿಕೊಳ್ಳುತ್ತಾನೆ. ಆ ಬಲದಿಂದ ತಾಳಿಬಾಳುವ ಗಾಯಿತ್ರಿಶಕ್ತಿಯನ್ನು ಪಡೆಯುತ್ತಾನೆ. "ಅಸು ಉಳಿಸುವ ಹುಸಿ, ದುಡಿದುಣ್ಣುವ ಕರ್ಮ, ಬಾಳುಬೆಳಗಿದ ವಿದ್ಯೆಗಳು" ಆತನಿಗೆ ಪ್ರೇರಣೆಯಾಗಿ ಬರುತ್ತವೆ. ತನಗೆ ತಾನು ಗೆಳೆಯನಾಗಿ ಶೀಲದ ಖಣಿಯಾಗುತ್ತಾನೆ. ಬಲ್ಲವರ ಸೊಲ್ಲುಗಳಲ್ಲಿ ವಿಶ್ವಮಾನವತ್ವವನ್ನು ಪಡೆದು ಬೆಲ್ಲವಾಗುತ್ತಾನೆ. ಕರುಣೆ, ಕನಿಕರ, ಪ್ರೀತಿ, ಮಮತೆ, ಸೌಹಾರ್ದ, ಕಲ್ಯಾಣ, ಔದಾರ್ಯ, ಸದ್ಗುಣಗಳನ್ನು ಪಡೆದು ತಾನೇ ಕಾಶಿ, ಗಯೆ, ಕಂಚಿ, ಕೇದಾರ, ಜ್ಯೋತಿರ್ಲಿಂಗ, ಮಕ್ಕಾಮದೀನಾ, ಬೆತ್ಲೆಹೇಮ್, ಕಲ್ಯಾಣ, ಉಡುಪಿ, ಶೃಂಗೇರಿ ಶ್ರವಣಬೆಳುಗೊಳವಾಗಿಬಿಡುತ್ತಾನೆ. ಶುದ್ಧಾಂತರಂಗ, ಪಾವನತೆ, ಶುಭ್ರಶೀಲಗಳಿಂದ ಕೂಡಿಕೊಂಡು ತಾನೇ ಗಂಗಾ, ಯಮುನಾ, ತುಂಗಭದ್ರಾ, ಕಾವೇರಿ, ನರ್ಮದಾ, ಕೃಷ್ಣಾ, ಗೋದಾವರಿಗಳಾಗಿ ಸಪ್ತ ಸಮುದ್ರಗಳ ಗುಣಗಾಂಭೀರ್ಯವನ್ನು ಪಡೆಯುತ್ತಾನೆ. ಆಗ ಪ್ರಕೃತಿಯನ್ನೆಲ್ಲ ಸಂಸ್ಕೃತಿಯಾಗಿ ಕಾಣುವ ಒಳಗಣ್ಣಿನ ಕಿರಣಗಳು ಸ್ಪಷ್ಟವಾಗಿ ಬಿಡುತ್ತವೆ. ಆತ್ಮವಿಶ್ವಾಸ ಬೆಳೆದು ಹೇಡಿತನವಳಿದು ಸ್ವತಂತ್ರಧೀರನಾಗುತ್ತಾನೆ. ನೀರೆರೆದವನಿಗೂ, ಕಡಿಯ ಬಂದವನಿಗೂ ಹಣ್ಣು ನೆರಳುಗಳನ್ನು ನೀಡುವ ಮರದ ಬುದ್ಧಿಯ ಎತ್ತರಕ್ಕೆ ಬರುತ್ತಾನೆ. ಹೊಗಳಿಕೆಯನ್ನು ತಳ್ಳಿಬಿಟ್ಟು ನಿಜಮಾನವನಾಗಿ ಕೊನೆಯವರೆಗೂ ಬಾಳುತ್ತ, ಪ್ರೀತಿ ಮತ್ತು ಆಚಾರಗಳೇ ಪರಮವಸ್ತುವೆಂದು ನಂಬಿಬಿಡುತ್ತಾನೆ. ಅಂತಹನ ವ್ಯಾಖ್ಯೆಯನ್ನು,

"ಒಳಿತನ್ನು ಮಾಡಿದವರಿಗೆ, ಒಳಿತನ್ನು ಮಾಡುವವ ಮಾನವ,
ಒಳಿತನ್ನು ಮಾಡದವರಿಗೂ, ಒಳಿತನ್ನು ಮಾಡುವವ ಮಹಾಮಾನವ,
ಕೆಡುಕನ್ನು ಮಾಡಿದವರಿಗೂ, ಒಳಿತನ್ನು ಮಾಡುವವ
ದೇವಮಾನವ ನೋಡಯ್ಯಾ!

* * * * *

ಪ್ರೀತಿಸಿದವರನ್ನು ಪ್ರೀತಿಸುವವ ಮಾನವ,
ಪ್ರೀತಿಸದವರನ್ನೂ ಪ್ರೀತಿಸುವವ ಮಹಾಮಾನವ
ದ್ವೇಷಿಸುವವರನ್ನೂ ಪ್ರೀತಿಸುವವ ದೇವಮಾನವ ನೋಡಯ್ಯಾ !"

ಎಂಬ ವಚನವು ಸ್ಪಷ್ಟಪಡಿಸುತ್ತದೆ. ಅದನ್ನು,

"ಮೂರು ಮೂರು ತಾಸು ಭಾಷಣ ಬಿಗಿವವರಿಗಿಂತ
ಊರ ದಾರಿಯ ಮುಳ್ಳು ತೆಗೆವವರಿಗೆ ತಲೆಬಾಗುವೆನಯ್ಯಾ ನಾನು ;

ಮೂರು ಹೊತ್ತು ಮಾರುದ್ದ ಪೂಜೆ ಮಾಡುವವರಿಗಿಂತ
ಮೂರು ನಿಮಿಷ ರೋಗಿಯ ಶುಶ್ರೂಷೆ ಮಾಡುವರಿಗೆ
ಮಣಿವೆನಯ್ಯಾ ನಾನು ;
ಹೊಸ ಹೊಸ ಬಿಸಿ ಶಾಸನ ರಚಿಸುವವರಿಗಿಂತ
ಹಸಿದವರಿಗೆ ಅಶನವಿಕ್ಕುವವರಿಗೆ ವಂದಿಸುವೆನಯ್ಯಾ ನಾನು ;
ಗುಡಿಗುಂಡಾರ ಮಠಮಹಲುಗಳ ಕಟ್ಟಿಸುವವರಿಗಲ್ಲ,
ಬಡವರಿಗೆ ಗುಡಿಸಲು ಕೊಡುವವರಿಗೆ ಕೈಮುಗಿವೆನಯ್ಯಾ ನಾನು ;
ವೇದಾಗಮಗಳಿಗೆ ಭಾಷ್ಯ ಬರೆಯುವವರಿಗಿಂತ
ನಿರಕ್ಷರರಿಗೆ ಅಕ್ಷರ ಕಲಿಸುವವರಿಗೆ ಕೈಜೋಡಿಸುವೆನಯ್ಯಾ ನಾನು ;
ಸ್ವತಂತ್ರಧೀರ ಸಿದ್ಧೇಶ್ವರಾ, ನಿನ್ನ ಹೆಸರು ಹೇಳಿ ಬದುಕುವವರಿಗಲ್ಲ,
ಹಸುಳೆ ಹೆಂಗಳೆಯರ ಏಳಿಗೆಗೆ ಯತ್ನಿಸುವವರಿಗೆ
ನಮೋ ನಮೋ ಎಂಬೆನಯ್ಯಾ ನಾನು !"

ಎಂಬ ವಚನವು ಸಾಕಷ್ಟು ವಿವರಗಳೊಡನೆ ವ್ಯಾಖ್ಯಾನಿಸಿರುವುದನ್ನು ನಾವಿಲ್ಲಿ ಗಮನಿಸಬಹುದು.

ಹೀಗೆ ವಚನೋದ್ಯಾನವು ಮಾನವ ಸಂಸ್ಕೃತಿಯ ಸಂಹಿತೆಗಳಿಗೆ ಬರೆದ ಸುಂದರ ವ್ಯಾಖ್ಯಾನ. ಅಲ್ಲಿ ಬರುವ ಸಪ್ತಾಕ್ಷರಿಯಿಂದ ಏಕಾಕ್ಷರಿಯವರೆಗಿನ ಮಂತ್ರಗಳು ಚೇತೋಹಾರಿ ಸುಸಂಸ್ಕೃತ ವಿಶ್ವಮಾನವನು ಮೆಟ್ಟಲು ಮೆಟ್ಟಲೇರಿ ಸ್ವತಂತ್ರಧೀರ ಸಿದ್ಧೇಶ್ವರನೇ ಆಗುವ ಸಾಧನ ಸೋಪಾನ.

# ವಚನೋದ್ಯಾನ–ಒಂದು ಮಾನವೀಯತೆಯ ವ್ಯಾಖ್ಯಾನ

ಎಂ. ಆರ್. ಬುದ್ಧಿವಂತ ಶೆಟ್ಟಿ

ಕನ್ನಡ ಸಾಹಿತ್ಯವು ವಿಶ್ವಸಾಹಿತ್ಯಕ್ಕೆ ನೀಡಿದ ಮಹತ್ತರವಾದ ಕೊಡುಗೆ ಯೆಂದರೆ ಶಿವಶರಣರವಚನಗಳು ಎಂದು ಧಾರಾಳವಾಗಿ ಹೇಳಬಹುದು. ಹನ್ನೊಂದನೆಯ ಶತಮಾನದಲ್ಲಿ ಉಗಮವಾಗಿ ಹನ್ನೆರಡನೆಯ ಶತಮಾನದಲ್ಲಿ ಮೇರೆದಪ್ಪಿ ಹರಿದ ಈ ವಚನ ಸಾಹಿತ್ಯವಾಹಿನಿಯು ಮುಂದಿನ ಶತಮಾನಗಳಲ್ಲಿ ಇಳಿಮುಖವಾದರೂ ಸಂಪೂರ್ಣ ಬತ್ತಿಹೋಗಲಿಲ್ಲವೆಂಬುದು ಸಂತಸದ ಸಂಗತಿ. ಕೆಲವು ಆಧುನಿಕ ಕವಿಗಳೂ ಈ ಸಾಹಿತ್ಯ ಪ್ರಕಾರವನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಬಳಸಿಕೊಳ್ಳುವುದರಲ್ಲಿ ಯಶಸ್ವಿಯಾಗಿದ್ದಾರೆ. ಅಂತಹ ಕೆಲವೇ ಕವಿಗಳಲ್ಲಿ ಶ್ರೀ ಸಿದ್ದಯ್ಯ ಪುರಾಣಿಕರೂ ಒಬ್ಬರು. 'ಸ್ವತಂತ್ರ ಧೀರ ಸಿದ್ಧೇಶ್ವರ' ಅಂಕಿತದಲ್ಲಿ ಬರೆದ ಅವರ ವಚನಗಳ ಸಂಗ್ರಹ 'ವಚನೋದ್ಯಾನವು' ಕನ್ನಡ ಸಾಹಿತ್ಯ ದಲ್ಲಿ ಕಮನೀಯವಾಗಿ ಕಂಗೊಳಿಸುತ್ತ ಅನುಭಾವಿಗಳಿಗೆ ಆಹ್ಲಾದವನ್ನೂ, ಸಹೃದಯಿ ಗಳಿಗೆ ಸಂತೋಷವನ್ನೂ, ಜಿಜ್ಞಾಸುಗಳ ಮನಕ್ಕೆ ತಂಪನ್ನೂ, ಸಾಮಾನ್ಯ ಓದುಗರಿಗೆ ಜೀವನಾನುಭವವನ್ನೂ ಈಯುತ್ತದೆ.

ವಚನೋದ್ಯಾನದಲ್ಲಿ ವಿಹರಿಸಿ ಬಂದಮೇಲೆ ಪ್ರತಿಯೊಬ್ಬರಿಗೂ ಸಾರ್ಥಕ ವಿಹಾರಗೈದ ಅನುಭವವಾಗುತ್ತದೆ. "ಈ ವಚನಗಳು ಆತ್ಮಗೀತೆಗಳೂ ಹೌದು ; ಆತ್ಮನ ಕರಾಳ ಕತ್ತಲೆಯನ್ನು ಕಳೆಯಲು ತೋರುವ ತವಕವನ್ನೇ ಅವರು ಸುತ್ತಲ ಪರಿಸರವನ್ನು ಮುತ್ತಿರುವ ಕರಾಳ ಕತ್ತಲೆಯನ್ನು ತೊಳೆಯಲು ತೋರಿಸುತ್ತಾರೆ." ಪ್ರತಿಯೊಂದು ವಚನಕ್ಕೆ ಆಧ್ಯಾತ್ಮಿಕ ಮೆರುಗಿದೆ, ಲೋಕಾನುಭವದ ರಸವಿದೆ, ಎಲ್ಲಕ್ಕೂ ಹೆಚ್ಚಾಗಿ ಮಾನವೀಯತೆಯನ್ನು ಮರೆಯಬಾರದೆಂಬ ಕಳಕಳಿಯಿದೆ.

"ಎವ್ವರೆಸ್ಟನು ಏರುವ, ಅಂತರಿಕ್ಷಕ್ಕೆ ಹಾರುವ, ಬಾಹ್ಯಾಕಾಶವನ್ನು ಮೀರುವ ಭರದಲ್ಲಿ ಭೂಮಿಯ ಮೇಲೆ ಬದುಕುವುದೇ ಗೌಣ"ವಾಗಿರುವ ಇಂದಿನ ಕಾಲದಲ್ಲಿ ನವಯುವಕರು "ನವೀಕರಣ ನವೀಕರಣ"ವೆಂದು ಹೊಸದರ ಬೆನ್ನು ಹತ್ತಿ ಮಾನ ವೀಯ ಮೌಲ್ಯಗಳನ್ನೇ ಗಾಳಿಗೆ ತೂರುವುದನ್ನು ಕಂಡು ಕವಿ ವ್ಯಸನ ಪಡುತ್ತಾರೆ.

ಅವರು "ಮಾನವೀಕರಣ" ಎನ್ನುವುದಿಲ್ಲ. ಆದರೆ "ಮಾನವೀಕರಣ" ಎಂದು ಹೇಳಲು ಮರೆಯುವುದಿಲ್ಲ. ಮಾನವತೆಯನ್ನೇ ಮರೆತರೆ ಇನ್ನೇನಿದೆ ಜಗತ್ತಿನಲ್ಲಿ ? "ಹೊರಗೆ ಸಿರಿತನ ಹೆಚ್ಚಿದಷ್ಟೂ ಒಳಗೆ ಬಡತನ" ಬೆಳೆಯ ಬಾರದು. ಜೀವನಾನು ಕೂಲತೆಗಳು ಹೆಚ್ಚಿ ಮಾನವೀಯ ಮೌಲ್ಯಗಳು ಮರೆಯಾದುದಕ್ಕೆ ಅವರು ವ್ಯಥೆ ಪಟ್ಟಿದ್ದಾರೆ.

"ವಿದ್ಯೆ ಬಂತು, ವಿನಯ ಹೋಯ್ತು;
ಬುದ್ಧಿ ಬಂತು, ಶ್ರದ್ಧೆ ಹೋಯ್ತು;
ಶ್ರದ್ಧೆ ಬಂತು, ವಿವೇಚನೆ ಹೋಯ್ತು;
ಸಮೃದ್ಧಿ ಬಂತು, ಸಂಸ್ಕೃತಿ ಹೋಯ್ತು;
ವಿಜ್ಞಾನ ಬಂತು, ಸಮಾಧಾನ ಹೋಯ್ತು;
ಶರೀರ ಸ್ವಾಸ್ಥ್ಯ ಬಂತು. ಚಿತ್ತ ಸ್ವಾಸ್ಥ್ಯ ಹೋಯ್ತು;
ದೀರ್ಘಾಯುಷ್ಯ ಬಂತು, ಜೀವನ ಸ್ವಾಸ್ಥ್ಯ ಹೋಯ್ತು;
ಬೋಧನೆ ಬಂತು, ಸಾಧನೆ ಹೋಯ್ತು;
ಮಾತು ಬಂತು, ಕೃತಿ ಹೋಯ್ತು;
ಸ್ವಾತಂತ್ರ್ಯ ಬಂತು, ಸೌಜನ್ಯ ಹೋಯ್ತು;"

ಹೀಗೆ ಮಾನವನು ಮಾನವನಾಗಿ ಬಾಳಲು ಅತ್ಯಾವಶ್ಯಕವಾದ ವಿನಯ, ಶ್ರದ್ಧೆ, ವಿವೇಚನೆ, ಸಂಸ್ಕೃತಿ, ಸಮಾಧಾನ. ಚಿತ್ತಸ್ವಾಸ್ಥ್ಯ. ಸಾಧನೆ, ಕೃತಿ, ಸೌಜನ್ಯ ಮುಂತಾದ ಮಾನವೀಯ ಮೌಲ್ಯಗಳನ್ನು ಕಳೆದುಕೊಂಡರೆ ಹೇಗೆ ? ಜೀವನಾನು ಕೂಲತೆಗಳು ಮಾನವೀಯ ಮೌಲ್ಯಗಳ ಬಳಿವಿಡಿದೇ ಬರಬೇಕು. ಬಾಳಿನ ಬೆಲೆಗಳು ಬೂದಿಯಾಗಕೂಡದು. ಇಹಲೋಕದಲ್ಲಿ ಮತಿವಂತನಾಗಿ ಹುಟ್ಟಿಬಂದ ಮಾನವನು ಗತಿಗೆಟ್ಟು ಹೋದರೆ ಹಾವು ಹುಳುಗಳಿಗಿಂತ ಹೇಯವಾಗುತ್ತಾನೆ. ಬದುಕಿನ ಬೆಲೆಯನ್ನು ಸಲ್ಲಿಸದ ಮಾನವನು 'ಇಲ್ಲಿಯೂ ಸಲ್ಲ ಅಲ್ಲಿಯೂ ಸಲ್ಲ'

"ಬದುಕಿನ ಬೆಲೆಯನ್ನು ಸಲ್ಲಿಸಬೇಕು,
ಬಿಡುಗಡೆಯ ಬೆಲೆಯನ್ನು ಸಲ್ಲಿಸಬೇಕು,
ಒಲವಿನ ಬೆಲೆಯನ್ನು ಸಲ್ಲಿಸಬೇಕು,
ಚೆಲುವಿನ ಬೆಲೆಯನ್ನು ಸಲ್ಲಿಸಬೇಕು,
ಪ್ರಗತಿಯ ಬೆಲೆಯನ್ನು ಸಲ್ಲಿಸಬೇಕು,
ಎಲ್ಲದರ ಬೆಲೆಯನ್ನೂ ಸಲ್ಲಿಸಬೇಕಿಲ್ಲ !
ಒಮ್ಮೆ ಬೆವರಿನ ಬೆಲೆ, ಒಮ್ಮೆ ಬವರದ ಬೆಲೆ ;
ಒಮ್ಮೆ ಕಣ್ಣೀರಿನ ಬೆಲೆ, ಒಮ್ಮೆ ಕೆನ್ನೀರಿನ ಬೆಲೆ ;

ಒಮ್ಮೆ ಸಹನೆಯ. ಸಂಯಮದ, ಸ್ವಾರ್ಥ ತ್ಯಾಗದ,
ಸೇವಾಯೋಗದ ಬೆಲೆ-
ಒಂದಿಲ್ಲೊಂದು ಬೆಲೆಯ ಸಲ್ಲಿಸಿದವರೇ ಸಲ್ಲುವರಯ್ಯ
ಇಲ್ಲಿಯೂ, ಅಲ್ಲಿಯೂ, ಎಲ್ಲೆಲ್ಲಿಯೂ!
ಸಲ್ಲಿಸು, ಸಲ್ಲು; ಸಲ್ಲು ಗೆಲ್ಲು!
ಇದು ಸ್ವತಂತ್ರಧೀರ ಸಿದ್ಧೇಶ್ವರನ ಸೊಲ್ಲು! ॥೧೭೭॥

ಇಹಲೋಕವಲ್ಲಿ ಸಾರ್ಥಕ ಬದುಕನ್ನು ಬಾಳಬೇಕು. ಪರಲೋಕ ನಂಬಿ ಇಹ ಲೋಕವನ್ನು ಕಡೆಗಣಿಸಲಾಗದು. "ಅಲ್ಲಿ ಅಮೃತ ದೊರೆಯುವುದೆಂದು ಇಲ್ಲಿಯ ಅಂಬಲಿಯನ್ನು ತೊರೆಯಬಹುದೇನಯ್ಯಾ?" ಇಹಲೋಕದ ಜೀವನವನ್ನು ಪ್ರೀತಿಸ ಬೇಕು. ಆದರೆ ದೇವನನ್ನು ಮಾತ್ರ ಮರೆಯಕೂಡದು ಎಂಬುದನ್ನು ಅವರ ವಚನದಲ್ಲಿಯೇ ಕೇಳಿ.

"......ಪ್ರೀತಿಯಿಲ್ಲದ ಜೀವನ ನಾತವಿಲ್ಲದ ಹೂವಯ್ಯ:
ಗುರಿಯಿಲ್ಲದ ಜೀವನ ಗರಿಯಿಲ್ಲದ ಹಕ್ಕಿಯಯ್ಯ;
ಶೀಲವಿಲ್ಲದ ಜೀವನ ಶೀರ್ಣಮೂಲ ತರುಮರವಯ್ಯ:
ಸ್ನೇಹವಿಲ್ಲದ ಜೀವನ ಸ್ನೇಹವಿಲ್ಲದ ಸೊಡರಯ್ಯ;
ವಿನೋದವಿಲ್ಲದ ಜೀವನ ಸುನಾದವಿಲ್ಲದ ಸನಾದಿಯಯ್ಯ
ಸ್ವತಂತ್ರಧೀರ ಸಿದ್ಧೇಶ್ವರಾ,
ನಿನ್ನಮರೆತ ಜೀವನ ನೀರುಬರತ ಸರೋವರವಯ್ಯ! ॥೧೧೮॥

ಲೌಕಿಕಜೀವನದಲ್ಲಿ ಪ್ರೀತಿ, ಸ್ನೇಹ, ಶೀಲ, ಗುರಿ, ವಿನೋದ, ದೇವರ ಸ್ಮರಣೆ ಮುಂತಾದ ಗುಣಗಳು ಪರಿಪೂರ್ಣ ಮಾನವೀಯತೆಯ ಲಕ್ಷಣಗಳೆಂದು ಹೇಳ ಬಹುದು. ಅವಿಲ್ಲದೆ:

"ಬಲವೇ ಬೆಳಕು, ಬಲವರವೇ ಕತ್ತಲೆಯಯ್ಯ;
ರಸಿಕತೆಯೆ ಹುಣ್ಣಿಮೆ, ಅರಸಿಕತೆಯೇ ಅಮವಾಸ್ಯೆಯಯ್ಯ:
ಸುರುಚಿಯೇ ವರ, ಕುರುಚಿಯೇ ಅಭಿಶಾಪವಯ್ಯ
ಜನಹಿತವೇ ಪುಣ್ಯ, ಜನಶೋಷಣೆಯೇ ಪಾಪವಯ್ಯ;
ಸಂಯಮವೇ ಶಕ್ತಿ, ಶೈಥಿಲ್ಯವೇ ದೌರ್ಬಲ್ಯವಯ್ಯ;
ಪಾವಿತ್ರ್ಯವೇ ನಂದನ, ಮಾಲಿನ್ಯವೇ ಮಸಣವಯ್ಯ;
ಮಾನವೀಯತೆಯೇ ಮಾರ್ಗ, ಅಮಾನುಷತೆಯೇ ದುರಿತದ
ದುರ್ಗವಯ್ಯ;
ಸ್ವತಂತ್ರಧೀರಸಿದ್ಧೇಶ್ವರಾ,
'ತಾನು ಎಲ್ಲರಿಗಾಗಿ' ಎನ್ನುವುದೇ ಧರ್ಮ,

'ಎಲ್ಲರೂ ತನಗಾಗಿ' ಎನ್ನುವುದೇ ಅಧರ್ಮವಯ್ಯ! ॥೩೫೪॥

ಸಮಾಜ ಜೀವಿಯಾದ ಮಾನವನು ಸಮಾಜಕ್ಕೂ ಸೇವೆ ಸಲ್ಲಿಸಬೇಕಾಗುತ್ತದೆ. ತನ್ನ ಹಕ್ಕು ಪಡೆಯಲು ಮಾತ್ರ ಮುಂದಾಗಿ ಕರ್ತವ್ಯವನ್ನು ಕಡೆಗಣಿಸಿದರೆ ಹೇಗೆ?

"ಆರೋಗ್ಯ ಬೇಕು, ಆರೋಗ್ಯ ಸೂತ್ರಪಾಲನೆ ಬೇಡ ;
ಸಂಸಾರ ಸುಖಬೇಕು, ಸಂಸಾರದ ಹೊಣೆ ಬೇಡ :
ಅಧಿಕಾರ ಬೇಕು, ಕರ್ತವ್ಯ ನಿರ್ವಹಣೆ ಬೇಡ ;
ಜನರ ಮತಗಳು ಬೇಕು, ಜನಹಿತ ಸಾಧನೆ ಬೇಡ ;
ಶಾಸನದ ರಕ್ಷೆ ಬೇಕು, ಶಾಸನದ ರಕ್ಷಣೆ ಬೇಡ ;
ವಿಶ್ವವಿದ್ಯಾಲಯದ ಪದವಿ ಬೇಕು, ಅಧ್ಯಯನ ಬೇಡ ;
ಧರ್ಮ ನೀಡುವ ಫಲ ಬೇಕು, ಧರ್ಮಾಚರಣೆ ಬೇಡ ;
ಸಮಾಜವೀವ ಸುಖಗಳು ಬೇಕು, ಸಮಾಜ ಸೇವೆ ಬೇಡ :
ಸ್ವತಂತ್ರಧೀರ ಸಿದ್ಧೇಶ್ವರಾ,
ನೀನು ನೀಡುವ ದಾನಗಳು ಬೇಕು ;
ನೀನು ಬೇಡ ನಿನ್ನನೊಲ್ಲದವರಿಗೆ! ॥೧೨೪॥

ಕೇವಲ ಸುಖಮಾತ್ರ ಬಯಸಿ ಕರ್ತವ್ಯದಿಂದ ನುಣುಚಿಕೊಳ್ಳುವದು ಮಾನವೀಯತೆಯ ಲಕ್ಷಣವಲ್ಲ.

ಸಮಾಜ ಜೀವನದಲ್ಲಿ ಕೆಲವೊಮ್ಮೆ ಕಷ್ಟನಷ್ಟಗಳನ್ನು ಅನುಭವಿಸಬೇಕಾಗಬಹುದು. ಆದರೆ ಅದರಿಂದ ಮನಸೊಂದು ಕಹಿಯನ್ನುಗುಳಬೇಕಾಗಿಲ್ಲ. ನಂಜನ್ನು ನುಂಗಿ ಅಮೃತವನ್ನೀಯಬೇಕು, ಕಷ್ಟಕ್ಕೆ ಹೆದರಿ ಸಜ್ಜನಿಕೆ ಸದ್ಗುಣಗಳನ್ನು ತೊರೆಯಲಾದೀತೆ?

"ಚಂದನವಾದರೆ ತೆಯ್ಯಿಸಿಕೊಂಬ ತೊಂದರೆಯೆಂದು
ಈಚಲಮರವಾಗುವುದೇ ಲೇಸೆನಬಹುದೇನಯ್ಯ?
ಚಿನ್ನವಾದರೆ ಒರಸಿಕೊಂಬ ಕಿರುಕುಳವೆಂದು
ಹಿತ್ತಾಳೆಯಾಗುವುದೇ ವಾಸಿಯೆನ್ನಬಹುದೇನಯ್ಯ?
ಕಬ್ಬಾದರೆ ನುರಸಿಕೊಂಬ ಕೋಟಲೆಯೆಂದು
ಕಂಟಿಯಾಗುವುದೇ ಚೆನ್ನವೆನ್ನಬಹುದೇನಯ್ಯಾ?
ಕದಳಿಯಾದರೆ ಕೊಯ್ಸಿಕೊಂಬ ಕ್ಲೇಶವೆಂದು
ಕತ್ತಾಳೆಯಾಗುವುದೇ ಮೇಲೆನ್ನ ಬಹುದೇನಯ್ಯ?
ಸ್ವತಂತ್ರ ಧೀರ ಸಿದ್ಧೇಶ್ವರಾ,
ರಾಮ ಧರ್ಮಜರಾದರೆ ವನವಾಸ ತಪ್ಪಿದ್ದಲ್ಲವೆಂದು
ಚೆಂಗೀಜ, ತೈಮೂರರಾಗುವುದೇ ಒಳಿತೆನ್ನಬಹುದೇನಯ್ಯಾ? ॥೩೪೭॥

ಮಾನವನು ದಾನವನಾಗ ಕೂಡದು. ಧರ್ಮಾಂಧತೆ. ದೇಶಾಂಧತೆ. ಭಾಷಾಂಧತೆ, ವರ್ಣಾಂಧತೆಯ ಫಲ ಅತಿ ಕಹಿಯಾದುದು. ಯಾವ ಮತ ಯಾವ ಧರ್ಮವಾದರೇನು ಜೀವನಕ್ಕೆ ಸವಿ ಬೆಳಕು ನೀಡಿದರೆ ಸಾಲದೆ ?

" ಗುತುವ ತೋರುವ ಮತವು ಯಾವುದಾದರೇನು ?
ಗುರಿಗೆ ಸೇರಿಸುವ ಪಥವು ಯಾವುದಾದರೇನು ?
ಮೌಢ್ಯದ ಗ್ರಂಥಿಯನ್ನು ಬಿಚ್ಚುವ ಗ್ರಂಥ ಯಾವುದಾದರೇನು ?
ಬಂಧುತ್ವವನ್ನು ಬೆಳೆಸುವ ಪಂಥ ಯಾವುದಾದರೇನು ?
ಮನವ ಘನಗೊಳಿಸುವ ಮಂತ್ರ ಯಾವುದಾದರೇನು ?
ಮೈಗೆ ಒಪ್ಪುವ ವೇಷ ಯಾವುದಾದರೇನು ?
ಜನಕ್ಕೆ ಒದಗುವ ಕೋಶ ಯಾವುದಾದರೇನು ?
ಸ್ವತಂತ್ರಧೀರ ಸಿದ್ಧೇಶ್ವರಾ,
ಜೀವನಕ್ಕೆ ಸವಿ ಬೆಳಕುಗಳನ್ನು ಬರಿಸುವ
ಜೀವನ ದರ್ಶನ ಯಾವುದಾದರೇನು ? " ॥೪೩೯॥

ಮಾನವನ ಮತ ಮುಖ್ಯವಲ್ಲ, ಮತತತ್ತ್ವಗಳನ್ನು ಅರಿತು ಆಚರಿಸುವುದು ಮುಖ್ಯ. ಎಲ್ಲ ಮತಗಳೂ ಉದಾತ್ತ ಗುಣಗಳನ್ನೇ ಬೋಧಿಸುತ್ತವೆ. ಮತಾಂಧ ನಾಗಿ ತೀರ್ಥ ಕ್ಷೇತ್ರಗಳನ್ನು ಸುತ್ತಿದರೆ ಫಲವಿಲ್ಲ. ಸಹೃದಯ. ಸದ್ಭಾವ, ಸತ್ಕರ್ಮ ಗಳು ಮುಖ್ಯ.

" ಕರುಣೆಯೇ ಕಾಶಿ, ದಯೆಯೇ ಗಯೆ,
ಕನಿಕರವೇ ಕಾಂಚಿ ಕೇದಾರಗಳಯ್ಯಾ;
ಪ್ರೀತಿ ಜ್ಯೋತಿರ್ಲಿಂಗ, ಮಮತೆ ಮಕ್ಕಾ ಮದೀನಾ.
ಭಾತೃತ್ವವೇ ಬೆತ್ಲೆಹೇಮ್ ಕಂಡಯ್ಯಾ;
ಕಲ್ಯಾಣವೇ ಕಲ್ಯಾಣ, ಔದಾರ್ಯವೇ ಉಡುಪಿ,
ಸದ್ಗುಣಗಳೇ ಶೃಂಗೇರಿ. ಶ್ರವಣಬೆಳುಗೊಳಗಳಯ್ಯಾ,
ಶುದ್ಧಾಂತರಂಗವೇ ಗಂಗೆ, ಯಮುನೆ, ತುಂಗಭದ್ರೆ,
ಪಾವನತೆ ಕಾವೇರಿ, ನಿರ್ಮಲತೆ ನರ್ಮದೆ.
ಶುಭ್ರ ಶೀಲವೇ ಕೃಷ್ಣೆ ಗೋದಾವರಿಗಳಯ್ಯಾ;
ಸ್ವತಂತ್ರಧೀರ ಸಿದ್ಧೇಶ್ವರಾ,
ಜೀವಿಯಿದ್ದೆಡೆ ಕ್ಷೇತ್ರ. ಹೃದಯವಿದ್ದೆಡೆ ತೀರ್ಥ,
ಸದ್ಭಾವ, ಸತ್ಕರ್ಮಗಳಿದ್ದೆಡೆಯೊಳೇ ಸದ್ಧರ್ಮವಯ್ಯಾ ! " ॥೪೪೦॥

ಅಂತೆಯೇ ಸದ್ಭಾವ, ಸತ್ಕರ್ಮಗಳನ್ನು ಎಂದಿಗೂ ಮರೆಯಕೂಡದು. " ತತ್ವ ರಹಿತ ರಾಜಕಾರಣ, ಶ್ರಮರಹಿತ ಸಂಪತ್ತು, ನೀತಿಹೀನ ವ್ಯಾಪಾರ,

ಶೀಲಶೂನ್ಯ ಶಿಕ್ಷಣ, ಮನಸ್ಸಾಕ್ಷಿಯಿಲ್ಲದ ಭೋಗ, ಮನುಷತ್ವವಿರಹಿತ ವಿಜ್ಞಾನ, ತ್ಯಾಗವಿಹೀನ ಪೂಜನಗಳಿಂದ ಆತ್ಮಗ್ಲಾನಿ, ಧರ್ಮಗ್ಲಾನಿ ; ಇದಾಗ ಕೂಡದು. ತಾಹು ಮಾಡುವ ಪ್ರತಿಯೊಂದು ಕಾರ್ಯವೂ ಮನಸ್ಸಾಕ್ಷಿಯಾಗಿ, ದೇವರ ಸಾಕ್ಷಿಯಾಗಿ ಮಾಡಬೇಕು. ಅಂದರೆ ಮನಕ್ಕೂ ಹಿತ. ಜನಕ್ಕೂ ಹಿತ.

ಲೌಕಿಕ ಆಶೆ_ಆಮಿಷಗಳಿಗೆ ಬಾಯ್ಬಿಟ್ಟು ಹಣಕ್ಕೆ ಅಡ್ಡ ಬೀಳುವವರು, ಸತ್ತಾಧಾರಿಗಳನ್ನು ಸತ್ಕರಿಸುವವರು, ಗೆದ್ದ ಎತ್ತಿನ ಬಾಲ ಹಿಡಿಯುವವರು, ಉಳ್ಳವರನ್ನು ಓಲೈಸುವವರು ಬಹಳ ಜನರಿದ್ದಾರೆ, ಇದು ಒಳಿತಲ್ಲ. ಗುಣಕ್ಕೆ ಮಣಿಯುವವರು, ಸಾತ್ವಿಕತೆಯನ್ನು ಸತ್ಕರಿಸುವವರು, ಬಿದ್ದ ಎತ್ತಿನ ಆರೈಕೆ ಮಾಡುವವರು, ಇಲ್ಲವರಿಗೆ ಉಳುಬಾಳು ಒದಗಿಸುವವರು ಹೆಚ್ಚಬೇಕು. ಆದರ್ಶ ರಕ್ಷಣೆಗಾಗಿ ಹೋರಾಡುವವರು, ಆದರ್ಶ ಸಾಧನೆಯಲ್ಲಿ ಸಂಕಷ್ಟಸಹಿಸುವವರು, ಸಂಕ್ಲೇಶ ಸಹಿಸಿಯೂ ಆದರ್ಶ ಪಕ್ಷವಹಿಸುವವರ ಸಂಖ್ಯೆ ಹೆಚ್ಚಬೇಕು. ದಡ್ಡರು ಅಡ್ಡದಾರಿ ಹಿಡಿದರೆಂದು ದೊಡ್ಡವರೂ ಅಡ್ಡ ದಾರಿ ಹಿಡಿಯಕೂಡದು. ದೊಡ್ಡವರೂ, ಬುದ್ಧಿ ಜೀವಿಗಳೂ ನಿರಾಶಾನಿಬದ್ಧ ಜೀವಿಗಳಾಗದೆ ಅಪ್ರಬುದ್ಧರಿಗೆ ದಾರಿ ತೋರಿಸಲಿ ; ಆಗ ಸಮಾಜ ರಾಷ್ಟ್ರಗಳು ಪ್ರಗತಿ ಮಾರ್ಗದಲ್ಲಿ ಮುನ್ನಡೆಯುವುವು.

ಮಾನವ ತನ್ನ ವೈಯಕ್ತಿಕ ಜೀವನದಲ್ಲಿ ಸ್ವಾವಲಂಬಿಯಾಗಿ, ಮಾನವಂತನಾಗಿರಬೇಕು. ಲೇಸೆನಿಸಿಕೊಳ್ಳದೆ ಏಸುದಿನ ಬಾಳಿದರೇನು ? ಲೇಸೆನಿಸಿಕೊಂಡು ಒಂದೇ ಒಂದು ದಿನ ಬಾಳಿದರೂ ಸಾಕು. ಜೀವಿಗೆ ಗೌರವ ಬರುವುದು, ಒಳಿತಿಗೆ ಅಂಟಿ, ಒಳಿತಿಗಾಗಿ ಬದುಕಿದಾಗ ಮಾತ್ರ. ಅದಕ್ಕಾಗಿ ಸಂಯಮ, ಸಾಧನೆ ಬೇಕು. ಸಂಯಮದ ಮಹತಿಯನ್ನು ಕವಿಯ ಮಾತಿನಲ್ಲೇ ಕೇಳಿ :

"ಸಂಯಮವಿಲ್ಲದ ಪ್ರೇಮ ಕಾಮ,
ಸಂಯಮವಿಲ್ಲದ ಭೋಗ ರೋಗ,
ಸಂಯಮವಿಲ್ಲದ ದಾನ ದುಂದು,
ಸಂಯಮವಿಲ್ಲದ ಮಾತು ಮಾರಿ,
ಸಂಯಮವಿಲ್ಲದ ಸ್ವಾತಂತ್ರ್ಯ ಸ್ವೈರವೃತ್ತಿ,
ಸಂಯಮವಿಲ್ಲದ ಬರವಣಿಗೆ ಉರವಣಿಗೆ,
ಸಂಯಮವಿಲ್ಲದ ಸದ್ಗುಣವೂ ದುರ್ಗುಣ !"

ಲೌಕಿಕ ಸುಖಕ್ಕೆ ಮನಸೋತು ಸಂಯಮದಿಂದ ಜಾರದೆ ಸಾಧನೆಯ ಪಥದಲ್ಲಿ ಮುನ್ನಡೆಯಬೇಕು. ಜಪ, ತಪ, ಸಮಾಧಿಗಳೆಂದರೆ ಬೇರೇನೂ ಅಲ್ಲ. "ತಾಪವನ್ನು ತಾಳಿಕೊಳ್ಳುವುದೇ ತಪ, ಗುರಿಯುನ್ನು ನೆನೆದುಕೊಳ್ಳುವುದೇ ಜಪ, ಸಹನೆಯನ್ನು ಕಳೆದುಕೊಳ್ಳದಿರುವುದೇ ಸಮತೆ, ಸಮತೆಯನ್ನು ಸ್ಥಿರೀಕರಿಸುವುದೇ ಸಮಾಧಿ" ಇದನ್ನು ಆಚರಣೆಯಲ್ಲಿ ತರಬೇಕು.

"ಹಸಿರಿಲ್ಲದಲ್ಲಿ ಹಸಿರು ಹುಟ್ಟಿಸುವುದು, ಕೆಟ್ಟುದ ಸರಿಪಡಿಸುವುದು, ಕಸದಲ್ಲಿ ರಸ ಹುಟ್ಟಿಸುವುದು, ಅರಿಯದವರನ್ನು ಆದರಿಸುವುದು, ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದು, ಮಲಗಿದ್ದರೆ ಕುಳಿತು, ಕುಳಿತಿದ್ದರೆ ಎದ್ದು ನಿಂತು ಬಂದವರಿಗೆ ಸ್ಥಳ ನೀಡುವುದು, ದುಃಖಿತರ ಕಂಬನಿ ತೊಡೆಯುವುದು ಮಾನವಗುಣ". ಇಂತಹ ಮಾನವ ಗುಣಗಳನ್ನು ಅಳವಡಿಸಿಕೊಳ್ಳಲು ಸಾಧನೆ ಮಾಡಬೇಕು. ಪರರ ದುರ್ಗುಣ ಗಳನ್ನೆಣಿಸದ ಸದ್ಗುಣಗಳು ಮಾನವನನ್ನು ಔನ್ನತ್ಯಕ್ಕೇರಿಸುತ್ತವೆ.

"ಒಳಿತನ್ನು ಮಾಡಿದವರಿಗೆ ಒಳಿತನ್ನು ಮಾಡುವವ ಮಾನವ,
ಒಳಿತನ್ನು ಮಾಡದವರಿಗೂ ಒಳಿತನ್ನು ಮಾಡುವವ ಮಹಾಮಾನವ,
ಕೆಡುಕನ್ನು ಮಾಡಿದವರಿಗೂ ಒಳಿತನ್ನು ಮಾಡುವವ
ದೇವಮಾನವ ನೋಡಯ್ಯ!"
ಪ್ರೀತಿಸಿದವರನ್ನು ಪ್ರೀತಿಸುವವ ಮಾನವ,
ಪ್ರೀತಿಸದವರನ್ನೂ ಪ್ರೀತಿಸುವವ ಮಹಾ ಮಾನವ,
ದ್ವೇಷಿಸುವವರನ್ನೂ ಪ್ರೀತಿಸುವವ ದೇವಮಾನವ
ನೋಡಯ್ಯ ! ॥೩೬೪॥

ಹೀಗೆ ನರನು ತನ್ನ ಸದ್ಗುಣಗಳಿಂದ, ಸಾಧನೆಯಿಂದ ಮಾನವ, ಮಹಾ ಮಾನವ, ದೇವ-ಮಾನವನ ಮಟ್ಟಕ್ಕೇರಬಲ್ಲನೆಂಬುದನ್ನು ಕವಿ ತಮ್ಮ ವಚನಗಳಲ್ಲಿ ಮನೋಜ್ಞವಾಗಿ ವಿಶದಪಡಿಸಿದ್ದಾರೆ.

ವಚನೋದ್ಯಾನದಲ್ಲಿ ವಿಹಾರಗೈದವರಿಗೆ ಹೆಜ್ಜೆ ಹೆಜ್ಜೆಗೂ ಮಾನವೀಯ ಮೌಲ್ಯಗಳ ಮಹತ್ವ ಗಮನಕ್ಕೆ ಬರುವುದರಿಂದ ಇದೊಂದು ಮಾನವೀಯತೆಗೆ ಹಿಡಿದ ಮಹಾದರ್ಪಣವಾಗಿದೆ. ಶ್ರೀ ಹಾ. ಮಾ. ನಾಯಕರು ಹೇಳುವಂತೆ "ಈ ವಚನಗಳು ಷಟ್‌ಸ್ಥಲ ವಚನಗಳಲ್ಲ, ಸಪ್ತಮುಖಿ ವಚನಗಳು. ಈ ಸಪ್ತಮುಖಗಳು ಸಪ್ತಾಕ್ಷರಿ ಯಿಂದ ಏಕಾಕ್ಷರಿಯವರೆಗಿನ ಮಂತ್ರಗಳಾಗಿ ಕಾಣಿಸಿಕೊಳ್ಳುತ್ತವೆ. ಭಾರತ-ಕರ್ನಾಟಕ, ಕನ್ನಡ-ಬಸವ, ಸತ್ಯ-ಸೌಂದರ್ಯ, ಪ್ರೀತಿ-ನೀತಿ, ಜನತೆ, ಕಾವ್ಯ, ನೀ ಇವೇ ಆ ಮಂತ್ರಗಳು (೪೨). ವಚನೋದ್ಯಾನದ ವಚನಗಳೆಲ್ಲ ಈ ಮಂತ್ರಗಳಿಗೆ ಬರೆದ ಮಾನವೀಯ ವ್ಯಾಖ್ಯಾನವಾಗಿವೆ". ಇಂತಹ ವಚನೋದ್ಯಾನದಲ್ಲಿ ಸಹೃದಯ, ಜಿಜ್ಞಾಸು, ಮುಮುಕ್ಷು, ಅನುಭಾವಿಗಳೆಂಬ ಶುಕ ಪಿಕ ಭ್ರಮರಗಳು ಸದಾಕಾಲ ವಿಹರಿಸುವುವೆಂದು ನಿಸ್ಸಂಶಯವಾಗಿ ಹೇಳಬಹುದು.

# ಕಾವ್ಯಾನಂದರ ವಚನಗಳಲ್ಲಿ ಪ್ರೀತಿದರ್ಶನ

**ಡಾ॥ ಶೈಲಜಾ ಉಡಚಣ.** ಎಂ.ಎ., ಪಿಎಚ್.ಡಿ.

ಪ್ರೀತಿ–ಪ್ರೇಮಗಳ ಬಗೆಗೆ ಬರೆಯದಿರುವ ಕವಿಗಳು ಜಗತ್ತಿನಲ್ಲಿ ತೀರ ವಿರಳ. ಇಲ್ಲವೆಂದರೂ ಸರಿಯೆ. ಕನಸು ಕಾಣಲು ಹಚ್ಚಿ, ಕಣ್ಣಲ್ಲಿ ಬೆಳಕು ತುಂಬಿ, ಮೂಕ ನಿಗೂ ಮಾತಾಡಲು ಕಲಿಸುತ್ತದೆ ಪ್ರೀತಿ. ಇನ್ನು ಅದನ್ನು ಹಲವು ಹತ್ತು ಮುಖ ಗಳಲ್ಲಿ ಕಂಡು, ಉಂಡು ತನ್ನ ತುಂಬು ಬಾಳಿನಲ್ಲಿ ತುಂಬಿಕೊಂಡು ಬೆಳೆದ ಕವಿಯೊಬ್ಬ ನನ್ನು ದಾರ್ಶನಿಕ ಮನೋಭಾವದ ರಸಋಷಿಯನ್ನಾಗಿ ಮಾಡದೆ ಬಿಡದು. ಅಂಥವರ ಬಾಳಿನಲ್ಲಿ ಪ್ರೇಮ ಹುಚ್ಚು ಹೊಳೆಯಾಗಿ ಹರಿಯದೆ ಸಾಗರದ ಗಂಭೀರ ತರಂಗಗಳ ಹಾಸು ಹೊಕ್ಕಾಗಿ ಇಡಿಯ ವ್ಯಕ್ತಿತ್ವಕ್ಕೆ ಹಿನ್ನೆಲೆ ರಚಿಸಬಲ್ಲುದು.

ಕಾವ್ಯಾನಂದರ ವಚನೋದ್ಯಾನದಲ್ಲಿ ಪ್ರೀತಿ–ಪ್ರೇಮಗಳನ್ನು ಕುರಿತ ಗಂಭೀರ ಚಿಂತನೆಗಳಿವೆ. ಸಾಂದರ್ಭಿಕವಾಗಿ ಅವುಗಳನ್ನೂ ಗ್ರಹಿಸಿ ಪ್ರೀತಿಯ ಸ್ವರೂಪವೇ ನೆಂಬುದನ್ನು ಕಾಣಬಹುದಾಗಿದೆ. ಇಲ್ಲಿ ಬರುವ ಅನೇಕ ಮಾತುಗಳು ಹೇಳಿಕೆಗಳಾಗಿ ಸುಲಭವಾಗಿ ನಾಲಗೆಯ ಮೇಲೆ ಸುಳಿಯುತ್ತವೆ. ಓದುತ್ತ ಹೋದಂತೆ ಓದುಗನು ವಿಚಾರ, ಮನನಗಳ ಅನುಭೂತಿಯಲ್ಲಿ ಮುಳುಗಿ ಭಾವದೀಪ್ತಿಯ ಬೆಳಕಿನಲ್ಲಿ ಹೊಸ ಲೋಕವನ್ನು ಕಂಡುಕೊಳ್ಳುತ್ತಾನೆ. ಪ್ರೀತಿಯೊಂದು ಮಹಾಶಕ್ತಿ, ಅದನ್ನೀಗ ಮಾನವ ಜಗತ್ತು ಕಾಣಬೇಕಾಗಿದೆ ಎನ್ನುತ್ತಾರೆ ಅವರು. ಇಲ್ಲಿಯವರೆಗೆ ಜಗತ್ತು ಸಾಧಿಸಿದ ಭೌತಿಕ ಪ್ರಗತಿ ಸಾಮಾನ್ಯವಾದುದೇನಲ್ಲ. ರಾಜಕೀಯ, ವೈಜ್ಞಾನಿಕ, ಬೌದ್ಧಿಕ, ಸಾಹಿತ್ಯಿಕ ಪ್ರಗತಿಗಳು ಲೆಖ್ಖವಿಲ್ಲದಷ್ಟು ಆಗಿವೆ. ಆದರೂ ರಾಜಕೀಯವನ್ನು ಕಟ್ಟುವ ಕಳಚುವ ಅಡಿಗಲ್ಲಾದ ಜನಶಕ್ತಿಯ ಅಪಾರ ಸಾಮರ್ಥ್ಯದ ಅರಿವು ಇತಿಹಾಸಕಾರನಿಗೆ ಇನ್ನೂ ಆಗಬೇಕಾಗಿದೆ. ಅಣುಮಹತ್ತುಗಳ ಶಕ್ತಿಯನ್ನು ಗುರುತಿ ಸಿದ ವಿಜ್ಞಾನಿಗೆ ಅವುಗಳನ್ನು ಗುರುತಿಸಬಲ್ಲ ಮನದ ಮಹತ್ ಶಕ್ತಿಯ ಅರಿವಾಗಿಲ್ಲ. ಹಾಗೆಯೇ ಬುದ್ಧಿಜೀವಿಯ ಸ್ಥಿತಿ. ಮಾತು ರೀತಿಗಳ ಪ್ರಭಾವ, ಪರಿಣಾಮಗಳನ್ನು ಜಗತ್ತು ಕಂಡಿದೆ. ಇವೆಲ್ಲವುಗಳಲ್ಲಿ ಮಾನವೀಯ ದೃಷ್ಟಿಯ ಕೊರತೆ ಇರುವದರಿಂದಲೇ ಜಗತ್ತು ಎಲ್ಲ ಪ್ರಗತಿಗಳನ್ನೂ ಸಾಧಿಸಿಯೂ ಸುಖ, ಸಮೃದ್ಧಿ, ಸಂಸ್ಕೃತಿ, ಶಾಂತಿಗ

ಳನ್ನು ಪಡೆಯದೆ ಸೋತಿದೆ. ಆದಕಾರಣ ಇಂದು ಜಗತ್ತಿಗೆ ಬೇಕಾಗಿರುವುದು ಪ್ರೀತಿ–ಸಹಾನುಭೂತಿ. ಮಾನವ ಅದನ್ನು ಕಾಣಲಿ ಎಂದು ಹಾರೈಸುತ್ತಾರೆ:

ಆ ವಚನದ ಪೂರ್ಣ ಪಾಠ ಇಂತಿದೆ:

ಸಿಂಹಾಸನದ ಮೇಲಿನ ಶಕ್ತಿಯನ್ನೂ ಕಂಡರು,
ಸಿಂಹಾಸನದ ಹಿಂದಿನ ಶಕ್ತಿಯನ್ನೂ ಕಂಡರು,
ಸಿಂಹಾಸನದ ಕೆಳಗಣ ಶಕ್ತಿಯನ್ನೇ ಕಾಣರಯ್ಯ ಕೆಲವು
ಇತಿಹಾಸಕಾರರು.
ಅಣುವಿನೊಳಗಣ ಶಕ್ತಿಯನ್ನೂ ಕಂಡರು
ಮಹತ್ತಿನೊಳಗಣ ಶಕ್ತಿಯನ್ನೂ ಕಂಡರು
ಮನದೊಳಗಣ ಮಹಾಶಕ್ತಿಯನ್ನೇ ಕಾಣರಯ್ಯ ಕೆಲವು ವಿಜ್ಞಾನಿಗಳು.
ಸಂಸಾರದೊಳಗಣ ಬಂಧನಗಳನ್ನೂ ಕಂಡರು,
ಕರ್ಮದೊಳಗಣ ಬಂಧನಗಳನ್ನೂ ಕಂಡರು,
ಬುದ್ಧಿಯೊಳಗಣ ಬಂಧನಗಳನ್ನೇ ಕಾಣರಯ್ಯ ಕೆಲವು ಬುದ್ಧಿಜೀವಿಗಳು.
ಸ್ವತಂತ್ರ ಧೀರ ಸಿದ್ಧೇಶ್ವರಾ,
ಮಾತಿನ ಶಕ್ತಿಯನ್ನು ಕಂಡರು
ರೀತಿಯ ಶಕ್ತಿಯನ್ನು ಕಂಡರು
ಪ್ರೀತಿ ಸಹಾನುಭೂತಿಯ ಶಕ್ತಿಯನ್ನೂ ಇನ್ನಷ್ಟು ಕಾಣಲಯ್ಯ
ಮಾನವರು[1]

ಪ್ರೀತಿ ಬಾಳನ್ನೂ ಬೆಳಗುವ ಜ್ಯೋತಿಯಾಗಬೇಕು. ಅದಿಲ್ಲದೆ ಹೋದರೆ ಬದುಕೆಲ್ಲ ಅಂಧಕಾರ. ಪ್ರೀತಿ–ಮರುಕಗಳಿಲ್ಲದ ರೀತಿ, ನೀತಿಗಳು, ಕಾನೂನು ಕಟ್ಟಳೆಗಳು ಇನ್ನಷ್ಟು ಮಾನವ ಜನಾಂಗದ ಅಧಃಪತನಕ್ಕೆ ಕಾರಣವಾಗುತ್ತವೆ. ಪ್ರೀತಿ ಹೋಗಿ ಜಾತಿ ನಿಲ್ಲುತ್ತದೆ. ಅನೀತಿಯೇ ಅಧಿಕಾರ ನಡೆಸುತ್ತದೆ. ಒಲವು ಹಿಂದಾಗಿ ಒಲವರದ ಕೈ ಮುಂದಾಗುತ್ತದೆ.

ಶೋಷಕರು ರಚಿಸುವ ಶಾಸ್ತ್ರ, ಶಾಸನ, ಸಂವಿಧಾನಗಳಿಂದ ಯಾರಿಗೆ ಸುಖ?[2]

ಜಾತಿ ವ್ಯವಸ್ಥೆಯನ್ನುಳಿಸಿ ಸಮಾನತೆಯನ್ನು ಘೋಷಿಸಿದರೆ ವಿಷಮತೆಗೆ ಆಹುತಿಯಾದವನಿಗೆ ಏನುಲಾಭ?[3] ಭಕ್ತ ಹಿತಾರ್ಥವೆನಿಸಿ ಇದುವರೆಗೆ ತೊಟ್ಟ ಅವತಾರಗಳಿಂದ ಸಂಹಾರ ನಡೆಯಿತು, ಸರ್ವೋದ್ಧಾರ ಎಂದು?'[4]–ಎಂದು ಕವಿ ಪ್ರಶ್ನೆ ಹಾಕುತ್ತಾರೆ, ಇಂದು ಜಗತ್ತಿಗೆ.

---

1. ವಚನ ೩೩೫ 2. ವಚನ ೩೪೧
3. ವಚನ ೩೪೨ 4. ವಚನ ೩೪೩

"ಎಲುವಿನ ಗೂಡುಗಳಲ್ಲಿ ನಲವಿನ ನೆತ್ತರ ಚಿಮ್ಮಿಸ ಬಲ್ಲವರು, ನಿಟ್ಟುಸಿರಿನ ಬಸಿರಿನಿಂದ ನಲ್ನುಸಿರಿನ ಪರಿಮಳ ಬರಿಸಬಲ್ಲವರು, ವರ್ಣಾಂಧಕಾರರ ಒಡಲಿಂದ ವಿಶ್ವಪ್ರೇಮದ ಪ್ರಭೆ ಬರಿಸಬಲ್ಲವರು, ನಿರ್ಗತಿಕರ ಗುಡಿಸಿಲಲ್ಲಿ ನೋಬೆಲ್ ಪಾರಿತೋಷಕ ಪಡೆಯುಬಲ್ಲವರನ್ನು ರೂಪಿಸುವವರು, ಅಬಲತೆಯ ಬಾಳಲ್ಲಿ ಕುಲಿಶ ಸಂದರ್ಶನಗಳ ಗೊನೆಯ ಕೊನರಿಸುವವರು, ಅನಾರೋಗ್ಯದ ಗಣಿಯಿಂದ ಅಖಂಡಾರೋಗ್ಯದ ಚಿನ್ನ ತೆಗೆಯು ಬಲ್ಲವರು[5]—ಬೇಕಾಗಿದ್ದಾರೆ. ಅಂಥವರು ಬರಲಿ ಎಂದು ಹಾರೈಸುತ್ತಾರೆ.

ಬಾಳಿನ ಬಂಡಿಗೆ ಭಾವ–ಬುದ್ಧಿಗಳು ಜೋಡು ದಾರಿಗಳಾಗಿ ಶೀಲದ ಕೀಲ ಅದನ್ನು ನಡೆಸಬೇಕು. ರೀತಿ ನೀತಿಗಳು ಎಣ್ಣೆ ಬತ್ತಿಗಳಾಗಿ ಪ್ರೀತಿಯ ಜ್ಯೋತಿ ಬಾಳ ಹಣತೆಯನ್ನು ಬೆಳಗಬೇಕು.

ಪ್ರೀತಿ ಜ್ಯೋತಿ ಬೆಳಕಿನ ಕಿಡಿಯಾಗಿ ಎಲ್ಲ ಮಾನವರ ಹೃದಯ ಮಂದಿರಗಳಲ್ಲಿ ಮಲಗಿರಬಹುದು. ಅದು ಆರದಂತೆ ನೋಡಿಕೊಳ್ಳುವ ಕೆಲಸವೇ ಮುಖ್ಯವಾದುದು. 'ಎಲ್ಲರೂ ನನಗಾಗಿ ಎಲ್ಲವೂ ನನಗಾಗಿ' ಎಂದು ಉಬ್ಬದೆ ಕೊಬ್ಬದೆ, 'ನಾನು ಎಲ್ಲರಿಗಾಗಿ ಎಂದು, 'ನಾನು ದೇಶಕ್ಕಾಗಿ,' 'ನಾನು ಜಗತ್ತಿಗಾಗಿ' ಎಂದು ವಿಶಾಲ ಹೃದಯವನ್ನು ಹೊಂದಬೇಕು. ಹಾಗಲ್ಲದೆ ಎಲ್ಲ ನನಗಾಗಿ ಎಂದು ಮನುಷ್ಯ ವರ್ತಿಸಿದರೆ ಅಲ್ಲಿ ಹೃದಯ ರಸ ಬತ್ತುತ್ತದೆ: "ಹೃದಯರಸ ಬತ್ತಿದರೆ ಬಾಡುವುದಯ್ಯಾ ಮಾನವತೆಯ ಲತೆ, ಹಿಂಗುವವಯ್ಯಾ ಮಾನವ ಸಂಬಂಧಗಳು, ಕಂದಿಕುಂದುವವಯ್ಯಾ ಕಲೆ–ಶಾಸ್ತ್ರ ವಿಜ್ಞಾನ ವ್ಯವಹಾರಗಳು," ಎಂದಿದ್ದಾರೆ[6]. ಆಗ ಮನುಷ್ಯ 'ಎಷ್ಟೋ ಬೆಳೆದಿರುವೆ' ಎಂದುಕೊಂಡರೂ ಶೂನ್ಯತೆಯನ್ನು ಅನುಭವಿಸುತ್ತಾನೆ. ವ್ಯಕ್ತಿ ವ್ಯಕ್ತಿಗಳ ನಡುವೆ ಬೆಸುಗೆ ಬಿಚ್ಚುತ್ತದೆ. ರಾಷ್ಟ್ರ ರಾಷ್ಟ್ರಗಳ ನಡುವೆ ಕಂದರಗಳು ಸೃಷ್ಟಿಯಾಗುತ್ತವೆ. ಹಲವು ಉದ್ದೇಶಗಳ ಸಂಘ, ಸಂಸ್ಥೆ, ಸಮಿತಿ, ಸಮ್ಮೇಳನಗಳನ್ನು ಕಟ್ಟಿಕೊಂಡರೂ ಅವನಿಗೆ ಒಂಟಿತನದ ಅನುಭವ ತಪ್ಪುವದಿಲ್ಲ, ಅನಾಥ ಪ್ರಜ್ಞೆ ಬೆನ್ನ ಬಿಡುವದಿಲ್ಲ, ವಿಕ್ಷಿಪ್ತ, ಅಸಹಾಯಕ ಮನಸ್ಸು ಕಾಡದೆ ಇರುವದಿಲ್ಲ. ಹೀಗೆ ಸಂಸ್ಕೃತಿ ವಿಹೀನ ಬದುಕು ಬೆಳೆದು ಭೂತವಾಗಿ ಪರಿಣಮಿಸಬಾರದು.

ಅದಕ್ಕಾಗಿ ಕಾವ್ಯಾನಂದರು ಇಂದು ಮನುಷ್ಯ ಮಾನವನಾಗಲು ಮೊದಲು ಕಲಿಯಬೇಕಾಗಿದೆ ಎಂದು ಎಚ್ಚರಿಕೆ ಕೊಡುತ್ತಾರೆ. ಮಾನವತೆಯ ಮೂಲ ಮಂತ್ರ ಪ್ರೀತಿ :

"ಪ್ರೀತಿಸುವ ಹೃದಯವೊಂದಿದ್ದರೆ ಎಲ್ಲ ಇದ್ದ ಹಾಗೆ
ಅದಿಲ್ಲದಿರೆ ಎಲ್ಲ ಇದ್ದೂ ಇಲ್ಲದಂತಯ್ಯಾ !

---

5. ವಚನ ೩೪೪ 6. ವಚನ ೨೯೬

ಸತ್ಯದರ್ಶನ ಸ್ನಿಗ್ಧ ಹೃದಯದ ಮೂಲಕ,
ಶಿವದ ಸಂಪಾದನೆ ಶುದ್ಧ ಹೃದಯದ ಮೂಲಕ,
ಸುಂದರದ ಸಾಧನೆ ಸಮೃದ್ಧ ಹೃದಯದ ಮೂಲಕ
ಧರ್ಮ ಪರಿಪಾಲನೆ ಪ್ರಬುದ್ಧ ಹೃದಯದ ಮೂಲಕ
ಶಾಸನ, ಸರಕಾರಗಳ ಸಫಲತೆ ಸನ್ನದ್ಧ ಹೃದಯಗಳ ಮೂಲಕ
ಜೀವನ ಸಾರ್ಥಕತೆಯು ಸದುಹೃದಯದಿಂದಯ್ಯ
ಗುರಿಗಳಲ್ಲಿ ಗುರಿ ಸಹೃದಯರ ಸೃಷ್ಟಿ
ಸಾಧನಗಳಲ್ಲಿ ಸಾಧನ ಹೃದಯದ ದೃಷ್ಟಿ
ಸಿರಿವಂತಿಕೆಯನು ನೀಡು ಬಿಡು
ಹೃದಯವಂತಿಕೆಯನು ಬಿಡದೆ ಕೊಡು
ಸ್ವತಂತ್ರಧೀರ ಸಿದ್ಧೇಶ್ವರಾ"[7]

ಪ್ರೀತಿ ಎಂಬುದು ಶುದ್ಧವಾಗಿ ಹೃದಯ ವ್ಯಾಪಾರ. ಹೃದಯ ವಿಕಾಸದಂತೆ ಮಾನವತೆ ಅರಳುತ್ತದೆ. ಶ್ರೀ ಸಿದ್ಧಯ್ಯ ಪುರಾಣಿಕರ ಈ ವಚನ ಹೃದಯ ವಿಕಾಸದ ವರ್ತುಲಗಳನ್ನು ಸ್ನಿಗ್ಧ, ಶುದ್ಧ, ಸಮೃದ್ಧ, ಪ್ರಬುದ್ಧ, ಸನ್ನದ್ಧ —ಪದಗಳಿಂದ ಬಹು ಮನೋಜ್ಞವಾಗಿ ಚಿತ್ರಿಸುತ್ತದೆ. ಪದಗಳು ಪ್ರಾಸಕ್ಕೆ ಒಲಿದು ಬಂದಂತೆ ಕಂಡರೂ ಅರ್ಥ ಸೌಂದರ್ಯಕ್ಕೆ ಇಲ್ಲಿ ಹಿಗ್ಗಿಸಿದಷ್ಟೂ ಅವಕಾಶ ಉಂಟು. ಈ ವಚನ ಒಂದು ರೀತಿಯಲ್ಲಿ ಪ್ರೀತಿಯ ಮಾನವೀಯ ವ್ಯಾಖ್ಯಾನವಾಗಿದೆ ಎನ್ನಬಹುದು.

ಪ್ರೀತಿ ಅದರಲ್ಲೂ ಪರಿಶುದ್ಧ ಪ್ರೀತಿಯ ದರ್ಶನ ಪಡೆಯಲು ಮಾನವನಿಗೆ ಬಲು ದೀರ್ಘ ಪಯಣ ಬೆಳೆಸಬೇಕಾದ ಅಗತ್ಯವುಂಟು. ಎಷ್ಟೋ ಸಲ ಅವನು ಪ್ರೀತಿಯನ್ನು ಅಪಾರ್ಥವಾಗಿಯೇ ಗ್ರಹಿಸುತ್ತಾನೆ. ಎಂದರೆ ಆನೆಯನ್ನು ಗುರಿತಿಸಲು ಹೊರಟ ಕುರುಡನಂತೆ, ಅವನಿಗೆ ತನ್ನ ಮಿತ ಅನುಭವಕ್ಕೆ ಬಂದದ್ದೇ ಪ್ರೀತಿಯೆಂದು ಭ್ರಮೆಯಾಗುತ್ತದೆ. ಮೊದ ಮೊದಲು ಕಾಮವನ್ನೇ ಪ್ರೇಮವೆಂದು ಭಾವಿಸುತ್ತಾನೆ. ಮಡದಿ ಮಕ್ಕಳ ಮೋಹವನ್ನೇ, ಸ್ವಾರ್ಥವನ್ನೇ ಸೇವೆಯೆಂದು ಸಾಧಿಸುತ್ತಾನೆ.

ತನ್ನ ಕ್ಷಣಿಕ ಸುಖ, ನಿಮಿಷದ ಆಮೋದಕ್ಕಾಗಿ
ಪ್ರೀತಿಯ ಪೂಜ್ಯತೆ, ಅಪಾರತೆಯನ್ನು ಸೂಕ್ಷ್ಮ ಸಂಬಂಧಗಳನ್ನೂ
ಅರಿಯದೆ ಆತುರ ಪಡುತ್ತಾನೆ
.........ಪ್ರೀತಿಯ ಪೀತಾಂಬರದ ಎಳೆಗಳನ್ನು
ಸೆಳೆದೆನಯ್ಯ ಸುಳ್ಳು ಉಲ್ಹಾಸಕ್ಕಾಗಿ"[8]

---

7. ವಚನ ೨೦೭ 8. ವಚನ ೧೬೯

ಎಂದು ಮುಂದೆ ಹೋದಂತೆಲ್ಲ ಹಳಿಹಳಿಸುವಂತಾಗಬಹುದು. ಹಾಗಾದರೆ ಪರಿಶುದ್ಧ ಪ್ರೇಮದ ಮನನ ಯಾವಾಗ ? ಅದು ಹೇಗೆ ಅನುಭವಕ್ಕೆ ಬರುತ್ತದೆ ? ನಿಜವಾದ ಪ್ರೇಮ ಎಂತಹುದು ? ಕವಿ ಜೀವನದ ಅನುಭವದಿಂದ ಕಂಡುಕೊಳ್ಳುತ್ತಾನೆ— ಪರಿಶುದ್ಧ ಪ್ರೇಮ ಅನುಭವಕ್ಕೆ ಬರುವುದು ನೋವಿನಿಂದ ಮಾತ್ರ ಸಾಧ್ಯ. ಕುಗ್ಗು ನಿರಾಶೆಗಳಿಂದ ಸಾಧ್ಯ. 'ನೋವೇ ಬದುಕಿನ ತೊರೆಗೆ ನಾವೆಯಾಗಿದೆ'. ನೋವು ಇಲ್ಲದೆ ಬದುಕಿನ ಅರ್ಥ ಶೂನ್ಯ. ಪ್ರೀತಿ ಇಲ್ಲದಿದ್ದರೆ ಹೇಗೆ ಏನೂ ಇಲ್ಲವೊ ಹಾಗೆ ನೋವಿಲ್ಲದೆ ಪ್ರೀತಿಯೂ ಇಲ್ಲ, ನೋವು ಕುಗ್ಗು ನಿರಾಶೆಗಳು ಹೃದಯವನ್ನು ಹಿಗ್ಗಿಸುವ ಪರಿಪಾಕಗಳು :

ಇನ್ನೇನು ಇಲ್ಲದೇ ಬದುಕಬಲ್ಲೆ
ನೋವಿಲ್ಲದೆ ಬದುಕಲಾರೆನಯ್ಯಾ
ಕೂರ್ಪರಗಲಿದ ನೋವು ಗುರಿಮುಟ್ಟದ ನೋವು
ಆಸೆ ಅರಳದ ನೋವು ಒಲವು ಫಲಿಸದ ನೋವು
ನಿನ್ನನರಿಯದ ನೋವು ನನ್ನ ಮರೆಯದ ನೋವು
ಒಂದೊಂದು ಊಟಿಯಯ್ಯ ಜೀವನದ ಝರಿಗೆ
ಬಾಳು ಎಚ್ಚರಗೊಳ್ಳುವದಯ್ಯಾ ನೋವಿನ ಕರೆಗೆ......[9]

ಹೀಗೆ ನೋವನ್ನು ಆಹ್ವಾನಿಸುತ್ತಾರೆ. ಕುಗ್ಗಿನ ಮೊಗ್ಗೆಯಲ್ಲಿ ಹಿಗ್ಗಿನ ಪರಿಮಳ ತುಂಬಿದೆ. ಅಂತೆಯೇ ಸುಖ, ದುಃಖ, ಕುಗ್ಗು, ನಿರಾಶೆ, ಲಾಭ ಹಾನಿ, ಕೀರ್ತಿ ಅಪಕೀರ್ತಿ ಎಲ್ಲವೂ ಹೃದಯ ಮಂದಿರವನ್ನು ತುಳಿದು ಸ್ಥಿತಪ್ರಜ್ಞ ನೆಲವನ್ನು ನಿರ್ಮಿಸಬೇಕು.

ಇಂತಹ ವಚನಗಳನ್ನು ಓದುತ್ತಾ ಹೋದಂತೆ ನಾವು ಇಲ್ಲಿ ಕವಿಗಳ ದಾರ್ಶನಿಕ ಮನಸ್ಸು ಪರಿಸ್ಫುಟಗೊಳ್ಳುತ್ತಾ ಹೋಗುವುದನ್ನು ಕಾಣುತ್ತೇವೆ. ಪ್ರೀತಿಯೆಂಬುದು ಎಲ್ಲರನ್ನೂ ವ್ಯಾಪಿಸಿ ಎಲ್ಲವನ್ನೂ ಒಳಗೊಂಡ ಜೀವತಂತು. ಅದನ್ನು ಒಡೆದು ಛಿದ್ರಿಸಿ ಬೇರ್ಪಡಿಸಿ ಸ್ವಾರ್ಥ ದೃಷ್ಟಿಯಿಂದ ನೋಡಲಾಗದು. ಹಾಗೆ ನೋಡಿದರೆ ನಮಗೆ ಪ್ರೀತಿಯ ಸ್ವರೂಪ ಎಂದಿಗೂ ಅರ್ಥವಾಗದು. 'ಪ್ರೀತಿಯ ಪುಷ್ಪಕ್ಕೆ ಹಲವು ಪಕಳೆಗಳಿವೆ' ಅದನ್ನು ಇಡಿಯಾಗಿ ಗ್ರಹಿಸಬೇಕು. ನೇರವಾಗಿ, ಓರೆಯಾಗಿ, ಆಂಶಿಕ ವಾಗಿ ಪೂರ್ಣವಾಗಿ ಪರಿಭಾವಿಸಬೇಕು.

ಮಾನವ ಸಮಾಜಜೀವಿಯಾಗಿರುವುದರಿಂದ ಪ್ರೀತಿಯನ್ನು ನೀತಿಯಿಂದ ಬೇರ್ಪಡಿಸಲಾರನು. ಪ್ರೀತಿ–ನೀತಿಗಳು ಒಂದೇ ವಸ್ತುವಿನ ಎರಡು ಬದಿಗಳಿದ್ದಂತೆ. ಒಂದು ಬಿಟ್ಟು ಮತ್ತೊಂದನ್ನು ಗ್ರಹಿಸುವುದು ಎಂದರೆ ಅದರ ಸಮಗ್ರ ಸ್ವರೂಪ ದಿಂದ ವಂಚಿತರಾಗುವದೆಂದೇ.

---

9. ವಚನ ೨೫೨

'ನೀತಿಯಲ್ಲಿ ಕಾತನಿಯಮದ ಹಣ್ಣಿನಲ್ಲಿ
ಪ್ರೀತಿರಸ ತುಂಬಿದ್ದರೆ ಲೇಸಯ್ಯ' [10]

ಎನ್ನುತ್ತಾರೆ ಲೇಖಕರು. ನಾದಕ್ಕೆ–ಶ್ರುತಿ, ಬುದ್ಧಿಗೆ–ಭಾವ, ವಿಚಾರಕ್ಕೆ–ಅನುಭವ ವಿದ್ಯೆಗೆ–ವಿವೇಕಗಳು ಪೂರ್ಣತೆಗಳನ್ನು ಒದಗಿಸುವ ಹಾಗೆ ಪ್ರೀತಿಗೆ ನೀತಿ ಪೂರ್ಣ ಸ್ವರೂಪ ರೂಪಿಸಲು ಅಗತ್ಯವಾಗುತ್ತದೆ.

ಡಾ॥ ಸಿದ್ಧಯ್ಯ ಪುರಾಣಿಕರು ಪ್ರೀತಿ–ನೀತಿಗಳನ್ನು ತಮ್ಮ ಜೀವನದ ಚತುರಕ್ಷರೀ ಮಂತ್ರಗಳಾಗಿ ಸ್ವೀಕರಿಸಿದ್ದಾರೆ.[11] ಅವರು ಗೌರವಿಸುವ ಸಪ್ತಮಂತ್ರಗಳಲ್ಲಿ ಇದು ನಾಲ್ಕನೆಯ ಚತುರಕ್ಷರೀಮಂತ್ರ. ಭಾರತ, ಕರ್ನಾಟಕ, ಕನ್ನಡ, ಬಸವ, ಸತ್ಯಸೌಂದರ್ಯಗಳು ಒಂದೆಡೆ ; ಜನತೆ, ಕಾವ್ಯ. ಸ್ವಾ. ಧೀ. ಸಿದ್ಧೇಶ್ವರ ಇವು ಮತ್ತೊಂದೆಡೆ ; ಮಧ್ಯೆ, ಪ್ರೀತಿ—ನೀತಿಗಳು ಸೇತುವೆಯಾಗಿ ಅವರ ಒಳ ಹೊರ ವ್ಯಕ್ತಿತ್ವಕ್ಕೆ ಬಿಂಬ ಪ್ರತಿಬಿಂಬಗಳ ಪಾರದರ್ಶಕ ಶಕ್ತಿಯಾಗಿವೆ.

ಮನುಷ್ಯನ ಮೂಲ ಪ್ರವೃತ್ತಿಯಾದ ಕಾಮ, ಅದು ಸಂಸ್ಕಾರ ಹೊಂದಿ, ಕೌಟುಂಬಿಕ ಉದ್ದೇಶದಿಂದ ಬಂಧು ಮಿತ್ರರ ಪ್ರೀತಿಯಾಗಿ ಪರಿಣಮಿಸಿ ಮಾನವೀಯ ಸಂಬಂಧಗಳನ್ನು ನೇಯುವ ಪ್ರೇಮವಾಗುತ್ತದೆ. ಈ ಲೌಕಿಕ ಪ್ರೇಮವೇ ಮಹಾ ಪುರುಷರಲ್ಲಿ ಭಗವಂತನ ಸಾಕ್ಷಾತ್ಕಾರದ ಸಾಧನೆಯಾದಾಗ ಭಕ್ತಿಯೆನಿಸುವುದು.

ನವವಿಧ ಭಕ್ತಿಗಳಲ್ಲಿ ಮಧುರ ಭಕ್ತಿಯು ಒಂದು ವಿಧ. ಸತಿಪತಿಭಾವದಿಂದ ಪ್ರಿಯ ಪ್ರೇಯಸಿ ಭಾವದಿಂದ ಹಾಗೂ ಮದನ ಭಾವದಿಂದ ಅಭಿವ್ಯಕ್ತಿಗೊಳ್ಳುವ ಭಕ್ತಿ ಭಾವಕ್ಕೆ ಮಧುರ ಭಾವದ ಭಕ್ತಿಯೆಂದು ಕರೆಯುವರು. ಶರಣತತ್ವದಲ್ಲಿ ಶರಣನು ಸತಿಯಾಗಿ ಲಿಂಗದೇವನು ಪತಿಯೆನಿಸಿ, ಆತನನ್ನು ಒಲಿದು ಒಲಿಸಿಕೊಳ್ಳುವ, ಒಂದಾಗುವ ದೀಕ್ಷೆಯನ್ನು ಹೊಂದಿರುತ್ತಾನೆ. ಆ ತತ್ವಕ್ಕೆ ಕಟ್ಟುಬಿದ್ದು ಬಹುತೇಕ ಎಲ್ಲ ವಚನಕಾರರು ಕನಿಷ್ಠ ಒಂದೆರಡು ವಚನಗಳನ್ನಾದರೂ ಸತೀಭಾವದಲ್ಲಿ ಉಸುರಿದ್ದಾರೆ. ಆದರೆ ಮಧುರಭಾವದ ಉತ್ಕರ್ಷೆಯಿಂದ ಮನಸೆಳೆವ ವಚನಗಳು ಅಕ್ಕಮಹಾದೇವಿ, ಉರಿಲಿಂಗದೇವ, ಗಜೇಶ, ಮಸಣಯ್ಯಗಳಲ್ಲಿ ದೊರೆಯುತ್ತವೆ. ಅಖಂಡೇಶ್ವರರ ವಚನಗಳು ಈ ದಿಶೆಯಲ್ಲಿ ಗಣನೀಯವಾಗಿವೆ.

ಕಾವ್ಯಾನಂದರ ವಚನೋದ್ಯಾನದಲ್ಲಿ ಸತೀಭಾವದ ವಚನಗಳು ಹತ್ತೆಂಟಕ್ಕಿಂತ ಹೆಚ್ಚಿಲ್ಲ. ಒಂದೆರಡು ವಚನಗಳು ಭಾವದ ಉತ್ಕಟತೆಯನ್ನೂ ಸೆರೆಹಿಡಿದಿವೆ : ಈ ಸತಿಯ ಪ್ರಜ್ಞೆಯ ಮೂಲದಲ್ಲಿ ದಿನವೂ 'ಅವನು ಎಚ್ಚರಿಸುವ ಸದ್ದು, ನಡೆವ ಸದ್ದು, ಏನೋ ಪಿಸುಗುಡುವ ಸದ್ದು, ಸುಳಿದು ಸರಿವ ಸದ್ದು [12] ಇಬ್ಬರೂ ಹಲವು ದಾರಿಗಳಿಂದ ಪಯಣ ಬೆಳಸಿದರೂ ಸಂಕೇತಸ್ಥಾನದಲ್ಲಿ ಕೂಡಲಿಲ್ಲ. ಮಿಲನದ

---

10. ವಚನ ೧೨೯ 11. ವಚನ ೪೨ 12. ವಚನ ೫೧೬

ಬಯಕೆ ತಪ್ಪಲಿಲ್ಲ. ಹೀಗೆಯೇ ಸಮನಾಂತರಗಳಲ್ಲಿ ಸಾಗಬೇಕೆ ಸತಿಪತಿ ಸಂಬಂಧ ಮದುವೆಯ ಬದುಕು ಚೆಂದಾಗುವುದು ಎಂದು ?[13]—ಎಂದು ಆಕೆಯ ಜೀವಧರ್ಮ ತುಡಿಯುತ್ತದೆ :

ನನ್ನ ನಯನಗಳು ನೀರಡಿಸಿವೆ ನಲ್ಲ—
ನಿನ್ನ ಅಮೃತಹಾಸವ ಬೀರಿ, ತೋರಿ ತಣಿಸು ;
ನನ್ನ ಅಂಗಾಂಗಗಳು ಹಸಿದಿವೆ ನೀರ—
ಸರ್ವಾಂಗ ಆಲಿಂಗನ ನೀಡಿ ಸಂತೃಪ್ತಗೊಳಿಸು ;
ನನ್ನ ಅಧರಗಳು ಅರತು ಬರತಿವೆ ಚೆನ್ನ—
ನಿನ್ನ ಸವಿ ಮುತ್ತಿನ ಜೇನನೆರೆದು ಸಾಂತ್ವನಗೊಳಿಸು ;
ನನ್ನ ಕರ್ಣಗಳು ಕಾತರಿಸಿವೆ ಮನದನ್ನ —
ನಿನ್ನ ಸುಸಿಲ ಪಿಸುನುಡಿಗಳಿಂದ ಸಂತವಿಡು ;
ಎನ್ನ ಸರ್ವಾಂಗಗಳು ನಿನ್ನ ಸವಿ ಸೋಂಕಿಗಾಗಿ ಕಾದು
ಕಾದಿವೆ ನನ್ನ ರನ್ನ ಸ್ವತಂತ್ರಧೀರ ಸಿದ್ಧೇಶ್ವರಾ
ಸುಧಾವರ್ಷವಾಗಿ ಸುರಿ, ಸಂಜೀವಿನಿ ಸ್ಪರ್ಶವಾಗಿ
ಇಳಿ ಅವುಗಳ ಮೇಲೆ[14]

ಹೀಗೆ ಮನ ಪ್ರಾಣ ಭಾವಗಳು ಪಂಚೇಂದ್ರಿಯಗಳ ಮುಖದಲ್ಲಿ ಕಾತರಿಸಿ, ಕಳವಳಿಸಿ ದೀಪಾರತಿ ಎತ್ತಿ ನಿಲ್ಲುತ್ತವೆ. ಮದವಳಿಗೆ ಸಿಂಗರಿಸಿಕೊಂಡು ನಿಂತಿದ್ದಾಳೆ. ಬರುವನೋ ಬಾರನೋ ಎಂಬ ಚಿಂತೆ. ಅವನು ಬರುವನು ನಿಶ್ಚಿತವಾಗಿ ಬರುವನು. ಮೊದಲು ಮದವಳಿಗೆ 'ನೀನು ಸೊಬಗು ಸಿಂಗರಗಳ ಮದವಳಿಗೆ ನಿನಗೆ ಹಾರಿ ತೂರಿ ಸಾರಿ ಬರುವನು ಬಳಿಗೆ !' ಎಂಬ ವಿವೇಕದ ಒಳನುಡಿ—

'ನಾನೆಂಬ ಭಾವ ಬಿಟ್ಟು ಹೋಗಲಿ
ರೂಪು ಶೃಂಗಾರಗಳ ಹಮ್ಮು ಬಿಟ್ಟು ಹೋಗಲಿ'

ಎಂಬ ಎಚ್ಚರಿಕೆ ಅಂತರಂಗಕ್ಕೆ ಪ್ರಶ್ನಿಸುತ್ತದೆ. ಅವಳ ಶುದ್ಧಿಯ ತವಕ ಹೆಚ್ಚಿ ನಿಷ್ಠೆ ಬಲಿಯುತ್ತದೆ. ಸಂಶಯ ಸ್ಥಿರತೆಯನ್ನು ಸಡಿಲಿಸಿದರೂ ಅದೆಲ್ಲ ಮಿಲನದ ಕಣ್ಸನ್ನೆ ಎಂಬುದು ಆಕೆಗೂ ಗೊತ್ತು.

ಪುರಾಣಿಕರ ಸತಿಭಾವದ ವಚನಗಳಲ್ಲಿ ಹಂಬಲ, ಕಾತರ, ಕಳವಳ, ಕನವರಿಕೆ, ಅಭೀಪ್ಸೆ, ಹಾರೈಕೆ, ಪ್ರತೀಕ್ಷೆ, ಶುದ್ಧಿಯ ತವಕ, ಮಿಲನದ ನಿರ್ಧಾರ, ತೃಪ್ತಿ–ಇತ್ಯಾದಿ ಸಂಚಾರಿಗಳು ಸುಳಿದರೂ ಭಾವದ ಉತ್ಕಟತೆ ಎಲ್ಲಿಯೂ ತೀವ್ರ ತುಡಿತಕ್ಕೆ ಒಳಗಾಗಿಲ್ಲ.

---

13. ವಚನ ೫೧೭ 14. ವಚನ ೫೧೮

ಆ ಕಾರಣದಿಂದಲೇ ಅವರ ಲೌಕಿಕ ಸ್ಪರ್ಶದಲ್ಲಿ ಹೊಳೆಯುವ ಪ್ರೀತಿ ಮುತ್ತುಗಳು ಸತೀಭಾವದ ವಚನಗಳಿಗಿಂತ ಹೆಚ್ಚು ಜಾತಿ ಮುತ್ತುಗಳಾಗಿ ಪರಿಣಮಿಸುತ್ತವೆ.

'ಪ್ರೀತಿ–ಸಹಾನುಭೂತಿ ಒಂದು ಮಹಾಶಕ್ತಿ' ಪ್ರೀತಿಯೊಂದಿರದಿದ್ದರೆ ಎಲ್ಲಿ ಇದ್ದೂ ಇಲ್ಲದಂತೆ' 'ಪ್ರೀತಿಸಿದವರನ್ನು ಪ್ರೀತಿಸುವವ ಮಾನವ' ನೋವೆ ನಾವೆಯುಯ್ಯ ಬದುಕಿನ ತೊರೆ'—ಇಂತಹ ಮಾತುಗಳು ಅವರ ಜೀವನಾನುಭವ ನಿಕಷದಿಂದ ಹೊರ ಬಂದ ವೇದವಾಕ್ಯಗಳು. ಹೃದಯವಂತನಾಗಿ ಬಾಳಿ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು ಎಂಬ ಆದರ್ಶವನ್ನು ಹೊತ್ತ ಪ್ರತಿಯೊಬ್ಬನು ತನಗರಿಯದಂತೆ ಅವುಗಳನ್ನು ತನ್ನ ಬಾಳ ಜ್ಯೋತಿಯನ್ನಾಗಿ ಸ್ವೀಕರಿಸುತ್ತಾನೆ.

ಪ್ರೀತಿಯ ಬಗ್ಗೆ ಬರೀ ಮಾತು ಬೆಳೆದರೆ ಏನಾಗುತ್ತದೆ! ಪುರಾಣಿಕರ ಈ ಮಾತುಗಳನ್ನು ಕೇಳಿದ ಬಳಿಕ ತಾನಾಗಿಯೇ ಮೌನ ಕಿರೀಟಧರಿಸಿ ಕೈ ಎತ್ತಿ ಅಭಯ ಕೊಡುತ್ತದೆ :

ಸಿರಿಯ ಸರಿ ಹಸುಗೆ ಹೃದಯ ಹೃದಯಗಳ ಬೆಸುಗೆ
ಬರಲಯ್ಯಾ ಭುವನಕ್ಕೆ ಒಲವಿನೊಸಗೆ ! [15]
'ಪ್ರೀತಿಯ ಮೂಲದ ಬಗ್ಗೆ ಶೋಧಿಸುತ್ತ ಶೋಧಿಸುತ್ತ
ಪ್ರೀತಿಸುವುದನ್ನೇ ಕಳೆದುಕೊಳ್ಳುವಂತಾಗಬಾರದು [16]

15. ವಚನ ೩೦೨ 16. ವಚನ ೩೦೦

# ಜೋಳಿಗೆ

ಎಂ. ಜಿ. ನಂಜುಂಡಾರಾಧ್ಯ

"ವಚನೋದ್ಯಾನ" ಕನ್ನಡ ನುಡಿದೇವಿಯ ತಳಿರಡಿಗೆ ಒಪ್ಪಿಸಲು ಪುರಾಣಿಕ ಡಾ. ಸಿದ್ಧಯ್ಯನವರು ಬಿಡಿಸಿರುವ ವಚನಕುಸುಮಾಂಜಲಿ. ಅದು ವಿಶ್ವಕವಿ ರವೀಂದ್ರರ ಗೀತಾಂಜಲಿಯನ್ನು ನೆನಪಿಸುತ್ತದೆ.

ಕನ್ನಡದಲ್ಲಿ ಈ ದಿಸೆಯಲ್ಲಿ ಹೊರಬಂದಿರುವ ರಚನೆಗಳಲ್ಲಿ ಕನ್ನಡ ಋಷಿಕವಿಗಳೆನಿಸಿರುವ ಶ್ರೀ ರಂ. ರಾ. ದಿವಾಕರರ "ಅಂತರಾತ್ಮನಿಗೆ" ಮತ್ತು ಡಾ. ಜ. ಚ. ನಿ. ಯವರ "ಅಭಯವಾಣಿ" ಮುಂತಾದವು ಕೆಲವು ಹೆಸರಿಸತಕ್ಕ ಕೃತಿಗಳುಂಟು. "ವಚನೋದ್ಯಾನ" ಈ ಸಾಲಿನಲ್ಲಿ ಚಿರಕಾಲ ಉಳಿಯುವಂತಹುದು. ಆದರಿಂದಲೆ ಬಹುಭಾಷಾ ಪರಿಷತ್ತು ಇದಕ್ಕೆ ನೀಡಿರುವ ಪ್ರಶಸ್ತಿ ಸಮುಚಿತ.

ವಚನೋದ್ಯಾನದಲ್ಲಿ ೫೨೫ ವಚನಗಳಿವೆ. ಪ್ರತಿಯೊಂದು ವಚನವೂ ಶ್ರೀಯುತರ ಸಮಯ ಸ್ಫೂರ್ತಿಗೆ, ಪ್ರತಿಭೆಗೆ, ಆಳವೂ, ಬಹುಮುಖವೂ ಆದ ಅನುಭವಕ್ಕೆ ಹೊಮ್ಮಿದ ಬುಗ್ಗೆಯೆಂದರೆ ಅತ್ಯುಕ್ತಿಯಾಗದು.

ಈ ದಿಸೆಯಲ್ಲಿ "ಜೋಳಿಗೆ" ಯನ್ನು ಕುರಿತ ಒಂದು ವಚನ ಇದು

"ಜೋಳಿಗೆಯ ಹಿಡಿದುಕೊಂಡೇ ಹುಟ್ಟಿದೆ
ಇಂದಿಗೂ ಜೋಳಿಗೆ ತಪ್ಪಿಲ್ಲ,
ಜೋಳಿಗೆಯದೇನೂ ತಪ್ಪಿಲ್ಲ,
ಅರಿವೆಯ ಜೋಳಿಗೆ ಹೋಗಿ
ಅರಿವಿನ ಜೋಳಿಗೆ ಬಂದಿದೆ.
ತುಂಬುವ ಜೋಳಿಗೆ ಹೋಗಿ
ತುಂಬದ ಜೋಳಿಗೆ ಬಂದಿದೆ !
ಈ ಜೋಳಿಗೆಯ ಹಿಡಿದು ತಿರುಗಿದೆ
ತಿರೆಯ ಅರಿವಿನ ದೊರೆಗಳ ಮನೆ ಮನೆಗೆ :
ಒಡ್ಡಿದೆ ಬರಿ ಜೋಳಿಗೆಯ ಅವರೆದುರಿಗೆ !

ನೀಡಿದರವರು ಬೇಡಿದುದ ಬೇಡದುದ !
ಓಡಿ ಬಂದೆ ಮನೆಗೆ ನೋಡುವಾತುರದಿಂದ,
ತೆರೆದೆ ಜೋಳಿಗೆ ಉಕ್ಕುವ ತವಕದಿಂದ !
ನೋಡಿದೆ...ಕೂಡಿದೆ...ಬಾಡಿದೆ !
ಬರಿದೋ ಬರಿದು ಜೋಳಿಗೆ !

ಆಗ ತಿಳಿಯಿತು.

ಇದು ಹರಕು ಜೋಳಿಗೆಯೆಂಬುದು !
ಮೊದಲೇ ತುಂಬದ ಜೋಳಿಗೆ
ಸಾಲದುದಕ್ಕೆ ತೂತು ಬಿದ್ದ ಜೋಳಿಗೆ !
ಹೊಲಿದುಕೊಳ್ಳಬೇಕೀ ಹರಿದ ಜೋಳಿಗೆಯನ್ನು
ಹೊಲಿದುಕೊಳ್ಳದೆ ಹಲವರ ಬೇಡಿ ಫಲವೇನು ?
ಅವರು ನೀಡಿ ಫಲವೇನು ?
ಇದನು ಹೊಲಿದುಕೊಳ್ಳಲು
ಶ್ರದ್ಧೆಯ ಸೂಜಿ
ಶುದ್ಧಿಯ ದಾರವ ನೀಡು,
ಎಲ್ಲ ನೀಡುವ ಸ್ವತಂತ್ರ ಧೀರ ಸಿದ್ಧೇಶ್ವರಾ ! (೨೧೬)

ವಚನೋದ್ಯಾನದ ವಚನಗಳು ಓದುಗನ ಅನುಭವದ ಆಳ ಮತ್ತು ಅಭ್ಯಾಸದ ಗಾಢತೆಗೆ ಅನುಗುಣವಾಗಿ ಅರಳುತ್ತವೆ, ಅರ್ಥವಿಸುತ್ತವೆ, ಆನಂದ ನೀಡುತ್ತವೆ, ಅಂತರ್ಮುಖಿಗಳನ್ನಾಗಿಸುತ್ತವೆ, ತಮ್ಮ ಬಹುಮುಖ ಸೌರಭ ಸೂಸುತ್ತವೆ.

"ಜೋಳಿಗೆ" ಶ್ರೀಯುತರ ವಿನಯ, ವಿವೇಚನೆಯ ತುತ್ತ ತುದಿಯನ್ನು ಮಾತ್ರವಲ್ಲದೆ, ಅವರ ತಿಳಿವಿನಾಸೆಯ ಪ್ರಾಂಜಲ ನಿರ್ಮಲ ಮನಃ ಪರಿಪಾಕವನ್ನು ಅಭಿವ್ಯಂಜಿಸಿದೆ.

ವ್ಯವಹಾರದಲ್ಲಿ 'ಜೋಳಿಗೆ' ಚಚ್ಚೌಕವಾದ ಎರಡು ಪದರದ ವಸ್ತ್ರವನ್ನು ನಾಲ್ಕು ಕೋಣೆ ಬರುವಂತೆ ಹೊಲಿದು, ಮೂಲೆಗಳನ್ನು ಸೇರಿಸಿ ಮಾಡಿದ ಒಂದು ಕೈಚೀಲ. ಇದು ವೀರಶೈವದಲ್ಲಿ ವಿಶಿಷ್ಟಾರ್ಥದಲ್ಲಿ ಬಳಕೆಯಲ್ಲಿರುವ ಒಂದು ಪಾರಿಭಾಷಿಕ ಪದ. ಜೋಳಿಗೆ ಶಿವದೀಕ್ಷೆಯ ಕಡೆಯಲ್ಲಿ ಗುರು ಶಿಷ್ಯನಿಗೆ ಜಂಗಮತ್ವ ಸೂಚಕವಾಗಿ ಕೊಡುವ ಬಾಹ್ಯಪಂಚ ಮುದ್ರೆಗಳಲ್ಲಿ ಒಂದು.

ಕಂಥಾ ಕಮಂಡಲುಶ್ಚೈವ ದಂಡಂ ವೈಭೈಕ್ಷ ಪಾತ್ರಕಮ್ !
ಭಸ್ಮಪಾತ್ರಂಚ ಪಂಚೈತೇ ಬಾಹ್ಯಮುದ್ರಾಶ್ಚ ಧಾರಯೇತ್ ।

ಅಂತರಂಗದ ಪಂಚಮುದ್ರೆಗಳಲ್ಲಿ ಸಮತೆಯೇ ಜೋಳಿಗೆ, ಜ್ಞಾನವೇ ದಂಡ, ದಯೆಯೇ ಕಮಂಡಲು, ವೈರಾಗ್ಯವೇ ಭಿಕ್ಷಾಪಾತ್ರೆ, ಕ್ಷಮೆಯೇ ಭಸ್ಮ ಎನ್ನಲಾಗಿದೆ.

ದೀಕ್ಷೆ ಪಡೆದ ಶಿಷ್ಯ ಗುರುವಿನ ಆಣತಿಯಂತೆ ಗೃಹಸ್ಥರ ಮನೆಗಳಿಗೈದಿ ಗೃಹಿಣಿಯನ್ನು "ಭವತಿ, ಭಿಕ್ಷಾಂದೇಹಿ !" ಎಂದೂ, ಗೃಹಸ್ಥನನ್ನು 'ಭವಾನ್ ಭಿಕ್ಷಾಂದೇಹಿ!' ಎಂದೂ ಯಾಚಿಸಬೇಕು. ಈ ಭಿಕ್ಷೆ ನೀಡುವ ಅರ್ಹತೆ ಪಡೆದವನು ಗೃಹಸ್ಥನು ಮಾತ್ರ. ಗೃಹಸ್ಥಾಶ್ರಮವನ್ನು ಉಳಿದೆಲ್ಲ ಆಶ್ರಮಗಳವರೂ ಆಶ್ರಯಿಸಿರುವುದರಿಂದ ನಿಜವಾದ ಜಗದ್ಗುರು ಪದವಿಗೆ ಅವನೇ ಅಧಿಕಾರಿ.

ಆಶ್ರಮಾಣಾಂ ಸಮಸ್ತಾನಾಂ ಗೃಹೀಸ್ಯಾತ್ ಉತ್ತಮೋ ಗುರುಃ !
ಯಥಾಹಂ ಸರ್ವಲೋಕಾನಾಂ ಗುರುರಂಬಿಕಯಾ ಸಹ ॥

ಎಂಬ ಆಗಮೋಕ್ತಿ ಇದನ್ನು ಸಮರ್ಥಿಸಿದೆ. "ಎಲ್ಲ ಆಶ್ರಮಗಳಲ್ಲಿ ಗೃಹಸ್ಥನೇ ಉತ್ತಮ ಗುರು; ನಾನು ಅಂಬಿಕೆಯೊಡನೆ ಹೇಗೆ ಎಲ್ಲ ಲೋಕಗಳ ಗುರುವಾಗಿರುವೆನೋ ಹಾಗೆ" ಎಂಬ ಉಕ್ತಿ ಗೃಹಸ್ಥಾಶ್ರಮದ ಮಹತ್ವವನ್ನು ಸ್ಥಾಪಿಸಿದೆ. ಅಂತಹ ಸತ್ ಗೃಹಸ್ಥಾಶ್ರಮಿಯು ನೀಡುವ—

"ಕಾರುಣ್ಯದ ಭಿಕ್ಷೆ" ಇಂದು ಕೋರಾಣ್ಯದ ಭಿಕ್ಷೆಯಾಗಿದೆ. ಅದು ತನ್ನ ಪವಿತ್ರವಾದ ಮೂಲ ಅರ್ಥವನ್ನು ಕಳೆದುಕೊಂಡು ಹೊಟ್ಟೆ ಹೊರೆಯುವ ಹೀನ ಕಸಬಾಗಿ ನಿಂತಿದೆ.

ವೀರಶೈವದಲ್ಲಿನ 'ಜಂಗಮ ಪದ ಮಾರ್ಮಿಕವಾದ ಅರ್ಥದಲ್ಲಿ ಬಳಕೆಯಲ್ಲಿದೆ. ಗುರು, ಲಿಂಗ, ಜಂಗಮ ತತ್ತ್ವಗಳ ಅಷ್ಟಾವರಣಗಳಲ್ಲಿ ಪೂಜ್ಯ ವಸ್ತುಗಳು. ಅಪ್ರತ್ಯಕ್ಷನಾದ ಮಹಾದೇವನೇ ತನ್ನ ಹಣೆಗಣ್ಣು ಮತ್ತು ಮಂಡೆಯ ಗಂಗೆಯರನ್ನು ಮರೆಮಾಚಿ ಭಕ್ತರನ್ನು ಪರೀಕ್ಷಿಸಿ ಫಲ ನೀಡುವುದಕ್ಕಾಗಿ ಜಂಗಮ ರೂಪದಿಂದ ಬರುವ ಕಲ್ಪನೆಯಿದೆ. ಈ ಜಂಗಮದ ಮುಖ್ಯ ಚಿಹ್ನೆ ಜಂಗು, ಜೋಳಿಗೆ; ಜಂಗು ಬಲಗಾಲಿನ ಜಂಘೆಗೆ ಕಟ್ಟುವ ಮಂಜುಳ ನಾದದ ತೋರ ಗೆಜ್ಜೆಗಳ ಮಂಜರಿ. ಮಂಡೆಗೆ ಸುತ್ತಿದ ಕಾವಿ ಪಾವುಡ, ಕಪಿನಿ ಬೆತ್ತ, ಜೋಳಿಗೆವಿಡಿದ ಜಂಗಮ ಶಿವನ ಭಿಕ್ಷಾಟನ ಲೀಲೆಯನ್ನು ನೆನಪಿಸುತ್ತಾನೆ. ಹೀಗೆ ಭಕ್ತೋದ್ಧಾರದ ಸತ್ಯಶುದ್ಧ ಉದ್ದೇಶದಿಂದ ಬೇಡಿತಂದರೂ ಭಿಕ್ಷೆ ಕಾಯಕವೇ. ಏಕೆಂದರೆ ಅದರಲ್ಲಿ ಅವನ ಸ್ವಾರ್ಥವಿಲ್ಲ. ಮಾರಯ್ಯ ಬೀದಿಯಲ್ಲಿ ಆಯ್ದುತಂದ ಅಕ್ಕಿ ದಾಸೋಹಕ್ಕೆ ವಿನಿಯೋಗವಾಗುವಂತೆ ಇಲ್ಲಿ ತಂದ ಭಿಕ್ಷೆ ಮೊದಲು ಗುರುವಿಗೆ ಅರ್ಪಿತವಾಗಿರುತ್ತದೆ. ಗುರು ಅವನ ಅಗತ್ಯಕ್ಕೆ ತಕ್ಕಷ್ಟು ಶಿಷ್ಯನಿಗೆ ಅನುಗ್ರಹಿಸಿ, ಉಳಿದುದನ್ನು ದಾಸೋಹಕ್ಕೆ ವಿನಿಯೋಗಿಸುತ್ತಾನೆ. ದಾಸೋಹ ಗುರು-ಲಿಂಗ-ಜಂಗಮ ತ್ರಿವಿಧಕ್ಕೆ ! ಎಂದರೆ ಅದು ಲೋಕೋಪಯೋಗಕ್ಕೆ ವಿನಿಯೋಗವಾಗುವುದು ಸರ್ವವಿದಿತ. ಇದು

ಜಂಗಮದ ಜೋಳಿಗೆಯ ಮಾರ್ಮಿಕವಾದ ಅರ್ಥ, ಅರಿವೆಯ ಜೋಳಿಗೆ ಬೇಡುವುದು, ಹಿಟ್ಟು-ಕಾಳುಗಳನ್ನಾದರೂ, ಅದನ್ನು ಶ್ರೀಯುತರು ಅರಿವಿನ ಜೋಳಿಗೆಯ ಅರ್ಥದಲ್ಲಿ ಬಳಸಿರುವುದು ವಾಸ್ತವಿಕವಾದರೂ ಸೂಕ್ತವಾಗಿದೆ. ಇಲ್ಲಿ ವ್ಯಂಜಿತವನ್ನು ವಾಚ್ಯದಲ್ಲಿ ಎಲ್ಲರಿಗೂ ತಿಳಿಯುವಂತೆ ಚಿತ್ರಿಸಲಾಗಿದೆ. ಈ ವಚನದಲ್ಲಿ ಜಂಗಮ ಪದವನ್ನು ಬಳಸದಿದ್ದರೂ ಅದು ಜೋಳಿಗೆಯಿಂದ ಅಭಿವ್ಯಕ್ತಗೊಂಡಿದೆ.

"ಜೋಳಿಗೆಯ ಹಿಡಿದುಕೊಂಡೇ ಹುಟ್ಟಿದೆ" ಎಂಬುದು ಶ್ರೀಯುತರು ಹುಟ್ಟು ಜಂಗಮರೆಂಬುದರ ಸಂಕೇತ. ಅವರಿಗೆ ಶಿವದೀಕ್ಷೆಯ ಕಾಲದಲ್ಲಿ ಕೊಟ್ಟ ಅರಿವೆಯ ಜೋಳಿಗೆಯ ಮುಖ್ಯ ಉದ್ದೇಶವನ್ನು ಇಲ್ಲಿ ಮನೋಜ್ಞವಾಗಿ ವಿಶ್ಲೇಷಿಸಲಾಗಿದೆ.

ಸಾಂಪ್ರದಾಯಿಕವಾಗಿ ಜೋಳಿಗೆ. ಜಂಗಮ ವರ್ಗದ ದೀಕ್ಷಿತ ವಟುಗಳಿಗೆ ಮಾತ್ರ ಮೀಸಲು ; ಆದರೂ ಅದನ್ನು ಶ್ರೀಯುತರು "ವಿಶಾಲವಾದ ವರ್ಗ-ವರ್ಣಗಳನ್ನು ಮೀರಿದ ಪ್ರಶಸ್ತವಾದ ಅರಿವುಳ್ಳ ಮಾನವ ಲೋಕ" ಎಂಬ ಅರ್ಥದಲ್ಲಿ ಬಳಸಿರುವುದಕ್ಕೆ ಇದು ಗಮಕ. ಅರಿವಿನ ಜೋಳಿಗೆ, ಜ್ಞಾನ ಪ್ರಧಾನವಾದ ಸ್ಥಾವರವಲ್ಲದ ಅರಿವುಳ್ಳ ಮಾನವರೆಲ್ಲರಿಗೂ ಅನ್ವಯವಾಗಿದೆ. ಅಂಥವನೇ ಜಂಗಮ.

ಪ್ರಾಕೃತ ಸ್ಥಿತಿಯಲ್ಲಿ ಮಾನವ ಜೋಳಿಗೆ ಹಿಡಿದು ಬಟ್ಟೆ ಬರೆಗಾಗಿ ಹಿಟ್ಟು ಕಾಳು ಬೇಡುವುದು ಸಹಜವಾದರೂ ಶಿವದೀಕ್ಷೆಯಿಂದ ಅಪ್ರಾಕೃತನಾದ ಜಂಗಮ ಅಷ್ಟಕ್ಕೆ ಸೀಮಿತನಲ್ಲ.

ಜಂಗಮ ಅರಿವಿನ ಜೋಳಿಗೆ ಹಿಡಿದು ಬೇಡುವುದು "ಸಾ ವಿದ್ಯಾ, ಯಾ ವಿಮುಕ್ತಯೇ" ಎಂಬಂತೆ ಶ್ರೇಷ್ಠವಾದ ಮುಕ್ತಿಗೆ ಸಾಧಕವಾದ ಅರಿವನ್ನೇ. ಅದನ್ನು ನೀಡುವ ಅರ್ಹತೆ ಪಡೆದವರೇ ಅರಿವಿನ ದೊರೆಗಳು ಅಂದರೆ ಜ್ಞಾನವೃದ್ಧರು ಅಂಥವರ ಮನೆ ಮನೆ ತಿರುಗುತ್ತಾನೆ. ಬಲ್ಲವರೆಲ್ಲರಲ್ಲಿ ಒಂದೊಂದು ನುಡಿಗಲಿತು ವಿದ್ಯೆಯ ಪರ್ವತವೇ ಆಗುವ ಹಂಬಲ ಅವನದು.

ಸಭ್ಯ ಗೃಹಸ್ಥರು ನೀಡುವ ಹಿಟ್ಟು-ಕಾಳುಗಳಿಂದ ತುಂಬುವಂಥದು ಅರಿವೆಯ ಜೋಳಿಗೆ. ಆದರೆ ಅರಿವಿನ ಜೋಳಿಗೆ ಅಂತಹುದಲ್ಲ : ಅರಿವಿನ ದೊರೆಗಳು ನೀಡುವ ಪುಷ್ಕಲ ಭಿಕ್ಷೆಯಿಂದಲೂ ಅದು ತುಂಬುವುದಲ್ಲ, ಅರಿವಿಗೆ ಮಿತಿಯುಂಟೇ ?

ನೀಡುವ ಧಣಿ ಕೇವಲ ಬೇಡಿದುದನ್ನೇ ನೀಡಬೇಕೆಂಬ ನಿಯಮವಿಲ್ಲ. ಇವನಿಗೆ ಸಧ್ಯಕ್ಕೆ ಬೇಡವಾದರೂ ಭವಿಷ್ಯದಲ್ಲಿ ಅಗತ್ಯವಾದದ್ದನ್ನೂ ಆತ ನೀಡಬಲ್ಲ. ಏಕೆಂದರೆ ಆತ ಅರಿವಿನ ದೊರೆ, ಸರ್ವಜ್ಞ ! "ಯದ್ಭದ್ರಂತನ್ನ ಆಸುವ" ಎಂಬ ವೇದವಾಣಿ ಇದನ್ನು ಸೂಚಿಸಿದೆ. ನನಗೆ ಬೇಕಾದುದನ್ನೇ ನೀಡು ಎಂದು ಬೇಡುವುದು ಅಜ್ಞತ್ವದ ಕುರುಹು. ಪ್ರೇಯದಲ್ಲಿ. ಐಹಿಕದಲ್ಲಿ, ಅಲ್ಪದಲ್ಲಿ ಸುಖವಿಲ್ಲ ಎಂಬುದನ್ನು ಬಲ್ಲವನು ಆ ಸ್ವತಂತ್ರ ಧೀರ ಸಿದ್ಧೇಶ್ವರ. ನನಗೆ ಅಗತ್ಯವಾಗಿ ಬೇಕಾಗುವುದನ್ನು ಆತ ನೀಡ

ಬಲ್ಲ, ಶಿಶುವಿಗೆ ಸ್ತನ್ಯವುಣಿಸುವ ತಾಯಿ ಶಿಶುವಿನ ಸರ್ವತೋಮುಖವಾದ ಬೆಳವಣಿಗೆಗೆ ಅಗತ್ಯವಾದ ಪೌಷ್ಟಿಕವನ್ನು ಜೊತೆಗೆ ಉಣಿಸುವಂತೆ.

ಇಷ್ಟಾದ ಮೇಲೆ ಅವನಿಗೆ ತನ್ನ ಅರಿವಿನ ಜೋಳಿಗೆ ತುಂಬಿರಬೇಕೆಂಬ ನಿರೀಕ್ಷೆ ಸಹಜವೇ ! ಅದನ್ನು ನೋಡುವ ಆತುರ ! ಉಕ್ಕುವ ತನಕ ! ಅವನಿಗಿದ್ದರೆ ತಪ್ಪಲ್ಲ. ಅದಕ್ಕಾಗಿ ಮನೆಗೆ ಧಾವಿಸಿದ. ಅವನು ಕಂಡುದೇನು ? ಬರಿ ಜೋಳಿಗೆ ! ಅವನು ಆಶೆಯ ನೋಟ ನಿರಾಶೆಯಲ್ಲಿ ಕೊನೆಗೊಂಡಿತು ! ಕಣ್ಣೀರು ಕೋಡಿ ಹರಿಯಿತು ! ದುಗುಡ ದುಮ್ಮಾನ ಉಕ್ಕಿ ಬಂತು ! ಕಾತರಗೊಂಡ ಮನ ಬತ್ತಿತು, ಬಾಡಿತು ; ಅಯ್ಯೋ ! ಜೋಳಿಗೆ ಬರಿದೊ ಬರಿದು ! ಎಂದು ಹುಯ್ಯಲಿಟ್ಟ ! ಮನಸ್ಸು ಕಳವಳ ಗೊಂಡು ಉದ್ವಿಗ್ನವಾಗದಿರುವುದೇ ?

ಏಕೆ ಬರಿದಾದದ್ದು ಎಂಬುದರ ಕಾರಣ ಕೊನೆಗೆ ತಿಳಿಯಿತು ! ಜೋಳಿಗೆ ಹರಿದಿತ್ತು ! ತೂತು ಬಿದ್ದಿತ್ತು !

ಮೊದಲೇ ತುಂಬದ ಜೋಳಿಗೆ ಅದು ! ಸಾಲದುದಕ್ಕೆ ತೂತೂ ಬಿದ್ದಿದೆ. ತೂತೆಂದರೆ ಇಲ್ಲಿ ಮರವೆಯಲ್ಲದೆ ಮತ್ತೇನು ? ಅರಿತದ್ದೆಲ್ಲ ಮರವೆಯಲ್ಲಿ ಸೋರುತ್ತಿದ್ದರೆ ಅದು ತುಂಬುವುದಾದರೂ ಎಂತು ? ಬೇಡುವ ತವಕದಲ್ಲಿ ಹರಕು ಜೋಳಿಗೆಗೆ ಮರೆವೆಯ ತೂತಿರುವುದರ ಪರಿವೆಯೂ ಅವನಿಗಿರಲಿಲ್ಲ. ಇದು ಸಹಜವೆ ! ಏಕೆಂದರೆ ಹೆಚ್ಚು ಗಳಿಸುವ ಆತುರವುಳ್ಳವನಿಗೆ ವಿವೇಚನೆಗೆ ಎಡೆ ಎಲ್ಲಿಯದು ! ಹರಿದುದನ್ನು ಹೊಲಿಯದೆ, ತೂತು ಮುಚ್ಚದೆ ಬೇಡಿಯೂ ಫಲವೇನು ! ನೀಡಿಯೂ ಫಲವೇನು? ಹರಿದ ಜೋಳಿಗೆ ಹೊಲಿಯಲು ಸೂಜಿ ದಾರಗಳು ಅಗತ್ಯ. ಆದರೆ ಅರಿವಿನ ಜೋಳಿಗೆಗೆ ಈ ಸೂಜಿ ದಾರಗಳು ಕೆಲಸಕ್ಕೆ ಬಾರವು. ಅದಕ್ಕೆ ಅಗತ್ಯವಾದ ಸೂಜಿ ದಾರಗಳು ಅಂಗಡಿಯಲ್ಲಿ ದೊರೆಯುವ ವಸ್ತುಗಳಲ್ಲ. ಕಷ ತಂದು ಕೆಲಸ ತೂಗಿಸುವಂತಹವೂ ಅಲ್ಲ ; ಸಾಧನೆಯಿಂದ ಗಳಿಸಲು ಸಾಧ್ಯವೂ ಇಲ್ಲ. ಶ್ರದ್ಧೆ—ಶುದ್ಧಿಗಳೇ ಇಲ್ಲಿಗೆ ಬೇಕಾದ ಸೂಜಿ ದಾರಗಳು. ಅಂಥ ಶ್ರದ್ಧೆ ಶುದ್ಧಿಗಳಿಗೆ ಎರೆಯ ಶ್ರೀ ಸಿದ್ಧೇಶ್ವರ. ಎಲ್ಲವನ್ನು ನೀಡಬಲ್ಲ ಸ್ವತಂತ್ರ ಧೀರನವನು ! ಅವನ ಕೃಪೆಯಿಲ್ಲದೆ ಶ್ರದ್ಧೆ ಮಾಡುವುದೆಂತು ! ಶುದ್ಧಿ ಸಿದ್ಧಿಸುವುದೆಂತು ?

ನಿಡುವನೆಂಬ ದೃಢ ನಂಬುಗೆ ಭಕ್ತನದು, ಗೆಲ್ಲುವೆನೆಂಬ ಭಾಷೆ ಭಕ್ತನದಲ್ಲವೆ ? ಅಂಥ ಶ್ರದ್ಧೆ ಶುದ್ಧಿಗಳನ್ನು ಮೊದಲು ರೂಢಿಸಿಕೊಳ್ಳಬೇಕು ಭಕ್ತ, ಆದರಿಂದ ಮರವೆಯ ಮಾತು ಮುಚ್ಚುತ್ತದೆ; ಅರಿವು ಉಳಿಯುತ್ತದೆ; ಬದುಕು ಹಸನಾದೀತು ! ಬಾಳು ಬೆಳಗೀತು ! ಬಯಕೆ ಕೈಗೂಡೀತು !

# ಕಾವ್ಯಾನಂದರ ಮರುಳಸಿದ್ಧನ ಕಂತೆಯಲ್ಲಿ ಜೀವನ ಸೌಂದರ್ಯ

ಷಣ್ಮುಖಯ್ಯ ಅಕ್ಕೂರಮಠ

ಭಾರತೀಯ ಸಾಹಿತ್ಯದಲ್ಲಿ ನೀತಿಕಾವ್ಯಗಳ ಪರಂಪರೆ ವೈಶಿಷ್ಟ್ಯ ಪೂರ್ಣವಾದುದು. ಶೃಂಗಾರಾದಿ ನವರಸಗಳಲ್ಲಿ, ಪ್ರಕೃತಿಯ ಸುಖಾನುಭವದಲ್ಲಿ ಆಸಕ್ತರಾಗಿದ್ದ ಕವಿಗಳ ಮನಸ್ಸು, ಜೀವನವೇ ಒಂದು ತೊಡಕಿನ ಸಮಸ್ಯೆ : ಅದನ್ನು ಹೇಗೆ ಎಚ್ಚರದಿಂದ ಬಾಳಿನಲ್ಲಿ ಬಿಡಿಸಬೇಕು ; ಸಮಾಜದಲ್ಲಿ ಹೇಗೆ ಬಾಳಬೇಕು; ಯಾವ ನೀತಿಗಳನ್ನು ಪರಿಪಾಲಿಸಬೇಕು : ಮಹತ್ವ ಪೂರ್ಣವಾದ ಜೀವನ ಮೌಲ್ಯಗಳಾವುವು : ಅವುಗಳ ನಿಜಾಚರಣೆಯಿಂದ ಬದುಕು ಹೇಗೆ ಸಾರ್ಥಕವಾಗುತ್ತದೆ ಎನ್ನುವತ್ತ ಚಿಂತನಗೈದು ಜೀವನ ಮೌಲ್ಯಗಳನ್ನು ಕುರಿತು ಹಾಡುವ, ನೀತಿಕಾವ್ಯ ಸೃಷ್ಟಿಸುವ ನೆಲೆಗೆ ಬಂದು ಮುಟ್ಟಿತು. ನೀತಿ ಮೌಲ್ಯಗಳ ಹಿನ್ನೆಲೆಯಲ್ಲಿ ಜೀವನ ಸೌಂದರ್ಯವನ್ನು ಗುರುತಿಸಿದರು. ಅದರ ಪರಿಣಾಮವೇ ನೀತಿಕಾವ್ಯಗಳ ಸೃಷ್ಟಿಗೆ ಹಿನ್ನೆಲೆ.

ಸಂಸ್ಕೃತದಲ್ಲಿ ಸುಭಾಷಿತಗಳು. ಶತಕಗಳು, ತಮಿಳಿನಲ್ಲಿ ಪದನೆಣ್‌ಕೀಟ್‌ಕಣಕ್ಕು (ಹದಿನೆಂಟು ಕಿರುಗ್ರಂಥಗಳು) : ಇವುಗಳಲ್ಲಿ ಅತ್ಯಧಿಕ ಪ್ರಸಿದ್ಧಿಯನ್ನು ಹೊಂದಿದ ತಿರುಕ್ಕುಱಳ್, ತೆಲುಗಿನಲ್ಲಿ ವೇಮನ ವಚನಗಳು ; ಮರಾಠಿಯಲ್ಲಿ ತುಕಾರಾಮನ ಅಭಂಗಗಳು, ಹಿಂದಿಯಲ್ಲಿ ಕಬೀರನ ದೋಹೆಗಳು, ಕನ್ನಡದಲ್ಲಿ ಶರಣರ. ಸರ್ವಜ್ಞನ ವಚನಗಳು ; ದಾಸರ ಹಾಡುಗಳು ; ಕವಿಸೋಮ, ನಿಜಲಿಂಗ, ರತ್ನಾಕರ, ಹರಿಹರನ ಶತಕಗಳು ನೀತಿಕಾವ್ಯಗಳ ಪರಂಪರೆಗೆ ಸೇರುತ್ತವೆ. ಅಲ್ಲದೆ, ಬುದ್ಧನ ಧಮ್ಮಪದಗಳೂ ಈ ಪರಂಪರೆಯ ಪರಿಧಿಯಲ್ಲಿ ಬರುತ್ತವೆ. ಭಾರತೀಯ ವಾಙ್ಮಯದಲ್ಲಿ ನೀತಿಕಾವ್ಯಗಳ ಪರಂಪರೆ ಅವಿಚ್ಛಿನ್ನವಾಗಿ ಹರಿದು ಬಂದಿದೆ. ಈ ಶತಮಾನದಲ್ಲೂ ಅವುಗಳ ರಚನೆ ಮುಂದುವರಿಯುತ್ತಿರುವುದು ಸಂತಸದ ಸಂಗತಿ. ಕನ್ನಡದಲ್ಲಿ 'ಮಂಕುತಿಮ್ಮನ ಕಗ್ಗ' 'ರಂಗ ಬಿನ್ನಪ', 'ಜೋಳುಬಸವನ ಬೊಂತೆ' ಇತ್ಯಾದಿ ಹತ್ತಾರು ಮಹತ್ವದ ಕೃತಿಗಳು ರಚನೆಯಾಗಿವೆ. ಇವುಗಳ ಸಾಲಿನಲ್ಲಿ ನಿಲ್ಲಬಲ್ಲ ಕಾವ್ಯಾನಂದರ ಅಪ್ರಕಟಿತ ಮರುಳಸಿದ್ಧನ ಕಂತೆಯೂ ಒಂದು. ಕಂತೆಯ ಕೆಲವು

ಪದ್ಯಗಳು ಆಗಾಗ ನಾಡಿನ ಪ್ರಸಿದ್ಧ ಪತ್ರಿಕೆಗಳಲ್ಲಿ (ಪ್ರಬುದ್ಧ ಕರ್ನಾಟಕ-ಪರಂಜ್ಯೋತಿ-ಅಮರವಾಣಿ) ಪ್ರಕಟವಾಗಿವೆ. ನೈತಿಕ ಹಿನ್ನೆಲೆಯಲ್ಲಿ ಬದುಕಿನ ಮೌಲ್ಯಗಳನ್ನು ಎತ್ತಿಹಿಡಿಯುವ ಈ ಪದ್ಯಗಳು ಒಂದೊಂದೂ ಹೊಸ ಅರ್ಥ, ಭಾವ, ವಿಚಾರವನ್ನು ತಿಳಿಸುತ್ತ ಬಾಳಿನ ಸಮಸ್ಯೆಗೆ ಉತ್ತರ ನೀಡುತ್ತವೆ. ಪ್ರತಿಮೆ-ರೂಪಕ-ಉಚಿತ ಉಪಮಾನೋಪಮೇಯಗಳಿಂದ, ನಮ್ಮ ಸುತ್ತಮುತ್ತಲಿನ ಪರಿಸರ ದೃಷ್ಟಾಂತಗಳಿಂದ, ಸರಳ-ಸುಂದರ ಶೈಲಿಯಲ್ಲಿ, ವಿಸ್ತಾರ ಜೀವನಾನುಭವ ಆಳವಾದ ಆಧ್ಯಾತ್ಮಿಕ ಅರಿವು ಹಾಗೂ ದರ್ಶನ ದೀಪ್ತಿಯಿಂದ ಹೊರಟ ಬೆಳಕಿನ ಕಿರಣಗಳಂತಿವೆ.

ನಮಗೆ ದೊರೆತ ಕೆಲವು ಪದ್ಯಗಳಲ್ಲಿ ಕಂಡುಬರುವ ನೈತಿಕ ಮೌಲ್ಯಗಳ ಹಿನ್ನೆಲೆ ಜೀವನ ಸೌಂದರ್ಯವನ್ನು ಪರಿಚಯಿಸುವ ಕಿರು ಪ್ರಯತ್ನ ಈ ಲೇಖನ.

ಆಳವಾದ ಅಧ್ಯಯನ, ಗಂಭೀರ ಚಿಂತನೆ, ಉದಾತ್ತಭಾವದ ಹಿನ್ನೆಲೆಯಲ್ಲಿ ಸಾಮರಸ್ಯ ಸಂಸ್ಕೃತಿಯನ್ನು ಸಾರುವುದು ಕಂತೆಯ ವೈಶಿಷ್ಟ್ಯ. ಇಲ್ಲಿ ಸಂಕುಚಿತ ಮನೋಭಾವವಿಲ್ಲ, ಮತೀಯ ಅಂಧತ್ವವಿಲ್ಲ, ವರ್ಗ-ವರ್ಗಗಳ ಕುಬ್ಜ ಕಲ್ಪನೆ ಇಲ್ಲ; ದೇಶ ಕಾಲಾತೀತವಾದ ಮಾನವ ಸಮುದಾಯದ ಬದುಕಿಗೆ ಬೆಳಕನ್ನು ನೀಡುವ ತತ್ವವನ್ನು ನಾವು ಇಲ್ಲಿ ಕಾಣುತ್ತೇವೆ. ಕಂತೆಯಲ್ಲಿ ಕವಿ ತತ್ವ ಸಿದ್ಧಾಂತಗಳ ಶಾಸ್ತ್ರೀಯ ಪ್ರತಿಪಾದನೆ ಮಾಡುವುದಿಲ್ಲ. ಅದು ಇದರ ಧ್ಯೇಯವೂ ಅಲ್ಲ: ಕಾರ್ಯ ಕಾರಣ ಸಂಬಂಧವನ್ನು ನಿರೂಪಿಸುವ ತರ್ಕವೂ ಇಲ್ಲಿಲ್ಲ; ಶ್ರೀ ಸಾಮಾನ್ಯನಿಗೆ ಅರ್ಥವಾಗುವಂತೆ, ನೀತಿಸೂಕ್ಷ್ಮದ ಗಹನ ತತ್ವಗಳನ್ನು, ಅತ್ಯಂತ ಸರಳಭಾಷೆಯಲ್ಲಿ ಕಾವ್ಯಾತ್ಮಕವಾಗಿ ಅರ್ಥೈಸುವ ಪ್ರಯತ್ನವಿದೆ. ನಮ್ಮ ಸಂಸ್ಕೃತಿಯ ಗುಣಮೌಲ್ಯಗಳನ್ನು ಅತ್ಯಂತ ಕಳಕಳಿಯಿಂದ, ಎತ್ತಿ ಹೇಳುತ್ತ ಅವುಗಳ ಹಿನ್ನೆಲೆಯಲ್ಲಿ ನಮ್ಮ ಬದುಕು ಬೆಳಗಬೇಕು, ಜೀವನ ಸೊಗಸಾಗಬೇಕು ಇದೇ—ಜೀವನ ಸೌಂದರ್ಯವೆಂದು ಸಾರುತ್ತಾನೆ.

**ಸ್ಥಾಣುವಿಗೆ ಶರಣು**

ಏನಿತ್ತೊ ಮೊದಲಲ್ಲಿ ಏನಿಹುದೊ ಈಗಲೂ
ಏನುಳಿವುದೋ ಕೊನೆಗೆ ಎಲ್ಲ ಮರೆಯಾಗೆ ।
ಏನೆಂದು ಒರೆಯಲ್ಕೆ ಬರೆಯಲ್ಕೆ ಬಾರದಾ
ಸ್ಥಾಣುವಿಗೆ ಶರಣೆನ್ನೊ ಮರುಳಸಿದ್ಧ ॥

ವಿಶ್ವವನ್ನು ನಿಯಂತ್ರಿಸುವ ಶಕ್ತಿಯನ್ನು ಪರಾತ್ಪರ ಚೈತನ್ಯವನ್ನು ಅರಿಯುವುದು ಅಸಾಧ್ಯ. ಮನಸ್ಸಿಗೂ ನಿಲುಕದ ಆ ವಸ್ತುವಿನ ವರ್ಣನೆಯಲ್ಲಿ ಮಾತು ವ್ಯರ್ಥವಾಗುತ್ತದೆಂದು ಉಪನಿಷತ್ತು, 'ಅತ್ಯತಿಷ್ಠ ದಶಾಂಗುಲ'ವೆಂದು ಪುರುಷಸೂಕ್ತ, 'ಋಜುಪ್ರಾಂತ ದಿಗಂತಾನಾಂ' ಎಂದು ಆಗಮಗಳು ಪರಾತ್ಪರ ಚೈತನ್ಯವನ್ನು ಅಭಿವರ್ಣಿಸಿದವು. ಕನ್ನಡದ ಶರಣರು ಅಗಮ್ಯ-ಅಗೋಚರ ಅಪ್ರಮಾಣವೆಂದರು.

ಈ ಭಾವವನ್ನು ಗ್ರಹಿಸಿದ ಕವಿ ತನ್ನ ಬದುಕಿನಲ್ಲೂ ಇದನ್ನು ಕಂಡು ಮೊದಲು ಏನಿತ್ತೊ, ಈಗ ಏನಿದೆಯೊ, ಕೊನೆಗೆ ಉಳಿಯುವುದು ಏನೋ ಎನ್ನುವ ಸಂದೇಹ ವನ್ನು ವ್ಯಕ್ತಪಡಿಸಿ. ಅದರ ಸ್ವರೂಪವನ್ನು ಕುರಿತು ಒರೆಯಲೂ ಬಾರದು, ಬರೆಯಲೂ ಬಾರದು ಎನ್ನುವ ತೀರ್ಮಾನಕ್ಕೆ ಬಂದು ಆ ಮಹಾಸ್ಥಾಣುರೂಪಿಯಾದ (ಸ್ಥಾಣುರೀಶ ಪಶುಪತಿಃ) ವಿಶ್ವ ಚೈತನ್ಯಕ್ಕೆ ಶರಣು ಹೋಗಲು ತಿಳಿಸುತ್ತಾನೆ.

## ರುಧಿರಕಿಂ ಘನವು ಕೆಳೆಯುನಂಟು

ನೀರಿಗಿಂತ ರಕ್ತದ ಸಂಬಂಧ ಹೆಚ್ಚು ಎನ್ನುವ ಮಾತೊಂದಿದೆ ''**Blood is thicker than water**'' ಇದರ ಅರ್ಥ ಎಲ್ಲ ಸಂಬಂಧಕ್ಕಿಂತ ರಕ್ತ ಸಂಬಂಧ ದೊಡ್ಡದು ಎಂದು. ಈ ಅಭಿಪ್ರಾಯವನ್ನು ಅಲ್ಲಗಳೆಯುತ್ತ ಕವಿ 'ರುಧಿರಕಿಂ ಘನವು ಕೆಳೆಯು ನಂಟು' ಎಂದು ಹೇಳಿ ಸ್ನೇಹ ಸಂಬಂಧ ಶ್ರೇಷ್ಠವಾದುದೆಂದು ಅಭಿಪ್ರಾಯ ಪಡು ತ್ತಾನೆ. ಆತ್ಮೀಯ ಸ್ನೇಹಿತನೊಬ್ಬ ದೊರೆತರೆ 'ಅದು ಚಕ್ರವರ್ತಿಯ ಚದುರಂಗ ಬಲಕ್ಕೆ ಸಮವೆಂದು' ಕನ್ನಡದ ಮತ್ತೊಬ್ಬ ಕವಿ ಕಣವಿಯವರ ಅಭಿಪ್ರಾಯ. ಬದುಕಿ ನಲ್ಲಿ ಸ್ನೇಹದ ಬಂಧ–ಸಂಬಂಧಗಳು ಇಲ್ಲದೆ ಹೋದರೆ ಜೀವನ ಭಾರವೆನಿಸಿ ದುಸ್ಸ ಹನೀಯವಾಗುತ್ತದೆ ಎಂದು ಮಾರ್ಮಿಕವಾಗಿ ಕವಿ ತಿಳಿಸುತ್ತ ಗೆಳೆತನದ ಸಂಬಂಧದ ಮೌಲ್ಯವನ್ನು ಒತ್ತಿ ಹೇಳುತ್ತಾನೆ.

## ಹೊಂದಿ ನಡೆಯುವ ನಿಯಮ

ಗಂಧಕ್ಕೆ ಹೂವಿನಲಿ ಬಂಧ ಸ್ವಚ್ಛಂದಗಳು
ಸಂದಿಹವು ಒಮ್ಮೆಗೇ ನಿನಗು ಕೂಡ ।
ಒಂದಡಿಯು ಬಿಡುಗಡೆಯು ಇನ್ನೊಂದು ಮಂದಿಯೊಸು
ಹೊಂದಿ ನಡೆಯುವ ನಿಯಮ ಮರುಳಸಿದ್ಧ ॥

ಶಬ್ದಾರ್ಥಗಳಂತೆ. ಚಂದ್ರ ಚಂದ್ರಿಕೆಯಂತೆ, ಪುಷ್ಪ ಪರಿಮಳಗಳು ಅವಿನಾಭಾವ ಸಂಬಂಧ ಉಳ್ಳವು. ಒಂದಕ್ಕೊಂದು ಹೊಂದಿಕೊಂಡಿರುವಲ್ಲಿ ಅವುಗಳ ಚಂದವಿದೆ, ಸ್ವಚ್ಛಂದವಿದೆ. ಈ ಅನ್ಯೋನ್ಯಾಶ್ರಯ ವ್ಯಕ್ತಿಗೂ ಸಮಾಜಕ್ಕೂ ಉಂಟು. **(Individual & Society)** ಒಂದು ಮತ್ತೊಂದಕ್ಕೆ ಪೂರಕ. ವ್ಯಷ್ಟಿಯಿಂದ ಸಮಷ್ಟಿ, ಸಮಷ್ಟಿಯಿಂದ ವ್ಯಷ್ಟಿ. ಈ ನಿಯಮವನ್ನು ತಿಳಿದು ವ್ಯಕ್ತಿ ಮಂದಿ (ಸಮಾಜ) ಯೊಂದಿಗೆ ಹೊಂದಿ ನಡೆದರೆ ಅವನ ಬಾಳು ಚಂದವೆಂದು ಕವಿಯ ಆಶಯ. ಇಲ್ಲಿ ವ್ಯಕ್ತಿ ಸಮಾಜದೊಂದಿಗೆ ಹೊಂದಿ ಬಾಳುವ ಮೌಲ್ಯವನ್ನು ಪುಷ್ಪ ಪರಿಮಳಗಳ ದೃಷ್ಟಾಂತದಿಂದ ಸ್ಪಷ್ಟಪಡಿಸುತ್ತಾನೆ.

**ಸಾರ್ಥಕ ಬದುಕು**

ಅರ್ಥ ಉದಿಸುವ ತನಕ ವ್ಯರ್ಥ ಪದಯೋಜನೆಯು
ಸ್ವಾರ್ಥ ಸುಟ್ಟಳಿಯದಿರೆ ಶಾಸ್ತ್ರಾರ್ಥ ವ್ಯರ್ಥ।
ಅರ್ಥವೂ ಕಾಮವೂ ವ್ಯರ್ಥ ಧರ್ಮವನುಳಿದು
ಸಾರ್ಥವಾಗಿಸು ಬದುಕ ಮರುಳಸಿದ್ಧ ॥

ಅರಿವು ಮೂಡದೆ ಹೋದಲ್ಲಿ ಓದು ಬರೆಹ ಸಾರ್ಥಕವಾಗದು. ಅಹಮಿಕೆ, ಸ್ವಾರ್ಥ ಬುದ್ಧಿಯಿಂದ ಪ್ರೇರಿತವಾದ ಶಾಸ್ತ್ರವೂ ವ್ಯರ್ಥವಾಗುತ್ತದೆ. ಬದುಕಿನಲ್ಲಿ ಅರ್ಥ ಕಾಮಗಳೂ ಧಾರ್ಮಿಕ ಪ್ರಜ್ಞೆಯಿಂದಲೇ ಸಾಗಬೇಕು. ಇಲ್ಲವಾದರೆ ಅವೂ ವ್ಯರ್ಥ. ಸ್ವಾರ್ಥದಿಂದ ಬರೆದ ಶಾಸ್ತ್ರ ಶತ್ರುವಾಗುತ್ತದೆ. ಶಾಸ್ತ್ರಿ ಶಸ್ತ್ರವಾಗುತ್ತಾನೆ. ನೀತಿ ಇಲ್ಲಿ ಶಿಕ್ಷಣ. ಶ್ರಮವಿಲ್ಲದ ಸಂಪಾದನೆ, ಅಂತರಾತ್ಮನಿಲ್ಲದ ಉಲ್ಲಾಸಗಳು ವ್ಯರ್ಥ ವೆಂದರು ಗಾಂಧೀಜಿ ಈ ಅರ್ಥದಲ್ಲಿಯೇ. ನೈತಿಕ ಮೌಲ್ಯಗಳಿಂದ ನಮ್ಮ ಬದುಕು ಅರಳಬೇಕು. ಸಾರ್ಥಕವಾಗಬೇಕು ಅದೇ ಜೀವನ ಸಂಸ್ಕೃತಿ ; ಜೀವನ ಸೌಂದರ್ಯ ವೆಂದು ಕವಿ ಸಾರುತ್ತಾನೆ.

**ಲೆಕ್ಕಿಪುದೇ ಆಕೃತಿಯ ಲಕ್ಷಣವ ?**

ಸಕ್ಕರೆಯ ಖಡ್ಗವನು ಮುಕ್ಕದಿರುವವೆ ಇರುವೆ ?
ನೆಕ್ಕುವುದೆ ಪ್ಲಾಸ್ಟಿಕ್ ಪುಷ್ಪಗಳ ದುಂಬಿ ?।
ಲೆಕ್ಕಿಪುದೆ ಈ ಕೃತಿಯ ಆ ಕೃತಿಯ ಲಕ್ಷಣವ ?
ಸಿಕ್ಕರಾಯಿತು ಸವಿಯು ಮರುಳಸಿದ್ಧ ॥

ಖಡ್ಗರೂಪದಲ್ಲಿ ಸಕ್ಕರೆಯನ್ನು ಅಕ್ಕರೆಯಿಂದಲೇ ಮುತ್ತುವುವು. ತೋರಿಕೆಗೆ ಪುಷ್ಪದಂತೆ ಕಂಡರೂ ಪ್ಲಾಸ್ಟಿಕ್ ಪುಷ್ಪಕ್ಕೆ ದುಂಬಿಗಳು ಮುತ್ತುವದಿಲ್ಲ. 'ಗುಣಾಃ ಪೂಜ್ಯಸ್ಥಾನಂ ನಚ ಲಿಂಗಂ-ನಚ ವಯಃ' ಎನ್ನುವ ಸುಭಾಷಿತದಂತೆ ಕೃತಿ ಮುಖ್ಯವೇ ವಿನಃ ಆಕೃತಿ ಯಲ್ಲ. ಗುಣಗ್ರಹಣದೃಷ್ಟಿ ನಮ್ಮದಾಗಬೇಕೆಂದು ಕವಿಯ ಅಭಿಪ್ರಾಯ ಹೃದಯಂಗಮ ವಾಗಿದೆ. 'ಸಕ್ಕರೆಯ ಖಡ್ಗ' ಇರುವೆ 'ಪ್ಲಾಸ್ಟಿಕ್ ಪುಷ್ಪ' ದುಂಬಿಗಳ ದೃಷ್ಟಾಂತದಿಂದ ಭಾವ ಸ್ಪಷ್ಟವಾಗಿ ಮೂಡಿ ಬಂದಿದೆ.

**ಹುರುಳಿಹುದು ಬಾಳಿನಲಿ**

ಹುರುಳಿಹುದೆ ಬಾಳಿನಲಿ ತಿರುಳಿಹುದೆ ಬದುಕಿನಲಿ ?
ಇರುವುದೆಂದರೆ ಇಹುದು ಇಲ್ಲೆನಲು ಇಲ್ಲ।
ಒರತೆಯನು ತೊಡದೆಯೇ ಜರೆಯದಿರು ಹಳ್ಳವನು
ಇರುವಿನಾಳದಿ ತಿರುಳ ಮರುಳಸಿದ್ಧ॥
ತಿಳಿಯ ಬಲ್ಲವರಾರು ತಿಳಿವ ಮೀರಿದ ಹಲವು

ಇಳೆಯು ಒಳಗುಟ್ಟುಗಳ ಜೀವನ ಜಟಿಲಗಳ ?।
ತಿಳಿಯದಿದ್ದರೂ ಕೊನೆಗೆ ತಿಳಿಯೆ ಮಾಡಿದ ತಪದ
ಬಳಲಿಕೆಯೆ ಭಾಗ್ಯವಲ ಮರುಳಸಿದ್ಧ॥

ಜೀವನದಲ್ಲಿ ತಿರುಳಿಹುದೇ ? ಹುರುಳಿಹುದೇ ? ಎಂದು ಯೋಚಿಸುತ್ತಾ ಕುಳಿತರೆ ಪ್ರಯೋಜನವಿಲ್ಲ. ಬದುಕು ಪೂರ್ಣವಾಗಿ ದುಃಖಮಯವೂ ಅಲ್ಲ, ಸುಖಮಯವೂ ಅಲ್ಲ; ಅದು ಎರಡರ ದ್ವಂದ್ವ, 'ಸುಖ ದುಃಖೆ ಸಮೇಕೃತ್ವಾ ಲಾಭಾಲಾಭೌ ಜಯಾ ಜಯೌ' ಎಂದು ಗೀತೆ ಹೇಳಿದರೆ, 'ದ್ರಾಕ್ಷಿರಸವೇನಲ್ಲ ಜೀವನದ ತಿರುಳಾರ್ಗಂ' 'ಎತ್ತೆತ್ತ ನೋಡಲುಂ ಗುಪ್ತ ಭೂತಗಳಯ್ಯ ಮುತ್ತಿ ಮುಸುಕಿಹುದು ಜೀವನ ರಹಸ್ಯವದೊಂದು' ಎಂದು ಕಗ್ಗ ಹೇಳುತ್ತದೆ. ಜೀವನದಲ್ಲಿ 'ತಿರುಳಿದೆ' ಎಂದರೆ ಇದೆ, ಇಲ್ಲವೆಂದರೆ ಇಲ್ಲ. ಇದೆ, ಎಂದು ತಿಳಿದು ಬದುಕುವಷ್ಟು ಕಾಲ ಇಲ್ಲಿ ಬದುಕ ಬೇಕು. ಹೃದಯ ದೌರ್ಬಲ್ಯವನ್ನು ಕಿತ್ತೊತ್ತಿ ಆತ್ಮವಿಶ್ವಾಸದಿಂದ ಬಾಳ ಸಾಗಿಸ ಬೇಕು. ಅಂಥ ಪ್ರಯತ್ನವನ್ನೇ ಮಾಡದೆ ಬದುಕನ್ನೂ ಜರೆದು ನಿರಾಕರಿಸಿದರೆ ಜೀವನದ ಅರ್ಥ ನಮ್ಮ ಅನುಭವಕ್ಕೆ ನಿಲುಕದು. ಜೀವನ ರಹಸ್ಯಮಯವಾದುದು ನಿಜವಾದರೂ, ಅದನ್ನೂ ನಾವು ಅರಿಯಲು ಮಾಡಿದ ಹೋರಾಟ–ಕಷ್ಟಪರಂಪರೆ ಗಳು ತಪವಾಗಿ ಒಂದು ಬಗೆಯ 'ಅನುಭವ' ಪಾಠ ನಮಗಾಗುತ್ತದೆ. ಅದು ಒಂದು ರೀತಿಯ 'ಭಾಗ್ಯ'. 'ಬದುಕನ್ನು' ಜರೆಯದೆ ಧೈರ್ಯದಿಂದ ಅದನ್ನು ಸ್ವೀಕರಿಸಿ ಬಾಳಬೇಕು. ಬದುಕು ಸ್ವೀಕಾರಾರ್ಹವಾದುದೆಂದು ಕವಿಯ ದೃಢವಾದ ಅಭಿ ಪ್ರಾಯ—

## ಸಮನ್ವಯದರ್ಶನ

ಭೋಗವೇ ಗುರಿಯಾಗೆ ಜಡೆಯೆ ನಾಗರಹಾವು
ಯೋಗವೇ ಗುರಿಯಾಗೆ ಚಂಡಿಕೆಯ ಚೇಳು।
ಯೋಗ ಭೋಗದ ಹದವನರಿಯೆ ಹಾರಗಳೆರಡು
ಸಾಗಿಸೀ ಪರಿ ಬದುಕ ಮರುಳಸಿದ್ಧ॥

ಜೀವನದಲ್ಲಿ ಭೋಗವೇ (Luxury) ಗುರಿಯಾದರೆ ಅದು ನಮ್ಮನ್ನು ಸರ್ಪವಾಗಿ ಕಾಡು ತ್ತದೆ. ಆಗ ಬದುಕಿನಲ್ಲಿ ತೃಪ್ತಿ ದೊರೆಯದು. 'ಹವಿಷಾಕೃಷ್ಣ ವರ್ತ್ಮೇನ ಭೂಯೋ ಭೂಯೋಪಿ ಜಾಯತೆ' ಎನ್ನುವ ಗೀತೆಯ ಮಾತಿನಂತೆ. ಅಗ್ನಿಗೆ ಅರ್ಪಿಸಿದ ಆಜ್ಯ ದಂತೆ ಅತೃಪ್ತಿ ತನ್ನ ಹೆಡೆ ಎತ್ತಿ ಸಹಜ್ರ ಜಿಹ್ವೆಗಳನ್ನು ಚಾಚುತ್ತದೆ. 'ಭೋಗೇ ರೋಗಭಯಂ' ಎಂದು ಭರ್ತೃಹರಿ ಹೇಳಿದರೂ 'ರೋಗ' ಬರುವವರೆಗೂ ಭೋಗಕ್ಕೆ ಭಯವಿಲ್ಲ. ಅದು ಸರ್ಪದಂತೆ ಭಯಂಕರವಾದುದು.

ಯೋಗವಾದರೂ, ಇಂದ್ರಿಯಗಳ ದಮನದಿಂದ, ಕಠಿಣವ್ರತಾಚರಣೆಗಳಿಂದ ಮನಸ್ಸಿಗೆ ಅತೃಪ್ತಿಯನ್ನುಂಟುಮಾಡುತ್ತದೆ: ಅಶಾಂತಿಯನ್ನುಂಟು ಮಾಡುತ್ತದೆ:

ಚಂಡಿಕೆಯು ಚೇಳಿನಂತೆ ಕುಟುಕುತ್ತದೆ. ಇಂದ್ರಿಯಗಳ ಪ್ರವೃತ್ತಿಗಳನ್ನು ತೀರ ದಮನ ಮಾಡಿದಲ್ಲಿ ಅವು ಮತ್ತೆಲ್ಲಿಯೋ ಕಟ್ಟು ಬಿಚ್ಚಿಕೊಂಡು ನಮ್ಮನ್ನು ಕಷ್ಟಕ್ಕೆ ಗುರಿ ಮಾಡುತ್ತವೆ. ಜೀವನದ ಪಾವಿತ್ರ್ಯತೆಗೆ ಮಾನವನ ಮೂಲಭೂತ ಪಶು ಪ್ರವೃತ್ತಿಗಳ ಪರಿಷ್ಕಾರ ತೀರ ಅಗತ್ಯ. ಇಂದ್ರಿಯಗಳ ಪ್ರತಿಬಂಧಕತ್ವ ಸದಾ ಅಪಾಯಕಾರಿ. ಒಮ್ಮೊಮ್ಮೆ ಅವುಗಳ ಪ್ರತಿಭಟನೆಯಲ್ಲಿ ಮನುಷ್ಯ ನುಚ್ಚು ನೂರಾಗುತ್ತಾನೆ ; ಹುಚ್ಚ ನಾಗುತ್ತಾನೆ. ಆದ್ದರಿಂದ ಜೀವನದಲ್ಲಿ ಅತಿಭೋಗವು ತ್ಯಾಜ್ಯ; ಅತಿ ಯೋಗವೂ ತ್ಯಾಜ್ಯ. ಇವೆರಡರ ಅತಿಗೂ ಸಿಗದೆ ಜೀವನ ಹಿತಮಿತವಾಗಿ, ಹದವರಿದು ಸಾಗಿದಾಗ ಭೋಗ ಯೋಗಗಳು 'ಹಾರ'ದಂತಾಗಿ ಮನಸ್ಸಿನ ಅಶಾಂತಿಗೆ ಸಾಂತ್ವನ, ಸಮಾಧಾನ ನೀಡುತ್ತವೆ. ಜೀವನ ಸೊಗಸಾಗುತ್ತದೆ. ಇಲ್ಲಿ 'ಭೋಗ'ಕ್ಕೆ ಸರ್ಪದ, ಯೋಗಕ್ಕೆ ಚೇಳಿನ ಉಪಮಾನ ಔಚಿತ್ಯಪೂರ್ಣ ಹಾಗೂ ಅರ್ಥಪೂರ್ಣವಾಗಿದೆ. ಈ ಪದ್ಯದಲ್ಲಿ ಕವಿ ಯೋಗ ಭೋಗಗಳ ಸಮಸ್ಯೆಗೆ ಪರಿಹಾರ ನೀಡುತ್ತ ಸಮನ್ವಯ ವನ್ನು ಸಾಧಿಸಲು ಕರೆ ನೀಡುತ್ತಾನೆ.

### ಜೀವನದ ಯಾಗ

ಯೋಗ ನಂದಿಯು ಮೇಲೆ ಭೋಗ ನಂದಿಯು ಕೆಳಗೆ
ಹೇಗಿಹುದು ನಂದಿಯಲಿ ಜೀವನಾದರ್ಶ ?
ಭೋಗ ಮಾಗಲಿ ಯೋಗ ಸಾನಿಧ್ಯವನು ಪಡೆದು
ಯಾಗವಿದು ಜೀವನದ ಮರುಳಸಿದ್ಧ ॥

ನಂದಿಯಲ್ಲಿ ಯೋಗನಂದೀಶ್ವರನ ಮೂರ್ತಿ ಶಿಲ್ಪ ಮೇಲೂ, ಭೋಗ ನಂದಿಯ ಮೂರ್ತಿಶಿಲ್ಪ ಕೆಳಗೂ ಇರುವುದನ್ನು ಕಂಡ ಕವಿ ಈ ಲೋಕೋತ್ತರ ದೃಷ್ಟಾಂತದಿಂದ ಭೋಗ ಅನುಭವಿಸುತ್ತಲೇ ಯೋಗದತ್ತ ನಮ್ಮ ಜೀವನ ಸಾಗಬೇಕು ಅದೇ ಜೀವನದ 'ಯಾಗ'ವೆಂದು ತಿಳಿಸುತ್ತಾನೆ. 'ಉಂಡುಪವಾಸಿ ಬಳಸಿ ಬ್ರಹ್ಮಚಾರಿ, ಎದೆಯ ಮೇಲಿರ್ದ ಯೋಗಿಗಳುಂಟು' ಎನ್ನುವ ರತ್ನಾಕರವರ್ಣಿಯ ಮಾತುಗಳು ಇದೇ ಅಭಿಪ್ರಾಯವನ್ನು ಅನುಮೋದಿಸುತ್ತವೆ. ಯೋಗ ಭೋಗಗಳ ಸಮನ್ವಯ ಜೀವನ ದರ್ಶನದಿಂದ ಜೀವನ ಪರಿಶುದ್ಧವಾಗುತ್ತದೆ, ಸಮ್ಯಗ್ಜೀವನದಲ್ಲಿ ತ್ಯಾಗ ಭೋಗಗಳೆರಡಕ್ಕೂ ಸ್ಥಾನವಿದೆ ಅವು ಪರಸ್ಪರ ಪೂರಕಗಳು ; ಮಾರಕಗಳಲ್ಲ. ಪ್ರಕೃತಿ ಯಲ್ಲಿ–ತ್ಯಾಗ ಭೋಗಗಳ ನೃತ್ಯವಿಲಾಸವನ್ನೇ ಸತ್ಯ ಸೌಂದರ್ಯವೆಂದು ಕರೆದರು. ಇದರಲ್ಲಿ ವ್ಯಕ್ತಿಗೆ ಭೋಜ್ಯವೆಷ್ಟು, ತ್ಯಾಜ್ಯವೆಷ್ಟು ಎನ್ನುವ ವಿವೇಕ ಮಾತ್ರ ಬೇಕು. ಅದು ನಮ್ಮ ಬದುಕಿಗೆ ಪ್ರಗತಿಯ ಸೋಪಾನವಾಗಬಲ್ಲದು. ಗೃಹಸ್ಥ ಜೀವನದಿಂದ ವ್ಯಕ್ತಿಗೆ ಒಂದು ಬಗೆಯ ಸಂಸ್ಕಾರವಾಗುತ್ತದೆ. ಭೋಗ ಮಾಗಿ ಆತ್ಮ ವಿಸ್ತಾರ ವಾಗುವ ಸಂಭವ ಉಂಟು. ಅದೇ ಜೀವನದ ಸೌಂದರ್ಯ.

ಯೋಗ ರತೋವಾ ಭೋಗ ರತೋವಾ ಸಂಗರತೋವಾ ಸಂಗವಿಹೀನಃ
ಯಸ್ಯ ಬ್ರಹ್ಮಣಿ ರಮತೇ ಚಿತ್ತಂ ನಂದಿತಿ ನಂದತಿ ನಂದತ್ಯೇವ.

ಇದೊಂದು ಪ್ರಾಚೀನ ಶ್ಲೋಕ. ಇದರ ಸಾರಾಂಶವಿಷ್ಟು : ಯೋಗದಲ್ಲಾಗಲೀ, ಭೋಗದಲ್ಲಾಗಲೀ ಮನಸ್ಸು ಯಾವ ಚಿಂತನೆಯಲ್ಲಿ ನಿರತವಾಗಿದೆ ಎನ್ನುವುದೇ ಮುಖ್ಯ. ಇವುಗಳಲ್ಲೂ ಸದಾಚರಣೆ ಸದ್ವೃತ್ತಿ ದೈವಚಿಂತನೆಗಳಿಂದ ಭೋಗವೂ ಯೋಗಕ್ಕೆ ಸಮವಾಗುತ್ತದೆ. ಕಾಮ ನಿಗ್ರಹ ವ್ಯರ್ಥ ಪ್ರಯತ್ನ. ಬಹುಪಾಲು ಜನರಿಗೆ ವೈರಾಗ್ಯ ಬಂದುದು ಜೀವನದ ದುಗುಡು ದುಮ್ಮಾನ ಕಷ್ಟಪರಂಪರೆಗಳಿಂದ, ಅಭಾವದಿಂದ ಕ್ಷಣಿಕವಾಗಿ ಬಂದುದು, ಸಹಜ ವೈರಾಗ್ಯ ಅತಿ ವಿರಳ. ಭೋಗ ಜೀವನಕ್ಕೂ ಒಂದು ನೀತಿನಿಯಮದ ಆತ್ಮ ಸಂಯಮನ ಬೇಕು. ಇಲ್ಲವಾದರೆ ಅದರ ಪರಿಣಾಮ ಘೋರ. ಈ ಮಾತನ್ನು ಅನುಮೋದಿಸುತ್ತಾ ವಿಶ್ವವಿಖ್ಯಾತ ಇತಿಹಾಸದರ್ಶನಕಾರ Will Durant ತಮ್ಮ ಇತಿಹಾಸದ ಪಾಠಗಳು (Lessons of History) ಗಂಥದಲ್ಲಿ ಈ ರೀತಿ ಹೇಳುತ್ತಾರೆ.

''A youth boiling with harmones will wonder why he should not give full freedom to his sexual desires; and if he is unchecked by custom, morals, or laws he may ruin his life before he matures sufficiently to understand that sex is a liver of fire that must be banked and cooled by a hundred restraints if he is not to cousume in chaos both the individual and the group''

ನಮ್ಮ ಬದುಕು ಭೋಗ ಯೋಗಗಳ ಸಾಮರಸ್ಯದಿಂದ 'ಯಾಗ' (ಪೂಜೆ) ವಾಗ ಬೇಕೆಂದು ಕವಿಯ ಆಶಯ. ಇಲ್ಲಿ ಬಳಸುವ ಚಿತ್ರ ಉಪಮೆ ಪ್ರತಿಮೆಗಳಿಂದ ಸರಳ ಹಾಗೂ ಸಾಕ್ಷ್ಯ ದೃಷ್ಟಾಂತದಿಂದ ವಿಷಯ ಸ್ಫಟಿಕಸ್ಪಷ್ಟವಾಗುತ್ತದೆ. ಜೀವನ ಸೊಬಗನ್ನು (ಸೌಂದರ್ಯ) ನಮ್ಮ ಕಲ್ಪನೆಯ ಪರಿಧಿಗೆ ತಂದುಕೊಡುತ್ತದೆ.

## ಸಾತ್ವಿಕ ಬದುಕು

ಚಾಮುಂಡಿ ದರ್ಶನಕೆ ಮೊದಲು ಮಹಿಷನ ನೋಟ
ಪಿಯೂಷಕಿಂ ಮೊದಲು ಹಾಲಾಹಲ।
ತಾಮಸವು ರಾಜಸವು ಗೊಬ್ಬರವು ಸಾತ್ವಿಕಕೆ
ಈ ಮರ್ಮವನು ಅರಿಯೋ ಮರುಳಸಿದ್ಧ॥

ಇಲ್ಲಿ ಕವಿ ಚಾಮುಂಡಿ ಬೆಟ್ಟದ ದೃಷ್ಟಾಂತದೊಂದಿಗೆ ಮನುಷ್ಯನು ಸಾತ್ವಿಕನಾಗಲು ಸಂದೇಶ ನೀಡುತ್ತಾನೆ. ಯಾತ್ರಿಕನಿಗೆ ಚಾಮುಂಡಿ ಬೆಟ್ಟದಲ್ಲಿ ಮೊದಲು ಮಹಿಷಾಸುರನ ದರ್ಶನ ನಂತರ ಚಾಮುಂಡಿಯು ಸಂದರ್ಶನವಾಗುತ್ತದೆ. ಸಮುದ್ರ ಮಥನದಲ್ಲೂ ಮೊದಲು ಹಾಲಾಹಲದ ಸೃಷ್ಟಿ, ಅನಂತರ ಅಮೃತ. ಇಲ್ಲಿ ಶಾಕ್ತ ಸಾಹಿತ್ಯದ

ಪ್ರಕಾರ ದೇವಿ ಪರಾಶಕ್ತಿ ದೈವೀಗುಣಗಳ ಸಂಕೇತ. ಮಹಿಷ ಅಸುರ, ತಾಮಸಗುಣದ ಪ್ರತೀಕವಾಗುತ್ತದೆ. 'ವಿಷವು' ತಾಮಸದ, 'ಅಮೃತ'ವು ಸಾತ್ವಿಕ ಗುಣಗಳ ಸಂಕೇತಗಳು. ಮನುಷ್ಯ ಸತ್ವ, ರಜ, ತಮೋಗುಣಗಳ ಮುಪ್ಪುರಿಯಾಗಿದ್ದಾನೆ. ಆದರೂ ತಮೋಗುಣವನ್ನು ಮೆಟ್ಟಿ ಮೇಲೇಳಬೇಕು. ಸಾತ್ವಿಕ ಗುಣ ಸಂಪಾದನೆಯಾಗಬೇಕು. ಸಾತ್ವಿಕ ಗುಣವೆಂದರೆ ಸದ್ಗುಣಗಳು. ಈ ಮೂಲಕ ಸತ್ಕ್ರಿಯೆ. ಇಂಥ ಕ್ರಿಯೆಗಳಿಂದ ಜೀವನ ಸುಂದರವಾಗಬೇಕು. ಸಾತ್ವಿಕ ಗುಣದ 'ಸಸಿ' ಬೆಳೆಯಬೇಕಾದರೂ ತಾಮಸದ ಗೊಬ್ಬರಬೇಕು. ಸಾತ್ವಿಕ ಗುಣಕ್ಕೆ ತಾಮಸ ಪೋಷಕ ಮಾತ್ರವಾಗಬೇಕು. ಅಷ್ಟೆ ಅಲ್ಲ, ಕೊನೆಗೆ ಅದರ ಅಳಿವಾಗಬೇಕು. ಮನಷ್ಯನಲ್ಲಿ ಸತ್ವಗುಣವೇ ಪ್ರಧಾನವಾಗಿ ಬೆಳೆದಲ್ಲಿ ಮನುಷ್ಯತ್ವಕ್ಕೂ ಬೆಲೆ ಬರುತ್ತದೆ ಅವಗುಣಗಳನ್ನು ಅಳಿಯುತ್ತಾ, ಸದ್ಗುಣಗಳನ್ನು ಸಂಪಾದಿಸುತ್ತಾ ಸಾತ್ವಿಕವಾಗಬೇಕು ಮನುಷ್ಯ. ಈ 'ಮರ್ಮ'ವನ್ನು ತಿಳಿದು ಬಾಳಬೇಕೆಂದು ಕವಿಯ ಆಶಯ. ಇಲ್ಲಿ ಚಾಮುಂಡಿ ಬೆಟ್ಟದ ದೃಷ್ಟಾಂತದಿಂದ 'ಸತ್ವ-ತಮೋ'ಗುಣಗಳ ವಿಷಯ 'ಥಟ್ಟನೆ' ಮನಸ್ಸಿಗೆ ಹೊಳೆಯದಿರದು. ವಿಷಯ ಸ್ಪಷ್ಟಗಾಗಿ 'ಮಹಿಷ-ದೇವಿ' 'ವಿಷ-ಅಮೃತ'ಗಳ ಉಪಮಾನ ತುಂಬಾ ಔಚಿತ್ಯಪೂರ್ಣವಾಗಿದೆ.

### ಪಾತಕಕೆ ಬಹುಮತ

ಸೇತುವೆಯ ಸ್ವರ್ಗಕ್ಕೆ ಕಟ್ಟೆನು ಪಾರ್ಕಲಾಮ್  
ಸೀತೆಯನು ಕದಿ ಎನಲು 'ಹೂಂ' ಎಂದವಸುರ।  
ನೀತಿಗಿಂ ದುರ್ನೀತಿ ಯಾತರಿಂ ಮೋಹಕವೋ  
ಪಾತಕಕೆ ಬಹುಮತವು ಮರುಳಸಿದ್ಧ॥

ಎಂದೆಂದಿಗೂ ಲೋಕಸ್ವಭಾವ ಹೀಗೆಯೆ, ಅನೀತಿಗೆ ಆಕರ್ಷಣೆ ಹೆಚ್ಚು. ಕಾರಣ ಸ್ಪಷ್ಟವಾಗಿದೆ. ನೀತಿ ಮತಗಳ ಪಾಲನೆಯು 'ಋಜುಮಾರ್ಗ', 'ಅಸಿಧಾರಾವ್ರತ'ದಂತೆ ಕಠಿಣವಾದುದು ಅನೀತಿಯುತವಾದ ವಾಮಮಾರ್ಗದ ಅನುಸರಣೆ, ಅನುಕರಣೆ ಸರಳ ಹಾಗೂ ಸುಲಭ. ಹೀಗಾಗಿ ಅಲ್ಪಮತ, ಅತ್ಯಲ್ಪಮತ ನೀತಿಮಾರ್ಗದಲ್ಲಿ ಕ್ರಮಿಸಿದರೆ, ಬಹುಮತ, ಪ್ರಚಂಡ ಬಹುಮತ ಅನೀತಿ ಪಕ್ಷವನ್ನೇ ವಹಿಸಿ ಸಾಗುವದು ಎಲ್ಲರಿಗೂ ತಿಳಿದ ಸಂಗತಿ. ರಾಮಾಯಣದ ರಾಮನ ದೃಷ್ಟಾಂತದಿಂದ, ಮನುಷ್ಯ ಸ್ವಾಭಾವದ ಸಹಜ ಚಿತ್ರವನ್ನು ನಮ್ಮ ಮುಂದೆ ತಂದಿರಿಸುತ್ತಾ 'ಪಾತಕಕೆ ಬಹುಮತ'ವೆಂದು ತನ್ನ ಅಭಿಮತವನ್ನು ತಿಳಿಸುತ್ತಾನೆ. 'ತತ್ವ'ವೊಂದನ್ನು ಸುಲಭವಾಗಿ ಅರ್ಥೈಸಲು ಕವಿ ಬಳಸುವ ಪ್ರತಿಮೆ ಸಮುಚಿತ ಹಾಗೂ ಸಮರ್ಪಕವಾಗಿದೆ.

### ಸತ್ಯದ-ಹಿರಿಮೆ

ಇರುಳು ಕತ್ತಲೆ ಇನನೆ ಇಲ್ಲೆಂದು ವಾದಿಸಲು

ತರಣಿ ಹರಣವ ತೊರೆದು ತೋರನೇ ಮತ್ತೆ ?।
ಮರುಳರಿಗೆ ಅಧಿಕಾರ ಬಂದಾಗ ನಿಂದಿಸಲು
ಮರಣವೇ ಸತ್ಯಕ್ಕೆ ಮರುಳಸಿದ್ಧ ॥
ಸುಳ್ಳಿಗೂ ಸಾವಿಲ್ಲ ಸತ್ಯಕ್ಕೂ ಸಾವಿಲ್ಲ
ಸುಳ್ಳು ಬದುಕಿದೆ ನಿಜದ ಸೋಗ ಹಾಕಿ ।
ಒಳ್ಳಿದರೆ ಆಳಿದರು, ಅವರಂತೆಯೆ ನಟಿಸಿ
ಕಳ್ಳರೂ ಆಳುವರು ಮರುಳಸಿದ್ಧ ॥
ಸುಳ್ಳಿಗಿದೆ ಸುಳ್ಳುಸುಖ ಸತ್ಯಕ್ಕೆ ಸತ್ಯಸುಖ
ಕಳ್ಳನೇ ಒಲಿದವರು ಒಲಿಯುವರೆ ಹಾಲ ?
ಎಳ್ಳನಿತು ಸುಖಕಾಗಿ ಸುಳ್ಳು ತಬ್ಬುತ ಅದರ
ಬಳ್ಳಿಯಲಿ ಸಾಯುವರೆ ಮರುಳಸಿದ್ಧ ॥

ಸತ್ಯ ನಮ್ಮ ಬದುಕಿನ 'ಜೀವನ ಮೌಲ್ಯ'. ಅದರ ಅಪಮೌಲ್ಯವಾಗುತ್ತದೆ ಎಂದು ಕವಿ ಮರುಕ ಪಡುತ್ತಾ ಸತ್ಯಕ್ಕೆ ಸಾವಿದೆಯೇ ಎಂದು ನಮ್ಮನ್ನು ಪ್ರಶ್ನಿಸುತ್ತಾನೆ. 'ಸತ್ಯಂ ಭೂಯಾತ್' 'ಹಿರಣ್ಮಯೇನ ಪಾತ್ರೇಣ ಸತ್ಯಾಸ್ಯಾಪಿಮುಖಂ' ಈ ಉಪನಿಷತ್ತಿನ ವಾಕ್ಯಗಳು ಸತ್ಯದ ಮೌಲ್ಯವನ್ನು ಎತ್ತಿಸಾರುತ್ತವೆ. 'ಹರನೆಂಬುದೇ ಸತ್ಯ ಸತ್ಯವೆಂಬುದೇ ಹರನು' ಎಂದು ರಾಘವಾಂಕ ಹೇಳುತ್ತಾನೆ. 'Truth is God' ಎನ್ನುವ ಆಂಗ್ಲ ವಾಕ್ಯವೂ ಇದೆ. ಆದರೆ ವಾಸ್ತವಿಕ ಬದುಕಿನಲ್ಲಿ ಸತ್ಯದ ರಸವನ್ನೇ ಹೆಚ್ಚು ಕಾಣುತ್ತೇವೆ. ಸತ್ಯವನ್ನು ಸಕಾಲಿಕ, ಅಕಾಲಿಕ, ಸಾರ್ವಕಾಲಿಕವೆಂದು ವಿಂಗಡಿಸುವುದೂ ಉಂಟು. 'ಸತ್ಯ'ವೊಂದು ಗುಣಮೌಲ್ಯ: ಅದು ವಿಶಿಷ್ಟ ಸನ್ನಿವೇಶ ಸಂದರ್ಭಗಳ ಹಿನ್ನೆಲೆಯಲ್ಲಿ ಹೊಸ ಅರ್ಥವನ್ನೂ ಪಡೆಯುವುದುಂಟು. ಸರಳವಾದ ಅರ್ಥದಲ್ಲಿ ಸತ್ಯವೆಂದರೆ 'ಋಜುಮಾರ್ಗ', ಒಳ್ಳೆಯ ನಡುವಳಿಕೆ' ಎಂದೂ ಅರ್ಥ. ಸತ್ಯದಿಂದಲೂ ಲೌಕಿಕ ಸುಖ ಉಂಟು: ಸುಳ್ಳಿನಿಂದಲೂ ಸುಖ ಉಂಟು ಎಂದು ಹೇಳುತ್ತಾನೆ. ಆದರೂ ಸತ್ಯಕ್ಕೂ ಲೌಕಿಕ ಪ್ರಯೋಜನಗಳಿಗೂ ಗಂಟುಹಾಕಬಾರದು. ಬಾಳಿನ ಶ್ರೇಯಸ್ಸಿಗೆ ಸತ್ಯವೇ ಸತ್ವಪೂರ್ಣವಾದುದು. ಸತ್ಯ ಧೀರರು ಚಲಿಸುವ ದಾರಿ, ಹೇಡಿಗಳಿಗೆ ಅಲ್ಲಿ ಪ್ರವೇಶವಿಲ್ಲ. ಸತ್ಯ ಕಟುವಾದದ್ದು ಅದನ್ನು ಯಾರು ಹೇಳುತ್ತಾರೆ? 'ಹುಚ್ಚ'–'ಮಗು' ಮತ್ತು 'ಶೂರರು' ಮಾತ್ರ ಹೇಳುತ್ತಾರೆ ಎನ್ನುವ ಗಾದೆಯೊಂದುಂಟು. ಸತ್ಯ ನಗ್ನವಾದುದು, ವಾಸ್ತವಿಕವಾದುದು, ಭಯವಾದುದು ಹೌದು. ಇದನ್ನು ನುಡಿಯಲು ಅನೇಕರು ಅಂಜುತ್ತಾರೆ. ಸುಳ್ಳಿನೊಂದಿಗೆ ಸಮಾಧಾನ ಮಾಡಿಕೊಂಡು ಲೌಕಿಕ ಸುಖಗಳನ್ನು ಪಡೆಯುತ್ತಾ ಪ್ರಚ್ಛನ್ನ ಸತ್ಯವಂತರಂತೆ ನಟಿಸುವವರೇ ಹೆಚ್ಚು. ಕತ್ತಲೆಯಲ್ಲಿ 'ರವಿ' ಇಲ್ಲವೆಂದು ವಾದಿಸಿ ಸಾಧಿಸಿದರೂ, 'ಈ ಸುಳ್ಳು' ಪ್ರತ್ಯಕ್ಷ ರವಿದರ್ಶನವಾದಾಗ ಅವರ ವಾದ ಬಿದ್ದುಹೋಗುತ್ತದೆ. ಅಲ್ಪಫಲ–ಕೀಳು ಅಭಿರುಚಿಗಳಿಗಾಗಿ, ತಾತ್ಕಾಲಿಕ ಪ್ರಯೋಜನಕ್ಕಾಗಿ

ಸುಳ್ಳನ್ನೇ ತಬ್ಬಿಕೊಂಡು ದುರುಳರೂ ಸತ್ಯವಂತರಂತೆ ಕಾಣುತ್ತಾರೆ ಎನ್ನುವ ವಾಸ್ತವಿಕ ಸಂಗತಿಯನ್ನು ಕವಿ ಸ್ಪಷ್ಟಪಡಿಸುತ್ತಾನೆ. ಕವಿಯ ವಾಣಿ ಸಮಕಾಲೀನ ವಾಸ್ತವಿಕ ಬದುಕನ್ನು ಸ್ಪಂದಿಸಿ ವಸ್ತುಸ್ಥಿತಿಯನ್ನು ಎತ್ತಿ ಸಾರುತ್ತಿದೆ. ಸತ್ಯ ಪಥದತ್ತ ನಮ್ಮ ಬಾಳು ಸಾಗಬೇಕೆಂಬ ಸಂದೇಶವಿಲ್ಲಿದೆ.

### ಸಾವಿಗೂ ಶರಣೆನ್ನು

ಸಾವು ಹಗೆಯೆಂದವನ ಜೀವನವು ವ್ಯಥೆಯ ಕಥೆ
ಸಾವು ಸಖನೆಂದವನ ಬದುಕು ಬಂಗಾರ ;
ಜೀವ ಸಾವಿನ ಕೊಡುಗೆ, ಸಾವು ಜೀವನದುಡಿಗೆ ।
ಸಾವಿಗೂ ಶರಣೆನ್ನೊ ಮರುಳಸಿದ್ಧ ॥

ಜೀವನವೊಂದು ಅನಂತವಾಹಿನಿ. ಜನನ-ಮರಣಗಳು ಒಂದು ಅವಸ್ಥೆ. 'ಜೀವ' ಅಮರವಾದುದೆಂದು ಭಾರತೀಯರ ನಂಬಿಕೆ. 'ವಾಸಾಂಸಿ ಜೀರ್ಣಾನಿ ಯಥಾ ವಿಹಾಯ'–ಹರಿದ ಬಟ್ಟೆಯನ್ನು ಕಳಚಿ ಹೊಸಬಟ್ಟೆಯನ್ನು ಧರಿಸುವಂತೆ–ಜೀವಾತ್ಮನಿಗೆ ಈ ದೇಹ ಎಂಬುದು ಗೀತೆಯ ಅಭಿಪ್ರಾಯ. ರವಿಗೆ ಉದಯಾಸ್ತಗಳು ಅವಸ್ಥೆಯಾದಂತೆ ಜೀವಿಗೂ ಜನನ, ಮರಣಗಳು ಅವಸ್ಥೆ ಮಾತ್ರ. ಜೀವಿಗೆ ಇವುಗಳ ಸಂಬಂಧವಿಲ್ಲವೆನ್ನುವುದು ಭಾರತೀಯ ತತ್ವಶಾಸ್ತ್ರದ ಅಭಿಪ್ರಾಯ. ಈ ಮಹಾ ಸತ್ಯವನ್ನು ಅರಿತ ದೊಡ್ಡವರು 'ಹುಟ್ಟು' 'ಸಾವು'ಗಳು ಜೀವಿಗೆ ನಿಶ್ಚಿತವಾದ ಅವಸ್ಥೆಗಳೆನ್ನುವ ತೀರ್ಮಾನಕ್ಕೆ ಬಂದು 'ಜಾತಸ್ಯ ಹಿ ಧ್ರುವೋ ಮೃತ್ಯುಃ' ಎಂದರು. "When call comes we must packed off" ಎಂದರು ವಿಶ್ವಕವಿ ರವೀಂದ್ರರು. 'ಮರಣವೇ ಮಹಾನವಮಿ' ಎಂದರು ಶರಣರು. ಜನನವನ್ನು ಸ್ವಾಗತಿಸುವಂತೆ ಮರಣವನ್ನೂ ಸದಾ ಹರ್ಷದಿಂದ ಸ್ವಾಗತಿಸಬೇಕು. ಹುಟ್ಟು ಸಾವಿಗೆ ಮೂಲ : ಸಾವು ಹುಟ್ಟಿಗೆ ಕಾರಣ. ಎಲ್ಲ ಅಭಿಪ್ರಾಯಗಳನ್ನೂ ಗ್ರಹಿಸಿ ಸಮರ್ಥನೆ ಮಾಡುತ್ತಾ ಕವಿ ಸಾವನ್ನು ಗೆಳೆಯನಂತೆ ಪ್ರೀತಿಸಬೇಕು. ಇದನ್ನು 'ಹಗೆ' ಎಂದು ಭಾವಿಸುವವನ ಬಾಳು ಹದಗೆಡುತ್ತದೆ ಎನ್ನುವ ಎಚ್ಚರಿಕೆಯನ್ನು ಕೊಡುತ್ತಾನೆ. ಜೀವನದ ವೃಕ್ಷಕ್ಕೆ ಸಾವು ಗೊಬ್ಬರ. ಜೀವನಕ್ಕಾಗಿಯೇ ಸಾವು. ಈ ಅರ್ಥವನ್ನು ತಿಳಿದು 'ಸಾವಿಗೂ ಶರಣೆನ್ನ'ಬೇಕೆಂದು ತಿಳಿಸುತ್ತಾನೆ. ಈ ಲೋಕದಲ್ಲಿ ಎಷ್ಟು ಕಾಲ ಬದುಕಿದೆವು — ಎನ್ನುವದಕ್ಕಿಂತ ಹೇಗೆ ಬದುಕಿದೆವು ? ಎನ್ನುವ ಪ್ರಶ್ನೆ ಮಹತ್ವದ್ದಾಗುತ್ತದೆ. ಸಾರ್ಥಕ ಬದುಕು ಮರಣವನ್ನು ಸಂತೋಷದಿಂದ ಸ್ವಾಗತಿಸುತ್ತದೆ. ಹೇಡಿಗಳು, ಸ್ವಾರ್ಥಿಗಳು ಮರಣಕ್ಕೆ ಹೆದರುತ್ತಾರೆ. ಆದ್ಧರಿಂದ ಈ ಬದುಕನ್ನು ಅಪ್ಪಿಕೊಂಡು, ಒಪ್ಪಿಕೊಂಡು 'ಸಾವಿಗೆ ಶರಣೆನ್ನಬೇಕು'. ಅಂದರೆ ಸಾವು ಬಂದಾಗ ಸಿದ್ಧರಾಗಬೇಕು ; ಅನಿವಾರ್ಯವಾಗಿ ಅಲ್ಲ ; ಸಹಜವಾಗಿ, ಸಂತೋಷವಾಗಿ ಎಂದು ಕವಿಯ ಆಶಯ.

**ತಾಳುವುದು ಕೆಲಕಾಲ**

ಬಾಳ ಬಿರುಗಾಳಿಗಳು ಧೂಳಿಯೆಬ್ಬಿಸಬಹುದು
ಕೀಳುವವೆ ಬಾಳನೇ ಮೂಲ ಸಹಿತ ?
ತಾಳುವುದು ಕೆಲಕಾಲ ತಾಳಿದರೆ ಆದೀತು
ಕಾಳಕೂಟವೆ ಅಮೃತ ಮರುಳಸಿದ್ಧ ॥

ಜೀವನದಲ್ಲಿ ಘರ್ಷಣೆ ಅನಿವಾರ್ಯ. ಬದುಕು ಮಾಗಿ ಅನುಭವ ಪಕ್ವವಾಗಬೇಕಾದರೆ ಇದು ಅವಶ್ಯ ಕೂಡಾ. ಬದುಕಿನಲ್ಲಿ ಹಲವು ಹತ್ತು ಸಮಸ್ಯೆಗಳು ಬಿರುಗಾಳಿಯಂತೆ ಧೂಳ ಎಬ್ಬಿಸಿ ತಾತ್ಕಾಲಿಕವಾಗಿ ತೊಂದರೆಯನ್ನುಂಟುಮಾಡಬಹುದು. ಅಂತಹ ಕಾಲದಲ್ಲೂ 'ತಾಳ'ಬೇಕೆಂದು ಕವಿ ಸಮಾಧಾನ ಹೇಳುತ್ತಾ, ತಾಳ್ಮೆಯಿಂದ ಕಾಲಾನಂತರ ದಲ್ಲಾದರೂ ಕಷ್ಟ ಪರಂಪರೆಗಳು ಪರಿಹಾರವಾಗಿ ಸಂದರ್ಭ-ಸನ್ನಿವೇಶಗಳು ತಿಳಿಯಾಗಿ ಕಾಲಕೂಟದಂತಿರುವ ದುರ್ಭರ ಪ್ರಸಂಗಗಳೂ ಕಳೆದು ಅಮೃತಫಲನೀಡುವ ಕಾಲ (ರಸ ನಿಮಿಷಗಳ ಕಾಲ) ಬರುತ್ತದೆಂದು ಆಶ್ವಾಸನೆ ನೀಡುತ್ತಾನೆ. ತಾಳ್ಮೆಯಿಂದಲೇ ನಮ್ಮ ಬದುಕು ಸಾಗಬೇಕೆನ್ನುವ ಕಳಕಳಿಯ ವಾಣಿ ಇಲ್ಲಿದೆ.

**ಉಪಯೋಗದ ಔಚಿತ್ಯ**

ಉಪಯೋಗದೊರೆಗಲ್ಲ ಉಪಯೋಗಿಸಲು ಬಹುದೆ
ವಿಪರೀತ ಬುದ್ಧಿಯಿಂದೆಲ್ಲೆಲ್ಲಿಯೂ ?
ಅಪರ ವಯದಪ್ಪನನು ಅಪ್ಪನನು ತ್ಯಜಿಸುವುದ
ಉಪಯೋಗವಿಲ್ಲೆಂದು ಮರುಳಸಿದ್ಧ ॥

ಎಲ್ಲ ವಸ್ತುಗಳ 'ಉಪಯೋಗ' ಎಲ್ಲ ಕಾಲದಲ್ಲೂ ಇರುವುದಿಲ್ಲ. ಯಾವಾಗಲೂ ಇರುವುದಿಲ್ಲ. 'ಚಿನ್ನ' ಪರೀಕ್ಷೆಯ ಸಂದರ್ಭದಲ್ಲಿ ಮಾತ್ರ 'ಒರೆಗಲ್ಲಿನ' ಉಪಯೋಗ. ಉಪಯೋಗ (usefull) ಅನುಪಯೋಗ (useless) ವೆಂದು ವಸ್ತುಗಳನ್ನು ವಿಂಗಡಿಸಲು ಬರುವುದಿಲ್ಲ. ಇವು ಬಳಸುವವನ ದೃಷ್ಟಿಕೋನ, ಸಂದರ್ಭಗಳನ್ನು ಅವಲಂಬಿಸಿರುತ್ತವೆ. ಬಳಸುವವನ ಯೋಗ್ಯತೆ, ಬಳಕೆಯ ಸಂದರ್ಭಗಳಿಂದ ವಸ್ತುಗಳ ಮೌಲ್ಯ ನಿರ್ಣಯವಾಗುತ್ತದೆ. ಇದು ವ್ಯವಹಾರ ಹಾಗೂ ಭೌತಿಕದೃಷ್ಟಿ. ಅತಿ ಬುದ್ಧಿಯಿಂದ ಇದನ್ನು ಎಲ್ಲದಕ್ಕೂ ಅನ್ವಯಿಸುವುದು ಅಪಾಯಕರವೆಂದು ಕವಿ ಹೇಳುತ್ತಾನೆ. 'ಉಪಯೋಗ'ವಿಲ್ಲವೆಂದು ಅಪರವಯಸ್ಸಿನ ತಂದೆ-ತಾಯಿಗಳನ್ನು ತಳ್ಳಿಹಾಕಲು ಬರುತ್ತದೆಯೇ ? ಇದನ್ನು ಮಾನವೀಯ ದೃಷ್ಟಿಕೋನದಿಂದಲೇ ನೋಡಬೇಕೆನ್ನುತ್ತಾನೆ ಕವಿ. ಕೇವಲ ಬುದ್ಧಿ ವ್ಯವಹಾರದಿಂದ ಪ್ರಯೋಜನವಿಲ್ಲ : ಮಾನವೀಯ ದೃಷ್ಟಿಕೋನವೂ ಬೇಕು. 'ಉತ್ತಮಾಂಗವನು ಉರುಸ್ಥಲದಲ್ಲಿಟ್ಟು ನೋಡಾ' ಎನ್ನುತ್ತಾನೆ–ಪ್ರಭುದೇವ ಇಂಥ ವಿಪರೀತ ಬುದ್ಧಿಯವರನ್ನು ಕಂಡು. ಆದ್ದರಿಂದ ಕವಿ 'ಉಪಯೋಗ'ದ ಔಚಿತ್ಯವನ್ನು ಅರಿತು ಅರ್ಥೈಸಬೇಕೆಂದು ಮಾರ್ಮಿಕವಾಗಿ

ತಿಳಿಸುತ್ತಾನೆ. ಬುದ್ಧಿ-ಭಾವ (ಹೃದಯ)ಗಳ ವಿದ್ಯುದಾಲಿಂಗನದಿಂದ 'ಉಪಯೋಗ'ದ ಅರ್ಥವನ್ನು ಪರಿಶೀಲಿಸುವ ಎಚ್ಚರಿಕೆ ನೀಡುತ್ತಾನೆ.

**ಮೌಲಿಕತೆಯನ್ನುಳಿಸಿ ಪರಿವರ್ತನೆ**

ಮೂಲಮರವನ್ನುಳಿಸಿ ಕಸಿಮಾಡು ಕೃಷಿಮಾಡು
ಸಾಲು ಬೆಳೆಯನ್ನುಳಿಸಿ ಕಳೆಯ ಕೀಳು ;
ಮೌಲಿಕತೆಯನ್ನುಳಿಸಿ ಪರಿವರ್ತನೆಯ ಮಾಡು
ಕಾಲಕ್ಕೆ ತಕ್ಕಂತೆ ಮಾಡು ಮರುಳಸಿದ್ಧ ॥

'ಪರಿವರ್ತನೆ' ಎನ್ನುವುದು ಹಳೆಯದರ ಉತ್ತಮಾಂಶಗಳನ್ನು ಗ್ರಹಿಸಿ ಯುಗಧರ್ಮಕ್ಕನುಸರಿಸಿ ವಿಕಾಸವಾಗಬೇಕು. ಹಳೆಯದರ ಅಳಿವಿನಿಂದ 'ಪರಿವರ್ತನೆ' ವಿಕಾರವಾಗುತ್ತದೆ. 'ಪುರಾಣಮಿತ್ಯೇವ ನ ಸಾಧು ಸರ್ವಂ ಪಚಾಪಿ ಕಾವ್ಯಂ ನವಮಿತ್ಯವಧ್ಯಂ' ಎಂದು ಕಾಳಿದಾಸನೂ ಪ್ರಾಚೀನ ಅರ್ವಾಚೀನಗಳಲ್ಲಿ ಗುಣಗ್ರಹಣದೃಷ್ಟಿ ಬೇಕು. ಹಳೆಯದೆಲ್ಲವನ್ನು ಕಳಪೆ ಎಂದು ಭಾವಿಸುವುದು ಅವಿವೇಕ. ಪ್ರಾಚೀನ ಸಂಸಿದ್ಧಿಗಳನ್ನು ಅಲಕ್ಷ್ಯ ಮಾಡುವುದು ಹೊಸದನ್ನೇ ಪ್ರಗತಿ ಎಂದು ಕರೆಯುವುದು ಭ್ರಾಂತಿಯಾಗುತ್ತದೆ. 'ನಾಗರೀಕತೆ ಎಂಬ ನಾಗಿನಿಯು ಪ್ರಗತಿನಾಮಕ ಫಣೆಯನೆತ್ತಿ ಕೊಲ್ಲಲೆಳೆಸುತಿದೆ ಮಾನವನ' ಎಂದು ಕುವೆಂಪು ವಾಣಿಯೂ ಇದನ್ನೇ ಸಾರುತ್ತದೆ.

ಪ್ರಾಚೀನ ಜೀವನ ಮೌಲ್ಯಗಳ ಹಿನ್ನಲೆ ಇಲ್ಲದೆ ಯಾವ ಪರಿವರ್ತನೆಗೂ ನೆಲೆ ಸಿಗದು ; ಬೆಲೆ ಬಾರದು. ಅದು ಜೀವನವನ್ನು ಪ್ರಗತಿಯತ್ತ ಕೊಂಡೊಯ್ಯದೆ ಅಪಗತಿ-ಅಧೋಗತಿಯತ್ತ ಕೊಂಡೊಯ್ಯುತ್ತದೆ. ಜೀವನ ಸೌಂದರ್ಯವನ್ನು ವಿರೂಪಗೊಳಿಸುತ್ತದೆ. ಪರಿವರ್ತನೆ (ಪ್ರಗತಿ)ಯ ಈ ಭ್ರಾಮಕ ಕಲ್ಪನೆಯನ್ನು ಅಲ್ಲಗಳೆಯುತ್ತಾ ಕವಿ 'ಸಾಲು ಬೆಳೆಯನ್ನುಳಿಸಿ ಕಳೆಯ ಕೀಳು' 'ಮೂಲಮರವನ್ನುಳಿಸಿ ಕಸಿಮಾಡು' ಕಳೆಯನ್ನು ಕಳೆಯುವ ನೆಪದಲ್ಲಿ, ಬೆಳೆಯನ್ನು ಕೀಳಬೇಡ ಎನ್ನುವ ಎಚ್ಚರಿಕೆಯನ್ನೂ ನೀಡುತ್ತಾನೆ. ಪ್ರಾಚೀನ ಮೌಲ್ಯಗಳ ಸಂಕೇತವಾಗಿ 'ಮೂಲಮರ' 'ಸಾಲು ಬೆಳೆ'ಗಳ ದೃಷ್ಟಾಂತ ಔಚಿತ್ಯಪೂರ್ಣ ಹಾಗೂ ಅರ್ಥಪೂರ್ಣವಾದುದು. ಪರಂಪರೆಯ ಮೌಲಿಕತೆಯನ್ನುಳಿಸಿ ಪರಿವರ್ತನೆ ಸಾಗಬೇಕು. ಇದನ್ನೇ 'ಹಳೆತತ್ತ್ವ. ಹೊಸಯುಕ್ತಿ, ಋಷಿವಾಕ್ಯ-ವಿಜ್ಞಾನಗಳ ಮೇಳ ಜೀವನಕ್ಕೆ ಜಸ' ವೆನ್ನುತ್ತದೆ ಕಗ್ಗ.

**ಮುಟ್ಟದಿಂ ಮೇಲ್ಮೆ**

ಬಟ್ಟೆಯೆಂದೆನಬಹುದೆ ರಾಷ್ಟ್ರಧ್ವಜವನು ? ಗೀತ
ಮಾತ್ರವೆಂದೆನಬಹುದೆ ನಾಡಹಾಡ ?
ಶ್ರೇಷ್ಠತೆಯನಳಿಯದಿರು ಹುಟ್ಟಿನಾಧಾರದಲಿ
ಮುಟ್ಟದಿಂ ಮೇಲ್ಮೆಯಲೆ ಮರುಳಸಿದ್ಧ"

ಒಂದು 'ವಸ್ತು' 'ತತ್ವ' 'ಸ್ಥಳ' ಒಂದು ಕಾಲದಲ್ಲಿ ಸರ್ವರ ಒಪ್ಪಿಗೆಯನ್ನು ಅಂಗೀಕರಿಸುವ ಮೂಲಕ ಗುಣಮೌಲ್ಯವನ್ನು ಪಡೆಯುತ್ತವೆ. ಜನಗಳಿಂದ 'ಮೌಲ್ಯ'ವೆಂಬ 'ಮುದ್ರೆ'ಯನ್ನು ಹೊಂದಿದ ಮೇಲೆ ಅದೇ ದೃಷ್ಟಿಯಿಂದ ಅವುಗಳನ್ನು ಪರಿಭಾವಿಸಬೇಕಾಗುತ್ತದೆ. ತುಣುಕು ಕಾಗದದ ಮೇಲೆ 'ಒಂದು ರೂಪಾಯಿ' ಎಂಬ ಸರಕಾರದ 'ಮೌಲ್ಯ'ಮುದ್ರೆ ಬಿದ್ದು ಚಲಾವಣೆಗೆ ಬಂದಾಗ ಅದನ್ನು 'ತುಣುಕು ಕಾಗದ'ವೆಂದು ಮಾತ್ರ ಭಾವಿಸುವುದು ಅದರ 'ಅಪಮೌಲ್ಯ'ವೆನಿಸಿ ನಮಗೂ ಹಾನಿಯಾಗುತ್ತದೆ. ಅಂತೆಯೇ 'ರಾಷ್ಟ್ರಧ್ವಜ.' 'ರಾಷ್ಟ್ರ', 'ರಾಷ್ಟ್ರಗೀತೆ' ಇವುಗಳನ್ನೆಲ್ಲ 'ಮೌಲಿಕತೆ'ಯ ದೃಷ್ಟಿಯಿಂದಲೇ ಕಾಣಬೇಕು. 'ವಸ್ತುಸ್ಥಿತಿ' ದೃಷ್ಟಿಯಿಂದ ಮಾತ್ರ ಅವುಗಳನ್ನು ಅಳೆದರೆ ಅವುಗಳಿಗೆ ಅಪಮಾನ ಮಾಡಿದಂತಾಗುತ್ತದೆ. 'ಗುಣ' ಮೌಲ್ಯದಿಂದಲೇ ಶ್ರೇಷ್ಠತೆ-ಕನಿಷ್ಠತೆಗಳನ್ನು ಅಳೆಯಬೇಕಲ್ಲದೆ. ಹುಟ್ಟಿನಾಧಾರದಿಂದ ಅಲ್ಲ. 'ಗುಣಾಃ ಪೂಜ್ಯಸ್ಥಾನಂ' ಎಂದರು ಹಿರಿಯರು. ರಾಷ್ಟ್ರಗೀತೆ ರಾಷ್ಟ್ರಧ್ವಜವನ್ನು 'ಮೌಲಿಕ' ದೃಷ್ಟಿಯಿಂದ ನೋಡುವಾಗ ನಮಗೆ ಸದ್ಭಾವವೂ ಬೇಕಾಗುತ್ತದೆ. ಈ ಭಾವದ ಅಭಾವದಲ್ಲಿ ರಾಷ್ಟ್ರಧ್ವಜ ಕೇವಲ ಬಟ್ಟೆಯಾಗಿ. ರಾಷ್ಟ್ರಗೀತೆ ಕೇವಲ 'ಗೀತೆ'ಯಾಗಿ ಕಂಡರೆ ಆಶ್ಚರ್ಯವಿಲ್ಲ! ಬದುಕಿಗೆ ದಿವ್ಯಭಾವವೂ ಬೇಕು. ಗುಣಮೌಲ್ಯದ ದೃಷ್ಟಿಕೋನವೂ ಇರಬೇಕೆಂದು ಕವಿ ಸೂಚಿಸುತ್ತಾ 'ಪುಟ್ಟಿದಿಂ ಮೇಲ್ಮೆ' 'ಗುಣ' ಮೌಲ್ಯವೇ ಪ್ರಧಾನವೆಂದು ಕಡ್ಡಕಡೆಯ ತೀರ್ಮಾನಕ್ಕೆ ಬರುತ್ತಾನೆ.

## ಲೋಕೋಭಿನ್ನರುಚಿಃ

ನನ್ನ ರುಚಿ ನನಗೆ ಅನ್ಯರ ರುಚಿಯು ಅನ್ಯರಿಗೆ
ಭಿನ್ನ ರುಚಿಯಿಂದಲೇ ಬಣ್ಣ ಬಾಳುವೆಗೆ ;
ನನ್ನ ರುಚಿ ಮೇಲೆಂಬ ಅನ್ಯರದು ಕೀಳೆಂಬ
ಕುನ್ನಿ ಬುದ್ಧಿಯ ಮಾಣು ಮರುಳಸಿದ್ಧ ॥

ನಮ್ಮ ಜೀವನ ರಂಗದಲ್ಲಿ ವ್ಯಕ್ತಿ-ವ್ಯಕ್ತಿಗಳಲ್ಲೂ ಭಿನ್ನ-ಭಿನ್ನವಾದ ಅಭಿರುಚಿ ಸಂಸ್ಕಾರಗಳು ಇರುತ್ತವೆ. ಎಲ್ಲರಿಗೂ ಒಂದೇ ರುಚಿ ಹಿಡಿಸುವದಿಲ್ಲ; ಹಿಡಿಸಬಾರದು. ಲೋಕ ಜೀವನದ ಸೊಗಸು ಇಂತಹ ವಿಭಿನ್ನರುಚಿಗಳಿಂದಲೇ ಬರುತ್ತದೆ. ಹಲವು ಬಣ್ಣಗಳ ಕಾಮನಬಿಲ್ಲಿನಂತೆ ವರ್ಣಮಯ-ವೈವಿಧ್ಯಮಯವಾಗಿ ಸೊಗಸಾಗಿ ಕಾಣುತ್ತದೆ. ಇಲ್ಲಿ ಯಾವ ವರ್ಣವೂ ಮೇಲಲ್ಲ; ಕೀಳಲ್ಲ. ಅಂತೆಯೇ ವ್ಯಕ್ತಿಯಿಂದ ವ್ಯಕ್ತಿಗೆ 'ಅಭಿರುಚಿ'ಗಳಲ್ಲಿ ವ್ಯತ್ಯಾಸಗಳು ಕಂಡರೂ ಅವುಗಳಲ್ಲಿ 'ಅಸಮಾನತೆ'ಯನ್ನು ಗುರುತಿಸಿ ನನ್ನದು ಮಾತ್ರ 'ಮೇಲು' ಅನ್ಯರದು 'ಕೀಳು' ಎನ್ನುವ 'ಕುನ್ನಿ' ಬುದ್ಧಿಯನ್ನು ಬಿಡಲು ಕವಿ ಎಚ್ಚರಿಕೆ ನೀಡಿದ್ದಾನೆ. ಈ ಪದ್ಯದಲ್ಲಿ ಕಂಡುಬರುವ ಕವಿಯ ಭಾವನೆ–ವಿಚಾರಗಳು ಕವಿಯ 'ವಿನಯ' ದ್ಯೋತಕವಾಗಿ ಮೂಡಿಬಂದಿವೆ.

ಹೀಗೆ ಕನ್ನಡದ ವರಕವಿಗಳೆಂದು ಖ್ಯಾತನಾಮರಾದ—ಕಾವ್ಯಾನಂದರ ಮರುಳ ಸಿದ್ಧನ ಕಂತೆಯ ದಾರ್ಶನಿಕ ಬಿಡಿಪದ್ಯಗಳನ್ನು ಅವಲೋಕಿಸುತ್ತಾ ಹೋದರೆ ಜೀವನ ಮೌಲ್ಯಗಳ ಆದರ್ಶ, ಬದುಕಿನ ಸೌಂದರ್ಯ ನಮ್ಮ ಮನಸ್ಸನ್ನು ಸೂರೆಗೊಂಡು, ಸೆರೆಹಿಡಿಯುತ್ತವೆ. ಕವಿ ಈ ಪದ್ಯಗಳಲ್ಲಿ ಉಪನಿಷತ್ತು–ಗೀತೆ–ಗ್ರೀಕ್‌ತತ್ವಶಾಸ್ತ್ರ ಧಮ್ಮಪದ–ಕುರಳ್–ಬೈಬಲ್–ವಚನ–ಶತಕ – ಸುಭಾಷಿತ ಹಾಗೂ ರುಬಾಯಿತ್ ಹೀಗೆ ಹತ್ತಾರು ಗಣಿಗಳಲ್ಲಿರುವ ಚಿಂತನೆಯನ್ನು ಅಳವಡಿಸಿಕೊಂಡು, ಜೀವನಾನುಭವ ಬೆರಸಿ ಆಳವಾದ ದಾರ್ಶನಿಕ ಪ್ರತಿಭೆಯಿಂದ ಇಂದಿನ ಯುಗಧರ್ಮಕ್ಕೆ ಹೊಂದುವ ರೀತಿಯಲ್ಲಿ ಹೇಳುವುದು ಈ ಪದ್ಯಗಳ ವೈಶಿಷ್ಟ್ಯವೆನ್ನಬಹುದು.

ಬದುಕಿನ ವಾಸ್ತವ ಚಿತ್ರವನ್ನು ನಮ್ಮ ಕಣ್ಣು ಮುಂದಿರಿಸಿ, ಪರಿಚಿತ ದೃಷ್ಟಾಂತ ಗಳೊಂದಿಗೆ ತತ್ವಮಥನ ಮಾಡುತ್ತಾ ವಿವೇಚಿಸುವುದು, ನಮ್ಮನ್ನು ಆಲೋಚಿಸುವಂತೆ ಮಾಡುವುದು. ಮನುಷ್ಯನ 'ಇತಿ ಮಿತಿ'ಗಳನ್ನು ಗುರುತಿಸಿ 'ಬದುಕು' ಸ್ವೀಕಾರಾರ್ಹ ಎನ್ನುವ ತತ್ವ ಒಟ್ಟಾಗಿ ಕಂತೆಯ ಪದ್ಯಗಳಲ್ಲಿ ಪ್ರತಿಪಾದಿತವಾಗಿದೆ. ಸತ್ಯ–ಸ್ನೇಹ, ಭೋಗ–ಯೋಗ–'ಉಪಯೋಗ'–'ದೈವಶ್ರದ್ಧೆ' 'ಪ್ರಗತಿ' ಹೀಗೆ ಹತ್ತಾರು ವಿಷಯಗಳತ್ತ ನಮ್ಮ ಗಮನ ಹರಿಯುವಂತೆ ಮಾಡಿ, ಸಮಸ್ಯೆಗಳಿಗೆ ಸಮಂಜಸ ಪರಿಹಾರವನ್ನು ಕವಿ ನೀಡುವುದು ಕಂತೆಯ ಪದ್ಯಗಳ ಅಗ್ಗಳಿಕೆ ಎನ್ನಬಹುದು. ಇಲ್ಲಿಯ ತತ್ವ ಸನಾತನವಾದರೂ ಹೇಳುವ ವಿಧಾನ ನಿತ್ಯನೂತನವಾದುದು. ಇಲ್ಲಿಯ ಪದ್ಯಗಳು ಸಮಕಾಲೀನ ಬದುಕನ್ನು ಸಂಸ್ಪರ್ಶಿಸಿ, ಸ್ಪಂದಿಸಿ, ಜೀವನ ಸೌಂದರ್ಯದ ದಿಕ್ಕನ್ನು ತೋರಿಸುವ ಕೈದೀವಿಗೆಗಳು. ಪರಿಣತ, ಪರಿಪಕ್ವ, ದಾರ್ಶನಿಕ ಮನಸ್ಸಿನಿಂದ ಮೂಡಿಬಂದ ಅರಿವಿನ ಬೆಳಕಿನ ಕಿರಣಗಳು. ಇಲ್ಲಿ ಕವಿಯ ಪ್ರತಿಯೊಂದು ಪದ್ಯವೂ ಆಳವಾದ ಆಧ್ಯಾತ್ಮಿಕ ಚಿಂತನೆಯಿಂದ ದರ್ಶನ ದೀಪ್ತಿಯಿಂದ. ಅನುಭವದ ಆಳದಿಂದ ಹೊರಟು ಜ್ಯೋತಿರ್ಲಿಂಗವಾಗಿ ಕಾಣುತ್ತದೆ.

ಗದ್ಯಪದ್ಯಗಳೆರಡರಲ್ಲೂ ಸವ್ಯಸಾಚಿಯಾದ ಕಾವ್ಯಾನಂದರ ದರ್ಶನ ಪ್ರತಿಭೆ ಯಿಂದ ಮೂಡಿಬಂದ ಈ ಬಿಡಿ ಬಿಡಿ ಪದ್ಯಗಳು ಇಡಿಯಾಗಿ ಬಲುಬೇಗ ಪ್ರಕಟವಾದರೆ ಕನ್ನಡಕ್ಕೊಂದು ಶ್ರೇಷ್ಠ 'ನೀತಿಕಾವ್ಯ' 'ತತ್ವದ ಕಂತೆ' ಲಭಿಸಿ ಕನ್ನಡಿಗರ ಮನ-ಮನೆ ಯನ್ನು ಬೆಳಗಲು ಸಹಾಯಕವಾದೀತೆಂದು ಆಶಿಸುತ್ತೇನೆ.

**ಕಂತೆಯ ಪದ್ಯಗಳ ಆಕರ :**

| | | | | |
|---|---|---|---|---|
| 1 | ಪ್ರಬುದ್ಧ ಕರ್ನಾಟಕ | ಸಂ. ಪು. 55 | ಸಂ. 2 | [1973] |
| 2 | ,, | ಸಂ. ಪು. 54 | ಸಂ. 4 | [1973] |
| 3 | ,, | ಸಂ. ಪು. 55 | ಸಂ. 3 | [1973] |
| 4 | ,, | ಸಂ. ಪು. 57 | ಸಂ. 1 | [1975] |
| 5 | ,, | ಸಂ. ಪು. 57 | ಸಂ. 2 | [1975] |

# ಜಲಪಾತವನ್ನು ಕುರಿತು

ಡಾ॥ ದ. ರಾ. ಬೇಂದ್ರೆ

ಸಿದ್ಧಯ್ಯಸವರ ಕೌಟುಂಬಿಕ ವಾತಾವರಣದಲ್ಲಿ ಮಹಾಕಾವ್ಯದ ಧ್ವನಿಗಳು ಅವರ ಬಾಲ್ಯದಿಂದಲೇ ದುಂದುಭಿಸುತ್ತಿದ್ದವು. ಪ್ರಾಯದ ಪ್ರಥಮ ಗ್ರಾಸದಲ್ಲಿಯೇ ಅವರು ಶರಣರ ಸಾಹಿತ್ಯವನ್ನು ಮುಕ್ಕಿದರು; ದೇಶಸೇವಾತತ್ಪರರಾದವರ ಸಂಗ ಸಹ ವಾಸಗಳಲ್ಲಿ ಕಾಲ ಕಳೆದರು. ಅವರು ಮಾಡಿದ ವಿದ್ಯಾಭ್ಯಾಸವೂ ಅವರ ಹೃದಯದ ವರೆಗೆ ಪ್ರವೇಶ ಮಾಡಿತು. ಇದೆಲ್ಲದರ ಪರಿಣಾಮವೆಂದರೆ ಅವರಲ್ಲಿ ಭಾವನೆಯ ವಾಯುವೇಗವೂ ಬುದ್ಧಿಯ ಅಗ್ನಿಗುಣವೂ ಸೇರಿಕೊಂಡುದು. ಅಗ್ನಿಪುತ್ರಿಗೆ ವಾಯು ಪುತ್ರನ ಯುತಿಯಾದಾಗ ಕುರುಕ್ಷೇತ್ರವೂ ಚಿಕ್ಕದಾಯಿತೆಂಬುದನ್ನು ಕನ್ನಡದ ಕವಿ ರನ್ನನು ತನ್ನ ರೌದ್ರರಸಭರಿತವಾದ 'ಗದಾಯುದ್ಧ'ದಲ್ಲಿ ಬಣ್ಣಿಸಿದ್ದಾನೆ. ಕನ್ನಡ ಕಂದ ಕಾವ್ಯಾನಂದರು ಇಪ್ಪತ್ತನೆಯ ಶತಮಾನದ ವಿಶ್ವಗ್ರಾಸಿಯಾದ ಜ್ವಾಲಾ ಮಾಲೆಯಲ್ಲಿ ಕಂಡ ಕಾಲದ ಘೋರ ರೂಪವನ್ನು ಅನೇಕ ಮುಖವಾಗಿ ವರ್ಣಿಸಿದ್ದಾರೆ. ಅವರ ಕಾವ್ಯವಾಣಿಯಲ್ಲಿ ಆಕರ್ಷಣೆ–ವಿಕರ್ಷಣೆಗಳು ಸರಿ ತೂಕವಾಗಿ ಸೇರಿಕೊಂಡಿವೆ. ಇಲ್ಲಿಯ ಓಜಸ್ಸಿನ ಕಾಂತಿಮತ್ತಾದ ಗುಣ ಇವರಲ್ಲಿದೆ.

ಈ ಸಂಗ್ರಹದ ಹೆಸರಿಗೆ ಕಾರಣವಾದ ' ಜಲಪಾತ ' ವೆಂಬ ಮೊದಲ ಕವನಕ್ಕಿಂತ ಎರಡನೆಯದಾದ ' ಅಬ್ಬರದ ತಡಸಲು ' ಇಲ್ಲಿಯ ಪ್ರಾರಂಭದ ಕವನಗಳ ಸ್ಥಾಯಿ ಭಾವವನ್ನು ಖಡೇ : ಖಡೇ : ಎಂದು ಧ್ವನಿಸುತ್ತದೆ ತೀರ ವಾಚ್ಯವಾಗಿಯೂ ಹೇಳುತ್ತದೆ.

ನಾನಿಹೆನೊ ಉಪಕಾರಿ ಇಲ್ಲವೇ ಅಪಕಾರಿ
ನನಗೆ ಸಹ ಗೊತ್ತಿಲ್ಲ, ನಾನು ಮಾರಿ ;
ನನ್ನ ಬರಿ ಜರಿಯದಲೆ ನನ್ನ ವಶಪಡಿಸಿಕೊಳಿ
ಮಾಡಿ ನೋಡಿರಿ ನನ್ನ ಶಕ್ತಿ ಫಲಕಾರಿ ;

' ಮಾನವ ಸಮಾಜ ' ಎಂಬ ಕವನದಲ್ಲಿ ' ಕುರಿ ತೋಳಗಳ ಕೊಲ್ವ ಕಾಲ ಬಂತು ' ಎಂದು ಎಚ್ಚರಿಸುತ್ತಿದ್ದಾರೆ. ರಾಘಾಕಾರರ ಹಾವಳಿ ಪ್ರತಿ ಹಾವಳಿಗಳಲ್ಲಿ

ಇಂಥ ವೈಪರಿತ್ಯವೂ ಕಂಡುಬಂತು. ಆದರೆ ಮೊಲ, ನಾಯಿಯನ್ನು ಬೆನ್ನಟ್ಟುವಲ್ಲಿ ಗಂಡುಭೂಮಿ ಇರುತ್ತದೆ–ಎಂದು ಹೇಳುವ ಹಾಗೆ ಈ 'ಕುರಿ–ತೋಳ'ಗಳ ಸಂದರ್ಭದಲ್ಲಿ ಅಂಥ ಪೌರುಷದ ಅನುಭವ ಅಷ್ಟು ಪ್ರತೀತವಾಗಲಿಲ್ಲ. ಮಹಾ ಯುದ್ಧಗಳಿಂದ ಪ್ರಾರಂಭವಾಗಿರುವ ವಿಶ್ವಘಟನೆಗಳಲ್ಲಿಯೂ ಯಾವ ಧ್ವನಿತಾರ್ಥ ಹುದುಗಿದೆ ಎಂಬುದನ್ನು ಇನ್ನೂ ಆಕರ್ಣಿಸಿ ತಿಳಿದುಕೊಳ್ಳಬೇಕಾಗಿದೆ. 'ಬಡವರ ಯುಗ ಬರುತಿದೆ' ಎಂದು ಅವರ ಮತ್ತೊಂದು ಕವನ ಸಾರಿದೆ. ಅದರ ಗರ್ಭಾವತರಣ, ಜನ್ಮಾವತರಣಗಳ ಬೇನೆ ಇನ್ನೂ ತೀರಿಲ್ಲ ಎಂದು 'ಕೊರಿಯಾ' ಸಾರುತ್ತಿದೆ. ಭಾರತವೂ ಗುಮ್ಮನೆ ಫೂತ್ಕರಿಸುತ್ತಿದೆ. ಧನಿಕ–ಬಡವರ ಸಂಧಿ ವಿಗ್ರಹಗಳಲ್ಲಿ ಅಮೇರಿಕಾ–ರಸಿಯಾಗಳು ತಮ್ಮ ಸ್ಥಾನಮಾನಗಳಂತೆಯೇ ಪೂರ್ವ–ಪಶ್ಚಿಮ ಮಾರ್ಗ ಹಿಡಿದಿವೆ. ಈ ಅಪೂರ್ವ ಪೂರ್ವ ಪಕ್ಷಗಳಿಗೆ ಉತ್ತರ ಪಕ್ಷದ ಸಿದ್ಧಾಂತ ಬರಬೇಕಾಗಿದೆ. ನಮ್ಮ ಆರ್ಯದರ್ಶನವು ರೌದ್ರವು ಪೂರ್ವಪಕ್ಷವಾದಾಗ ಶಿವನೇ ಉತ್ತರ ಪಕ್ಷವಾದರೆ ಕಲ್ಯಾಣಕಾರಿ ಎಂದು ಎಂದಿನಿಂದಲೂ ಸೋಬಾನೆ ಹೇಳುತ್ತ ಬಂದಿದೆ. 'ಬೆಟ್ಟದುರಿ' ರೂಪಕ ಕವನದ ಆಹ್ವಾನವು ಆ ಶಿವದ ಅರಿವನ್ನು ಒಳಗೊಂಡಿದೆ. ಅಂತೆಯೇ :

ಬಲು ಜೋಕೆ ಗಾಳಿಯೇ–ಬಾಯಿಂದ ಆಡಿದುದು
ಕೃತಿಯಲ್ಲಿ ಮಾಡಿದುದು ಬೇರಾಗದಿರಲಿ :

ಕಾವ್ಯಾನಂದರ ಕಾವ್ಯರಚನೆಯ ಅಸ್ತಿಭಾರಕ್ಕೆ ತತ್ತ್ವಗಳ ತೂಕವಿರುವುದರಿಂದಲೆ ಅವರ ರಾಗದ ತ್ವೇಷದ (ದ್ವೇಷದ ಅಲ್ಲ ;) ನುಡಿಗಳಲ್ಲಿ ಬೆಂಕಿಯ ಜತೆ ಜತೆಗೆ ಬೆಳಕೂ ನುಗ್ಗುತ್ತದೆ. ಅವರು ಮಹನೀಯರ ಮಾರ್ಮಿಕ ವಚನಗಳನ್ನು ಚೆನ್ನಾಗಿ ಮನನ ಮಾಡಿದ್ದಾರೆ. "Light is the greatest germicide, insecticide" ಎನ್ನುವ 'ಎ, ಈ' (ಐರ್ಲಂಡದ ಕವಿಪುಂಗವ) ಯವರ ಸೂಕ್ತಿಯನ್ನು ಒಂದೆಡೆಗೆ ಅವರೇ ಹೇಳಿ "ಪ್ರಕಾಶ ಪ್ರಸರಣಗೈವ ಸತ್ಯೋಪಾಸನೆಯೇ ಸಾಹಿತ್ಯದ ನಾಂದಿ" ಎಂದು ತಮ್ಮ ಮಾತು ಮುಂದೆ ಪೋಣಿಸಿದ್ದಾರೆ. ಸಾಹಿತ್ಯದಿಂದ ಜನಕಲ್ಯಾಣಕಾರ್ಯ ಸಾಧ್ಯ ಎಂಬ ನಂಬಿಗೆ ಅವರಲ್ಲಿ ಬಿಂಬಿಸಿದೆ. 'If, therefore, a new society is to be built up it can be built up only by the contributions of first rate creative artists'. ಹೀಗೆಂದು ಸಾರುವ ಶ್ರೀ ರಾಧಾಕೃಷ್ಣನ್ ಅವರ ವಚನವನ್ನೂ ಅವರು ಉದ್ಧರಿಸಿದ್ದಾರೆ. ನಾನಿಷ್ಟೇ ಹೇಳಬಹುದು : ಕಾವ್ಯಾನಂದರ ವಾಣಿ ಕಲಾಕಾರನ ವಾಣಿ, ಅದರಲ್ಲಿ ಸೃಜನಶಕ್ತಿ ಇದೆ : ಆದರೆ ಯಾವ ಸೃಷ್ಟಿಶಕ್ತಿಗೆ ಸ್ಥಿತಿ–ಸಂಹಾರ ಶಕ್ತಿಗಳ ಮುಂಬಲ ಹಿಂಬಲಗಳಿಲ್ಲವೋ ಅದು ತನ್ನ ನಿರ್ಮಿತಿಯಿಂದ ಅಷ್ಟು ಸಾರ್ಥಕತೆ ಪಡೆಯುವುದಿಲ್ಲ. ಈ ಮೂರು ಶಕ್ತಿಗಳ ಮುಪ್ಪುರಿ ಇದ್ದರೆ ಅದು first rate, second rate ಎಂದು ಬೆರಳೆಣಿಸುವುದು 'ಎಣ್ಣೆಗೆ ಬೆಣ್ಣೆ ಸಣ್ಣ' ಎಂಬಂತೆ ಅಧಿಕ ಚಿಕಿತ್ಸೆಯಾದೀತು.

ಈ ಸಂಗ್ರಹದಲ್ಲಿ 'ಅಬ್ಬರ ತಡಸಲ' ವಷ್ಟೇ ಇಲ್ಲ. ಅದು ತನ್ನ 'ತಾಸೇಬಜಂತ್ರಿ' ಯನ್ನು 'ಬಾಣದ ತಡಸಲಿ'ನ ಹತ್ತಿರ ಮುಗಿಸಿದೆ. ಮುಂದೆ ಜೋಗದ ಜಲ ಪಾತವು ಶರಾವತಿಯಾಗಿ ಹರಿದು ಹೋಗುವಂತೆ ಅವರ ಕಾವ್ಯದ ಪ್ರವಾಹವು ಧರ್ಮ ಜಿಜ್ಞಾಸೆ–ಪ್ರೇಮದ ಅನುಶಾಸನಗಳ ಮಾರ್ಗವಾಗಿ 'ಸಮರಸ'ದಲ್ಲಿ ಕೊನೆಗಾಣು ತ್ತದೆ. ಜೀವನವು ಅರ್ಥಮೂಲವಾದರೂ ಜೀವನದ ಒಳಜೀವನವು 'ಧರ್ಮ–ಪ್ರೇಮ'ಗಳ ಕೇಂದ್ರದ್ವಂದ್ವಗಳಲ್ಲಿ ತನ್ನ ಮುಕ್ತಿಮಾರ್ಗವನ್ನು ಹುಡುಕುತ್ತದೆ. ಇಂಥ ಧರ್ಮದಲ್ಲಿ ಸದ್ಯಕ್ಕೆ ದೇಶಧರ್ಮ, ರಾಷ್ಟ್ರಧರ್ಮ. ಭಾಷಾಧರ್ಮಗಳ ಪರಿಪಾಲನೆಯೂ ಹೃದಯವಂತರ ಹೃದಯಾಕರ್ಷಣ ಮಾಡಿದೆ. ಕಾವ್ಯಾನಂದರು ಆ ದೈವತಗಳಿಗೂ ತಮ್ಮ ಮುಡಿಪು ಸಲ್ಲಿಸಿದ್ದಾರೆ :

ಕನ್ನಡದ ಬತ್ತಿಯೆಳೆಗಿಡದ ಮಂಕನು ತೆಗೆಯೆ
    ನನ್ನ ಕಾಯವು ಚಾಚುಕಡ್ಡಿಯಾಗಿರಲಿ ;
ಭಾರತದ ದೀವಳಿಗೆಯಲ್ಲಿ ಶಿವಗನ್ನಡದ
    ಜ್ಯೋತಿಯಿದು ತೇಜಸ್ಸಿನೊಡ್ಡಿಯಾಗಿರಲಿ

'ಬತ್ತಿ' ಎಷ್ಟೆಂದರೂ ಹತ್ತಿಯ ಬದುಕು, ಎಣ್ಣೆ ಕಾಳಿನ ಸತ್ತ್ವ. ಅಗ್ನಿ ಸಂಯೋಗದಲ್ಲಿಯೂ ಅವಕ್ಕೆ 'ಮಂಕು ಮಂಕು' ಹಿಡಿಯುವುದು ಸಹಜ. ಅದನ್ನು ತೆಗೆಯುವ 'ಶಿವಗನ್ನಡದ ಜ್ಯೋತಿ'ಗೆ ಯಾವಾಗಲೂ ಸ್ವಾಗತವಿದೆ. ಅದಕ್ಕಾಗಿ ಕಾಯವನ್ನು ತೆಯ್ದು ಕಡ್ಡಿ ಮಾಡಿಕೊಳ್ಳುವ ಸಿದ್ಧತೆ 'ದಧೀಚಿ'ಯ ವಜ್ರಸಾಧನೆಯ ಜಾತಿಯದು. ಆ ಕೆಚ್ಚಿನ ಉಪಾಸಕರು ಕಾವ್ಯಾನಂದರು. ಅಂತೆಯೆ ಅವರು,

ಭಾರತಿಗೆ ಬಲವಾಗಿ ವಸುಮತಿಗೆ ಚೆಲುವಾಗಿ
    ಸಕಲರಿಗೆ ಗೆಲುವಾಗಿ ನಮ್ಮ ಹೊಸ ಹುಟ್ಟು

ಎಂದು 'ಕನ್ನಡದ ಬೆಳೆ'ಯಲ್ಲಿ ಸಾರಿ,

ಇದಕಾಗಿ ಒಂದಾಗಿ ದುಡಿಯುವೆವೆ ನಾವು ?
ಈ ಗುರಿಯ ಕಡೆ ಕೂಡಿ ನಡೆಯುವೆವೆ ನಾವು ?
ಇದಕಡ್ಡ ಬಂದವನ ತೊಡೆಯುವೆವೆ ನಾವು ?
ಇದರ ಸಾಧನೆಯಲ್ಲಿ ಮಡಿಯುವೆವೆ ನಾವು ?

    ಕಿರಿಯರಿದನೇ ಕೇಳಲಿ
    ಹಿರಿಯರುತ್ತರ ಹೇಳಲಿ ;

ಎಂದು ಅಬ್ಬರದಿಂದ ಗದರಿಸಿದ್ದಾರೆ. ಆದರೆ ಇಂದಿನ ಕಿರಿಯರು ನಾಳಿನ (ನಾಡಿನ ಎಂದರೂ ಸೈ) ಹಿರಿಯರು. ಅವರೇ ಇದಕ್ಕೆ ಉತ್ತರ ಕೊಡಲು ಉತ್ತರಾಧಿಕಾರಿ ಗಳು. 30, 40 ವರ್ಷಗಳ ಹಿಂದಿನ ಯಾವ ಹಿರಿಯರು ಕಾವ್ಯಾನಂದರಂತೆ 'ತಾಯ

ಬರವಿ ' ನ ಅಪೂರ್ವ ಸಂಭ್ರಮ ಕಂಡಿದ್ದರು ? 'ಜನ ಜೀವನ ಜಾಹ್ನವಿ 'ಯ ಘೋಷವಂತೂ ಮೂರನೆಯ ಮಹಾಯುದ್ಧದ ಮುಂಚೂಣಿಯಲ್ಲಿ ಹುಟ್ಟಬಹುದಾದ ಮಂತ್ರ.

' ಮನೆ ಮಾಡಲಿ ವಿಜ್ಞಾನವು ಗುಡಿಸಲ ಬದಿಯಲಿ '. ವಿಜ್ಞಾನವು ' ಡಿಳ್ಳಿ ' ಬಿಟ್ಟು ' ಹಳ್ಳಿ ' ಗೆ ಬರಬೇಕಾದರೆ ಕಿರಿಯರ ಮೂರು ತಲೆಮಾರು ಉರುಳ ಬೇಕಾಗುವುದು. ಆ ತಲೆಗಳಿಂದ ನವರಾಜಮಾರ್ಗದ ಘಟ್ಟಣೆಯಾಗಬೇಕಾಗಿದೆ. ಇದಾಗುವುದಾದರೆ ಕಿರಿಯರ ಹೃದಯದುರ್ಗವನ್ನು ಬಹಳ ಭದ್ರವಾಗಿ ಕಟ್ಟಬೇಕಾ ದೀತು. ಅದರ ದರ್ಶನ-ಜಾಗೃತಿ ಈ ಕವಿಗಳಿಗಿಲ್ಲದೆ ಹೋಗಿಲ್ಲ. ' ಬಿಂದು ಸಿಂಧು ' ' ಕಾಯಕ ' 'ಪ್ರೇಮ-ಕರ್ಮ ' ' ಜ್ಞಾನ-ಪ್ರೇಮ ' ' ಸೌಂದರ್ಯ-ಪ್ರೇಮ ' ಈ ಕಾವ್ಯಮಾಲೆಯಲ್ಲಿದೆ.

' ಯಾರಿಂದ ಬಂದುದೀ ನೀರೆಂದು ವಿಂಗಡಿಸಿ
ಬೇರೆ ಬೇರಾಗಿದನು ತೋರಿಸಲು ಬಹುದೇ ? '

ಅದು ಅವ್ಯಾಪಾರ.

ಯಾರ ನೀರಾದರೂ ತನಗಾಗಿ ಆರಿಸಿಹ
ದಾರಿಯೇ ಬೇರೆಯಿರೆ ಎರವಲೆನಬಹುದೆ ?
–' ಜಲಪಾತ ' ದ ಈ ನುಡಿ ನೆನಪಿಡುವುದು ಲೇಸು.

ಹೀಗೆ ಪ್ರೇಮದ ಮುಮ್ಮುಖದ ದರ್ಶನ ಮಾಡಿಕೊಂಡ ಕವಿಯ ಪ್ರೇಮ ಗೀತೆಗಳನ್ನು "ಓದಲು ರಸಿಕರು ತವಕಪಟ್ಟರೆ ಅದು ಅಸಹಜವೆನಿಸಲಾರದು. ರಸಿಕರ ಆ ಆಸೆ ತಣಿವಂತೆ ಈ ಸಂಗ್ರಹದಲ್ಲಿ ಪುಟ ೭೩ ರಿಂದ ೧೧೦ರವರೆಗೂ ಆ ಗೀತೆಗಳಿವೆ. ಅರ್ಥಜಿಜ್ಞಾಸೆ, ಧರ್ಮಜಿಜ್ಞಾಸೆಗಳಿಗೆ ಕವಿ ಮಾರುಹೋದನೋ ಎಂದು ಸಂಶಯಾಕುಲರಾದಾಗ ' ರಾಜಾ ರಾಣಿ ' 'ನಿನ್ನ ನೋಡಿ ಬಂದಮೇಲೆ' ' ಇಜ್ಜೋಡು ' ' ಬಾಳು ಕಹಿಯಾದರೂ ನೆನಹು ಕಹಿಯಲ್ಲ ' ' ಹೊಸ ಹೆಂಡತಿಗೆ' ' ಹೊಸ ಗಂಡನಿಗೆ ' ' ಕಿವಿ ಮಾತು ' ' ಸಮರಸ ' ವೆಂಬ ಕವನಗಳು ಭಾವತರಂಗದ ಮಾಲೆ ಮಾಲೆಯಾಗಿರಬಹುದು. ರಸಿಕ ಹೃದಯವನ್ನು ಜೋಕಾಲಿಯಾಡಿಸುವವು.

' ಗಂಡು ಹೆಣ್ಣಿನ ಬಾಳು ಗಂಡಭೇರುಂಡದೊಲು
ಎರಡು ಮುಖ ಒಂದಾತ್ಮ ದುಃಖ ಹರುಷ

ಎಲ್ಲರ ಅನುಭವದ ಮಾತು,

ಎಲ್ಲೆಡೆಯೊಳೂ ಶುದ್ಧಪ್ರೇಮವನೆ ಕಾಣುವಂ
ತೆನ್ನ ನಯನಕೆ ಬರಲಿ ಪ್ರೇಮ ದೃಷ್ಟಿ;
ನಿನ್ನ ನಗೆಯಂತೆಯೇ ನಗುನಗುತ ಕಾಣಿಸಲಿ
ನನ್ನ ಕಣ್ಣಿಗೆ ಸಕಲ ಮನುಜ ಸೃಷ್ಟಿ;

ಇದು ಮಾತ್ರ ಎಲ್ಲರ ಅನುಭವಕೆ ಬರಬೇಕಾದ ಮಾತು. ಹೃದಯದ ಹಸಿವು ಇದು. ಈ ಹಸಿವು ಹಿಂಗುವವರೆಗೆ ' ಸಮರಸ'ದ ಹಾಡು ರಸವಾಗಿ ಬರದು.

ಮೂಗಿಯಾಗಿರುವುದೇ ಮೇಲು ಗೆಳತಿ !

ಮೌನ ಹಾಗೂ ಲೇಸು, ಹೇಗೂ ಲೇಸು.

ಪೂರ್ವದಲ್ಲಿ ಕವಿಗಳು ಧರ್ಮಾರ್ಥ ಕಾಮ ಮೋಕ್ಷ ವಿಚಕ್ಷಣತೆಯನ್ನು ಕಾವ್ಯೋದ್ಗಾರಗಳಲ್ಲಿ ಪ್ರಕಟಿಸುತ್ತಿದ್ದರು. ಮತ್ತೆ ಆ ಕಾಲ ಮರಳಲಿದೆ.

"Let the artist be always alive to his duty towards the masses." ಮಹಾತ್ಮರ ಈ ಮಾತನ್ನು ಮರೆಯಬಾರದು. ಅದರೊಡನೆ—

The passion for truth, goodness, beauty and freedom gives meaning to life" ಎನ್ನುವ ಶ್ರೀ ಪಂಡಿತ ಜವಾಹರಲಾಲರ ಮಾತನ್ನೂ ನೆನಪಿನಲ್ಲಿಡಬೇಕು. ಈ ಮಾತಿನ ಮರೆವಾದರೆ ಕಾವ್ಯಾನಂದರ ' ಜಲಪಾತ ' ವು ಅಬ್ಬರದಿಂದ ನಮ್ಮನ್ನೆಬ್ಬಿಸುತ್ತದೆ. ನಮಗೆ ಎಚ್ಚರವಿದ್ದರೆ ಈ ಚಿಂತನದಲ್ಲಿ ನಮ್ಮ ಮೈಮರೆಯಿಸುತ್ತದೆ. ಈ ' ಜಲಪಾತ ' ಜೀವನದಲ್ಲಿ ನೈರ್ಮಲ್ಯವನ್ನು ತರಲಿ.

(ಜಲಪಾತಕ್ಕೆ ಬರೆದ ಮುನ್ನುಡಿಯಿಂದ)

# " ಕರುಣಾ ಶ್ರಾವಣ "- ಕವನಗಳಲ್ಲಿ ಹೊಸತನ

**ಸಿಂಪಿ ಲಿಂಗಣ್ಣ**

ಶ್ರೀ ಸಿದ್ಧಯ್ಯ ಪುರಾಣಿಕರು ತಮ್ಮ ಕೌಟುಂಬಿಕ ವಾತಾವರಣದಲ್ಲಿ ದುಂದುಭಿ ಸುತ್ತಿರುವ ಮಹಾಕಾವ್ಯದ ಧ್ವನಿಗಳನ್ನು ಕೇಳಿ, ಕಾವ್ಯಾನಂದರಾದವರು. ಪರಿಸರ ವಾತಾವರಣಗಳು ಅವರಲ್ಲಿ ಶರಣಸಾಹಿತ್ಯದ ಅಭಿರುಚಿಯನ್ನೂ. ರಾಷ್ಟ್ರೀಯತ್ವದ ಅಭಿಮಾನವನ್ನೂ ಬಿತ್ತಿ ಬೆಳೆದವು. ಬುದ್ಧಿ-ಭಾವನೆಗಳಲ್ಲಿ ಅನಲಾನಿಲ ಸಂಯೋಗ ವನ್ನೂ ಒತ್ತಿ ತುಂಬಿದವು, ಅದರಿಂದ ಅವರ ನುಡಿಕಿಡಿಯು ಬೆಳಕಿನ ಕುಡಿಯಾಗಿ ಥಳುಕಿಸಿ ಕವನಶರಾವತಿಯು " ಜಲಪಾತ " ವಾಗಿ ಧುಮ್ಮಿಕ್ಕಿತು. ಬಳಿಕ " ಕರುಣಾ ಶ್ರಾವಣವು ಪುಣ್ಯಸಲಿಲವಾಗಿ ಜುಮ್ಮಿಟ್ಟಿತು. ಅಂಥ ಪುಣ್ಯಸಲಿಲವಾದ " ಕರುಣಾ ಶ್ರಾವಣ " ದಲ್ಲಿ ವಿಪುಲವಾದ ಹೊಸತನವನ್ನು ಹೊಮ್ಮಿಸಿತು.

ಹೊಸ ಕವಿಯೊಬ್ಬನ ಕವನಗಳು ಹೊಸವೇ ಆದರೂ ಅದರಲ್ಲಿ ಹೊಸತನವು ಮೆರುಗುವುದಕ್ಕೆ ಎಳೆಗಂದಿತನದ ದಿನಗಳನ್ನು ಕಳೆಯಬೇಕು. ಆವಾಗ ಆ ಹಯನಿನ ಹೊಸತನವು ನಿಚ್ಚಳವಾಗಿ ಗೋಚರಿಸುವುದು.

" ಶಬ್ದದಲಿ ಸವಿಯಾಗಿ, ಅರ್ಥದಲಿ ಬೆಳಸಾಗಿ, ಬಾಳುವೆಯ ಸವಿಬೆಳಕು ಬೀರುವ ಕವಿಯಾಗು " ಎಂಬ ಸೃಷ್ಟಿ ಸಂದೇಶವನ್ನು ಎದೆಯಲ್ಲಿರಿಸಿಕೊಂಡು ಶ್ರೀ ಪುರಾಣಿಕರು ತಮ್ಮದನ್ನಾಗಿ ಮಾಡಿಕೊಂಡರು. ಪರಿಣಾಮವಾಗಿ ಪ್ರಕೃತಿಯಾ ದೇಶದ ಆನಂದಪಾನ, ಅಮೃತ ಜೀವನ, ವೈಶ್ವಮಾನವ ಮೈತ್ರಿಗಳು ಅವರಲ್ಲಿ ಫಲಿಸಿದವು. ಅವರು ಕವಿತೆಯನ್ನು ಆಹ್ವಾನಿಸಿದ್ದು ಏತಕ್ಕಾಗಿ ಎನ್ನುವುದು ಗೊತ್ತೇ ?

> " ಬಾಳ ಪೂರ್ಣತೆಯು ಹೋರಾಟವಾಗಿ ಬಾ. ನನ್ನ ಮನದಿ, ಹೃದಯವನದಿ
> ನಿರಂತರವಾಗಿ ಇರು : ಚಿರಂತನವಾಗಿ ಮೊರೆ."

ಕಲ್ಪನಾವಿಲಾಸದ ಕನಸುಗಳನ್ನು ಕಾಣುವ ಕನಸಿಗತನವನ್ನು ಅವರು, ಸರಿಯಾಗಿ ಹದಗೊಳಿಸಿಕೊಂಡರು. ನಿಚ್ಚಳವಾಗಿ ಕಾಣ್ಕೆಗೊಳಿಸಿಕೊಂಡರು. ಅದೊಂದು ಕಲ್ಪಲತೆ ಯನ್ನು ಬೆಳೆದುಕೊಳ್ಳುವ ಹದವಾದ ಹರವಾದ ಕ್ಷೇತ್ರವೇಂದೇ ಬಗೆದರು.

"ಕಲ್ಪನೆಯ ಮೃದುಗತಿಯಲ್ಲಿ ಕುಣಿದ ನರ್ತಕರೆನಿಸಿದ ರಸಋಷಿಗಳೇ ಯುಗ ಪ್ರವರ್ತಕರು. ಅವರೇ ಹೊಸ ರೂಪಗಳ ಸೃಷ್ಟಾರರು ; ಹೊಸದರ್ಶನಗಳ ದ್ರಷ್ಟಾರರು, ಅವರ ಕಲ್ಪನಾಲಾಸ್ಯವೇ ಸೃಷ್ಟಿಯಧರದಲ್ಲಿ ಹಾಸ ; ಅವರ ನಿಶ್ವಾಸವೇ ಜೀವನ ವಿಕಾಸ. ಕಲ್ಪನೆ ಹೆಜ್ಜೆಯಿಟ್ಟರೆ ಕಲ್ಪಲತೆ ಅಂಕುರಿಸುವುದು"

ಇದನ್ನೆಲ್ಲ ಪುರಾಣಿಕರು ಪೆರರಿಗೆ ತೋರಿದ ಥಾಳಬತ್ತಿಯಲ್ಲ ; ತಮಗಾಗಿ ಕಟ್ಟಿಕೊಂಡ ಬಾಳಬುತ್ತಿ. ಅವರ ರಸನೆಗೆ ಶಿವನ ಹೆಸರೇ ರಸ. ಯಾಕೆಂದರೆ ಶಿವನೇ ರಸವಾಗಿ ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಹುದುಗಿದ್ದಾನೆ : ಸುಳುಹುದೋರಿದ್ದಾನೆ, ಅಲ್ಲವೇ ? ಅವರ ಶಿವಗಣ್ಣು ಭಾವಸುಂದರಿಯನ್ನು ಕಂಡಿದ್ದು ಹೀಗೆ—

"ಹಾಲಿನ ಹೊಳೆಯಲ್ಲಿ ಮೂಡಿದ ಚಂದಿರನ ಪಡಿನೆಳಲಂತೆ ಭಾವಸುಂದರಿಯ ಮೊಗ.

ಹೂ ಬಾಯಿ ತೆರೆದಂತೆ, ಹಸುಹಾಲು ಕರೆದಂತೆ, ಮುತ್ತುಗಳು ಸುರಿದಂತೆ ಅವಳ ನಗೆ.

ಯಾರೆದೆಯ ಹೊಕ್ಕರೂ ಯಾರೊಡನೆ ನಕ್ಕರೂ ಆಕೆ ಜಾರೆಯಲ್ಲ. ಹೋಗೆಂದರೆ ಹೋಗುವಳು. ಆದರೆ ಬಾರೆಂದರೆ ಬರುವವಳಲ್ಲ. ಮಿತಭಾಷಿ, ಹಿತಭಾಷಿ. ಮಹಾಕೃಪಣೆ.

ಆದರೆ ತನ್ನ ತಪಗೈದವರಿಗೆ ತನ್ನನ್ನೇ ಕೊಟ್ಟುಕೊಳ್ಳುವ ನಿಪುಣೆ."

ಕವಿಗಳಲಿ ಕವಿಯಾದ ಶಿವನು ಸೃಷ್ಟಿಕಾವ್ಯವನು ಬರೆಯುತಿಹ ಕಲೆಗಾರನಷ್ಟೇ ಆಗಿರದೆ, ಚಿತ್ರಕ ಶಿಲ್ಪಕ ಸಹ ಆಗಿದ್ದಾನೆ. ಕಲೆಗಾರಿಕೆ ಸಹಜ ಧರ್ಮವಲ್ಲ. ಅದು ಗರ್ಭಸ್ಥ ಶಿಶು ; ಭೂಗರ್ಭದ ಬೀಜ. ಮೊಗ್ಗೆಯೊಳಗಿನ ಕಂಪು. ಅದೊಂದು ಸವಿ ನೋವಿನ ಶಿಶು. ಮಧುರವೂ ಆಗಿದೆ. ಅಂತೆಯೇ ಶ್ರೀ ಪುರಾಣಿಕರು ಅದರ ಸತತ ಸಾಂಗತ್ಯವನ್ನು ಹಾರಯಿಸಿದ್ದಾರೆ.—

"ನಿನ್ನ ಸತತಸಾಂಗತ್ಯವೇ ನನಗೆ ಬಾಳಬಲ. ಎಂದಿಗಾದರೂ ಒಮ್ಮೆ ಪೂರ್ಣತೆಯ

ಪಿಪಾಸೆಪಡೆಯುವ ನನ್ನಾಶೆ ಈಡೇರುವ ತನಕ ನೀನು ಜೊತೆಯಾಗು. ಭಾಷೆ ಕೊಡು !"

ಪೂರ್ಣತೆಯೇ ಬಾಳಗುರಿ. ನೀರಡಿಸಿದವನಿಗೆ ನೀರು ಕಣ್ಣಿಗೆ ಬಿದ್ದರೂ, ಕುಡಿಯುವ ಕೆಲಸ ಅರ್ಧ ಮುಗಿದಂತೆಯೇ, ಅಂತೆಯೇ ಎಂದಿಗಾದರೂ ಒಮ್ಮೆ ಪೂರ್ಣತೆ ಪಡೆಯುವುದೇ ನನ್ನಾಶೆಯೆಂದೂ ನಿರ್ಧರಿಸಿದ್ದಾರೆ ಪುರಾಣಿಕರು. "ಇಂದೇ ಸಿಗದಿರೆ ಇನ್ನೆಂದಾದರೂ ದೊರಕೊಳಲೆನ್ನುವ ಮನದಾಶೆ" ತಳೆದಿದ್ದಾರೆ.

ಪೂರ್ಣತೆ ಅಂದರೇನು ? "ಎಲ್ಲೆಲ್ಲಿ ನೋಡಿದ್ರೆ ಎಲ್ಲಾರು ಕಾಣಸ್ತಾರೆ. ನಾನು ಮಾತ್ರ ಕಾಣಿಸೋದಿಲ್ಲ. ನಾನಿದ್ದದ್ದೇ ಸುಳ್ಳೇ" ಎನ್ನುವಂತಾಗಿದೆ ನಮ್ಮ ಸ್ಥಿತಿ. ತನ್ನ ತಾನರಿಯದಿರುವುದು ಅಪೂರ್ಣತೆಯಾದರೆ, ತನ್ನ ತಾನರಿಯುವುದೇ ಪೂರ್ಣತೆಯೆಂದಂತಾಯ್ತು. ಅದೇ ಆತ್ಮ ದರ್ಶನ. ಆತ್ಮವೇ, ನೀನು ಪ್ರಕಟವಾಗಲೆಂದೇ ಮರಳಿ ಹುಟ್ಟಿದೆ. ಕೀಟದಿಂದ ನರನವರೆಗೆ ಮೆಟ್ಟಿಲುಗಳ ಮೆಟ್ಟಿದೆ. ಚಿತ್ರ ಬರೆದೆ, ಮೂರ್ತಿ ಕೊರೆದೆ ; ಕವಿತೆ ಕಟ್ಟಿದೆ. ಹಾಡಿದೆ, ಕುಣಿದೆ, ತಂತಿಮೀಟಿ ತಾಳ ಕುಟ್ಟಿದೆ, ಕನಸು ಕಂಡು, ನೆನಿಸಿ ದಣಿದು, ಮನದಲ್ಲೇ ಮುಗಿಲು ಮುಟ್ಟಿದೆ. ಆದರೆ ನನ್ನ ಬಿಟ್ಟು ನೀನು ಸಾಗಲಾರೆ. ಸಾಗಿದರೆ ನಿನಗೆ ಸೋಲು ತಪ್ಪದು. ನನ್ನ ಮನದಲ್ಲಿ ನೆಲೆಸಿದರೆ ನಿನ್ನಿಷ್ಟಪೂರ್ತಿ. ಇಲ್ಲದಿದ್ದರೆ ಸೃಷ್ಟಿಯೇ ವ್ಯರ್ಥ. ಎಷ್ಟು ಜನ್ಮ ಹೀಗೆ ನಿನಗಾಗಿ ಕಾಯಲಿ ? ನೀನು ಬರುವ ಹಾಗೆ ಯಾವ ಬಾಯಲ್ಲಿ ಕರೆಯಲಿ, ಓ ಉತ್ತಮೋತ್ತಮಾ ?"

ಶ್ರೀ ಅರವಿಂದ ಆಶ್ರಮದ ಶ್ರೀಮಾತೆಯವರು, ಶ್ರೀ ಅರವಿಂದರನ್ನು ಕುರಿತು ಹೇಳಿದ ಒಂದು ಮಾತು ನೆನಪಿಗೆ ಬರುತ್ತದೆ—"ನೀನಿಲ್ಲದೆ ನನ್ನ ಅಸ್ತಿತ್ವವಿಲ್ಲ ; ನಾನಿಲ್ಲದೆ ನಿನ್ನ ಆವಿಷ್ಕಾರವಿಲ್ಲ" ಇದೇ ಅಲ್ಲವೇ ಶಿವಜೀವರ ಸಂಧಾನ, ಪ್ರಕೃತಿ ಪುರುಷರ ಸಂಬಂಧ ?

"ಕೂಗು ಕೂಗು ಮನವೇ, ಮಾತೆಯ ಕೂಗುವ ರೀತಿಯಲಿ" ಎಂದು ಶ್ರೀ ರಾಮಕೃಷ್ಣ ಪರಮಹಂಸರು ತಮ್ಮ ಘೋರ ಸಾಧನೆಯ ಸಂದರ್ಭದಲ್ಲಿ ಮನಕ್ಕೆ ಗಟ್ಟಿಸಿ ಹೇಳಿದ್ದಾರೆ.

ಶ್ರೀ ಮಾಸ್ತಿ ಅವರು ತಮ್ಮ ಅಂತರಂಗಾನುಷ್ಠಾನದ ಕಾಲಕ್ಕೆ ಕೇಳಿಕೊಂಡರು- "ನಿನ್ನ ಮಕ್ಕಳು ನಿನ್ನ ಕರೆವ ದನಿ ಯಾವುದೋ, ಚೆನ್ನಕೇಶವಾ, ನನಗೆ ಆ ದನಿಯ ನೀಡು." ಅದೇ ಅರ್ಥದಲ್ಲಿ ಪುರಾಣಿಕರು ಕೇಳುತ್ತಾರೆ—"ನೀನು ಬರುವ ಹಾಗೆ ಯಾವ ಬಾಯಲ್ಲಿ ಕರೆಯಲಿ ?"

ಏತಕ್ಕಾಗಿ ಈ ಖಟಾಟೋಪ ? ಚಿತ್ ಕಳೆಯ ಬೆಳಕಿನ ಸಲುವಾಗಿ–ಎಂದು ರತ್ನಾಕರ ಕವಿ ಹೇಳುತ್ತಾನೆ ತನ್ನ ಭಾಷೆಯಲ್ಲಿ : "ಕೂಡು ಕೂಡೆನಗೆ ಚಿತ್ಕಳೆಯ ಬೆಳಕನುಂಟು ಮಾಡು ನಿರಂಜನ ಸಿದ್ಧ."

ಜಗತ್ತಿನ ಅಂತರಂಗದಲ್ಲಿ ಆತ್ಮ ಪ್ರದೀಪವು ಹೊತ್ತಿ ಉರಿಯುತ್ತಲೇ ಇದೆ, ಏತಕ್ಕೂ ಅಂಜದೆ, ಯಾರಿಗೂ ಅಳುಕದೆ. "ಮಕುಟಗಳು ಹಾರಿದರೂ, ಭೂಪ ಭಿಕ್ಷೆ ಬೇಡಿದರೂ, ಆಶಾ ಪ್ರದೀಪ ಈವರೆಗೂ ಆರಿಲ್ಲ ; ಆರುವಂತಿಲ್ಲ."—ಎಂದು ಕವಿ ಹಾರಯಿಸಿದ್ದು ಅದೆಷ್ಟು ನಿತ್ಯ ನೂತನ ಹಾಗೂ ಶುಭಪ್ರದವಾಗಿದೆ !

* * *

ಬಾಳಗುರಿ ಸಹಜವಾಗಿ ಕಾಣಿಸಿಕೊಳ್ಳುವಂಥದಲ್ಲ. ಅದು ಕಾಣಿಸಿಕೊಂಡರೆ ಅರ್ಥಸಿದ್ಧಿ ದೊರೆತಂತೆಯೇ ಎಂದು ಹೇಳಲಾಗುತ್ತದೆ. ಪೂರ್ಣತೆಯೇ ಬಾಳಗುರಿ ಯೆಂದು ಕಂಡ ಕಾವ್ಯಾನಂದರಿಗೆ ಜಗತ್ತು ಕಾಣಿಸುವ ರೀತಿಯೇ ಬೇರೆ, "ಇದ್ದದ್ದು ಮರೆದು, ಇಲ್ಲದ್ದು ತೆರೆದು, ಹಾಲ್ಜೇನು ಸುರಿಯುವ" ಎತ್ತುಗಡೆ ಅಲ್ಲಿ ನಡೆದಿರು ವಂತೆ ತೋರುತ್ತದೆ. ಕವಿಯಾದವನಿಗೆ ಇಂಥ ಜೀವನ ಕೃಷಿಯು ನಿತ್ಯನೂತನ ತೆಯ ಪದಕ್ಕೇರಿಸುವುದು ಕ್ರಮಪ್ರಾಪ್ತ.

ಸೌಂದರ್ಯವು ಪರಮೇಶ್ವರನ ಹಸ್ತಾಕ್ಷರವೆಂದು ಹೇಳಿದವರಿದ್ದಾರೆ. ಆದರೆ ಹೂಗಳು ಈಶ್ವರನ ಮೂಲಾಕ್ಷರವೆಂದು ಕಾವ್ಯಾನಂದರು ಕಂಡಿದ್ದಾರೆ. ಓಂಕಾರ, ಶ್ರೀಕಾರ, ಉದ್ಗಾರ, ಪ್ರಶ್ನಾರ್ಥಕ, ವಿಸರ್ಗಾದಿಗಳಿಗೆ ಪ್ರತೀಕವಾದ ಹೂಗಳ ಹೆಸರು ಸಹ ಹೇಳಿದ್ದಾರೆ—ಕಮಲ, ಮಲ್ಲಿಗೆ, ಸಂಪಿಗೆ, ಜಾಜಿ, ವಿಷ್ಣುಕಾಂತಿ, ಹೂ ಎಂದರೆ ಮೈದೊಟ್ಟು ಬಂದ ಭಕ್ತಿಯೆಂದು ಶ್ರೀಮಾತೆ ಹೇಳಿದ್ದಾರೆ. "ನರನಾಗದೆ ನರು ಗಂಪಿನ ಅರಳಾಗಿರೆ ನಾನು ಲೇಸಿದ್ದಿತು" ಎಂದಿದ್ದಾರೆ ಅವರು ಈ ಬರಡು ಬದುಕಿಗೆ ಬೇಸತ್ತು. "ಎನಗಾಗಿ ಬೇರೆ ತರುಮರಾದಿಗಳಿರಲಿಲ್ಲವೇ" ಎಂದು ಬಸವಣ್ಣನವರು ನುಡಿದಂತೆ. ಮದು ಹೃದಯದೊಳಗಿದ್ದರೂ ನಮಗದರ ಸವಿಯಿಲ್ಲ. ಕೆಚ್ಚಲೊಳಗಿನ ಉಣ್ಣೆ ಹಾಲವ್ರತ ಹಿಡಿದಿದೆ. ಉಣ್ಣೆಗೆ ಹಾಲಭಾಂಡದ ಕೆಚ್ಚಲೇ ಆಶ್ರಯವೀಡಿ ದ್ದರೂ, ಅದು ಕೆಚ್ಚಲಿನ ರಕ್ತವನ್ನೇ ಅಶನವನ್ನಾಗಿ ಮಾಡಿಕೊಂಡಿದೆ. ಕೆಚ್ಚಲೊಳಗಿನ ಹಾಲನ್ನಲ್ಲ.

ಕಾವ್ಯಾನಂದರು ಬಯಸುವ ನರುಗಂಪಿನ ಅರಳು ಎಂಥದು ? ಬಾಡದ ಬತ್ತದ ಪ್ರಾಣ ಪುಷ್ಪವೇ ಅವರ ನರುಗಂಪಿನ ಅರಳು. ಅದು "ಉರಿಬರಲಿ ಸಿರಿಬರಲಿ, ಪರಿಮಳವ ಬೀರುವೆನು. ಸಾವು ಬಂದರು ಸಹಿತ ಭರತ ಭೂಮಿಯ ಬೆರೆತು, ಮತ್ತೊಂದು ಸಸಿಗಾಗಿ ಗೊಬ್ಬರಾಗುವೆನು" ಎನ್ನುವಂಥದು, ಬರಿಯ ನರುಗಂಪು ಮಾತ್ರ ಸೂಸಿ ತೃಪ್ತಿಪಡೆಯುವ ಹೂವಲ್ಲ, ಅವರ ಪ್ರಾಣ ಪುಷ್ಪ. ಭರತ ಭೂಮಿಗೆ ಗೊಬ್ಬರಾಗುವುದೂ ಅದಕ್ಕೆ ಸಾರ್ಥಕ ಸಂದರ್ಭವೇ ; ಹಿಗ್ಗಿನ ವಿಷಯವೇ !

ಕಾಲಭೈರವನ ಸ್ವೈರ ಕುಣಿತಕ್ಕೆ ತಾಳಹಾಕಿ ತಲೆದೂಗುವ ಲೋಕವು, ನಾಕ ದಂತಿದ್ದ ಜಗತ್ತನ್ನು ನರಕವಾಗಿಸಿಕೊಂಡಿದೆ. ಅದರ ಪರಿಹಾರಕ್ಕೆ ಶಿವೋಪಾಸನೆಯೇ ಸೂಕ್ತದಾರಿಯೆಂದು ಕವಿಯು ನಂಬಿಕೆ. "ಎಲ್ಲೆಡೆಯೊಳೂ ಜ್ಞಾನನಂದಿಗೆ ಮುಗ ದಾಣ, ಜ್ಞಾನಕ್ಕೆ ಎದುರಾಗಿ ಅಧಿಕಾರ ದರ್ಪ." ಇದಕ್ಕೆಲ್ಲ ಕಾವ್ಯಾನಂದರ ಬಿಲ್ವ ಪತ್ರಿಯೇ ಮದ್ದು. ಬಾಳೇ ಬಿಲ್ವಪತ್ರಿ ನನ್ನಿ, ಚೆಲುವು, ಮೈತ್ರಿ ಇವೇ ಅವರ ಮೂರೆಸಳುಗಳು. ಆದರೆ ಶಿವೋಪಾಸನೆಗೆ ಶಿವನೆಲ್ಲಿ ? ಕಾವ್ಯಾನಂದರು ಹೇಳುತ್ತಾರೆ— "ಅರಿದೊಲಿವ ಹೃದಯಕ್ಕೆ ಈ ಧಾತ್ರಿಯಲ್ಲಿ ಸರ್ವವೂ ಶಿವ, ಮಂಗಳ ರವ. ಇಲ್ಲಿ, ಅಲ್ಲಿ, ಎಲ್ಲೆಲ್ಲಿಯೂ."

ಸರ್ವಜ್ಞ ಕವಿಯು ವೈಯಕ್ತಿಕ ಜೀವನಕ್ಕೆ ಬೇಕಾದ ಸ್ವರ್ಗ ಸಂಪಾದನೆಗೆ ಬೆಚ್ಚಗಿನ ಮನೆ, ವೆಚ್ಚಕ್ಕೆ ಹಣ, ಇಚ್ಛೆಯ ಹೆಂಡತಿ ಇಷ್ಟು ಸಾಕು–ಎಂದಿದ್ದಾನೆ. ಕಾವ್ಯಾನಂದರು ಸಾಮೂಹಿಕ ಜೀವನಕ್ಕಾಗಿ ಸ್ವರ್ಗವನ್ನಿಳಿಸುವ ಉಪಾಯವನ್ನು ಸೂಚಿಸಿದ್ದಾರೆ– " ಕೃಷಿ ಕರ್ಮಕ್ಕೆ ನೀರು, ಗ್ರಾಮೋದ್ಯೋಗಕ್ಕೆ ಧನ ಕೊಡಮಾಡಿದರೆ ಸ್ವರ್ಗವನ್ನು ಭೂಮಿಗೆ ಕರೆದಂತೆಯೇ." ಆದರೆ ಆ ಬುದ್ಧಿ ನಮ್ಮ ಸಚಿವಾಲಯಕ್ಕೆ ಬರಬೇಕು. ಅದು ಹೇಗೆ ಸಾಧ್ಯ? ಲೋಕ ಚೇಷ್ಟೆಗೆ ಕಾರಣನಾದ ರವಿಯೂ ಅರಿಯದ ಮರ್ಮಗಳನ್ನು ಅರಿಯಬಲ್ಲ ಕವಿಯಿಂದ ಈಪ್ಸಿತವು ಈಡೇರಬಲ್ಲದೆಂದು ಭರವಸೆ ತಳೆದಿದ್ದಾರೆ.

ಶಿವದೃಷ್ಟಿಯನ್ನಿರಿಸಿಕೊಂಡು ಕಾವ್ಯಾನಂದರು ಹಲವು ಸಾರೆ ಶಿವಸ್ವರೂಪವನ್ನೇ ಕಂಡು ನಲಿದಿದ್ದಾರೆ. ಕಾಶ್ಮೀರದ ಬನಿಹಾಲ ಶಿಖರವು ಶಿವನ ಸಿರಿಜಡೆಯ ಗಂಟಿನಂತೆ, ಸುತ್ತುತ್ತ ಮೇಲಕೇರುವ ದಾರಿ ಅವನನ್ನು ಸುತ್ತಿರುವ ಸರ್ಪದಂತೆ, ಬೆಟ್ಟದಿಂದ ಇಳಿಯುವ ತೊರೆ ಗಂಗಾವತರಣದಂತೆ ತೋರಿದ್ದರೆ ಆಶ್ಚರ್ಯವೇನು ? ಮೇಘವೇ ಗಜಚರ್ಮ, ಹಿಮವೇ ಭಿಸಿತಾಂಗ, ಶೃಂಗವೇ ಗಂಗೆಯ ಉತ್ತಮಾಂಗವಾಗಿ ಅವರಿಗೆ ಕಾಣಿಸಿದ್ದು ವಾಸ್ತವಿಕವೇ ಆಗಿದೆ. ಆ ಬೆಟ್ಟವೇ ರುದ್ರ, ಶ್ರೀನಗರವೇ ಗೌರಿ, ಮಳೆ ಉದಕ, ಆಲಿ ಸುಮ, ಮಿಂಚಿನ ದೀಪ ಶಿವಶಿವೆಯರ ಪೂಜೆಗಾಗಿ ಅಣಿಗೊಂಡಿದ್ದು ಅಕೃತ್ರಿಮವೇ ಆಗಿದೆ. ಈ ಕಾಣ್ಕೆಗೆ ಅವರ ಮನದ ಹೊಣ್ಕೆಯೇ ಕಾರಣವಲ್ಲವೇ ?

ಇನ್ನೊಂದು ಸಾರೆ–ದೃಷ್ಟಿಯು ಸೃಷ್ಟಿಗೆ ಶಿವನವರೋಹಣ ; ಭೂಮಿಗೆ ವ್ಯೋಮಕೆ ಪಾಣಿಗ್ರಹಣ. ಮೋಡದ ಚಪ್ಪರ, ಮಿಂಚಿನ ತೋರಣ, ಆಲಿಯ ಅಕ್ಷತೆ, ಗಿರಿದರಿಗಾಯನ, ದಿಶೆಗಳ ನರ್ತನ, ಸಿಡಿಲಪಟಾಕ್ಷಿ–ಮದುವೆಗೆ ವೈಭವ ಒದಗಿಸಿವೆ.

" ಚಿಕ್ಕೆ ಬಾನಿನ ಹಕ್ಕಿ, ಹಕ್ಕಿ ಮುಗಿಲ ಚಿಕ್ಕೆ–ಆಗಸವೇ ಹಿರಿಕೆರೆ, ಚಿಕ್ಕೆಗಳೇ ತಾವರೆ " ಎಂದು, ದಿವ್ಯದಲ್ಲಿ ಲೌಕಿಕವನ್ನೂ, ಲೌಕಿಕದಲ್ಲಿ ದಿವ್ಯವನ್ನೂ ಕಾಣಬಲ್ಲ ಕಾವ್ಯಾನಂದರಿಗೆ, ಹಳೆ ಹೊಸ ಹೈದ್ರಾಬಾದುಗಳನ್ನು ಸಂಧಿಸುವ ಸೇತುವೆಯ ಮೇಲೆ, ಸಾವಿರ ಶರೀರಗಳು ವಿವಿಧ ವಾಹನಗಳಲ್ಲಿ ಓಡಾಡುವುದು, ರಾಷ್ಟ್ರ ಸಂಘದ ಮೇಲೆ ಸರ್ವದೇಶದ ವಿವಿಧ ವರ್ಣರಂಜಿತ ಧ್ವಜಗಳಂತೆ ಕಾಣಿಸಿದರೆ ಅದು ಅಲೌಕಿಕ ಸಾಮರಸ್ಯದ ಕಾಣ್ಕೆಯ ಫಲವಲ್ಲದೆ ಇನ್ನೇನು ?

ಪೂರ್ವಾಂಗನೆ ಪಶ್ಚಿಮಾಂಗನೆಗೆ ಹೇಳುತ್ತಾಳೆ—

" ನೀ ಬಿಳಿಯ ಹಾಳಿ, ನಾ ಕಪ್ಪು ಮಸಿ, ಪ್ರೇಮ ಕವನವಾಗೋಣ. ಕಪಿಲೆಯಾದ ನನ್ನ ಕೆಚ್ಚಲಲ್ಲಿ ನೀನು ಬಿಳಿಯ ಹಾಲಾಗಿ ಬಾಳು. ನೀನು ಮೃಗವಾದರೆ ನಾನು ನಿನ್ನ ನಾಭಿಯೊಳಗಿನ ಕಸ್ತೂರಿ. ನಾ ನೀಲಮೇಘ. ನನ್ನುದರದಲ್ಲಿ ನೀನು

ಸೆಳೆಮಿಂಚು. ನೀ ಶ್ವೇತಪದ್ಮ, ನಾ ನೀಲಭೃಂಗ, ಎಲ್ಲಿಹುದು ವೈರ? ನಿಜವಾಗಿ ಎಲ್ಲಿದೆ ವೈರ? ಈ ಸಾಮರಸ್ಯದ ದಾರಿ ಹೊಚ್ಚ ಹೊಸದಲ್ಲವೇ?

ಸಾಹಿತ್ಯವೊಂದು ಪರಮಾಗಮ, ಶಿಲ್ಪ ಅದಕ್ಕೆ ಭಾಷ್ಯ–ಎಂದು ವೇರೂಳಿನ ಕೈಲಾಸವನ್ನು ಕಂಡಾಗ ಕಾವ್ಯಾನಂದರಿಗೆ ಹೊಳೆದ ಮುತ್ತಿನ ಹಾರ, ಮಿಂಚಿನ ಶಲಾಕೆ, ಮಾಣಿಕ್ಯದ ದೀಪ್ತಿ. ಅದನ್ನು ಕೇಳಿ ಶಿವನು ಅಹುದಹುದು ಎಂದು ಮೆಚ್ಚಿಕೆ ತೋರಿರಲೇಬೇಕು. ತಾಜಮಹಲು ಅವರ ಬಾಯಿಂದ ಹೇಳಿಸಿತು–“ಪ್ರೇಮವಿರೆ ಗುಡಿಸಲೇ ತಾಜಮಹಲೆನಿಸುವದು. ತಾಜಮಹಲು ನೋಡಿ ರಾಜವೈಭವ ಬಯಸಬೇಡ. ಪ್ರೇಮವೇ ತಾಜಮಹಲಿನ ಗುರಿ” “ಜಲ್ದಿ ನೋಡಿ ತೋರೊ ನೀ ಬಂದೇ ಎಲ್ಲಿ. ಮುಂದ ಹೋಗೂದೆಲ್ಲಿ” ಎಂಬ ಎಚ್ಚರಿಕೆಯಲ್ಲಿ ಉಂಡಿದ್ದು ಕಂಡಿದ್ದು: ಬರೆದದ್ದು ಒರೆದದ್ದು. ಹೊಸತನದ ಹೂರಣ ತುಂಬಿಕೊಂಡ ಹೊಸ ಕವಿತೆ, ಹಳೆಯದಾಗದ ಕವಿತೆ: ಹೊಸತನವನ್ನು ಸೂರೆಮಾಡುವ ಕವಿತೆ. ಅದು “ಕರುಣಾ ಶ್ರಾವಣ” ದಲ್ಲಿ ತುಂಬಿ ತುಳುಕುತ್ತಿದೆ. ಅದನ್ನೋದಿದಾಗ ಮಾಗಿ ಹೋಗಿ ಸುಗ್ಗಿ ಬರುವದು. ಜಡದ ನಾಡಿಯಲ್ಲಿ ಸಹ ಶಿವನ ಸೆಲೆ ಹರಿಯತೊಡಗುವದು. ಆತ್ಮ ರವಿಯ ಗುಪ್ತವಾಸ ಮುಗಿಯುವದು, ಜಗತ್ತಿನ ಈ ತೋಟ, ಆನಂದದ ಊಟ. ಬೀಜ ಮಣ್ಣಲ್ಲಿ ನಶಿಸಿ ವಿಕಸನ ಪಡೆಯುವ ಎತ್ತಗಡೆ ನಡೆದಿದೆ ಇಲ್ಲಿ. ಎಲ್ಲರ ಬೆಳವಿಗೂ ಎಡೆಯಿದೆ ಇಲ್ಲಿ. ಆದ್ದರಿಂದ ತ್ವರೆ ತ್ವರೆ! ಮಾಡಿದರೆ ಸಮಯ ಸ್ವಲ್ಪ. “ಬಡನೂರು ವರ್ಷದ ಆಯುಷ್ಯ.” ಆದ್ದರಿಂದ “ಪಯಣಿಗನೇ, ಬಿಡಬೇಡ ಯಾತ್ರೆಯನು.”

ಇದೆಲ್ಲ ಪುರಾಣಿಕರು ಹೇಳಿದ ಪುರಾಣವಲ್ಲ; ಪುರಾಣವಾದರೆ ಪುಂಡರ ಗೋಷ್ಠಿಯೆನಿಸುತ್ತಿತ್ತು. “ಕರುಣಾ ಶ್ರಾವಣ” ವಂತೂ ಕಾವ್ಯಾನಂದರ ಬಾಳ ಭರವಸೆ.

# ಮೊದಲು ಮಾನವನಾಗು

(ಕವನ ಸಂಗ್ರಹದ ಸುಳುಹು ಹೊಳಹು)

ಡಾ॥ ಡಿ. ಎಸ್. ಕರ್ಕಿ

ಸುಪ್ರಸಿದ್ಧ ಕವಿ ಸಿದ್ದಯ್ಯ ಪುರಾಣಿಕ ಅವರ ೬೦ನೆಯ ಹುಟ್ಟು ಹಬ್ಬದ ಸುಸಂತೋಷದ ಈ ಸಂದರ್ಭದಲ್ಲಿ ಅವರ ಅಭಿನಂದನ ಗ್ರಂಥಕ್ಕೆ ಬರೆಹವೊಂದನ್ನು ಬರೆಯುವುದು ಸುಯೋಗವೇ ಸರಿ. ನನಗೆ 'ಕಾವ್ಯಾನಂದ' ಎಂಬ ಕ್ಯಾವ್ಯನಾಮದ ಈ ಕವಿಯ ಕವಿತೆಗಳ ಪರಿಚಯು ಉಂಟಾದುದು ಬಹಳ ದಿನಗಳಿಂದ. ಒಬ್ಬ ಕವಿಯ ಕೃತಿಗಳು ಸವಿದೋರಿದಂತೆ ಆ ಕವಿಯ ಪ್ರತ್ಯಕ್ಷ ಪರಿಚಯಕ್ಕೆ ಮನವು ಹವಣ ಗೊಂಡರೆ ಅದು ಸ್ವಾಭಾವಿಕ, 'ಜಲಪಾತ' ಮೊದಲಾದ ಹಲವಾರು ಕವನ ಸಂಗ್ರಹ ಗಳು ಅವರ ಕಾವ್ಯರಚನೆಯ ಸೊಗಸನ್ನು ಸುಳುಹುಗಾಣಿಸುತ್ತ ಬಂದಿವೆ. ಅವೆಲ್ಲವು ಗಳಲ್ಲಿ ಮೊದಲು ನನ್ನ ಗಮನಕ್ಕೆ ಬಂದುದು 'ಕರುಣಾಶ್ರಾವಣ'. 'ಕಾವ್ಯಾನಂದರ' 'ಕರುಣಾಶ್ರಾವಣ'ದ ಬಗೆಗೆ ನಾಲ್ಕು ಮಾತು ನೀವು ಬರೆಯಬಹುದಲ್ಲಾ!" ಎಂದು ಪ್ರಪಂಚ ಪತ್ರಿಕೆಯ ಸಂಪಾದಕ ಪಾಟೀಲ ಪುಟ್ಟಪ್ಪನವರು ಸನ್ಮೈತ್ರಿಯ ಸಹಜ ರೀತಿಯಲ್ಲಿ ನನ್ನನ್ನು ಕೇಳಿ ನನ್ನ ಗಮನವನ್ನು ಆ ಕವನ ಸಂಗ್ರಹದತ್ತ ಸೆಳೆದ ನೆನಪು ನನಗಿದೆ. 'ಕರುಣಾಶ್ರಾವಣ' ಆದೇ ಆಗ ಪ್ರಕಟಣಗೊಂಡಿರಬಹುದೆಂದು ಕಾಣುತ್ತದೆ.

'ಕರುಣಾಶ್ರಾವಣ' ಎಂಬ ಶೀರ್ಷಿಕೆಯಲ್ಲಿಯೇ ಒಂದು ಆಕರ್ಷಣೆಯುಂಟು. ಯಾರಿಗಾದರೂ ಒಳ್ಳೆಯ ಭಾವನೆಯನ್ನುಂಟುಮಾಡುವ 'ಕರುಣೆ' ಹಾಗೂ 'ಶ್ರಾವಣ' ಎಂಬ ಶಬ್ದಗಳನ್ನು ಈ ಸಮಸ್ತಪದ ಒಳಗೊಂಡಿರುವುದು ಒಂದು ವಿಶೇಷ. ಜೀವನ ದಲ್ಲಿ ಕರುಣ ಗುಣಕ್ಕೆ ಬೆಲೆಯಿರುವಂತೆ ಕಾವ್ಯದಲ್ಲಿ ಕರುಣಾರಸಕ್ಕೆ ಮಹತ್ವವುಂಟು. ಹೀಗೆಯೇ ವರ್ಷದ ಋತುಗತಿಯಲ್ಲಿ ವರ್ಷಾಋತುವಿಗೆ-ಅದರಲ್ಲೂ 'ಶ್ರಾವಣ' ಮಾಸಕ್ಕೆ ಅದರದೇ ಆದ ವೈಶಿಷ್ಟ್ಯವುಂಟು. ಮಳೆಗಾಲದ ಮಧ್ಯದಲ್ಲಿ ಬರುವ ಮಾಸವಲ್ಲವೇ—ಶ್ರಾವಣ ಮಾಸ; ಮಳೆಯಿಂದ ಬೆಳೆ; ಬೆಳೆ ಬಾಳಿಗೆ ಪೋಷಣೆ: ಹೀಗೆ ಬಾನಿಂದ ಭೂಮಿಗೆ ಕರುಣಾಜಲ ಇಳಿದು ಬರುವುದು ತಾನೇ? ಇದುವೆ 'ಕರುಣಾಶ್ರಾವಣ'ದ ಹೆಸರನ್ನು ಕವಿಗೆ ಒಂದು ರಸನಿಮಿಷದಲ್ಲಿ 'ಸೂಚಿಸಿರ'ಬಹು ದೆಂಬ ಭಾವನೆ ನನಗಾಗಿದೆ. ಅದೇನೆ ಇರಲಿ. ನಿಸರ್ಗದ ಹಾಗೂ ಜನಜೀವನದ

ಸಜೀವ ಸಂಬಂಧವನ್ನು ಕಂಡುಕೊಂಡಿದ್ದಾರೆ ಕವಿ ಕಾವ್ಯಾನಂದರು ಎಂಬುದಕ್ಕೆ ಇದು ನಿದರ್ಶನ.

ಇನ್ನು ಕವಿಯ ಪ್ರತ್ಯಕ್ಷ ಪರಿಚಯವು ಎರಡು ಮೂರು ಸಾಂಸ್ಕೃತಿಕ ಸಂದರ್ಭಗಳಲ್ಲಿ ನನಗೆ ಉಂಟಾದ ನೆನಪು ಈಗ ಸಹಜವಾಗಿಯೇ ಮನಸ್ಸಿಗೆ ಸುಳಿದು ಬರುತ್ತದೆ. ಅವುಗಳಲ್ಲಿ ಒಂದು ಸಂದರ್ಭವು ಸತ್ಕಾರದ ಸಂದರ್ಭ. ಆಗ ಕವಿ ಕಾವ್ಯಾನಂದರು ಸಭೆಯ ವಿನಂತಿಯ ಮೇರೆಗೆ 'ಮೊದಲು ಮಾನವನಾಗು' ಎಂಬ ಕವಿತೆಯನ್ನು ಪರಿಣಾಮಕಾರಕವಾಗಿ ಓದಿದರು. ಈ ಕವಿತೆಯನ್ನು ಒಳಗೊಂಡ 'ಮೊದಲು ಮಾನವನಾಗು -' ಎಂಬ ಕವನ ಸಂಗ್ರಹದ ಬಗೆಗಿನ ಮೆಚ್ಚಿಕೆಯನ್ನು ಈ ಬರೆಹದಲ್ಲಿ ಮೂಡಿಸಿದ್ದೇನೆ.

'ಮೊದಲು ಮಾನವನಾಗು' ಎಂಬ ಕವನ ಈ ಸಂಗ್ರಹದಲ್ಲಿ ಸೇರಿದ ಕೊನೆಯ ಕವನ. ಕವಿತೆಯ ಮೂರೂ ಪದ್ಯಗಳಲ್ಲಿ 'ಮೊದಲು ಮಾನವನಾಗು' ಎಂಬ ಚರಣ ಸಲ್ಲಲಿತ ಪಲ್ಲವಿಯಾಗಿ ನುಡಿದಿದೆ ; ಕೇಂದ್ರ ಭಾವವಾಗಿ ಮಿಡಿದಿದೆ. ಈ ಕವಿತೆಯು 'ಸಂದೇಶವ'ವನ್ನೂ ಭಾರತೀಯ ಸಂಸ್ಕೃತಿಯ ನಿಲವನ್ನೂ ಸಾರವತ್ತಾಗಿ ತಿಳಿಯಪಡಿಸಿದೆ. ಹೌದು ಮಾನವನಿಗೆ ಮಾನವೀಯತೆ ಮುಖ್ಯ. ಆತನ ಅಂತಃಕರಣ ಅರಳಿದಷ್ಟೂ ಮಾನವತೆಯ ವಿಕಾಸಕ್ಕೆ ಆಸ್ಪದವುಂಟಾಗುತ್ತದೆ. ನಮ್ಮ ನಮ್ಮ ಜೀವನ ವೃತ್ತಿ ಏನೇ ಆಗಿರಲಿ ; ನಮ್ಮ ನಮ್ಮ ಸಂಪ್ರದಾಯದ ಧರ್ಮ ಯಾವುದೇ ಆಗಿರಲಿ ; ನಮ್ಮ ನಮ್ಮ ವೈಯಕ್ತಿಕ ಆಸಕ್ತಿ, ಗತಿ ಮತಿಗಳು ಯಾವುವೇ ಆಗರಲಿ ; ಮಾನವೀಯತೆ ಮಾನವನ ವಿಶಾಲ ಜೀವನದದ ಧರ್ಮವಾಗಬೇಕು; ಮೊದಲು ಮಾನವನಾಗುವುದೇ ಮಾನವ ಜೀವನದ ಮರ್ಮ ಈ ಕವಿತೆ. ಈ ದೃಷ್ಟಿಯಿಂದ ನಮ್ಮ ಬುದ್ಧಿ ಭಾವಗಳೆರಡನ್ನೂ ಹುರಿಗೊಳಿಸುವಂತೆ ಔಚಿತ್ಯಪೂರ್ಣವಾಗಿ ರಚಿತವಾಗಿದೆ. ಈ ಬಗೆಗೆ ಕವಿತೆಯ ಒಂದು ಪದ್ಯವನ್ನು ಇಲ್ಲಿ ಗಮನಕ್ಕೆ ತಂದರೆ ಸಾಕು.

ರಾಜಕಾರಣಿಯಾಗು
ರಾಷ್ಟ್ರ ಭಕ್ತನೆ ಆಗು
ಕಲೆಗಾರ ವಿಜ್ಞಾನಿ ವ್ಯಾಪಾರಿಯಾಗು
ಏನಾದರೂ ಆಗು
ನೀ ಬಯಸಿದಂತಾಗು
ಏನಾದರೂ ಸರಿಯೆ, ಮೊದಲು ಮಾನವನಾಗು

ಈ ಕವಿತೆಯ ಭಾವ ಹಾಗು ಅಭಿವ್ಯಕ್ತಿಯ ರೀತಿ–ಎರಡೂ ಸುಂದರವಾಗಿದ್ದಂತೆ ಬಂಧುರವಾಗಿದೆ. ಇನ್ನು ಈ ಸಂಗ್ರಹದ ಮೊದಲ 'ಕವಿತೆ–ಅಸಹಜವೇನಲ್ಲ'—ಕೂಡ ಜೀವನದ ಮರ್ಮವನ್ನು ಬಗೆಗೆತ್ತಿ ತೋರುವಂತೆ ರಚಿತವಾಗಿದೆ. ಒಂದು ಆವರಣದಲ್ಲಿ ಅರಳಿದ ಜೀವನದ ರೀತಿ ಇನ್ನೊಂದು ಆವರಣದಲ್ಲಿ ರೂಪತಳೆದ ಇನ್ನೊಂದು ಬಗೆ,

ಇವು ಕಾಣಲು ಬೇರೆಯೆನಿಸಿದರೂ ಪರಿಣಾಮದಲ್ಲಿ ತಮ್ಮ ತಮ್ಮ ಸಹಜವಾದ ಅಂದವನ್ನೂ, ಜೀವನ ಸಾಫಲ್ಯವನ್ನೂ ಒಳಗೊಂಡಿರಬಹುದು ಎಂಬ ಭಾವವನ್ನು ಈ ಕವಿತೆ ಚೆನ್ನಾಗಿ ಬಿಂಬಿಸಿದೆ. ಎಂಟು ಚರಣಗಳು ಈ ಕವಿತೆಯ ಕೊನೆಯ ನಾಲ್ಕು ಚರಣಗಳನ್ನು ಇಲ್ಲಿ ಉದ್ಧರಿದರೆ ಸಾಕು ಈ ಮಾತು ಮನದಟ್ಟಾದೀತು :

ಜೀವನದ ವನದಲ್ಲಿ ಭಾವಸುಮಕುಲವಂತೆ
ಆಶ್ಚರ್ಯ ಕೆಲವರಿಗೆ, ಅಸಹಜವೇನಲ್ಲ,
ಬಗೆಯ ಸಿರಿ ಬನದಲ್ಲಿ ಜಗವೆ ಅರಳಿಹುದಂತೆ
ಆಶ್ಚರ್ಯ ಕೆಲವರಿಗೆ ; ಅಸಹಜವೇನಲ್ಲ.

ಕವಿ ಕಾವ್ಯಾನಂದರ ಕಲ್ಪನಾ ನೈಪುಣ್ಯವನ್ನು, ಸೌಂದರ್ಯಪ್ರಜ್ಞೆಯನ್ನು, ರಚನಾ ಕೌಶಲ್ಯವನ್ನು ಅವರ ಅತ್ಯಂತ ಕಿರಿ ಕವಿತೆಯಾದ 'ತಾಜಮಹಲ'ನಲ್ಲಿ ಕಾಣಬಹುದಾಗಿದೆ ; ಈ ಹನಿಗವಿತೆ ಒಂದು ಅತ್ಯಂತ ಸುಂದರವಾದ ಕಲ್ಪನಾ ಬಿಂಬವನ್ನು ನಾಲ್ಕೇ ನಾಲ್ಕು ಚರಣಗಳಲ್ಲಿ ಕಲಾಮಯವಾಗಿ ಎತ್ತಿತೋರಿ 'ತಾಜಮಹಲಿನ' ಒಲವು ಚೆಲುವುಗಳ ದರ್ಶನಮಾಡಿಸಿದೆ. ನೋಡಿ:

ಶಿಲೆಯ ಹಾಲಿಗೆ ಕಲೆಯ ಹೆಪ್ಪು ಹಾಕಿ
ಕಡೆಯೆ ಕುಶಲತೆಯೆಂಬ ಕಡೆಗೋಲನಿಕ್ಕಿ
ಹರಿದುದಾಕಡೆ ತಕ್ರ ಯಮುನೆಯಾಗಿ
ಮೆರೆದುದೀ ಕಡೆ ಬೆಣ್ಣೆ ತಾಜಮಹಲಾಗಿ

ಈ ಕಲ್ಪನಾ ಬಿಂಬದ ನೈಪುಣ್ಯವನ್ನು ಮನಕ್ಕೆ ತಂದುಕೊಂಡಾಗ ಇದರ ವೈಶಿಷ್ಟ್ಯವು ಗಮನಕ್ಕೆ ಬಂದೀತು.

ಈ ಕವನ ಸಂಗ್ರಹದ ಕೆಲವೊಂದು ಕವಿತೆಗಳಲ್ಲಿ ಕಾವ್ಯಾನಂದರು ಮೆಚ್ಚಿದ ಕೆಲವೊಂದು ಒಳ್ಳೆಯ ಜೀವನ ಸೂತ್ರಗಳನ್ನು ಗುರುತಿಸಬಹುದು. ಇಂಥ ಕವಿತೆಗಳಲ್ಲಿ 'ಅವಿಭಕ್ತಂ ವಿಭಕ್ತೇಷು,' 'ಕನ್ನಡ ಕುಲ', 'ಸಹೃದಯನಿಗೆ' 'ಮೊದಲು ಮಾನವನಾಗು'—ಇವು ಮುಖ್ಯವಾದವುಗಳು. 'ಅವಿಭಕ್ತಂ-ವಿಭಕ್ತೇಷು' ಎಂಬ ಕವಿತೆಯ ಒಂದು ಪದ್ಯವನ್ನು ಪರಿಶೀಲಿಸಿ ಈ ಬಗೆಯನ್ನು ಅರಿಯಬಹುದು :

ಅವಿಭಕ್ತಂ ವಿಭಕ್ತೇಷು
ಇದರಲ್ಲಿಯೆ ನಮಗೆ ಲೇಸು
ಎಲ್ಲೆ ಇರು, ಏನೆ ಮಾಡು
ಇದೇ ಮಂತ್ರ ಜಪಿಸು
ಇದೇ ಸೂತ್ರವನ್ನು ಜಪಿಸು
ಅವಿಭಕ್ತಂ ವಿಭಕ್ತೇಷು
ಕಾಶ್ಮೀರದ ಕಣಿವೆಯಲ್ಲಿ

ಕೇರಳದ ಕುಟೀರದಲ್ಲಿ
ಭಾರತದೆಲ್ಲಲ್ಲ ಕಡೆಗೆ
ಇದೇ ಮಂತ್ರ ಘೋಷವಿರಲಿ
ಇದೇ ನಾದ ಕೇಳುತಿರಲಿ
ಅವಿಭಕ್ತಂ ವಿಭಕ್ತೇಷು
ಅವಿಭಕ್ತಂ ವಿಭಕ್ತೇಷು

ಪಲ್ಲವಿ ಹಾಗು ಪ್ರಾಸ ಈ ಬಗೆಯ ಪದ್ಯಗಳಲ್ಲಿ ವಹಿಸುವ ಪಾತ್ರದಿಂದಾಗಿ ಅವುಗಳ ಭಾವಕ್ಕೆ ಒಂದು ಖಚಿತತೆ ಪ್ರಾಪ್ತವಾಗಿದೆ ಎಂದೆನಿಸುತ್ತದೆ ತಾನೆ ? ವಿವಿಧ ಭಾಷೆ, ಸಾಹಿತ್ಯ, ಧರ್ಮತತ್ವಗಳನ್ನೊಳಗೊಂಡ ನಮ್ಮ ಭಾರತದಲ್ಲಿ ಎಲ್ಲೆಡೆಗೂ ಸುಳುಹು ದೋರುವ ಸುಸಂಸ್ಕೃತಿ ಭಾವೈಕ್ಯಕ್ಕೆ ನೆರವಾಗಬಲ್ಲುದೆಂಬ ನಂಬಿಗೆ ಇಲ್ಲಿ ನುಡಿ ಪಡೆದಿದೆ.

"ನಮ್ಮ ಮನೆಯಲ್ಲಿಯೇ ಹೆರವರಾದೇವು ನಾವು" 'ಕೆಸರಾಟ' 'ಒಂದು ಹೆಜ್ಜೆ ಮುಂದೆ ಎರಡು ಹೆಜ್ಜೆ ಹಿಂದೆ' ಮೊದಲಾದ ಒಂದೆರಡು ಕವಿತೆಗಳಲ್ಲಿ ಸಲ್ಲದುದರ ಬಗೆಗೆ ಒಂದಿನಿತು ವಿಡಂಬನೆ ಸಹಜವಾಗಿಯೇ ಕಾಣಿಸಿಕೊಂಡಿದೆ. ಅಭಿವ್ಯಕ್ತಿಯ ರೀತಿಯಲ್ಲಿ ವೈವಿಧ್ಯವನ್ನು ತೋರಿದೆ.

'ಕಂಡೆ ಅನ್ಯದಿ ನನ್ನನು' 'ಹೇಗೆ ಸಾಗುವುದು ಹೇಳುವಿಯಾ ? 'ಕಾಲನ ಕರೆ' 'ಹೃದಯ ನಿಕ್ಷೇಪ' ಮೊದಲಾದವುಗಳಲ್ಲಿ ಕಾವ್ಯಾನಂದರ ಜೀವನಾನುಭವವು ಹದುಳ ವಾಗಿ ಮೈದೋರಿದೆ 'ಹೃದಯ ನಿಕ್ಷೇಪ' ಎಂಬ ಭಾವಗೀತವು ಯಾವ ಕಾಲವೇನು ? ಯಾವ ದೇಶವೇನು ?–ಎಲ್ಲೆಲ್ಲೂ ನೆರವಾಗಿ ನಿಲ್ಲ ಬಲ್ಲ ಹೃದಯದ ಸಂಪದ. ಭಾವ ದಂತೆ ಅಭಿವ್ಯಕ್ತಿಯೂ ಸಂಪದ್ಯುಕ್ತವಾಗಿದೆ,

ಈ ಕವನ ಸಂಗ್ರಹಕ್ಕೆ ಮುನ್ನುಡಿ ಬರೆದ ಡಾ. ವ್ಹಿ. ಕೆ. ಗೋಕಾಕ ಅವರು ನುಡಿದಂತೆ ಕವಿ ಕಾವ್ಯಾನಂದರ "ಕಾವ್ಯದ ಮೇಲ್ಮೆ ವಿಶೇಷವಾಗಿ ನಿಸರ್ಗೋಪಾಸನೆ ಹಾಗು ಮಾನವಾಂತಃಕರಣದ ಅಭಿವ್ಯಕ್ತಿಯಲ್ಲಿ ಒಡಮೂಡುತ್ತದೆ. ಮಾನವಾಂತಃ ಕರಣವೇ ಈ ಸಂಗ್ರಹದ ಪ್ರಧಾನವಾಸ್ತುವಾಗಿದೆ.

ಒಟ್ಟಿನಲ್ಲಿ ಕವಿ ಸಿದ್ಧಯ್ಯ ಪುರಾಣಿಕ ಅವರ ಭಾವಗೀತಗಳಲ್ಲಿ ಹೃದಯವಂತಿಕೆ ಹಾಗೂ ವಿಚಾರವಂತಿಕೆಗಳ ಸಮತಾನ ಸುಳಿದು ಬಂದು ಅವುಗಳಿಗೆ ಸರಿಯಾದ ಜೀವ ಕಳೆಯನ್ನು ತಂದುಕೊಟ್ಟಿದೆ. ಉತ್ತಮ ಕವಿತೆಗಳಲ್ಲಿರಬೇಕಾದ ಸವಿಭವಿಗಳನ್ನು ಅವು ಗಳಲ್ಲಿ ಗುರುತಿಸಬಹುದು. ಇದರಂತೆಯೇ ಅವರ 'ವಚನೋದ್ಯಾನದ' ವಚನರೂಪದ ಗೀತಗಳಲ್ಲಿ ಇದೇ ಬಗೆಯ ಒಳ್ಳೆಯ ಗುಣವಿಶೇಷವು ನಿಚ್ಚಳವಾಗಿ ಕಂಡು ಬರುತ್ತದೆ. ಈ ಎಲ್ಲ ದೃಷ್ಟಿಯಿಂದ ಕಾವ್ಯಾನಂದರ ಸಾಹಿತ್ಯಕಾಣಿಕೆ ಸಾರ್ಥಕತೆಯನ್ನು ಪಡೆದಿದೆ ಎಂಬ ಭಾವನೆ ನನ್ನಲ್ಲಿ ಮೂಡಿ ನಿಂತಿದೆ.

# ಮಾನಸ ಸರೋವರ

ಡಾ. ಬಿ. ಸಿ. ಜವಳಿ.

೧

"ಮಾನಸ ಸರೋವರ"-ಶ್ರೀ ಸಿದ್ಧಯ್ಯ ಪುರಾಣಿಕ ಅವರ ನಾಲ್ವತ್ತೈದು ಸತ್ಕವಿತೆಗಳ ಸಂಕಲನ. ವಿವಿಧ ಭಾವ, ವಿವಿಧ ವಿಷಯಗಳನ್ನು ಕುರಿತು, ಕವಿ ಮನಸ್ಸಿನಲ್ಲಿ ಆಗಾಗ ಎದ್ದ ಭಾವನೆ, ಅಲೆಗಳು ಇಲ್ಲಿ ಕವಿತೆಗಳಾಗಿವೆ. ಸೃಷ್ಟಿಯನ್ನೇ ಮಾಡುವ ಬ್ರಹ್ಮನ ಹಾಗೆ ಕವಿಯ ಮನಸ್ಸು, ಅನೇಕ ಸುಂದರ ಕಮಲಗಳನ್ನು ನಿರ್ಮಿಸುತ್ತದೆ 'ಈ ಮಾನಸ ಸರೋವರ'ದಲ್ಲಿ. ಈ ಮಾನಸ ಸರೋವರದಲ್ಲಿ ಎದ್ದ ಅಲೆ ಅಂದ; ಅರಳಿದ ಹೂ ಚಂದ; ಸೂಸುವ ಗಂಧ ಆಹ್ಲಾದಮಯ. ಸರೋವರದ ಆಳ ವಿಸ್ತಾರಗಳಿಗನುಸರಿಸಿ ಆದರ ಹೊರವ್ಮೈ ಅಂದ ಚಂದಗಳು ಹೊರ ಹೊಮ್ಮು ತ್ತವೆ. ಇಲ್ಲಿ ಅರಳಿದ ಕಲ್ಹಾರಗಳು, ಅವು ಬೀರುವ, ಕಂಪು-ಇವು ಕವಿ ಮಾನಸದ ಆಳ ವಿಸ್ತಾರಗಳನ್ನು ಎತ್ತಿ ತೋರುತ್ತವೆ. ಈ ಕವಿತೆಗಳಲ್ಲಿ ಕೊನೆಯದಾದ ಪದ್ಯವೇ ಈ ಕೃತಿಯ ಶಿರೋನಾಮೆ. ಈ ಕವನವು ಕಾವ್ಯ ಪ್ರತಿಭೆಗೆ ಸಂಬಂಧಿಸಿದುದು. ಶಿವ ಕರುಣೆ ಇಲ್ಲದೇ ಕವಿಮಾನಸ ತುಂಬದು: ಹೊರಚೆಲ್ಲದು; ಕಾವ್ಯಸೃಷ್ಟಿ ಆಗದು ಎಂಬ ಈ ಮಾತು ಶರಣ ಕವಿಗಳಾದ ಹರೀಶ್ವರರಿಂದ ಮೊದಲುಗೊಂಡು ಮಹಾ ಕವಿ ಷಡಕ್ಷರದೇವನವರೆಗೆ ಅವಿರತ ನಡೆದು ಬಂದಿದೆ. ಇಪ್ಪತ್ತನೆಯ ಶತಮಾನ ದಲ್ಲಿ ಕಂಗೊಳಿಸುತ್ತಿರುವ ವೀರಶೈವ ಗಣ್ಯಕವಿಪಂಕ್ತಿಗೆ ಸೇರಿದ ಕಾವ್ಯಾನಂದರು ಆ ಪರಂಪರೆಯನ್ನು ಈ ಮಾತಿನ ಮೂಲಕ ಮುಂದುವರಿಸಿದ್ದಾರೆ, ಕವಿ ಮನಸ್ಸು 'ತೂತು ಬಿದ್ದಿಹ ಮಡಕೆ' ಅನೇಕ ಆಘಾತಗಳಿಂದ ತೂತು ಬಿದ್ದ ಈ ಮಡಕೆ, ಭಾವನೆ, ಕಲ್ಪನೆ, ಚಿಂತನೆಗಳಿಂದ ಮತ್ತೆ ತುಂಬಬೇಕಾದರೆ ಅವಿರತ ಧ್ಯಾನ ಬೇಕು, ಆ ಧ್ಯಾನ ಶಿವಪರವಾಗಿರಬೇಕು. ಆಗ ಕವಿತೆ ಹೊರ ಹೊಮ್ಮುತ್ತದೆ.

ದೈವವು ಅನುಗ್ರಹಿಸುವುದು ಸುಲಭವೇ? ಅಲ್ಲ. ಅದು 'ಕುರುಡು' ಮತ್ತು 'ಪ್ರತಿಕೂಲ' ಎಂಬ ಭಾವ, 'ಕುರುಡು–ದೈವಕ್ಕೆ' ಎಂಬ ಪದ್ಯದಲ್ಲಿ ವ್ಯಕ್ತವಾಗಿದೆ.

ಕವಿಮನಸ್ಸು ಸೋಲನೊಪ್ಪದೆ, ದೇಹಿ ಎನ್ನದೆ, ನಿನ್ನನ್ನೆದುರಿಸಿ ಪಡೆದ ದುಃಖ, ನಿನಗೆ ಮೊಣಕಾಲೂರಿ ಪಡೆವ ಸುಖಕ್ಕಿಂತಲೂ ಮಿಗಿಲು' ಎಂಬ ಧೀರೋದಾತ್ತ ಭಾವ ಈ ಪದ್ಯದಲ್ಲಿ ವ್ಯಕ್ತವಾಗಿದೆ. ದೇವರನ್ನೆದುರಿಸಿಯೂ ದೈವ ಭಕ್ತರೆನಿಸಿಕೊಂಡ ರಾವಣ, ದುರ್ಯೋಧನರ ಭಾವವೇ ಇದು. ಒಂದು ರೀತಿ ದಾಸ ಭಾವಕ್ಕಿಂತ ಈ ವೀರಭಾವ ಮಿಗಿಲಾದುದು. ಬದುಕಿನ ಅನೇಕ ಪೆಟ್ಟುಗಳ ಘಟ್ಟಣೆಗೆ ಪಿಟ್ಟೆನ್ನದೇ, ಹಾ ಎನ್ನದೇ ಸೋಲನೊಪ್ಪದ ಮತಿಯೇ ಕವಿಯ ಆಸೆ. ಮನಸ್ಸು ಹೀಗಿದ್ದಾಗ ದೈವ ಹಾಕುವ 'ಕುರುಪ ಜಯಮಾಲೆಗೆ' ಹಾತೊರೆಯದು. 'ಮನದ ಮಸಣ' ಒಂದು ಸುಂದರ ಕವನ; ಶ್ರೇಷ್ಠ ರೂಪಕ. ಇಂದು ಮೌಲ್ಯಗಳು ಬೂದಿಯಾಗಿ, ಮನ ಮಸಣವಾದುದರ ವರ್ಣನೆ ಈ ಕವಿತೆಯ ವಸ್ತು. ಈ ಸಂಕಲನದಲ್ಲಿಯೇ ಹಿರಿದಾದ ಕವಿತೆ. ಈ ಕವನದಲ್ಲಿ ಕಲೆ-ಕೊಳೆತ ಹೆಣ, ನೀಚತೆಯ ನರಿ, ದೌರ್ಜನ್ಯ ಘೂಕ, ನಗ್ನ ಕಾಮದ ಕೊಳ್ಳಿ ದೆವ್ವ, ಸ್ವಾರ್ಥ ಸರ್ಪ, ನೀತಿ ಪ್ರೇತ, ಆಮಿಷ ನಾಯಿ-ಇವುಗಳಿಂದ ಕೂಡಿ ಮನ ಮಸಣವಾಗಿದೆ. ಆದರ್ಶ ನೀತಿ ಎತ್ತಲೋ ಅವಿತು, ಹಗೆತನದ ಬೆಂಕಿ, ಮಾತ್ಸರ್ಯದ ಹೊಗೆ, ಮಾನದ ವೈಧವ್ಯ, ಸತ್ಯ ಸೌಜನ್ಯಗಳ ಕುಣಿ-ಇತ್ಯಾದಿಗಳಿಂದಾಗಿ ಸುಂದರವಾಗಬಹುದಾಗಿದ್ದ ಈ ಮಾನಸ ಸರೋವರ, ರುದ್ರ ಭೀಕರವಾಗಿದೆ. ಇದಕ್ಕೆ ಕಾರಣ: ಈ ಸರೋವರಕ್ಕೆ ದೈವಾನುಕಂಪಜಲ ಹರಿಯದೆ, ಗಟಾರುಗಳ ನೀರು ಹರಿದುದೇ. ಆದರೆ ಕವಿ ಮನಸ್ಸು ಇಷ್ಟಕ್ಕೆ ನಿಲ್ಲದೆ ಅಲ್ಲಿ ಮತ್ತೆ ಆ ನೀರು ಬರುವುದಕ್ಕೆ ಆಶ್ರಯಕೊಡದೆ, ದೈವೀ ಹಂಬಲವನ್ನು ಕೋರಿದೆ. ಕವಿಯ ಶುಭ ಕೋರಿಕೆಯ ಒಲವು ಇಲ್ಲಿ ಸ್ಪಷ್ಟವಾಗಿ ಕಾಣುತ್ತಿದೆ. ಇಷ್ಟೊಂದು ದಟ್ಟ ಅನಿಷ್ಟ ಜಲ ಇಲ್ಲಿ ತುಂಬಲು ಕಾರಣವಿಲ್ಲವೇ? ಇದೆ. "ಎದೆಯ ತೋಟ" ಎಂಬ ಕವನದಲ್ಲಿ ಅದರ ಸುಳುಹರಿ ಕಾಣುತ್ತದೆ. ಮೊದಲು ಸುಂದರವಾಗಿದ್ದ ಈ ಕೆರೆ ಈಗೇಕೆ ಹೀಗಾಯಿತೆಂದು ಯೋಚಿಸಿದಾಗ, ಬದುಕಿನಲ್ಲಿ ಉಂಟಾಗುವ ದಾಸ ಬುದ್ಧಿಯ ಸೆಕೆ, ಕ್ಲೇಶ ಕಂಟಕ, ದೋಷ ಕೀಟಕ, ಮೋಸ ಮೂಷಕ ದ್ವೇಷ ದುರಿತ, ಶೋಷಣೆ, ಮತಿಹೀನ ಜನಮತ, ಇತ್ಯಾದಿ-ನಾನಾ ಕಾರಣಗಳು "ನಂದನವನ ದಂತಿದ್ದ ಕವಿಯ ಎದೆಯ ತೋಟವನ್ನು ಬಂಜರು ಭೂಮಿಯನ್ನಾಗಿ ಮಾಡಿವೆ. ಕವಿ ಮನಸ್ಸು ಹೀಗಾದರೂ ವ್ಯಥೆ ಪಡುವದಿಲ್ಲ, ಚಿತ್ತ ಭೂಮಿ ಮತ್ತೆ ಫಲವತ್ತಾಗಿ, ಹೃದಯಾರಾಮ ಮತ್ತೆ ಕೊನರಬಹುದೆಂಬ ಆಸೆಯನ್ನು ತಳೆದಿದೆ. ಪ್ರತಿ ದಿನವೂ ಬದುಕು ಭಾರವಾದಾಗ ಇಂತಹ ಆಶಾ ನಿರೀಕ್ಷೆ ಸಂತೃಪ್ತಿಯನ್ನೊದಗಿಸುತ್ತದೆ. ಈ ಕವನ ಅಲ್ಲಮಪ್ರಭುವಿನ "ನಾನೊಂದು ತೋಟವ ಮಾಡಿದೆನಯ್ಯಾ" ಎಂಬ ವಚನ ವನ್ನು ನೆನಪಿಸುತ್ತದೆ. ಕವಿ "ಹೊತ್ತಿಸು" ಎಂಬ ಕವನದಲ್ಲಿ ಮನಕೆ ಕತ್ತಲೆ ಆವರಿಸ ದಿರಲಿ; ಅಲ್ಲಿ ಶ್ರದ್ಧೆ ಬಲಿತು ದೀಪವಾಗಿ ಉರಿದು ಆಸೆಯಾಗಲಿ ಇಂಥ ನಿನ್ನ ಶ್ರದ್ಧೆ ಯನ್ನು ಸದಾ ಒದಗಿಸು ಎಂಬ ಆಧ್ಯಾತ್ಮಿಕ ಚಿಂತನಪರ ಕವಿ ಮನಸ್ಸನ್ನು ಕಾಣುತ್ತೇವೆ. ಧ್ಯಾನಪರ ಮನಸ್ಸು, ದೇವರನ್ನು ಕೂಟ ವಿರಹಗಳ ಮೂಲಕ ಸಂದರ್ಶಿಸುತ್ತದೆ;

ಕವಿ ಮನಸ್ಸು ವಿರಹ ಭಕ್ತಿಗೆ ಆಶಿಸುತ್ತದೆ. ಕಾರಣ: ಒಲವು ಎದುರಿಗಿದ್ದರೆ ತುಕ್ಕು ಹಿಡಿದಂತೆ. ಅದು ವಿರಹಾಗ್ನಿಯಲ್ಲಿ ದಗ್ಧವಾದಾಗ ತಪ್ತ ಕಾಂಚನದಂತೆ, ಉರಿವ ಚಂದನದಂತೆ. ಆದುದರಿಂದ ಅಗಲಿ ಕೂಡುವ ಸೊಗಸಿಗಿಂತ ಕೂಡಿ ಅಗಲುವ ದುಃಖವೇ ಲೇಸು ಎಂಬ ಭಕ್ತನ ಮಧುರ ವಿರಹ ಭಾವ ವ್ಯಕ್ತವಾದುದನ್ನು ಇಲ್ಲಿ ಕಾಣುತ್ತೇವೆ.

೨

ಕವಿ ಮನ ಮಸಣವಾದುದು ಚಿಗುರುವುದಿಲ್ಲವೇ? ಚಿಗುರುತ್ತದೆ. ಅದಕ್ಕೆ ಸೂಕ್ತ ಸನ್ನಿವೇಶ ಬೇಕಲ್ಲವೇ? ಯಾವುದೋ ಕವಿತೆ, ಕಾವ್ಯ, ಕವಿಯಿಂದ ಹೊರ ಹೊಮ್ಮಬೇಕಾದರೆ ಸ್ಫೂರ್ತಿದಾಯಕ ಸನ್ನಿವೇಶ, ಇಲ್ಲವೆ ಮಹಾನಂದಕರ ದೃಶ್ಯ ಕವಿಕಣ್ಣಿಗೆ ಬಿದ್ದಾಗ, ಸಹಜವಾಗಿ ಹದಗೊಂಡ ಹೊಲಕ್ಕೆ, ಮಳೆಬಿದ್ದಾಗ ಬಿತ್ತಿದ ಬೀಜ ಮೊಳೆವಂತೆ, ಕವಿತೆ ಹೊರಹೊಮ್ಮುತ್ತದೆ. 'ಮಾನಸ ಸರೋವರ'ದಲ್ಲಿ ಅಂತಹ ಪದ್ಯಗಳು ಹಲವು ಇವೆ. 'ಕೂಡಲಸಂಗಮ' 'ವೃಂದಾವನ' 'ಬೆಂಗಳೂರ ಹುಡಿಗೆ' ಈ ದಿವ್ಯ, ಸುಂದರ ತಾಣಗಳನ್ನು ಕಂಡಾಗ ಕವಿ ಮನ ಜಿಂಕೆಯು ಜಿಗಿತದ ಹಾಗೆ ಪುಟಿಯುತ್ತದೆ; ಬತ್ತಿದ ಕಾವ್ಯಸೆಲೆ ಮೇಲೆ ಹಾರುತ್ತದೆ. ಎಂತಹರನ್ನೂ ಮನ ಸೆರೆ ಹಿಡಿವ ಬೃಂದಾವನದ ದೀಪದ ಸಾಲು, ಕವಿ ಕಣ್ಗೆ ಕನ್ನಡಿಗರ ಕನಸು; 'ಇಂದ್ರಜಾಲ' 'ನಂದನವನ', ಹೊರಗಿನ ಈ 'ದೀಪಮಾಲೆಯು ಒಳಗೆ ಕಟ್ಟು'; ಜನ ಬೆರಗಾಗಲಿ. "ನನ್ನಿಯು ನದಿ ಒಡ್ಡನು ಕಟ್ಟು; ಭಾವನೆಗಳ ನೆಟ್ಟು, ಸೊಬಗಿನ ಹೂ ಬೆಳೆ"ಯುವ ಆಸೆ ವ್ಯಕ್ತಪಡಿಸಿದ್ದಾರೆ 'ಬೆಂಗಳೂರ ಹುಡಿಗೆ' ಯರ ಬೆಡಗಿನ ನಡಿಗೆ, ಒನಪು ಒಯ್ಯಾರಗಳ ತೊಡಿಗೆ, ಬಣ್ಣಬಣ್ಣದ ಮನಕೋರೈಸುವ ಉಡಿಗೆ, ಮುದುಕರ ಮನಕ್ಕೂ ನಡುಕವನ್ನುಂಟುಮಾಡುತ್ತವೆ! ನೆಲಕ್ಕೆ ನವಿರು, ನಭಕ್ಕೆ ಹೊಗರು, ಗಾಳಿಗೆ ಗಂಧವನ್ನುಂಟುಮಾಡುತ್ತವೆ. ಆ ರಮಣೀಯ ರಮಣಿಯರ ನಡಿಗೆಯಿಂದ ಬೀದಿ ಘಮಘಮ, ಜನರ ಮನ ಝಗ ಝಗ! ಪ್ರಭುಲಿಂಗ ಲೀಲೆಯ ಮಾಯಾದೇವಿ, ಮಧುಕೇಶ್ವರ ಪೂಜೆಗೆ, ಬನವಸೆ ನಗರದಲ್ಲಿ ನಡೆದಾಗ ಕಂಡ ದೃಶ್ಯ, ಇಲ್ಲಿ ಗೋಚರ. 'ಕೂಡಲ ಸಂಗಮ' ತಾತ್ವಿಕ ಪ್ರತಿಕ್ರಿಯೆಯನ್ನೊಳಗೊಂಡ ಕವನ ಬದುಕಿನ ಲೇಸನ್ನು. ಕಾಣುವಲ್ಲಿ, ಮಾಡುವಲ್ಲಿ, ಹಾರೈಸುವಲ್ಲಿ, ಕೂಡಲಸಂಗಮ ಕಾಣಬೇಕು. "ಹೇಸಿ ಕಾಶಿಗೆ ಹೋದಂತೆ" ಆಗಬಾರದು ಎನ್ನುವ ಭಾವ ಕವಿಯದಾಗಿದೆ ಇಲ್ಲಿ. ಕೂಡಲಸಂಗಮ ದರ್ಶನ, ನಮ್ಮಲ್ಲಿ, "ಸರ್ವವೂ ಶಿವವೆನ್ನುವುದೇ ಧರ್ಮ; ಅನ್ಯರ ಅಳಲಿಸದ ಕರ್ಮವೇ ಕರ್ಮ" ಎಂಬ ಭಾವನೆಯನ್ನು ರೂಪಿಸಬೇಕು: ಬಸವಣ್ಣನವರ ಉದಾತ್ತ ತತ್ವ ಚಿಂತನೆ ನಮ್ಮಲ್ಲಿ ಹೊರಹೊಮ್ಮಬೇಕು ಎಂಬ ಭಾವವುಳ್ಳದಾಗಿದೆ ಈ ಕವನ. ವಿಶಾಲ ಮನೋಭಾವಕ್ಕೆ ಸಾಕ್ಷಿ.

ಸುಂದರ ತಾಣಗಳನ್ನು ಕಂಡಾಗ ಕವಿತೆ ಮೈದೋರುವಂತೆ, ಕೆಲವು ಮಹತ್ವದ ದಿನ (ಸಂದರ್ಭ) ಬಂದಾಗಲೂ ಹಾಗೆಯೇ. 'ಕೋವಿಯ ಕೋರಿಕೆ', 'ಸರದಾರಗೆ ಶ್ರದ್ಧಾಂಜಲಿ,' 'ನಮನ', ಕನ್ನಡದ ದೀಪ', 'ಸ್ವಾತಂತ್ರ್ಯದ ಸಪ್ತವರ್ಷ', 'ರಾಷ್ಟ್ರ ರಾಜೇಶ್ವರಿ' — ಇವೇ ಕವನಗಳು ಇದಕ್ಕೆ ನಿದರ್ಶನ. ಮಹಾವ್ಯಕ್ತಿಗಳ ಸಾವು, ಮಹಾದಿನದ ಆಚರಣೆ–ಎಂತೆಂತಹರಲ್ಲೂ ಭಾವನೆಗಳನ್ನು ಕುದುರಿಸುತ್ತವೆ ಎಂದ ಮೇಲೆ ಕವಿಯಲ್ಲಿ ಕುದುರದಿರವೇ ? 'ಕೋವಿಯ ಕೋರಿಕೆ'ಯಲ್ಲಿ ಯಾವ ಕೋವಿ, ಗಾಂಧೀಜಿಯು ಅಸ್ತಂಗತರಾಗಲು ಕಾರಣವಾಯಿತೋ, ಅದು ಜನಿಸಿದ ಮುಹೂರ್ತವೇ ಸುಮಾರು · ಗೈದಕಾರ್ಯ ಕ್ರೂರ, ಪಾಪಮಯ–ಎಂದೆನಿಸುವುದು ನಮಗೆ ಅಚ್ಚರಿಯಲ್ಲ ; ಆದರೆ ಈ ಭಾವ ಕೋವಿಗೆ ಆದುದೇ ಅಚ್ಚರಿ. ಕೋವಿ ಎಂತಹ ದಾರುಣಕೃತ್ಯವೆಸಗಿತಲ್ಲ ಎಂದು ಕಳವಳಿಸಿದ ಕವಿಮನ, ರಾಜಘಾಟದ ಗಾಂಧೀ ಸಮಾಧಿಗೆ ದರ್ಶನವಿತ್ತಾಗ, ದಿವಂಗತ ಮಹಾತ್ಮನಿಗೆ, 'ನಮನ' ಸಲ್ಲಿಸಿದೆ–ಇಲ್ಲಿ. ಇದರ ಹಾಗೆಯೇ "ಉಕ್ಕಿನ ಮನುಷ್ಯ"ನೆಂದು ಹೆಸರುವಾಸಿಯಾದ ದಿವಂಗತ 'ಸರದಾರ ಪಟೇಲರಿಗೆ ಶ್ರದ್ಧಾಂಜಲಿ' ಅರ್ಪಿಸಿದುದು ರಾಷ್ಟ್ರಪ್ರೇಮ ಪೋಷಕವೇ. ಸರದಾರರನ್ನು, ಈ ಕವನದಲ್ಲಿ, "ವೈರಿ ಗಜಸಿಂಹ", "ಸತ್ವಧೈರ್ಯದ ಅಸು", "ಕರ್ತವ್ಯ ಮೂರುತಿ" ಎಂದು ಕರೆದುದಲ್ಲದೆ, ಅವರನ್ನು, ಸೋಲರಿಯದ ಶೂರ, ದೀನಬಂಧು, ಕ್ಷಮಾಶೀಲ, ಸ್ವಾತಂತ್ರ್ಯ ರಕ್ಷಿಸಿದ ಹೆಬ್ಬುಲಿ–ಎಂದು ಬಹುಸೂಕ್ತ ಪದಗಳಿಂದ ಸಂಬೋಧಿಸಲಾಗಿದೆ. ಹೂಂಕಾರ ಮಾತ್ರದಿಂದ ಭಾರತದ ರಕ್ಷಣೆ ಮಾಡಿ, 'ಏಕತೆ' ತಂದುಕೊಟ್ಟವನವನು. ಪಟೇಲ್ ಬಾಪು ಅಗಲದ ಮುನ್ನವೇ ಅಗಲಿದುದು ಕವಿಗೆ ಕಳವಳಕಾರಿ. ಪಟೇಲರ ನೆನಹು ನಮ್ಮಲ್ಲಿ ಸ್ವಾಭಿಮಾನವನ್ನು ದೀಪಿಸಿ, ಸ್ವಾತಂತ್ರ್ಯದ ಭಾವವನ್ನು ಜಾಗ್ರತಗೊಳಿಸುತ್ತದೆ ಈ ಕವನ–ಓದಿದಾಗ. ಪಟೇಲರ ಶುದ್ಧಧವಳಿತ ಮನ, ನಾಡಿನ ನಾಯಕರಲ್ಲುದಿಸಲಿ. "ನಮನ" ಎಂಬ ಕವನ ಇದೇ ಭಾವ, ಇದೇ ಮಾಲಿಕೆಗೆ ಸೇರಿದುದು. ಕರ್ನಾಟಕದ ಖ್ಯಾತ ಶಿಕ್ಷಣಪ್ರೇಮಿ, ಅಜಾತ ಶತ್ರುವಿನಂತಿದ್ದ ಉತ್ತುಂಗ ಸಾಹಿತಿ, ಲಿಂಗೈಕ್ಯ ಬಸವನಾಳರನ್ನು ಕುರಿತಾದುದು. ಬಸವನಾಳರು ಬಸವನ ಆಳಾದವರು ; ಶರಣಜನರು. ನಡೆ-ನುಡಿ ಒಂದಾದ ಆಧುನಿಕ ಶರಣರು. ಅವರು ನಾಡ ನಂದಾದೀಪ. ಔದಾರ್ಯ, ಮಾಧುರ್ಯ, ಆತ್ಮದೈಶ್ವರ್ಯ, ಶೀಲಸೌಂದರ್ಯ, ಚಿತ್ತಸ್ಥೈರ್ಯ, ಇವು ಅವರ ಮುಖ್ಯಗುಣಗಳು. ಕರದಲ್ಲಿ ಕ್ರಿಯೆ ತುಂಬಿ, ಉರದಲ್ಲಿ ಪ್ರೀತಿ ತುಂಬಿ, ಶಿರದಲ್ಲಿ ಜ್ಞಾನ ತುಂಬಿ, ಮೊಗದಲ್ಲಿ ಶಾಂತಿ ತುಂಬಿ, ಕಣ್ಣಲ್ಲಿ ಕಾಂತಿ ತುಂಬಿ, ಬಾಳಿದ ತುಂಬು ಜೀವಿ ಅವರು. ಬಿರುದು ಬಾವುಲಿಗಾಗಿ ಹೋರಾಡದೆ ತತ್ವನಿಷ್ಠೆಗೆ ಹೋರಾಡಿದ ಕಲಿ. 'ಕೇಡು ಬಗೆದವನಿಗೂ ಹಿತಮಾಡು' ಎನ್ನುವ 'ಯೇಸುಮನ' ಅವರದು. ಪ್ರಸನ್ನಮುಖ, ಹಿತಮಿತ ವಚನ, ಮಧ್ಯಮತನುವಿದ್ದ ಈ ಮಹಾತ್ಮ, ಸಾಹಿತ್ಯ

ಶೋಧಕ, ತತ್ವಬೋಧಕ, ಶಿವದ ಆರಾಧಕ ಎಂದು ಕವಿ ನಮನ ; ಅದು ಬಹುಸ್ತುತ್ಯ, ಬಹುಸೂಕ್ತ. ಕವಿ ತೋರಿದ ಸಾಹಿತ್ಯಪ್ರೇಮ ಅಭಿಮಾನಾಸ್ಪದ.

ಇನ್ನು ಕವಿಮನ ಚಿಗುರಿಸಿದ ಸಂಭ್ರಮದ ಸಂದರ್ಭಗಳೆಂದರೆ : ರಾಜ್ಯೋದಯ. ಸ್ವಾತಂತ್ರ್ಯೋತ್ಸವ, ಗಣರಾಜ್ಯ ದಿನೋತ್ಸವಗಳು. 'ಕನ್ನಡದ ದೀಪ' ಎಂಬ ಕವಿತೆ ಹೊರಹೊಮ್ಮಿದುದು ಕರ್ನಾಟಕ ಒಂದಾದಂದು. ಈ ದೇದೀಪ್ಯಮಾನ ದೀಪ, ಕನ್ನಡಿಗರ ಜ್ಯೋತಿರ್ನಿಧಾನ ; ಕನ್ನಡಿಗರ ಪ್ರಾಣ ; ಕನ್ನಡ ಮಾನ. ಶತ ಶತಮಾನಗಳ ಶಾಪವನ್ನು ನೀಗಿ, ಹೊತ್ತಿದೆ ; ಆ ದೀಪದಿಂದ 'ಭೂ ಗಗನ ಬೆಳಕಿನಲಿ ಮಿಂದಿದೆ' ; ಇದು ನಂದದಂತಿರಲು ಇಂದು ಅದಕ್ಕೆ ಎಣ್ಣೆಯಾಗಿ, ಬತ್ತಿಯಾಗಿ, ಹಣತೆಯಾಗಿ ಉರಿವವರು ಬೇಕು. ಈ ದೀಪ ಕನ್ನಡಿಗರ ಸ್ವೈಪ ಬೆಳಸುವ ದೀಪವಾಗಲಿ-ಎಂಬ ಭೂಮಭಾವದ ಕವಿ ಹಾರೈಕೆ ವ್ಯಕ್ತವಾಗಿದೆ ಇಲ್ಲಿ. 'ಸ್ವಾತಂತ್ರ್ಯದ ಸಪ್ತವರ್ಷ' ಸ್ವಾತಂತ್ರ್ಯದ ನಂತರ ಭಾರತ ಸಾಧಿಸಿದುದರ ಗಣಿತವಿದು.* ಎಲ್ಲೆಲ್ಲೂ ಸರಸ ಹರುಷ, ಗರ್ವದಿಂದ ಕೇಕೆ ಹಾಕುವ ದನಿ. ಆದರೆ ಈ ಸಪ್ತವರುಷಗಳಲ್ಲಿ ನಡೆದುದೇನು? ಜಾತೀಯ ಜ್ವಾಲೆಗಾಹುತಿಯಾಗಿ ಚೀತ್ಕರಿಸುವ ನಿರಾಶ್ರಿತರ ಸುಯ್ಲಿನ ಸೊಲ್ಲು ; ಮಾತೆಯ ದೇಹ ಸೀಳಿ ಅಸ್ಥಿಗಳು ಲಟಲಟನೆ ಮುರಿದ ಸದ್ದು; ಸತೀತ್ವದ ಹರಣದ ಸದ್ದು; ಸಂಸ್ಥಾನಿಕರ ಸೊಲ್ಲಡಗಿಸಿದ ಪಟೇಲರ ಗರ್ಜನೆ ; ಪಾಶವೀಶಕ್ತಿಗಳ ವಿಕಟಾಟ್ಟಹಾಸದ ಸಂಘಟ್ಟ; ಕಾಶ್ಮೀರ ಜುನಾಗಡ ಹೈದರಾಬಾದಗಳ ಜನತೆಯ ಆಕ್ರಂದನ ; ಗಾಂಧೀಜಿಯ 'ಹೇರಾಮ ಹೇರಾಮ' ಎಂಬ ಮೃತ್ಯುಮಂತ್ರನಾದ ; ಹೈದರಾಬಾದಿನಲಿ ಕಾಶಿಮ್‌ರಝವಿ ಹಚ್ಚಿದ ಬೇಗೆಯ ಸದ್ದು; ಬಡತನ ಭೂತದ ಕೇಕೆ ; ಹೊಸ ಘಟನೆ, ಹೊಸಯೋಜನೆಗಳ ಸಿದ್ಧತೆ ಸದ್ದು, ಕಾರ್ಖಾನೆಗಳ ಸದ್ದು; ಜಲಾಶಯ ರಚನೆಗಳ ಸದ್ದು ;— ಇವೇ ಮೊದಲಾದವು ಕೇಳಿಬಂದರೂ, ಏನೆಲ್ಲ ಕಷ್ಟಗಳನ್ನು ಭಾರತ ಜನತೆಯುಂಡರೂ, ಭಾರತದ ಜನರಲ್ಲಿ ಉತ್ಸಾಹ ಕೇಳಿಬರುತ್ತದೆ ; ಭಾರತ ಬಲಶಾಲಿಯಾಗಿದೆ-ಎಂಬ ಭಾವವನ್ನು ಕವಿ ಪ್ರಚೋದಿಸಿದ್ದಾರೆ ಇಲ್ಲಿ ; 'ನಿನ್ನ ಗೆಲವಿನ ಸದ್ದು ಅಡಗದಿರಲೆಂದಿಗೂ' ಎಂದು ಹಾರೈಸಿದ್ದಾನೆ ಕವಿ. ದಿನ ನಿತ್ಯದ ಚಾರಿತ್ರಿಕ ಘಟನೆಗಳಿಗೆ ಕವಿ, ತನ್ನ ಮನವನ್ನು ತೆರೆದಿಟ್ಟೊ, ದೇಶದ ಸಾಧನೆಗಳ ಬೆಲೆ ಕಟ್ಟಿದುದು ಆತನ ರಚನಾತ್ಮಕ ದರ್ಶನವೇ ಸರಿ. 'ರಾಷ್ಟ್ರರಾಜೇಶ್ವರಿ' ಎಂಬ ಕವನದಲ್ಲಿ ಕವಿ, ದಸರೆಯಂದು 'ಕನ್ನಡ ರಾಜರಾಜೇಶ್ವರಿ'ಯನ್ನು ಆರಾಧಿಸುವ ಸಂದರ್ಭದಲ್ಲಿ, ಭಾರತಮಾತೆಯ ಆರಾಧನೆ ಮಾಡಿದ್ದಾರೆ. ನಮ್ಮ ಭಾರತಕ್ಕೆ ಹಿಂದೆ ಇದ್ದ ನಿಟ್ಟುಸಿರ ಧೂಪ, ಕೆನ್ನೀರ ಕುಂಕುಮ, ದಾಸ್ಯಪಂಕವಿಲ್ಲ ; ಭಾರತದ ಪ್ರಜೆಗಳು ಇಂದು ಮಣ್ಣಬೊಂಬೆಗಳಲ್ಲ ; ವಜ್ರದೇಹಿಗಳು. ಭಾರತಮಾತೆಯ 'ನೆರಳಲಿ ದೊರೆವ

* ಜಮಾಖರ್ಚಿನ ಲೆಕ್ಕ

ನರಕವೂ ಸ್ವರ್ಗ'ವೆನಿಸಿದೆ ಕವಿಗೆ. ಸನ್ಮತಿ, ಸಹಜೀವನ, ಲೇಸು. 'ಊರೆಲ್ಲ ನಂಟರು, ಕೇರಿಯೆಲ್ಲ ಬಳಗ' (ವಿಶ್ವಕುಟುಂಬ) ಇಂತಹ ಉದಾತ್ತ ಧ್ಯೇಯಗಳಿಗಾಗಿ ದುಡಿಯು ತ್ತಿದ್ದಾರೆ. ಎಂದರೆ ಏನೆಲ್ಲವನ್ನು ಭಾರತೀಯರು ಸಾಧಿಸಿದಂತಾಯ್ತೇ ? ಇಲ್ಲ. ನಿಜವಾದ ಸ್ವಾತಂತ್ರ್ಯ ಹೋರಾಟ ನಡೆಯಲಿದೆಯೆಂಬಂತೆ ಕವಿವಾಣಿ, ಹೀಗೆ ನುಡಿದಿದೆ ಈ ಕವನದಲ್ಲಿ : "ವೈರಿಗಳು ಹೊರಗಿಲ್ಲ, ಒಳಗಿಹರು ; ಅಡಗಿಹರು– ನಮ್ಮಲ್ಲೆ ಎಲ್ಲೆಲ್ಲೂ ; ಅವರೊಡನೆ ಯುದ್ಧ! ಬರಿಮೈಯು, ಬರಿಹೊಟ್ಟೆ, ಬರಿ ದಲೆಯು, ಬರಿಮನೆಯು ; ಬರ, ನೆರೆಯು· ರುಜೆಯೊಡನೆ ತುಮುಲಯುದ್ಧ" ನಿಜ, ಈ ಕಾಲ ಬಂದಿದೆ, ಬರುತ್ತಲಿದೆ, ಬಡತನ-ಸಿರಿವಂತಿಕೆಯ ವರ್ಗ ಕಲಹ, ಹಿಂದು ಮುಸ್ಲಿಂ ಜಾತಿ ಕಲಹ, ಬರ–ನೆರೆಗಳ ಪ್ರಕೃತಿ ಪ್ರಕೋಪ, ವಾಸ ಉಪ ವಾಸ ನಿವಾರಣೆ, ರೋಗಗಳೊಡನೆ ಭಾರತೀಯರು ಭೀಕರ ಕದನದಲ್ಲಿ ತೊಡಗ ಬೇಕಾಗಿದೆ. ಸ್ವಾತಂತ್ರ್ಯ ಹೋರಾಟ ವ್ಯಕ್ತಿವಿರುದ್ಧವಲ್ಲ, ದಬ್ಬಾಳಿಕೆ, ಶೋಷಣೆ ಗಳ ವಿರುದ್ಧ. ಎಂದಮೇಲೆ ಇದು ನಿತ್ಯವೂ ನಡೆದ ಹೋರಾಟ—ಈ ಕವನದಲ್ಲಿ ಈ ಎಲ್ಲ ಭಾವನೆಗಳು ತಲೆದೋರಿವೆ, ಕವಿಯ ದೂರದೃಷ್ಟಿ ಪ್ರಕಟಗೊಂಡಿದೆ : ವಾಸ್ತವಿಕತೆಯನ್ನು ಮರೆತಿಲ್ಲ ; ಆದರ್ಶವಾಸ್ತವಿಕತೆಗಳ ಮಿಲನವಿಲ್ಲಿದೆ. 'ಚರಣ ಚಿಹ್ನ','ಏತಕಿಲ್ಲ' ಕವಿತೆಗಳು ಇದೇ ಗುಂಪಿಗೆ ಸೇರಬಹುದಾದುವು. 'ಚರಣಚಿಹ್ನ' "Foot Prints of the Great" ಎಂಬುದರ ಕನ್ನಡ ರೂಪ. ಎಲ್ಲ ಹಿರಿಯರು ನಡೆದ ದಾರಿಯಲ್ಲಿ ನಡೆದರೂ, ದೇವರ ಅನುಗ್ರಹ (ಕರುಣೆ) ಬೇಕೆಂಬುದೇ ಕವಿಯ ಅಭಿಮತ. ತಾಯಿ, ತಂದೆ, ಗುರು, ವಿಭೂತಿ ಪುರುಷರು ಇವರೆಲ್ಲರ ಅಡಿಮೂಡಿ ಮನ ಮಡಿಯಾಯ್ತು; ಇದ್ದಕ್ಕಿದ್ದಂತೆ ಝಂಝಾವಾತವೆದ್ದು, ನೆನಪು ಪುಳಿನದ ಮೇಲೆ ಹೆಜ್ಜೆ ಮುಸುಕಾಗೆ, 'ನಿನ್ನ ಹಜ್ಜೆಯ ಲೀಲೆಗಾರಂಭವಾಯ್ತೆರೆಯ' ಎಂದಿದ್ದಾನೆ ಕವಿ. ದೈವೀಕಾರುಣ್ಯ ಜಲವರಿಯೆ, 'ಇಬ್ಬನಿಯ ಎದೆಯಲ್ಲಿ ಇನಕಿರಣ' ನಕ್ಕಂತಾಯಿತು ! ನಿನ್ನ ಕೃಪೆಯೊಡವೆ ಕೇಳಬೇಕೇ ? ಅಪೂರ್ವ ನಿಧಿಯದು. 'ಹೂವುಗಳ ಹೃದಯವನು ಹೂಬಿಸಿಲು ಹೊಕ್ಕಂತಾಯಿತು' ಎಂತಹ ಮಧುರೋ ಪಮೆ ಇದು ! ಕವಿಗೆ ಸಾಹಿತ್ಯಾರಾಮದಲ್ಲಿ ಸಂಚರಿಸುವಾಗ ಅಕ್ಕಮಹಾದೇವಿ ಬಗೆಗೆ ಚಿಂತನ ಬಾರದಿರ್ಪುದೇ ? ಹಲವರ ಸ್ಮಾರಕಗಳಿವೆ. ಮಹಾ ಅನುಭಾವಿ, ಮುಕ್ತಿಯ ಮರಿಯಾಗಿದ್ದ ಅಕ್ಕಮಹಾದೇವಿಯ ಸ್ಮಾರಕವಿಲ್ಲ 'ಏತಕಿಲ್ಲ' — ಎಂದು ಕವಿತಾಪ್ರಶ್ನೆ ಹಾಕಿದ್ದಾನೆ ಕವಿ. ಆಕೆ ಜಗತ್ಪತಿಯ ಸತಿ, ಮಹಾನುಭಾವೆ. ಇಂತಹ ಮಹಿಮಳ ಗಣನೆ ಕನ್ನಡಿಗರಿಗಾಗಲಿಲ್ಲವೇ ? ಇದೇ ಕಳವಳ ಈ ಕವನದ ಕೊರಗು.

೩

ಪ್ರಕೃತಿಯ ಸೌಂದರ್ಯವನ್ನು, ನಿಸರ್ಗದ ಚೆಲುವನ್ನು ಕಂಡಾಗ ಕವಿ ಮನಸ್ಸು ಜಡವಿದ್ದುದು ಮತ್ತೆ ಮಿದುವಾಗುತ್ತದೆ ; ಗರಿಗೆದುರುತ್ತದೆ. ಕವಿತಾಬೀಜ ಮತ್ತೆ

ಮೊಳೆಯುತ್ತದೆ. ಅಂತಹ ಹಲವು ಕವಿತೆ, ಈ ಸಂಗ್ರಹದಲ್ಲಿ ಕಾಣುತ್ತವೆ. 'ವಿಂಧ್ಯಾದ್ರಿಯಲ್ಲಿ ಚಂದ್ರೋದಯ' ಕುಮಾರವ್ಯಾಸ ಕವಿಯ ಭಾರತದಿಂದ ಈ ಕವನ ಪ್ರೇರಣೆ ಪಡೆದಿದೆ. ವಿಂಧ್ಯದಲ್ಲಿ ಸಂಚರಿಸುವಾಗ ಪಡೆದ ಅನುಭವಕ್ಕಿಂತ ಆ ಸಂದರ್ಭದಲ್ಲಿ ಕುಮಾರವ್ಯಾಸ, ಕವಿಗೆ ನೆನಪಾದುದು ಮಹತ್ವದ್ದು. ಅವರ ಕನ್ನಡ ಕಾವ್ಯದ ದಟ್ಟ ಪರಿಚಯಕ್ಕೆ ಒಂದು ಸ್ಪಷ್ಟ ನಿದರ್ಶನ. 'ಶ್ರೀ ಗುರುವಿನ ಹಸ್ತದಂತೆ ವಿಂಧ್ಯಾದ್ರಿಯ ಮಸ್ತಕದಲಿ ಚಂದ್ರೋದಯವಾಯಿತು' ; 'ಗುರುಬೋಧೆಸುಧೆ ಬೆಳುದಿಂಗಳು' ; ಹರುಷವಾಗಿ 'ಇಹವೆ ನಾಕ'ವಾದುವು. 'ಮುಳುಗುವ ರವಿ ಸಂಜೆವೆಣ್ಗೆ ಪೀತಾಂಬರವೀಯೆ ನಿಶೆಗೆ ಕಸಿವಿಸಿಯಾಯ್ತು! ಚೀನಾಂಬರದಂತೆ ಬೆಳುದಿಂಗಳು' ; ಈ ಸ್ವರ್ಗೀಯ ಸುಖಾನುಭವ ಅನುಭವಿಸುತ್ತಿದ್ದ ಕವಿ, ಹೊಗೆ ಬಂಡಿಗೆ, ಸದ್ದುಮಾಡಬೇಡ ; ನಿದ್ದೆಮಾಡುತಿಹುದು ಕಾನು ; ಧ್ಯಾನದೊಳಿಹುದೀ ಗಿರಿ ಎಂಬ ಎಚ್ಚರಿಕೆಯೀಯುವಂತಾಯ್ತು! ಕವಿಕಲ್ಪನೆಗಳಿಗೆ, ನವುರಾದ ಕೋಮಲ ಭಾವಗಳಿಗೆ ಇದೊಂದು ಸುಂದರ ಕವನ. 'ಸಿವ ಸುಗ್ಗಿ', 'ಮಾಗಿಮಾದ್ರಿ', 'ಹಣ್ಣೆಲೆ ಪಾಂಡು' ಚಿತೆಯೇರಿ ಸಹಗಮಿಸಿದಾಗ ಆಗಮಿಸಿದ ವಸಂತದ ವೈಭವ ವರ್ಣಿಸಿದ ಕವನ. ಇಲ್ಲೊಂದು (ಪುರಾಣೋತ್ತ) ಭಾರತದ 'ಮಾದ್ರಿ ಪಾಂಡು ಸಹಗಮನ'ದ ಸುಂದರ ಚಿತ್ರವೇ ಕಣ್ಮುಂದೆ ಹಾಯುತ್ತದೆ. ತರುಲತೆಗಳ ನರಗಳಲ್ಲಿ, ಜನರಲ್ಲಿ ಸೊಕ್ಕು ಕಾಣುತ್ತದೆ ; ಕಲ್ಲೆದೆಗೂ ನಲ್ಲಳ ಮುಖ ಪ್ರೇಮೋನ್ಮುಖವಾಗುತ್ತದೆ. ತರು, ಲತೆ, ಪುಷ್ಪ, ಪತ್ರಗಳಲ್ಲಿ ಚುಂಬನ, ರಿಂಗಣ ಕಾಣುತ್ತವೆ. ಕಾಡೊಂದು ನರ್ತನ ಶಾಲೆ, ಚಿತ್ರಶಾಲೆ, ಗಾನಶಾಲೆಯಾಗಿ ಕಂಗೊಳಿಸುತ್ತದೆ. 'ಹೂಮುಡಿದಿಹ ತರುಲತೆಗಳೂ ಬಗ್ಗಿ ವಂದಿಸುತ್ತಿವೆ'. ಹೀಗೆ ಸಮಸ್ತ ಪ್ರಕೃತಿಧಾರಿಣಿ, ಚೆಲುವಿನಿಂದ ರಾರಾಜಿಸುತ್ತದೆ ಇಲ್ಲಿ. ಇದೊಂದು ಕವಿಯ ಪ್ರಕೃತಿ ವರ್ಣನಾಪ್ರಿಯತೆಗೆ ಉತ್ಕೃಷ್ಟ ನಿದರ್ಶನ. 'ರೂಪ' ಎಂಬ ಕವನದಲ್ಲಿ ಕವಿ ನಿಸರ್ಗದಲ್ಲಿಯೇ ಸತ್, ಚಿತ್ ಮತ್ತು ಆನಂದ ರೂಪಗಳನ್ನು ಕಂಡು ಉದಾಹರಣೆಗಳೊಂದಿಗೆ ವಿವರಿಸಿದ್ದಾನೆ. ಸೌಂದರ್ಯವೇ ಶಿವರೂಪವೆಂದು, 'ನಮೋ ರೂಪವೇ, ನಮೋ ಬಾಳ ದೀಪವೇ' ಎಂದು ನಮಿಸಿದ್ದಾನೆ. 'ಮಾನಸಕೆ ಮೊರೆ' ಇಟ್ಟುದು, ಗೋಗರೆದುದು, ಮಾನಸದ ಮಾಲಿನ್ಯ, ಕಿಲ್ಬಿಷ, ತಾಮಸ ಕಳೆದು ಸಂತಸದ ಧಾರೆ ನೀಡಲು ಕೇಳುತ್ತಾನೆ ಕವಿ : "ಲೋಕೋಪಕಾರ ಮರೆದೆ' ನನ್ನ ಲೌಕಿಕದಲ್ಲಿ. ಮತ್ತೊಮ್ಮೆ ಕರಗು, ಜಲರಾಶಿಯಾಗು ; ಕಮಲವನವಲರಿ, ಭ್ರಮರ ಸಂಗೀತ ಬರಲಿ ; ಕೈಲಾಸ ಶಿಖರ ತರುಗುಲ್ಮನಿಕರಗಳಿಗಾಗು ನೀನು ಮುಕುರ" ಎಂದು. ಕವಿ ನಿವೇದನೆ ಮಾನಸಕೆ ಮುಟ್ಟಿತು. ಮೂಲತಃ ಕವಿಪ್ರತಿಭೆ "ಚೈತನ್ಯಶೀಲೆ"ಯಾದುದರಿಂದ, ಜಲಧಾರೆ ಪುಟಿದೆದ್ದು ಹರಿಯಿತು ; ಜಡತೆಯನ್ನು ತೊಲಗಿಸಿತು ; ಜಡಹಿಮ ಉದಕವಾಯ್ತು. ಕವಿಗೆ ಕಾವ್ಯಪ್ರತಿಭೆ ಹರಿದ ಕ್ಷಣವೇ ಪರುಷಹರುಷ; ರಸವರುಷ; ಜೀವದುತ್‌ಕರುಷ.

ನಿಸರ್ಗ ಸೊಬಗಿನ ತಾಣ ಮಾನಸ ಸರೋವರವಲ್ಲವೇ? ಕಾಳಿದಾಸ ಮಹಾಕವಿಯು ಮೇಘದೂತವನ್ನು ನೀಡಿದುದು ಇದಲ್ಲವೆ? ಕವಿ ಪ್ರಕೃತಿಯಿಂದ ಹೇಗೆ ಕವಿತೆ ಬರೆಯಲು ಉತ್ತೇಜನ ಪಡೆಯುತ್ತಾನೆಂಬುದಕ್ಕೆ 'ಜೀವ ಜಡ' ಕವನ ನೋಡಿ: ಒಂದು ಬಯಲು ನಿನ್ನೆ ಮೊನ್ನೆ ಹುಡಿಹಾರುತಿತ್ತು; ಅದೇ ಬಯಲು, ಇಂದು, ಹಸಿರ್ದಾಣವಾಗಿ ಸೊಗದ ಆಗರವಾಗಿದೆ. ಕಸ ಹೋಗಿ ರಸವಾದಂತೆ ಜಡ ಜೀವ ಚಿಗುರದೇ? ಚಿಗುರಾಗಿ ಹೂವಾಗಿ ಫಲವಾಗದೇ? 'ಒಂದು ಚಿತ್ರ', 'ಇನ್ನೊಂದು ಚಿತ್ರ' ಕವನಗಳಲ್ಲಿ ಪ್ರಕೃತಿರಮಣೀಯತೆಯ ಸುಭಗ ಸುಂದರ ಚಿತ್ರಗಳಿವೆ: ಕವಿ ನಿರೀಕ್ಷಿಸಿದ ಮೇಘ, ಮಳೆಗಳೆ ಈ ಕವನಗಳ ವಸ್ತು. ನೋಡನೋಡುವಷ್ಟರಲ್ಲಿ ಮೇಘಮಾಲೆ ಶೈಲಮಾಲೆಯ ಮೇಲೆ ಇಳಿದು

'ಬುವಿ ಬಾನಿನ' ಭೇದವನ್ನೇ ಮರೆಸಿತು!
ಬೋಳುದಲೆ ಬೆಟ್ಟ, ವ್ಯೋಮಕೇಶಿಯಾಯಿತು!
ಪ್ರಿಯನೆಲವು ಹಿಡಿಂಬೀಪ್ರಿಯನಾಯಿತು!
ಮೇಘಮಾಲೆ ಕರಗಿದೊಡನೆ ಹಿಂದಣ ಸಂಧ್ಯಾರುಣ ಛಾಯೆಯಿಂದ
ಕೀಚಕಾರುಣ ರಕ್ತರಂಜಿತ ಭೀಮನಾಯಿತು.
ಎಲ್ಲಿ ಹಳು ಬೆಂಕಿ ಸೀರೆಯು, ಉರಿಯ ರವಿಕೆಯ
ದ್ರೌಪದಿ? ಬಣ್ಣಿಸೆ ಸಾಲದೀ ಬಡ ಚೌಪದಿ

ಎಂದು ಪದ್ಯ ಮುಗಿಸುವಲ್ಲಿ ಹೇಳಬೇಕಾದ; ಎಂದರೆ ಹಿಡಿಂಬಾ ಪ್ರಸಂಗ, ಕೀಚಕ ವಧಾ ಪ್ರಸಂಗ—ಇವು ವರ್ಣನೆಗೆ ಸಿಲುಕುವ ಮುನ್ನವೇ ಮೇಘ ಮರೆಯಾದುದು ಕವಿತೆಯ ಅಪೂರ್ಣಕ್ಕೆ ಕಾರಣ. 'ಇನ್ನೊಂದು ಚಿತ್ರ'ದಲ್ಲಿ ಕವಿಗೆ, ಬಾನು, ತಾಯಿ ಕೂಸಿಗೆ ಹಾಲುಣಿಸುವಂತೆ, ಹಾಲಹನಿಗಳು ಮಿಂಚಮಿಂದಿಹ ಮುತ್ತಿನಂತೆ, ಆಣೆ ಕಲ್ಲು ಕಲ್ಲುಸಕ್ಕರೆಗಳಾಗಿ ಕಂಗೊಳಿಸಿವೆ. ಸಸ್ಯಗಳೇ ಶಿಶುಗಳು; ಹುಲ್ಲು, ಬಳ್ಳಿ, ಕಳ್ಳಿ, ಗುಲ್ಮಗಳೂ ಈಂಟಿವೆ ಈ ಸುಧೆಯನ್ನು. ಹೀಗೆ ಹಾಲು ಕುಡಿದು, ಶಿಶುಗಳ ಹಾಗೆ ನೆಲೆದೊಟ್ಟಿಲಲಿ ಈ ಶಿಶುಗಳು ಆಟವಾಡುವುದನ್ನು ಕಂಡ ಈ 'ದಿವ್ಯ ದೃಶ್ಯ ನೋಡಲು ಸ್ವರ್ಗದವರೇ ಬಂದರು' ಎಂದು ಕವಿ ಕಣ್ತುಂಬ ನೋಡಿ ನಲಿದಿದ್ದಾನೆ; ಸೊಗವುಂಡು ಸೊಕ್ಕಿದ್ದಾನೆ. ಪ್ರಕೃತಿ ವ್ಯಾಪಾರವನ್ನು ಬಣ್ಣಿಸದ ಕವಿ ಕವಿಯೇ ಎನ್ನುವಂತಿವೆ ಈ ಎರಡೂ ಕವನ. 'ಸೂರ್ಯ ಮುಳುಗಿದ ಸ್ಥಳ' ಇನ್ನೊಂದು ಸುಂದರ ಕವಿತೆ. ಕನ್ನಡ ಕವಿಗಳಿಗೆ ಸೂರ್ಯಾಸ್ತ ಸೂರ್ಯೋದಯಗಳು ಸ್ಫೂರ್ತಿಯನ್ನೊದಗಿಸಿದುದನ್ನು ಹಲವು ಪ್ರಸಂಗಗಳಲ್ಲಿ ಕಾಣುತ್ತೇವೆ. ಸೂರ್ಯಾಸ್ತದ ಸ್ಥಳ 'ಬೇಗೆಯಿಂದ ಹೊತ್ತಿದೆ'; ಆ ಸ್ಥಳ ಮೇಘಋಷಿಗಳ 'ಯಜ್ಞ ಕುಂಡಸ್ಥಳ'; ಸುತ್ತಿ ಬಹ ಕತ್ತಲೆಯ ಕುಡಿಗಳೆ 'ಹೋಮಧೂಮ'; ದಿಗಂಗನೆ ಗಗನವೆ 'ರಾಣಿ'; ಬಾಗಿ

ದ್ವಾಳಿ ಅಗ್ನಿಗೆ ; ವಿಹಂಗಮ 'ಮಂತ್ರಘೋಷ' ; ಕ್ಷಿತಿಜನೇ ದೊರೆ, ಭಯಭಕ್ತಿ ಭರಿತ ತರುಮರಾದಿಗಳೇ ಮಣಿದ ಜನ ; ಹೀಗೆ ಕವಿಗೆ ಇದೊಂದು ಯಜ್ಞಶಾಲೆಯಾಗಿ ಕಂಗೊಳಿಸಿದೆ ; ಕನ್ನಡ ಕಾವ್ಯಗಳ ರೂಪಕವಾರಿಧಿಗೆ ಈ ಕವಿಯದೊಂದು ಅಪೂರ್ವ ಮಾಣಿಕವೆ ಆಗಿದೆ ಈ ರೂಪಕ. ತೆರೆದ ಕಣ್ಣಿನಿಂದ, ಭಾರತದ ವಿವಿಧ ಪ್ರದೇಶಗಳನ್ನು, ಕವಿ ಚಿತ್ರಕಾರರು, ಭಿನ್ನಭಿನ್ನ ಸನ್ನಿವೇಶಗಳಲ್ಲಿ ಭಿನ್ನಭಿನ್ನ ಕಾಲಗಳಲ್ಲಿ ಕಂಡು ವರ್ಣಿಸಿದರೆ ಹೇಗೆ ಕಾಣಬಹುದು ? ಎಷ್ಟು ಅಂದದ ಚಿತ್ರಗಳನ್ನು ನೋಡಬಹುದು ? ರೋರಿಕ್ ಒಬ್ಬನೇ ಸಾವಿರ ಚಿತ್ರಗಳನ್ನು, ಹಿಮಾಲಯವನ್ನು ಕಂಡು ಬಣ್ಣಿಸಿಲ್ಲವೇ ? 'ದೊಡ್ಡಬೆಟ್ಟ' ನೀಲಗಿರಿಯ ದೊಡ್ಡಬೆಟ್ಟದ ಮೇಲೆ ನಿಂತು ನೋಡಿದಾಗ ಕವಿಗೆ ಉಂಟಾದ ಭಾವಗಳನ್ನು ವಿವರಿಸುವ ಕವನ. ನೀಲಗಿರಿ, ನೀಲಜಲ, ದೊಡ್ಡಬೆಟ್ಟವೇ ನೌಕೆ ; ಕವಿಯೋ ಅಂಬಿಗ. ಮಲಗಿರುವ ಭೂರಮೆಯ ಸ್ತನ ನಿತಂಬಗಳಂತೆ ವಿನ್ಯಸ್ತ ಶಿಖರಗಳು, ಹಸಿರುಡೆ ಮರಕತದಮಾಲೆ ; 'ತಮಿಳು ನಟಿಯರೊಲು ತುಂಬಿದ ಶರೀರಗಳು ನೀಲಗಿರಿ ಶಿಖರಗಳು'; ಅನುಭವವೊ ಶ್ರೀನಗರ ಉದಕಮಂಡಲಗಳ ರೋಮಾಂಚಕ ಅನುಭವ ; ನಿಮ್ಮ ನೀಲಿಮೆ ಹೆಚ್ಚೋ ನಮ್ಮ ಕಾಳಿಮೆ ಹೆಚ್ಚೊ ಎಂದು ಕೇಳುತ್ತವೆ ನೀಲಗಿರಿಮೇಘಗಳು. ನಾನೀವೆ ಬಂಗಾರ ದುಡುಗೊರೆಯ ಎಂದನಾ ದಿವಾಕರ. ಒಂದು ಸುಂದರ ಸಂಧ್ಯಾ ಸಮಯದ ಸನ್ನಿವೇಶದ ವರ್ಣನೆ ಇಲ್ಲಿದೆ. ಒಂದೊಂದು ನಿರ್ಜೀವವಸ್ತು ಕವಿಗೆ ಸಚೇತನ, ಸಮೂರ್ತ. ದೊಡ್ಡಬೆಟ್ಟ ನೌಕೆಯಾಗಿ, ಗಿರಿಶಿಖರಗಳು ನರ್ತಕಿಯರಂತೆ ಗೋಚರಿಸಿದರೆ 'ವೃಕ್ಷರಾಜ' ಕವಿತೆಯಲ್ಲಿ ವಟವೃಕ್ಷವೊಂದು ಹೊರಗೆ ಮರೆದಿಹ ಮುನಿಯಂತೆ, ಯೋಗಿರಾಜನಂತೆ, ಸಂಕ್ಷಿಪ್ತ ಬ್ರಹ್ಮಾಂಡದಂತೆ ಕಾಣುತ್ತದೆ. ಪ್ರಕೃತಿಯಲ್ಲಿ ಪರಮಾತ್ಮನನ್ನು ಕಾಣುವ ಭಕ್ತನಂತಿದೆ ಇಲ್ಲಿ ಕವಿಮನೋಭಾವ. "ನಿಶ್ಚಲತೆಯೇ ಯೋಗ ; ಚಂಚಲತೆಯೇ ರಾಗ" ಎಂಬ ಯೋಗಸೂತ್ರವನ್ನೇ ಹೊಸೆಯುತ್ತಾನೆ ನಿಸರ್ಗದಿಂದ ಕಲಿತ ಪಾಠದಿಂದ ಕವಿ ಇಲ್ಲಿ. ಕವಿಗೆ ನಿಂತ ವಟವೃಕ್ಷ, ಬೆಟ್ಟ, ಅಸ್ತಮಾನ ಸೂರ್ಯ ಎಲ್ಲವೂ ಪ್ರಚೋದನೆ ನೀಡಿದಂತೆ ಹಳೆಯ ಚಾವಡಿಯೂ 'ಚಿತ್ತವೊಂದು ಚಾವಡಿ' ಪದ್ಯಕ್ಕೆ ಪ್ರಚೋದಕ. ಜಗತ್ತೆಲ್ಲ ಎಷ್ಟೊಂದು ಮುಂದುವರಿದಿದ್ದರೂ ಮಾನವನ ಗರ್ವ, ಆಸೆ, ದ್ವ್ಯಾಸಬುದ್ಧಿ, ಚಂಚಲಚಿತ್ತ ಬದಲಾಗಲಿಲ್ಲ. ಕವಿಗೆ ಚಿತ್ತವೊಂದು ಚಾವಡಿಯಾಗಿ ಗೋಚರಿಸಿ, ಗರ್ವದ ಗೌಡ, ಆಸೆಯ ಸೇನಬೋವ, ಚಂಚಲತೆಯ ತಳವಾರ ಇನ್ನೂ ಆ ಹಳೆಯ ಚಾವಡಿಯಲ್ಲಿ ತಮ್ಮ ಹಳೆಯ ಹಾಳೆ ಹರವಿಕೊಂಡು ಏನೇನೋ ಕೆದಕುತ್ತಾರೆ ; ಬೆದಕುತ್ತಾರೆ. ಅದು ನಿಲ್ಲಲು ಸಾಧ್ಯವೇ ? ಬಸವಣ್ಣನಿಗೆ ಚಿತ್ತವೊಂದು ಅತ್ತಿಯ ಹಣ್ಣಾದರೆ, ಇಲ್ಲಿ ಹರಕು ಗೋಡೆ ಮುರುಕು ಜಂತಿಯ ಹಳೆಮಂದಿರ.

೪

ಇನ್ನುಳಿದ ಕವನಗಳು 'ಪ್ರಣಯ' ಇಲ್ಲವೆ 'ಅಂತರಂಗ ನಿರೀಕ್ಷಣೆ'ಯ ಕವನಗಳಾಗಿವೆ. ಮತ್ತೆ ಕೆಲವು 'ಕವಿ ಕಾವ್ಯ'ಕ್ಕೆ ಸಂಬಂಧಿಸಿವೆ.

'ಏಕೆ ನಕ್ಕೆ' ? 'ಏಕೆ ಅತ್ತೆ' ? ಚೆನ್ನೆಗೆ ಪ್ರಶ್ನೆ. ಚೆನ್ನೆ ನಗಬೇಕಾದರೆ ಕಾರಣ ಬೇಡವೇ ? ಏಕೆ ನಕ್ಕೆ ಹೇಳು ಚೆನ್ನೆ, 'ಶೋಕ ನಗುವ ತೆರೆದಲಿ ?' ಶೋಕವೇ ನಕ್ಕರೆ ಹೇಗೆ ಕಾಣಬಹುದು. ಆ ದುಗುಡ ಕವಿ ಕಣ್ಗೆ ಕಂಡು, ಕಾರಣ ಹುಡುಕಲು ಪ್ರಯತ್ನಿಸಿದ್ದಾನೆ. ಶೃಂಗಾರವನ್ನು ನೋಡಿ ನಗಲಿಲ್ಲ ; ಅಲಂಕಾರ ಮಾಡಿಕೊಂಡಾಗ ನೋಡಬೇಕಾದವರೇ ಇಲ್ಲವೆಂದು ನಕ್ಕೆಯಾ ? ಒಮ್ಮೊಮ್ಮೆ ಹೀಗಾಗುತ್ತದೆ ನಲ್ಲೆಗೆ : 'ಅರಿಷಿಣ ಮಿಂದು ಹೊಂದೊಡಿಗೆಯನೆ ತೊಟ್ಟು, ಪುರುಷನ ಒಲವಿಲ್ಲದ ಲಲನೆಯಂತಾದೆನಯ್ಯಾ' ಎಂದಿಲ್ಲವೇ ಬಸವಣ್ಣನವರು ? ಅಥವಾ ಚೆಲುವು, ಚೆಲುವಿಕೆಯ ಮನೆ ಸೇರಲಿಲ್ಲವೆಂದು ನಕ್ಕೆಯಾ ಎಂದೋ, ಇಲ್ಲವೆ 'ಚೆಲವು ಕೊನೆಗೆ ಒಲವಿನೆದುರು ದಾಸಿ' ; 'ಬರಲಿ ಮನೆಗೆ (ನಲ್ಲ) ದಾಸರಾರು ಎಂದು ತೋರ್ಪೆ' ಎಂದು ನಕ್ಕೆಯಾ ? ಹಿಂದೆ ರೇಗಿ ಮತ್ತೆ ಬಾಗಿದುದನ್ನು ನೆನೆದು, ಹೆಸರು ಕೇಳಿ ಕೊಸರಿಹೋದುದನ್ನು ಸ್ಮರಿಸಿ ನಕ್ಕೆಯಾ ? ಹೀಗೆ ಹಲವಾರು ಕುತೂಹಲಕಾರಕ ಪ್ರಶ್ನೆಗಳಿಂದಿಡಿದಿದೆ ಈ ಕವನ. "ಒಲವಿನೆದುರು ಚೆಲುವು ಕೊನೆಗೆ ದಾಸಿ" — ಎಂಬ ಮಾತು ಅರ್ಥಪೂರ್ಣ. ಚೆಲುವು ಒಲವುಗಳಲ್ಲಿ ಸ್ಪರ್ಧೆ ನಡೆದರೆ ಒಲವು ಗೆಲುವುದೇ ಸಹಜ. ಒಲವು ನಿತ್ಯ, ಚೆಲುವು ಕ್ಷಣಿಕ. 'ಏಕೆ ಅತ್ತೆ' ಎಂಬ ಕವಿತೆಯಲ್ಲಿ 'ಮತ್ತೆ' ಅತ್ತುದಕ್ಕೊ ಕಾರಣ : ಅಳುವುದು 'ಹೊತ್ತೇ ಮರುಗುವಂತೆ ; ಕಲ್ಲು ಕರಗುವಂತೆ ; ಎಂದೋ ಆಡಿದ ಬಿರುನುಡಿ ನೆನೆನೆನೆದು ಅತ್ತುದೋ? ಅತೃಪ್ತ ಆಸೆ ನೆನೆದು ನೊಂದೆಯೋ ? ತವರ ನೆನಪು, ಒಡವೆಯಾಸೆ ನಿನ್ನ ಅಳುವಂತೆ ಮಾಡಿತೋ ? ಇದ್ದುದಕ್ಕೊ ಇಲ್ಲದುದಕ್ಕೊ ನಿನ್ನ ರೋದನ ? ಅದೂ ಇದ್ದಕ್ಕಿದ್ದ ಹಾಗೆಯೇ ! ಎನಿತೋ ನೋವ ಸೈರಿಸಬಹುದು ಆದರೆ ನೀನು ನೋಯೆ ಕಣ್ಣು ತೋಯೆ ರುದ್ರಭೂಮಿ ಈ ಜಗ"– ಎಂದು ಕವಿ ಪ್ರೇಮದ ಬೆಲೆ ಕಟ್ಟುತ್ತಾನೆ ; ನಿತ್ಯಸತ್ಯದ ಮಾತು ಆಡುತ್ತಾನೆ. ನಲ್ಲೆ ನಗುವುದೂ ನಲ್ಲನಿಗೆ ತಾಳಲಾರದ್ದು, ನೋಯುವುದೂ ತಾಳಲಾರದ್ದು. 'ಉತ್ತರ' ಎಂಬ ಕವನದಲ್ಲಿ ನಲ್ಲೆಯಲ್ಲಿಯೇ ಜಗದೆಲ್ಲ ಹೂಗಳಿರುವಾಗ ಬೇರೆ ಹೂ ತರುವುದು ಅವಶ್ಯವಿದೆಯೇ ಎಂದಿದ್ದಾನೆ ಕವಿ. ಇದೊಂದು ಹಳೆಯ ಕವಿ ಸಮಯಗಳನ್ನು ಬಳಸಿಕೊಂಡು ಹೆಣೆದ ಪುಷ್ಪಮಾಲೆ. 'ಹೂವಿನಲಿ ಹುಟ್ಟಿದೆ ನಿನ್ನಲ್ಲಿ' ಎಂದಿದ್ದಾನೆ ಕವಿ. ಒಲವಿರೆ, ಕವಿಗೆ, ನಲ್ಲೆಯಲ್ಲಿ ಇಂತಹ ಸೌಂದರ್ಯ, ಸೌಗಂಧ ಕಾಣುವುದಚ್ಚರಿಯಲ್ಲ. ಅದಕ್ಕೆಲ್ಲ ಮುಖ್ಯ ಕಾರಣ ಒಲವು. ಆ ಒಲವಿಗೆ ಕವಿ 'ಮೈಮುರಿದು ಮೇಲೇಳು' ಎಂದು ಇನ್ನೊಂದು ಕವನದಲ್ಲಿ ಕೇಳಿಕೊಳ್ಳುತ್ತಾನೆ. ಚೆಲುವೇ

ಒಲವು, ಒಲವೇ ಚೆಲುವು ಎಂಬ ಅಭೇದ ಕಂಡಿದೆ ಕವಿಗೆ. ಮಲಗಿರುವ ಚೆಲುವೆ, ಒಳಗಿರುವ ಒಲವೆ, ಸರ್ವರೂಪಗಳಲ್ಲಿ ಮೇಲೇಳು. "ಜೀವಜೀವಕೆ ಒಲಿದು ಅಲರಿ ಬಾ ಒಲವೆ" ಚೇತರಿಸಿಕೊಂಡೇಳು- ಎಂದು ಒಲವಿಗೆ ಪುಟಿದೇಳಲು ಕೇಳಿಕೊಳ್ಳಲಾಗಿದೆ. ಒಲವೂ ಹಲವು ವಿಧ, ಚೆಲುವೂ ಹಲವು ವಿಧ. ಚಿಕ್ಕಂದಿನಲಿ ಆಟವಾಡಿದ ಕಣ್ಣುಮುಚ್ಚಾಲೆ ನೆನೆಸಿಕೊಂಡಾಗ ಹರುಷವೆನಿಸಿದರೂ ಇಂದು ಅದೇ ಕಣ್ಣುಮುಚ್ಚಾಲೆಯನ್ನು ಕ್ರೂರವಿಧಿ ತನ್ನೊಡನೆ ಆಡುತಿರುದನ್ನು ನೆನೆದರೆ ದುಃಖವಾಗುತ್ತದೆ. ಆ ಕಣ್ಣುಮುಚ್ಚಾಲೆ ಎಲ್ಲೆಡೆಗೂ : ಬಿಸಿಲು ಬೆಳ್ದಿಂಗಳು ನೆರಳೊಡನೆ, ದೈವ-ಜೀವಿಗಳೊಡನೆ, ಮೋಡ-ಶಶಿಯೊಡನೆ ; ಕಣ್ಣುಮುಚ್ಚಾಲೆ ಪ್ರೇಮಿಗಳೊಡನೆ ಆಡಬಹುದು ; ಆದರೆ ವಿಷದ ಕೂಡ ಆಡುವರಾರು ? ಬದುಕೊಂದು ವಿಧಿಯೊಡನೆ ಆಡುವ ಕಣ್ಣುಮುಚ್ಚಾಲೆ ಎನ್ನುವುದು ನಿತ್ಯ ಸತ್ಯವೆಂಬುದು ಹುಸಿಯಲ್ಲ. 'ಶಂಕೆಯ ಬೆಂಕಿ'ಯಂತಹ ಕವನದಲ್ಲಿ ವಿರಹಭಾವವನ್ನು ಕಾಣುತ್ತೇವೆ.

೫

'ಅಂತರಂಗ ನಿರೀಕ್ಷೆ' ಮಾಡಿಕೊಂಡು ತನ್ನನ್ನು ತಾನು ತಿದ್ದಿಕೊಳ್ಳುವ ಹಂಬಲ, ದೈವೀ ಕರುಣೆಯ ಹಂಬಲ ಹಲವು ಕವನಗಳಲ್ಲಿ ವ್ಯಕ್ತವಾಗಿದೆ. ಆತ್ಮನಿರೀಕ್ಷೆ ಮಾಡಿಕೊಂಡಾಗ ಹೊಸಲೋಕ, ರಹಸ್ಯ, ಬೆಳಕು ಗೋಚರಿಸುತ್ತವೆ. 'ಅಂತರಂಗದ ಅಂತರಿಕ್ಷದಿ' ಎನ್ನುವಲ್ಲಿ ಹೊಸ ಹೊಸ ಗ್ರಹ ಕಂಡಿದ್ದಾರೆ. 'ಬರಲಿಲ್ಲ' ಎನ್ನುವಲ್ಲಿ ಕಾದ ದೈವ ಬರಲಿಲ್ಲವೆಂಬ ಭಾವವಿದೆ. 'ನೌಕೆ-ನಾವಿಕ' ಕವನ ಬದುಕೊಂದು ದೋಣಿ, ತಾನೇ ಅಂಬಿಗ, ದಾಟಿದರೆ ಸ್ವರ್ಗ, ಮುಳುಗಿದರೆ ನರಕ ಎಂಬ ಅಂಬಿಗರ ಚೌಡಯ್ಯನ ಮಾತಿನ ಭಾವವಿದೆ. ಹಾಗೆಂದು ಮುಳುಗುವುದೇ ? ಆಗದು; ತೆರೆ ತುಳಿಯುತ ಸಾಗಲೇ ಬೇಕೆಂಬ ವಾಣಿ ಬದುಕಿನ ಬಗೆಗೆ ನಿರಂತರ ಚಿಂತನ-ಜೊತೆಗೆ ಬೋಧನಪರ ಮಾತಾಗಿದೆ. 'ನಾನಾರು' ಎಂಬ ಕವಿತೆ ನಿಜಗುಣರ 'ಆರು ನಾನೆಂದು ವಿಚಾರಿಸು' ಎಂದಂತಿದೆ. ವಿಚಾರಿಸಿದಾಗ ಕವಿಗೆ ಕಂಡುದು 'ನೀನಾರು' ಎಂಬುದಕ್ಕಿಂತ ನಾನಾರು ಎಂಬುದೇ ಸಖ್ಯಮಯ, ಪ್ರಿಯ ಪದ ಎಂಬುದು. 'ದೂರವಿಲ್ಲ' ಎಂಬ ಕವನದಲ್ಲಿ, ಅಳುವವರ ಕಂಡು ಅತ್ತರೆ, ನಗುವವರ ಕಂಡು ನಕ್ಕರೆ ಅಂತಹದೇ ಸ್ಥಿತಿಯೊದಗಲು ತಡವಾಗದು. ಸುಖದುಃಖಗಳು ಒಂದರ ಬಳಿ ಬೆನ್ನು ಹಿಡಿದು ಮುತ್ತೊಂದಾಗಿ ಬರುತ್ತವೆ. ಆದುದರಿಂದ ಕವಿ ದನಿ ಹೀಗೆ ಮಾರ್ದನಿಗುಡುತ್ತದೆ : 'ಬದುಕಿರುವ ಸಂಭ್ರಮದಿ ನಗುತಿರುವ ಜೀವಿಯೇ, ಮರಣ-ಮಸಣಗಳೆರಡು ದೂರವಿಲ್ಲ. ಈ ಜಗವ ಮೂದಲಿಸಿ ಗೋಗರೆವ ಜೀವವೇ, ಆ ಜಗದ ಮೇರೆಯೂ ದೂರವಿಲ್ಲ'—ಎನ್ನುವ ಮಾತು ಮೆಲುಕು ಹಾಕುವಂತಾಗದೆ.

೬

ಈ ಕವಿತೆಗಳ ಶೈಲಿಯ ಬಗೆಗೆ ಒಂಡೆರಡು ಮಾತು ಮಾತ್ರ ಹೇಳಬಹುದು: ಕವಿತೆಗಳು ಮನಾನಂದಕರ: ಓದಿದಾಗ ಚಿತ್ತವನ್ನು ನಾಟಿ, ಭಾವದೊಳಯಿಂಕೆ ಪ್ರವೇಶಿಸಿ ರಸಜ್ಞರ ಮನಕ್ಕೆ ತಣಿವನ್ನುಂಟು ಮಾಡುತ್ತವೆ. ಕವಿತೆ ಕವಿತಾವಿರ್ಭಾವದ ಬಗೆಗಿರಲಿ, ಪ್ರಕೃತಿ ವರ್ಣನೆಯದಾಗಿರಲಿ, ವ್ಯಕ್ತಿ ಸನ್ನಿವೇಶ ನಿರೂಪಣಾತ್ಮಕವಾಗಿರಲಿ, ಅಲ್ಲಿ ಕವಿ, ಭಾವವಿವರಕ್ಕೆ ಸೂಕ್ತ ಚಿತ್ರಗಳನ್ನು ಸೃಷ್ಟಿಸಿ, ಕಣ್ಮುಂದೆ ನಿಲ್ಲುವಂತೆ ಮಾಡುವ ಚಿತ್ರಕಾರನ ಜಾಣ್ಮೆ ಪ್ರದರ್ಶಿಸುತ್ತಾನೆ. ಗೇಯತೆ—ಪದಗಳ ನಾದ ಮಾಧುರ್ಯ ಈ ಕವಿತೆಗಳ ಇನ್ನೊಂದು ಅಪೂರ್ವಗುಣ. ಹಿಂದಿನ ಕನ್ನಡ ಕವಿಗಳ ಹೆಗಲಮೇಲೆ ಈ ಕವಿ ನಿಂತು ಹೊಸ ಭಾವಗೀತೆ ಹಾಡುವಂತೆ ಗೋಚರಿಸುತ್ತದೆ. ಭಾವಗೀತೆಗಳ ಪ್ರಮುಖ ಗುಣ: ಗೇಯತೆ ಮತ್ತು ವೈಯಕ್ತಿಕತೆ ಎದ್ದು ಕಾಣುತ್ತವೆ. ಬಹುತೇಕ ಎಲ್ಲ ಕವಿತೆಗಳು ಸಮಯಸ್ಫೂರ್ತಿಯಿಂದಲೇ ಹೊರಹೊಮ್ಮಿವೆಯಾದುದರಿಂದ ಕವಿತೆ ಎನಿಸುತ್ತವೆ. ಕವಿತೆಗಳನ್ನೋದುವಾಗ ಕವಿಗೆ ಇದ್ದ ಪದ ಸಿರಿವಂತಿಕೆ ಸ್ಪಷ್ಟ: ಹಳಗನ್ನಡ ಹೊಸಗನ್ನಡ ದೇಶಿಗಳಿಂದ ಸೂರೆಗೊಂಡಿದೆ—ಮಾತ್ರವಲ್ಲ ಕವಿಗೆ ಆ ಪದಗಳನ್ನು ಔಚಿತ್ಯವರಿತು ಬಳಸಬಲ್ಲ ಕಲೆಗಾರನೆಂಬುದಕ್ಕೆ ಈ ಕೆಳಗಿನ ಉದಾಹರಣೆ ನೋಡಿ: ನಿಶೆಗೆ ಕಸಿವಿಸಿ ಬಹಳಾಗಲು; ಬಿಲ್ಲ ದಿಬ್ಬಣ; ಹಸೆಗೆ ನಿಲ್ಲುವ ಹಾಗಿದೆ; ಮಸಗಿದೆ ಮಂಗಳ; ಕರುಣೆಯ ಸರಿ; ಬೀಜಮೊಳೆ; ಕ್ಲೇಶಕಂಟಕ; ಹೃದಯಾರಾಮ ಕೊನರಬಹುದು; ಚಿಗುರಿನ ಹೊಗರು; ಕೊಸರಿ ಹೋಗು; ಏಕೆ ಅತ್ತೆ, ಹೇಳು ಮುತ್ತೆ; ನೀನು ನೋಯೆ, ಕಣ್ಣು ತೋಯೆ; ನಿಶೆಯ ಕಾಳಿಮೆ; ಒನಪು ಸೂಸೆ; ನವಿರು ನಡೆವ ನೆಲಕೆ-ಮೂಡೆ; ಬೈಗು, ಗೋಗರೆ, ಚಳಿಯೊಡ್ಡು, ಸೆಲೆ, ಮೈಕೊಡಹು, ಮೊರೆ, ಹುಡಿ, ಇನ, ಸುವ್ವಾಲೆ, ಹುಟ್ಟಹಾಕುತ, ತೆಪ್ಪ, ಉಳಿ, ಚಾಣ, ಕಚ್ಚು, ತಳವಾರ, ಮಾಳಿಗೆ, ಗೆಲವಗಂಬ, ಓಟು, ಗುದುಮುರಿಗೆ ಹಾಕು, ಅರಳು, ನೆಗ್ಗಿಲಮುಳ್ಳು, ಗೊಳಗುಳಿಕೆ. ಕಾರಿಕಂಟೆ, ಚೊಗಚಿ, ನಿಗುಡಿ, ಕವಡಿ, ಒಕ್ಕ, ಬಿತ್ತು, ಬಿಕನಾಸಿ, ಮಡಕೆ-ಮನ, ತೂಬು-ಇತ್ಯಾದಿ.

ಕಾವ್ಯಾನಂದರು ಬರೆವ ಶೈಲಿಯೇನೋ ರೋಮ್ಯಾಂಟಿಕ್ ಕವಿಗಳದೆನಿಸುತ್ತದೆ. ಆದರೆ ಒಮ್ಮೊಮ್ಮೆ ಕೆಲವು ಪದಗಳು ಆ ಶೈಲಿಯನ್ನು ಮುರಿದೊಗೆವಂತೆನಿಸುತ್ತವೆ; ಬುದ್ಧಿಯ ಬುಲ್‌ಡೋರ್ಝರು ಹೊಡೆ; ಶುದ್ಧಿಯ ಟ್ರ್ಯಾಕ್ಟರು ಹೊಡೆ;—ರೇಲ್ವೆ ಎಂಜಿನ್ ಪದ ಬಳಸುವಲ್ಲಿ 'ಹೊಗೆಬಂಡಿ' ಬಂದು ಕನ್ನಡವೆನಿಸಿದೆ, 'ಹೊಗೆ ಬಂಡಿಯೆ ಕರುಣೆದೋರು' ಎನ್ನುವಲ್ಲಿ ಹೊಂದಿದ ಪದವೃತ್ತಿ ಮೇಲೆ ಸರಿಹೊಂದದು ಎನಿಸುತ್ತದೆ. 'ತೂತುಬಿದ್ದಿಹ ಮಡಕೆ ಮನ' 'ಬ್ರಿಟಿಶರಾವುಗೆಗಳನು ಪೂಜಿಸುತ ದಿನಗಳೆದ:' 'ಮಣ್ಣಬೊಂಬೆಗಳಿಂದು ವಜ್ರದೇಹಿ' 'ತಪ್ತಹೃದಯದ ಕ್ಲೇಶಜ್ವಾಲಾ ಪ್ರದೀಪ', 'ಕುರುಡು ಜಯಮಾಲೆ'. 'ಮೊಳಕಾಲೂರಿ ಪಡೆವ ಸುಖ'

(ಹೈದರಾಬಾದದ ವಿಶಿಷ್ಟ ಕುರುಹು) ‘ ಶ್ರದ್ಧೆಯ ನೇಗಿಲ ’, ‘ ಒಳ್ಪಿನ ಕಲ್ಪವಲ್ಲರಿ ’, ‘ ನೀಚತೆಯ ನರಿ ’, ‘ ಎಲ್ಲರಿಗೂ ಓಟು ಬಂತು, ಒಳ್ಳೆಯವರ ಕಾಲಹೋಯ್ತು ’, ‘ ಅಳಿವ ಬಾಳಲ್ಲವದು ಹೊಳೆವ ತಿಳಿವಿನ ಬೆಳಕು ’, ಸ್ವಾತಂತ್ರ್ಯ ಜ್ಯೋತಿಯನು ಬಿರುಗಾಳಿ ಬಳಗದಲಿ ವಜ್ರಮುಷ್ಟಿಯ ನಡುವೆ ಉಳಿಸಿ ಬೆಳಗಿದ ಕಲಿ ’–ಸರದಾರ್ ಪಟೇಲ; ‘ ನಂಬಿಗೆಯ ಸಾರಣೆ ಹಂಬಲದ ಕಾರಣೆ ’, ‘ ಅಂತರಂಗದ ಅಂತರಿಕ್ಷ ’, ‘ ಭಾವ ಭಗಣ ’, ‘ ಹೂ ಮುಡಿದಿಹ ತರುಲತೆಗಳು ವಂದಿಸುತಿವೆ ಬಗ್ಗಿ ’ ‘ ಕಲ್ಲೆದೆಗೂ ನಲ್ಲಳ ಮುಖ ಜೀವನ ಸುಖವಾಗೆ ’, ‘ಆಸೆಯ ಬಳ್ಳಿ ’ ‘ ಮೇಘದ ಮೇಣೆ ’– ಇತ್ಯಾದಿ ಪದಪುಂಜಗಳು ಕಾಂತ ಪದಪುಂಜಗಳೆನ್ನಬೇಕು.

# ಕಾವ್ಯಾನಂದರ ಕಾವ್ಯಸಾಧನೆ

ಬಿ. ಎ. ಸನದಿ

ಭಾರತದ ವೈರಿಗಳು ಬಡ ತುರುಕರಲ್ಲ, ಸಿರಿ
ತಲೆಗೇರಿ ಕುಣಿಯುತಿಹ ಸ್ವಾರ್ಥಿಗಳು ಕೆಲವು ಜನ !
ಕೆಡುಕರವರೀ ಪಾಪ ಬಡ ಜನತೆ ಮೃತ್ಯುವೆ ?
ಬೆಚ್ಚಿದೆನು ಮನದಲ್ಲಿ ! ನಿಶ್ಚಯವು ಈ ಮಾತು :
ಬಡ ತುರುಕ ಬೇಡುವುದು ಅನ್ನ, ಅಲ್ಲ ಪಾಕಿಸ್ತಾನ !

—ನಾನಿನ್ನೂ ಬೆಳಗಾವಿಯಲ್ಲಿ ಮಾಧ್ಯಮಿಕ ಶಾಲಾ ವಿದ್ಯಾರ್ಥಿಯಾಗಿದ್ದ ಎಳೆವರಯದಲ್ಲಿಯೇ ನನ್ನ ಹೃನ್ಮನದ ಮೇಲೆ ಗಾಢ ಪ್ರಭಾವ ಬೀರಿದ ಕವನಗಳ ಲ್ಲೊಂದು : 'ಸಲಾಮ್ ಸಾಬ್'. 'ತೋರಣ' ಎಂಬ ಪಠ್ಯಪುಸ್ತಕದಲ್ಲಿತ್ತು. ಮೇಲೆ ಕಾಣಿಸಿದ ಅವತರಣಿಕೆ 'ಸಲಾಮ್ ಸಾಬ್' ಕವಿಯ ಬೀಜಮಾತು. ಈ ಸಾಲುಗಳನ್ನು ನಾನು ಹತ್ತು ಹತ್ತು ಸಲ ಹೇಳಿಕೊಳ್ಳುತ್ತಿದ್ದೆ ; "ಹುಟ್ಟಿನೊಳಗಿರ ಬಹುದು ಹಸಿದ ಹೊಟ್ಟೆಯಲಿ ಕುಲವುಂಟೆ ? ' ಎಂಬ ಪ್ರಶ್ನೆಯನ್ನು ನನ್ನಷ್ಟಕ್ಕೆ ನಾನೆ ಹಲವೊಂದು ಸಲ ಕೇಳಿಕೊಳ್ಳುತ್ತಿದ್ದೆ. ಪಠ್ಯ ಪುಸ್ತಕಗಳಲ್ಲಿದ್ದ ಕವನಗಳ ಹೊರತಾಗಿ ಇತರ ಕವನಗಳನ್ನೂ ಓದಬೇಕು, ರಸಗ್ರಹಣ, ಮಾಡಿಕೊಳ್ಳಬೇಕು-ಎಂಬ ಲವಲವಿಕೆ ನನ್ನಲ್ಲಿ ಚಿಗುರಿಕೊಳ್ಳುತ್ತಿದ್ದ ಆ ಕಾಲದಲ್ಲಿಯೇ 'ಸಲಾಮ್ ಸಾಬ್' ಬರೆದ ಕವಿ ಕಾವ್ಯಾನಂದರು ನನ್ನ ಅಭಿಮಾನದ ಕವಿಗಳಲ್ಲೊಬ್ಬರಾಗಿದ್ದರು. ಭಾರತದ ಬಿಡು ಗಡೆಯ ಆ ಕಾಲ ಕನ್ನಡದಲ್ಲಿ ರಮ್ಯಕಾವ್ಯದ ನಿಲುಗಡೆಯ ಕಾಲವೂ ಆಗಿತ್ತು. ಭಾರತದ ಜನಜೀವನದಲ್ಲಿ ಹೊಸ ಗಾಳಿ ಬೀಸುತ್ತಿದ್ದಂತೆ, ಕನ್ನಡ ರಮ್ಯಕಾವ್ಯದ ಪೈರು ಮಾಗಿ ನಿಂದಿತ್ತು. ಒಂದು ಸುಗ್ಗಿಯಾದೊಡನೆ ಮತ್ತೊಂದು ಪೈರಿನ ಉಳುಮೆ ಗಾಗಿ ಕನ್ನಡದ ನೆಲವೂ ಕಾಯ್ದಿತ್ತು. 1940-50ರ ಆ ಅವಧಿಯಲ್ಲಿ ಹೈದ್ರಾಬಾದ್ ಕರ್ನಾಟಕದ ಹೊಸ ಭರವಸೆಯ ಧ್ವನಿ ಹೊತ್ತು ಬಂದವರು ಶ್ರೀ ಸಿದ್ಧಯ್ಯ ಪುರಾಣಿಕ-ಕಾವ್ಯಾನಂದರು, 1953ರಲ್ಲಿ ಪ್ರಕಟವಾದ 'ಜಲಪಾತ' ಇವರ ಮೊದಲ ಕವನ ಸಂಗ್ರಹ.

ಕಳೆದ ಮೂರು ದಶಕಗಳಲ್ಲಿ ಕಾವ್ಯಾನಂದರು ಬರೆದು ಪ್ರಕಟಿಸಿದ ಕಾವ್ಯಕೃತಿಗಳ ಸಂಖ್ಯೆಯೇನೂ ದೊಡ್ಡದಲ್ಲ. ಆದರೆ ಕಾವ್ಯಗುಣ ಮತ್ತು ಕಾವ್ಯ ಸತ್ವಗಳನ್ನು ಗಣನೆಗೆ ತೆಗೆದುಕೊಂಡರೆ ಇವರ ಕಾವ್ಯ ಕನ್ನಡದ ನವೋದಯ ಕಾವ್ಯಕ್ಕೆ ಸಲ್ಲಿಸಿದ ಮಹತ್ವದ ಕೊಡುಗೆಯೆಂದೇ ಹೇಳಬೇಕು. ಈ ಮಾತಿನೊಡನೆ ಸಹ ಮತವುಳ್ಳವರಿಗೆ ಕೆಲವೊಂದು ಪ್ರಶ್ನೆಗಳು ಪೀಡಿಸುವ ಸಂಭವವುಂಟು. ಆಧುನಿಕ ಕನ್ನಡ ಕಾವ್ಯ ಪ್ರಗತಿಯ ರೆಕಾರ್ಡೀಕರಣಗೈದ ಚಾರಿತ್ರಿಕ ಗ್ರಂಥಗಳಲ್ಲಿ, ಲೇಖನಗಳಲ್ಲಿ ಕಾವ್ಯಾನಂದರಿಗೆ ಸಮುಚಿತ ಸ್ಥಾನವೇಕೆ ಪ್ರಾಪ್ತವಾಗಲಿಲ್ಲ ? ಕೆಲವು ಕನ್ನಡ ಅಂಥಾಲಜಿಗಳಲ್ಲಿ ಇವರ ಕವನಗಳಿಗೆ ಸಲ್ಲಬೇಕಾದ ಪ್ರಾತಿನಿಧ್ಯ ಏಕೆ ದೊರೆಯಲಿಲ್ಲ ? ಬೆನ್ನ ಹಿಂದಿನ ಬೆಳಕಿನಲ್ಲಿ ಮಾತ್ರ ಇವರೇ ಮುಂದಿನಲೆಯಾಗಿದ್ದಾರೆಂಬುದೊಂದು ಸಮಾಧಾನದ ಸಂಗತಿಯೇ ? ಕಣ್ಣ ಮುಂದಿನ ಬೆಳಕನ್ನೇ ಕಾಣದಿರುವವರ, ಅಥವಾ ಕಂಡೂ ಕಾಣದಂತಿರುವವರ ದೃಷ್ಟಿದೌರ್ಬಲ್ಯದಿಂದಾಗಿ ಪ್ರಾಮಾಣಿಕ ಓದುಗ ಐತಿಹಾಸಿಕ ಸತ್ಯವಾದ ಬೆಳಕಿನಿಂದ ವಂಚಿತನಾಗಬಹುದೆಂಬ ಅನುಮಾನದಿಂದ ತಮ್ಮಷ್ಟಕ್ಕೆ ತಾವೇ ಬೆನ್ನ ಹಿಂದಿನ ಬೆಳಕೆಂದುಕೊಂಡು 'ದುಯ್ಯಮಸ್ಥಾನ' ದಲ್ಲಿರಿಸಿಕೊಳ್ಳುವುದೊಂದು ಅಭಿಮಾನದ ಸಾಧನೆಯೆ ? ಕನ್ನಡದ ಪ್ರಾಮಾಣಿಕ ಓದುಗರು ಸ್ವಯಂಪ್ರೇರಣೆಯಿಂದ ಹತ್ತೂ ಕಡೆಯ ಕವಿಗಳ ಕಾವ್ಯವನ್ನೋದಿ ಅದರ ಬೆಲೆಕಟ್ಟಬಲ್ಲವರು ಇಂದಿಲ್ಲ–ನಾಳೆ ಈ ಪ್ರಶ್ನೆಗಳಿಗೆ ಉತ್ತರ ಹುಡುಕಲು ಹೊರಟು ಗೆಲ್ಲಬಹುದು, ಇಲ್ಲವೆ ಸೋಲಬಹುದು. ಪರಿಣಾಮವೇನೇ ಆಗಲಿ, ಈ ಮಾದರಿಯ ಪ್ರಶ್ನೆಗಳ ಅಸ್ತಿತ್ವವನ್ನು ಮಾತ್ರ ಅವರು ಅಲ್ಲಗಳೆಯಲಾರರು, ಆಧುನಿಕ ಕನ್ನಡದ ಸಮಗ್ರ ಕಾವ್ಯದ ಮೇಲೆ ತಮ್ಮ ತಿಳಿಗಣ್ಣಾಡಿಸುವ ಯಾರಾಗಲೀ ಕಾವ್ಯಾನಂದರಂಥ ಕವಿಗಳ ಗಣನೀಯ ಕಾವ್ಯ ಸಾಧನೆಯ ಮೇಲೆ ತಾತ್ಸಾರದ ಪರದೆಯೆಳೆಯಲಾರರು.

ಸ್ವತಃ ಶಿಕ್ಷಕ, ಕವಿ, ಕೀರ್ತನಕಾರರಾಗಿದ್ದು ಐದಾರು ಭಾಷೆಗಳಲ್ಲಿ ಪಂಡಿತರಾಗಿದ್ದ ಶ್ರೀ ಕಲ್ಲಿನಾಥ ಶಾಸ್ತ್ರಿಗಳ ಮಗನಾಗಿ ಜನ್ಮವೆತ್ತಿ ಬಂದ ಸಿದ್ಧಯ್ಯನವರು ಜನ್ಮತಃ ಕಾವ್ಯದೀಕ್ಷೆ ಪಡೆದು ಬಂದವರು. ಅವರ ಪ್ರಥಮ ಸಂಕಲನ 'ಜಲಪಾತ'ಕ್ಕೆ ಮುನ್ನುಡಿ ಬರೆಯುತ್ತ ವರಕವಿ ದ. ರಾ. ಬೇಂದ್ರೆಯವರಾಡಿದ ಮಾತುಗಳನ್ನಿಲ್ಲಿ ಗಮನಿಸಬಹುದು : "ಸಿದ್ಧಯ್ಯನವರ ಕೌಟುಂಬಿಕ ವಾತಾವರಣದಲ್ಲಿ ಮಹಾಕಾವ್ಯದ ಧ್ವನಿಗಳು ಅವರ ಬಾಲ್ಯದಿಂದಲೇ ದುಂದುಭಿಸುತ್ತಿದ್ದವು, ಪ್ರಾಯದ ಪ್ರಥಮ ಗ್ರಾಸದಲ್ಲಿಯೇ ಅವರು ಶರಣ ಸಾಹಿತ್ಯವನ್ನು ಮುಕ್ಕಿದರು ; ದೇಶಸೇವಾ ತತ್ಪರರಾದವರ ಸಂಗ ಸಹವಾಸಗಳಲ್ಲಿ ಕಾಲ ಕಳೆದರು. ಅವರು ಮಾಡಿದ ವಿದ್ಯಾಭ್ಯಾಸವೂ ಅವರ ಹೃದಯದವರೆಗೆ ಪ್ರವೇಶ ಮಾಡಿತು. ಇದೆಲ್ಲದರ ಪರಿಣಾಮವೆಂದರೆ ಅದರಲ್ಲಿ ಭಾವನೆಯ ವಾಯುವೇಗವೂ ಬುದ್ಧಿಯ ಅಗ್ನಿಗುಣವೂ ಸೇರಿಕೊಂಡಿದೆ... ಕನ್ನಡ ಕಂದ ಕಾವ್ಯಾನಂದರು ಇಪ್ಪತ್ತನೆಯ ಶತಮಾನದ ವಿಶ್ವಗ್ರಾಸಿಯಾದ ಜ್ವಾಲಾಮಾಲೆಯಲ್ಲಿ ಕಂಡ ಕಾಲದ ಘೋರ ರೂಪವನ್ನು ಅನೇಕ ಮುಖವಾಗಿ ವರ್ಣಿಸಿದ್ದಾರೆ.

ಅವರ ಕಾವ್ಯರಚನೆಯು ಅಸ್ತಿಭಾರಕ್ಕೆ ತತ್ತ್ವಗಳ ತೂಕವಿರುವುದರಿಂದಲೇ ಅವರ ರಾಗದ ತ್ವೇಷದ (ದ್ವೇಷದ ಅಲ್ಲ!) ನುಡಿಗಳಲ್ಲಿ ಬೆಂಕಿಯು ಜತೆಜತೆಗೆ ಬೆಳಕೂ ನುಗ್ಗುತ್ತದೆ."

ಕಾವ್ಯಾನಂದರ ಕಾವ್ಯವಾಣಿ ಪರಂಪರೆಯ ಬೇರುಗಳಿಂದ ನೀರುಂಡರೂ ಆಧುನಿಕ ಪ್ರಗತಿಯ ಪರಿಮಳ ಬೀರುವ ವಿಕಾಸವಾಣಿ. ಶರಣಸಾಹಿತ್ಯದ ಆಳವಾದ ಅಭ್ಯಾಸ, ಸಜ್ಜನ ದೇಶಸೇವಕರ ಮತ್ತು ಹಿರಿಯ ಸಾಹಿತಿಗಳ ಸಹವಾಸ, ಆದರ್ಶಗಳ ಆರಾಧನೆ, ತಾತ್ತ್ವಿಕ ಚಿಂತನೆ ಮತ್ತು ಮನುಷ್ಯನ ಭವಿಷತ್ತಿನ ಬಗ್ಗೆ ಶ್ರದ್ಧೆ — ಇವು ಕಾವ್ಯಾನಂದರ ಕಾವ್ಯಸಾಧನೆಯ ಪಂಚಶೀಲಗಳು. ಈ ಪಂಚತತ್ತ್ವಗಳ ಸಮನ್ವಯದಿಂದಾಗಿ ಸಿದ್ಧಯ್ಯನವರ ಕಾವ್ಯ ಸತ್ತ್ವಪೂರ್ಣವಾಗಿ ಬೆಳೆದುದನ್ನೂ, ನಡುನಡುವೆ 'ನೀತಿಬೋಧೆ'ಯೂ ಸುಳಿದು 'ಪುರಾಣಿಕತ್ವ'ದ ಕಳೆ ತಳೆದುದನ್ನೂ ಗುರುತಿಸಬಹುದು. ಶರಣಸಂಸ್ಕೃತಿಯ ಉಸಿರಾಗಿ ಹೊರಹೊಮ್ಮಿದ ಇವರ ಕಾವ್ಯದಲೆಗಳು ಹಲವೊಂದು ಹಲ ಪ್ರಗತಿಪರ ಧೋರಣೆಯ ಹೊಸ ಕವಿಗಳನ್ನೂ ದಂಗುಗೊಳಿಸುವುದುಂಟು; ಅನೇಕ ಸಲ ಲೋಕನಿಷ್ಠುರ ಶರಣನಂತೆ ನಿರ್ಭಿಡೆಯ ನುಡಿಗಳನ್ನಾಡಿದಾಗ 'ವ್ಯವಸ್ಥೆ'ಯ ಕೂಸುಗಳು ಮುಸು-ಮುಸು ಮಾಡುವುದುಂಟು.

ವೃತ್ತಿಯಿಂದ ಆಡಳಿತಗಾರರು (ಈಗ ನಿವೃತ್ತರು); ಪ್ರವೃತ್ತಿಯಿಂದ ಚಿಂತನಶೀಲ ಕವಿಗಳು. ಲೋಕಾಂತದ ದುಡಿತ, ಏಕಾಂತದ ಮಿಡಿತಗಳೆರಡನ್ನೂ ಮೇಳವಿಸಿಕೊಂಡ ಬದುಕಿನ ಹದ ಇವರದು. ಕಾಯಕನಿಷ್ಠೆ ಮತ್ತು ತಾತ್ತ್ವಿಕ ಚಿಂತನಗಳ ನಡುವೆ ನೀರವವಾಗಿ ನಡೆದ ಸ್ವಾನುಭವದ ಸಮುದ್ರ ಮಂಥನದಿಂದುಸಿ ಬಂದ ಅಮೃತಕಲಶ ಅವರ ಕಾವ್ಯ. ಮೂಲತಃ ಕವಿಗಳಾದರೂ ಕಳೆದ ಮೂರು ದಶಕಗಳಲ್ಲಿ ಅವರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಉಳುಮೆ ಮಾಡಿದ್ದಾರೆ; ಹಲವೊಂದು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಜಲಪಾತ, ಕರುಣಾಶ್ರಾವಣ, ಮಾನಸ ಸರೋವರ, ಕಲ್ಲೋಲಮಾಲೆ, ಮೊದಲು ಮಾನವನಾಗು—ಮುಂತಾದವು ಇವರ ಕಾವ್ಯಕೃತಿಗಳು. 'ರಜತರೇಖೆ'ಯಲ್ಲಿ ಗದ್ಯ-ಪದ್ಯ ರೂಪಕಗಳಿದ್ದರೂ, ಅದೂ ಮುಖ್ಯವಾಗಿ ಕಾವ್ಯಕೃತಿಯೆ. ವಿಕಾಸವಾಣಿ, ತುಪ್ಪಾರೊಟ್ಟಿ ಗೇ ಗೇ ಗೇ — ಇವು ನವ ಸಾಕ್ಷರರ ಮತ್ತು ಎಳೆಯರ ಸಚಿತ್ರ ಗೀತಸಂಗ್ರಹಗಳು. ಗದ್ಯದಲ್ಲಿ 'ಶರಣ ಚರಿತಾಮೃತ' ಮತ್ತು ಪದ್ಯದಲ್ಲಿ 'ವಚನೋದ್ಯಾನ' ಇವರ ಮಹತ್ವದ ಕೃತಿಗಳು. ಕಾವ್ಯಾನಂದರು ಕನ್ನಡ ಕಾವ್ಯೋದ್ಯಾನದಲ್ಲಿ ಕಾಲಿರಿಸಿದ ಕಾಲದಿಂದ ಕನ್ನಡ ಕಾವ್ಯದಲ್ಲಿ ಹಲವೊಂದು ಹೊಸ ಪ್ರಯೋಗಗಳು ನಡೆದರೂ, ಒಂದರ ಮೇಲೊಂದು ಸವಾರಿ ಮಾಡುವಂತೆ ಹೊಸ ಧ್ವನಿಗಳು ಸ್ಪರ್ಧೆ ಹೂಡಿದರೂ ಇವರು ತಾವು ನಂಬಿಕೊಂಡಿದ್ದ ಕಾವ್ಯಯೋಗದಿಂದ ವಿಚಲಿತರಾಗದೆಯೆ ಪ್ರಚಲಿತ ಜೀವನಾನುಭವಗಳಿಗೆ ತಮ್ಮ ಕವನ-ವಚನಗಳ ಮೂಲಕ ಪ್ರತಿಸ್ಪಂದಿಸಿದವರು. ನವ್ಯ, ಅತಿನವ್ಯ, ಅಸಂಗತ, ದಲಿತ, ದಿಗಂಬರ,

ಅಕಾವ್ಯ ವಿಪ್ಲವಕಾವ್ಯಗಳ ಪ್ರಕ್ಷುಬ್ಧ ತೆರೆಗಳ ಕೋಲಾಹಲದ ನಡುವೆಯೊಂದು ಪ್ರಶಾಂತ ದ್ವೀಪದಂತಿದ್ದು—

ಹಕ್ಕಿಯ ಗೂಡೊಂದು ಕಲಾಕೃತಿ
ಜೇಡನ ಬಲೆಯೊಂದು ಕಲಾಕೃತಿ
ಜೇನಿನ ಹುಟ್ಟೊಂದು ಕಲಾಕೃತಿ
ಹಾವಿನ ಹುತ್ತವೊಂದು ಕಲಾಕೃತಿ
ಗಿರಿ ದರಿ ತೊರೆ ಕೆರೆ ನರ ನಾರಿ
ಉರಗ ಖಗ ಮೃಗ ತರು ಲತೆ ರವಿ ಶಶಿ ತಾರೆ
ನಿನ್ನ ಪ್ರತಿಯೊಂದು ಕೃತಿಯೂ ಕಲಾಕೃತಿಯಯ್ಯಾ!
ಅನಂತಕೋಟಿ ವಸ್ತುಗಳ ಕಲಾತ್ಮಕವಾಗಿಯೇ ಸೃಷ್ಟಿಸಿಹೆ ನೀನು !
ನನ್ನ ಒಂದು ಕೃತಿಯಾವರೂ ಕಲಾಕೃತಿಯಾಗಿ ಹೊಮ್ಮುವಂತೆ
ಅದು ಹೊಮ್ಮಿದಾಗ ಹೆಮ್ಮೆ ಹಮ್ಮುಗಳು ನನ್ನನಾವರಿಸದಂತೆ
ಅನುಗ್ರಹಿಸಯ್ಯಾ ಸ್ವತಂತ್ರಧೀರ ಸಿದ್ಧೇಶ್ವರಾ !

— ಎಂಬ ನಿಲುಮೆ ತಳೆದು ತಮ್ಮ ಕವನ–ವಚನ–ರಚನೆಯಲ್ಲಿ ನಿರತರಾಗಿದ್ದವರು. ಕಾವ್ಯ ಪ್ರಪಂಚದಲ್ಲಿ ನಡೆದ ಪ್ರಯೋಗ-ಪ್ರತಿಯೋಗಗಳಿಂದ, ಸ್ಪರ್ಧೆ-ಪ್ರತಿಸ್ಪರ್ಧೆಗಳಿಂದ, ಹಾರಾಟ–ಏರಾಟಗಳಿಂದ ತಟಸ್ಥರಾಗಿದ್ದರೂ ಸಮಕಾಲೀನ ಸಾಮಾಜಿಕ ಜೀವನದಿಂದ ವಿಮುಖರಾಗದೆಯೇ ತಾವು ಕಂಡುಂಡ ಅನುಭವಗಳಿಗೆ ವಚನಕಾವ್ಯದ ಚೌಕಟ್ಟು ಹಾಕಿಡುವ ಕುಸುರಿಗೆಲಸವನ್ನು ಚೊಕ್ಕಟವಾಗಿಯೇ ಮಾಡಿದ್ದಾರೆ.

'ತಮ ತಮಗೆಲ್ಲ ನೊಸಲಕಣ್ಣರು–ತಮತಮಗೆಲ್ಲ ನಂದಿವಾಹನರು
ತಮ ತಮಗೆಲ್ಲ ಖಟ್ವಾಂಗ ಕಪಾಲ ತ್ರಿಶೂಲಧರರು!
ದೇವರಾರು ಭಕ್ತರಾರು ಹೇಳಿರಯ್ಯ
ಕೂಡಲ ಸಂಗಮದೇವಾ ನಿಮ್ಮ ಶರಣರು ಸ್ವತಂತ್ರರು'

ಬಸವಣ್ಣನವರ ಈ ಧೋರಣೆಯನ್ನನುಸರಿಸಿ ಸ್ವತಂತ್ರಧೀರ ಸಿದ್ಧೇಶ್ವರನ ಅಂಕಿತ ನಾಮದಲ್ಲಿ ನೂರಾರು ನಿಷ್ಠುರ ವಚನಗಳನ್ನಿವರು ಬರೆದು ಸಂಕಲಿಸಿದ್ದಾರೆ. ತಮ್ಮ ಇಂದ್ರಿಯಗಳ ಮೂಲಕ ಪಡೆವ ಹಲವೊಂದು ಜೀವನಾನುಭವಗಳಿಗೆ ಕಲಾಕೃತಿಯ ಆಕಾರ ಕೊಡಬೇಕೆಂದಾಗಲೆಲ್ಲ ತಂತ್ರಕ್ಕಿಂತ ತಿರುಳಿನೆಡೆಗೆ, ಮಂತ್ರಕ್ಕಿಂತ ಮರ್ಮದೆಡೆಗೆ, ಸ್ಪರ್ಧೆಗಿಂತ ಸಂಪನ್ನತೆಯೆಡೆಗೇ ಇವರ ಗಮನ ಹೆಚ್ಚು. ಅಂತೆಯೇ ಮೊದಲಿನಿಂದಲೂ ಇವರ ಕಾವ್ಯದಲ್ಲಿ ಸೌಂದರ್ಯ ಪ್ರಜ್ಞೆಯೊಡನೆ ಸಾಮಾಜಿಕ ಕಳಕಳಿ, ಬಡತನದ ಹಳಹಳಿ, ಶೋಷಣೆಯ ಬಗ್ಗೆ ಆಕ್ರೋಶ, ವ್ಯಕ್ತಿ ರಾಷ್ಟ್ರಜೀವನದಲ್ಲಿ ಸುಧಾರಣೆಯ ಆವೇಶ, ಸಾಮಾಜಿಕ ಪರಿವರ್ತನೆಯ ಪ್ರತೀಕ್ಷೆಗಳು ಹಾಸು–ಹೊಕ್ಕಾಗಿರುವ

ಸಂಗತಿ ಒಡೆದು ಕಾಣುತ್ತದೆ. ಒಟ್ಟಿನಲ್ಲಿ, ಕಾವ್ಯಾನಂದರದು ಶೋಷಣಾರಹಿತ ಲೋಕ ಕಲ್ಯಾಣ ದೃಷ್ಟಿ; ದೃಷ್ಟಿಯಂತೆ ಅವರ ಕಾವ್ಯ ಸೃಷ್ಟಿ

ದುಃಖಿತರ ಸುಯ್ಲಿನಲಿ ಸಿಡಿಮದ್ದು ನಾರುತಿದೆ
ದಾರಿದ್ರ್ಯದುಮ್ಮಳದಿ ಪ್ರಳಯ ಕಾದಿಹುದು
ಅಬಲೆಯರ ಕಣ್ಣೀರು ಕರೆಯುತಿದೆ ಬೆಂಕಿಮಳೆ
ಹಸಿದ ಹೊಟ್ಟೆಯ ಬಿಸಿಗೆ ಭೂಮಿ ಕಾದಿಹುದು !

ಎಂದು 'ಜಲಪಾತ'ದಲ್ಲಿ ಮಾನವ ಸಮಾಜವನ್ನು ಕುರಿತು ಸಿಡಿದೆದ್ದ ಈ ಕವಿ 'ನೆನ ಪಿಡು ಸಮಾಜವೇ ನಿನ್ನ ನಿರ್ಲಕ್ಷತನ ಕೊನೆಗಾಣಲೇ ಬೇಕು-ಸಾಗದಿನ್ನು!' ಎಂದು ಎಚ್ಚರಿಕೆಯೀಯುವುದೂ, 'ಕುರಿಗಳನು ಕಾಯ್ವುದಕೆ ತೋಳಗಳ ನಿಯಮಿಸಿದೆ; ಕುರಿ ತೋಳಗಳ ಕೊಲ್ವ ಕಾಲ ಬಂತು' ಎಂದು ವ್ಯಂಗವಾಗಿ ಬಿಸುಸುಯ್ಯುವುದೂ ಮಾರ್ಮಿಕವಾಗಿದೆ.

'ಹೊಸಲೋಕವ ಕಟ್ಟುವ ಹೊಣೆ ಇಂದಿನ ಬಡವನದು
ಹೊಸ ಬಾಳನು ರಚಿಸುವ ಹೊಣೆ ನಾಳಿನ ದುಡಿವನದು.

ಎಂಬಲ್ಲಿ ಕವಿಯ ಕಾಯಕನಿಷ್ಠೆ ಮತ್ತು ಭವಿಷತ್ತಿನ ಬಗ್ಗೆ ಭರವಸೆ,

ಬಡವ ಕಿಲುವುಗಳಿಂದ ಹುಡೆಯ ಕಟ್ಟಿಸಿಕೊಂಡು
ತಡೆವರಾರೆನ್ನನೆಂದುರಿದೆ ಬಹು ಧನಿಕ
ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾಯಬಲ್ಲುದೆ ?
ಬಡಜನರ ದುಃಖವೇ ಬರ ಸಿಡಿಲು ಧನಿಕ !

ಎಂಬಲ್ಲಿ ಶೋಷಣೆಯ ಬಗ್ಗೆ ಆಕ್ರೋಶ ಮತ್ತು ಕ್ರಾಂತಿಯ ಆವೇಶಗಳು ಹುರಿ ಗೊಂಡಿವೆ. ಕಾಲಮಾನಕ್ಕೆ ತಕ್ಕ ಪ್ರತಿಸ್ಪಂದನ 'ಜಲಪಾತ'ದ ವಿವಿಧ ಕವನಗಳಲ್ಲಿದೆ. ಜಾಗತಿಕ ಮಹಾಯುದ್ಧ, ಪರಕೀಯರಾಳಿಕೆ, ದಾಸ್ಯದ ದುಮ್ಮಾನ, ಬಿಡುಗಡೆಯ ಆಕಾಂಕ್ಷೆ, ಹೊಸ ಬದುಕಿನ ನಿರೀಕ್ಷೆ, ಸಮತೆ-ಮಮತೆಗಳಂಥ ಆದರ್ಶಗಳು, ಒಲವು ಚೆಲುವಿನ ಎಳೆತ-ಸೆಳೆತಗಳೂ, ಇಲ್ಲಿ ಶಬ್ದ ಚಿತ್ರಗಳಾಗಿ ಮೂಡಿ ಬಂದಿವೆ.

ಸಮತೆ-ಮಮತೆ ಕಾರ್ಯಕ್ಷಮತೆ ತತ್ವನಿಷ್ಠೆ ಶಿವರತಿ
ಬಂಧುಭಾವ ಭದ್ರವಾದ ಸ್ಮರಣ ಮನನ ಆಕೃತಿ
ಜಗಿಯಲಿನ್ನು ಸಾಕು ಸಾಕು ಮನುಜ ಮನದ ವೈಕೃತಿ
ಪ್ರಜಾರಾಜ್ಯ ಪಟ್ಟವೇರುತಿಹಳು ತಾಯಿ ಭಾರತಿ !

ಎನ್ನುವಲ್ಲಿ ಕವಿಯ ರಾಷ್ಟ್ರಪ್ರೇಮವೂ,

ಜ್ಞಾನ ಕರ್ಮಕೆ ಕಣ್ಣು, ಕರ್ಮ ಜ್ಞಾನಕೆ ಕಾಲು
ಮಧುರ ಸಹಕಾರವೇ ಉಭಯ ಹಿತಕಾರಿ

ಎರಡರನುರಕ್ತಿಯೇ ಮನುಜ ಸಂಕುಲ ಮುಕ್ತಿ
ಉಭಯ ವಿಭಜನೆ ಸಕಲ ಜಗಕೆ ಭಯಕಾರಿ

ಎಂಬಲ್ಲಿ ಮನುಷ್ಯ ಕುಲದ ಹಿತಚಿಂತನವೂ

ಮನಕೆ ಮನ ಸರಿತೂಕ ಎದೆಗೆ ಎದೆ ಸುರಲೋಕ
ಪ್ರೇಮದಲಿ ಸಹ ಮೇಲು ಕೀಳ್ಗಳೇನು ?

ಎಂಬಲ್ಲಿ ಸ್ತ್ರೀ-ಪುರುಷರೊಲವಿನಲ್ಲಿ ಸಮತೆಯರಿವೂ ವ್ಯಕ್ತವಾಗಿರುವುದನ್ನು ಕಾಣಬಹುದು.

ತಾರುಣ್ಯದಾವೇಶ, ಆದರ್ಶಪ್ರೇಮ, ರಾಷ್ಟ್ರಭಕ್ತಿ, ಕ್ರಾಂತಿವಿಚಾರ, ಸ್ತ್ರೀ-ಪುರುಷರಾಕರ್ಷಣೆಗಳೆಲ್ಲ ಅಭಿವ್ಯಕ್ತಿ ಪಡೆದ 'ಜಲಪಾತ'ದ ಧಾಟಿ ಗಡುಸಾದರೆ, ಕಾವ್ಯಾನಂದರ ಮುಂದಿನ ಕೃತಿ 'ಕರುಣಾಶ್ರಾವಣ'ದ ಸೊಗಸೇ ಬೇರೆ, ಇಲ್ಲಿ ಪ್ರಕೃತಿ ಪ್ರೇಮದಿಂದ ತುಂಬಿದ ಶಬ್ದಚಿತ್ರಗಳು ರಸಿಕನ ಹೃದಯವನ್ನು ಸೂರೆಗೊಳ್ಳುತ್ತವೆ. ವಿಶ್ವವೇ ಒಂದು ಕಾವ್ಯವೆಂಬ ಕಲ್ಪನೆ ಇಲ್ಲಿ ಗರಿಗೆದರಿದೆ :

"ನೆಲವ ಕಾಗದ ಮಾಡಿ ಜಲವ ಮಸಿಯನು ಮಾಡಿ
ಸುಳಿದು ಬೀಸುವ ಗಾಳಿಯನೆ ಭಾವ ಮಾಡಿ
ಸಲೆ ಸೃಷ್ಟಿಕಾವ್ಯವನು ಬರೆಯುತಿಹ ಕಲೆಗಾರ"

ಇಂಥ ಸೃಷ್ಟಿ 'ಕವಿಯಾಗು ಕವಿಯಾಗು' ಎಂದು ಸಾರಿದಾಗ ರಸಿಕನ ಅಂತರಂಗದಲ್ಲಿ ಪ್ರಕೃತಿಪ್ರೇಮ ಜಾಗ್ರತಗೊಂಡು ಅದರ ಲಯಬದ್ಧ ಜೀವನದಿಂದ ಮನುಷ್ಯ ಜೀವನಕ್ಕೆ ಚೈತನ್ಯ ತುಂಬಿಕೊಳ್ಳುವ ಹಂಬಲದೊಡನೆ ಅವನ ಸವಿನೋವು, ಮಧುರ ಮರುಗು–ಮಿಡುಕುಗಳೆಲ್ಲ ಕಾವ್ಯರೂಪದಲ್ಲಿ ಪರ್ಯಾವಸಾನಗೊಂಡು ಸಹೃದಯರಿಗೆ ರಸಾನಂದ ನೀಡುತ್ತವೆ.

ನನ್ನ ಮನಕಂಟಿಹುದು ಪೂರ್ಣತೆಯ ಪಿಪಾಸೆ
ಎಂದಿಗಾದರು ಒಮ್ಮೆ ಅದನು ಪಡೆವಾಸೆ

ಎಂದು ಕವಿ ತನ್ನ ಸಾಧನೆಯ ಸೀಮಾರೇಷೆಯನ್ನು ತಾನೆ ಸೃಷ್ಟಿಸಿಕೊಂಡು ಅದನ್ನು ತಲುಪಲು ತವಕಗೊಳ್ಳುವ ರೀತಿ 'ಕರುಣಾಶ್ರಾವಣ'ದ ಅನೇಕ ಕವನಗಳಲ್ಲಿ ಒಡಮೂಡಿದೆ.

ಈ ಸಂಕಲನದಲ್ಲಿಯ ಕಾಶ್ಮೀರದಲ್ಲಿ ಕಾರ್ಗಾಲ ಮತ್ತು ಕರುಣಾಶ್ರಾವಣ ಕವನಗಳು ಕಾವ್ಯಾನಂದರ ಅತ್ಯುತ್ತಮ ರಸಗವಿತೆಗಳು.

ಗಜಚರ್ಮಮೇಘ ಭಸಿತಾಂಗ ಹಿಮವು ಗಂಗೋತ್ತಮಾಂಗ ಶೃಂಗ
ಈ ಬೆಟ್ಟರುದ್ರ ಶ್ರೀನಗರ ಗೌರಿ–ರಮಣೀಯ ಉಭಯ ಸಂಗ

ಎಂದು ಕಾಶ್ಮೀರದಲ್ಲಿ ಕಂಡ ಕಾರ್ಗಾಲದವತಾರಕ್ಕೆ ಹಿನ್ನೆಲೆಯೊದಗಿಸಿದ ಕಾವ್ಯಾನಂದರ ಲೇಖನಿ —

ಭೂಮಿಗೆ–ವ್ಯೋಮಕೆ ಪಾಣಿಗ್ರಹಣ
ಮೋಡದ ಚಪ್ಪರ ಮಿಂಚಿನ ತೋರಣ
ಆಲಿಯ ಅಕ್ಷತೆ ಗಿರಿ ದರಿ ಗಾಯನ
ಸಿಡಿಲ ಪಟಾಕಿಯು ದಿಸೆಗಳ ನರ್ತನ
ಕರುಣಾಶ್ರಾವಣ ಶುಭ ಸಂತಾನ

ಎಂಬಂಥ ಚಿತ್ತಾಕರ್ಷಕ ಪ್ರಕೃತಿಚಿತ್ರಗಳನ್ನೂ ನೀಡಬಲ್ಲುದೆಂಬುದಕ್ಕೆ ಈ ಸಂಕಲನದಲ್ಲಿ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಉದಾಹರಣೆಗೆ ಇನ್ನೊಂದು ಚಿತ್ರವನ್ನವ ಲೋಕಿಸಿ—

ಮೋಡಗಳ ಜಡೆ ಬಿಚ್ಚಿ ಮೈದೊಳೆದುಕೊಳುತಿಹಳು
    ಬಯಲ ಭಾಮಿನಿ ಜಗದ ಮಣೆಯ ಮೇಲೆ
ಕೇಶರಾಶಿಯು ನೀರು ತೊಟ್ಟಿಕ್ಕಿ ಸುರಿಯುತಿದೆ
    ಇದಕೆ ಜಗವೆನ್ನುವುದು ಮಳೆಯ ಲೀಲೆ !

ಪ್ರಕೃತಿಯ ಕರೆ ಕೇಳಿ ಕವಿಯಾದವನಿಗೆ ಇಂಥ ಅನೇಕ ರೋಮಾಂಚಕ ಚಿತ್ರಗಳು ಕಂಡು ಕಣ್ಮನ ತುಂಬಬಹುದು. ಆದರೆ ಪ್ರಕೃತಿಯಲ್ಲಿಯೇ ಮೈಮರೆಯುವುದು ಈ ಕವಿಯ ಧರ್ಮವಲ್ಲ. ಬದುಕಿನ ವಿವಿಧ ಅನುಭವಗಳಿಗೆ ವಿಮುಖನಾಗಿರುವುದು ಸುಖದ ಲಕ್ಷಣವಲ್ಲ. 'ನೂರು ನೋವಿನ ಮುಳ್ಳ ಲೆಕ್ಕಣಿಕೆಯಿಂದಲೇ ಬರೆಯ ಬಹುದೊಮ್ಮೊಮ್ಮೆ ಅಳಲ ಹಾಡಿ' ಎಂಬುದು ಈ ಕವಿಯ ನಂಬಿಕೆ. ಆದರೆ, ಈ ಸೋವು, ಈ ಅಳಲು, ದುಃಖ ದುಮ್ಮಾನಗಳು, ಕಷ್ಟ-ಕಾರ್ಪಣ್ಯಗಳೆಲ್ಲ ಮನುಷ್ಯನಿರ್ಮಿತವಷ್ಟೆ ? ಈ ಸಾಮಾಜಿಕ ಅಳಲು ಮನುಷ್ಯನಿಂದಲೇ ಅಳಿಸಲ್ಪಡ ಬಲ್ಲುದೆಂಬ ವಿಚಾರ-ವಿಮರ್ಶೆ ಇವರ 'ಮಾನಸ ಸರೋವರ'ದ ಕವನಗಳಲ್ಲಿ ಒಡಮೂಡಿದೆ :

ಈ ನಗುವ ನಂದನವ ಮಸಣ ಮಾಡಿದವ ನೀನೇ
ಈ ಮಸಣದಲಿ ಮತ್ತೆ ವನ ಬೆಳೆಸುವವ ನೀನೇ
ನಿನಗೆ ನೀನೇ ನಿನಗೆ ನೀನೇ ನಿನ್ನ ಕೆಡಿಸುವವ ನೀನೇ
ನಿನಗೆ ನೀನೇ ನಿನಗೆ ನೀನೇ ನಿನ್ನ ಸರಿಪಡಿಸುವವ ನೀನೇ !

ಮಾನವತೆಯನ್ನೇ ಹುಗಿಯುವ 'ಮನದ ಮಸಣ'ದ ಹೊಲಸ ಕಿತ್ತೊಗೆದು, ಲೇಸಿನ ಬೆಳಸು ಬರುವಂತೆ 'ಬುದ್ಧಿಯ ಬುಲ್‌ಡೋಝರು ಹೊಡೆ, ಶುದ್ಧಿಯ ಟ್ರ್ಯಾಕ್ಟರು ಹೊಡೆ, ಶ್ರದ್ಧೆಯ ನೇಗಿಲು ಹೊಡೆ, ಸಿದ್ಧಿಯ ಸಿರಿ ಬೆಳೆಯನು ಪಡೆ !' ಎಂಬುದು ಈ ಕವಿಯ ಕಿವಿಮಾತು.

ನಿತ್ಯವೂ ಹೊಸ ಆಸೆ ಅಂಕುರಿಸಬಹುದಿಲ್ಲಿ
ನಿತ್ಯವೂ ಅಂಕುರವು ಕಮರಬಹುದು
ಚಿತ್ತಭೂಮಿಯು ಮಾತ್ರ ಫಲವತ್ತವಾಗಿರಲಿ
ಮತ್ತೆ ಹೃದಯಾರಾಮ ಕೊನರಬಹುದು !

ಈ ಭರವಸೆಯ ಧ್ವನಿ ಬದುಕಿಗೆ ಬಲದುಂಬಬೇಕಾದರೆ ಮಾನವ-ಮಾನವರ ನಡುವಿನ ಬೇಲಿಗಳೆಲ್ಲ ಇಲ್ಲವಾಗಿ ಮಾನವತೆಯ ಮಹಾಪಟ್ಟಾಭಿಷೇಕ ನಡೆಯಬೇಕು. ಅದಕ್ಕಾಗಿ ಕವಿಯ ಕೋರಿಕೆ—

ಹಿಂದು-ಮುಸ್ಲಿಮನಾಗು
ಬೌದ್ಧ ಕ್ರೈಸ್ತನೆ ಆಗು
ರಾಜಕಾರಣಿಯಾಗು
ರಾಷ್ಟ್ರಭಕ್ತನೆ ಆಗು
ಕಲೆಗಾರ ವಿಜ್ಞಾನಿ ವ್ಯಾಪಾರಿಯಾಗು
ಏನಾದರೂ ಆಗು
ಮೊದಲು ಮಾನವನಾಗು

'ಮೊದಲು ಮಾನವನಾಗು' ಸಂಕಲನದ ಮುಖ್ಯ ಸಂದೇಶವಿದು. "Humanity is the spirit of the Supreme Being on earth and that humanity is standing amidst ruins hiding its nakedness behind tattered rags shedding tears upon hollow cheeks and calling for its children with pitiful voice" ಎಂದ ಖಲೀಲ್ ಗಿಬ್ರಾನ್‌ರ ದಾರ್ಶನಿಕ ಧ್ವನಿ ಇಲ್ಲಿ ನೆನಪಾಗುತ್ತದೆ. ಮಾನವತೆಯ ಈ ಮಹದಾಸೆ ಸ್ವತಂತ್ರಧೀರ ಸಿದ್ಧೇಶ್ವರರ ವಚನಗಳಲ್ಲಿ ಬಗೆಬಗೆಯಾಗಿ ಮೊಗದೋರಿದೆ. ಸಮಕಾಲೀನ ಸಂದರ್ಭದಲ್ಲಿ ಕವಿಯ ಮೊರೆ—

ಗಾತ್ರಕ್ಕೆ ಪಾತ್ರತೆಯ ಬಲಿ ಅಗಲಕೆ ಆಳದ ಬಲಿ
ಆಳಕ್ಕೆ ಎತ್ತರದ ಬಲಿ ಎತ್ತರಕ್ಕೆ ಬಿತ್ತರದ ಬಲಿ
ನಿರ್ಜೀವಕ್ಕೆ ಜೀವದ ಬಲಿ ಬಾಳದ್ದಕ್ಕೆ ಬಾಳಿನ ಬಲಿ
ತನಗೆ ತಾನೆ 'ಅಲೆರ್ಜಿ'ಯಾಗಿದ್ದಾನೆ ಮಾನವ
ತನಗೆ ತಾನೆ ಮೂಕ ಅರ್ಜಿಯಾಗಿದ್ದಾನೆ ಮಾನವ !
ಮಾನವನಿಗೇ ಸಮಸ್ಯೆಯಾಗಿದ್ದಾನೆ ಮಾನವ !
ಇದುವರೆಗೆ ಏನೇನೋ...ವರಗಳನ್ನು ಇತ್ತಿರುವಿಯಂತೆ
ಇಂದು ನೀಡು ನಮಗೆ ಮಾನವರಾಗುವ ವರವನ್ನು
ಸ್ವತಂತ್ರಧೀರ ಸಿದ್ಧೇಶ್ವರಾ !

ಕಾವ್ಯಾನಂದರ ಲೋಕ ಕಲ್ಯಾಣದೃಷ್ಟಿಗೆ ವಚನಕಾವ್ಯ ತುಂಬಾ ಪರಿಣಾಮಕಾರಿಯಾದ ಮಾಧ್ಯಮವಾಗಿದೆ. ಅವರ 'ಕಲ್ಲೋಲ ಮಾಲೆ'ಯಲ್ಲಾಗಲೀ, 'ವಚನೋದ್ಯಾನ'ದಲ್ಲಾಗಲೀ ಅಡಕಗೊಂಡ ವಿಷಯುಗಳ ವ್ಯಾಪ್ತಿ ಅದ್ಭುತವಾಗಿದೆ. ಬಾಲ್ಯದಿಂದಲೂ ಅವರ ಮನಸ್ಸಿನ ಮೇಲಾದ ಶರಣಸಾಹಿತ್ಯ ಸಂಸ್ಕೃತಿಯ ಪ್ರಭಾವಗಳು ಅವರು ಬೆಳೆದಂತೆ ಪಡೆದ ಸಿಹಿ-ಕಹಿ ಅನುಭವಗಳೊಡನೆ ಸೇರಿ ಶಬ್ದಶರೀರಧಾರಣ ಮಾಡಿ ಆಧುನಿಕ ವಚನಸಾಹಿತ್ಯದ ಗಾತ್ರವನ್ನೂ ಪಾತ್ರವನ್ನೂ ಹೆಚ್ಚಿಸಿವೆ. ಇತರ ಶರಣ ಕವಿಗಳೂ ಇಂದು ವಚನಸಾಹಿತ್ಯ ನಿರ್ಮಾಣದಲ್ಲಿ ತೊಡಗಿರುವುದುಂಟು. ಆದರೆ, ವಿವಿಧ ಸ್ತರಗಳಲ್ಲಿ ಅಧಿಕಾರಿಯಾಗಿ, ಆಡಳಿತಗಾರರಾಗಿ, ನಾಡಿನೊಳಹೊರಗೂ ಸಂಚರಿಸಿ ಇವರು ಪಡೆದ ಅನುಭವ ಇತರ ವಚನಕಾರರಿಗೆ ದೊರೆಯುಬಹುದೆಂದು ನನಗೆನಿಸುವುದಿಲ್ಲ. ಅಂತೆಯೇ ಹುಟ್ಟಿನಿಂದಲೇ ಕಾವ್ಯರಚನೆಗೆ 'ಸಿದ್ಧಯ್ಯ' ಎಂದುಕೊಂಡು ಬೆಳೆದು ಬಂದ ಕಾವ್ಯಾನಂದರು ಆಧುನಿಕ ಕನ್ನಡ ಕಾವ್ಯದಲ್ಲಿ ಅಳಿಸಿಹೋಗದಂಥ ವಿಶಿಷ್ಟಸ್ಥಾನ ಸಂಪಾದಿಸಿದ್ದಾರೆಂದೇ ಹೇಳಬೇಕು. ಈ ಕವಿಯೇ ಕಲ್ಲೋಲ ಮಾಲೆಯಲ್ಲಿ ಹೇಳಿರುವಂತೆ —

ಮಾನವರು ಕೆಟ್ಟಾರು
    ಮಾನವತೆ ಉಳಿದೀತು !
ಕವಿ ದೇಹಬಿಟ್ಟಾನು
    ಕವಿತೆಯುಳಿದೀತು !
ಕೃತಿಗಿಳಿಯದಿದ್ದರೂ
    ಕನಸೊಂದು ಉಳಿದೀತು !
ಅದನುಂಡೆ ಬರಲಿರುವ
    ಮನಸು ಬೆಳೆದೀತು !

# ಡಾ. ಸಿದ್ಧಯ್ಯ ಪುರಾಣಿಕರ ವಿಚಾರಧಾರೆ!

--('ಬಸವಣ್ಣನವರ ಜೀವನ ಹಾಗೂ ಸಂದೇಶ' ಕೃತಿ ಕುರಿತು)

**-ಡಾ. ಮಲ್ಲಿಕಾರ್ಜುನ ಶಿ. ಲಠ್ಠೆ**

ಕನ್ನಡದ ಧೀಮಂತ-ಶ್ರೀಮಂತ ಕವಿಗಳಲ್ಲಿ ಅರುವತ್ತು ವರುಷಗಳ ಅಂಚಿನಲ್ಲಿರುವ ಶ್ರೀ. ಸಿದ್ಧಯ್ಯ ಪುರಾಣಿಕರೂ ಒಬ್ಬರು. ಇವರು ಕವಿಗಳಿದ್ದಂತೆ, ನಾಟಕಕಾರರೂ, ವಿಮರ್ಶಕರೂ, ವಚನಕಾರರೂ, ವಿಚಾರವಾದಿಗಳೂ ಆಗಿದ್ದಾರೆ. ಇವರ ಆಳವಾದ ಅನುಭವಕ್ಕೆ ಶರಣ ಸಂಸ್ಕೃತಿಯು ಸ್ಫೂರ್ತಿಯ ಚಿಲುಮೆಯಾಗಿದೆ. ಬಸವ ಮತದ ನಿಜವಾದ ಅನುಯಾಯಿಗಳಾಗಿದ್ದು ಬಸವಣ್ಣನನ್ನು ಸಖ, ದಾರ್ಶನಿಕ, ಮಾರ್ಗದರ್ಶಕ ಎಂದುಕೊಂಡು ಗೌರವಿಸಿದ್ದಾರೆ.

1941 ರಲ್ಲಿಯೆ 'ಆತ್ಮಾರ್ಪಣ' ಎಂಬ ನಾಟಕ ಬರೆದು ಬಸವಣ್ಣನ ಪಾತ್ರ ವಹಿಸಿ ನಿಜ ಜೀವನದಲ್ಲೂ ಅಂಥ ಬದುಕನ್ನು ಗೆದ್ದು ಬಂದ ಡಾ. ಪುರಾಣಿಕರೂ ಮಹಾನುಭಾವರು. ಇಂಥವರನ್ನು ಗುರುತಿಸಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವು ಧಾರವಾಡ ಶ್ರೀ ಮೃತ್ಯುಂಜಯ ಶ್ರೀಗಳವರ ವಿಶೇಷ ವ್ಯಾಖ್ಯಾನ ಮಾಲೆಯ ಉಪನ್ಯಾಸಕರನ್ನಾಗಿ ಆಮಂತ್ರಿಸಿದ ಪ್ರತಿಫಲವಾಗಿ 'ಬಸವಣ್ಣನವರ ಜೀವನ ಹಾಗೂ ಸಂದೇಶ' ಎಂಬ ಕೃತಿಯು ಕರ್ನಾಟಕ ವಿಶ್ವವಿದ್ಯಾಲಯದಿಂದ 1977 ರಲ್ಲಿ ಪ್ರಕಟವಾಗಿರುತ್ತದೆ.

ಈ ಕೃತಿಯಲ್ಲಿ ಪುರಾಣಿಕರ ಮೂರು ಉಪನ್ಯಾಸಗಳಿರುತ್ತವೆ. ಭಕ್ತಿಭಂಡಾರಿ ಬಸವಣ್ಣನ ಜೀವನ ಮತ್ತು ಸಂದೇಶ ಇಲ್ಲಿಯ ಪ್ರಮುಖ ವಿಷಯವಾಗಿದೆ. ಇದರಲ್ಲಿ

ಒಟ್ಟು ಎಂಟು ವಿಭಾಗಗಳಿವೆ.

೧. ಬಸವಣ್ಣನವರ ಜೀವನ
೨. ಹೊಸ ಧರ್ಮದೃಷ್ಟಿ
೩. ಅಸ್ಪೃಶ್ಯತೆಯ ಅಭಿಶಾಪ
೪. ಸಮತೆಯ ಸಮಗ್ರಕ್ರಾಂತಿ
೫. ಆರ್ಥಿಕ ಅಸ್ತಿವಾರ
೬. ಮೌಢ್ಯದ ಚಕ್ರವ್ಯೂಹ

೭. ಸಾಂಸ್ಕೃತಿಕ ಕ್ರಾಂತಿ
೮. ಹಿನ್ನೋಟ–ಮುನ್ನೋಟ.

ಬಸವಣ್ಣನ ಜೀವನವೆಂದರೆ ಅದೊಂದು ಊಹಾಪೋಹಗಳಿಂದ ಕೂಡಿದ ಚರಿತೆ. ಇತಿಹಾಸ ಸಂಗತಿಗಳ ಅಭಾವದಿಂದಾಗಿ ಆತನ ಜನನ, ಉಪನಯನ, ವಿದ್ಯಾಭ್ಯಾಸ, ವಿವಾಹ, ರಾಜ್ಯಕಾರಭಾರ, ಮರಣಗಳ ಘಟನೆಗಳು ಅಸ್ಪಷ್ಟವಾಗಿಯೆ ಹುಟ್ಟಿಕೊಂಡು ಬಂದಿರುತ್ತವೆ. ಕವಿಗಳದು ಕಲ್ಪನಾಲೋಕವೇದೂ, ಪುರಾಣಕಾರರದು ಪವಾಡ ಸೃಷ್ಟಿಯೆಂದುಕೊಂಡು ಬಸವಣ್ಣನ ಹಾಗೂ ಸಮಕಾಲೀನ ಶರಣರ ವಚನಗಳನ್ನು ಆಧರಿಸಿ–ನಿಜಚರಿತ್ರೆಯೊಂದನ್ನು ಹೊಸೆಯಲು ವಿಮರ್ಶಕರು ಪ್ರಯತ್ನಿಸಿದ್ದಾರೆ. ಅಂಥ ವಿದ್ವಾಂಸರಲ್ಲಿ ಡಾ. ಪುರಾಣಿಕರ ಈ ಕೃತಿಯೂ ಒಂದಾಗಿರುತ್ತದೆ. ಹಲವಾರು ಇತರ ವಿದ್ವಾಂಸರ, ಶಾಸನಕಾರರ, ಇತಿಹಾಸಕಾರರ, ಪುರಾಣಕರ್ತರ ಹಾಗು ಕಾಲ ಜ್ಞಾನಿಗಳ ವಿಚಾರಗಳನ್ನು ಮೂಲಗ್ರಂಥಗಳಿಂದ ಆಯ್ದುಕೊಂಡು ಡಾ. ಪುರಾಣಿಕರು ಬಸವಣ್ಣನ ಚರಿತ್ರೆಗೆ ಹೊಸಬೆಳಕು ನೀಡಲು ಪ್ರಯತ್ನಿಸಿದ್ದಾರೆ. 'ಬಸವಣ್ಣನವರ ಜನನವನ್ನು 1130–31 ರಿಂದ ಹಿಂದಕ್ಕೆ ಎಳೆದರೆ ಮಂಗಳವಾಡದಲ್ಲಿ ಅನೇಕ ವರುಷ ಅವರನ್ನು ಅಪ್ರಸಿದ್ಧರನ್ನಾಗಿ ಇರಿಸಬೇಕಾಗುತ್ತದೆ. 1167ಕ್ಕೆ ಆಚೆ ಅವರ ಮರಣ ಕಾಲವನ್ನು ಜಗ್ಗಿದರೆ ಕೂಡಲ ಸಂಗಮದಲ್ಲಿ ಅಜ್ಞಾತವಾಸದಲ್ಲಿ ಅವರನ್ನು ಕೊಳೆಸಬೇಕಾಗುತ್ತದೆ.' ಎಂದಂದು ಇದುವರೆಗಿನ ಚಾರಿತ್ರಿಕಾಂಶಗಳ ಆಧಾರದಿಂದ ಸಾಮಾನ್ಯ ಗ್ರಹಿಕೆಗೆ ವಾಲಿ ಬಸವಣ್ಣನ ಜೀವಿತ ಕಾಲವನ್ನು ಹೀಗೆ ವಿಭಜಿಸಿದ್ದಾರೆ.

ಜನನ : 1130–31 ರಲ್ಲಿ ಬಾಗೇವಾಡಿಯಲ್ಲಿ.
ಉಪನಯನ : 1138—39 ರಲ್ಲಿ ಬಾಗೇವಾಡಿಯಲ್ಲಿ.
ವಿಪ್ರಕರ್ಮಾಚರಣೆ—ವಿದ್ಯಾಭ್ಯಾಸ : 1146—47ರ ವರೆಗೆ -ಬಾಗೇವಾಡಿ ಇಂಗಳೇಶ್ವರದಲ್ಲಿ
ಕೂಡಲಸಂಗಮಕ್ಕೆ ಪ್ರಯಾಣ : 1146--47 ರಲ್ಲಿ
ಮಂಗಳವಾಡಕ್ಕೆ ಪ್ರಯಾಣ : 1154 ರಲ್ಲಿ
ಮಂಗಳವಾಡದಲ್ಲಿ ಕರಣಿಕವೃತ್ತಿ
ದಂಡನಾಥ ಪದವಿ, ಅನುಭವ ಮಂಟಪದ ಆರಂಭ : 1154—55 ರಲ್ಲಿ
ಕಲ್ಯಾಣಕ್ಕೆ ಪ್ರಯಾಣ : 1156
ಕೂಡಲ ಸಂಗಮಕ್ಕೆ ನಿರ್ಗಮನ ಮತ್ತು ಅಲ್ಲಿಯೇ ಬಯಲಾದುದು 1167 ರ ಕೊನೆಗೆ

ಬಸವಣ್ಣ ದೇವಮಾನವ ಎಂಬುದು ಪುರಾಣಿಕರ ಅಭಿಮತ. ಬಸವಣ್ಣ ಮೂರು ಪಟ್ಟ, ಚನ್ನಬಸವಣ್ಣ ಎರಡು ಪಟ್ಟ ಎಂಬ ಜೀವಿತ ಅವಧಿಗಳನ್ನು ಒಪ್ಪಿಕೊಳ್ಳುವುದು ವಿಹಿತ ಎಂದಿದ್ದಾರೆ. ಬಾಗೇವಾಡಿ ಆತನ ಹುಟ್ಟಿದ ಊರು. ಮಾದರಸ,

ಮಾದಲಾಂಬೆಯರು ತಂದೆ ತಾಯಿಗಳು. ನಾಗಲಾಂಬೆ ಅಕ್ಕ, ಚೆನ್ನಬಸವಣ್ಣ ಅಳಿಯ. ಮಾವ ಬಲದೇವ ಈ ಮಾತುಗಳನ್ನೂ ಒಪ್ಪಿಕೊಂಡು ಜೀವನ ಚರಿತ್ರೆಯನ್ನು ಹೆಣೆದು ಕೊಂಡು ಹೋಗಿದ್ದಾರೆ. ಬಸವಣ್ಣನ ಬಾಲ್ಯ ಜೀವನದ ಬಗ್ಗೆ ಬರೆಯುತ್ತ 'ಬಾಲ ಬಸವ ತನ್ನ ಮೊದಲ ಎಂಟು ವರುಷಗಳನ್ನು ಎಂತು ಕಳೆದ ? ಅಗ್ರಹಾರಾಧಿಪತಿಯ ಮಗನೆಂದ ಮೇಲೆ ಊರಿಗೆಲ್ಲ ಮುದ್ದಿನ ಸೂರೆಯಾಗಿಯೆ ಬೆಳೆದಿರಬೇಕು–ಇದು ಮುಖ್ಯವಲ್ಲ. ಯಾವ ಒಲವುಗಳನ್ನು ಅಳವಡಿಸಿಕೊಳ್ಳುತ್ತ ಬೆಳೆದನು, ಯಾವ ಕನಸು ಗಳನ್ನು ಕಾಣುತ್ತ ಬೆಳೆದನು-ಇದು ಮುಖ್ಯ ಎಂದು ಬಸವ ಪುರಾಣದಲ್ಲಿ ಬರುವ ಪದ್ಯ ಗಳನ್ನು ಉಲ್ಲೇಖಿಸುತ್ತ ಸಹಜತೆಯನ್ನು ಮೆರೆದಿದ್ದಾರೆ. 'ಕರಣಿಕ ವೃತ್ತಿಯಿಂದ ಲೌಕಿಕ ಜೀವನವನ್ನು ಆರಂಭಿಸಲಿದ್ದ ಬಸವನು ಬಾಲ್ಯದಲ್ಲಿಯೇ ಗಣಿತವನ್ನು ಅಭ್ಯಸಿ ಸಿದನೆಂಬುದೂ, ಮುಂದೆ ವಚನ ರಚನೆಯ ಮೂಲಕ ಸಾಹಿತ್ಯ ಕ್ರಾಂತಿಯನ್ನು ಸಾಧಿಸಲಿದ್ದ ಅವನು ಸಂಗೀತ ಸಾಹಿತ್ಯಗಳನ್ನು ಕಲಿತನೆಂಬುದೂ, ಮುಂದೆ ವೇದಾ ಗಮ ಪುರಾಣಾದಿಗಳನ್ನು ಮಾನವತೆಯ ಕಣದಲ್ಲಿ ಶರಣಬಸವಗಳಿಂದ ತುಳಿಸಿ, ಅನು ಭವದ ಮೆಟ್ಟಿನ ಮೇಲೆ ನಿಂತು, ಅನುಭಾವದ ಗಾಳಿಗೆ ತೂರಿ, ಹಸನಾದ ಹೊಸ— ವಿಚಾರಗಳ ರಾಶಿಯನ್ನು ಒಕ್ಕಿದ ಅವನು ವೇದಾಗಮ ಪುರಾಣಾದಿಗಳ ಅಧ್ಯಯನ ಮಾಡಿದನೆಂಬುದೂ ಸಹಜವೇ' ಎಂದು ಹೇಳಿದ ಲೇಖಕರ ವಿಚಾರಧಾರೆ ಅತ್ಯಂತ ಸಮರ್ಪಕವಾಗಿದೆ.

ಮೊದಲಿನ ಎಂಟು ವರುಷ ತೊಡಕಿಲ್ಲದೆ ಸಾಗಿದರೂ ಎಂಟನೆಯ ವರ್ಷದ ಉಪನಯನದಿಂದ ಪ್ರಾರಂಭವಾದ ತುಮುಲ ಕಲ್ಯಾಣದ ವಿಪ್ಲವದವರೆಗೂ ಅವ್ಯಾ ಹತವಾಗಿ ಸಾಗುತ್ತದೆ ಎಂದು ಹೇಳುವ ಮಾತುಗಳಲ್ಲೂ ಸತ್ಯಾಂಶವಿಲ್ಲದಿಲ್ಲ. "ಏಕಾಂಗ ವೀರನಾಗಿ ಅಂದಿನ ಪುರೋಹಿತ ಶಾಹಿಯನ್ನೂ ಪಟ್ಟಭದ್ರ ಹಿತಗಳನ್ನೂ, ರಾಜಸತ್ತೆ ಯನ್ನೂ, ಸನಾತನ ಶಕ್ತಿಗಳನ್ನೂ ಶೋಷಕರ ಸಮುದಾಯವನ್ನೂ ಎದುರಿಸಿ ನಿಲ್ಲುವ ಕಲಿತನ, ಗೆದ್ದೇ ಗೆಲ್ಲುವೆನೆಂಬ ಛಲವಂತಿಕೆ, ತತ್ತ್ವಕ್ಕೆ ಬಾಗುವವರ ತೊತ್ತಾಗಿ ನಡೆ ಯುತ್ತ, ತತ್ತ್ವಗಳನ್ನು ತೊತ್ತಳದುಳಿವವರ ಉನ್ಮತ್ತತೆಯನ್ನು ಇಳಿಸಿ ಅವರನ್ನೂ ಸ್ನೇಹಿನ, ಲೇಸಿನ, ಹದುಳದ, ಹೊಲಬಿನ ನೇರ ದಾರಿಗೆ ತರಬೇಕೆಂಬ ಉತ್ಸಾಹ ಆಗ ಮುಗುಳೊಡೆದು ಮುಂದೆ ಮೂರು ದಶಕಗಳಿಗೂ ಮೊದಲೇ ಮನುಕುಲದ ಚರಿತ್ರೆ ಯಲ್ಲಿಯೇ ಒಂದು ಹೊಸ ಅಧ್ಯಾಯವನ್ನು–ಅದ್ಭುತರಮ್ಯ ಅಧ್ಯಾಯವನ್ನು–ಬರೆ ಯುವಂತೆ ಪ್ರೇರಿಸುತ್ತದೆ." ಎಂದು ಹೇಳುವ ವಿಚಾರ ಮನನೀಯವಾಗಿದೆ.

'ತಾಯಿಯಿಂದ ಭಕ್ತಹೃದಯ ಬಳುವಳಿಯಾಗಿ ಬಂದಿರಲೇಬೇಕು. ಪಂಡಿತ ರಿಂದ ಜ್ಞಾನೋಪಾಸನೆಯಲ್ಲಿ ನಿಷ್ಠೆ, ವಿಶ್ವಾಸ ದೊರತಿರಬೇಕು. ರೇವಣಸಿದ್ಧೇಶ್ವರ ರಿಂದ ಪ್ರಭಾವಿತವಾಗಿದ್ದಿರಬಹುದಾದ ಮುತ್ತಬ್ಬೆಯಿಂದ ಶೈವ ಮಹಾರಣ್ಯದಲ್ಲಿ ಅಲ್ಲಲ್ಲಿ ಬಳ್ಳಿಯಾಗಿ ಉಳಿದು, ಬೆಳೆಯಲು ಹಾತೊರೆಯುತ್ತಿದ್ದ ವೀರಶೈವದ ಸ್ಥೂಲ

ಪರಿಚಯ ಪಡೆಯುವುದರ ಜೊತೆಗೆ ಪ್ರಸಿದ್ಧ ಶಿವಭಕ್ತರ, ಅರುವತ್ತುಮೂರು ಪುರಾತನರ ಕಥೆಗಳನ್ನು ಕೇಳಿರಬೇಕು ; ಮುದನೂರು, ಕೊಂಡಗುಳಿಗಳು ಬಾಗೇವಾಡಿಯಿಂದ ಅನತಿ ದೂರದಲ್ಲಿಯೇ ಇರುವ ಕಾರಣ ಜೇಡರದಾಸಿಮಯ್ಯ, ಶಂಕರದಾಸಿಮಯ್ಯ, ತೆಲಗು ಬೊಮ್ಮಯ್ಯ, ಕೇಶಿರಾಜ ಮೊದಲಾದವರ ಉಜ್ವಲ ಜೀವನ ಮತ್ತು ಕಾರ್ಯಗಳ ಪರಿಣಾಮ ಖಂಡಿತವಾಗಿ ಆಗಿರಬೇಕು, —ಎಲ್ಲಕ್ಕಿಂತ ಹೆಚ್ಚಾಗಿ ಸುತ್ತುಮುತ್ತಲಿನ ಸಮಾಜದಲ್ಲಿದ್ದ ಎದ್ದು ಕಾಣುವ ವೈಷಮ್ಯಗಳು—ಹುಟ್ಟು, ಹೊಲೆ, ಲಿಂಗ, ವರ್ಣ, ಧನ, ದಾರಿದ್ರ್ಯ–ಮುಂತಾದವುಗಳನ್ನು ಆಧರಿಸಿ ನಾಯಿಕೊಡೆಗಳಂತೆ ; ಮುಳ್ಳುಬಳ್ಳಿಗಳಂತೆ, ವಿಷವೃಕ್ಷಗಳಂತೆ ಬೆಳೆದು ನಿಂತಿದ್ದ ವೈಷಮ್ಯಗಳು ಅವನ ಎದೆಯನ್ನು ಕಲಕಿ ಅವುಗಳ ಬಗ್ಗೆ ಆಳವಾಗಿ ಆಲೋಚಿಸಹಚ್ಚಿರಬೇಕು. ಅಲ್ಲದೆ, ಎಲ್ಲ ಕುಲ ಜಾತಿಗಳ ಮಕ್ಕಳೊಡನೆ ಬೆರೆತು ಬೆಳೆದಿದ್ದ, ಉಪನಯನವನ್ನು ವಿರೋಧಿಸಿ ಕಾಟಾಚಾರಕ್ಕೆ ಒಪ್ಪಿದ್ದ ಅವನನ್ನು ಕಂಡಾಗಲೆಲ್ಲ ವಿರುದ್ಧ ವಿಪ್ರರು ಮೂಗು ಮುರಿವಾಗ ಆ ಅಸಹನೆ ಬಸವ ತಾನು ಹುಟ್ಟಿದ ಕುಲದ ಬಗೆಗೇ ಜಿಗುಪ್ಸೆ ಹೊಂದುವಂತೆ ಸಾಗಿರಬೇಕು.' ಎನ್ನುವ ಲೇಖಕರ ಊಹೆ ಚಾರಿತ್ರಿಕ ಸತ್ಯಾಂಶಗಳಿಗೆ ಸಮೀಪವಾದುದಾಗಿದೆ. ಅದೇ ರೀತಿ ಬಸವಣ್ಣನಿಗೆ ದೀಕ್ಷೆಕೊಟ್ಟ-ವಿದ್ಯೆಕಲಿಸಿದ ಗುರು ಜಾತವೇದ ಮುನಿಗಳು. (ಈಶಾನ್ಯ ಗುರುಗಳು) ಸನಾತನ ದೃಷ್ಟಿಯ ಶೈವಗುರುಗಳಾಗಿರಲಾರರು ಎಂದಂದು ಅವರೂ ಆ ಕಾಲದ 'ಹೊಸ ಅಲೆ'ಯ ಹೊಡೆತಕ್ಕೆ ಸಿಕ್ಕಿ ಹಳೆಯ ನಂಬಿಕೆಗಳತ್ತ ಹೊಸ ನೋಟವನ್ನು ಹರಿಸಿದವರಾಗಿರಬೇಕು ಎನ್ನುವ ಮಾತು ಲೇಖಕರ ಸ್ವತಂತ್ರ ವಿಚಾರ ದೃಷ್ಟಿಗೆ ಸಾಕ್ಷಿಯಾಗಿದೆ.

ಬಸವಣ್ಣನ ಭಕ್ತಿಯ ಬೆಳವಣಿಗೆಯ ಒಳಬಾಳು ಒಂದು ಕಡೆ ನಡೆದಿದ್ದರೆ ಆಳವಾದ ಅಧ್ಯಯನ, ಚಿಂತನ-ಮಂಥನಗಳು ಇನ್ನೊಂದು ಕಡೆಗೆ ನಡೆದಿದ್ದವು ಎಂದು ಪುರಾಣಿಕರು ಸೋದಾಹರಣವಾಗಿ ವಿವರಿಸಿದ್ದಾರೆ. ಮಹಾಗ್ರಹಾರವೆನಿಸಿದ್ದ 'ಮತ ತ್ರಿವೇಣಿ' ಬಾಗೇವಾಡಿ, ಕರ್ನಾಟಕಾಶೀಪುರಂ' ಎನಿಸಿದ್ದ ಇಂಗಳೇಶ್ವರ, 'ಆದಿಬ್ರಹ್ಮಪುರಿ' ಎನಿಸಿದ್ದ ಕಪ್ಪಡಿಸಂಗಮಗಳಲ್ಲಿ ಪರಾಮರ್ಶೆಗೆ ಇಂಬುಗೊಟ್ಟಿರಬೇಕು,—'ಮಹೀಸುರಪುರಂ' ಎನಿಸಿದ್ದ ಮನಗೂಳಿ ಹಾಗು 'ಜಗದ್ವಿನುತ' ಎನಿಸಿದ್ದ ಮುತ್ತುಗೆಗಳಲ್ಲಿಯ ಪಂಡಿತರ ಸಂಪರ್ಕವೂ ಉಂಟಾಗಿ ಅವರೊಡನೆ ಶಾಸ್ತ್ರಾರ್ಥ ಚರ್ಚೆಗಳು ನಡೆದಿರಬೇಕೆಂದು ತರ್ಕಿಸಿದುದು ಬಸವಣ್ಣನ ಬಹುಮುಖ ವ್ಯಕ್ತಿತ್ವದ ಬೆಳವಣಿಗೆಗೆ ಬೀಜಮಂತ್ರವಾಗಿದೆ. ಹೀಗೆ ಲೇಖಕರು ಬಸವಣ್ಣನ ಕ್ರಾಂತಿಯ ವಿಚಾರಗಳನ್ನು ಗುರುತಿಸುತ್ತ ಪ್ರಮುಖವಾದವುಗಳನ್ನು ಹೀಗೆ, ವಿವರಿಸಿದ್ದಾರೆ. ಬಸವಣ್ಣನಿಗೆ ಅತ್ಯಂತ ವೇದನೆಯನ್ನುಂಟು ಮಾಡಿದ ಎರಡು ಚಿತ್ರಗಳಿವು :

೧ ಧರ್ಮಾಧಿಕಾರ, ತನ್ಮೂಲಕ ರಾಜಕೀಯ ಅಧಿಕಾರ, ವಿದ್ಯಾರ್ಜನೆಯ ಅಧಿಕಾರ, ಸಾಮಾಜಿಕ ಸ್ಥಾನಮಾನಗಳ ಅಧಿಕಾರ, ಎಲ್ಲ ಅಧಿಕಾರಗಳ ಗುತ್ತಿಗೆ ಪಡೆದಿದ್ದ

ವಿಪ್ರರು ಕರ್ಮ, ಪ್ರಾಣಿವಧೆ, ಕಂದಾಚಾರಗಳಿಗೆ ಕಟ್ಟು ಬಿದ್ದವರಾಗಿರುವುದಲ್ಲದೆ ನುಡಿಯುವುದೊಂದು, ನಡೆಯುವುದೊಂದು—ಇದು ಒಂದನೆಯ ವ್ಯಥೆಯಾಗಿದೆ.

೨ ಸಮಾಜ ಮಂದಿರದ ಗೋಪುರದಲ್ಲಿ ಕುಳಿತು ಸುಲಿಗೆಯಿಂದ ಸುಖಪಡುತ್ತಿದ್ದ ಮೇಲ್ವರ್ಗಗಳ ಸ್ಥಿತಿ ಇಂತಿದ್ದರೆ ಅದರ ಬುನಾದಿಯ ಕಲ್ಲುಗಳಾಗಿ, ಮೇಲಿನ ಭಾರವನ್ನೆಲ್ಲ ಹೊತ್ತು, ದಾಸ್ಯ ದಾರಿದ್ರ್ಯ, ಅಜ್ಞಾನ, ಅಪಮಾನ, ಅಂಧವಿಶ್ವಾಸಗಳಲ್ಲಿ ನರಳುತ್ತಿದ್ದ ಅಸ್ಪೃಶ್ಯರೂ, ಅಂತ್ಯಜರೂ, ಪಂಚಮರೂ, ಗುಲಾಮರೂ, ಸೇವಾಜೀವಿಗಳೂ, ಶೂದ್ರರೂ ಇದ್ದ ಕರುಣಾಜನಕ ಸ್ಥಿತಿ—ಇದು ಇನ್ನೊಂದು.

ಇಂಥ ಹಲವಾರು ವೇದನೆಗಳಲ್ಲಿ ಸಿಲುಕಿದ ಬಸವಣ್ಣ ಸಿಡಿದೆದ್ದು—ಹೊಸ ಧರ್ಮವೊಂದರ ನಕ್ಷೆಯನ್ನು ಸಿದ್ಧಪಡಿಸುತ್ತಾನೆ.

ಸನ್ಯಾಸಕ್ಕಾಗಿ, ಮಣಿಯನೆಣಿಸಿ ದಿನಗಳೆವುದಕ್ಕಾಗಿ ತಾನು ಹುಟ್ಟಿಲ್ಲ. ತನ್ನೊಬ್ಬನ ವೈಯಕ್ತಿಕ ಉದ್ಧಾರ ದೊಡ್ಡದಲ್ಲ. ಸರ್ವೋದ್ಧಾರಕ್ಕಾಗಿಯೇ ತನ್ನು ತನು ಮನ ಜೀವನಗಳು ಸಮರ್ಪಿತವಾಗಬೇಕು. ಸರ್ವಶಕ್ತಿಗಳ ವಿನಿಯೋಗವಾಗಬೇಕು. ಸಂಕಷ್ಟಗಳಲ್ಲಿರುವವರ ಕ್ಲೇಶ ನಿವಾರಣೆ, ಅಜ್ಞಾನದಲ್ಲಿರುವವರಿಗೆ ಜ್ಞಾನದಾನ, ದಾಸ್ಯದಲ್ಲಿರುವವರಿಗೆ ವಿಮುಕ್ತಿ, ತುಳಿತಕ್ಕೆ ಒಳಗಾಗಿದ್ದವರನ್ನು ಮೇಲೆತ್ತಿ ಅವರಿಗೆ ಮೇಲ್ಮೆ ನೀಡುವುದು ಇಂಥ ಸತ್ಕಾರ್ಯಕ್ಕಾಗಿ ಕೂಡಲಸಂಗಮದಿಂದ ಮಂಗಳವಾಡಕ್ಕೆ ಹೊರಡಲು ಸಿದ್ಧನಾದ ಎಂದು ಹೇಳುವಲ್ಲಿ ಲೇಖಕರು ಬಸವಣ್ಣನ ಗುರುತರವಾದ ಕಾರ್ಯಗಳಿಗೆ ನಾಂದಿಹಾಡಿದಂತಾಗಿದೆ. ಆದರೆ ಬಸವಣ್ಣನ ಲಗ್ನ ಗಂಗಾದೇವಿಯ ಜೊತೆ ಕೂಡಲಸಂಗಮದಲ್ಲಿಯೆ ಆಯಿತೆಂದು ಹೇಳುವುದು ಅಷ್ಟು ಸಮರ್ಪಕವಾದುದಲ್ಲವೆನಿಸುತ್ತದೆ. ತಂದೆತಾಯಿಗಳನ್ನು ಕಳೆದುಕೊಂಡ ಬಸವಣ್ಣನಿಗೆ ಬಲದೇವ ಸೋದರಮಾವ, ಆತನೇ ತನ್ನ ಮಗಳ ಲಗ್ನವನ್ನು ತನ್ನ ಮನೆಯ ಮುಂದೆ ಮಾಡಿರಬೇಕು ಎಂದು ಊಹಿಸುವುದು ಸಾಧುವಾದ ಮಾರ್ಗವೆನಿಸುತ್ತದೆ. ಮುಂದೆ ನೀಲಾಂಬಿಕೆಯ ಜೊತೆ ಕಲ್ಯಾಣದಲ್ಲಿ ಬಿಜ್ಜಳಭೂಪತಿ ಲಗ್ನಮಾಡಿರಬೇಕು.

ಬಸವಣ್ಣ ಬಲದೇವನ ಒಲವಿನಿಂದ ಬಿಜ್ಜಳನ ಓಲಗದಲ್ಲಿ ಕರಣಿಕ ವೃತ್ತಿ ಕೈಕೊಂಡನು. ಪವಿತ್ರಕಾಯಕ ನಡೆಸುತ್ತ, ಸತ್ಯ ಶರಣರ ಸಮಾರಾಧನೆ: ಶರಣಾನುಭಾವಗೋಷ್ಠಿ, ಜಂಗಮದಾಸೋಹ ನಡೆಸಿ ಭಂಡಾರಿಯಾಗುತ್ತಾನೆ. ಮುಂದೆ ಮಂತ್ರಿ ಪದವಿಗೂ ಏರುತ್ತಾನೆ. ಬಾಲ್ಯದಲ್ಲಿ ಗಣಿತ ಅಧ್ಯಯನ ಮಾಡಿದ್ದ ಆ ನಿಶಿತಮತಿಗಳ ದಕ್ಷತೆ, ಪ್ರಾಮಾಣಿಕತೆ, ಅಸಾಧಾರಣ ಪ್ರಾವೀಣ್ಯ ಹಾಗೂ ಅದ್ಭುತ ವ್ಯಕ್ತಿತ್ವಗಳಿಂದಲೇ ಈ ಸ್ಥಾನಕ್ಕೇರಿದುದನ್ನು ಲೇಖಕರು ಎತ್ತಿ ಹೇಳಿದ್ದಾರೆ.

ಅನ್ಯೋನ್ಯ ಪ್ರೇಮದಿಂದಿದ್ದ ಬಸವಣ್ಣ–ಬಿಜ್ಜಳರ ನಡುವೆ ವಿರಸ ತಲೆದೋರುತ್ತದೆ. ಕಂಬಳಿನಾಗಿದೇವನ ದಾಸೋಹಮಾರ್ಗ, ಹರಳಯ್ಯ ಮಧುವರಸರ ರಕ್ತಸಂಬಂಧ ಇಂಥ ಹಲವಾರು ಘಟನೆಗಳನ್ನು ವಿಪರ್ಯಾಸಗೊಳಿಸಿಕೊಂಡವರು

ಬಿಜ್ಜಳನ ಕಿವಿ ಊದುತ್ತಾರೆ. ಬಿಜ್ಜಳನು ಎರಗಿವಿಯುವನಾದುದರಿಂದ, ವರ್ಣಾದಿ, ಅಸ್ಪೃಶ್ಯತಾನಿವಾರಣಾ ವಿರೋಧಿಯೆನಿಸುತ್ತಾನೆ. ಆದರೆ ಬಸವಣ್ಣ ಇದ್ದುದರೊಡನೆ ಒಪ್ಪಂದಮಾಡಿ ಹದ್ದಿನ ಬಾಳು ಬಾಳುವುದಕ್ಕಿಂತ ಯುಗಧರ್ಮಕ್ಕನುಸರಿಸಿ ತಿದ್ದು ವುದು, ತಿದ್ದುವಲ್ಲಿ ಮರಣಬಂದರೂ ಅದನ್ನು ಮಹಾನವಮಿಯೆಂದು ಸ್ವೀಕರಿಸು ವುದು ಎಂಬ ಆದರ್ಶಕ್ಕೆ ಅರ್ಪಿತನಾಗುವ ನಿಶಿತಮತಿಯ ವಿಚಾರಗಳನ್ನು ಪುರಾಣಿಕರು ಇಲ್ಲಿ ಮನಕರಗುವಂತೆ ವರ್ಣಿಸಿದ್ದಾರೆ. ಬಸವಣ್ಣ ಕಲ್ಯಾಣದಿಂದ ನಿರ್ಗಮಿಸುತ್ತಾನೆ ಬಿಜ್ಜಳನ ಕೊಲೆಯೂ ನಡೆದುಹೋಗುತ್ತದೆ.

ಬಸವಣ್ಣನ ಬಾಳ ಬಾವನ್ನ ತೆಯ್ದನಿತೂ ಸುಗಂಧ ಬೀರಿತು. ಬದುಕಿನ ಚಿನ್ನ ಸುಟ್ಟಷ್ಟೂ ಕಾಂತಿಯೇರಿತು. ಅಂತೆಯೇ ಮುಂದಿನ ವಿಭಾಗಗಳಲ್ಲಿ ಪುರಾಣಿಕರು ಬಸವಣ್ಣ ತನ್ನ ಜೀವಿತ ಅವಧಿಯಲ್ಲಿ ಸಾಧಿಸಿದ ಮಹತ್ಕ್ರಾಂತಿಯ ಚಿತ್ರವನ್ನು ಸೋದಾಹರಣವಾಗಿ ಸುಂದರ ಕಾವ್ಯಮಯಶೈಲಿಯಲ್ಲಿ ಎರಕ ಹೊಯ್ದಿದ್ದಾರೆ.

ಬಸವಣ್ಣನದು ಹೊಸಧರ್ಮ, ಹೊಸಕ್ರಾಂತಿ. ಸಾಮಾಜಿಕಕ್ರಾಂತಿಯೂ ಅಹುದು, ಸಾಹಿತ್ಯಕ ಕ್ರಾಂತಿಯೂ ನಡೆಯಿತು. ಧರ್ಮಜಾಗ್ರೃತಿಯಾಯ್ತು. ಬಸವಣ್ಣನದು ಉಳ್ಳವರ ಧರ್ಮವಲ್ಲ ; ಇಲ್ಲದವರ ಧರ್ಮ. ಸ್ಥಾವರದೇವಾಲಯು ಗಳ ಧರ್ಮವಲ್ಲ, ಜಂಗಮದೇವಾಲಯುಗಳ ಧರ್ಮ ; ದೇವನೊಬ್ಬ ನಾಮಹಲವು ಎಂದಂದ ಧರ್ಮ. ದಯೆ ಧರ್ಮದ ಮೂಲವಾಯ್ತು ; ಸಕಲಜೀವಾತ್ಮರಿಗೆ ಲೇಸ ಬಯಸುವ ವಿಶ್ವಧರ್ಮವಾಯ್ತು. ಹೀಗೆ ಬಸವಣ್ಣ ಬೋಧಿಸಿದ ಧರ್ಮವು ಮುಖ್ಯವಾಗಿ ಭಾವಶುದ್ಧಿಯ ತ್ರಿಕರಣ ಶುದ್ಧಿಯ ಧರ್ಮವಾಗಿ ಕಂಗೊಳಿಸಿತು. ಅಸ್ಪೃಶ್ಯತೆಯ ವಿರುದ್ಧ ಹೋರಾಟ ನಡೆಸಿದ ಧೀರ ಬಸವಣ್ಣನ ವಿಚಾರಗಳನ್ನು ಅವನ ನುಡಿಮುತ್ತುಗಳಿಂದ ಆಯ್ದುಕೊಂಡು ಇಂದಿನ ಯುಗದ ಚಿತ್ರಗಳನ್ನೂ ಕೊಡುತ್ತ ಆತ ಸಾಧಿಸಿದ ಮಹಾಕ್ರಾಂತಿಯ ಬೆಡಗನ್ನು ಲೇಖಕರು ಬಣ್ಣಿಸಿದ್ದಾರೆ. ಕೊಲುವವನೆ ಮಾದಿಗ ಹೊಲಸು ತಿಂಬುವನೆ ಹೊಲೆಯ ಎಂದು ಸಾರಿದ ಬಸವಣ್ಣ ಊಟೋಪಚಾರಗಳಿಂದ ಮೊದಲ್ಗೊಂಡು ಮದನೆ, ಪೂಜೆ, ಪಾದೋದಕ, ಪ್ರಸಾದ ಗಳವರೆಗೆ ವ್ಯಾಪಕವಾದ ವಿಮುಕ್ತಿಸೂತ್ರವನ್ನು ಕಂಡುಹಿಡಿದು, ಅದನ್ನು ಕೆಚ್ಚಿದೆ ಯಿಂದ ಬರುವ ಪರಿಣಾಮಗಳಿಗೆ ಎದೆಗುಂದದೆ ಧೀರೋದಾರನಾಗಿ ಕಾರ್ಯರೂಪಕ್ಕೆ ತಂದು ಇಂದೂ ಮುಂದೂ ಈ ಕ್ಷೇತ್ರದಲ್ಲಿ ದುಡಿಯುಬಯಸುವವರಿಗೆ ಧ್ರುವತಾರೆ ಯಾಗಿದ್ದಾನೆ ಬಸವಣ್ಣ ಎಂಬ ಲೇಖಕರ ಅಭಿಪ್ರಾಯಕ್ಕೆ ಎರಡಿಲ್ಲ.

'ಆವನಾದರೇನು ? ಶ್ರೀ ಮಹಾದೇವನ ನೆನೆವವನ
ಬಾಯ ತಂಬುಲ ಮೆಲುವೆ, ಬೀಳುಡಿಗೆಯ ಹೊದೆವೆ,
ಪಾದರಕ್ಷೆಯ ಕಾಯ್ದು ಬದುಕುವೆ ಕೂಡಲ ಸಂಗಮದೇವಾ'

ಎಂದೆಂದು ಬಸವಣ್ಣ ಸಮಾನತೆಯ ಸಮಗ್ರ ಕ್ರಾಂತಿಗೆ ಕರೆಕೊಟ್ಟ ವಿಚಾರವನ್ನು ಪುರಾಣಿಕರು ಮನಬಿಚ್ಚಿ ವಿವರಿಸಿದ್ದಾರೆ. ಬಸವಣ್ಣನು ಸಾಧಿಸಿದ್ದುದು ಆರ್ಥಿಕ ಅಸ್ತಿವಾರ. ಅದಿಲ್ಲದ ಜನ, ದೇಶ ಬಡ ಹಾಗೂ ಜಡ ಎಂದೆಂದು ಅದಕ್ಕಾಗಿ ಪ್ರತಿಯೊಬ್ಬರನ್ನು ದುಡಿಯ ಹಚ್ಚಿದರು. ಅಲ್ಲಿಯ ಮೇಲು-ಕೀಳು ಭಾವನೆಗಳನ್ನು ಒಂದುಗೂಡಿಸಿದರು. ಕಾಯಕವಿಲ್ಲದವಗೆ ಬಸವ ಸಮಾಜದಲ್ಲಿ ಸ್ಥಾನವಿಲ್ಲದಾಯ್ತು. ಗುರುದರ್ಶನ, ಜಂಗಮ ದಾಸೋಹಕ್ಕಿಂತಲೂ ಹೆಚ್ಚಿನ ಪ್ರಾಶಸ್ತ್ಯ ಅದಕ್ಕಿತ್ತರು. ಸತ್ಯ-ಶುದ್ಧ-ಕಾಯಕದ ನಿತ್ಯದ್ರವ್ಯವದು ಶಿವನ ಸೊಮ್ಮು. ಅದು ಶಿವನಿಗೆ, ಶಿವನ ಭಕ್ತರಿಗೆ ಸಲ್ಲಬೇಕು ಎಂದು ಕಾಯಕದ ಜೊತೆಗೇ ದಾಸೋಹ ಸಲ್ಲಬೇಕು ಎಂದು ಕಾಯಕದ ಜೊತೆಗೇ ದಾಸೋಹ ನಡೆಸಹಚ್ಚಿದರು. ತತ್ವ ಕೇವಲ ಪರರಿಗಲ್ಲ, ತನಗೂ ಪ್ರತಿಯೊಬ್ಬರಿಗೂ ಎಂದು ಸಾರಿದರು. ಕೂಡಿಡುವ ಸಂಗ್ರಹಬುದ್ಧಿ ಸಲ್ಲದೆಂದರು. ಹೂತಿಟ್ಟವರು ಅರಿತುಕೊಂಡು ಹೊರತೆಗೆದರು. ಎಲ್ಲರೂ ಸಮಾನರು ಎನ್ನುವ ವಿಶಾಲ ಮನೋಭಾವ ಮೂಡಿತು. ಆರ್ಥಿಕ ಭದ್ರತೆಯಿಂದ ಸಮಾಜ ಸುಸ್ಥಿರವಾಯ್ತು.

ಇಂಥ ಬಸವಣ್ಣನ ಉತ್ತಮೋತ್ತಮ ತತ್ತ್ವ, ವಿಚಾರಗಳನ್ನು ಮಾರ್ಕ್ಸ್‌ನಲ್ಲಿಯೂ ಮೂಡಿನಿಂತುದನ್ನು ಅರಿತ ಲೇಖಕರು ಆತನಿಗೂ ಮಾನ್ಯತೆ ನೀಡಿದ್ದಾರೆ. ಸಮಾಜಕ್ಕೆ ಶರಣಾಗತವಾದ ಬಸವ ತತ್ವ, ರಾಜಸತ್ತೆಗೆ ಶರಣುಹೋಗಿರೆನ್ನುವ ಮಾರ್ಕ್ಸ್‌ವಾದಕ್ಕಿಂತಲೂ ಹೆಚ್ಚಿನದೆಂಬುದನ್ನು ಅರಿತಾಗ ಇಂದಿನ ಪ್ರಜಾಪ್ರಭುತ್ವದ ನೀತಿ-ನಿಯಮಗಳು ಕಣ್ಣಿಗೆ ಕಟ್ಟದಿರಲಾರವು.

ಒಳ್ಳೆಯ ತತ್ವಗಳಿದ್ದರೆ ಅಧರ್ಮ ಕಂಗೊಳಿಸುತ್ತಿದೆಯೆಂದೇನಲ್ಲ, ಯಾವ ಧರ್ಮದ ತತ್ವಗಳೂ, ಹಾಗೆ ವಿಚಾರಿಸಿದರೆ, ಕೆಟ್ಟವುಗಳಲ್ಲ. ಒಂದು ಧರ್ಮದ ಹೆಚ್ಚಳವನ್ನು ಸಾರಬೇಕಾದರೆ ಆ ಧರ್ಮದ ತತ್ವಗಳನ್ನು ಜನ ಆಚರಣೆಯಲ್ಲಿ ತರುತ್ತಿರಬೇಕು. ಅಂದಾಗ ಅದು ವಿಶ್ವಧರ್ಮವಾಗುವುದು ; ಜೀವಂತ ಧರ್ಮವೆನಿಸುವುದು. ಇಲ್ಲದಿದ್ದರೆ ಆಚಾರ ಹೇಳುವುದಕ್ಕೆ ಮಾತ್ರ ಎನ್ನಬೇಕಾಗುತ್ತದೆ, ಮೌಢ್ಯದ ಚಕ್ರವ್ಯೂಹದಿಂದ ಹೊರಬಂದಾಗ ನಿಜವಾದ ಬಸವಧರ್ಮ ಅಲ್ಲಿ ಕಂಗೊಳಿಸುತ್ತದೆ. ಮೂಢನಂಬಿಕೆಗಳಿಗೆ ಅಂಟಿಕೊಳ್ಳದೆ, ಜ್ಞಾನ-ಕ್ರಿಯೆಗಳ ಸುಂದರ ಸಮನ್ವಯ ಸಾಧಿಸಿದಾಗ ಧರ್ಮದ ಕೆಚ್ಚು, ತೇಜ ಗೊತ್ತಾಗುತ್ತದೆ. ಅದನ್ನು ಸಾಧಿಸಿದವ ಬಸವಣ್ಣ, ಇದಕ್ಕೆಲ್ಲ ಆತನ ವ್ಯಕ್ತಿತ್ವ, ಅಂತರಂಗ-ಬಹಿರಂಗ-ಶುದ್ಧಿ ಸಾಕ್ಷಾತ್ ಚಿತ್ರ. ಅಂತೆಯೇ ಸಾಂಸ್ಕೃತಿಕ ಕ್ರಾಂತಿಗೆ ಇಂಬುಗೊಟ್ಟನವನು. ಶ್ರೀಸಾಮಾನ್ಯರೂ ಅರ್ಥೈಸಿಕೊಳ್ಳುವ ಕನ್ನಡ ಭಾಷೆಯನ್ನು ತತ್ವಗಳ ಪ್ರಸಾರಕ್ಕೆ ಮಾಧ್ಯಮವನ್ನಾಗಿ ಸ್ವೀಕರಿಸಿ ವಚನರಾಶಿಯನ್ನು ಹೊರತಂದನು. ಅಲ್ಲಿ ಮಿಂದವರು ಪರಿಶುದ್ಧಿಗೊಂಡರು. ಅದರಂತೆ ನಡೆದವರು ಶರಣರಾದರು. ಕಲ್ಯಾಣ ಆ ನಾಡು

ಕೈಲಾಸವಾಯ್ತು. ಕೊಲುವೆನೆಂಬ ಭಾಷೆ ದೇವನದಾದರೆ ಗೆಲುವೆನೆಂಬ ಭಾಷೆ ಭಕ್ತನದಾಯ್ತು. ತಾನು ಒಳ್ಳೆಯವನಾಗಿ, ಸಾಮರಸ್ಯ ಸಾಧಿಸಿ ಸುತ್ತುಮುತ್ತಲಿನ ಜನ ಮತ್ತು ಜಗತ್ತು ಸಮನ್ವಯವನ್ನು ಸಂಪಾದಿಸುವಂತೆ ಮಾಡಿದ ಬಸವಣ್ಣನ ಸಂಸ್ಕೃತಿ ವಿಶ್ವಮಾನವ ಸಂಸ್ಕೃತಿಯಾಗಿ ಪ್ರಜ್ವಲಿಸಿತು ಎಂಬ ವಿಚಾರಗಳನ್ನು ಲೇಖಕರು ಈ ಕೃತಿಯಲ್ಲಿ ಮನದಟ್ಟಾಗುವಂತೆ ಹೆಣೆದುಕೊಂಡು ಹೋಗಿದ್ದಾರೆ.

ಬಸವಣ್ಣನ ಸಂದೇಶ ಯಾವುದು ? ಎಂಬುದಕ್ಕೆ ಉತ್ತರಿಸುತ್ತ ಪುರಾಣಿಕರು ಅವರ ಜೀವನವೇ ಅವರ ಸಂದೇಶವಾಗಿದೆ ಎಂದಿದ್ದಾರೆ. ಈ ಕೃತಿಯ ಉದ್ದಕ್ಕೂ ಅವರ ಜೀವನದ ಘಟನೆಗಳ ತಿರುವಿನಲ್ಲಿ ಹೊಸ ಹೊಸ ಅಲೆಗಳೆದ್ದು ಕ್ರಾಂತಿಯ ಕಿಡಿಗಳನ್ನು ತೂರುತ್ತ ಬಂದುದನ್ನು ಗುರುತಿಸಬಹುದು.

ಇತ್ತೀಚೆಗೆ ಬಂದಿರುವ ಬಸವಣ್ಣನ ಕುರಿತಾದ ಆಲೋಚನಾತ್ಮಕ ಕೃತಿಗಳಲ್ಲಿ ಈ ಗ್ರಂಥ ತನ್ನದೇ ಆದ ಸ್ಥಾನ ಗಳಿಸಿಕೊಂಡಿರುತ್ತದೆ. ಲೇಖಕರ ಆಳವಾದ ಅಭ್ಯಾಸ, ಸುಸಂಸ್ಕೃತ ವ್ಯಕ್ತಿತ್ವ, ಹೃದಯಂಗಮವಾದ ಗದ್ಯಶೈಲಿ, ಹರಿತವಾದ, ಹಾಳತವೂ ಆದ ಪ್ರತಿಭೆಯ ಕುಲುಮೆಯಲ್ಲಿ ಬೆಂದ ಸ್ಪಷ್ಟವಾದ ವಿಚಾರಸರಣಿಗಳಿಂದ, ಆಧುನಿಕರೂ ಬೊಟ್ಟು ಕಚ್ಚುವಂತೆ ಹೊಸ ವಿಚಾರಗಳ ಅಡಿಗಲ್ಲಿಗೆ ಬಸವಣ್ಣನವರ ಆ ವಿಚಾರಗಳನ್ನು ಉಜ್ಜಿನೋಡಿ ಅಪ್ಪಟ ಚಿನ್ನದ ಪ್ರತ್ಯಕ್ಷ ದರ್ಶನ ಮಾಡಿಸಿದ್ದಾರೆ ಈ ಕೃತಿಯಲ್ಲಿ.

ಅವರೇ ನಿವೇದಿಸಿಕೊಂಡಂತೆ (ನಿವೇದನೆ) ಇಲ್ಲಿ ಮಂಡಿಸಿದ ಮೂರು ಉಪನ್ಯಾಸಗಳಲ್ಲಿ ಮೂಡಿಬಂದಿರುವ ಅನಿಸಿಕೆಗಳು, ಅಭಿಪ್ರಾಯಗಳು, ಅನುವರ್ತನೆಗಳು, ಅನುಶೀಲನೆಗಳು, ಅನುಮೇಯಗಳು ಅಂಧಶ್ರದ್ಧೆಯಿಂದ, ಮತಾಭಿಮಾನದಿಂದ, ವ್ಯಕ್ತಿಪೂರ್ಣಪಾರವಶ್ಯದಿಂದ, ಪ್ರಾದೇಶಿಕ ಭಾವನೆಯ ಬಲವಂತತೆಯಿಂದ ಬಂದವುಗಳಲ್ಲ. ವಿಧಾಯಕ ವ್ಯಾಸಂಗ ಮತ್ತು ವಿಚಿಕಿತ್ಸಕ ಅನ್ವೇಷಣೆಗಳಿಂದ ಉದ್ಭೂತವಾದವುಗಳೆಂದು ಹೇಳಿದ್ದನ್ನು ಸ್ಮರಿಸಿಕೊಂಡಾಗ ಈ ಕೃತಿಯಲ್ಲಿ ಹೊರಸೂಸಿ ಬಂದ ಘನವಾದ ವಿಚಾರಗಳಿಗೆ ಎಂಥವರೂ ತಲೆದೂಗುವಂತಾಗುತ್ತದೆ.

ಬಸವಣ್ಣನ ವ್ಯಕ್ತಿತ್ವ ವಿಶಾಲವಾದುದು. ಅದನ್ನು ಅರಿತುಕೊಂಡು ಆತನ ಜೀವನದರ್ಶನದೊಂದಿಗೆ ಸಂದೇಶವನ್ನು ತಿಳಿಸಿಕೊಟ್ಟ ಲೇಖಕರ ವ್ಯಕ್ತಿತ್ವವೂ ದೊಡ್ಡದೇ ಆಗಿದೆ. ಅಂತೆಯೆ ಇಲ್ಲಿ ಬಂದ ವಿಚಾರಗಳು ಕೃತ್ರಿಮವಾದವುಗಳಾಗಿಲ್ಲ, ತುದುಕುಳಿಯಿಂದ ಬಂದವುಗಳಲ್ಲ, ಅವು ಹೃದಯದಾಳದಿಂದ ಅನುಭವದ ಕೆನೆಯಾಗಿ ಸಂಶೋಧನೆಯ ನಿಟ್ಟಿನಲ್ಲಿ ಹೊರಹೊಮ್ಮಿದವುಗಳಾಗಿವೆ.

# ಡಾ. ಸಿದ್ಧಯ್ಯ ಪುರಾಣಿಕರ ಮಕ್ಕಳ ಸಾಹಿತ್ಯದಲ್ಲಿ ನಮ್ಮ ಮಕ್ಕಳು

**ಬಿ. ಶ್ರೀ. ಪಾಂಡುರಂಗರಾವ್**

"ಕಾವ್ಯಾನಂದ"ರೆಂದು ನಮ್ಮ ಸಾಹಿತ್ಯ ಪ್ರಪಂಚದಲ್ಲಿ ಪ್ರಸಿದ್ಧರಾಗಿರುವ ಡಾ॥ ಸಿದ್ಧಯ್ಯ ಪುರಾಣಿಕರು ನಮ್ಮ ಮಕ್ಕಳ ಸಾಹಿತ್ಯವನ್ನೂ ರಚಿಸಿರುವರೆಂದು ಬಹಳ ಜನಕ್ಕೆ ತಿಳಿಯದು. ಕವಿತೆ, ಕಥೆ, ಕಾದಂಬರಿ, ಪ್ರಬಂಧ, ವಚನಸಾಹಿತ್ಯ, ಹೀಗೆ ಕನ್ನಡ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ಶ್ರೀಯುತರು ಮಾಡಿರುವ ಕೆಲಸ ನಮ್ಮ ನಾಡಿನ ಜನರ ಪ್ರಶಂಸೆಗೆ ಪಾತ್ರವಾಗಿದೆ. ಅವರ ರಚನಾತ್ಮಕ ಕೃತಿ "ವಚನೋದ್ಯಾನ"ಕ್ಕೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ೧೯೭೭ರಲ್ಲಿ ಮೂರು ಸಾವಿರ ರೂಪಾಯಿಗಳ ಬಹುಮಾನವನ್ನು ಕೊಟ್ಟಿದೆ; ರಾಜ್ಯ ಪ್ರಶಸ್ತಿಯ ಗೌರವವೂ ಸಿದ್ಧಯ್ಯ ಪುರಾಣಿಕರಿಗೆ ಸಂದಿದೆ. "ವಚನೋದ್ಯಾನ"ದ ಕೀರ್ತಿ ಕರ್ನಾಟಕದ ಗತಿಯನ್ನು ದಾಟಿ ಭಾರತದೇಶಾದ್ಯಂತ ವ್ಯಾಪಿಸಿದೆ. ಭಾರತೀಯ ಭಾಷೆಗಳ ಪ್ರೋತ್ಸಾಹಕ್ಕಾಗಿ ಹುಟ್ಟಿಕೊಂಡ ಕಲ್ಕತ್ತೆಯ ಭಾರತೀಯ ಭಾಷಾ ಪರಿಷತ್ತು "ವಚನೋದ್ಯಾನ" ಸೃಜನಾತ್ಮಕ ಕೃತಿಯೆಂದು ಪರಿಗಣಿಸಿ, ಈ ವರ್ಷ ತನ್ನ ಮೊದಲನೆಯ ಯೋಜನೆಯಲ್ಲಿಯೇ ಈ ಕೃತಿಗೆ ಹನ್ನೊಂದು ಸಾವಿರ ರೂಪಾಯಿಗಳ ಬಹುಮಾನವನ್ನು ಘೋಷಿಸಿ ಕನ್ನಡಿಗರ ಕೃತಜ್ಞತೆಗೆ ಪಾತ್ರವಾಗಿದೆ. ಸಿದ್ಧಯ್ಯ ಪುರಾಣಿಕರು ಮಕ್ಕಳನ್ನು ಮರೆತಿಲ್ಲ. ಅವರಿಗೂ ತಕ್ಕ ಸಾಹಿತ್ಯವನ್ನು ಕೊಟ್ಟಿದ್ದಾರೆ. ಈ ವಿಷಯ ನಮ್ಮ ಜನಕ್ಕೆ ಅಷ್ಟು ಹೆಚ್ಚಾಗಿ ಪರಿಚಯವಾಗಿಲ್ಲ. "ತುಪ್ಪಾ ರೊಟ್ಟಿ ಗೇಗೇಗೇ", "ಗಿಲ್‌ಗಿಲ್ ಗಿಲಗಚ್ಚಿ" ಮತ್ತು "ತಿರುಗಲೆ ತಿರುಗಲೆ ತಿರುಗುಯ್ಯಾಲೆ" ಎಂಬ ಮಕ್ಕಳ ಪದ ಸಂಗ್ರಹಗಳನ್ನು ಸಿದ್ಧಯ್ಯ ಪುರಾಣಿಕರು ನಮ್ಮ ಮಕ್ಕಳಿಗಾಗಿ ರಚಿಸಿರುವರೆಂದು, ಎಷ್ಟು ಮಂದಿ ತಂದೆತಾಯಿಗಳಿಗೆ ಗೊತ್ತು? "ತುಪ್ಪಾ ರೊಟ್ಟಿ ಗೇಗೇಗೇ"ಗೆ ಭಾರತ ಕೇಂದ್ರದ ಬಹುಮಾನ ದೊರೆತಿದೆ.

ಹಿರಿಯರಿಗಾಗಿ ಬರೆಯುವ ಸಾಹಿತಿ ಸಿದ್ಧಯ್ಯ ಪುರಾಣಿಕರು ನಮ್ಮ ಮಕ್ಕಳಿಗೂ ಬರೆಯಬಲ್ಲರೆಂದು ಗುರುತಿಸಿದವರಲ್ಲಿ ಮೊದಲಿಗರು ಹೈದರಾಬಾದಿನ ಕನ್ನಡಿಗ, ಹಿರಿಯ ಸಾಹಿತಿ, ದಿ॥ ಪ್ರೊ॥ ಡಿ. ಕೆ. ಭೀಮಸೇನರಾಯರು. "ಗಿಲ್‌ಗಿಲ್

ಗಿಲಗಚ್ಚಿ" ಮಕ್ಕಳ ಪದಗಳ ಸಂಗ್ರಹಕ್ಕೆ ಮೊದಲ ಮಾತಾಗಿ "ನನ್ನ ನಾಲ್ಕು ಮಾತು" ಬರೆಯುವಾಗ ಸಿದ್ಧಯ್ಯ ಪುರಾಣಿಕರು ಈ ವಿಷಯವನ್ನು ಪ್ರಸ್ತಾಪಿಸಿದ್ದಾರೆ.

"೧೯೫೦" ಇರಬಹುದು. ಒಮ್ಮೆ ನನ್ನ ಕನ್ನಡ ಗುರುಗಳಾದ ಪ್ರೊ॥ ಡಿ. ಕೆ. ಭೀಮಸೇನರಾಯರ ಮನೆಗೆ ಹೋದಾಗ ಅವರು "ಸತ್ಯಾಶ್ರಯ ಪಠ್ಯಪುಸ್ತಕಮಾಲೆ" ಯನ್ನು ರೂಪಿಸುವ ಕಾರ್ಯದಲ್ಲಿ ಮಗ್ನರಾಗಿದ್ದರು. ನನ್ನನ್ನು ನೋಡುತ್ತಲೇ ೩ನೆಯ ೪ನೆಯ ತರಗತಿಯ ಪಠ್ಯಪುಸ್ತಕಗಳಿಗಾಗಿ ಎರಡು ಮಕ್ಕಳ ಪದ್ಯಗಳು ಬೇಕು, ಈಗಿಂದೀಗಲೇ ಬರೆದು ಕೊಡು, ಎಂದು ಕಾಗದ ಪೆನ್ನುಗಳನ್ನು ಮುಂದಿರಿಸಿದರು. ಆದಾವ ಅಮೃತ ಗಳಿಗೆಯೋ, "ಅಜ್ಜನ ಕೋಲಿದು ನನ್ನಯ ಕುದುರೆ" ಎಂಬ ಕವಿತೆ ಯನ್ನು "ಕರಡಿಯ ತಕತಕ ಕುಣಿಸುತ ಬಂದನು ಸಿದ್ದಿದ್ದಿ ಬಾವಾ" ಎಂಬ ಕವಿತೆಯನ್ನು ಕೆಲವೇ ನಿಮಿಷಗಳಲ್ಲಿ ಬರೆದು ಒಪ್ಪಿಸಿದೆ. ಅವರಿಗೆ ಅತೀವ ಆನಂದವಾಯಿತು. "ನೀನು ಮಕ್ಕಳ ಪದ್ಯಗಳನ್ನು ಸೊಗಸಾಗಿ ಬರೆಯುತ್ತಿ, ಬರೆಯುತ್ತ ಹೋಗು ಎಂದು ಹುರಿದುಂಬಿಸಿದರು."

ಸಿದ್ಧಯ್ಯ ಪುರಾಣಿಕರು ಮಕ್ಕಳ ಸಾಹಿತ್ಯವನ್ನೂ ಸೊಗಸಾಗಿ ರಚಿಸಬಲ್ಲರು ಎಂದು ಕಂಡುಕೊಂಡ ಹಿರಿಯರಲ್ಲಿ ಇನ್ನೊಬ್ಬರು ದಿ॥ ಮಾಸ್ತಿ ನರಸಿಂಗರಾಯರು. ೧೯೫೫ರಲ್ಲಿ ಹೈದರಾಬಾದಿನ ಸಹಜೀವ ಪ್ರಕಾಶನವು "ಕಾವ್ಯಾನಂದ"ರ "ವಿಕಾಸವಾಣಿ" ಎಂಬ ಕವನ ಸಂಕಲನವನ್ನು ಪ್ರಕಟಿಸಿತು. ಈ ಕವನ ಸಂಗ್ರಹ ಮಕ್ಕಳಿಗೆ ಮೀಸ ಲಾದುದಲ್ಲ. ಒಂದೆರಡುಮೂರು ಕವನಗಳು ಮಕ್ಕಳ ಹೃದಯವನ್ನು ಸ್ಪರ್ಶಿಸಿ, ಅವರುಗಳನ್ನು ಹುರುಪುಗೊಳಿಸಿ ನಲಿಸುವ ಗುಣಗಳನ್ನು ಪಡೆದಿದ್ದವು. ಈ ಗುಣ ಗಳನ್ನು ತಮ್ಮ ಮುನ್ನುಡಿಯಲ್ಲಿ ಎತ್ತಿ ತೋರಿಸಿದವರು ಮಾಸ್ತಿಯವರು.

> "………ಬಳಸಿದ ಭಾಷೆ ಕೂಡ ನೇರವಾಗಿ ಅರ್ಥವಾಗುವ ನಿತ್ಯೋಪಯೋಗದ ಶಬ್ದಗಳು. ಧ್ವನಿಗಿಂತ ಹೆಚ್ಚಾಗಿ ವಾಚ್ಯವೇ ಇಲ್ಲಿ ಪ್ರಧಾನ. ಏಕೆಂದರೆ ಇದರಲ್ಲಿ ಉದ್ದಿಷ್ಟರಾದ ಓದುಗರು ಹಳ್ಳಿಗರು ಮತ್ತು ಸಣ್ಣ ಮಕ್ಕಳು, ಅವರ ಮನಸ್ಸಿಗೆ ಹಿಡಿಯುವಂತೆ ಬರೆಯುವ ಕೌಶಲವನ್ನು ಕಾವ್ಯಾನಂದರು ಪಡೆದಿದ್ದಾರೆ. ಇದಕ್ಕಾಗಿ ಅವರಿಗೆ ಧನ್ಯವಾದಗಳು."

"ವಿಕಾಸವಾಣಿ" ಕವನ ಸಂಗ್ರಹದಲ್ಲಿ ಮೊದಲನೆಯ ಕವನ "ಮುಂದಕ್ಕೆ ಸಾಗು" ಎಂಬುದು, ೧೯೪೭ರ ಆಗಸ್ಟ್ ೧೫ರಂದು ಭಾರತದೇಶ ಸ್ವಾತಂತ್ರ್ಯ ಪಡೆಯಿತು. ನಮ್ಮ ದೇಶ ಬ್ರಿಟಿಷ್ ಆಡಳಿತದ ಬಂಧದಿಂದ ಬಿಡುಗಡೆ ಹೊಂದಿ ಎಂಟು ವರುಷಗಳಾಗಿತ್ತು, ಅಷ್ಟೆ. ಪರಕೀಯರ ದಾಸ್ಯದಲ್ಲಿ ಸಿಲುಕಿ ದೀನದರಿದ್ರ ವಾಗಿದ್ದ ದೇಶವನ್ನು ಮತ್ತೆ ಹೊಸದಾಗಿ ನಿರ್ಮಾಣ ಮಾಡಬೇಕಾಗಿದ್ದ ಕಾಲವದು. ಕವಿಯ ದೃಷ್ಟಿ ಈ ದಿಶೆಯಲ್ಲಿ ಕೇಂದ್ರೀಕೃತವಾಗಿತ್ತು. "ನಮ್ಮ ದೇಶ ಪ್ರಪಂಚದ

ಮುಂದುವರಿದ ದೇಶಗಳೊಡನೆ ಸಮವಾಗಿ ಎದ್ದು ನಿಲ್ಲಬೇಕು" ಎಂಬ ಹಂಬಲ ಕವಿಯ ಹೃದಯದಲ್ಲಿ ತುಡಿಯುತ್ತಿತ್ತು. ನಮ್ಮ ಮಕ್ಕಳಲ್ಲಿ ದೇಶ ಕಟ್ಟುವ ಸ್ಫೂರ್ತಿ ತುಂಬಬೇಕು ಎಂಬ ಆಕಾಂಕ್ಷೆ "ಮುಂದಕ್ಕೆ ಸಾಗು" ಎಂಬ ಕವನದ ಸಾಲು ಸಾಲುಗಳಲ್ಲಿ ಹೊಮ್ಮಿದೆ. ಈ ಕವನದ ಪ್ರಾರಂಭವೇ ಮಕ್ಕಳ ಎಳೆ ಹೃದಯಗಳನ್ನು ತಟ್ಟಿ ಕಾರ್ಯಾಚರಣೆಗೆ ತೊಡಗುವಂತೆ ಹುರಿದುಂಬಿಸುತ್ತದೆ.

"ಮುಂದಕ್ಕೆ ಮುಂದಕ್ಕೆ ಮುಂದಕ್ಕೆ ಸಾಗು
ಭಾರತದ ನಿರ್ಮಾಣದಲಿ ಭಾಗಿಯಾಗು."

ನವ ಭಾರತವನ್ನು ನಿರ್ಮಿಸುವ ಮಹಾ ಯೋಜನೆಯೇ ಈ ಕವನದಲ್ಲಿ ರೂಪುಗೊಂಡಿದೆ. ಭಾರತ ದೇಶದ ಬೆನ್ನೆಲುಬು ಹಳ್ಳಿಗಳು, ಗ್ರಾಮಗಳು, ಸಹಸ್ರಾರು ಗ್ರಾಮಗಳು ಚೆನ್ನಾದ ಬಾಳು ಬಾಳಿದರೆ, ಭಾರತದೇಶ ಪುನಃಚೇತನಗೊಂಡಂತೆ. ಈ ಗುಟ್ಟನ್ನು ಬಲ್ಲ ಕವಿ ದೇಶ ಕಟ್ಟುವ ಯೋಜನೆಯನ್ನು ಮಕ್ಕಳ ಎಳೆ ಮನಸ್ಸುಗಳಿಗೆ ನಾಟುವಂತೆ ಹೀಗೆ ಮಂಡಿಸಿದ್ದಾರೆ "ಮುಂದಕ್ಕೆ ಸಾಗು" ಕವನದಲ್ಲಿ.

"ಇಟ್ಟಿಗೆಯ ಸುಟ್ಟು ಸಾಲೆಗಳ ಕಟ್ಟು
ಒಡ್ಡುಗಳ ಹಾಕು ಕೆರೆಗಳನು ಕಟ್ಟು
ವನವನ್ನು ಬೆಳೆಸು ಮರಗಳನು ನೆಟ್ಟು
ಭಾರತವ ಬೆಳೆಸು ಶ್ರಮದಾನ ಕೊಟ್ಟು."

ನಮ್ಮ ದೇಶದ ಗ್ರಾಮಗಳ ಜೀವನ ಹಸನಾಗಬೇಕಾದರೆ ಇಷ್ಟು ಸಾಲದು. ನಮ್ಮ ಜನ ಸ್ವಾವಲಂಬನವನ್ನು ಬೆಳೆಸಿಕೊಳ್ಳಬೇಕು. ಉತ್ಪನ್ನ ಉದ್ಯಮಗಳನ್ನು ಕೈಗೊಳ್ಳಬೇಕು, ಇಷ್ಟೆಲ್ಲ ತಿಳಿವಳಿಕೆಗಳನ್ನು ಕೊಟ್ಟಿದ್ದಾರೆ ಈ ಕವನದಲ್ಲಿ. ಪರದೇಶಗಳೊಡನೆ ಹೋಲಿಸಿದರೆ ಭಾರತದೇಶದ ನಿಲುವು ನೈತಿಕ ಆಧಾರದ ಮೇಲಿದೆ. ಕವಿಗೆ ತನ್ನ ದೇಶದ ಮಕ್ಕಳು ನೀತಿಯ ನೆಲಗಟ್ಟಿನ ಮೇಲೆ ನಿಲ್ಲಬೇಕು, ಬೆಳೆಯಬೇಕು ಎಂದು ಮಹಾಕಾಂಕ್ಷೆ. ಆದುದರಿಂದ "ಮುಂದಕ್ಕೆ ಸಾಗು" ಕವನವನ್ನು ಈ ಮಹದಾಸೆಯ ಸಂದೇಶದಿಂದ ಹೀಗೆ ಮುಗಿಸುತ್ತಾರೆ.

"ವಿದ್ಯೆಯನು ಗಳಿಸು ಬುದ್ಧಿಯನು ಬೆಳೆಸು
ಶಕ್ತಿಯನು ಗಳಿಸು ಶಾಂತಿಯನು ಮೊಳೆಸು
ಸತ್ಯವನು ನಿಲಿಸು ಧರ್ಮವನು ಗೆಲಿಸು
ಪ್ರೀತಿಯನು ಬಲಿಸು ನೀತಿಯನು ನೆಲೆಸು
ನಿನ್ನ ಉದ್ಧಾರಕ್ಕೆ ನೀನು ಸಿದ್ಧನಾಗು
ಮುಂದಕ್ಕೆ ಮುಂದಕ್ಕೆ ಮುಂದಕ್ಕೆ ಸಾಗು."

"ವಿಕಾಸ ವಾಣಿ" ಯಲ್ಲಿ ಮಕ್ಕಳ ಪ್ರೀತಿಯನ್ನು ಗಳಿಸಿಕೊಳ್ಳುವ ಇನ್ನೊಂದು ಕವನ "ನಮ್ಮ ನವ್ಯ ಭಾರತ." "ಮುಂದಕ್ಕೆ ಸಾಗು" ಕವನದಲ್ಲಿ ನವ ಭಾರತ

ನಿರ್ಮಾಣಕ್ಕೆ ಯೋಜನೆಗಳಿದ್ದರೆ, "ನಮ್ಮ ನವ್ಯ ಭಾರತ" ಕವನದಲ್ಲಿ ದೇಶಾಭಿವೃದ್ಧಿಗೆ ನಮ್ಮ ಮಕ್ಕಳು ಹೇಗೆ ಗರಿಕಟ್ಟಿಕೊಂಡು ನಿಲ್ಲಬೇಕು ಎಂಬ ಸ್ಫೂರ್ತಿಯಿದೆ.

"ಕಟ್ಟಬನ್ನಿ ಕೆಳೆಯರೆ
ನಮ್ಮ ನವ್ಯ ಭಾರತ
ಭವ್ಯ ದಿವ್ಯ ಭಾರತ
ಸರ್ವಶಕ್ತಿ ಭಾರತ
ಸಾರ್ವಭೌಮ ಭಾರತ"

ನವ್ಯ ದಿವ್ಯ ಸರ್ವಶಕ್ತಿ ಸಾರ್ವಭೌಮ ಭಾರತವನ್ನು ಕಟ್ಟಬೇಕಾದರೆ ಧ್ಯೇಯವಂತರಾಗಬೇಕು ಭಾರತದೇಶದ ಮಕ್ಕಳು ಎಳೆತನದಿಂದಲೇ. ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ! ಕವಿಗೆ ಈ ಮರ್ಮ ಚೆನ್ನಾಗಿ ಗೊತ್ತಿದೆ. ಆದುದರಿಂದ ಕವಿ ತಮ್ಮ ಧ್ಯೇಯಗಳನ್ನು ಬಿಡಿಸಿ ಬಿಡಿಸಿ ಮಕ್ಕಳ ಹೃದಯ ನಾಟುವಂತೆ ತಿಳಿಯಪಡಿಸುತ್ತಾರೆ. ಅವು ಹೀಗಿವೆ—

"ಸತ್ಯ ಪ್ರೀತಿ ಶಿವಪಥ
ನಡೆಯೆ ರಾಷ್ಟ್ರದೀರಥ
ಕಡಿದು ವಿಘ್ನ ಪರ್ವತ
ಕಟ್ಟು ನವ್ಯ ಭಾರತ

ಧ್ಯೇಯವಾದಿಗಳಾಗಿ ನವ್ಯ ಭಾರತವನ್ನು ಕಟ್ಟಿದರೆ, ಅದರಿಂದ ಎಂಥ ದಿವ್ಯ ಸುಂದರ ಭವ್ಯ ಭಾರತ ನಿರ್ಮಾಣವಾಗುತ್ತದೆ? ಆ ಭವಿಷ್ಯ ಭಾರತದ ಚಿತ್ರವನ್ನು ಕವಿಕಣ್ಣು ಈಗಲೇ ಕಾಣುತ್ತಿದೆ.

ಜಗಕೆ ಶಾಂತಿ ಸಾರುತ
ಜಗಕೆ ಬೆಳಕು ಬೀರುತ
ಮೆರೆಯಲೆಮ್ಮ ಭಾರತ

ಎಂದು ಫಲಶೃತಿ ಹೇಳಿದ್ದಾರೆ. ಈ ಕಾರಣಕ್ಕಾಗಿ ನಮ್ಮ ಮಕ್ಕಳು ನವ್ಯ ಭಾರತವನ್ನು ಕಟ್ಟುವುದಕ್ಕೆ ಸಂಕಲ್ಪ ಮಾಡಿಕೊಳ್ಳಬೇಕಲ್ಲವೆ? ಅದನ್ನು ಒತ್ತಿ ಹೇಳಿ ಕವನ ಮುಗಿಸುತ್ತಾರೆ ಪ್ರಾರಂಭದ ಸಾಲುಗಳನ್ನು ಪುನರಾವರ್ತಿ ಮಾಡಿ,

"ಕಟ್ಟು ನವ್ಯ ಭಾರತ
ಸರ್ವ ಶಕ್ತಿ ಭಾರತ
ಸಾರ್ವಭೌಮ ಭಾರತ,"

* * * *

೧೯೭೪ರಲ್ಲಿ ಮಕ್ಕಳ ಉಪಯೋಗಕ್ಕೆಂದೇ ಮೀಸಲಾದ ಮಕ್ಕಳ ಕವನ ಸಂಗ್ರಹ

"ತುಪ್ಪಾ ರೊಟ್ಟಿ ಗೇ ಗೇ ಗೇ" ಕಾವ್ಯಾನಂದರಿಂದ ರಚಿತವಾಗಿ ಬೆಂಗಳೂರಿನ ಸಹಕಾರಿ ಪ್ರಕಾಶನದಿಂದ ಪ್ರಕಟವಾಯಿತು. ಈ ವೇಳೆಗೆ ವಿಶ್ವದಲ್ಲಿ ಅನೇಕ ಬದಲಾವಣೆಗಳಾಗಿದ್ದವು. ಅವುಗಳ ಪರಿಣಾಮ ಭಾರತದೇಶದ ಮೇಲೂ ಆಗಿತ್ತು. ಕವಿಯ ಮನಸ್ಸು ಇವುಗಳನ್ನೆಲ್ಲ ಗ್ರಹಿಸಿದೆ. ನಮ್ಮ ಮಕ್ಕಳೂ ಅವುಗಳನ್ನು ಬಲ್ಲರು. "ತುಪ್ಪಾ ರೊಟ್ಟಿ ಗೇ ಗೇ ಗೇ" ಕೃತಿಯಲ್ಲಿ ಈ ಪರಿಣಾಮಗಳನ್ನು ಗುರುತಿಸಬಹುದಾಗಿದೆ." ಈ ಕಾರಣ, "ತುಪ್ಪಾ ರೊಟ್ಟಿ ಗೇ ಗೇ ಗೇ" ಒಂದು ವೈಶಿಷ್ಟ್ಯಪೂರ್ಣ ಕೃತಿ.

ಭಾಯಿ ಭಾಯಿ ಎಂದು ಭಾರತ ದೇಶಕ್ಕೆ ಸ್ನೇಹ ಹಸ್ತ ನೀಡಿದ್ದ ನಮ್ಮ ನೆರೆಹೊರೆ ರಾಷ್ಟ್ರ, ಗಡಿ ಸಮಸ್ಯೆಯನ್ನು ಮುಂದು ಮಾಡಿಕೊಂಡು ನಮ್ಮ ಜನವನ್ನು ಹೊನ್ನಶೂಲದಿಂದ ಇರಿಯಿತು. ನಮ್ಮ ರಾಷ್ಟ್ರ ನಿರ್ವಾಹವಿಲ್ಲದೆ ಚೈನಾ ರಾಷ್ಟ್ರದೊಡನೆ ಹೋರಾಡಬೇಕಾಯಿತು. ಆ ಸಮಯದಲ್ಲಿ ನಮ್ಮ ಚಿಣ್ಣರ ಮನೋಭಾವ ಎಂತಿತ್ತು. ಆ ಮನೋಭಾವದ ನಿರೂಪಣೆ "ಕೊಡು ಖಡ್ಗವ ಕೈಗೆ" ಕವನದಲ್ಲಿ ವೀರ್ಯವತ್ತಾಗಿ ಮೂಡಿ ಬಂದಿದೆ. ಹಾಲುಗಲ್ಲದ ಬಾಲಕ ತನ್ನ ತಾಯಿಯನ್ನು ಹೀಗೆ ಕೇಳಿಕೊಳ್ಳುತ್ತಾನೆ ಖಡ್ಗವನ್ನು ಅಪೇಕ್ಷಿಸಿ–

"ಕೊಡು ಖಡ್ಗವ ಕೈಗೆ ತಾಯೆ
ಕೊಡು ಕೋವಿಯ ಕೈಗೆ
ತೋರಿಸುವೆನು ನನ್ನಯ ಕೈ
ಆ ಚೌ–ಎನ್–ಲೈಗೆ
ಕೊಡು ಖಡ್ಗವ ಕೈಗೆ,

ಚೀನಾ ರಾಷ್ಟ್ರದ ಮಹಾನಾಯಕ ಚೌ–ಎನ್–ಲೈ ತಾನೆ ಗಡಿ ಸಮಸ್ಯೆಯನ್ನು ಎತ್ತಿಕೊಂಡು ನಮ್ಮ ರಾಷ್ಟ್ರದ ಮೇಲೆ ಸೈನ್ಯ ನುಗ್ಗಿಸಿದವನು. ಈ ಕಾರಣ, ನಮ್ಮ ಬಾಲಯೋಧನಿಗೆ ಚೌ–ಎನ್–ಲೈ ಮೇಲೆ ಕ್ರೋಧ. "ಚೀಣೇಯರ ಸೊಕ್ಕಿಳಿಸದೆ ನಾ ನಿದ್ರಿಸಲಾರೆ. ನಾ ಕಲಿಸುವೆ ಪಾಠವನು ಆ ಹಳದಿಯ ನಾಯ್ಗೆ" ಎಂದು ರೋಷದ ಉದ್ಗಾರ ತೆಗೆಯುತ್ತಾನೆ.

"ಮ್ಯಾಕ್‌ಮೋಹನ್ ಗಡಿ ನನ್ನದು
ನನ್ನದು ಹಿಮಗಿರಿಯು
ಈ ಗಿರಿಯನು ಕಬಳಿಸುವುದೆ
ಆ ಚೀಣದ ನರಿಯು
ಇದೊ ಹೊರಟೆನು ಸಿಡಿಲಾಗಿ
ಪೀಕಿಂಗಿನ ಬಾಯ್ಗೆ
ಕೊಡು ಖಡ್ಗವ ಕೈಗೆ."

ಹಿಂದೆ, ಕೆಲವು ದಶಕಗಳ ಮಾತು. ಜಪಾನು ಚೈನಾದ ಮೇಲೆ ಎರಗಿದಾಗ ಭಾರತೀಯರು ಧನ ಸಹಾಯ–ವೈದ್ಯ ಸಹಾಯಗಳನ್ನು ಒದಗಿಸಿದರು. ನಮ್ಮ ರಾಷ್ಟ್ರದ ಎಳೆಯ ಪೋರ ಈ ವಿಷಯವನ್ನು ತಿಳಿದುಕೊಂಡಿದ್ದಾನೆ, ಆ ವಿಷಯವೂ ಈಗ ಅವನ ನೆನಪಿಗೆ ಬಂದಿದೆ. ಎಂಥ ಕೃತಜ್ಞ ರಾಷ್ಟ್ರ ಚೀನಾ! ಇದನ್ನು ನೆನೆಸಿಕೊಳ್ಳುತ್ತಲೆ ಅವನ ರಕ್ತ ಬಿಸಿಯಾಗುತ್ತದೆ.

" ಹಾಲುಣಿಸಿದ ಕೈ ಕಚ್ಚಿದ
ಈ ಹಳದಿಯ ಹಾವ
ಸೀಳುವೆನು ಹೂಳುವೆನು
ತಡೆಯುವನಿದನಾವ ?
ಗರುಡನ ಮರಿ ಹೆದರುವುದೆ
ಇಲಿ ತಿನ್ನುವ ಹಾವ್ಗೆ
ಕೊಡು ಖಡ್ಗವ ಕೈಗೆ "

ಇಷ್ಟೆಲ್ಲ ಆವೇಶಪೂರಿತನಾಗಿ ಹೇಳಿಯಾದ ಮೇಲೆ ನಮ್ಮ ಕನ್ನಡ ಕಡುಗಲಿ ಭೀಷ್ಮ ಪ್ರತಿಜ್ಞೆ ಮಾಡುತ್ತಾನೆ. ಅವನು ಉತ್ತರಕುಮಾರನಲ್ಲ, ಕಾರ್ಯಸಾಧಕ.

"ನೀನುಣಿಸಿದ ಹಾಲಿನ ಋಣ
ತೀರಿಸುವೆನು ತಾಯೆ !
ಹಾರಿಸುವೆನು ಗೆಲುವಿನ ಗುಡಿ
ಗಡಿಯಾಚೆಗೆ ತಾಯೆ !
ಹಗೆಯುಳಿಯದೆ ಮಗ ಮರಳನು
ಮಿಂಚಿಳಿದಿದೆ ಮೈಗೆ
ಕೊಡು ಖಡ್ಗವ ಕೈಗೆ"

ವೀರಯೋಧನಾಗಬಯಸಿ ಒಬ್ಬ ಬಾಲಕ ತನ್ನ ತಾಯಿಯನ್ನು "ಕೊಡು ಖಡ್ಗವ ಕೈಗೆ" ಎಂದು ಕೇಳಿದರೆ, ಇನ್ನೊಬ್ಬ ಬಾಲಕ ರಷ್ಯನರಂತೆ ತಾನು ಗಗನ ಯಾತ್ರಿಕನಾಗಿ ಸಾಹಸ ಮೆರೆಯಬೇಕೆಂದು ಬಯಸಿದ್ದಾನೆ. ಅವನು ತನ್ನ ತಾಯಿಗೆ ದುಂಬಾಲುಬಿದ್ದು "ತರಬೇತು ಕೊಡಿಸು ನನ್ನ ಸಾಹಸವನ್ನು ಮೆರೆಯುವುದಕ್ಕೆ" ಎಂದು ಕೇಳಿಕೊಳ್ಳುತ್ತಾನೆ. ಈ ಹಂಬಲ "ಬಾಲಕನ ಬಯಕೆ" ಕವನದ ತಿರುಳು ; ಪ್ರಚಲಿತ ವಿಜ್ಞಾನದ ಪ್ರಜ್ಞೆ ಹಾಸುಹೊಕ್ಕು.

ಗಗರಿನ್ ಕಾಯ್ದ
ಗಂಡಿನ ಮಾನ
ವೆಲೆಂಟಿನಾ
ಹೆಣ್ಣಿನಮಾನ

ನಾನು ಕಾಯುವೆನು
ಬಾಲರ ಮಾನ
ಕೊಡಿಸೌ ನನಗೆ ತರಬೇತು
ನಾನೂ ಆಗುವೆನು ಮನೆಮಾತು.

ರಷ್ಯಾ ರಾಷ್ಟ್ರ ಗಗನಯಾತ್ರೆಯನ್ನು ವೈಜ್ಞಾನಿಕವಾಗಿ ಕೈಗೊಂಡ ರಾಷ್ಟ್ರಗಳಲ್ಲಿ ಮೊದಲನೆಯದು, ಗಗನಯಾತ್ರಿಕರಲ್ಲಿ ಮೊಟ್ಟಮೊದಲಿಗನು ಯೂರಿ ಗಗರಿನ್. ಮಹಿಳಾ ಮಣಿಗಳಲ್ಲಿ ಮೊಟ್ಟ ಮೊದಲಿಗಳು ವೆಲೆಂಟನಾ ತೆರೆಷ್ಕೋವ. ಅವರುಗಳಂತೆಯೇ ತಾನೂ ಗಗನಯಾತ್ರಿಕನಾಗಿ ಕನ್ನಡ ನಾಡಿನ ಬಾವುಟವನ್ನು ಭಾರತ ದೇಶದಲ್ಲಿ ಹಾರಿಸಬೇಕೆಂದು ಕನ್ನಡನಾಡಿನ ಕಂದನ ಅಪೇಕ್ಷೆ. ತಾನು ಮೊದಲವನಾಗಬೇಕೆಂದು ಆಕಾಂಕ್ಷೆ.

"ಬೇರೆಯ ಬಾಲರು
ಹೋದಾರು
ಮೊದಲಿನ ಮಾನವ ಪಡೆದಾರು
ನಂತರ ಹೋದರೆ
ಕೇಳುವರಾರು ?
ಈ ಕ್ಷಣ ಕೊಡಿಸೌ ತರಬೇತು
ನಾನೂ ಆಗುವೆ ಮನೆಮಾತು."

ಈ ಕಾರಣ ನಮ್ಮ ಬಾಲಕ ಗಗನಯಾತ್ರಿಕ ಸಾಹಸಿ ಈ ಕ್ಷಣವೇ ತನಗೆ ತರಬೇತು ಬೇಕೆಂದು ಕಾತರನಾಗಿದ್ದಾನೆ. ತರಬೇತು ಪಡೆದರೆ ಸಾಕು ಗಗನಯಾತ್ರೆ ಅಂಗೈಯಲ್ಲಿನ ನೆಲ್ಲಿಕಾಯಂತೆ ಅವನಿಗೆ.

"ನಾನೂ ಕ್ಷಿಪಣಿಯ
    ಹತ್ತುವೆನು
ಪೃಥ್ವಿಯ ಸುತ್ತಲು
    ಸುತ್ತುವೆನು
ಬಾಲರ ಬಾವುಟ
    ಎತ್ತುವೆನು"

ಮತ್ತೊಬ್ಬ ಬಾಲಕ. ಅವನು ಸೌಂದರ್ಯೋಪಾಸಕ. ಮಾನವನ ಧಾಳಿ ಚಂದ್ರನ ಮೇಲಾದರೆ ಚಂದ್ರನ ಚೆಂದಕ್ಕೆ ಕುಂದುಬಾರದೆ ? ಅವನ ಅಂದ ಕೆಡದೆ ? ಆದುದರಿಂದ ಯಾರೂ ಚಂದ್ರನ ಮೇಲೆ ಇಳಿಯಬಾರದು ಎಂದು ನಮ್ಮ ಸೌಂದರ್ಯೋಪಾಸಕನ ಮನೋವೇದನೆ. ತನ್ನ ಈ ಒಳತೋಟಿಯನ್ನು ಯಾರಲ್ಲಿ ಹೇಳಿಕೊಳ್ಳ

ಬೇಕು ? ಅವನೂ ತಾಯಿಯ ಬೆನ್ನು ಬಿದ್ದಿದ್ದಾನೆ. ತನ್ನ ಸಂಕಟವನ್ನು ತಾಯಿಯಲ್ಲಿ ಹೇಳಿಕೊಳ್ಳುತ್ತಾನೆ. ಇದು "ಮಗುವಿನ ಮೊರೆ" ಕವನದ ಒಳ ಹೂರಣ.

"ಚಂದ್ರಲೋಕದೊಳಿನ್ನು ಮನೆಯ ಕಟ್ಟುವರಂತೆ
ಇರುವೊಬ್ಬ ಚಂದ್ರನನು ಅಂದಗೆಡಿಸುವರೆ ?
ಚಂದಮಾಮ ಎಂದು ಕರೆವುದಾರನು ಅಮ್ಮ ?"

ಹೀಗೆ ಕಂದಮ್ಮ ಪರಿತಪಿಸಿದರೆ ತಾಯಿ ಏನು ಸಮಾಧಾನ ಹೇಳಬೇಕು ? ಆಕೆಗೆ ಬಾಯಿಕಟ್ಟಿದೆ. ಬಾಲಕನೇ ತಾಯಿಯ ಮುಂದಿಡುತ್ತಾನೆ ತನ್ನ ಅನಿಸಿಕೆಯನ್ನು.

"ಬಾಲರಾನಂದಕ್ಕೆ ಬರೆಯ ಕೊಡಿಸುವರೆ
ಸಾಕಾಗದಾಯಿತೆ ಈ ಲೋಕ ಈ ಜನಕೆ
ಏಕೆ ಚಂದ್ರನ ಬೆನ್ನು ಹತ್ತಿರುವರಮ್ಮ ?"

ತಾಯಿ ಈಗಲೂ ಮೌನ. ಬಿಮ್ಮನೆ ಮುಚ್ಚಿದ ತುಟಿಗಳನ್ನು ಬಿಚ್ಚದೆ ಮಗುವಿನ ಮೊರೆಯನ್ನು ಕೇಳುತ್ತಿದ್ದಾಗಲೆ ಮೌನಗೌರಿಯಾಗಿ. ಬಾಳುವುದಕ್ಕೆ ಶಕ್ತನಾದವನು ಭೂಮಿಯ ಮೇಲೆ ಎಲ್ಲಿಯೂ ಬಾಳಿಯಾನು ! ಅವನಿಗೆ ತಾನಿರುವ ಜಗತ್ತು ಸಾಲದೆ ? ಚಂದ್ರನ ಮೇಲೇ ಧಾಳಿ ಮಾಡಬೇಕೆ ? ಚಂದ್ರನಿಂದ ಮಾನವನಿಗೆ ಎಷ್ಟು ಉಪಕಾರವಾಗುತ್ತಿದೆ. ಅದನ್ನು ನೆನಪು ಮಾಡಿಕೊಳ್ಳುತ್ತಾನೆ. ಚಂದ್ರನ ಅಂದ ಕೆಡಿಸಿದರೆ ಅದರಿಂದ ಆಗುವ ಮಹಾವಿಪತ್ತನ್ನು ಊಹಿಸಿ ಬಾಲಕ ಕಂಗಾಲಾಗುತ್ತಾನೆ.

"ಇಲ್ಲಿ ಸಲ್ಲದ ಜನರು ಅಲ್ಲಿ ಸಲ್ಲುವರೆಂತು ?
ಇಷ್ಟು ಸಹ ಈ ಜನಕೆ ಗೊತ್ತಿರದೆ ಅಮ್ಮ ?
ಚಂದ್ರನೇ ಮಸಕಾಗೆ ಮುಸುಕುವುದು ಕತ್ತಲೆಯು
ಬೆಳದಿಂಗಳಾಗುವುದು ಕನಸು ಕಾಣಮ್ಮ !
ಹುಣ್ಣಿಮೆಯ ಹಿಗ್ಗಿರಲಿ, ಬೆಳದಿಂಗಳೂಟವೇ
ನಮಗಿಲ್ಲವಾಗುವುದು ಅಲ್ಲವೇನಮ್ಮ ?"

ತಾಯಿಗೆ ಮಗುವಿನ ಮೊರೆ ಕೇಳಿಸಿದರೂ ಸಮಸ್ಯೆಯನ್ನು ಹೇಗೆ ಬಿಡಿಸಬೇಕೆಂದು ತಿಳಿಯದು. ಸಮಸ್ಯೆಯು ಕಗ್ಗಂಟಾಗಿದೆ. ಬಾಲಕನೇ ಸಮಸ್ಯೆಯನ್ನು ಬಿಡಿಸಲು ಪ್ರಯತ್ನಿಸುತ್ತಾನೆ. ಪದ್ಯದ ಕಡೆಯ ಸಾಲುಗಳಲ್ಲಿ ಈ ಸುಳಿವಿದೆ.

ಹುಣ್ಣಿಮೆಯ ಹಿಗ್ಗಿರಲಿ ಬೆಳದಿಂಗಳೂಟವೇ
ನಮಗಿಲ್ಲದಾಗುವುದು ! ಅಲ್ಲವೇನಮ್ಮ ?
ಇದು ತಿಳಿಯದೆ ನಮ್ಮ ಈ ದಡ್ಡ ಜನಗಳಿಗೆ
ನೀನಾದರೂ ಇದನ್ನು ತಿಳಿಸಿ ಹೇಳಮ್ಮ

ಇವರ ಹುಚ್ಚಿಗೆ ಚಂದ್ರ ಬಲಿಯಾಗದಂದದಲಿ
ಏನಾದರೂ ಮಾಡಿ ಉಳಿಸಿಕೊಳ್ಳಮ್ಮ ?"

"ತುಪ್ಪಾ ರೊಟ್ಟಿ ಗೇಗೇಗೇ" ಕವನ ಸಂಗ್ರಹದಲ್ಲಿನ ಪದ್ಯಗಳಲ್ಲಿ ಚಿತ್ರಿತವಾಗಿರುವ ಬಾಲಕರು ಪ್ರಚಲಿತಕಾಲದ ಪ್ರಜ್ಞೆಯುಳ್ಳವರು ; ಮಾತ್ರವಲ್ಲ, ಅವರುಗಳಿಗೆ ತಮ್ಮ ದೇಶದ ಪೂರ್ವಕಾಲದ ಅರಿವೂ ಉಂಟು. ತಮ್ಮ ದೇಶದ ಸುತ್ತಮುತ್ತಲ ದೇಶಗಳ ಬಗೆಗೆ ತಿಳಿವಳಿಕೆಯೂ ಇದೆ, ಈ ಅಂಶ "ನನ್ನ ಕುದುರೆ" ಕವನದಲ್ಲಿ ಸ್ಪಷ್ಟವಾಗಿದೆ. ಈಗಾಗಲೆ "ನನ್ನ ಕುದುರೆ" ಎಂಬ ವಿಷಯವನ್ನು ಕುರಿತು ಅನೇಕ ಮಂದಿ ಕವಿಗಳು ಮಕ್ಕಳ ಪದ್ಯಗಳನ್ನು ಬರೆದಿದ್ದಾರೆ. ಅವುಗಳಿಗೂ ಸಿದ್ಧಯ್ಯ ಪುರಾಣಿಕರು ಬರೆದಿರುವ "ನನ್ನ ಕುದುರೆ" ಪದ್ಯಕ್ಕೂ ಅಜಗಜಾಂತರ ವ್ಯತ್ಯಾಸ. ಈ ಕಾರಣದಿಂದ ಈ ಪದ್ಯದ ವೈಶಿಷ್ಟ್ಯ ಗಮನೀಯವಾಗಿದೆ. "ಅಜ್ಜನ ಕೋಲಿದು ನನ್ನಯ ಕುದುರೆ" ಎಂದು ಪ್ರಾರಂಭವಾಗುತ್ತದೆ "ನನ್ನ ಕುದುರೆ"ಯ ಪರಿಚಯ. ಈ ಕುದುರೆಯನ್ನು ಏರಿದ ಮಹಾನುಭಾವರುಗಳು ಯಾರಾರು ? ತನ್ನ ಅಜ್ಜನ ಕೋಲನ್ನು ಕುದುರೆಯೆಂದು ಭಾವಿಸಿ ಅದನ್ನು ಸವಾರಿ ಮಾಡುವ ಬಾಲಕ, ತನ್ನ ನಾಡಿನ ಪುರಾತನರನ್ನು ಜ್ಞಾಪಿಸಿಕೊಂಡು ಅವರುಗಳು ಏರಿದ ವಾಹನಗಳನ್ನು ತನ್ನ ಕೋಲು ಕುದುರೆಗೆ ಹೋಲಿಸಿ ಖುಷಿಪಡುವ ರೀತಿ ಅಚ್ಚ ಹೊಸದು. ಕೇಳಿ—

"ಚಂದಪ್ಪನಿಗೆ ಚಿಗರಿಯೆ ಕುದುರೆ
ಮಾದೇವನಿಗೆ ನಂದಿಯೆ ಕುದುರೆ
ರಾಮಚಂದ್ರನಿಗೆ ಹನುಮನೆ ಕುದುರೆ
ಹೊಟ್ಟೆಯ ಗಣಪಗೆ ಇಲಿಯೇ ಕುದುರೆ
ಅಜ್ಜನ ಕೋಲಿದು ನನ್ನಯ ಕುದುರೆ"

ಅಜ್ಜನ ಕೋಲನ್ನು ಕುದುರೆಯನ್ನಾಗಿ ಮಾಡಿಕೊಂಡ ಬಾಲಕ ಈಗ ನಮಗೆ ಸ್ವದೇಶ ಪರದೇಶಗಳಲ್ಲಿರುವ ಕುದುರೆಗಳನ್ನು ಪರಿಚಯ ಮಾಡಿಕೊಡಲು ತೊಡಗುತ್ತಾನೆ.

"ಅರಬರ ದೇಶದಿ ದೊರೆಯುವ ಕುದುರೆ
ಕಾಠೇವಾಡದಿ ಕಾಣುವ ಕುದುರೆ
ಅರಸು ಮಕ್ಕಳಿಗೂ ಸಿಕ್ಕದ ಕುದುರೆ
ನನಗೇ ಸಿಕ್ಕಿದೆ ನನ್ನೀ ಕುದುರೆ
ಅಜ್ಜನ ಕೋಲಿದು ನನ್ನಯೆ ಕುದುರೆ"

ಸಿದ್ಧಯ್ಯ ಪುರಾಣಿಕರ ಮಕ್ಕಳ ಪದ್ಯಗಳಲ್ಲಿ ಬರುವ ಮಕ್ಕಳು ಅಚ್ಚ ಕನ್ನಡಿಗರು. ಅವರುಗಳಿಗೆ ಕನ್ನಡ ನಾಡಿನ ಹಣ್ಣು ಹಂಪಲುಗಳು, ಮಿಠಾಯಿ ಸಿಹಿ ತಿಂಡಿಗಳು, ವೈವಿಧ್ಯಮಯವಾದ ಸವಿರುಚಿಯ ಊಟದ ಪದಾರ್ಥಗಳು, ಇವುಗಳ ಬಣ್ಣನೆ

ಕೇಳುವುದರಲ್ಲಿ ಅದೆಷ್ಟು ಹಿಗ್ಗೋ? "ತುಪ್ಪಾರೊಟ್ಟಿ ಗೇಗೇಗೇ"ಯಲ್ಲಿ "ಹಣ್ಣು ಮಾರುವವನ ಹಾಡು" ಕೇಳಿ. ಅವನ ಅಚ್ಚ ಕನ್ನಡತನವನ್ನು ಮೆಚ್ಚಿಕೊಳ್ಳಿ.

"ನಂಜನಗೂಡಿನ ರಸಬಾಳೆ
ತಂದಿಹೆ ಕೊಡಗಿನ ಕಿತ್ತಳೆ
ಬೀದರ ಜಿಲ್ಲೆಯ ಸೀಬೆಯ ಹಣ್ಣು
ಬೆಂಗಳೂರಿನ ಸೇಬಿನ ಹಣ್ಣು
ಕೊಳ್ಳಿರಿ ಹಿಗ್ಗನು ಹರಿಸುವವು
ಕಲ್ಲು ಸಕ್ಕರೆಯ ಮರೆಸುವವು."

ಹಣ್ಣು ಮಾರುವವನ ಸರಕು ಇಷ್ಟಕ್ಕೆ ಮುಗಿಯುವುದಿಲ್ಲ. ಅವನ ಪಟ್ಟಿ ದೊಡ್ಡದು. ಸಹನೆಯಿಂದ ಕೇಳಿ,

"ಕೊಳ್ಳಿರಿ ಮಧುಗಿರಿ ದಾಳಿಂಬೆ
ಬೆಳವಲ ಬಯಲಿನ ಸಿಹಿಲಿಂಬೆ
ಬೆಳಗಾವಿಯ ಸವಿ ಸಪ್ಪೋಟ
ನಾಲಗೆ ಬರವನು ಕಳೆಯುವವು
ದೇಹದ ಬಲವನು ಬೆಳೆಸುವವು."

ಇಷ್ಟಕ್ಕೇ ಮುಗಿಯಿತೇನು ನಮ್ಮ ಕನ್ನಡ ನಾಡಿನ ಹಣ್ಣುಗಳ ಬೆಳೆಸು ? ಹಣ್ಣು ಮಾರುವವ ಕನ್ನಡ ನಾಡಿನ ಹಣ್ಣು ಬೆಳೆಯುವ ಯಾವ ಸ್ಥಳವನ್ನೂ ಮರೆತಿಲ್ಲ. ಅವುಗಳನ್ನು ಒಂದೊಂದಾಗಿ ತಿಳಿಸಿ ನಮಗೆ ಇಡೀ ಕನ್ನಡ ನಾಡನ್ನೇ ದರ್ಶನ ಮಾಡಿಸುತ್ತಾನೆ,

"ಗಂಜಾಮ್ ಅಂಜೀರ್ ತುಮಕೂರ್ ಹಲಸು
ಧಾರವಾಡದ ಆಪೋಸು
ಮಲೆನಾಡಿನ ಅನನ್ನಾಸು
ಕೊಳ್ಳಿರಿ ಮರೆತು ಸಿಹಿ ತಿನಿಸು
ಸವಿಯಿರಿ ಬಗೆ ಬಗೆ ಹಣ್ಣುಗಳ
ಕನ್ನಡ ನಾಡಿನ ಹಣ್ಣುಗಳ"

"ಗಿಲ್ ಗಿಲ್ ಗಿಲಗಚ್ಚಿ" ಮಕ್ಕಳ ಪದಗಳ ಸಂಗ್ರಹವನ್ನು ಸಿದ್ಧಯ್ಯ ಪುರಾಣಿಕರು ೧೯೭೮ರಲ್ಲಿ ಬಿಜಾಪುರದ ಭಾರತಿ ಸಾಹಿತ್ಯ ಭಂಡಾರದ ಆಶ್ರಯದಲ್ಲಿ ಪ್ರಕಟಿಸಿದರು. ಅದರಲ್ಲಿ "ಮಿಠಾಯಿ ಮಕ್ಕಳೆ" ಎಂಬುದೊಂದು ಕವನ. "ಹಣ್ಣು ಮಾರುವವನ ಹಾಡು" ಇದ್ದಂತೆ ಇದು ಮಿಠಾಯಿ ಮಾರುವವನ ಹಾಡು. ಹಣ್ಣು ಮಾರುವವನಿಗೆ ಇದ್ದಂತೆ ಮಿಠಾಯಿ ಮಾರುವವನಿಗೂ ಇಡೀ ಕನ್ನಡ ನಾಡಿನ ನಗರ, ಪಟ್ಟಣಗಳ ಪರಿಚಯವುಂಟು. ಅವನು ನಮ್ಮ ಮಕ್ಕಳನ್ನು ಕೇಳಿಕೊಳ್ಳುತ್ತಾನೆ.

"ಮಿಠಾಯಿ ಮಕ್ಕಳೆ
ಕೊಳ್ಳಿರಿ ಈಗಳೆ
ಬಿಟ್ಟರೆ ಮತ್ತಿವು ಸಿಗಲಿಕ್ಕಿಲ್ಲ
ಇವುಗಳ ಬೆಲೆಯೂ ಹೆಚ್ಚಿಲ್ಲ
ಮಿಠಾಯಿ ಮಕ್ಕಳೆ
ಕೊಳ್ಳಿರಿ ಈಗಳೆ."

ಇಷ್ಟು ಹೇಳಿದರೆ ಸಾಕೆ? ಮಕ್ಕಳನ್ನು ಆಕರ್ಷಿಸಬೇಕಾದರೆ ಚಾಲಾಕುಬೇಕು. ಮಿಠಾಯಿ ಮಾರುವವನಿಗೆ ಮಕ್ಕಳನ್ನು ಆಕರ್ಷಿಸುವ ಚಾಲಾಕು ಕರಗತವಾಗಿದೆ. ತನ್ನ ಸರಕುಗಳು ಯಾವ ಯಾವ ಊರಿನವು ಎಂಬುದನ್ನು ಕವನ ಕಟ್ಟಿ ರಾಗರಾಗವಾಗಿ ಹಾಡಿ ತನ್ನ ಕಡೆಗೆ ಒಲಿಸಿಕೊಳ್ಳುತ್ತಾನೆ.

"ಗೋಕಾಕದ ಕರಿದಂಟು
ರಾಜಧಾನಿಯ ಪೆಪ್ಪರಮೆಂಟು
ಬೆಳಗಾವಿಯ ಕುಂದ
ಹೈದರಾಬಾದಿನ ಕಲಕಂದ
ಬಾಯೊಳು ನೀರನು ಬರಿಸುವುವು
ಕೈಯೊಳು ಕಾಸನು ತರಿಸುವುವು
ಮಿಠಾಯಿ ಮಕ್ಕಳೆ
ಕೊಳ್ಳಿರಿ ಈಗಳೆ."

ಮಕ್ಕಳ ಬಾಯಲ್ಲಿ ಜೊಲ್ಲು ಸುರಿಸುವ ಮಿಠಾಯಿ ಸರಕು ಇನ್ನೂ ಉಂಟು ನಮ್ಮ ಮಿಠಾಯಿವಾಲನಲ್ಲಿ. ಅವನು ಅವುಗಳ ಹೆಸರುಗಳನ್ನು ಮರೆಯದೆ ಕೂಗಿ ಹೇಳುತ್ತಾನೆ —

"ಬಿಟ್ಟರೆ ಮತ್ತಿವು ಸಿಗಲಿಕ್ಕಿಲ್ಲ
ಇವುಗಳ ಬೆಲೆಯೂ ಹೆಚ್ಚಿಲ್ಲ
ಧಾರವಾಡದ ಪೇಡೆ
ಬೆಂಗಳೂರಿನ ಪೇಣಿ
ಉತ್ತರದೇಶದ ಬರ್ಫಿ
ಚೌಪಾಟಿಯ ಕುಲ್ಫಿ
ಮಿಠಾಯಿ ಮಕ್ಕಳೆ
ಕೊಳ್ಳಿರಿ ಈಗಳೆ"

ಕನ್ನಡ ನಾಡು ಕಾವೇರೀ ನದಿಯಿಂದ ಕೃಷ್ಣನದಿಯವರೆಗೆ ಹರಡಿಕೊಂಡಿರುವ ವಿಶಾಲ ಭೂಪ್ರದೇಶ. ಈ ವಿಶಾಲ ಭೂಪ್ರದೇಶ ಉತ್ತರ ಕರ್ನಾಟಕ ಮತ್ತು

ದಕ್ಷಿಣ ಕರ್ನಾಟಕಗಳೆಂದು ಎರಡು ವಿಭಾಗಗಳಾಗಿವೆ. ಮೈಸೂರು, ಕೊಡಗು, ಹೀಗೆ ಒಳ ಭೇದಗಳು ಇನ್ನೆಷ್ಟೊ, ಈ ಪ್ರದೇಶಗಳ ಜನಗಳಲ್ಲಿ ಆಚಾರ ವಿಚಾರ, ನಾಲಗೆ ರುಚಿಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಕಂಡುಬಂದರೂ ಒಟ್ಟಿನಲ್ಲಿ ಇವರೆಲ್ಲರೂ ಒಂದೇ ಕನ್ನಡ ಕುಲಕ್ಕೆ ಸೇರಿದವರು. ಆಜು-ಬಾಜಿನಲ್ಲಿ ನೆಲೆಸಿರುವವರು, ಒಬ್ಬರೊಡನೊಬ್ಬರು ಸ್ನೇಹ-ವಿಶ್ವಾಸಗಳನ್ನು ಬೆಳೆಸಿರುವವರು. ಆದುದರಿಂದ ಒಬ್ಬರ ಮನೆಗೆ ಇನ್ನೊಬ್ಬರು ಊಟ-ಉಪಚಾರಗಳಿಗೆಂದು ಹೋಗಿಬರುವುದುಂಟು. ಅಂಥ ಸಂದರ್ಭಗಳಲ್ಲಿ ಎಂಥ ಊಟ ಕೊಡಬೇಕೆಂದು ನಮ್ಮ ಕನ್ನಡ ನಾಡಿನ ಚಿಣ್ಣ ಮನಸ್ಸಿನಲ್ಲಿ ಗುಣಾಕಾರ ಹಾಕಿ ತನ್ನ ತಾಯಿಗೆ ಆ ವಿವರ ಕೊಡುತ್ತಾನೆ. "ಗಿಲ್ ಗಿಲ್ ಗಿಲಗಚ್ಚಿ" ಯಲ್ಲಿ ಗೆಳೆಯರ ಊಟಕ್ಕೆ ಕರೆಯುವೆನಮ್ಮ" ಎಂಬ ಪದ್ಯದಲ್ಲಿ ಈ ವಿಷಯ ಸ್ವಾರಸ್ಯವಾಗಿ ನಿರೂಪಿತವಾಗಿದೆ.

"ಗೆಳೆಯರ ಊಟಕ್ಕೆ ಕರೆಯುವೆನಮ್ಮ
ತರತರದಡಿಗೆಯ ಮಾಡಮ್ಮ
ಒಬ್ಬರ ರುಚಿ ಇನ್ನೊಬ್ಬರಿಗಿಲ್ಲವು
ಏನೇ ಬೇಡಿದರು ನೀಡಮ್ಮ"

ಅತಿಥಿಯನ್ನು ದೇವರೆಂದೇ ಭಾವಿಸಿ ಸತ್ಕರಿಸುವುದು ಭಾರತೀಯ ಸಂಸ್ಕೃತಿಯ ಲಕ್ಷಣ. ನಮ್ಮ ನಾಡಿನ ಪೋರನಿಗೆ ಈ ಅರಿವುಂಟು. ಆದುದರಿಂದ ಒಬ್ಬರ ರುಚಿ ಇನ್ನೊಬ್ಬರಿಗಿಲ್ಲವು, ಏನೇ ಬೇಡಿದರು ನೀಡಮ್ಮ" ಎಂದು ಕೇಳಿಕೊಳ್ಳುತ್ತಾನೆ. ಉತ್ತರ ಕರ್ನಾಟಕದ ರುಚಿಭೇದಕ್ಕೆ ತಕ್ಕ ಅಡಿಗೆ, ದಕ್ಷಿಣ ಕರ್ನಾಟಕದ ರುಚಿಭೇದಕ್ಕೆ ತಕ್ಕ ಅಡಿಗೆ ಮಾಡೆಂದು ತಾಯಿಯಲ್ಲಿ ಅರಿಕೆ ಮಾಡಿಕೊಳ್ಳುತ್ತಾನೆ.

"ಉತ್ತರ ಕರ್ನಾಟಕದ ಗೆಳೆಯರಿಗೆ
ಹೋಳಿಗೆ ಕರಜೀಕಾಯಿ
ಎಳ್ಳು ಹಚ್ಚಿದ ಸೆಜ್ಜೆಯ ರೊಟ್ಟಿ
ಎಣ್ಣೆ ಬದನೆಕಾಯಿ
ಮೆಂತೆಯ ಪಲ್ಯ ಸೌತೆ ಟೊಮಾಟೊ
ಮೂಲಂಗಿಯ ಪಚ್ಚಡಿ
ಅಗಸಿಯ ಚಟ್ನಿ ಕೆನೆಕೆನೆ ಮೊಸರು
ಬಿಳಿ ಜೋಳದ ಕಿಚ್ಚಡಿ

ಉತ್ತರ ಕರ್ನಾಟಕದ ಗೆಳೆಯರಿಗೆ ಬೇಕಾದ ಉಣಿಸಿನ ವಿವರ ಕೊಟ್ಟಾಯಿತು. ಇನ್ನು ದಕ್ಷಿಣ ಕರ್ನಾಟಕದ ಗೆಳೆಯರು ಬಯಸುವ ಉಣಿಸನ್ನು ತಿಳಿಸಬೇಡವೇ ?

ದಕ್ಷಿಣ ಕರ್ನಾಟಕದ ಗೆಳೆಯರಿಗೆ
ಪೇಣಿ ಚಿರೋಟಿ ಕೀರು

ಇಡ್ಡಲಿ ಸಾಂಬರು ಮಸಾಲೆ ದೋಸೆಯು
ಮುದ್ದಿ ಅನ್ನ ತಿಳಿಸಾರು.
ಪುಳಿಯೋಗರ ಬಿಸಿಬೇಳೆಭಾತು ಕೇ–
ಸರಿಯು ಭಾತು ಕ್ಷೀರಾನ್ನ
ಕೊಬ್ಬರಿ ಬೆರೆಸಿದ ಕೋಸಂಬರಿ
ಬಜ್ಜಿ ಗೊಜ್ಜು ಮೊಸರನ್ನ

ದಕ್ಷಿಣ ಕರ್ನಾಟಕದ ಉಣಿಸನ್ನು ತಿಳಿಸಿಯಾಯಿತು. ಇನ್ನು ಕೊಡಗಿನ ಗೆಳೆಯರುಂಟಲ್ಲಿ! ಅವರಿಗೆ ?

ಕೊಡವ ಗೆಳೆಯನಿಗೆ ತಳಿಯುಪೆಟ್ಟು ಕೇ
ರಳದ ಗೆಳೆಯನಿಗೆ ಆಡು

ತನ್ನ ತಾಯಿ, ತನ್ನ ಗೆಳೆಯರಿಗೆ ಇಷ್ಟೆಲ್ಲ ಉಣಿಸು ತಯಾರುಮಾಡಿ ಊಟ ಮಾಡಿಸಿದರೆ ನಮ್ಮ ಕನ್ನಡ ಚಿಣ್ಣನಿಗಾಗುವ ಆನಂದ ಬಣ್ಣಿಸಲು ಅಸಾಧ್ಯ. ತಾಯಿಗೆ ಅರ್ಪಿಸುವ ಕೃತಜ್ಞತೆ ಎಂಥದು !

ಎಲ್ಲರು ಉಂಡು ಕೈತೊಳಕೊಂಡು
ಕುಣಿವೆವು ಸುತ್ತಲು ನಿನ್ನ
ಕೊಂಡಾಡುವೆವು ಮುಂಡಾಡುವೆವು ನಿನ್ನ
ಹಾಡಿ ಹೊಗಳುವೆವು ನಿನ್ನ.

ಕನ್ನಡ ಚಿಣ್ಣನನ್ನು ತಾಯಿ ಪ್ರೇಮಮಯಿಯನ್ನಾಗಿ ಬೆಳೆಸಿದ್ದಾಳೆ. "ಕೂಡಿ ಬಾಳೋಣ" ತಿಳಿವಳಿಕೆ ಕಲಿಸಿದ್ದಾಳೆ. ಅವನು ಅದನ್ನು ಸ್ಮರಿಸಿಕೊಳ್ಳುತ್ತಾನೆ. "ಕನ್ನಡ ಕುಲ ಒಂದೇ" ಎನ್ನುವ ಭಾವನೆ ಅಡಗಿದೆ ಈ ಕೆಳಗಿನ ಸಾಲುಗಳಲ್ಲಿ.

ನನ್ನ ತಾಯಿ ಎಲ್ಲರ ತಾಯಿ
ಆಗಿ ಉಣಿಸುವಳು ನಾಳೆ
ಎಳೆಯರು ನಾವು ಗೆಳೆಯರು ಇಂದು
ಅಣ್ಣ ತಮ್ಮದಿರು ನಾಳೆ.

ಇದೇ ಕನ್ನಡ ಐಕ್ಯಭಾವ "ಗಿಲ್‌ಗಿಲ್ ಗಿಲಗಚ್ಚಿ"ಯ ಇನ್ನೊಂದು ಕವನದಲ್ಲಿ ಇನ್ನಷ್ಟು ಪ್ರಭಾವಯುತವಾಗಿ ಸ್ಫುಟಗೊಂಡಿದೆ. ಆ ಕವನದ ಹೆಸರು "ಕನ್ನಡಿಗರಾಗಿ ಬೆಳೆಯೋಣ". ನಾನು ಬ್ರಾಹ್ಮಣ, ನಾನು ಲಿಂಗಾಯಿತ, ನಾನು ಒಕ್ಕಲಿಗ ಇತ್ಯಾದಿ ಭಾವನೆಗಳಿಂದ ಕನ್ನಡ ನಾಡಿನ ಏಳಿಗೆ ಎಂದೂ ಆಗದು. "ಸ್ವಾಮಿ ನನ್ನೂರು ಧಾರ್ವಾಡ, ನನ್ನೂರು ಮೈಸೂರು, ನನ್ನೂರು ಎರಕಾಡು", ಎಂದು ಪ್ರತ್ಯೇಕ ಭಾವವನ್ನು ಕನ್ನಡ ಜನ ತಳೆಯುತ್ತ ಹೋದರೆ ಪರಪ್ರಾಂತ್ಯಗಳ ಕೈ ನಮ್ಮ ಮೇಲೆ ಬಲವಾಗುತ್ತದೆ. ನಾವು ನಮ್ಮ ನಾಡಿನಲ್ಲಿ ನಿಶಕ್ತರಾಗಿ ಜೀವನ ಸಾಗಿಸಬೇಕಾಗು

ತ್ತದೆ. ಹೀಗಾದರೆ ಕನ್ನಡಮ್ಮನ ಉದ್ಧಾರ ಹೇಗಾಗಬೇಕು. ಕನ್ನಡಿಗರು ತಮ್ಮ ನೆರೆಹೊರೆ ಜನಗಳೊಂದಿಗೆ ತಲೆಯೆತ್ತಿ ಸರೀಕರಾಗಿ ಹೇಗೆ ಬಾಳಬೇಕು. ಈ ಕಾರಣ ಈಗಿನಿಂದಲೇ ಕನ್ನಡದ ಎಳೆ ಕಂದಮ್ಮಗಳಲ್ಲಿ ಕನ್ನಡತನವನ್ನು ಬೆಳೆಸಬೇಕು. "ಕೂಡಿ ಬಾಳೋಣ" ತನವನ್ನು ಹುಟ್ಟಿಹಾಕಬೇಕು. ಅದಕ್ಕಾಗಿಯೇ ರೂಪುಗೊಂಡ ಕವನ "ಕನ್ನಡಿಗರಾಗಿ ಬೆಳೆಯೋಣ"

"ಕನ್ನಡಿಗರಾಗಿ ಬೆಳೆಯೋಣ
ಕನ್ನಡಿಗರಾಗಿ ಉಳಿಯೋಣ
ಕನ್ನಡ ತೇಜದಿ ಹೊಳೆಯೋಣ
ಕನ್ನಡ ತೇರನು ಎಳೆಯೋಣ."

ಹೀಗೆ ಭಾವೈಕರಾಗಿ ಬೆಳೆಯಬೇಕಾದರೆ ಸಂಕುಚಿತ ಭಾವವನ್ನು ಬಿಡಬೇಕು. ವಿಶಾಲ ಹೃದಯವನ್ನು ಬೆಳೆಸಿಕೊಳ್ಳಬೇಕು.

"ನಾವು ಹುಟ್ಟಿರುವ ಕುಲವೇನಿರಲಿ
ಕನ್ನಡ ಕುಲವನೆ ಅಪ್ಪೋಣ
ಕನ್ನಡ ನಾಡೊಳಗಿರುವವರೆಲ್ಲ
ಕನ್ನಡಿಗರೆಂದು ಒಪ್ಪೋಣ

ಕನ್ನಡ ನಾಡಿನ ಭೂಪ್ರದೇಶ ಬಹಳ ವಿಸ್ತಾರವಾದುದೆಂದು ಈಗಾಗಲೆ ನಮಗೆ ತಿಳಿದಿದೆ. ಆದುದರಿಂದ ಕನ್ನಡಿಗರ ಉಡುಗೆ ತೊಡಿಗೆಗಳು ಬೇರೆ. ಆಡು ಮಾತು ಗಳಲ್ಲಿ ವ್ಯತ್ಯಾಸ. ನಡವಳಿಕೆಯೂ ಭಿನ್ನ. ಆದರೂ ನಮಗೆಲ್ಲ ಇರಲು ಒಂದೇ ನೆಲ ತಾನೆ ಕನ್ನಡ ನೆಲ.

"ವೇಷವು ಬೇರೆ ಭೂಷಣ ಬೇರೆ
ಭಾಷೆಯು ಒಂದೇ ಕನ್ನಡವು
ಕನಸಿನೊಳಿಹುದೂ ಮನಸಿನೊಳಿಹುದೂ
ನನಸಿನೊಳಿಹುದೂ ಕನ್ನಡವು."

ತಮ್ಮೊಳಗೆ ಈ ಪ್ರಜ್ಞೆ ಮೂಡಿದರೆ ಸಾಲದು. ಅದು ಸಮಾಜದಲ್ಲಿ ಮೂಡ ಬೇಕು. ಜಾತಿ ಗುಂಪುಗಾರಿಕೆ ಸಲ್ಲದು. ಇಡೀ ಸಮಾಜವೇ ತಾನು ಕನ್ನಡ ಕುಲ ವೆಂದು ಒಪ್ಪಿಕೊಂಡು ಹಬ್ಬ ಹುಣ್ಣಿಮೆಗಳಲ್ಲಿ ಒಬ್ಬರೊಡನೆ ಇನ್ನೊಬ್ಬರು ಕಲೆತು ಬಾಳಬೇಕು.

"ಮನೆಯೊಳು, ಮಠದೊಳು, ಮಸೀದೆ ಚರ್ಚಿನೊಳು
ಕನ್ನಡಿಗರಾಗಿಯೇ ಬಾಳೋಣ
ಒಬ್ಬರೊಬ್ಬರ ಹಬ್ಬ ಉತ್ಸವದಿ
ಸೇರುತ ಹರುಷವ ತಾಳೋಣ."

ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದು, ತನ್ನ ತಾಯಿನಾಡನ್ನೇ ಮರೆತ ಮಾತೃ ದ್ರೋಹಿಗಳನ್ನು ಏನು ಮಾಡಬೇಕು? ನಮ್ಮ ನೆಲದಲ್ಲಿ ನೆಲಸಿ, ನಮ್ಮ ನಾಡಿನ ನೀರು, ಗಾಳಿ, ಆಹಾರಗಳನ್ನು ಸೇವಿಸಿ ಬೆಳೆದು ಪುಷ್ಟರಾಗಿ, ನಮ್ಮೊಡನೆ ಅಸಹಕಾರದಿಂದಿರುವ ಹೊರನಾಡವರನ್ನು ಏನು ಮಾಡಬೇಕು ? ಅದಕ್ಕೆ ಒಂದೇ ರಾಮಬಾಣ, ತಿರಸ್ಕಾರ, ಉಪೇಕ್ಷೆ. ಮನೆಒಡೆಕರ ಬಹಿಷ್ಕಾರ.

ಕನ್ನಡಕುಲವನು ಒಡೆಯುವ ಯಾರನು
ನಂಬದೆ ನಮ್ಮನೆ ನಂಬೋಣ
ಕನ್ನಡದೇಳಿಗೆ ದುಡಿಯದವರನು
ಮರಹಿನ ಕಣಜದಿ ತುಂಬೋಣ.

ಕನ್ನಡ ಭಾಷೆ ದೇಶಭಾಷೆ. ಕನ್ನಡ ನೆಲದಲ್ಲಿ ಅದಕ್ಕೇ ಪುರಸ್ಕಾರ. ಅದೇ ರಾಜಭಾಷೆಯಾಗಿ ಮೆರೆಯಬೇಕು ನಮ್ಮ ನಾಡಿನಲ್ಲಿ. ಸರಕಾರದಲ್ಲಿ ಕನ್ನಡ, ವಿಶ್ವ ವಿದ್ಯಾನಿಲಯಗಳಲ್ಲಿ ಕನ್ನಡ, ನ್ಯಾಯಾಸ್ಥಾನಗಳಲ್ಲಿ ಕನ್ನಡ, ಆಡಳಿತ ಭಾಷೆಯಾಗಿ ಕನ್ನಡ ಸ್ಥಾನ ಗಳಿಸಿಕೊಂಡಿದೆಯೇ ನಮ್ಮ ಕರ್ನಾಟಕ ರಾಜ್ಯದಲ್ಲಿ ? ಕನ್ನಡ ನಾಡಿನ ಚಿಣ್ಣನನ್ನು ಈ ಸಮಸ್ಯೆ ಬಾಧಿಸುತ್ತಿದೆ. ಅದಕ್ಕೆ ಮದ್ದು ಧಿಕ್ಕಾರ.

"ಕನ್ನಡ ಕಲಿಸದ ವಿದ್ಯಾಲಯಗಳೆ
ಕನ್ನಡ ಬಳಸದ ಸರಕಾರ
ಕನ್ನಡ ತೀರ್ಪನು ಕೊಡದ ಕೋರ್ಟುಗಳೆ
ನಿಮಗಿದೊ ನಮ್ಮಯ ಧಿಕ್ಕಾರ"

ನಮ್ಮ ಕನ್ನಡ ಬಾಲಕನ ಕನ್ನಡ ಭಕ್ತಿ ಎಷ್ಟು ಉಜ್ವಲವಾಗಿದೆಯೆಂದು ಇದ ರಿಂದ ವ್ಯಕ್ತವಾಗುತ್ತದೆ. ಕನ್ನಡನಾಡನುಡಿಗಳ ಅಭಿವೃದ್ಧಿಗಾಗಿ ತ್ಯಾಗಮಾಡಿದವ ರೆಂದರೆ ನಮ್ಮ ಬಾಲಕನಿಗೆ ಎಲ್ಲೂ ಇಲ್ಲದಷ್ಟು ಪ್ರೀತಿ ವಿಶ್ವಾಸ. ಅವರುಗಳ ಬಗೆಗೆ ಅಪರಿಮಿತ ಪುರಸ್ಕಾರ.

ಕನ್ನಡ ಭಕ್ತರು ಯಾರೇ ಇರಲಿ
ಅವರಿಗೆ ನಮ್ಮಯ ಸತ್ಕಾರ
ಕನ್ನಡ ಪ್ರೇಮಿಗಳೆಲ್ಲಿಯೆ ಇರಲಿ
ಅವರಿಗೆ ನಮ್ಮ ನಮಸ್ಕಾರ.

ಸಿದ್ಧಯ್ಯ ಪುರಾಣಿಕರ ಮೂರನೆಯ ಮಕ್ಕಳ ಪದಗಳ ಸಂಕಲನ "ತಿರುಗೆಲೆ ತಿರುಗೆಲೆ ತಿರುಗುಯ್ಯಾಲೆ" ಇತ್ತೀಚೆಗೆ, ಎಂದರೆ ೧೯೮೦ರಲ್ಲಿ, ಬಿಜಾಪುರದ ಭಾರತೀ ಸಾಹಿತ್ಯ ಭಂಡಾರದ ಕಡೆಯಿಂದ ಪ್ರಕಟವಾಗಿದೆ. ಈ ಕವನ ಸಂಗ್ರಹದಲ್ಲಿ ಒಂದು ಪದ್ಯ "ಕಲಿಸಲಿ ಕನ್ನಡ" ಎಂಬುದು. ಬಾಲಶಿಕ್ಷಣ ನಮ್ಮ ಮಕ್ಕಳಿಗೆ ಯಾವ ಭಾಷಾ

ಮಾಧ್ಯಮದಲ್ಲಿ ಕೊಡಬೇಕು ಎಂಬುದು ಈ ಪದ್ಯದ ಪ್ರಧಾನ ವಿಷಯ. ಮಕ್ಕಳ ಮನಃಶಾಸ್ತ್ರ ಪಂಡಿತರು, ಶಿಕ್ಷಣಶಾಸ್ತ್ರಿಗಳು ಮಕ್ಕಳ ಪ್ರಾಥಮಿಕ ಶಿಕ್ಷಣ ಅವರ ತಾಯ್ನುಡಿಯಲ್ಲಿ ಆಗಬೇಕೆಂದು ಒಮ್ಮತದ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪ್ರಪಂಚದಲ್ಲಿ ಮುಂದುವರಿದ ದೇಶಗಳೆಲ್ಲ ಈ ತತ್ವಕ್ಕೆ ಶಿರಬಾಗಿ ನಡೆದುಕೊಳ್ಳುತ್ತಿವೆ. ವಿಶ್ವದ ಪ್ರಖ್ಯಾತ ಪುರುಷರುಗಳು ಆಂಗ್ಲಭಾಷಾ ಪರಿಣತರುಗಳಲ್ಲಿ. ತಮ್ಮ ತಾಯ್ನುಡಿಯಲ್ಲೇ ತಮ್ಮ ಮನೋಭಿಪ್ರಾಯಗಳನ್ನು ವ್ಯಕ್ತಪಡಿಸಿ ವಿಶ್ವದ ಮನ್ನಣೆಯನ್ನು ಪಡೆದಿರುವ ಉದಾಹರಣೆಗಳು ನಮ್ಮ ಮುಂದೆ ಬೇಕಾದಷ್ಟಿವೆ. ಆದರೆ ನಮ್ಮ ದೇಶ ? ಇಂಗ್ಲಿಷ್ ಭಾಷೆ ಕಲಿಯದಿದ್ದರೆ ಮಹಾಪ್ರಳಯವೇ ಆಗಿಹೋಗುತ್ತದೆ ಎಂಬ ಭ್ರಾಂತಿಯಿಂದ ಇದ್ದಾರೆ ನಮ್ಮ ಜನ. ತಮ್ಮ ಮಕ್ಕಳ ಮೇಲೆ ಇಂಗ್ಲಿಷ್ ಭಾಷಾ ಹೊರೆಯನ್ನು ಹೇರಿ ಖುಷಿಪಟ್ಟುಕೊಳ್ಳುತ್ತಿದ್ದಾರೆ. ಇಂಗ್ಲಿಷ್ ಶಿಕ್ಷಣ ಮಾಧ್ಯಮ ಬ್ರಹ್ಮರಾಕ್ಷಸನಾಗಿ ಕೂತಿದೆ ನಮ್ಮ ಶಿಕ್ಷಣ ಕ್ಷೇತ್ರದಲ್ಲಿ. ಮಕ್ಕಳ ಶಿಕ್ಷಣ ಕ್ಷೇತ್ರದಲ್ಲಂತೂ ಇಂಗ್ಲಿಷ್ ಮಾಧ್ಯಮ ಶಿಕ್ಷಣದ ಪಿಡುಗು ಭಯಂಕರವಾಗಿದೆ. ಹಾಲು ಹಸುಳೆಗಳು "ಎಬಿಸಿಡಿ" "ಮಮ್ಮೀ ಡ್ಯಾಡೀ" ಅನ್ನದಿದ್ದರೆ ನಮ್ಮ ಮಕ್ಕಳ ತಂದೆತಾಯಿಗಳಿಗೆ ಸ್ವರ್ಗಸುಖ ಕೈತಪ್ಪಿದಂತೆ ಜೀವಕ್ಕೆ ಮುಜಗರ. ನಮ್ಮ ಕನ್ನಡ ನುಡಿಭಕ್ತ ಎಳೆಯ ಕಂದಮ್ಮನಿಗೆ ಕನ್ನಡ ಕಲಿಯುವ ಬಯಕೆ–

"ಅ ಆ ಇ ಈ ಕಲಿಸುವ ಮೊದಲೇ
ಎ ಬಿ ಸಿ ಡಿ ಕಲಿಸುವರು
ಅವ್ವಾ ಅಪ್ಪಾ ಎನ್ನುವ ಮೊದಲೇ
ಮಮ್ಮೀ ಡ್ಯಾಡಿ ಎನಿಸುವರು !"

ಎಂಬ ವಿಷಯದಲ್ಲಿ ಅವನಿಗೆ ಕಸಿವಿಸಿ, ತಿರಸ್ಕಾರ. ಈ ಬಗೆಗೆ ಅವನ ಅನಿಸಿಕೆ ಹೀಗಿದೆ–

"ನಾಚಿಕೆ–ಗೀಚಿಕೆ ಇಲ್ಲೇನಮ್ಮ
ಇಂಗ್ಲಿಷ್ ಹುಚ್ಚಿನ ಈ ಜನಕೆ
ಯಾಕೆ ಎರೆಯುವರು ನಂಜನ್ನಿವರು
ಕನ್ನಡ ಮಕ್ಕಳ ಕನ್ನಡತನಕೆ"

ನಮ್ಮ ಕನ್ನಡಾಭಿಮಾನಿ ಬಾಲಕ ಇಷ್ಟಕ್ಕೇ ನಿಲ್ಲಿಸುವುದಿಲ್ಲ ತನ್ನ ಅನಿಸಿಕೆಯನ್ನು. ಇನ್ನೂ ಮುಂದುವರಿಸಿ ಕೇಳುತ್ತಾನೆ ತಾಯಿಯನ್ನು

ಕನ್ನಡವನ್ನೇ ಕಲಿಯದ ಮಕ್ಕಳು
ಇನ್ನೇನನ್ನು ಕಲಿತಾರು ?
ತಮ್ಮ ತಾಯಿಯೆದೆ ಹಾಲನೆ ಕುಡಿಯದೆ
ಅನ್ಯರನ್ನವನು ಮೆಲದಾರಾ ?

ಹಾಗಾದರೆ ಗತಿ ? ಈಗ ತುಳಿದಿರುವ ತಪ್ಪು ಹಾದಿಯನ್ನು ಬಿಡಬೇಕು. ಸರಿಯಾದ ಮಾರ್ಗವನ್ನು ಅನುಸರಿಸಬೇಕು. ಅದು ಯಾವುದು ? ಕನ್ನಡ ಕಲಿಸುವುದು, ಕನ್ನಡ ಬೆಳೆಸುವುದು.

“ಕಲಿಸಲಿ ಕನ್ನಡ ಬೆಳೆಸಲಿ ಕನ್ನಡ
ಅದಕೂ ಇದಕೂ ಎದಕೂ
ಕನ್ನಡದಿಂದಲೆ ಚಿನ್ನವೆ ಆಗಲಿ
ಕನ್ನಡಿಗರ ಬಾಳೂ ಬದುಕೂ”

“ತಿರುಗಲೆ ತಿರುಗಲೆ ತಿರುಗುಯ್ಯಾಲೆ” ಯಲ್ಲಿ ಇನ್ನೊಂದು ಕವನ “ಭರತ ಭೂಮಿ ಕರುನಾಡು” ಎಂಬುದು. ಈ ಕವನದಲ್ಲಿ ಮೊದಲು ನಾವು ಭಾರತೀಯರು ಅನಂತರದಲ್ಲಿ ಕನ್ನಡಿಗರು, ಎಂಬ ಪ್ರಜ್ಞೆಯನ್ನು ನಮ್ಮ ಮಕ್ಕಳಲ್ಲಿ ಬೆಳೆಸುವ ಸೂತ್ರ ಮಿಂಚಿದೆ.

“ಭರತಭೂಮಿಯ ನುಳಿದು
ಕನ್ನಡನಾಡು ಇಲ್ಲ.
ಕರ್ನಾಟಕವ ಬಿಟ್ಟು
ಭಾರತವು ಇಲ್ಲ.”

ಭಾರತದೇಶ ಸ್ವಾತಂತ್ರ್ಯ ಪಡೆದ ಮೇಲೆ ಭಾಷಾವಾರು ಪ್ರಾಂತಗಳ ವಿಂಗಡನೆಯಾಯಿತು. ಭಾರತೀಯತ್ವವನ್ನು ಮರೆತು ಪ್ರಾಂತೀಯತ್ವವನ್ನು ಬೆಳೆಸಿಕೊಳ್ಳುವ ಮನೋಭಾವ ದೇಶದ ನಾಯಕರುಗಳಲ್ಲಿ ತಲೆಹಾಕಿತು. ಈ ಸಮಯದಲ್ಲಿ ಬುದ್ಧಿಜೀವಿಗಳು ದೇಶಕ್ಕೆ ಎಚ್ಚರಿಕೆಯನ್ನು ಕೊಡುವುದು ಅಗತ್ಯವಾಯಿತು. ಮಕ್ಕಳಾಗಿರುವಾಗಲೆ ಎಳೆ ಮನಸ್ಸುಗಳನ್ನು ತಿದ್ದುವುದು ಸುಲಭ. ಆ ಕಾರ್ಯ ಈ ಕವನದಲ್ಲಿ ನಡೆದಿದೆ. ಭಾರತ ಕರ್ನಾಟಕಗಳ ಬಾಂಧವ್ಯ ಒಂದಕ್ಕೆ ಒಂದು ಬಲವಾಗಿ ಬೆಸೆಗೊಂಡಿದೆ. ಒಂದನ್ನು ಬಿಟ್ಟು ಇನ್ನೊಂದು ಬಾಳದು. ಪ್ರತ್ಯೇಕ ಭಾವನೆ ಸಲ್ಲ. ಇದು ಎಲ್ಲ ಪ್ರಾಂತ್ಯಗಳಿಗೂ ಅನ್ವಯಿಸುತ್ತದೆ.

ನಮ್ಮ ತಾಯಿಯ ತಾಯಿ
ಭಾರತಾಂಬೆ
ಭಾರತಿಗೆ ಭೂಷಣಳು
ಕರ್ನಾಟಕಾಂಬೆ
ಸಂಕ್ಷಿಪ್ತ ಬ್ರಹ್ಮಾಂಡ
ಭರತ ಭೂಮಿ
ಸಂಕ್ಷಿಪ್ತ ಭಾರತವು
ಕನ್ನಡದ ಭೂಮಿ.

ಕನ್ನಡನಾಡಿನ ಸಿರಿ ಭಾರತದ ಯಾವ ಪ್ರಾಂತ್ರಕ್ಕೂ ಸರಿಸಮವಾಗಿ ತೂಗ ಬಲ್ಲದು. ಒಂದು ಕೈ ಮೇಲೆಂದರೂ ಸಮನೆ. ಚಿನ್ನದ ನಾಡಿದು, ಗಂಧದ ಬೀಡಿದು, ಮಲೆನಾಡ ಸಿರಿಯಿದು, ಕಬ್ಬಿಣದ ಕುಲುಮೆಯಿದು ನಮ್ಮ ಕನ್ನಡ ನಾಡು. ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನಂಥ ಲೋಕಮಾನ್ಯ ಮಹಾಶಿಲ್ಪಿಯನ್ನು ಪಡೆದ ನಾಡು ಕನ್ನಡ. ಅದಕ್ಕೇ ಕವಿ ಹೇಳುತ್ತಾರೆ.

"ಏನುಂಟು ಏನಿಲ್ಲ
ಕನ್ನಡದ ನೆಲದಿ ?
ಹುಟ್ಟಿಹರು ಶ್ರೇಷ್ಠರು
ಕನ್ನಡದ ಕುಲದಿ"

ನಮ್ಮ ನಾಡಿನ ಶ್ರೇಷ್ಠತನ ಹೀಗಿರುವುದರಿಂದ ಜಗತ್ತಿಗೇ ಕನ್ನಡ ನಾಡಿನ ಸ್ನೇಹಹಸ್ತ ಬೇಕಾಗಿದೆ. ನಮ್ಮ ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನವರ ಬುದ್ಧಿಯ ನೆರವನ್ನು ಪ್ರಪಂಚದ ಎಷ್ಟು ದೇಶಗಳು ಪಡೆಯಲಿಲ್ಲ ? ಆ ನೆನಪು ಈ ಕೆಳಗಿನ ಸಾಲುಗಳಲ್ಲಿ ವ್ಯಕ್ತವಾಗಿದೆ

ಸಕಲ ಭುವಿಗೇ ಬೆಳಕು
ಭಾರತದ ಕತದಿಂದ
ಸಾರ್ಥಕತೆ ಭಾರತಕೆ
ಕರುನಾಡಿನಿಂದ.

ಹೀಗೆ ದಿವ್ಯಭವ್ಯವಾಗಿ ಪ್ರಪಂಚದ ಬೆಳಕಾಗಿರುವ ಭಾರತ ಭೂಮಿ ಕರುನಾಡು, ನಮ್ಮ ಜನ್ಮಭೂಮಿಯಾಗಿರುವುದು ನಮ್ಮ ಪುಣ್ಯ. ಕವಿ ಈ ಭಾವವನ್ನು ಕನ್ನಡ ನಾಡಿನ ಕಂದನ ಮನಸ್ಸಿನಲ್ಲಿ ಅಚ್ಚೊತ್ತುತ್ತಾರೆ

ಜಯವೆನ್ನಿ ಭಾರತಕೆ
ಕರ್ಣಾಟಕಕ್ಕೆ
ಈ ಎರಡು ಶುಭಕಾರಕ
ಸಕಲಲೋಕಕ್ಕೆ

"ಮಕ್ಕಳಿಸ್ಕೂಲ್ ಮನೇಲಲ್ವೆ ?" ಎಂದರು ಒಂದು ಸಂದರ್ಭದಲ್ಲಿ ನಮ್ಮ ಸಾಹಿತ್ಯದ ನಮ್ರ ಸಚಿವ ದಿ॥ ಟಿ. ಪಿ. ಕೈಲಾಸಂ. ಮಕ್ಕಳಿಸ್ಕೂಲ್ ಮನೆಯಾದರೆ ಮಗುವಿನ ಮೊದಲ ಗುರು ತಾಯಿತಾನೆ. ತನ್ನ ತಾಯಿಯನ್ನು ಕಾಣುವ ಬಗೆಗೆ ಒಂದು ಹೊಸ ತಿರುವು ಕೊಟ್ಟಿದ್ದಾರೆ ಸಿದ್ಧಯ್ಯ ಪುರಾಣಿಕ "ತಿರುಗುಲೆ ತಿರುಗಲೆ ತಿರುಗುಯ್ಯಾಲೆ" ಕವನ ಸಂಗ್ರಹದಲ್ಲಿರುವ "ತಾಯಿ" ಎಂಬ ಪದ್ಯದಲ್ಲಿ. ಮಗುವಿನ ಭಾವನೆ ತನ್ನ ತಾಯಿಯ ವಿಷಯದಲ್ಲಿ ನವನವೀನವಾಗಿದೆ.

"ಅರ್ಜುನನೇನೋ ಬಹಳ ದೊಡ್ಡವನು
ವಿಶ್ವರೂಪವನು ನೋಡಿದನು
ನಾನು ಸಣ್ಣವನು ದೇವರ ನಾನು
ತಾಯಿಯ ರೂಪದಿ ನೋಡುವೆನು"

ತಾಯಿಯೇ ಪ್ರತ್ಯಕ್ಷ ದೇವರು ಎಂದಾಯಿತು ಮಗು. ಆಕೆಯನ್ನು ಪೂಜಿಸುವುದೇ ಸರಿ ಎಂಬ ಭಾವನೆಯನ್ನು ಮೂಡಿಸಿಕೊಂಡಿದ್ದಾನೆ ಮನದಲ್ಲಿ.

ಕಾಣದ ದೇವರ ಕಂಡವರಾರೊ
ಕಾಣುವ ದೇವರು ತಾಯಿಯೇ ?
ಕಲ್ಲುದೇವರು ಕೊಡುವುದು ಏನೋ
ಎಲ್ಲ ಕೊಡುವವಳು ತಾಯಿಯೇ !

ಎಂಥ ಸತ್ಯ ಅಡಗಿದೆ ಈ ಭಾವನೆಯಲ್ಲಿ. ಪ್ರತ್ಯಕ್ಷ ದೇವರಂತಿರುವ ತಾಯಿ ಏನು ಬೇಕು, ಎಲ್ಲವನ್ನು ಕೊಡುವಳಲ್ಲ ! ಮಮತೆಯ ಕರುಳೆ ಅವಳು.

ಅನ್ನವ ಕೊಡುವಳು ಮಮತೆಯ ಕೊಡುವಳು
ಕೊಡುವಳು ಅಮೃತದ ಎದೆಯನು
ಲಾಲನೆ ಪಾಲನೆ ಲಲ್ಲೆ ಲಾಲಿಗಳ
ದಿನದಿನ ಕೊಡುವಳು ಮುದದಿಂದ.

ಇಷ್ಟು ಅಕ್ಕರೆಯಿಂದ ತನ್ನನ್ನು ನೋಡಿಕೊಳ್ಳುವ ತಾಯಿ ತನ್ನನ್ನು ಹೇಗೆ ಸಾಕಿದ್ದಾಳೆ ? ಆ ವಿವರ ಎಷ್ಟು ಸೊಗಸಾಗಿದೆ ಕೇಳಿ.

ತೋಳ ತೊಟ್ಟಿಲಲಿ ತೂಗುವಳೊಮ್ಮೆ
ತೊಡೆಯ ಮಂಚದಲಿ ಮಲಗಿಪಳು
ಬಣ್ಣಬಣ್ಣದ ಬಟ್ಟೆಯ ತೊಡಿಸಿ
ದೃಷ್ಟಿಯಾದರದ ತೊಲಗಿಪಳು.

ಆಸರಿಕೆ ಬೇಸರಿಕೆ ಸಹಜತಾನೆ ಮಕ್ಕಳಿಗೆ, ಆಗ ತಾಯಿ ಅದನ್ನು ಹೋಗಲಾಡಿಸಲು ಎಷ್ಟು ಮುತವರ್ಜಿ ವಹಿಸುತ್ತಾಳೆ. ಹೆಜ್ಜೆಯ ಮೇಲೆ ಹೆಜ್ಜೆಯನಿಟ್ಟು ನಡೆಯುವುದನ್ನು ಎಷ್ಟು ಪ್ರೀತಿಯಿಂದ ಕಲಿಸುತ್ತಾಳೆ ? ಮಗು ಅದನ್ನು ನೆನೆಸಿಕೊಂಡು ಹಿಗ್ಗುತ್ತದೆ.

ಅಂದದ ಚೆಂದದ ಆಟಿಕೆಗಳನು
ಕೊಟ್ಟು ಆಡಲು ಕಲಿಸುವಳು
ಮೆಲ್ಲನೆ ಮೆಲ್ಲನೆ ಹೆಜ್ಜೆಯನಿಡಿಸಿ
ನಲಿಯುತ ನಡೆಯಲು ಒಲಿಸುವಳು

ಇಂಥ ತಾಯಿಯನ್ನು ಮಗು "ಮೊದಲ ಗುರು"ವೆಂದು ಒಪ್ಪಿಕೊಂಡು "ಮನುಜನ ಕೆತ್ತುವ ರೂವಾರಿ"ಯೆಂದು ಬಗೆದು ತನ್ನ ತಾಯಿಯನ್ನು ತುಂಬ ಭಯ ಭಕ್ತಿಗಳಿಂದ ದೇವರೆಂದು ಭಾವಿಸಿದೆ.

ಅಕ್ಷರ ಕಲಿಸಲು ಮೊದಲನೆ ಗುರುವು
ನಡೆನುಡಿ ತಿದ್ದಲು ನಯಕಾರಿ
ಬಾಲಕತನದ ಮೃದು ಹಾಲುಗಲ್ಲಿನಲಿ
ಮನುಜನ ಕೆತ್ತುವ ರೂವಾರಿ

ಆದುದರಿಂದ ತನಗೆ ತಾಯಿ ಪ್ರತ್ಯಕ್ಷದೇವರು. ಪ್ರೇಮಮಯಿ ಕರುಣಾಮಯಿ ಉದಾರಚರಿತೆ. ತನ್ನ ಅಭ್ಯುದಯವನ್ನು ಸದಾ ಹಾರೈಸುವ ಕ್ಷೇಮಕಾರಿ. ಕೆಟ್ಟ ಮಕ್ಕಳು ತಾಯಿಯ ಹೊಟ್ಟೆಯಲ್ಲಿ ಹುಟ್ಟಬಹುದು. ಆದರೆ ತಾಯಿ ಅಂಥ ಹೀನಮಕ್ಕಳಿಗೂ ಒಳ್ಳೆಯವಳೇ. ಇಂಥಾ ಉದಾತ್ತ ಭಾವನೆಗಳನ್ನು ಒಳಗೊಂಡು ಮುಕ್ತಾಯ ಗೊಂಡಿದೆ "ತಾಯಿ" ಕವನದ ಕೊನೆಯ ಸಾಲುಗಳು.

ಅಂತೆಯೇ ನಾನು ತಾಯಿಯೆ ದೇವರು
ಎಂದು ನಂಬಿಕೆಯನು ಬಿಟ್ಟಿಲ್ಲ
ಕೆಟ್ಟ ಮಕ್ಕಳು ಹುಟ್ಟಿರಬಹುದು
ಕೆಟ್ಟ ತಾಯಿಯು ಹುಟ್ಟಿಲ್ಲ.

ಮಕ್ಕಳು ಬೆಳೆದು ಶಾಲೆಗೆ ಹೋಗುವ ವಯಸ್ಸು ಬಂದ ಮೇಲೆ ಅವರುಗಳನ್ನು ವಿದ್ಯಾಭ್ಯಾಸಕ್ಕೆಂದು ಪಾಠಶಾಲೆಗೆ ಸೇರಿಸುವುದು ತಾಯಿ ತಂದೆಗಳ ಕರ್ತವ್ಯವಷ್ಟೆ. ತನ್ನ ಶಾಲೆಯಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ, ವಾರ್ಷಿಕೋತ್ಸವದಲ್ಲಿ ಭಾಗ ವಹಿಸಿ, ಬಂದ ಅತಿಥಿಗಳ ಮುಂದೆ ತನ್ನ ಕೌಶಲಗಳನ್ನು ಪ್ರದರ್ಶಿಸಿ ಶಹಭಾಷ್ ಎನ್ನಿಸಿಕೊಳ್ಳಬೇಕೆಂಬ ಆಸೆ ಪ್ರತಿಯೊಬ್ಬ ಬಾಲಕ ಬಾಲಕಿಗೂ ಇರುವುದು ಸಹಜ. ಅದರಲ್ಲೂ ತನ್ನ ತಾಯಿ ತಂದೆಗಳ ಮುಂದೆ ತನ್ನ ಕೌಶಲಗಳನ್ನು ಪ್ರದರ್ಶಿಸಿ "ಭಲೆ" ಎನ್ನಿಸಿಕೊಳ್ಳುವ ಆಸೆ ಯಾವ ಮಕ್ಕಳಿಗೆ ಇರುವುದಿಲ್ಲ. ಈ ಮಹದಾಶಯವು "ತಿರುಗಲೆ ತಿರುಗಲೆ ತಿರುಗುಯ್ಯಾಲೆ" ಕವನ ಸಂಗ್ರಹದ "ನೀ ಮುಂದಿದ್ದರೆ ಸೋಲೇ ಇಲ್ಲ !" ಎಂಬ ಕವನದಲ್ಲಿ ಸ್ವಾರಸ್ಯವಾಗಿ ಪ್ರಕಟವಾಗಿದೆ. ತನ್ನ ಶಾಲೆಯ ವಾರ್ಷಿ ಕೋತ್ಸವಕ್ಕೆ ಅತಿರಥ ಮಹಾರಥ ಅತಿಥಿಗಳು ಬರುತ್ತಾರೆ. ಅದು ತನಗೆ ಮಹತ್ವ ವಲ್ಲ. ತನ್ನ ಹಡೆದಮ್ಮ ಬರಬೇಕು. ಮುಂದೆ ಕುಳಿತಿರಬೇಕು. ತಾನು ಪ್ರದರ್ಶಿ ಸುವ ಕೌಶಲಗಳನ್ನು ಕಣ್ಣಾರೆ ನೋಡಿ ಹಿಗ್ಗಬೇಕು. ಆಗ ತಾನು ಸ್ಪರ್ಧಿಸುವ ಚಟುವಟಿಕೆಗಳಲ್ಲಿ ಆತ್ಮವಿಶ್ವಾಸ ಮೂಡುತ್ತದೆ. ತನಗೇ ಗೆಲುವು ಕಟ್ಟಿಟ್ಟ ಗಂಟು. ಅದನ್ನು ಮುಚ್ಚುಮರೆಯಿಲ್ಲದೆ ಸ್ಪಷ್ಟಪಡಿಸುತ್ತಾನೆ ತನ್ನ ತಾಯಿಗೆ. ಶಾಲಾಸ್ಪರ್ಧೆ ಗಳಲ್ಲಿ ಭಾಗವಹಿಸುವ ಬಾಲಕ.

ನಮ್ಮಯ ಶಾಲೆಯ ವಾರ್ಷಿಕೋತ್ಸವಕೆ
ದೊಡ್ಡ ದೊಡ್ಡವರು ಬರುತಿಹರು
ಅಧ್ಯಕ್ಷರು ಉದ್ಘಾಟಕರಾಗಿ
ಶಾಲೆಗೆ ಖ್ಯಾತಿಯ ತರುತಿಹರು !
ನಾನೂ ಭಾಗವ ವಹಿಸುವೆನಮ್ಮ
ಆಟಪಾಟದಲಿ ಓಟದಲಿ
ಚರ್ಚೆ ಭಾಷಣದಿ, ವೇಷಭೂಷಣದಿ
ಆಶು ಕವಿತೆಯಲಿ, ನಾಟಕದಿ

ಇಷ್ಟೂ ಸ್ಪರ್ಧಿಗಳಲ್ಲಿ ಗೆಲ್ಲುವ ಆತ್ಮವಿಶ್ವಾಸವಿದೆ, ತನ್ನ ಶ್ರೇಯಸ್ಸನ್ನು ಬಯಸುವ ತಾಯಿ ಮುಂದೆ ಕುಳಿದ್ದರೆ.

ಎಲ್ಲ ಸ್ಪರ್ಧೆಗಳ 'ಗೆಲ್ಲುವೆನಮ್ಮ
ನಿನ್ನ ಹರಕೆಯಿರೆ ಈ ಬಾರಿ !
ಮನೆಯ ತುಂಬುವೆನು ಮೆಚ್ಚುಗಳಿಂದ
ಪದಕ ಫಲಕ ಪುಸ್ತಕ ಸೇರಿ !
ಆದುದರಿಂದ ತನ್ನಮ್ಮನನ್ನು ಕೇಳಿಕೊಳ್ಳುತ್ತಾನೆ
"ನೀನು ನೋಡಲು ಬರಬೇಕಮ್ಮ
ನಾನು ಮೆಚ್ಚುಗಳ ಪಡೆವುದನು !
ನೋಡುವೆ ನಾನು ಎಲ್ಲರ ಮಧ್ಯದಿ
ನಿನ್ನಯ ಅರಳಿದ ವದನವನು !

ನಮ್ಮ ಬಾಲಕನ ಕೌಶಲವನ್ನು ಅಭಿನಯದಲ್ಲಿ ನೋಡಬೇಕೆ, ಭಾವ ಗೀತಗಳ ಹಾಡಿಕೆಯಲ್ಲಿ ಕೇಳಬೇಕೆ, ಜಾನಪದ ಕಲೆಯಲ್ಲಿ ಕಾಣಬೇಕೆ, ಯೋಗಾಸನ ಕಸರತ್ತಿನಲ್ಲಿ ಈಕ್ಷಿಸಬೇಕೆ, ಅವನು ಎಲ್ಲಕ್ಕೂ ಸಿದ್ಧ. ಆದರೆ ಇವೆಲ್ಲವನ್ನು ನೋಡಿ ಹಿಗ್ಗಲು ತಾಯಿ ಎದುರಿಗೆ ಇರಬೇಕಷ್ಟೆ

ನಾಟಕದಲ್ಲಿ ನಾನೇ ಭೀಮನು–
ಕುಟ್ಟಿ ಕೆಡಹುವೆನು ಕೀಚಕನ
ಕುಳಿತವರೆಲ್ಲರು ಹೊಗಳದಿರರು ಈ
ಹೆಣ್ಣಿನ ಮಾನವ ರಕ್ಷಕನ
ಭಾವಗೀತೆಗಳ ಹಾಡುವೆನಮ್ಮ
ಸುಗ್ಗಿಯ ಕುಣಿತವ ಕುಣಿಯುವೆನು !
ಯೋಗಾಸನಗಳ ಹಾಕಿ, ಮೂಳೆಗಳೆ
ಇಲ್ಲವೆನ್ನುವೊಲು ಮಣಿಯುವೆನು !"

ಇಷ್ಟೆ ಅಲ್ಲ, ಇನ್ನೂ ಕೆಲವು ಚಮತ್ಕಾರಗಳನ್ನು ಪ್ರದರ್ಶಿಸುವ ಹಂಬಲ ಅವನದು.

"ಬಿಲ್ಲನು ಹಿಡಿವೆ, ಗುರಿಯುನು ಹೊಡೆವೆ–
ಕತ್ತಿಯ ವರಸೆಯ ತೋರುವೆನು!
ಇನ್ನೂ ಕೆಲವು ಸರ್‌ಪ್ರೈಸ್ ಕಾದಿವೆ
ಅವುಗಳ ಬೆರಗನು ಬೀರುವೆನು"

ಇವುಗಳೆಲ್ಲವನ್ನೂ ಪ್ರದರ್ಶಿಸಬೇಕಾದರೆ ತಾಯಿ ಮುಂದಿರಲೇಬೇಕು. ತಾಯಿ ಸ್ಫೂರ್ತಿಯ ಸೆಲೆ. ಆಕೆಯ ಹಸನ್ಮುಖದ ರಕ್ಷಾಕವಚ ಮಗನ ಸಕಲ ಸಿದ್ಧಿಗಳಿಗೂ ಬಯಸಿದ ಫಲ ಕೊಡುವ ಕಾಮಧೇನು ಕಲ್ಪವೃಕ್ಷ.

"ನೀ ಮುಂದಿದ್ದರೆ ಸೋಲೇ ಇಲ್ಲ
ನಿನ್ನೀ ಮಗನಿಗೆ ಜಗದಲ್ಲಿ
ನೋಡುವಿಯಂತೆ ನನ್ನ ಹೆಸರನೇ
ಎಲ್ಲ ಕಡೆಗೆ ಈ ಯುಗದಲ್ಲಿ"

"ತುಪ್ಪಾ ರೊಟ್ಟಿ ಗೇಗೇಗೇ"ಕವನ ಸಂಗ್ರಹದಲ್ಲಿರುವ ಕವನಗಳಲ್ಲಿ ಕಟ್ಟ ಕಡೆಯ ಕವನ "ಶಾಲೆಯ ವನ." ಪ್ರತಿಯೊಬ್ಬ ವಿದ್ಯಾರ್ಥಿಯೂ ಒಂದೊಂದು ಸಸಿ ನಟ್ಟು ಕೈ ತೋಟ ಮಾಡಬೇಕು. ತಾನು ನೆಟ್ಟ ಸಸಿಗೆ ತಾನೇ ನೀರೆರೆದು ಅದನ್ನು ಬೆಳೆಸಬೇಕು. ದೊಡ್ಡದನ್ನಾಗಿ ಮಾಡಬೇಕು. ಈ ಕಾಯಕವನ್ನು ಗುರುಗಳು ತುಂಬ ಮೆಚ್ಚಿಕೊಂಡು ಸಂತೋಷ ವ್ಯಕ್ತಪಡಿಸಿದ್ದಾರೆ. ಅದನ್ನು ಸದಾ ನೆನೆಸಿಕೊಳ್ಳುತ್ತಾನೆ ಕೈ ತೋಟ ಮಾಡಿರುವ ಬಾಲಕ.

"ಗುರುಗಳು ಹೇಳುವರೆಳೆಯುರು ಬೆಳೆಯುವ
ಸಸಿಗಳು, ಶಾಲೆಯ ವನವೆಂದು
ಇದರ ಗುರುತಿಗೆ ಬೆಳೆಯುತಲಿಹುದು
ಶಾಲೆಯ ಸುತ್ತಲು ಬನವೊಂದು!"

ಮಕ್ಕಳು ಶಾಲೆಯ ವನವನ್ನು ನಿರ್ಮಿಸಿದರೆ ಸಾಲದು. ಅದು ಇವತ್ತು ಹುಟ್ಟಿ ನಾಳೆ ಕಮರಿ ಹೋಗಬಾರದು. ಅಂತೆಯೇ ಶಾಲೆಯ ಮಕ್ಕಳೂ ಗುರುಗಳು ಮಕ್ಕಳಿಗೆ ಬೋಧಿಸಿರುವ ತತ್ವವಿದು.

"ಶಾಲೆಯ ಒಳಗೆ ಬಾಲರು ಬೆಳೆಯಲಿ
ತಮ್ಮ ತಮ್ಮೊಳಗೆ ಹೆಣಗದಲೆ
ಬೆಳೆಯಲಿ ಹೊರಗೆ ಶಾಲೆಯ ವನವು
ಒಂದೂ ಸಸಿಯೂ ಒಣಗದಲೆ

ಈ ಆದರ್ಶವನ್ನು ಇಟ್ಟುಕೊಂಡು ಶಾಲೆಯ ವನವನ್ನು ಬೆಳೆಸಿದರೆ ಆದರಿಂದ ದೊರಕುವ ಫಲ ಅತ್ಯಧಿಕ, ಪ್ರಯೋಜನವಂತೂ ಬೆಲೆ ಕಟ್ಟಲು ಸಾಧ್ಯವಿಲ್ಲದಷ್ಟು ಅಧಿಕ. ನೆಟ್ಟ ಸಸಿ ಚೆನ್ನಾಗಿ ಬೆಳೆದು ಹೂ ಹಣ್ಣು ಕೊಟ್ಟರೆ ಅವೆರಡೂ ದೇವರಿಗೆ ಅರ್ಪಿತ. ಭಕ್ತರಿಗೆ ಮಹಾಪ್ರಸಾದ.

"ಹೂಗಳು ಬಿಟ್ಟರೆ ದೇವರಿಗೇರಿಸಿ
ವಿದ್ಯಾ ಬುದ್ಧಿಯ ಬೇಡುವೆವು
ಹಣ್ಣುಗಳಾದರೆ ಎಲ್ಲರು ಸೇವಿಸಿ
ಹರ್ಷದಿಂದ ಕುಣಿದಾಡುವೆವು"

"ತುಪ್ಪಾ ರೊಟ್ಟಿ ಗೇ ಗೇ ಗೇ," "ಗಿಲ್‌ಗಿಲ್ ಗಿಲಗಚ್ಚಿ" ಮತ್ತು ತಿರುಗಲೆ ತಿರುಗಲೆ ತಿರುಗುಯ್ಯಾಲೆ" ಕವನ ಸಂಗ್ರಹಗಳಲ್ಲಿ ಅಭಿವ್ಯಕ್ತಿಗಳಾಗಿರುವ ಮಕ್ಕಳನ್ನು ಮಾತ್ರ ನನ್ನ ಪ್ರಕೃತ ಲೇಖನಕ್ಕೆ ಮುಖ್ಯ ವಿಷಯವನ್ನಾಗಿ ಮಾಡಿಕೊಂಡಿದ್ದೇನೆ. "ತುಪ್ಪಾ ರೊಟ್ಟಿ ಗೇ ಗೇ ಗೇ"ಯಲ್ಲಿ "ಕೊಡು ಖಡ್ಗವ ಕೈಗೆ, ನನ್ನ ಕುದುರೆ, ಸರಪಳಿ, ಬಾಲನ ಬಯಕೆ, ಅ ಆ ಇ ಈ ಗೀತೆ, ಸಿದ್ದಿದ್ದಿ ಬಾವಾ, ಮಂಗತನ, ಮಗುವಿನ ಮೊರೆ, ಆಟವಾಡ ಬನ್ನಿರಿ, ಚಂದಪ್ಪ ಚಂದಪ್ಪ ಚಾರೀಕಾಯಿ, ತುಪ್ಪ ರೊಟ್ಟಿ ಗೇ ಗೇ ಗೇ, ದೋಸೆ, ಹೊಗೆ ಬಂಡಿಯ ಹಾಡು, ಇವರ ಬಿಟ್ಟು ಇವರ್ಯಾರು, ಪ್ರಶ್ನೆ, ಹಣ್ಣು ಮಾರುವವನ ಹಾಡು, ಬುಡು ಬಡುಕೆ, ಚುಟುಕಗಳು, ಕತ್ತೆಯ ಗತ್ತು–ಕೊನೆಗೆ ವಿಪತ್ತು ಮತ್ತು ಶಾಲೆಯವನ, ಹೀಗೆ ೨೦ ಕವನಗಳಿವೆ, "ಗಿಲ್ ಗಿಲ್ ಗಿಲಗಚ್ಚಿ"ಯಲ್ಲಿ "ಗಿಲ್ ಗಿಲ್ ಗಿಲ್ ಗಿಲ್ ಗಿಲಗಚ್ಚಿ" ಎಂಬ ಪ್ರಾರಂಭದ ಕವನ, ನೀನು ನಕ್ಕು ಜಗವ ನಗಿಸು, ಬಣ್ಣದ ಗರಿ, ಗೆಳೆಯರ ಊಟಕೆ ಕರೆಯಮ್ಮ, ಮಜಾ ಅಂದ್ರೆ ಮಜಾ, ಓ ಮೋಡ ಓಡಿ ಬಾರಾ, ಕಾರ ಮಳೆಯೆ ಕಪ್ಪತ್ತ ಮಳೆಯೆ, ಕುರಿಮರಿ ಬೇಕೆ ಕುರಿಮರಿ?, ಮಿಠಾಯಿ ಮಕ್ಕಳೆ, ಹತ್ತಿಯ ಹೊಲದಲಿ, ಒಡೆಯಗೆ ಸಿಟ್ಟು ಬೆಕ್ಕಿಗೆ ಪೆಟ್ಟು, ಏಳು ಕಂದ, ಯಾವುದು ಬೇಕು ಆರಿಸಿಕೊ, ಕನ್ನಡಿಗರಾಗಿ ಬಾಳೋಣ ಮತ್ತು ಬಾಲಕರು ನಾವು, ಹೀಗೆ ೧೫ ಕವನಗಳಿವೆ. "ತಿರುಗಲೆ ತಿರುಗಲೆ ತಿರುಗುಯ್ಯಾಲೆ"ಯಲ್ಲಿ ಏನಾದರೂ ಕೊಡಿಸಪ್ಪ, ಪಾಪ, ಕಲಿಸಲಿ ಕನ್ನಡ, ಕಾಡಿನ ದೀಪ,?, ನನ್ನ ಭಂಡಾರ, ಜೊತೆಗಾರರಾಗಿರಿ, ಗೊತ್ತಿಲ್ಲ, ಭರತ ಭೂಮಿ ಕರುನಾಡು, ತಿರುಗಲೆ ತಿರುಗಲೆ ತಿರುಗುಯ್ಯಾಲೆ, ಸ್ವಾಮಿ ನಮ್ಮಪ್ಪ, ನಾಯಿಯ ಸಾಕಿದೆ ನಾನು, ತಾಯಿ ಮತ್ತು ನೀ ಮುಂದಿದ್ದರೆ ಸೋಲೇ ಇಲ್ಲ, ಹೀಗೆ ೧೪ ಪದ್ಯಗಳಿವೆ. ಈ ಪದ್ಯಗಳಲ್ಲೆಲ್ಲ ಹೊಸತನವಿದೆ. ಕೆಲವು ವಿಷಯಗಳನ್ನು ಕೆಲವು ಕವಿಗಳು ಬಳಸಿಕೊಂಡು ಪದ್ಯಗಳನ್ನು ಕಟ್ಟಿದ್ದರೂ ಸಿದ್ಧಯ್ಯ ಪುರಾಣಿಕರ ಪದ್ಯಗಳಲ್ಲಿ ಆ ವಿಷಯಗಳು ಹೊಸ ತಿರುವನ್ನು ಪಡೆದು ಮಕ್ಕಳ ಮನಸ್ಸಿಗೆ ಉಲ್ಲಾಸವನ್ನೂ ಬುದ್ಧಿಗೆ ವಿಕಾಸವನ್ನೂ ಕೊಟ್ಟಿವೆ. ನಮ್ಮ ಕನ್ನಡನಾಡಿನ ಮಕ್ಕಳು ಸಹೃದಯ

ಭಾವನೆಯಿಂದ ಸಿದ್ಧಯ್ಯ ಪುರಾಣಿಕರ ಮಕ್ಕಳ ಪದ್ಯಗಳನ್ನು ಬರಮಾಡಿಕೊಂಡು ತಮ್ಮ ಮಕ್ಕಳ ಪುಸ್ತಕ ಬೊಕ್ಕಸವನ್ನು ಶ್ರೀಮಂತಗೊಳಿಸಿಕೊಂಡಿದ್ದಾರೆ.

ಸಿದ್ಧಯ್ಯ ಪುರಾಣಿಕರು "ತುಪ್ಪಾ ರೊಟ್ಟಿ ಗೇ ಗೇ ಗೇ" ಮಕ್ಕಳ ಪದಗಳನ್ನು ರಚಿಸಿ ತಮ್ಮ ಮಕ್ಕಳ ಕೈಗಿತ್ತು ತೀರ್ಪು ಕೇಳಿದರಂತೆ. ಅವರ ಮಕ್ಕಳು ಕೊಟ್ಟ ತೀರ್ಪು ಇಂತಿದೆ.

"ಇವುಗಳನ್ನು ಒರೆಯುವಾಗ ಒರೆಗಲ್ಲಾಗಿ ಇದು ಚೆನ್ನಾಗಿದೆ, ಇದು ಚೆನ್ನಾಗಿಲ್ಲ! ಎಂದು ತೀರ್ಪುಕೊಟ್ಟವರು ನಿಮ್ಮಂತೆ ಎಳೆಯರಾಗಿರುವ ನನ್ನ ಮಕ್ಕಳು ವಿಜಯಲಕ್ಷ್ಮಿ, ಶಿವಗೀತ, ಭಾರತಿಯರು. ಅವರಿಗೆ ಒಪ್ಪಿತವಾದುವುಗಳನ್ನೇ ಇದರಲ್ಲಿ ಸೇರಿಸಿರುವೆನಾದ ಕಾರಣ ನಿಮಗೂ ಇವು ಒಪ್ಪಿತವಾಗುವುದೆಂದು ನಂಬಿದ್ದೇನೆ......"

ಇದೇ ತೀರ್ಪು "ಗಿಲ್ ಗಿಲ್ ಗಿಲ್‌ಗಚ್ಚಿ" ಮತ್ತು "ತಿರುಗಲೆ ತಿರುಗಲೆ ತಿರುಗುಯ್ಯಾಲೆ" ಮಕ್ಕಳ ಪದಗಳ ಸಂಗ್ರಹಗಳಿಗೂ ಅನ್ವಯಿಸುತ್ತದೆ.

ಸಿದ್ಧಯ್ಯ ಪುರಾಣಿಕರು ನಮ್ಮ ಮಕ್ಕಳಿಗೆಂದೇ ಬಾಲಭಾರತಿ ಮಾಸ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಶುಕವನ, ಸಮುದ್ರಲೋಕ, ವಾಲ್ಟ್‌ಡಿಸ್ನಿಲೋಕ, ಕಾಡುಮನೆ ಮೊದಲಾದ ಸ್ವಾರಸ್ಯ ವಿದೇಶ ಪ್ರವಾಸದ ಪರಿಚಯ ಲೇಖನಗಳನ್ನು ಬರೆದಿದ್ದಾರೆ. "ನ್ಯಾಯ ನಿರ್ಣಯ" ಎಂಬ ನಾಟಕವನ್ನು ಬರೆದಿದ್ದಾರೆ. ಇವುಗಳು ಆದಷ್ಟು ಬೇಗ ಪ್ರಕಟವಾದರೆ ಸಿದ್ಧಯ್ಯ ಪುರಾಣಿಕರ ಮಕ್ಕಳ ಬೊಕ್ಕಸ ಇನ್ನಷ್ಟು ತುಂಬುವುದರಲ್ಲಿ ಸಂದೇಹವಿಲ್ಲ. ನಮ್ಮ ಮಕ್ಕಳಿಗೂ ಅದರಿಂದ ಆಗುವ ಪ್ರಯೋಜನ ಅತ್ಯಧಿಕವೆಂದು ಹೇಳುವ ಅಗತ್ಯವಿಲ್ಲ. ನಮ್ಮ ಮಕ್ಕಳಿಗೆ ಈ ಭಾಗ್ಯ ಬೇಗ ಬರಲೆಂದು ಆಶಿಸೋಣ.

# ‘ಕಾವ್ಯಾನಂದ’ರ ಎರಡು ಪುಸ್ತಕಗಳು

[ನಜೀರ ಅಕಬರಾಬಾದಿ ಹಾಗೂ ಮಿರ್ಜಾ ಗಾಲಿಬ್]

**ಪಂಚಾಕ್ಷರಿ ಹಿರೇಮಠ** ಎಂ.ಎ.

‘ಕಾವ್ಯಾನಂದ’ – ಎಂಬ ಕಾವ್ಯನಾಮದಿಂದ ಕನ್ನಡ ಸಾರಸ್ವತ ಲೋಕಕ್ಕೆ ಸುಪರಿಚಿತರಾಗಿರುವ ಡಾ. ಸಿದ್ಧಯ್ಯ ಪುರಾಣಿಕ ಅವರು, ಕನ್ನಡ ಕಾವ್ಯಲೋಕದಲ್ಲಿ ನಾಲ್ಕು ದಶಕಗಳಿಂದಲೂ ಸೇವೆಸಲ್ಲಿಸುತ್ತ ಬಂದವರು.

ಆಧುನಿಕ ಕನ್ನಡ ಕಾವ್ಯದ ಸಿದ್ಧಿಯನ್ನು ಕನ್ನಡ ಕಾವ್ಯಪ್ರೇಮಿಗಳವರೆಗೂ ತಲುಪಿಸಿದ ಶ್ರೇಯಸ್ಸು, ಹಿರಿಮೆ ‘ಕಾವ್ಯಾನಂದ’ ಅವರದು.

‘ಕಾವ್ಯಾನಂದ’ರು ಸಾಹಿತ್ಯ ಹಾಗೂ ಆಡಳಿತ ಎರಡನ್ನೂ ಸವ್ಯಸಾಚಿಯಂತೆ ಬಹು ಸಮರ್ಪಕವಾಗಿ, ಅಚ್ಚರಿ ಪಡುವಂತೆ ನಡೆಯಿಸಿ ಯಶಸ್ಸು ಪಡೆದವರು. ಸುಸಂಸ್ಕೃತ, ಭಾವುಕ, ಶ್ರದ್ಧಾವಂತ, ರಾಷ್ಟ್ರೀಯವಾದಿಯಾದ ‘ಕಾವ್ಯಾನಂದ’ರ ಜೀವನ, ನಯದಿಂದ ಒಪ್ಪಓರಣದಿಂದ ಕೂಡಿದುದು. ಹತ್ತಾರು ದೇಶಗಳನ್ನು ಸುತ್ತಿ, ಅಪಾರ ಲೋಕಾನುಭವ ಪಡೆದ ಈ ಕವಿ ತಮ್ಮ ಕಾವ್ಯ, ಕಾದಂಬರಿ, ನಾಟಕ, ವಚನಸಾಹಿತ್ಯದಿಂದ ಕನ್ನಡ ಸಾರಸ್ವತ ಪ್ರಪಂಚವನ್ನು ಶ್ರೀಮಂತಗೊಳಿಸಿದ್ದಾರೆ.

ಕವಿ, ದಾರ್ಶನಿಕ, ಅನುಭಾವಿಗಳಾದ ‘ಕಾವ್ಯಾನಂದ’ ಅವರ ಅನುಭಾವದ ಮಿಂಚಿನ ಗೊಂಚಲು ಅವರ ‘ಜಲಪಾತ’, ‘ಕರುಣಾಶ್ರಾವಣ’, ‘ಮಾನಸ ಸರೋವರ’ ಮುಂತಾದ ಕೃತಿಗಳು. ಇತ್ತೀಚೆಗೆ ಬಂದ ಅವರ ‘ವಚನೋದ್ಯಾನ’ ಕೃತಿಯಂತೂ ಅವರ ಜೀವನಾನುಭವವನ್ನು ಸಾರುವ ಮೇರುಕೃತಿ. ಅವರ ಹಲವಾರು ಕೃತಿಗಳು ಸಾಹಿತ್ಯಿಕ ಬಹುಮಾನಗಳನ್ನು ಗಳಿಸಿ ಜನಪ್ರಿಯವಾಗಿವೆ.

ಅವರ ಕೃತಿಗಳು ಓದುಗನ ವಿಚಾರವನ್ನು, ಮನಸ್ಸನ್ನು, ಚಿತ್ತವನ್ನು ಜಾಗ್ರತಗೊಳಿಸುವ ಪರಿಶುದ್ಧಗೊಳಿಸುವ ಕಾರ್ಯ ಮಾಡಿವೆ.

ಕನ್ನಡ, ಉರ್ದು, ಫಾರಸೀ, ಸಂಸ್ಕೃತ, ಇಂಗ್ಲಿಷ್ ಭಾಷೆಗಳ ಮೇಲೆ ಪ್ರಭುತ್ವ ಸಾಧಿಸಿರುವ ‘ಕಾವ್ಯಾನಂದ’ರು ಉರ್ದು, ಫಾರಸೀ ಭಾಷೆಗಳ ಹೆಸರಾಂತ ಕವಿಗಳ ಬಗ್ಗೆ ಗ್ರಂಥಗಳನ್ನು ಬರೆದಿದ್ದಾರೆ. ಕೆಲವು ಮೂಲಿಕವಾದರೆ, ಕೆಲವು ಅನು

ಪಾದಗಳಾಗಿವೆ. ಅವುಗಳಲ್ಲಿ 'ನಜೀರ ಅಕಬರಾಬಾದಿ' ಹಾಗೂ 'ಮಿರ್ಜಾ ಗಾಲಿಬ್' ಪ್ರಮುಖವಾದವುಗಳು.

* * * * *

ಉರ್ದು ಭಾಷೆ ಜನ್ಮ ತಾಳಿದುದು ಮೊಗಲರ ಹಾಗೂ ಭಾರತೀಯರ ಸಂಸ್ಕೃತಿಯ ಪರಸ್ಪರ ಸಂಬಂಧದಿಂದ. ಉರ್ದು ಭಾಷೆ ಬಹು ಸೊಗಸಾದ, ಶೃಂಗಾರಮಯವಾದ, ಸೌಂದರ್ಯ ಪೂರ್ಣವಾದ ಶ್ರೀಮಂತ ಭಾಷೆ. ಹಾಗಿದ್ದರೂ ಅದು ಇತ್ತೀಚಿನ ಭಾಷೆ. ಕನ್ನಡ ಭಾಷೆಗಿರುವ ಸಾವಿರ ವರುಷದ ಇತಿಹಾಸ, ಪರಂಪರೆ ಅದಕ್ಕಿಲ್ಲವೆನ್ನುವ ಮಾತು ಸತ್ಯ.

ಉರ್ದು ಭಾಷೆ ಹಿಂದೂ, ಮುಸಲ್ಮಾನರ ಬಾಂಧವ್ಯ ಪರಿಶ್ರಮ, ಐಕ್ಯತೆಯ ಕುರುಹಾಗಿ ಜನ್ಮತಾಳಿದ ಭಾಷೆ. ತಂತಮ್ಮ ಮೂಲ ಭಾಷೆಗಳನ್ನು ಬಲಿಗೊಟ್ಟೂ ಕೆಲವು ಸಲ ಈ ಭಾಷೆಯನ್ನು ಬೆಳೆಸಿದರು. ಈ ಭಾಷೆ ಪುಣ್ಯಭೂಮಿಯಾದ ಭಾರತದಲ್ಲಿಯೇ ಜನ್ಮತಾಳಿತು. ಇಲ್ಲಿಯ ನೆಲದ ಸತ್ವ, ಗಾಳಿ, ನೀರು, ಬೆಳಕನ್ನುಂಡು ಪೋಷಣೆ ಹೊಂದಿತು.

ಆರಂಭದಲ್ಲಿ ಉರ್ದುಕಾವ್ಯ ರಾಜ–ಮಹಾರಾಜರ, ಬಾದಷಹರ, ನವಾಬರ, ಅರಮನೆಯ, ದರಬಾರಿನ ವೈಭವವನ್ನು, ಘನತೆ–ಗೌರವ–ಕೀರ್ತಿಯನ್ನು ಹೊಗಳುವುದರಲ್ಲಿ ಹಾಗೂ ಪ್ರೇಮ, ಸೌಂದರ್ಯ, ವಿರಹ, ಮಧುಶಾಲೆಯ ವರ್ಣನೆಯಲ್ಲಿ ತನ್ಮಯವಾಗಿತ್ತು. ಸಾವಿರದೆಂಟುನೂರ ಐವತ್ತೇಳರ ಕ್ರಾಂತಿಗೆ ಕೊಂಚ ಪೂರ್ವದಲ್ಲಿ ಹಾಗೂ ಅದರ ನಂತರ ಉರ್ದು ಕಾವ್ಯ ವಾಹಿನಿಯಲ್ಲಿ ಹೊಸ ಪ್ರವಾಹ ಹರಿಯಲಾರಂಭಿಸಿತು. ಅರಮನೆಯ ದರ್ಬಾರು, ರಾಣಿವಾಸ, ಪ್ರೇಯಸಿಯ, ಪ್ರಿಯತಮೆಯ ಮುಂಗುರುಳು, ಮುಗುಳ್ನಗೆ ದ್ರಾಕ್ಷಾರಸದಿಂದ ತುಂಬಿದ ಜಾಮು, ಮಧುಶಾಲೆಯಲ್ಲಿಯ ಸಾಕಿ (ಮಧುಹಂಚುವವಳು) ಯ ತೊಂಡೆದುಟಿ, ಗುಲಾಬಿಯಂತಹ ಕಪೋಲ– ಇವುಗಳ ಬಂಧನದಲ್ಲಿದ್ದ ಉರ್ದು ಕಾವ್ಯ ಮೈ ಮುರಿದೆದ್ದು ಒಮ್ಮೆ ವಾಸ್ತವಿಕ ಜೀವನದ ಗಂಭೀರ ಸಮಸ್ಯೆಗಳತ್ತ ಹೊರಳಿ ನೋಡಿತು. ಆಗ ಅದಕ್ಕೆ ಬದುಕಿನ, ಜೀವನದ ಇನ್ನೊಂದು ಮುಖದ ದರ್ಶನವಾಯಿತು. ಕೇವಲ ಸೌಂದರ್ಯಾರಾಧಕನಾಗಿ ಜೀವನದ ವಾಸ್ತವಿಕತೆಯನ್ನು ಕಡೆಗಣಿಸಿದ್ದ ಕವಿ ಬದುಕನ್ನು ಬಹು ಹತ್ತಿರದಿಂದ ನೋಡಲಾರಂಭಿಸಿದ.

ಹೀಗೆ ವಾಸ್ತವಿಕ ಬದುಕಿನತ್ತ ನೋಡಲಾರಂಭಿಸಿದ ಕವಿಗಳಲ್ಲಿ ಬಹು ಪ್ರಮುಖ ಕವಿಯಾಗಿ ನಿಲ್ಲುತ್ತಾನೆ– ನಜೀರ ಅಕಬರಾಬಾದಿ. ಅದು ಹದಿನೆಂಟನೆಯ ಶತಮಾನದ ನಾಲ್ಕನೆಯ ದಶಕ. ಆಗ ಹಳೆಯ ಪರಂಪರೆ, ಸಂಪ್ರದಾಯ, ಕಾವ್ಯಕಲ್ಪನೆ, ಶಿಲ್ಪ, ರಚನಾವಿಧಾನ, ಪ್ರಕ್ರಿಯೆ, ಸಂಕೇತ, ಪ್ರತಿಮೆಗಳನ್ನೆಲ್ಲ ಒಮ್ಮೆ ಹಿಡಿದು ಅಲ್ಲಾಡಿಸಿ ಕಾವ್ಯಕ್ಕೆ ಹೊಸಕಲ್ಪನೆ, ಹೊಸ ದೃಷ್ಟಿ, ಹೊಸರೂಪ, ಹೊಸವಸ್ತು, ಹೊಸಶೈಲಿ,

ಹೊಸ ಪ್ರತಿಮೆ- ಸಂಕೇತಗಳನ್ನು ನೀಡಿ-ಎಲ್ಲ ಪಹಲುಗಳಿಂದಲೂ ಹೊಸ ಆಯಾಮ ನಿರ್ಮಿಸಿ ಉರ್ದು ಕಾವ್ಯದಲ್ಲಿ ಕ್ರಾಂತಿಯನುಂಟು ಮಾಡಿದ ಕವಿ-ನಜೀರ ಅಕಬರಾ ಬಾದಿ. ಅಂದಿನ ತನ್ನ ಸಮಕಾಲೀನ ಕವಿಗಳನ್ನು, ತನ್ನ ಕಾವ್ಯವನ್ನು, ಒಮ್ಮೊಮ್ಮೆ ತನ್ನನ್ನೂ ಕುರಿತು ಹೀಗೆ ಹೇಳಿದ-

'ಈ ವಿಲಾಸ-ಈ ಲೋಲುಪತೆ
ಈ ದಾಸ್ಯ ಸಾಕಿನ್ನು !' -ಎಂದು.

ನಜೀರ ಅಕಬರಾಬಾದಿಯ ಕಾವ್ಯಕ್ಕೆ ಜನಸಾಮಾನ್ಯರ ಜೀವನ, ಸಾಮಾಜಿಕ ಬದುಕಿನಲ್ಲಿ ಕಂಡುಬರುವ ವಿಷಮತೆ, ಅಂದಿನ ರಾಜಕೀಯ- ಎಲ್ಲವೂ ವಸ್ತುವಾದವು. ಪ್ರೇಮ-ಗೀಮವೆಂದು ಅದರಲ್ಲೇ ತಮ್ಮ ಕಾವ್ಯಕನ್ಯೆಯನ್ನು ರಮಿಸಿಕೊಂಡಿದ್ದ ಕವಿಗಳು ನಜೀರನ ನವ್ಯಪ್ರಜ್ಞೆಗೆ ಬೆಚ್ಚಿ ಬೆರಗಾದರು. ನಜೀರನಿಂದಾಗಿ ಉರ್ದುಕಾವ್ಯ ಶ್ರೀಸಾಮಾನ್ಯನ ಮನೆಯ ಬಾಗಿಲವರೆಗೂ ಬಂದು ಆತನ ಯೋಗಕ್ಷೇಮ ವಿಚಾರಿಸಲಾರಂಭಿಸಿತು. ತಮ್ಮಸ್ತಿತ್ವಕ್ಕೇ ಇನ್ನು ಮೇಲೆ ಇವನಿಂದಾಗಿ ಧಕ್ಕೆ ಬರಲಿದೆಎಂದು ತಿಳಿದ ಸಂಪ್ರದಾಯವಾದಿ ಕವಿಗಳು ನಜೀರ ಅಕಬರಾಬಾದಿಯನ್ನು 'ಸಾಮಾನ್ಯರ ಸಾಮಾನ್ಯ ಕವಿ' ಎಂದು ಹೀಯಾಳಿಸಿದರು. ಇಂಥ ಟೀಕೆ ಟಿಪ್ಪಣೆಗಳಿಗೆ ನಜೀರ ಕವಡೆಯ ಬೆಲೆಯನ್ನು ಕೊಡಲಿಲ್ಲ. ಆಧುನಿಕ ಉರ್ದು ಕಾವ್ಯದ ಪ್ರತಿಯೊಬ್ಬ ಪ್ರಗತಿಶೀಲ ಕವಿ ನಜೀರ ನೀಡಿದ ಹೊಸ ಬೆಳಕಿನಲ್ಲಿ ನಡೆದು ಬಂದವರು. ಅಂತೆಯೇ ಉರ್ದು ಕಾವ್ಯಲೋಕದ ಪ್ರಥಮ ಜನಕವಿ-ನಜೀರ ಅಕಬರಾಬಾದಿ.

ಬಹು ಭಾಷಾ ವಿಶಾರದನಾಗಿದ್ದ ನಜೀರ, ತನ್ನ ಕಾವ್ಯಕ್ಕೆ ಆ ಎಲ್ಲ ಭಾಷೆಗಳಿಂದ ಹೊಸ ಶಕ್ತಿ, ಸತ್ವ ತಂದುಕೊಂಡಿದ್ದ. ಭಾಷೆಯ ಬಗೆಗೆ ನಜೀರನಲ್ಲಿ, ಅನಾವಶ್ಯಕ ಹಾಗೂ ಅನಪೇಕ್ಷಿತವಾದ ಮಡಿವಂತಿಕೆ' ಇದ್ದುದನ್ನು ನಾವು ಆತನ ಕಾವ್ಯದಲ್ಲಿ ಎಲ್ಲಿಯೂ ಕಾಣುವುದಿಲ್ಲ. ಆತ ತನ್ನ ಕಾವ್ಯದಲ್ಲಿ ಹಿಂದೀ, ಭೋಜಪುರಿ, ಮಾರವಾಡಿ, ಪಂಜಾಬಿ, ಅರಬಿ, ಫಾರಸೀ ಭಾಷೆಯ ಶಬ್ದಗಳನ್ನು ಬಹು ಸಮರ್ಪಕವಾದ ರೀತಿಯಲ್ಲಿ ಶಕ್ತಿಶಾಲಿಯಾಗಿ ಬಳಸಿಕೊಂಡಿರುವುದನ್ನು ಕಾಣುತ್ತೇವೆ. ಯಾವುದೇ ಭಾಷೆಯ ಸಾಹಿತ್ಯ ಬೆಳೆಯಬೇಕಾದರೆ ಹಲವು ಭಾಷೆಯಲ್ಲಿಯ ಶಬ್ದಗಳನ್ನು ಬಳಸಿಕೊಳ್ಳುವುದು ಆರೋಗ್ಯಕರ ಲಕ್ಷಣವೆಂಬುದನ್ನು ಎರಡುನೂರ ಐವತ್ತು ವರ್ಷಗಳ ಹಿಂದಿದ್ದ ನಜೀರ ಮನಗಂಡಿದ್ದನೆಂಬುದನ್ನು ನೆನಸಿಕೊಂಡಾಗ, ಈ ಕಾಲದ ನಮಗೆ ಒಂದು ರೀತಿಯ ರೋಮಾಂಚನವಾಗುತ್ತದೆ. ಈ ಕಾಲದಲ್ಲೂ ಹಲ ಕೆಲವು ಬರಹಗಾರರು ಭಾಷೆಯ ಬಗ್ಗೆ ಮಡಿವಂತಿಕೆ ತಳೆದಿರುವುದನ್ನು ನೋಡಿದಾಗ, ನಜೀರ ನಮಗೆ ಇನ್ನೂ ಹೆಚ್ಚಿನ ಪ್ರಗತಿಶೀಲನಾಗಿ ಕಾಣುತ್ತಾನೆ.

ಉರ್ದು ಕಾವ್ಯಲೋಕದಲ್ಲಿ ಪ್ರಗತಿಶೀಲತೆಯ ನಂದಾದೀಪ ಹಚ್ಚಿ 'ಜನ ಬದುಕಬೇಕೆಂದು' ಕಾವ್ಯ ರಚಿಸಿದಾತ ನಜೀರ ಅಕಬರಾಬಾದಿ.

ಇಂಥ ಮಹತ್ವದ ಕವಿಯ ಜೀವನ, ಕಾವ್ಯವನ್ನು ಕುರಿತು ಸಾಹಿತ್ಯ ಅಕಾಡೆಮಿಗಾಗಿ ಜನಾಬ ಮಹಮ್ಮದ ಹಸನ್ ಅವರು ಬರೆದ ಇಂಗ್ಲಿಷ್ ಕೃತಿಯನ್ನು ಉರ್ದು ಹಾಗೂ ಇಂಗ್ಲಿಷ್ ಭಾಷೆಯ ವಿದ್ವಾಂಸರೂ ಕನ್ನಡದ ಪ್ರಖ್ಯಾತ ಕವಿಗಳೂ ಆಗಿರುವ 'ಕಾವ್ಯಾನಂದ'ರು ಕನ್ನಡಕ್ಕೆ ಬಹು ಸೊಗಸಾದ ರೀತಿಯಲ್ಲಿ ಅನುವಾದಿಸಿದ್ದಾರೆ.

ಈ ಕೃತಿಯಲ್ಲಿ ಪೀಠಿಕೆ, ಜೀವನಚಿತ್ರ, ಐತಿಹಾಸಿಕ ಸನ್ನಿವೇಶ, ಕಾವ್ಯಪ್ರತಿಭೆ, ಕಡೆನುಡಿ ಹೀಗೆ ಐದು ಅಧ್ಯಾಯಗಳಿವೆ.

ಜನತೆಯ ಬಗೆಗೆ ಅಪಾರ ಪ್ರೀತಿ, ವಾತ್ಸಲ್ಯಗಳನ್ನು ಹೊಂದಿದ್ದ ಈ ಕವಿ ಜನತೆಯನ್ನು, ಅವರ ಬದುಕನ್ನು ಕುರಿತು ಕಾವ್ಯರಚನೆ ಮಾಡಿದ. ಜನತೆಯ ಸುಖ, ದುಃಖ, ದುಗುಡ ದುಮ್ಮಾನ, ಸಂತೋಷ ಅಸಂತೋಷ, ಎಲ್ಲವೂ ನಜೀರನ ಕಾವ್ಯಕ್ಕೆ ವಸ್ತುವಾದವು. ಆತನ ಹಲವಾರು ಕಾವ್ಯಸಂಗ್ರಹಗಳು ಪ್ರಕಟವಾಗಿವೆ. ಉರ್ದು ಕಾವ್ಯಲೋಕದಲ್ಲಿ ಬಹು ಜನಪ್ರಿಯವಾಗಿವೆ.

ನಜೀರನ ಕೆಲವು ಕವಿತೆಗಳ ಕನ್ನಡಾನುವಾದಗಳೂ ಇದರಲ್ಲಿವೆ. ಕಾವ್ಯಾನುವಾದ ಕೂಡ ತುಂಬ ಸೊಗಸಾಗಿದೆ.

ಅದೇ ಆಗ ಕುಂಬಾರನ ಒಲೆಯಲ್ಲಿ ಸುಟ್ಟ ಹೊಸ ಮಡಿಕೆಯನ್ನು ಕುರಿತು ನಜೀರ ಬರೆದ ಈ ಕವಿತೆ 'ತೋರಾಬರತನ್'

'ಹೊಸ ಮಣ್ಣಿನ ಪಾತ್ರೆಗಳು
ಉಪವನದ ಪಾತೆಗಳು
ಹೂ ಬಳ್ಳಿಯ ಪಾತೆಗಳು ;
ಇವು ಎಲ್ಲರೆದೆಯ ಮೊಗ್ಗುಗಳನ್ನೂ ಅರಳಿಸುತ್ತವೆ
ಇದರ ಮೇಲೆ ನೀರ ಹನಿ ಉದುರಿದಾಗ
ಎಂಥ ಇಂಚರ ಹೊರಡುತ್ತದೆ !
ಮನಕ್ಕೆ ತಾಜಾತನ
ತನುವಿಗೆ ಸ್ನಿಗ್ಧತೆ,
ಓ, ಏನೆನ್ನುವುದು ಹೊಸ ಮಣ್ಣಿನ ಪಾತ್ರೆಯನ್ನು !'

ಕಾವ್ಯವನ್ನು ಇದಕ್ಕಿಂತಲೂ ಸರಳೀಕರಿಸುವುದು ಸಾಧ್ಯವಿಲ್ಲವೆಂದು ತೋರುತ್ತದೆ ನನಗೆ.

ನಜೀರ ಅಕಬರಾಬಾದಿ ಜಾತಿ ಪಾತಿಗಳಿಂದ ದೂರ ಸಿಡಿದು ನಿಂತವನು. ಅಂತೆಯೇ ಅವನು ಶ್ರೀಕೃಷ್ಣನನ್ನು ಅವನ ಕೊಳಲನ್ನು ಕುರಿತು, ಗುರು ನಾನಕನನ್ನು ಕುರಿತು ಕವಿತೆ ಬರೆದ.

ನಜೀರನ ಹಿರಿಮೆಯನ್ನು ಸಾರಲು ಈ ಕಾವ್ಯಗಳು ಸಾಕೆಂದು ತೋರುತ್ತದೆ.

"...ನಜೀರ ತಾತ್ವಿಕ ಗಹನತೆಯನ್ನಾಗಲೀ, ಭಾವದ ತೀವ್ರತೆಯನ್ನಾಗಲೀ ನಮಗೆ ನೀಡದಿರಬಹುದು, ಆದರೆ ಅವನು ಭಾರತದ ಅದರ ಆತ್ಮದ ಸ್ಥೂಲವಾದರೂ ನೈಜ ಚಿತ್ರವನ್ನು ನಮಗೆ ಕೊಡುತ್ತಾನೆ... ವಿದೇಶಿಯ ಓದುಗರು ಇವನ ಕಾವ್ಯದಲ್ಲಿ ಲಕ್ಷಾವಧಿ ಭಾರತೀಯ ಹೃದಯಗಳ ಮಾರ್ದನಿಗಳನ್ನು ಕೇಳಬಹುದು... ನಜೀರನ ಕಾವ್ಯ ಸುಡುವ ಸೆಕೆಯ ಹಗಲನಲ್ಲಿ ತಿಳಿಗಾಳಿಯ ತೀಟವಾಗಿ ತೋರುತ್ತದೆ ; ಮತ್ತು ಜೀವನವು ಇನ್ನೂ ಸುಂದರವಾಗಿದೆ, ಅನುಭೋಗ್ಯವಾದುದಾಗಿದೆ, ಜೀವಿಸಲು ಯೋಗ್ಯವಾದುದಾಗಿದೆಯೆಂದು ನಮ್ಮನ್ನು ಎಚ್ಚರಿಸುತ್ತದೆ."

ಇಂಥ ಕವಿಯ ಬದುಕನ್ನು, ಕಾವ್ಯವನ್ನು ಚಿತ್ರಿಸುವ ಕೃತಿಯೊಂದನ್ನು ಅನುವಾದಿಸಿ ಕನ್ನಡಕ್ಕೆ ನೀಡಿದ ಕೀರ್ತಿ ಸುಕವಿ 'ಕಾವ್ಯಾನಂದ' ಅವರದು.

ಶ್ರೀಯುತರ ಇನ್ನೊಂದು ಸ್ವತಂತ್ರವಾದ, ಚಿಕ್ಕದಾದರೂ ಮನೋಹರವಾಗಿ ರೂಪುಗೊಂಡ ಕೃತಿ 'ಮಿರ್ಜಾ ಗಾಲಿಬ್'. ಭಾರತ ಭಾರತಿ ಪುಸ್ತಕ ಮಾಲೆಯಯಲ್ಲಿ ಮಕ್ಕಳಿಗಾಗಿ ಪ್ರಕಟವಾಗಿರುವ ಪುಸ್ತಿಕೆ. ಪುಟ್ಟ ಪುಟ್ಟ ವಾಕ್ಯಗಳಲ್ಲಿ ಉರ್ದು ಕಾವ್ಯ ಲೋಕದಲ್ಲಿ ನಕ್ಷತ್ರಪುಂಜವಾಗಿ ಬೆಳಗಿದ ಗಾಲಿಬ್‌ರ ಜೀವನ, ಕಾವ್ಯಜೀವನವನ್ನು ಬಹು ಸೊಗಸಾಗಿ ನಿರೂಪಿಸಿದ್ದಾರೆ 'ಕಾವ್ಯಾನಂದ'ರು.

ಗಾಲಿಬ್, ಈ ನೆಲದ ಹುಡಿಯನ್ನು ತನ್ನ ಮಧುರ ಕಾವ್ಯಗಳಿಂದ ಸುಗಂಧಗೊಳಿಸಿದ. ತೋಟದಲ್ಲಿ ಅರಳುತ್ತಿದ್ದ ಮೊಗ್ಗುಗಳ ಎದೆಯಲ್ಲಿ ಪರಾಗ ತುಂಬಿದ, ತನ್ನ ದುರ್ದಮ್ಯವಾದ ಕಷ್ಟಗಳನ್ನು ಮೆಟ್ಟಿ ಹರ್ಷದ ಹಾಡು ಹಾಡಿದ, ಸ್ವಾಭಿಮಾನಿಯಾಗಿ ಬದುಕಿದ, ಗೆಳೆಯರಿಗಾಗಿ ಸ್ನೇಹ ವರ್ಷಗರೆದ, ಸಮಾಪ್ತಗೊಳ್ಳುತ್ತಿದ್ದ ಒಂದು ಆಳ್ವಿಕೆಯ, ಒಂದು ಪರಂಪರೆಯ ಕೊನೆಯ ಕಾಲದಲ್ಲಿದ್ದ, ಹೊಸ ಪರಂಪರೆಯ, ಹೊಸ ಮೌಲ್ಯಗಳ ನಾಯಕನಾಗಿದ್ದ. ಇಂಥ ಮಹೋನ್ನತ ಕವಿಯ ಜೀವನದ ಪದರು ಪದರುಗಳನ್ನು, ತೊಳೆ ತೊಳೆಯಾಗಿ ಬಿಡಿಸಿ ಮಕ್ಕಳಿಗೆ ತಿಳಿಯಲು ಚಿತ್ರಿಸಿದ್ದಾರೆ ತಮ್ಮ ಮಧುರವಾದ, ಚೇತೋಹಾರಿಯಾದ ಶೈಲಿಯಲ್ಲಿ.

ಅಲ್ಲಲ್ಲಿ ಗಾಲಿಬ್‌ರ ದ್ವಿಪದಿಗಳನ್ನು ಕನ್ನಡಿಸಿಕೊಟ್ಟಿದ್ದಾರೆ. ಅದರಲ್ಲಿ ಕೆಲವಂತೂ ಮೊದಲ ಸಲ ಕನ್ನಡದಲ್ಲಿಯೇ ಬರೆಯಲಾಯಿತೇನೋ ಎನ್ನುವ ಹಾಗಿವೆ.

'ಓಡುತಿದೆ ಆಯುಷ್ಯದಶ್ವ ; ಎಲ್ಲಿ ಹೋಗಿ ನಿಲ್ವುದೋ
ಕಡಿವಾಣ ಕೈಯೊಳಿಲ್ಲ, ಅಂಕವಣೆಯೊಳಿಲ್ಲ ಕಾಲು !'

ಇಂಥ ಉದಾಹರಣೆ ಇನ್ನು ಕೆಲವು ಕೊಡಬಹುದು. ಆದರೆ ಇಲ್ಲಿ ಅವಕಾಶ ವಿಲ್ಲ. 'ಕಾವ್ಯಾನಂದ'ರು ಸೃಜನಾತ್ಮಕ ಬರೆವಣಿಗೆಯಲ್ಲಿ ಸಿದ್ಧಿ ಪಡೆದಿರುವಂತೆ ಅನುವಾದ ಕಾರ್ಯದಲ್ಲಿ ಸಿದ್ಧಿ ಪಡೆದಿದ್ದಾರೆನ್ನುವುದಕ್ಕೆ ನಜೀರ ಅಕಬರಾಬಾದಿಯ ಹಾಗೂ ಗಾಲಿಬ್‌ರ ಕವಿತೆಗಳ ಅನುವಾದಗಳು ಸಾಕ್ಷಿಯಾಗಿವೆ.

ಕೇವಲ ನಲವತ್ತೆಂಟು ಪುಟಗಳಲ್ಲಿ ಗಾಲಿಬ್‌ನಂಥ ಮಹೋನ್ನತ ಕವಿಯ ಜೀವನ ಹಾಗೂ ಕಾವ್ಯವೃತ್ತಾಂತ ಹಿಡಿದಿಟ್ಟ ಹಿರಿಮೆ 'ಕಾವ್ಯಾನಂದ'ರದು.

ಇದೂ ಅಲ್ಲದೆ ಕಾವ್ಯಾನಂದರು ಉರ್ದು ಹಾಗೂ ಫಾರಸೀ ಭಾಷೆಗೆ ಇನ್ನೂ ಬೇರೆ ಬೇರೆ ರೀತಿಯಲ್ಲಿ ತಮ್ಮ ಸೇವೆ ಸಲ್ಲಿಸಿದ್ದಾರೆ.

ಲಿಂ. ಪ್ರೊ. ಎಸ್. ಎಸ್. ಬಸವನಾಳರು ಸಂಪಾದಿಸುತ್ತಿದ್ದ 'ಜಯಕರ್ನಾಟಕ' ದಲ್ಲಿ ಡಾ. ಮಹಮ್ಮದ್ ಇಕಬಾಲರ ಹಲವು ಕವಿತೆಗಳನ್ನು ಅನುವಾದಿಸಿ ಪ್ರಕಟಿಸಿದ್ದರು. ಆ ಅನುವಾದಗಳನ್ನು ಪ್ರೊ. ಬಸವನಾಳರು ತುಂಬ ಮೆಚ್ಚಿಕೊಂಡಿದ್ದುಂಟು. 'ಕಸ್ತೂರಿ'ಯಲ್ಲಿ ಡಾ. ಇಕಬಾಲರನ್ನು ಕುರಿತು ಸುದೀರ್ಘವಾದ ಲೇಖನ ಬರೆದಿದ್ದಾರೆ. ಫಾರಸೀಯ ಮಹಾದಾರ್ಶನಿಕ ಕವಿ ಫಿರದೋಸಿಯ ಬಗ್ಗೆ 'ಸುಧಾ' ದಲ್ಲಿ ಲೇಖನ ಬರೆದು ಕನ್ನಡಿಗರಿಗೆ ಫಿರದೋಸಿಯ ಪರಿಚಯ ಮಾಡಿಸಿದ್ದಾರೆ. 'ಸಮನ್ವಯ'ದಲ್ಲಿ ಮಿರ್ಜಾ ಗಾಲಿಬ್‌ರ ಪ್ರೇಮ ಗೀತಗಳನ್ನು ಕುರಿತು ಹಲವು ಲೇಖನಗಳನ್ನು ಬರೆದಿದ್ದಾರೆ. 'ಕೌಸ್ತುಭ'ದಲ್ಲಿ 'ಉರ್ದು-ಕನ್ನಡ' ಎಂಬ ತೌಲನಿಕ ಲೇಖನ ಪ್ರಕಟವಾಗಿ ಜನಪ್ರಿಯವಾದುದುಂಟು. 'ನಿರ್ಬಂಧನ'ದಲ್ಲಿ ಹಬ್ಬಾ ಖಾತೂನಳನ್ನು ಕುರಿತು ನಾಟಕ ಬರೆದಿದ್ದಾರೆ. ಬೆಂಗಳೂರು ಹಾಗೂ ಧಾರವಾಡ ಆಕಾಶವಾಣಿಗಳಿಂದ ಮಿರ್ಜಾ ಗಾಲಿಬ್, ಅಮೀರ ಖುಸ್ರೋ ಬಗ್ಗೆ ರೂಪಕಗಳು ಪ್ರಸಾರವಾಗಿವೆ. 'ಕನ್ನಡದಲ್ಲಿ ಕುರಾಣ' ಕುರಿತು ಬೆಂಗಳೂರು ಆಕಾಶವಾಣಿಯಿಂದ ರೂಪಕವೊಂದು ಪ್ರಸಾರಗೊಂಡು ಕನ್ನಡ ಜನತೆಗೆ ಕುರಾಣದ ಪರಿಚಯವಾಗಲು ಸಾಧ್ಯವಾಯಿತು.

ಗಾಲಿಬ್ ಶತಮಾನೋತ್ಸವ ಸಮಿತಿಯ, ಉರ್ದು ಅಕಾಡೆಮಿಯ ಸದಸ್ಯರಾಗಿ. ರಾಜ್ಯದ ಅಂಜುಮಾನ್-ಎ-ತರಿಕ್ಕಿ-ಎ-ಉರ್ದು ಸಂಸ್ಥೆಯ ಉಪಾಧ್ಯಕ್ಷರಾಗಿ ಉರ್ದು ಭಾಷೆಗೆ ಅಪಾರ ಸೇವೆ ಸಲ್ಲಿಸಿದ ಕೀರ್ತಿ 'ಕಾವ್ಯಾನಂದ'ರದು. ಅದೂ ಅಲ್ಲದೆ ಬೆಂಗಳೂರು ಆಕಾಶವಾಣಿ ಏರ್ಪಡಿಸಿದ 'ಉರ್ದು ಮುಷಾಯಿರಾ' (ಕವಿಗೋಷ್ಠಿ) ಕ್ಕೆ ಅಧ್ಯಕ್ಷರಾಗಿದ್ದರು. ಬಸವಣ್ಣನವರ ವಚನಗಳ ಉರ್ದು ಅನುವಾದ ಕಾರ್ಯದಲ್ಲಿ ನೆರವಾಗಿರುವುದಲ್ಲದೆ ಅದಕ್ಕೆ ಮುನ್ನುಡಿಯನ್ನೂ ಬರೆದಿದ್ದಾರೆ. 'ಸಾಲಾರ್' ಉರ್ದು ಪತ್ರಿಕೆಯಲ್ಲಿ ಡಾ. ಶಿವರಾಮ ಕಾರಂತರ 'ಮೂಕಜ್ಜಿಯ ಕನಸುಗಳು' ಎಂಬ ಕೃತಿಯನ್ನು ಕುರಿತು ಸುದೀರ್ಘವಾದ ಲೇಖನ ಬರೆದು ಕನ್ನಡ ಸಾಹಿತಿ, ಹಾಗೂ ಆತನ ಕೃತಿಯ ಪರಿಚಯ ಉರ್ದು ಭಾಷಿಕರಿಗೆ ಮಾಡಿಕೊಟ್ಟಿದ್ದಾರೆ. ಈ ಲೇಖನ ಉರ್ದು ಭಾಷೆ ಬಲ್ಲವರ ಮಧ್ಯದಲ್ಲಿ ಬಹು ಚರ್ಚಿತವಾಗಿತ್ತು. ಅದೂ ಅಲ್ಲದೆ ಈ ಲೇಖನ ಮೊದಲು ಆಕಾಶವಾಣಿಯ ಸಾಗರೋತ್ತರ ಕಾರ್ಯಕ್ರಮದಲ್ಲಿ ಪ್ರಸಾರಗೊಂಡು ಉರ್ದು ಭಾಷಾಲೋಕಕ್ಕೆ ಡಾ. ಕಾರಂತರ ಪರಿಚಯ ಮಾಡಿಕೊಟ್ಟಿತು.

# ಡಾ|| ಪುರಾಣಿಕ ಸಿದ್ಧಯ್ಯನವರ ಜೀವನ ಚರಿತ್ರೆಗಳು

**ಶಾಂತರಸ**

ಸಾಹಿತ್ಯ ಸೃಷ್ಟಿಯಲ್ಲಿ 'ಜೀವನ ಚರಿತ್ರೆ' ರೂಪಿಸುವುದು ತುಸು ಕಷ್ಟದ ಕೆಲಸವೇ. ಇದ್ದುದನ್ನು ಇದ್ದಂತೆ ಹೇಳಿದರೆ ವರದಿಯಾಗುವ ಸಂಭವವೇ ಹೆಚ್ಚು; ಕಲ್ಪನೆ ಬೆರಿಸಿದರೆ ಕೆಲವು ಕಡೆಯಾದರೂ ನಿಜವನ್ನು ಮರೆಮಾಚಿದ ಆರೋಪ ಬರಲಾರದೆ ಇರದು. ಇವೆರಡನ್ನೂ ತಪ್ಪಿಸಿಕೊಂಡು ಲೇಖಕ ಮುಂದುವರಿಯಲು ಅವನ ಲೆಕ್ಕಣಿಕೆ ಬಹು ಸಮರ್ಥವಾಗಿರಬೇಕಾಗುತ್ತದೆ.

ಒಂದು ದೃಷ್ಟಿಯಿಂದ ನೋಡಿದರೆ ಜೀವನ ಚರಿತ್ರೆ ಶಾಸ್ತ್ರವೂ ಹೌದು; ಕಲೆಯೂ ಹೌದು. ಕಟ್ಟುನಿಟ್ಟಿಗೆ, ಕ್ರಮಕ್ಕೆ, ಸತ್ಯಕ್ಕೆ ಪ್ರಾಮಾಣಿಕತೆಗೆ ಶಾಸ್ತ್ರದ ದೃಷ್ಟಿಯಿಂದ ಒಳಗಾಗಿ, ರಸಜ್ಞತೆ, ಕಲಾತ್ಮಕತೆ, ನೈಪುಣ್ಯತೆಯ ಮೆರುಗನ್ನು ಅಳವಡಿಸಿ ಚರಿತ್ರೆಯನ್ನು ಒರೆದರೆ–ಅದು ಸರ್ವಜನಾದರಣೀಯ ಚರಿತ್ರೆಯಾಗಿ, ಸಾಹಿತ್ಯಕ್ಕೆ ಒಂದು ಕೊಡುಗೆಯಾಗುವುದು. ಈ ನಿಟ್ಟಿನಲ್ಲಿ ಆಲೋಚಿಸಿ ಕನ್ನಡ ಸಾಹಿತ್ಯದಲ್ಲಿ ಜೀವನ ಚರಿತ್ರೆ ಬರೆದವರು ಕೆಲವೇ ಕೆಲವರಿದ್ದಾರೆ ; ಅವರಲ್ಲಿ ಶ್ರೀ ಸಿದ್ಧಯ್ಯ ಪುರಾಣಿಕರು ಒಬ್ಬರು ; ಇವರ ಸ್ಥಾನ ಉನ್ನತವಾದುದು.

ಶ್ರೀ ಸಿದ್ಧಯ್ಯ ಪುರಾಣಿಕರು ಬರೆದ ಜೀವನ ಚರಿತ್ರೆಗಳು ಇವು :

೧ ಬಸವಣ್ಣನವರ ಜೀವನ ಹಾಗು ಸಂದೇಶ

೨ ಹರ್ಡೇಕರ ಮಂಜಪ್ಪನವರು

೩ ಸಿದ್ಧರಾಮ

೪ ಮಿರ್ಜಾಗಾಲಿಬ್

೫ ನಜೀರ್ ಅಕಬರಾದಿ (ಅನುವಾದ)

ಅವರ ಶರಣಚರಿತಾಮೃತವೂ ಜೀವನ ಚರಿತ್ರೆಯಲ್ಲಿಯೇ ಸಮಾವೇಶವಾಗುವುದು. ಆದರೆ ಅದನ್ನೊಂದು ಸ್ವತಂತ್ರ ಅಧ್ಯಯನಕ್ಕೆ–ಸಂಶೋಧನ ದೃಷ್ಟಿಯಿಂದ ಒಳಪಡಿಸಬೇಕಾದ ಆವಶ್ಯಕತೆಯಿರುವುದರಿಂದ ಅದನ್ನಿಲ್ಲಿ ಕೈಬಿಡಬೇಕಾಗಿದೆ.

ಒಂಬತ್ತು ಅಧ್ಯಾಯಗಳುಳ್ಳ "ಬಸವಣ್ಣನವರ ಜೀವನ ಹಾಗೂ ಸಂದೇಶ"ದಲ್ಲಿ ಶ್ರೀ ಪುರಾಣಿಕರು ಹಲವು ದಿಟ್ಟ ನಿಲವುಗಳನ್ನು ತಳೆದಿದ್ದಾರೆ. ಬಸವಣ್ಣನವರನ್ನು ಕುರಿತು ಈವರೆಗೆ ಆದ ಸಂಶೋಧನೆಗಳೆಲ್ಲವನ್ನು, ದೊರಕಿದ ಶಾಸನಗಳನ್ನು, ಪ್ರಕಟವಾದ ಕೃತಿಗಳನ್ನು ಅವಲೋಕಿಸಿ, ಅಭ್ಯಸಿಸಿ ಸರಿಕಂಡುದನ್ನು ಒಪ್ಪಿ, ಕೆಲವನ್ನು ನಿರಾಕರಿಸಿ, ಅನೇಕ ಸಂದೇಹಗಳಿಗೆ ಖಚಿತವಾಗಿ ಉತ್ತರಿಸಿದ್ದಾರೆ. ಮಹಾಪುರುಷರ ಬಗ್ಗೆ ಅಪಸ್ವರ, ಅಸಂಗತ ವಿಚಾರಗಳು ಎಲ್ಲ ಕಾಲಕ್ಕೂ ಇದ್ದುವೇ, ಬಸವಣ್ಣನವರು ಇದಕ್ಕೆ ಹೊರತಾಗಿಲ್ಲ. ಉದಾಹರಣೆಗೆ : ಬಸವಣ್ಣನವರು ಬಿಜ್ಜಳನ ಭಾಂಡಾರವನ್ನು ಉಪಯೋಗಿಸಿಕೊಂಡರು ಎಂಬ ಆರೋಪ : ಇದನ್ನು ಹಲವು ಜನರು ಹಲವು ರೀತಿಯಲ್ಲಿ ಮಾಡಿದ್ದಾರೆ. "ಊರ ಮುಂದೆ ಹಾಲಹಳ್ಳ ಹರಿಯುತ್ತಿರಲಿ, ಜರೆಯಾವಿನ ಹಿಂದೆ ಹರಿಯಲೇಕಯ್ಯಾ ? ......ಬಿಜ್ಜಳನ ಭಂಡಾರವೆನಗೇಕಯ್ಯಾ ?" ಎಂಬ ಬಸವಣ್ಣನವರ ವಚನವಿದ್ದರೂ ಅದನ್ನು ಕಡೆಗಣಿಸಿಯೇ ಮತ್ತಾವ ಬುದ್ಧಿಯಿಂದಲೋ ಬಸವಣ್ಣನವರು ಧರ್ಮಪ್ರಚಾರಕ್ಕಾಗಿ ಬಿಜ್ಜಳನ ಭಂಡಾರವನ್ನು ಉಪಯೋಗಿಸಿಕೊಂಡರೆಂದು ಅನೇಕರು ಬರೆದಿದ್ದಾರೆ ; ಅದನ್ನು ಸಮರ್ಥಿಸಲು ಹೆಣಗಿದ್ದಾರೆ. ಇದು ಮಿಥ್ಯಾರೋಪವೆಂದು ಶ್ರೀ ಪುರಾಣಿಕರು ಬಲವಾದ, ನಂಬಲರ್ಹವಾದ, ಖಚಿತವಾದ ಆಧಾರಗಳಿಂದ ಸಿದ್ಧಗೊಳಿಸಿದ್ದಾರೆ. ಇದು ಪುರಾಣಿಕರ ಆಳವಾದ ಅಭ್ಯಾಸವನ್ನೂ ಸಂಶೋಧನೆಯಲ್ಲಿರುವ ಪ್ರಾಮಾಣಿಕತೆಯನ್ನೂ ಸತ್ಯವನ್ನರಸಿ ಅದನ್ನು ಸಹೃದಯರೆದುರಿಗಿಡುವ ತೀವ್ರ ಹಂಬಲವನ್ನೂ ವ್ಯಕ್ತಪಡಿಸುತ್ತದೆ. ಅಲ್ಲದೆ ಇಲ್ಲಿ ಅವರಾಡಿರುವ ಒಂದೆರಡು ಮಾತುಗಳು ತುಸು ಬಿರುಸೆನಿಸುತ್ತವೆ-ಓದುಗರಿಗೆ. ಆದರೆ ಅವರ ಸಾತ್ವಿಕ ಸಂತಾಪ ಹಾಗೆ ನುಡಿಸಿದೆಯೆಂಬುದು ಇಲ್ಲಿಯ ಸಮತೂಕ ವಿವೇಚನೆಯಿಂದ ಮನದಟ್ಟಾಗದೆ ಇರದು.

"ಆನೆ ಭಂಡಾರ ಲಾಯದ ಕುದುರೆ ಬೇಡುವರಿಲ್ಲದ ಬಡವನಾದೆನಯ್ಯಾ!
ಮುನ್ನ ಬೇಡಿದೆ ಸಿಂಧುಬಲ್ಲಾಳನ ವಧುವನು ; ಇನ್ನು ಬೇಡದೊಡೆ
ನಿಗಳವ ನಿಕ್ಕುವೆ !
ಬೇಡಿದ ಶರಣರಿಗೆ ನೀಡದಿರ್ದಡೆ ತಲೆದಂಡ, ಕೂಡಲ ಸಂಗಮದೇವ."

ಬಸವಣ್ಣನವರ ಈ ವಚನ ಬಹಳ ಮಂದಿಗೆ, ಸಮರ್ಥರೆನಿಸಿದವರಿಗೂ ಅಡ್ಡದಾರಿ ಹಿಡಿಸಿದೆಯೆಂದು ತೋರುತ್ತದೆ. ಈ ವಚನ ಯಾವ ಸಂದರ್ಭದ್ದು ? ಈ ವಚನಗಳಲ್ಲಿ ಉಕ್ತವಾಗಿರುವ ವಸ್ತು ಒಡವೆ ಪ್ರಾಣಿಗಳು ಯಾರ ಒಡೆತನಕ್ಕೆ ಸೇರಿದುವು ಎಂದು ತಿಳಿಯಲು ತುಸು ಕಷ್ಟಪಟ್ಟಿದ್ದರೆ ಬಹುಶಃ ಅವರು ಅಡ್ಡದಾರಿ ಹಿಡಿಯುತ್ತಿರಲಿಲ್ಲ. '....ಲಿಪಿಯನ್ನು ಓದಿದರೆ ಆನೆ, ಸೇನೆ, ಕುದುರೆ, ಭಂಡಾರ, ಕೊಡುವುದಲ್ಲದೆ ಅರವತ್ತಾರು ಕರಣಿಕರಿಗೆ ಮುಖ್ಯನ ಮಾಡುವೆನೆಂದು ಬಿಜ್ಜಳ ಹೇಳಿದ. ಅದರಂತೆ ಲಿಪಿಯೋದಿ ಬಸವಣ್ಣ ಅವುಗಳನ್ನೆಲ್ಲ ಪಡೆದ. ಚನ್ನಬಸವಣ್ಣನವರ ವಚನದಿಂದ ಮತ್ತು ಸಿಂಗಿರಾಜಪುರಾಣದಿಂದ ಬಸವಣ್ಣನವರು ಇದನ್ನೆಲ್ಲ ಪಡೆದುದು ಗೊತ್ತಾಗು

ತ್ತದೆ. ಅಂದಮೇಲೆ ಮೇಲಿನ ವಚನದಲ್ಲಿ ಉಕ್ತವಾದ ಆನೆ ಭಾಂಡಾರ, ಲಾಯದ ಕುದುರೆ ಬಿಜ್ಜಳನವು ಹೇಗಾಗುತ್ತವೆ ? ಅವೆಲ್ಲ ಬಸವಣ್ಣನ ಒಡೆತನಕ್ಕೆ ಒಳಪಟ್ಟುವು. ಬಸವಣ್ಣ ತನ್ನ ವಸ್ತುಗಳನ್ನು ತಾನು ಜಂಗಮಕ್ಕೆ ಕೊಟ್ಟುದು. ಈ ವಿಷಯವನ್ನು ಪುರಾಣಿಕರು ಅನೇಕ ಬಗೆಯಾಗಿ ಏನೊಂದೂ ಸಂಶಯ ಉಳಿಯದಂತೆ ಪ್ರತಿಪಾದಿಸಿದ್ದಾರೆ. ಯಾವುದೇ ವಿಷಯವಾಗಲಿ ಅದನ್ನು ತಳಸೋಸಿ ನೋಡುವ, ಆದಷ್ಟು ಸತ್ಯದ ಸಮೀಪಕ್ಕೆ ಮುಟ್ಟುವ ಗುಣ ಅವರದು.

ಭಾಂಡಾರದ ಉಪಯೋಗದ ಮಿಥ್ಯಾರೋಪದಂತೆ ಬಿಜ್ಜಳನ ಕೊಲೆಯದೂ ಒಂದು ಪ್ರಶ್ನೆ ; ಬಸವಣ್ಣನವರೇ ಮಾಡಿಸಿದರೆಂದು ಅನೇಕರ ವಾದ ; ಇದಕ್ಕೆ ಕಳಸವಿಟ್ಟಂತೆ ನಮ್ಮ ಕೆಲವು ಪ್ರಾಚೀನ ಕಾವ್ಯಗಳೂ ಬಿಜ್ಜಳನ ಕೊಲೆ ಬಸವಣ್ಣನಿಂದಾಯಿತು ಎಂಬರ್ಥ ಬರುವಂತಹ ಪದ್ಯಗಳನ್ನೊಳಗೊಂಡಿವೆ. ಅನೇಕ ಆಧುನಿಕ ವಿದ್ವಾಂಸರು, ಸಂಶೋಧಕರು ಬಸವಣ್ಣನಿಂದ ಬಿಜ್ಜಳನ ಕೊಲೆಯಾಗಿಲ್ಲವೆಂದು ಪ್ರತಿಪಾದಿಸಿದ್ದಾರೆ. ಈ ನಿಟ್ಟಿನಲ್ಲಿ ಸಿದ್ಧಯ್ಯ ಪುರಾಣಿಕರು ಬಹುಬೆಲೆಯುಳ್ಳ ವಿವೇಚನೆಯನ್ನಿಲ್ಲಿ ಮಾಡಿದ್ದಾರೆ ; ಹಲವು ಆಧಾರಗಳನ್ನೊದಗಿಸಿದ್ದಾರೆ. ರಾಜಕೀಯ ಕಾರಣಕ್ಕಾಗಿ ಬಿಜ್ಜಳನ ಕೊಲೆಯಾಯಿತು ; ಅದರಲ್ಲಿ ಶರಣರದೇನೂ ಕೈವಾಡವಿಲ್ಲ ಎಂದು ಇತ್ತೀಚೆಗೆ ಅಭಿಪ್ರಾಯ ಮೂಡತೊಡಗಿದೆ. ಪುರಾಣಿಕರ ಮಾತುಗಳಲ್ಲಿಯೂ ಈ ಧ್ವನಿ ಅಡಗಿದೆ.

ಹಲವು ಸಂಶೋಧಕರಿಗೆ ಬವಣ್ಣನವರ ಜೀವನದ ಕೆಲ ಘಟನೆಗಳ ಬಗ್ಗೆ ಮತ್ತು ಕಾಲದ ಬಗ್ಗೆ ತಲೆದೋರಿದ ಸಂಶಯಗಳು ಪುರಾಣಿಕರಿಗೂ ತಲೆದೋರಿವೆ. ಬಸವಣ್ಣನವರ ಕಾಲದ ಬಗ್ಗೆ ಇದುವರೆಗೂ ಏಕಾಭಿಪ್ರಾಯ ಮೂಡಿಲ್ಲ. ಅವರ ಜನನ ಮರಣಗಳ ಬಗ್ಗೆ ಸಂಶೋಧಕರಲ್ಲಿ ಇನ್ನೂ ಹೊಯ್ದಾಟವೇ ಇದೆ.

ಪುರಾಣಿಕರು ಬಸವಣ್ಣನವರ ಜೀವಿತ ಕಾಲವನ್ನು ಹೀಗೆ ವಿಭಾಗಿಸಿದ್ದಾರೆ :

ಜನನ : ೧೧೩೦—೩೧ ರಲ್ಲಿ ಬಾಗೇವಾಡಿಯಲ್ಲಿ ;

ಉಪನಯನ: ೧೧೩೮–೩೯ ರಲ್ಲಿ ಬಾಗೇವಾಡಿಯಲ್ಲಿ ;

ವಿಪ್ರಕರ್ಮಾಚರಣೆ–ವಿದ್ಯಾಭ್ಯಾಸ : ೧೧೪೬–೪೭ರವರೆಗೆ ಬಾಗೇವಾಡಿ–ಇಂಗಳೇಶ್ವರಗಳಲ್ಲಿ;

ಮಂಗಳವಾಡಕ್ಕೆ ಪ್ರಯಾಣ : ೧೧೫೪ ರಲ್ಲಿ ;

ಮಂಗಳವಾಡದಲ್ಲಿ ಕರಣಿಕ ವೃತ್ತಿ, ದಂಡನಾಥ ಪದವಿ, ಅನುಭವ ಮಂಟಪ ಆರಂಭ : ೧೧೫೪–೫೫ ರಲ್ಲಿ ;

ಕಲ್ಯಾಣಕ್ಕೆ ಪ್ರಯಾಣ : ೧೧೫೭ ;

ಕೂಡಲಸಂಗಮಕ್ಕೆ ನಿರ್ಗಮನ ಮತ್ತು ಅಲ್ಲಿಯೇ ಬಯಲಾದುದು : ೧೧೬೭ ರವರೆಗೆ.

ಇದನ್ನು ಒಂದೇ ಏಟಿಗೆ ಒಪ್ಪಿಕೊಳ್ಳಲಿಕ್ಕಾಗುವುದಿಲ್ಲ. ಈ ವಿಭಜನೆಯಿಂದ ಅನೇಕ ತೊಂದರೆಗಳು ಉದ್ಭವಿಸುತ್ತವೆ. ಅವುಗಳನ್ನಿಲ್ಲಿ ಚರ್ಚಿಮಾಡುವುದು ನನ್ನ

ಉದ್ದೇಶವೂ ಅಲ್ಲ, ಅಲ್ಲದೆ ಅದು ಪ್ರಸ್ತುತವೂ ಅಲ್ಲ. ತಮ್ಮ ಈ ವಿಭಜನೆಗೆ ಪುರಾಣಿಕರು ಒದಗಿಸುವ ಪುರಾವೆಗಳು, ಪ್ರಮಾಣಗಳು, ಆಧಾರಗಳು ಸಬಲವೆನಿಸಿದರೂ ಒಂದು ಖಚಿತ ನಿರ್ಣಯಕ್ಕೆ ಬರಲು ಆಗುವುದಿಲ್ಲವೆಂಬ ಒಂದು ಮಾತನ್ನು ಇಲ್ಲಿ ಹೇಳಬಹುದು. "ಬಸವಣ್ಣನವರ ಜೀವಿತ ಕಾಲವನ್ನು ಹೀಗೆ ವಿಭಾಗಿಸಬಹುದೆಂದು ತೋರುತ್ತದೆ" ಎಂಬ ಅವರ ಮಾತೂ ಇನ್ನೂ ಇದು ಖಚಿತ ಅಲ್ಲವೆಂದೇ ಹೇಳಿದಂತಿದೆ. ಬಸವಣ್ಣನವರು ೩೨ ವರ್ಷ ಬದುಕಿದರು ಎಂಬುದು ವಿವಾದಾಸ್ಪದವೇ. ಮೂವತ್ತೇ ವರ್ಷ ಬದುಕಿದವರೆಂದು ಇನ್ನು ಕೆಲವರವಾದ ಅರವತ್ತಕ್ಕಿಂತ ಹೆಚ್ಚು ವರ್ಷ ಬದುಕಿದರೆಂದು ಇನ್ನು ಕೆಲವರ ಅಭಿಪ್ರಾಯ.

"ಹೊಸ ಧರ್ಮ ದೃಷ್ಟಿ" ಎಂಬ ಅಧ್ಯಾಯದಲ್ಲಿ ಬಸವಣ್ಣನವರ ಹೊಸ ಧರ್ಮದ ವಾಖ್ಯೆ ಮತ್ತು ವ್ಯಾಪ್ತಿಯನ್ನು, ಅದರ ಗೊತ್ತುಗುರಿಗಳನ್ನು, ಅದರ ಮಾನವೀಯ ಮೌಲ್ಯಗಳನ್ನು ವಿಸ್ತಾರವಾಗಿ ಮನಮುಟ್ಟುವಂತೆ ಅವರ ವಚನಗಳನ್ನು ಉದಾಹರಿಸಿ ಬರೆದಿದ್ದಾರೆ. ಈ ಹೊಸಧರ್ಮಕ್ಕೆ ಏನು ಹೆಸರು ? ಇದು ಮೊದಲು ಇತ್ತೆ ? ಮುಂತಾದ ಚರ್ಚೆಗಿಳಿಯದೆ, ಜಿಗುಟು ಧಾರ್ಮಿಕ ತತ್ವಗಳನ್ನು, ಪ್ರಕ್ರಿಯೆಗಳನ್ನು ಪ್ರತಿಪಾದಿಸಲು ಹೋಗದೆ ಇರುವುದರಿಂದ ಓದುಗ ನಿರಾಯಾಸವಾಗಿ ಬಸವಣ್ಣನ ಹೊಸಧರ್ಮ ದೃಷ್ಟಿಯನ್ನು ಅರಿತುಕೊಳ್ಳಲು ಸಮರ್ಥನಾಗುತ್ತಾನೆ.

ಅಸ್ಪೃಶ್ಯತೆ ನಿವಾರಣೆ, ಸಮಗ್ರ ಕ್ರಾಂತಿ, ಬಸವಣ್ಣನವರ ಆರ್ಥಿಕ ವಿಚಾರಗಳನ್ನು ಕುರಿತು ಹೊಸ ದೃಷ್ಟಿಕೋನದಿಂದ ಪುರಾಣಿಕರು ವಿವೇಚನೆ ಮಾಡಿದ್ದಾರೆ. ಈ ಗ್ರಂಥದಲ್ಲಿ ಬಹುಮುಖ್ಯವಾದ ಅಧ್ಯಾಯ 'ಸಾಂಸ್ಕೃತಿಕ ಕ್ರಾಂತಿ'. ಧರ್ಮ, ರಾಜಕಾರಣ, ಆರ್ಥಿಕ ಮುಂತಾದ ಯಾವುದೇ ರಂಗದ ಕ್ರಾಂತಿ ಯಶಸ್ವಿಯಾಗಬೇಕಾದರೆ 'ಅದಕ್ಕೆ ಪೂರಕವಾಗಿ ತಾರಕವಾಗಿ ಸಾಂಸ್ಕೃತಿಕ ಕ್ರಾಂತಿಯೊಂದು ಅದರೊಡನೆಯೆ ಸಹಕಾಲಿಕವಾಗಿ ನಡೆಯಬೇಕಾಗುತ್ತದೆ' ಎಂಬ ಪುರಾಣಿಕರ ಮಾತು ಅರ್ಥಪೂರ್ಣವಾದುದು. ಸುದೀರ್ಘವಾದ ಬಸವ ಸಂದೇಶ ಅಧ್ಯಾಯ, ವಚನಗಳಿಂದಲೇ ನೆಯ್ದಿರುವುದರಿಂದ ಚೊಕ್ಕವಾಗಿದೆ. ಬಿಚ್ಚು ಮನಸ್ಸಿನ ಮಾತುಗಳು ಹಿನ್ನೋಟ–ಮುನ್ನೋಟದಲ್ಲಿವೆ ; ಚುಚ್ಚಿದರೂ ಆಪ್ಯಾಯಮಾನವಾಗಿವೆ.

'ಹರ್ಡೇಕರ ಮಂಜಪ್ಪನವರು' ಚಿಕ್ಕದಾದರೂ ಬೆಲೆಯುಳ್ಳ ಗ್ರಂಥ. 'ಕರ್ನಾಟಕ ಗಾಂಧಿ' ಎಂದು ಜನರಿಂದ ಕರೆಯಿಸಿಕೊಂಡ ಮಂಜಪ್ಪನವರ ಚರಿತ್ರೆ ಬರೆಯಲು ಸಂಶೋಧನೆ ನಡೆಸಬೇಕಾಗಿಲ್ಲ ; ಅವರ ಆತ್ಮ ಚರಿತ್ರೆಯಿದೆ ; ಅವರ ಗ್ರಂಥಗಳಿವೆ ; ಅವರು ಮಾಡಿದ ಕಾರ್ಯಗಳ, ಆಶ್ರಮಗಳ ಇನ್ನೂ ಜೀವಂತ ಕುರುಹುಗಳಿವೆ ; ಅವರೊಡನೆ ಕೂಡಿ ಕೆಲಸಮಾಡಿದವರೂ ಜೀವಿಸಿದ್ದಾರೆ. ಇದೆಲ್ಲಕ್ಕಿಂತ ಹೆಚ್ಚಾಗಿ ಪುರಾಣಿಕ ಸಿದ್ಧಯ್ಯನವರಿಗೆ ಹರ್ಡೇಕರ ಮಂಜಪ್ಪನವರ ಚರಿತ್ರೆ ಬರೆಯಲು ಹೆಚ್ಚಿನ ಒಂದು ಅಧಿಕಾರ, ಒಂದು ಸೌಕರ್ಯ ಇದೆ : ಪುರಾಣಿಕರು ಮಂಜಪ್ಪಣ್ಣನವರ ಆಶ್ರಯದಲ್ಲಿ

ಇದ್ದವರು ; ಹರ್ಡೇಕರ ಗರಡಿಯಲ್ಲಿ ಪಳಗಿದವರು. ಹರ್ಡೇಕರರು ತಮ್ಮ ಬದುಕಿನ ರೂವಾರಿ ಎಂದು ಪುರಾಣಿಕರು ಹೇಳಿಕೊಂಡಿದ್ದಾರೆ. ಆದುದರಿಂದ ಅವರು ಮಂಜಪ್ಪ ನವರ ಚರಿತ್ರೆಯನ್ನು ಸಮರ್ಥವಾಗಿ ಬರೆಯಬಲ್ಲರು ; ಬರೆದಿದ್ದಾರೆ.

ಈ ಪುಸ್ತಕದಲ್ಲಿ ಹರ್ಡೇಕರ ಬದುಕನ್ನು–ಸೀಮಿತವಲಯದಲ್ಲಿಯಾದರೂ–ಪೂರ್ಣ ಒಂದು ಚಿತ್ರ ಬರುವಂತೆ ಪುರಾಣಿಕರು ಚಿತ್ರಿಸಿದ್ದಾರೆ. ಎಲ್ಲಿಯೂ ಬೇಸರ ಬರದಂತೆ, ಯಾವುದೂ ಪೊಟಕು ಎನಿಸದೆ ಹಿತವಾಗಿ ಹರಿದು ಬಂದಿದೆ ಬತವಣಿಗೆ. ಮಂಜಪ್ಪನವರ ಆಶ್ರಮದಲ್ಲಿದ್ದುದರಿಂದ ಅವರ ಬಗ್ಗೆ ಏನಾದರೂ ಅಭಿಮಾನದ ಮಾತು ಪುರಾಣಿಕರಿಂದ ಬಂದಿವೆಯೋ ಎಂದು ಕೂತೂಹಲಿಗನಾಗಿ ಎಚ್ಚರಿಕೆಯಿಂದ ಅವಲೋಕಿಸಿದೆ. ಪುರಾಣಿಕರು ಇಲ್ಲಿ ಗೆದ್ದು ನಿಂತಿದ್ದಾರೆ. ಸಮಚಿತ್ತರಾಗಿ ಬರೆದು ಓದು ಗರಲ್ಲಿ ಹರ್ಡೇಕರರ ಬಗ್ಗೆ ಅಭಿಮಾನ ಉಕ್ಕುವಂತೆ ಮಾಡಿದ್ದಾರೆ ; ಅಲ್ಲದೆ ಇದನ್ನು ಓದಿದ ಬಳಿಕ, ಓದದಿದ್ದರೆ ಎಂಥ ವೈಚಾರಿಕ ಹಾನಿಗೊಳಗಾಗುತ್ತಿದ್ದೆ ಎಂದು ಯಾರಿಗೂ ಅನಿಸದೆ ಇರದು. ಸ್ವಾತಂತ್ರ್ಯವನ್ನು ಮಂಜಪ್ಪನವರು ಎಂದೂ ಬಿಟ್ಟುಕೊಟ್ಟವರಲ್ಲ ; ಇನ್ನೊಬ್ಬರ ಪ್ರಭಾವಕ್ಕೊಳಗಾಗಿ ತಮ್ಮ ವಿಚಾರಗಳಿಗೆ ತಿಲಾಂಜಲಿಯನ್ನು ಕೊಟ್ಟವರೂ ಅಲ್ಲ. ಪುನರ್ಜನ್ಮದ ಬಗ್ಗೆ ಗಾಂಧಿಜಿಯವರ ವಿಚಾರಗಳನ್ನು ಅವರು ಒಪ್ಪಲಿಲ್ಲ. ಹಾಗೆಂದು ಇನ್ನೊಬ್ಬರ ವೈಚಾರಿಕ ಸ್ವಾತಂತ್ರ್ಯಕ್ಕೆ ಅವರು ಧಕ್ಕೆ ತರಲಿಲ್ಲ ; ಇನ್ನೊಬ್ಬರ ವಿಚಾರಕ್ಕೆ ಅಗೌರವ ತೋರಿಸಲಿಲ್ಲ. ಆದರೆ ರಾಷ್ಟ್ರಕ್ಕೆ ಅಹಿತವಾದುದನ್ನು, ಸಮಾಜಕ್ಕೆ ಕಂಟಕವಾದುದನ್ನು ಖಂಡಿಸದೆ ಇರಲಿಲ್ಲ. ಅವರ ಸಾಹಿತ್ಯ ನಿಜವಾದ ರಾಷ್ಟ್ರಪ್ರೇಮವನ್ನು ಜನರಲ್ಲಿ ಹುಟ್ಟಿಸಿತು. ಸಮಾಜ ಸೇವಕರಾಗಿ, ಪತ್ರಿಕಾಕರ್ತರಾಗಿ, ಸತ್ಯಾಗ್ರಹಿಗಳಾಗಿ, ಸಾಹಿತಿಗಳಾಗಿ ಬಸವತತ್ವಾನುಯಾಯಿಗಳಾಗಿ ಮಂಜಪ್ಪನವರು ಹೊಸ ಹುಟ್ಟಿಗೆ ಕಾರಣರಾದರು. ಇಂಥ ಅವರ ಚರಿತ್ರೆಯನ್ನು ಪುರಾಣಿಕರು ಸೊಗಸಾಗಿನಿರೂಪಣೆ ಮಾಡಿದ್ದಾರೆ.

'ಸಿದ್ಧರಾಮ' ರಾಷ್ಟ್ರೋತ್ಥಾನದವರು ಮಕ್ಕಳಿಗಾಗಿ ಪ್ರಕಟಿಸಿದ ತೀರ ಚಿಕ್ಕ ಹೊತ್ತಿಗೆ. ಮಕ್ಕಳಿಗೆ ಸಿದ್ಧರಾಮನ ಒಂದು ಸುಂದರ ಕಲ್ಪನೆ ಇದರಿಂದ ಮೂಡಿಬರುತ್ತದೆ. ಒಂದೆರಡು ಕಡೆ ಬಂದ ಪವಾಡಗಳನ್ನು ಬಿಡಬಹುದಾಗಿತ್ತೇನೋ ? ಭಾಷೆಯನ್ನು ಇನ್ನೂ ಸರಳಗೊಳಿಸಬಹುದಾಗಿತ್ತು. ದನಕಾಯುವ, ಲಿಂಗಪೂಜಿಸುವ, ನವಣೆಯ ಹೊಲದಲ್ಲಿ ಮಲ್ಲಯ್ಯನೊಡನೆ ಮಾತಾಡುವ ಮುಗ್ಧ ಮಗು ಸಿದ್ಧರಾಮನ ಚಿತ್ರ ದೊಡ್ಡವರು ಸಣ್ಣವರು ಎಲ್ಲರ ಮನಮುಟ್ಟುತ್ತದೆ.

'ಮಿರ್ಜಾಗಾಲಿಬ್' ಕೂಡ ರಾಷ್ಟ್ರೋತ್ಥಾನದವರ ಮಕ್ಕಳ ಪುಸ್ತಕವೇ. ಇದು ಮಕ್ಕಳಿಗಾಗಿ ಬರೆದರೂ ಎಲ್ಲ ವಯಸ್ಸಿನವರು ಓದಿ ನಲಿಯಬಹುದಾದ ಪುಸ್ತಕ. ಈ ಪುಸ್ತಕ ಒಂದು ಭಾವಗೀತೆಯಂತಿದೆ. ಶ್ರೀಮಂತ ಹೃದಯದ ಕವಿಯೊಬ್ಬ ಮಹಾ

ಕವಿಯೊಬ್ಬನನ್ನು ಕುರಿತು ಬರೆದರೆ ಎಂಥ ಸುಂದರ ಚಿತ್ರಣ ಮೂಡಿ ನಿಂತೀತು ಎನ್ನಲಿಕ್ಕೆ ಮಿರ್ಜಾಗಾಲಿಬ್ ಹೊತ್ತಗೆ ನಿದರ್ಶನ.

ಗಾಲಿಬ್ ಉರ್ದು ಕಾವ್ಯದ ಸಾಮ್ರಾಟ, ಗಜಲ್ ಎನ್ನಬೇಕು ಅವನವೇ! ಇಂದಿಗೂ ಆತನನ್ನು ಮೀರಿಸುವಂತೆ ಗಜಲುಗಳು ಸೃಷ್ಟಿಯಾಗಿಲ್ಲವೆಂದು ಧೈರ್ಯವಾಗಿ ಹೇಳಬಹುದು. ಉರ್ದು ಸಾಹಿತ್ಯವನ್ನು ಅದರಲ್ಲಿಯೂ ಗಾಲಿಬ್ ಮತ್ತು ಎಕ್ಬಾಲರನ್ನು ಆಳವಾಗಿ ಅಭ್ಯಾಸ ಮಾಡಿದವರು ಪುರಾಣಿಕರು. ಅವರ ಅಭ್ಯಾಸದ ಓನಾಮವೇ ಅಲೀಫ್‌ಬೇಯಿಂದ ಪ್ರಾರಂಭವಾಯಿತು. ಉರ್ದು ಫಾರಸಿ ಎರಡನ್ನೂ ಅವರು ಅರಗಿಸಿಕೊಂಡರು. ಆದುದರಿಂದ ಅವರು ಗಾಲಿಬನನ್ನು ಕುರಿತು ಚಿಕ್ಕದೇ ಬರೆಯಲಿ, ದೊಡ್ಡದೇ ಬರೆಯಲಿ, ಅದು ಸಮರ್ಥವಾಗಿರುತ್ತದೆ.

ಗಾಲಿಬನ ಅತಿ ಸಂಕ್ಷಿಪ್ತ ಚರಿತ್ರೆ ಈ ಪುಸ್ತಿಕೆಯಲ್ಲಿದೆ. ಬಹಳವಾದರೆ ಮೂವತ್ತು ನಿಮಿಷಗಳಲ್ಲಿ ಅದನ್ನು ಓದಿ ಮುಗಿಸಬಹುದು. ಆದರೆ ಈ ಮೂವತ್ತು ನಿಮಿಷಗಳಲ್ಲಿ ಒಬ್ಬ ಮಹಾ ಕವಿಯನ್ನು ಕಳೆದುಕೊಂಡಿಲ್ಲ ಎನ್ನುವಂತೆ ಪರಿಚಯಿಸಿಕೊಳ್ಳುತ್ತೇವೆ. ಇದು ಬರೆಹಗಾರನ ದೊಡ್ಡಸಾಧನೆ. ತಿಳಿಯಾದ, ಸರಳವಾದ, ಭಯಪೂರಿತವಾದ ಭಾಷೆ. ಪದಶಯ್ಯೆ ತುಂಬ ಹಿತವಾದುದು. ಕೆಲವು ಕಡೆ ಭಾಷೆ ಪ್ರಾಸಬದ್ಧವಾಗಿ ಸೌಂದರ್ಯ ಹೆಚ್ಚಿಸಿದೆ; ಮಕ್ಕಳಿಗೆ ಇಂಥ ಭಾಷೆ ತುಂಬ ಹಿಡಿಸುವುದು.

ಗಾಲಿಬನ ಜೀವನದಲ್ಲಿ ಅವನಿಗೆ ಬಂದ ಕಷ್ಟ. ಬಡತನ, ಯಾತನೆ, ಧೈರ್ಯ, ದೇವರಲ್ಲಿ ನಂಬುಗೆ, ಹಾಸ್ಯ, ಸೆರೆಮನೆವಾಸ, ಆತ್ಮ ಗೌರವ. ವಿಶ್ವ ಕುಟುಂಬಿತನ ಇವೆಲ್ಲ ಈ ಚಿಕ್ಕ ಹೊತ್ತಗೆಯಲ್ಲಿ ಚೆನ್ನಾಗಿ ಚಿತ್ರಣಗೊಂಡಿವೆ.

ಗಜಲುಗಳ ಅನುವಾದವಂತೂ ತುಂಬ ಸೊಗಸು. ಮೂಲದ ಭಾವ ಮುಕ್ಕಾಗದೆ ಇಡಿಯಾಗಿ ಮೂಡಿ ಬಂದಿದೆ. ಒಂದೆರಡು ಉದಾಹರಣೆ:

ವರದೊರೆವ ವಿಶ್ವಾಸ ನಿನಗಿರೆ ಏನನೂ ಬೇಡಬೇಡ
ಬೇಡದಿಹ ಮನವೊಂದನುಳಿದು ಇನ್ನೇನನೂ ಬೇಡ ಬೇಡ

ಜರಡಿಯಾಗಲಿ ಮನವು ಪೆಟ್ಟು ಬಿದ್ದಂತೆಲ್ಲ
ಹಿಗ್ಗಿರಲಿ ಕುಗ್ಗಿರಲಿ ಸೋರಿ ಹೋಗುವುದೆಲ್ಲ

ಸಿಂಧುವಿನೊಳಳಿಯುವುದೆ ಬಿಂದುವಿನ ಭಾಗ್ಯವು
ನೋವು ಮಿತಿಮೀರುವುದೆ ನೋವಿಗೌಷಧವು

ಕೇಳದಿರು ಕೆಡುಕು ನುಡಿದರೆ ಯಾರಾದರೂ
ಹೇಳದಿರು ಕೆಡುಕುಗೈದರೆ ಯಾರಾದರೂ

ಏಕೆ ಬದುಕಿಹೆ ಗಾಲಿಬ್ ಎನ್ನುವವರೆಲ್ಲ ಅಜ್ಞರು
ಭಾಗ್ಯದಲಿ ಬರೆದಿಹುದು ಸಾಯಲಿಕೆ ಬೇರೊಂದು ದಿವಸ

'ನಜೀರ್ ಅಕ್ಬರಾಬಾದಿ' ಒಂದು ಅನುವಾದ ಕೃತಿ. ಉರ್ದು ಕವಿಯೊಬ್ಬನ ಜೀವನ ಚರಿತ್ರೆ ಮತ್ತು ಕಾವ್ಯಗಳ ವಿಸ್ತಾರವಾದ ಪರಿಚಯ ಇಲ್ಲಿದೆ. ಪ್ರತ್ಯೇಕವಾಗಿ ಅನುವಾದ ಕೃತಿಗಳ ಲೇಖನದಲ್ಲಿ ಈ ಪುಸ್ತಕ ಸಮಾವೇಶ ವಾಗುವುದರಿಂದ ಇದರ ಬಗ್ಗೆ ಇಲ್ಲಿ ಬರೆಯುವುದು ಪ್ರಸ್ತುತವಾಗಲಾರದು. ಅನುವಾದ ಚೆನ್ನಾಗಿ ಬಂದಿದೆಯೆಂದು, ಕನ್ನಡಿಗರಿಗೆ ಉರ್ದು ಕವಿಯೊಬ್ಬನ ಜೀವನ ಮತ್ತು ಕಾವ್ಯಗಳ ಪರಿಚಯ ಮಾಡಿಕೊಡುವುದರಲ್ಲಿ ಪುರಾಣಿಕರು ಸಫಲರಾಗಿದ್ದಾರೆಂದು ಇಲ್ಲಿ ಹೇಳಿದರೆ ಸಾಕು,

ಪುರಾಣಿಕ ಸಿದ್ಧಯ್ಯನವರ ಜೀವನ ಚರಿತ್ರೆಗಳ ಶೈಲಿ ಪ್ರೌಢವಾದುದು, ಹಸನಾದುದು; ಭಾಷೆ ಬನಿಯುಳ್ಳುದು, ಬಂಧುರವಾದುದು; ಅಷ್ಟೆ ಹಿತವಾದುದು. ವಾಕ್ಯದಿಂದ ವಾಕ್ಯಕ್ಕೆ ಮುಂದುವರಿಯುವಾಗ ಓದುಗನಿಗೆ ಸೊಗಸೆನಿಸುತ್ತದೆ. ಆದರೆ ಅವರ ಒಂದು ದೌರ್ಬಲ್ಯವನ್ನು ಹೇಳದಿರಲಿಕ್ಕಾಗದು. ಶಬ್ದದಾರಿದ್ರ್ಯವಿದ್ದವ ಭಾವವನ್ನು, ವಿಚಾರವನ್ನು ಸಮರ್ಥಿಸುವಲ್ಲಿ ಕೆಟ್ಟರೀತಿಯಿಂದ ಸೋಲುತ್ತಾನೆ. ಶಬ್ದಸಂಪತ್ತುಳ್ಳವ ಒಮ್ಮೊಮ್ಮೆ ಧಾರಾಳತನದಿಂದ ಸೋಲುವ ಪ್ರಸಂಗ ತಂದುಕೊಳ್ಳುತ್ತಾನೆ. ಅನೇಕ ಕಡೆ ಶಬ್ದಗಳ ಧಾರಾಳತನದಿಂದ ಪುರಾಣಿಕರ ಶೈಲಿ ಝಗ್ಗನೆ ಮಿಂಚಿದರೂ ಸೋಲುವ ಪ್ರಸಂಗಗಳುಇಲ್ಲದಿಲ್ಲ. ಸರಳವಾದದು ಬಿಗಿಯಾಗಿ, ಸುಲಭವಾದುದು ಜಿಗುಟಾಗಿ ಹೋಗದೆ ಇಲ್ಲ. ಸರಳವಾಗಿ ಪದರು ಪದರಾಗಿ ಅರ್ಥ ಬಿಚ್ಚಿಕೊಳ್ಳುತ್ತ ಹೋಗುವಾಗ ಆಲಂಕಾರಿಕ ಭಾಷೆಯಿಂದ, ಶಬ್ದಗಳು ಬುಗ್ಗೆಯಾಗಿ ಚಿಮ್ಮುವುದರಿಂದ ಅರ್ಥ ಮುದುರಿಕೊಳ್ಳುವುದೂ ಉಂಟು. ಆದರೆ ಇದೇ ಧಾರಾಳತನ ಒಮ್ಮೊಮ್ಮೆ ಅರ್ಥ ಸಂಪತ್ತಿಯನ್ನು ಹೆಚ್ಚು ಮಾಡುವುದೂ ಉಂಟು. ಈ ವೈಚಿತ್ರ್ಯ ಇವರ ಶೈಲಿಯ, ಇವರ ಭಾಷೆಯ ಒಂದು ವಿಶೇಷ ಗುಣ.

# ಐತಿಹಾಸಿಕ ಕಾದಂಬರಿ : ಒಂದು ಟಿಪ್ಪಣಿ

('ತ್ರಿಭುವನಮಲ್ಲ' ಕಾದಂಬರಿಯ ಸಂಬಂಧದಲ್ಲಿ)

ಪ್ರೊ|| ಎಲ್. ಎಸ್. ಶೇಷಗಿರಿರಾವ್

ಸಿದ್ಧಯ್ಯ ಪುರಾಣಿಕರ 'ತ್ರಿಭುವನ ಮಲ್ಲ' ಒಂದು ಐತಿಹಾಸಿಕ ಕಾದಂಬರಿ. ಶಕಪುರುಷ ಆರನೆಯ ವಿಕ್ರಮಾದಿತ್ಯ ಇದರ ನಾಯಕ. ಕನ್ನಡನಾಡಿನ ಚರಿತ್ರೆಯನ್ನು ಓದಿದವರಿಗೆಲ್ಲ ಈ ವಿಕ್ರಮಾದಿತ್ಯನ ಹೆಸರು ಸುಪರಿಚಿತ. ಇವನ ಅಣ್ಣ ಎರಡನೆಯ ಸೋಮೇಶ್ವರ. ಆದರೂ ವಿಕ್ರಮಾದಿತ್ಯನೇ ರಾಜನಾಗಲು ಅರ್ಹನಾಗಿದ್ದವನು. ಅಣ್ಣ ಸ್ವಲ್ಪ ಕಾಲ ರಾಜ್ಯವಾಳಿದನಂತರ ತಾನೇ ಸಿಂಹಾಸನವನ್ನು ಏರಿ ಶತ್ರುಗಳನ್ನು ಸದೆ ಬಡಿದ ಚೋಳರು ಲಾಟರು ಮತ್ತು ಉಚ್ಚಂಗಿಯ ಪಾಂಡ್ಯರು ಈ ಕಲ್ಯಾಣ ಚಾಲುಕ್ಯ ಕುಲತಿಲಕನ ಮುಂದೆ ಸೋಲನ್ನೊಪ್ಪಬೇಕಾಯಿತು. ಇವನ ಆಳ್ವಿಕೆಯ ಕಡೆಯ ಭಾಗದಲ್ಲಿಯೆ ಚಾಳುಕ್ಯರ ಅವನತಿಯೂ ಪ್ರಾರಂಭವಾಯಿತು.

ಸಾಮ್ರಾಟ ಸೋಮೇಶ್ವರ, ಸಾಮ್ರಾಜ್ಞಿ ಬಾಚಲದೇವಿ ಮಗನನ್ನು ಪಡೆಯುವ ಹಂಬಲದಿಂದ ಪರಶಿವನ ಸೇವೆಯಲ್ಲಿ ತೊಡಗಿರುವಾಗ ಕಾದಂಬರಿಯ ಕ್ರಿಯೆ ಪ್ರಾರಂಭವಾಗುತ್ತದೆ. ಅವರಿಗೆ ಮೂವರು ಗಂಡುಮಕ್ಕಳಾಗುತ್ತಾರೆ. ಸೋಮೇಶ್ವರ, ವಿಕ್ರಮಾದಿತ್ಯ, ಜಯಸಿಂಹ. ಶಸ್ತ್ರವಿದ್ಯಾ ಪ್ರದರ್ಶನದಲ್ಲಿ ಸೋಮೇಶ್ವರನಿಗೆ ವಿಕ್ರಮಾದಿತ್ಯನ ವಿಷಯದಲ್ಲಿ ಅಸೂಯೆ ಮೂಡಿದುದು ಕ್ರಮೇಣ ಅವನ ಮನಸ್ಸನ್ನು ಆವರಿಸುತ್ತದೆ. ತಂದೆ ತೀರಿಕೊಂಡ ಮೇಲೆ ಸಿಂಹಾಸನವನ್ನೇರಿದ ಸೋಮೇಶ್ವರ ತಮ್ಮಂದಿರಲ್ಲಿ ಹಗೆತನವನ್ನೇ ಸಾಧಿಸುತ್ತಾನೆ. ತಮ್ಮಂದಿರು ವಿನಯ ಸೌಜನ್ಯಗಳಿಂದಲೇ ನಡೆದುಕೊಳ್ಳುತ್ತಾರೆ. ಆದರೆ ಅಣ್ಣನು ರಾಜ್ಯದ ಹಿತವನ್ನೆ ಬಲಿ ಕೊಡಲು ಹೊರಟಾಗ ತಂದೆ ಹೇಳಿದ ಮಾತುಗಳು ವಿಕ್ರಮಾದಿತ್ಯನ ಕಿವಿಯಲ್ಲಿ ಮೊರೆಯುತ್ತವೆ—"ನಿನ್ನ ಭ್ರಾತೃವಾತ್ಸಲ್ಯವನ್ನೂ ಬದಿಗೊತ್ತಿ ಚಾಲುಕ್ಯ ಸಾಮ್ರಾಜ್ಯವನ್ನು ರಕ್ಷಿಸು". ತನ್ನ ಕರ್ತವ್ಯವನ್ನು ಪರಿಪಾಲಿಸಿ, ಅಣ್ಣನನ್ನು ಬದಿಗೊತ್ತಿ ಸಿಂಹಾಸನವನ್ನು ಏರುತ್ತಾನೆ. ಅಲ್ಲಿಂದ ಮುಂದೆ ಅವನಿಗೆ ವಿಜಯದ ಪರಂಪರೆಯೆ. ಜೊತೆಗೆ ಪ್ರಜೆಗಳ ಹೃದಯಗಳನ್ನೂ ಗೆಲ್ಲುವ ಸಕಲ ಸದ್ಗುಣಗಳ ಆಗರ ಅವನು. ಅವನಿಗೂ ಮೋಸಮಾಡಿದವರುಂಟು; ಅವನಿಗೂ ಸಾವಿನಿಂದ ವಿಯೋಗ ಉಂಟು

ಆದರೆ ಒಟ್ಟಿನಲ್ಲಿ ಅವನು ವಿಜಯದಿಂದ ವಿಜಯಕ್ಕೆ ಸಂತಸದಿಂದ ಸಂತಸಕ್ಕೆ ಸಾಗುತ್ತಾನೆ. ಕವಿ ಬಿಲ್ಹಣ ಅವನನ್ನು ಹಾಡಿ ಹೊಗಳುತ್ತಾನೆ. ಹೊಯ್ಸಳ ವಿಷ್ಣುವರ್ಧನನಿಂದ ತನ್ನ ವಂಶದ ಪ್ರಭೆ ಮಸುಳಬಹುದೆಂಬ ಶಂಕೆ ವೃದ್ಧ ವಿಕ್ರಮಾದಿತ್ಯನಿಗೆ. ಆದರೆ ಅವನ ಗುರು ಸಮಾಧಾನ ಹೇಳುತ್ತಾನೆ.

ವಿಕ್ರಮಾದಿತ್ಯ ಈ ಕೃತಿಯಲ್ಲಿ ಪರಿಪೂರ್ಣತೆಯ ಜೀವಂತ ಮೂರ್ತಿ. ರಾಜನಾಗಿ, ಮಗನಾಗಿ, ಗಂಡನಾಗಿ, ವ್ಯಕ್ತಿಯಾಗಿ ಅವನು ಪರಿಪೂರ್ಣ. ಕಾದಂಬರಿಯಲ್ಲಿ ಕಾಣುವುದು ಆರಾಧನೆಯ ಮನೋಭಾವ. ಕೃತಿಯ ಭಾಷೆಯೇ ಈ ಪೂಜೆಯ ಸಂಭ್ರಮವನ್ನು ತೋರಿಸುತ್ತದೆ. ಇತರ ಪಾತ್ರಗಳು ಅವನ ವಿಷಯ ಮಾತನಾಡುವ ರೀತಿ ಇರಲಿ, ಕಾದಂಬರಿಕಾರರೇ ನೇರವಾಗಿ ಅವನ ವಿಷಯ ಮಾತನಾಡುವಾಗಲೂ ಅಭಿಮಾನ—ಆರಾಧನೆಗಳು ಉಕ್ಕುತ್ತವೆ: "ಪಟ್ಟಮಹಿಷಿಯೂ ಪರಿಜನರೂ ವಿಕ್ರಮನ ಗಂಡಗಾಡಿಯನ್ನೂ, ಗುಣ ವೈಭವವನ್ನೂ, ಪರಾಕ್ರಮವನ್ನು ಪಸರಿಸುತ್ತಿದ್ದ ಗಂಭೀರ ಮುಖಮುದ್ರೆಯನ್ನೂ ನೋಡಿ ಹಿರಿಹಿರಿ ಹಿಗ್ಗಿದರು", "ಅವನ ಖಡ್ಗ ಪ್ರಹಾರವನ್ನು ತಡೆದು ನಿಲ್ಲಬಲ್ಲ ಗಂಡು ಯಾರು? ಅವನ ಕಿಡಿಕಾರುವ ಕಣ್ಣುಗಳಿಗಿದಿರಾಗಿ ನಿಲ್ಲಬಲ್ಲ ಗಟ್ಟಿಗ ಯಾರು? ಅವನ ದೋರ್ಬಲದ ದಹಿಸುವ ದಳ್ಳುರಿಗೆ ಆಹುತಿಯಾಗದೆ ಉಳಿಯಬಲ್ಲವರು ಯಾರು" "ಎಲ್ಲರಂಥವನಲ್ಲ ಈ ಗಂಡ, ವೀರ ಮಾರ್ತಾಂಡ!" "ಕುಂದಣವಿಲ್ಲದ ಉಂಗುರದಂತಿದ್ದ ಕಲ್ಯಾಣಕ್ಕೆ ಕುಂದಣವಾದ ವಿಕ್ರಮ ಅಂದಿನಿಂದ". ಅವನ ಬಿರುದುಗಳು–ಸಮಸ್ತಭುವನಾಶ್ರಯ, ಚಾಲುಕ್ಯಾಭರಣ, ಶ್ರೀಮತ್ತ್ರಿಭುವನಮಲ್ಲ—ಎಲ್ಲ ಅರ್ಥವತ್ತಾದುವು. ಬಿಲ್ಹಣನು ಅವನನ್ನು ಹೊಗಳುವುದೆಲ್ಲ ಅಕ್ಷರಶಃ ಸತ್ಯ. ಅವನ ರಾಜ್ಯದಲ್ಲಿ ಕಾಲಕಾಲಕ್ಕೆ ಮಳೆ; ಕಳ್ಳಕಾರರರಿಲ್ಲ; ಬಾಗಿಲುಗಳಿಗೆ ಬೀಗಗಳು ಬೇಕಿಲ್ಲ ; ಅವನು ಸರ್ವಧರ್ಮಗಳಿಗೂ ಭಕ್ತಿ ಗೌರವಗಳನ್ನು ಸಲ್ಲಿಸುವ ವಿಶಾಲ ಹೃದಯ; ಇತ್ಯಾದಿ, ಇತ್ಯಾದಿ.

ಎರಡು ರೀತಿಗಳಲ್ಲಿ ಕೃತಿ ಅತೃಪ್ತಿಯನ್ನುಂಡುಮಾಡುತ್ತದೆ. ಕಾದಂಬರಿಯಾಗಿ, ಇದು ಮನುಷ್ಯ ಸ್ವಭಾವವನ್ನು ಕಲ್ಪನೆಯ ಕಣ್ಣಿನಿಂದ ಕಾಣಿಸುವುದಿಲ್ಲ. ಇಲ್ಲಿ ಬಹು ಪಾತ್ರಗಳು ಪರಿಪೂರ್ಣ—ವಿಕ್ರಮಾದಿತ್ಯ, ಅವನ ತಂದೆ, ತಾಯಿ, ಗುರು, ಪತ್ನಿಯರು ಎಲ್ಲ. ಆದರ್ಶ ಪುರುಷ, ಆದರ್ಶ ತಂದೆ, ಆದರ್ಶ ತಾಯಿ, ಆದರ್ಶ ಗುರು, ಆದರ್ಶ ಪತ್ನಿ ಎಂದು ಹೇಳಿದರೆ ಇವರ ವಿಷಯ ಹೇಳಬೇಕಾದುದನ್ನೆಲ್ಲ ಹೇಳಿದಂತಾಯಿತು. ಇವರಿಗೆ ವೈಶಿಷ್ಟ್ಯವಿಲ್ಲ, ಒಳನೋಟ ಇಲ್ಲ, ತಮ್ಮವೇ ಆದ ಆಸೆಗಳು, ಭಾವನೆಗಳು, ಓರೆಕೋರೆಗಳು ಇಲ್ಲ. ಯಾವ ಸಂದರ್ಭದಲ್ಲಾದರೂ ಇವರು ಏನು ಮಾಡುತ್ತಾರೆ ಎನ್ನುವುದು ಮಾತ್ರವಲ್ಲ, ಯಾವ ಶಬ್ದಗಳನ್ನು ಬಳಸುತ್ತಾರೆ ಎನ್ನುವುದೂ ಗೊತ್ತು. ಇಲ್ಲಿನ ಶೈಲಿ ಬಹುಮಟ್ಟಿಗೆ **Stylinzd** , ಸಿದ್ಧ ಮಾಡಿಟ್ಟ ಶೈಲಿ. ಹಲವು ಅಧ್ಯಾಯಗಳಲ್ಲಿ ಕೇಳುವ ಸಾರ್ವಜನಿಕ ಭಾಷಣಗಳಿಗೂ

ಆತ್ಮೀಯ ಮಾತುಕಥೆಗೂ ಭಾಷೆಯಲ್ಲಿ ವ್ಯತ್ಯಾಸವಿಲ್ಲ, "ಇಲ್ಲಿ (ಚಾಳುಕ್ಯ ಸಾಮ್ರಾಜ್ಯದಲ್ಲಿ) ಎಲ್ಲರೂ ಸೋದರಭಾವದೊಡನೆ ಸಮ್ಮಿಳನರಾಗಿ, ಪರಸ್ಪರ ಪೂರಕರಾಗಿ, ಸ್ವಮತ ನಿಷ್ಠೆ, ಪರಮತ ಸಹಿಷ್ಣುತೆಯ ಸುವರ್ಣ ಸೂತ್ರವನ್ನು ಕೈಬಿಡದೆ, ಸಮನ್ವಯ ದೃಷ್ಟಿಯನ್ನು ಕಳೆದುಕೊಳ್ಳದೆ 'ಅವಿಭಕ್ತಂ ವಿಭಕ್ತೇಷು' ಎಂಬ ಆರ್ಷೇಯ ತತ್ವವನ್ನು ಮರೆಯದೆ, ನಾನಾತ್ವದಲ್ಲಿಯೂ ಏಕತ್ವವನ್ನು ಕಾಪಾಡಿಕೊಂಡು ಸವಿತುಂಬಿದ ಸಮೃದ್ಧ ಜೀವನವನ್ನು ನಡೆಸಿ ಇಹ ಪರಗಳೆರಡರಲ್ಲಿಯೂ ಸಫಲರಾಗಬೇಕೆಂಬುದೇ ನನ್ನ ರಾಷ್ಟ್ರನೀತಿ"–ಇದು ಕಾದಂಬರಿಯಲ್ಲಿ ಸಾರ್ವಜನಿಕ ಭಾಷಣವಲ್ಲ, ಗಂಡ ಹೆಂಡತಿಯೊಡನೆ ಮಾತನಾಡುವ ರೀತಿ. ವಿಶ್ಲೇಷಣೆಯಾಗಲಿ, ಸೂಕ್ಷ್ಮತೆಯಾಗಲಿ ಪಾತ್ರ ನಿರೂಪಣೆಯಲ್ಲಿ ಕಾಣಲು ಇಲ್ಲಿ ಅವಕಾಶವೇ ಇಲ್ಲ. ಎರಡನೆಯದಾಗಿ, ಇಲ್ಲಿನ ಮೌಲ್ಯಗಳು ನಾವು ಸಾಮಾನ್ಯವಾಗಿ 'ಫ್ಯೂಡಲ್' ಎನ್ನುವ ಮೌಲ್ಯಗಳು. ಇಲ್ಲಿ ಪ್ರಜೆಗಳಿಗೆ ವಿಕ್ರಮಾದಿತ್ಯನನ್ನು ಕಂಡರೆ ಹರ್ಷದ ಕಣ್ಣೀರು ಹರಿಯುತ್ತದೆ. ಕಾದಂಬರಿ ಎಲ್ಲ ವೈಯಕ್ತಿಕ ಘರ್ಷಣೆಗಳ ಮಟ್ಟದಲ್ಲೆ ಬಹುಮಟ್ಟಿಗೆ ನಡೆಯುತ್ತದೆ. ವಿಕ್ರಮಾದಿತ್ಯ ರಾಜನಾಗುತ್ತಲೆ ಕಾಲಕಾಲಕ್ಕೆ ಮಳೆ ಬರಲು ಪ್ರಾರಂಭವಾಯಿತು. ಅಕಾಲ ಮರಣಗಳಿರಲಿಲ್ಲ. ಇಂತಹ ವರ್ಣನೆ ತೀರ ಅವಾಸ್ತವಿಕ. ಅವನು ಶ್ರೇಷ್ಠ ರಾಜನಾಗಿ ಆಡಳಿತವನ್ನು ಸುಧಾರಿಸಿದ, ಪ್ರಜೆಗಳಿಗಾಗಿ ಬದುಕಿದ ಎಂಬುದನ್ನು ಒಪ್ಪೋಣ. ಆದರೂ ಆತನು ಪ್ರಜೆಗಳ 'ಹೃದಯಾಕಾಶದ ಆದಿತ್ಯನಾಗಿ' ಬಿಡುವುದು ಇಂತಹ ವರ್ಣನೆಗಳು ಇಂದಿನ ಅಭಿರುಚಿಗೆ ನುಂಗಲಾರದ ತುತ್ತಾಗುತ್ತವೆ. ಅಲ್ಲದೆ ತನ್ನ ಜೀವನದುದ್ದಕ್ಕೂ ವಿಕ್ರಮಾದಿತ್ಯ ಬಡವರಿಗೆ, ರಾಜಮನೆತನದಲ್ಲಿ ಹುಟ್ಟದಿದ್ದವರಿಗೆ ಹಿರಿಯ ಪದವಿಗಳನ್ನಾಗಲಿ ಸಿಂಹಾಸನವನ್ನಾಗಲಿ ಕೊಡುವ ಯೋಚನೆ ಮಾಡುವುದಿಲ್ಲ. ರಾಜ ಮನೆತನದಲ್ಲಿ ಹುಟ್ಟುವ ಭಾಗ್ಯಕ್ಕೆ ಸಾಕಷ್ಟು ಮನ್ನಣೆ ಇಲ್ಲಿದೆ.

ಆದರೆ ಇಂತಹ ಕೃತಿಗಳನ್ನು ಪರಿಶೀಲಿಸುವಾಗ ಗಮನಿಸಬೇಕಾದ ಅಂಶ ಒಂದಿದೆ. ಯಾವ ಸಾಹಿತ್ಯಕೃತಿಯನ್ನೇ ಆಗಲಿ ಅಭ್ಯಾಸ ಮಾಡುವಾಗ ಅದು ಸೃಷ್ಟಿಯಾದ ಸಾಮಾಜಿಕ ಸಂದರ್ಭವನ್ನು ಗಮನಿಸಲೇಬೇಕು. ಭಾರತದಂತಹ ಅಭಿವೃದ್ಧಿಶೀಲ ದೇಶಗಳಲ್ಲಿ ಒಂದು ವಿಶಿಷ್ಟ ಅಗತ್ಯವಿದೆ. ಇದು ದೇಶದ ಚರಿತ್ರೆಯನ್ನು ಪರಂಪರಾಗತ ಮೌಲ್ಯಗಳನ್ನೂ ಜನತೆಗೆ ಜೀವಂತ ಮಾಡಿ ಕೊಡುವುದು. ಭಾರತದ ಮಟ್ಟಿಗೆ ಹೇಳುವುದಾದರೆ, ಇಲ್ಲಿ ಚರಿತ್ರೆಯನ್ನು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ತಿಳಿಸಿಕೊಡುವ ರೀತಿ ನಾಚಿಕೆಗೇಡೇ. ಚರಿತ್ರೆಯ ಅಭ್ಯಾಸಕ್ಕೆ ಮಹತ್ವವಿಲ್ಲ; ಚರಿತ್ರೆಯ ಪುಸ್ತಕಗಳನ್ನು ಬರೆಯುವಾಗ ಅಥವಾ ಹೇಳಿಕೊಡುವಾಗ ಸಮಗ್ರವಾಗಿ ಅನ್ವಯಿಸುವ ಚಿಂತನ ಮಾರ್ಗವಿಲ್ಲ; ಇದರಿಂದ ಚರಿತ್ರೆಗೆ ಅರ್ಥ ನಿರ್ಧರಿಸುವ ಪ್ರಯತ್ನವಿಲ್ಲ. ಚರಿತ್ರೆಯನ್ನು ಓದುವುದು, ಹೇಳಿಕೊಡುವುದು ಒಂದು ಅರ್ಥಹೀನ ಕಸರತ್ತಾಗುತ್ತಿದೆ. ಇಂತಹ ರಾಷ್ಟ್ರೀಯ ಸಂದರ್ಭದಲ್ಲಿ ಇಲ್ಲಿನ ಚರಿತ್ರೆಯನ್ನು ರೂಪಿಸಿದ ಮಹಾನ್ ವ್ಯಕ್ತಿಗಳನ್ನು ಜನಮನದಲ್ಲಿ ಪ್ರತಿಷ್ಠಾಪಿಸಲು ಸಾಹಿತ್ಯ ಪ್ರಯತ್ನಿಸುವುದು ಅಗತ್ಯ

ವಾಗುತ್ತದೆ. ರಾಷ್ಟ್ರದ ಪುನರ್ ನಿರ್ಮಾಣದ ಯುಗದಲ್ಲಿ ರಾಷ್ಟ್ರದ ಪರಂಪರೆಯನ್ನು ನೆನಪು ಮಾಡಿಕೊಡಲು ಪ್ರಯತ್ನಿಸುವುದು ಅಗತ್ಯವಾಗುತ್ತದೆ. 'ತ್ರಿಭುವನಮಲ್ಲ' ಕಾದಂಬರಿಯಿಂದಲೇ ಒಂದು ಅಂಶದ ನಿದರ್ಶನವನ್ನು ತೆಗೆದುಕೊಳ್ಳಬಹುದು. ಸ್ವತಃ ಏನನ್ನೂ ಬಯಸದೆ, ಪ್ರಾಮಾಣಿಕ ವೈರಾಗ್ಯವನ್ನು ಜೀವದುಸಿರನ್ನಾಗಿ ಮಾಡಿಕೊಂಡು, ಆದರೂ ವ್ಯಾವಹಾರಿಕ ಜೀವನದಿಂದ ದೂರ ಸಾಗದೆ, ರಾಜಮನೆತನಕ್ಕೆ ಪೂಜ್ಯ ಸ್ಥಾನದಲ್ಲಿದ್ದು ವಿವೇಕದ ಮಾರ್ಗವನ್ನು ತೋರುವ ಆಚಾರ್ಯರ ವಿಶಿಷ್ಟ ಪರಂಪರೆ ಇಲ್ಲಿದೆ. ಯೂರೋಪಿನಲ್ಲಿ ನಡೆದಂತೆ ಈ ದೇಶದಲ್ಲಿ ಧಾರ್ಮಿಕ ಮತ್ತು ಲೌಕಿಕ ನಾಯಕರಲ್ಲಿ ಸ್ಪರ್ಧೆ, ಘರ್ಷಣೆ ನಡೆದಿಲ್ಲ. ಧಾರ್ಮಿಕ ಹಿರಿಯರು ಸೈನ್ಯಗಳನ್ನು ಕಟ್ಟಿಕೊಂಡು ಆಡಳಿತದಲ್ಲಿ ಪ್ರವೃತ್ತರಾಗಿ ರಾಜ–ರಾಜರ ಯುದ್ಧಗಳ ಉರಿಗೆ ಎಣ್ಣೆ ಹೊಯ್ದುದ್ದೂ ಇಲ್ಲಿಲ್ಲ. (ಪುರೋಹಿತ ಮತ್ತು ರಾಜರ ಸ್ನೇಹ ಜನಸಾಮಾನ್ಯದ ಸುಲಿಗೆಯ ರಾಜಮಾರ್ಗ ಎಂಬ ವಾದ ಇದೆ ಎನ್ನುವುದನ್ನು ನಾನು ಗಮನಿಸಿದ್ದೇನೆ. ಆದರೆ ಇದು ಸರ್ವಕಾಲಿಕ ಸತ್ಯ ಎಂದು ನನಗೆ ತೋರುವುದಿಲ್ಲ. ನಾನಿಲ್ಲಿ ಪ್ರಸ್ತಾಪಿಸುತ್ತಿರುವುದು ಈ ಪರಂಪರೆಯ ಶ್ರೇಷ್ಠ ಅಂಶವನ್ನು.) 'ತ್ರಿಭುವನಮಲ್ಲ'ದಲ್ಲಿ ಗುರು ವಿಜ್ಞಾನೇಶ್ವರರು ಈ ಪರಂಪರೆಯ ಪ್ರತಿನಿಧಿ. ರಾಜನು ಪ್ರತ್ಯಕ್ಷ ದೈವ ಎಂದು ಪೂಜಿಸುವ ಪರಂಪರೆ ಇಲ್ಲಿಯದು ಎಂದು ಆಕ್ಷೇಪಿಸುವುದುಂಟು. ಆದರೆ ರಾಜನ ಹೊಣೆಯನ್ನೂ ('ರಾಜ' ಎಂದರೆ ಆಡಳಿತ ನಡೆಸುವ ಯಾರೇ ಆಗಬಹುದು) ಇದೇ ಪರಂಪರೆ ಒತ್ತಿ ಹೇಳಿತು. ಸೋಮೇಶ್ವರನನ್ನು ರಾಜ್ಯದ ಹಿತದ ದೃಷ್ಟಿಯಿಂದ ಕೆಳಕ್ಕಿಳಿಸುವುದು ಅಗತ್ಯ ಮತ್ತು ಧರ್ಮಕಾರ್ಯ ಎಂದು ವಿಜ್ಞಾನೇಶ್ವರರೇ ಹೇಳುತ್ತಾರೆ. ಸಮಷ್ಟಿ ಹಿತವನ್ನು ಪ್ರಭುವಾದವನು ವೈಯಕ್ತಿಕ ಹಿತ ಮತ್ತು ಸೌಖ್ಯಗಳಿಗಿಂತ ಬಹು ಮೇಲಿರಿಸುವುದು, ಎಲ್ಲ ಧರ್ಮಗಳಲ್ಲಿ ಗೌರವ ಇಂತಹ ಮೌಲ್ಯಗಳು, ಈ ದೇಶ ಎತ್ತಿ ಹಿಡಿದ ಮೌಲ್ಯಗಳು, ವಿಕ್ರಮಾದಿತ್ಯನ ಬಾಳಿನಲ್ಲಿ ಪ್ರಜ್ವಲಿಸುತ್ತವೆ.

ರಾಷ್ಟ್ರದ ಸಂದರ್ಭದಲ್ಲಿ ಕಾದಂಬರಿ ಒಂದು ಅಗತ್ಯವನ್ನು ಪೂರೈಸುತ್ತದೆ. ಈ ಅಗತ್ಯವಾದರೂ ಅಲ್ಪವಾದುದಲ್ಲ. ಈ ದೃಷ್ಟಿಯಿಂದ ಶ್ರೀ ಸಿದ್ಧಯ್ಯ ಪುರಾಣಿಕರ ಈ ಕಾದಂಬರಿಗೆ ಬೆಲೆಯುಂಟು.

ಇಂತಹ ಕಾದಂಬರಿ ನಮ್ಮ ಮುಂದೆ ಐತಿಹಾಸಿಕ ಕಾದಂಬರಿ ಎಂದರೇನು ? ಇದರಿಂದ ನಾವು ನಿರೀಕ್ಷಿಸುವುದೇನು ? ಎಂಬ ಪ್ರಶ್ನೆಗಳನ್ನು ಒಡ್ಡುತ್ತದೆ.

ಕ್ರಿಯೆಯನ್ನು ಒಂದು ಐತಿಹಾಸಿಕ ಸಂದರ್ಭದಲ್ಲಿ ಇಟ್ಟ ಮಾತ್ರಕ್ಕೆ ಕಾದಂಬರಿ ಐತಿಹಾಸಿಕ ಕಾದಂಬರಿ ಆಗುವುದಿಲ್ಲ ಎಂದು ಹೇಳಬೇಕಾಗಿಲ್ಲ. ಸಾಹಿತ್ಯ ನಮಗೆ ಕೊಡುವುದು ಬಾಳಿನಲ್ಲಿ ನಿರತನಾದ ಮನುಷ್ಯನನ್ನು. ಮನುಷ್ಯ–ಮನುಷ್ಯರ ಸ್ವಭಾವ ಭಿನ್ನವಾಗಿರುವುದರಿಂದ, ಮತ್ತು ಬಾಳಿನಲ್ಲಿ ಯಾವ ಎರಡು ಸಂದರ್ಭಗಳು

ಐಡೆಂಟಿಕಲ್ ಆಗಿ– ಎಲ್ಲ ರೀತಿಗಳಲ್ಲಿ ಒಂದೇ ಆಗಿ–ಇರುವುದಿಲ್ಲವಾದುದರಿಂದ ಯಾವ ಸಾಹಿತ್ಯ ಕೃತಿಯೇ ಆಗಲಿ ವ್ಯಕ್ತಿಯ ಸ್ವಭಾವವನ್ನು ಎಷ್ಟು ಸೂಕ್ಷ್ಮವಾಗಿ ಚಿತ್ರಿಸಿದರೆ, ಸಂದರ್ಭವನ್ನು ಕೃತಿಯ ಉದ್ದೇಶದ ದೃಷ್ಟಿಯಿಂದ ಎಷ್ಟು ಸಮಗ್ರವಾಗಿ ನಿರೂಪಿಸಿದರೆ, ಅಷ್ಟೂ ಅದು ಸಂವಹನ ಮಾಡುವ ಅನುಭವಕ್ಕೆ ಬೆಲೆ ಬರುತ್ತದೆ.

ಒಬ್ಬ ಕಾದಂಬರಿಕಾರ ಐತಿಹಾಸಿಕ ಕಾದಂಬರಿಯ ಮಾಧ್ಯಮವನ್ನು ಆರಿಸಿಕೊಂಡರೆ, ಈ ಆಯ್ಕೆಯ 'ಇಂಪ್ಲಿಕೇಷನ್'–ಅದರ ಗರ್ಭದಲ್ಲಿ ಬರುವ ಪರಿಣಾಮ–ಏನು ? ಐತಿಹಾಸಿಕ ಕಾದಂಬರಿ ಒಂದು ವ್ಯವಸ್ಥೆಯ ನಿರೂಪಣೆಯನ್ನು ಅನಿವಾರ್ಯ ಮಾಡುತ್ತದೆ. (ಇಲ್ಲಿ 'ವ್ಯವಸ್ಥೆ' ಎನ್ನುವುದು ನಿಜವಾಗಿ 'ವ್ಯವಸ್ಥೆಗಳ ವ್ಯವಸ್ಥೆ', 'ವ್ಯವಸ್ಥೆಗಳ ಸಮೂಹ'. ಏಕೆಂದರೆ ಯಾವ ಒಂದು ಕಾಲದಲ್ಲಿ ಆದರೂ ರಾಜಕೀಯ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆ, ಕೌಟುಂಬಿಕ ವ್ಯವಸ್ಥೆ ಇಂತಹ ಹಲವಾರು ವ್ಯವಸ್ಥೆಗಳು ಏಕಕಾಲದಲ್ಲಿ ವ್ಯಕ್ತಿಯ ಮೇಲೆ ಪ್ರಭಾವ ಬೀರುತ್ತಿರುತ್ತವೆ. ಅವನು ಯಾವುದಾದರೊಂದು ಪ್ರಮಾಣದಲ್ಲಿ ಹಲವು ವ್ಯವಸ್ಥೆಗಳಲ್ಲಿ ಅಳವಟ್ಟಿರುತ್ತಾನೆ ಅದಕ್ಕೆ ಪ್ರತಿಕ್ರಿಯೆ ತೋರಿಸುತ್ತಿರುತ್ತಾನೆ.) ಒಂದು ಯುಗ ಮತ್ತೊಂದು ಯುಗದಿಂದ ಭಿನ್ನವಾಗಿರುವುದು ಅದರ ವ್ಯವಸ್ಥೆಗಳ ಸ್ವರೂಪದಲ್ಲಿ. ಈ ವ್ಯವಸ್ಥೆಗಳು ಯುಗಧರ್ಮವನ್ನು ಪ್ರಕಟಿಸುತ್ತವೆ. ಆರಿಸಿಕೊಂಡ ಮುಖ್ಯ ಪಾತ್ರ (ಅಥವಾ ಪಾತ್ರಗಳು) ಮತ್ತು ಚರಿತ್ರೆಯನ್ನು ಅರ್ಥೈಸುವ ರೀತಿ (ಇದನ್ನು ಕುರಿತು ಮುಂದೆ ವಿವರಿಸಿದೆ) ಇವಕ್ಕೆ ಪ್ರಸ್ತುತವಾಗುವಷ್ಟು ವ್ಯವಸ್ಥೆಗಳನ್ನು ಕೃತಿ ಒಳಗೊಳ್ಳಬೇಕಾಗುತ್ತದೆ. ಒಬ್ಬ ಯುಗಪುರುಷನೆಂದು ಭಾವಿಸುವ ವ್ಯಕ್ತಿಯನ್ನು ನಾಯಕನೆಂದು ಆರಿಸಿದಾಗ ಕಾದಂಬರಿಕಾರನ ಕೆಲಸ ಗುರುತರವಾಗುತ್ತದೆ. ಏಕೆಂದರೆ ನಾಯಕನ ಜೀವನ ಸಮಕಾಲೀನ ಎಲ್ಲ ವ್ಯವಸ್ಥೆಗಳನ್ನು ಮುಟ್ಟುತ್ತದೆ, ಅವುಗಳಿಂದ ಪ್ರಭಾವಿತವಾಗುತ್ತದೆ ಮತ್ತು ಅವುಗಳ ಮೇಲೂ ಪ್ರಭಾವ ಬೀರುತ್ತದೆ. ಆದುದರಿಂದ ಐತಿಹಾಸಿಕ ಕಾದಂಬರಿಯಲ್ಲಿ ಕ್ರಿಯೆಯ ಯುಗದ ಪುಸರ್‌ಸೃಷ್ಟಿಯಾಗಬೇಕಾಗುತ್ತದೆ. ರಾಜ್ಯದ ಅಥವಾ ರಾಷ್ಟ್ರದ ಜೀವನದಲ್ಲಿ ಮುಖ್ಯವಾದ ಎಲ್ಲ ವ್ಯವಸ್ಥೆಗಳ ಮತ್ತು ಅವುಗಳ ಪರಸ್ಪರ ಸಂಬಂಧಗಳ ದರ್ಶನವಾಗಬೇಕಾಗುತ್ತದೆ. ಅರಸೊತ್ತಿಗೆ ಪ್ರಧಾನವಾದ ಯುಗವನ್ನು ಆರಿಸಿಕೊಂಡಾಗ ಅರಸ ಆದರ್ಶ ಪುರುಷ ಎಂದೇ ಭಾವಿಸಿದರೂ ಹಲವು ಪ್ರಶ್ನೆಗಳು ಉದ್ಭವಿಸುತ್ತವೆ. ಅರಸನ ಸಂಪತ್ತಿನ ಮೂಲ ಯಾವುದು ? ಆಡಳಿತಕ್ಕೆ ಅವನಿಗೆ ಹಣ ತಂದುಕೊಡುತ್ತಿದ್ದ ವ್ಯವಸ್ಥೆ ಯಾವುದು ? ಈ ಸಂಪತ್ತಿನ ಬಳಕೆ ಹೇಗೆ ? ಅದು ನ್ಯಾಯಬದ್ಧವಾಗಿ ವಿತರಣೆಯಾಗುವುದೆಂದು ಖಚಿತ ಪಡಿಸುವ ವ್ಯವಸ್ಥೆ ಯಾವುದು ? ಇದರ ಮೇಲ್ವಿಚಾರಣೆ, ಪರೀಕ್ಷೆ ಹೇಗೆ ? ಆಡಳಿತ ವ್ಯವಸ್ಥೆ ಹೇಗೆ ? ಕಾನೂನು, ನ್ಯಾಯವಿತರಣೆ ಇವುಗಳಿಗಾಗಿ ಸೃಷ್ಟಿಯಾದ ವ್ಯವಸ್ಥೆ ಯಾವುದು ? ಪ್ರಜಾಭಿಪ್ರಾಯಕ್ಕೆ ಮನ್ನಣೆ ಏನು ? ನಿಜವಾದ ಪ್ರಜಾಭಿಪ್ರಾಯ ರಾಜನನ್ನು ಮುಟ್ಟಲು ವ್ಯವಸ್ಥೆ ಹೇಗೆ ? ರಾಜ ನಿರ್ಣಯಗಳನ್ನು ಕೈಗೊಳ್ಳುವ ಕ್ರಮ

ಯಾವುದು ? ಕೃಷಿಕರು, ಕಾರ್ಮಿಕರು ಇವರ ವ್ಯವಸ್ಥೆ ಎಂತಹದು ? ವ್ಯಾಪಾರ ವ್ಯವಹಾರಗಳು ಹೇಗೆ ? ಪ್ರಜೆಗಳಲ್ಲಿ ಬೇರೆ ಬೇರೆ ವರ್ಗಗಳ ನಡುವಣ ಸಂಬಂಧ ಎಂತಹದು ? ಇಂತಹ ಹಲವಾರು ಪ್ರಶ್ನೆಗಳಿಗೆ ಉತ್ತರ ಸಿಕ್ಕದಿದ್ದಲ್ಲಿ ಕಾದಂಬರಿ ಐತಿಹಾಸಿಕವಾಗುವುದು ಸಾಧ್ಯವಿಲ್ಲ. (ಈ ಮಾತಿನಿಂದ, ಐತಿಹಾಸಿಕ ಕಾದಂಬರಿ ಯುಗದ ಸಮಗ್ರ ಜೀವನದ ನಿರೂಪಣೆಯನ್ನು ಒಳಗೊಳ್ಳಬೇಕೆಂಬ ಅಭಿಪ್ರಾಯ ಮೂಡಿ, ಇದು ಸಾಧ್ಯವೇ ಎಂಬ ಪ್ರಶ್ನೆ ಉದ್ಭವಿಸಬಹುದು. ಆದರೆ ಯುಗದ ಜೀವನವನ್ನು ಎಷ್ಟರ ಮಟ್ಟಿಗೆ ಪುನರ್‌ಸೃಷ್ಟಿಸಬೇಕೆಂಬುದು ಕಾದಂಬರಿಕಾರನ ಉದ್ದೇಶವನ್ನೂ ಅವನು ಇತಿಹಾಸವನ್ನು ವ್ಯಾಖ್ಯಾನಿಸುವ ರೀತಿಯನ್ನೂ ಅವಲಂಬಿಸಿರುತ್ತದೆ.)

ಹೀಗಾಗದಿದ್ದರೆ ಐತಿಹಾಸಿಕ ಕಾದಂಬರಿಯ ಪರಿಣಾಮ ಅಸಂಪೂರ್ಣವೂ ಅತೃಪ್ತಿಕರವೂ ಆಗುತ್ತದೆ. ಏಕೆಂದರೆ, ವ್ಯಕ್ತಿತ್ವದ ಮೇಲೆಯೇ ಒತ್ತುಬಿದ್ದು ಜೀವನದ ರೀತಿಯೇ ತಪ್ಪಾಗಿ ಕಾಣುತ್ತದೆ. ಇದನ್ನು ಸ್ಪಷ್ಟಗೊಳಿಸಬೇಕಾದರೆ ಇಂತಹದೇ, ಆದರೆ ಇಷ್ಟು ಸಮಗ್ರವೂ ಜಟಿಲವೂ ಅಲ್ಲದ ಒಂದು ಸಂದರ್ಭವನ್ನು ಗಮನಿಸಬಹುದು. ಒಂದು ದೊಡ್ಡ ಕಾರ್ಖಾನೆಯನ್ನು ನಿರ್ವಹಿಸುವ ಅಧಿಕಾರಿಯ ಒಳ್ಳೆಯತನ ಅಥವಾ ಕೆಟ್ಟತನ ಮುಖ್ಯ. ಆದರೆ ಇದಿಷ್ಟೇ ಮುಖ್ಯ ಎಂದು ಭಾವಿಸುವುದು ತಪ್ಪಾಗುತ್ತದೆ. ಅವನು ಯಂತ್ರಗಳನ್ನು ಕೊಳ್ಳುವಾಗ, ನೀರಿನ ಸರಬರಾಜಿನ ವ್ಯವಸ್ಥೆ ಮಾಡುವಾಗ, ವಿದ್ಯುಚ್ಛಕ್ತಿಯ ವ್ಯವಸ್ಥೆ ಮಾಡುವಾಗ ಆತನ ಒಳ್ಳೆಯತನ ಅಥವಾ ಕೆಟ್ಟತನಕ್ಕೆ ಪ್ರಾಮುಖ್ಯತೆ ಇಲ್ಲ, ಬೇರೆ ಗುಣಗಳು ಮುಖ್ಯ. ಅವನು ಕಾರ್ಮಿಕರೊಡನೆ ವ್ಯವಹರಿಸುವಾಗ ಅವನ ಒಳ್ಳೆಯತನ ಅಥವಾ ಕೆಟ್ಟತನ ಸ್ವಲ್ಪ ಪ್ರಾಮುಖ್ಯತೆ ಪಡೆದರೂ, ಅವನು ಕಾರ್ಖಾನೆಯನ್ನು ಕಾಣುವ ರೀತಿ, ಚಾಣಾಕ್ಷತೆ ಇವೆಲ್ಲ ಮುಖ್ಯವಾಗುತ್ತವೆ. ಕಾರ್ಖಾನೆಯ ನಿರ್ವಹಣೆಯಲ್ಲಿ ಅವನು ಹಲವು ವರ್ಗಗಳಿಗೆ ವೃತ್ತಿಗಳಿಗೆ, ವ್ಯವಸ್ಥೆಗಳಿಗೆ ಸೇರಿದವರೊಡನೆ ವ್ಯವಹರಿಸುತ್ತಿರುತ್ತಾನೆ. ಆದುದರಿಂದ ಬಹು ಒಳ್ಳೆಯ ಸ್ವಭಾವದ ವ್ಯಕ್ತಿ ಅಧಿಕಾರಿಯಾಗುತ್ತಲೆ ಎಲ್ಲ ಸಮಸ್ಯೆಗಳು ಪರಿಹಾರವಾಗುವುದಿಲ್ಲ. ಹಾಗೆಯೇ ಒಬ್ಬ ರಾಜ ಮತ್ತು ಅವನ ರಾಜ್ಯದ ಸಂಬಂಧ. ಇದನ್ನು ನಾವು ಗುರುತಿಸದೆ ಹೋದರೆ ಒಂದು ರಾಜ್ಯದ ಅಥವಾ ಸಮಾಜದ ಅದೃಷ್ಟವೆಲ್ಲ ಒಂದು ವ್ಯಕ್ತಿಯನ್ನು ಅವಲಂಬಿಸಿದೆ ಎಂದು ಭಾವಿಸುವ ತಪ್ಪು ಮಾಡುತ್ತೇವೆ. ರಾಜನೇ ಒಂದು ವ್ಯವಸ್ಥೆಯ ಭಾಗ. ರಾಜ್ಯದ ಹಲವಾರು ಶಕ್ತಿಗಳನ್ನು ಗುರುತಿಸದೆ ಹೋದರೆ ವ್ಯಕ್ತಿಯ ಕ್ರಿಯೆಯ ಸಂದರ್ಭವನ್ನೆ ಅಸಂಪೂರ್ಣವಾಗಿ ಚಿತ್ರಿಸಿದಂತಾಗುವುದಲ್ಲದೆ ಸಮಷ್ಟಿ ಜೀವನದ ರೀತಿಯನ್ನೆ ಸರಿಯಾಗಿ ಅಧ್ಯಯನ ಮಾಡಿದಂತಾಗುವುದಿಲ್ಲ.

ಐತಿಹಾಸಿಕ ಕಾದಂಬರಿಕಾರನಿಗೆ ಇತಿಹಾಸದ ವೈಚಾರಿಕತೆಯೊಂದು ಅಗತ್ಯ. ಚರಿತ್ರೆ ವಿವರಗಳ ಸಂತೆಯಲ್ಲ; ಚರಿತ್ರೆಯನ್ನು ಓದುವುದು ಎಂದರೆ ವಿವರಗಳ

ಸಂಗ್ರಹಣೆ ಅಷ್ಟೇ ಅಲ್ಲ. ಇತಿಹಾಸ ಕಲಿಸುವ ಪಾಠ ನಮಗೆ ಮುಖ್ಯ. ಕಾದಂಬರಿಕಾರ ಇತಿಹಾಸಕ್ಕೆ ಹೋದಾಗ ಬಾಳಿನ ಪರವಾದ ಶಕ್ತಿಗಳು ಮತ್ತು ಧೋರಣೆಗಳು ಯಾವುವು, ಬಾಳಿನ ವಿರುದ್ಧವಾದ ಶಕ್ತಿಗಳು ಮತ್ತು ಧೋರಣೆಗಳು ಯಾವುವು ಎಂಬುದನ್ನು ತನ್ನ ಮಟ್ಟಿಗೆ ಸ್ಪಷ್ಟ ಮಾಡಿಕೊಳ್ಳಬೇಕಾಗುತ್ತದೆ. ಐತಿಹಾಸಿಕ ಕಾದಂಬರಿ ಒಂದು ವಿಶಿಷ್ಟ ಯುಗವನ್ನು ಪುನರ್‌ಸೃಷ್ಟಿಸುತ್ತದೆ. ಇದು ಕೃತಿಗೆ ಮೂರ್ತತೆಯನ್ನು ಕೊಡುತ್ತದೆ. ಆದರೆ ಯಾವ ಒಳ್ಳೆಯ ಸಾಹಿತ್ಯ ಕೃತಿಯಲ್ಲಿ ಆಗಲಿ ಮೂರ್ತತೆ, ಅಮೂರ್ತತೆಗಳು ಸಂಧಿಸಿ ಸಂಗಮಗೊಳ್ಳುತ್ತವೆ. ಪುನರ್ ಸೃಷ್ಟಿಯ ಪ್ರಕ್ರಿಯೆಯಲ್ಲಿ ಯಾವ ಸಮಾಜವೇ ಆಗಲಿ ಪ್ರಗತಿ ಹೊಂದುವುದು ಯಾವ ಕಾರಣಗಳಿಂದ, ಅವನತಿ ಹೊಂದುವುದು ಯಾವ ಕಾರಣದಿಂದ ಎಂಬ ಸರ್ವಕಾಲಿಕ ಸತ್ವಗಳನ್ನು ಶೋಧಿಸಬೇಕಾಗುತ್ತದೆ. ಇದೇ ಐತಿಹಾಸಿಕ ಕಾದಂಬರಿಯ ರಚನೆಗೆ ಮತ್ತು ಅದನ್ನು ಓದಲು ಅಗತ್ಯವಾದ ಕಾಲ ಮತ್ತು ಶ್ರಮಗಳ ವ್ಯಯಕ್ಕೆ ಸಮರ್ಥನೆ ಕೊಡುವುದು. ಮಾರ್ಕ್ಸಿಸ್ಟ್ ಪಂಥದ ಬರಹಗಾರ ಇತಿಹಾಸವನ್ನು 'ಡಯಲೆಕ್ಟಿಕಲ್ ಮೆಟೀರಿಯಲಿಸಂ'ನ ದೃಷ್ಟಿಯಿಂದ ವ್ಯಾಖ್ಯಾನಿಸುತ್ತಾನೆ. ಯಾವ ಪಂಥಕ್ಕೂ ಸೇರದ ಮಾಸ್ತಿಯವರು ಸ್ವತಂತ್ರವಾದ ರೀತಿಯಲ್ಲಿ ಸಮಾಜಗಳ ಅಳಿವು-ಉಳಿವುಗಳನ್ನು ವಿಶ್ಲೇಷಿಸುತ್ತಾರೆ. ಕಾದಂಬರಿಯ ಬೆನ್ನೆಲುಬು ಈ ಇತಿಹಾಸದ ವ್ಯಾಖ್ಯಾನ. ಸ್ವತಂತ್ರವಾಗಿ ಇಂತಹ ವ್ಯಾಖ್ಯಾನವನ್ನು ಸಾಧಿಸುವ ಮುನ್ನ ಅರ್ಥಶಾಸ್ತ್ರ ಸಮಾಜ ಶಾಸ್ತ್ರ, ಇಂತಹ ಹಲವಾರು ಶಾಸ್ತ್ರಗಳ ಪರಿಚಯ ಅತ್ಯಗತ್ಯ ಎಂದು ಹೇಳಬೇಕಾಗಿಲ್ಲ. ಕಾದಂಬರಿಕಾರ ಆರಿಸಿಕೊಳ್ಳುವ ವಿವರಗಳು, ಅವಕ್ಕೆ ಆತ ನೀಡುವ ಸಾಪೇಕ್ಷಿಕ ಮಹತ್ವ ಇವನ್ನೆಲ್ಲ ಅವನ ಐತಿಹಾಸಿಕ ಪ್ರಜ್ಞೆ ನಿರ್ಧರಿಸುತ್ತದೆ. ಈ 'ಇನ್‌ಸೈಟ್' ಅಥವಾ ಸೀಳುದೃಷ್ಟಿ ಎಷ್ಟು ವ್ಯಾಪಕ ಸಾಮಗ್ರಿಯನ್ನು ಬಳಸಿಕೊಂಡರೆ ಎಷ್ಟು ಸೂಕ್ಷ್ಮವಾದರೆ ಅಷ್ಟು ಕೃತಿ ಶ್ರೇಷ್ಠವಾಗುತ್ತದೆ. ಇಲ್ಲಿ ವೈಯಕ್ತಿಕ ಪ್ರತಿಭೆ ಕೆಲಸ ಮಾಡುತ್ತದೆ. ಆದುದರಿಂದಲೇ ಒಂದೇ ಪಂಥದ ಕಾದಂಬರಿಕಾರರಲ್ಲೂ ಕೆಲವರು ಶ್ರೇಷ್ಠ ಕಾದಂಬರಿಗಳನ್ನು ರಚಿಸುತ್ತಾರೆ. ಉಳಿದವರು ಪಂಥದ 'ಮ್ಯಾನಿಫೆಸ್ಟೋ'ದ ಬೇರೆ ಬೇರೆ ಆವೃತ್ತಿಗಳನ್ನು ರಚಿಸುತ್ತಾರೆ.

# ಭಾರತವೀರ

**ಕೊರಟಿ ಶ್ರೀನಿವಾಸರಾವ್**

೧

ಶ್ರೀ ಸಿದ್ಧಯ್ಯ ಪುರಾಣಿಕರ 'ಭಾರತವೀರ' ನಾಟಕವು ಹಲವು ದೃಷ್ಟಿಗಳಿಂದ ಕನ್ನಡದ ಐತಿಹಾಸಿಕ ನಾಟಕಗಳಲ್ಲಿ ಒಂದು ಮಹತ್ವದ ಕೃತಿಯಾಗಿದೆ. ಕನ್ನಡ ಸಾಹಿತ್ಯದಲ್ಲಿ ಐತಿಹಾಸಿಕ ನಾಟಕಗಳು ವಿರಳಸಂಖ್ಯೆಯಲ್ಲಿವೆ. ಶ್ರೀರಂಗರ 'ಪರಮೇಶ್ವರ ಪುಲಿಕೇಶಿ', ಎಂ. ಆರ್. ಶ್ರೀ ಅವರ 'ನಾಗರಿಕ', ಸಂಸ ಅವರ 'ವಿಗಡ ವಿಕ್ರಮ ರಾಯ', 'ಮಂತ್ರ ಶಕ್ತಿ', 'ಬಿರುದೆಂತೆಂಬರ ಗಂಡ', 'ಸುಗುಣ ಗಂಭೀರ' ಮತ್ತು 'ಬೆಟ್ಟದರಸು', ಮಾಸ್ತಿ ಅವರ 'ಯಶೋಧರಾ', 'ಮುಕುತಿ ತೋರಿದ ಮೂಗುತಿ' 'ತಿರುಪಾಣಿ' ಕುವೆಂಪು ಅವರ 'ರಕ್ತಾಕ್ಷಿ' ಹುಲಿಮನೆ ಸೀತಾರಾಮಶಾಸ್ತ್ರಿಗಳ 'ಟೀಪೂಸುಲ್ತಾನ', ಭರತೇಶರ 'ಶ್ರೀರಂಗರಾಯ', ಎಲ್ಲಾರು ಮಾಡುವುದು...', ಗಿರೀಶ ಕಾರ್ನಾಡರ 'ತೊಗಲಖ್', ಸಮೇತನಹಳ್ಳಿ ರಾಮರಾಯರ 'ತಲಕಾಡು ಗೊಂಡ', ಭೂಪಾಳಂ ವಾಸುದೇವರ 'ಕುಮ್ಮಟ ವಲ್ಲಭ', ಪುಟ್ಟಸ್ವಾಮಯ್ಯನವರ 'ಗೌತಮಬುದ್ಧ' ಮತ್ತು 'ಷಹಜಹಾನ್', ಮರುಳಯ್ಯನವರ 'ವಿಜಯ ವಾತಾಪಿ', ಹಿರಣ್ಣಯ್ಯನವರ 'ಎಚ್ಚಮನಾಯಕ' — ಹೀಗೆ ಬೆರಳಿನಿಂದ ಎಣಿಸಬಹುದಾದ ನಾಟಕ ಶ್ರೇಣಿಯಲ್ಲೂ ಪುರಾಣಿಕರ ಭಾರತವೀರವು ತನ್ನದೇ ಆದ ಉಜ್ವಲ ಕಾಂತಿಯಿಂದ ಶೋಭಿಸುತ್ತಿದೆ.

ಭಾರತವೀರವು ಸಮಕಾಲೀನ ಪ್ರಜ್ಞೆಯಿಂದ ಕೂಡಿದ ಒಂದು ನಾಟಕ. ಚಿರಂತನವೂ, ಪರಿಗ್ರಾಹ್ಯವೂ ಆದ ಭಾರತೀಯ ಮೌಲ್ಯಗಳು ಈ ಕೃತಿಯಲ್ಲಿ ಅರ್ಥಪೂರ್ಣವಾಗಿ ಮೈತಳೆದಿವೆ. ಭಾರತವು ಸ್ವಾತಂತ್ರ್ಯ ಪಡೆದು ಮೂರು ದಶಕ ಗಳಾದರೂ ಯಾವ ಸ್ವಾತಂತ್ರ್ಯಕ್ಕಾಗಿ ಭಾರತ ಪುತ್ರರು ತಮ್ಮ ತನು-ಮನ-ಧನಗಳನ್ನು ಅರ್ಪಿಸಿ, ಆತ್ಮಾರ್ಪಣೆ ಮಾಡಿಕೊಂಡರೋ, ಆ ಸ್ವಾತಂತ್ರ್ಯದ ಪೂರ್ಣಫಲ ನಮ್ಮ ನಾಡಿಗರಿಗೆ ಇನ್ನೂ ದೊರಕಬೇಕಾಗಿದೆ. ಪರಕೀಯರ ದಾಸ್ಯದಿಂದ ರಾಷ್ಟ್ರವು ಬಿಡುಗಡೆಯಾಗಿರಬಹುದು. ಆದರೆ ಗಾಂಧೀಜಿ, ಪಟೇಲ್ ಮತ್ತು ನೆಹರು ಮುಂತಾದವರು ಕನಸು ಕಂಡ ಭವ್ಯಭಾರತದ ನಿರ್ಮಾಣ-ಸುಖಸಂವೃದ್ಧಿಗಳಿಂದ

ಕೂಡಿದ ರಾಮರಾಜ್ಯದ ನಿರ್ಮಾಣ–ಇನ್ನೂ ನಿರ್ಮಾಣವಾಗಬೇಕಾಗಿದೆ. ಈ ಪವಿತ್ರ ಕಾರ್ಯದಲ್ಲಿ ರಾಷ್ಟ್ರದ ಜನತೆ ತ್ರಿಕರಣ ಪೂರ್ವಕವಾಗಿ ದುಡಿಯಲು, ಅವರ ಕಣ್ಣ ಮುಂದೆ ಸ್ವಾತಂತ್ರ್ಯಕ್ಕಾಗಿ ಭಾರತ ವೀರರು ಮಾಡಿದ ಬಲಿದಾನ, ಹಿಂದಿನವರು ಸ್ವಾತಂತ್ರ್ಯಕ್ಕಾಗಿ ತೆತ್ತಬೆಲೆ, ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಮಾಡಬೇಕಾದ ಮುಂದಿನವರ ಕರ್ತವ್ಯ–ಮುಂತಾದ ಸಂಗತಿಗಳು ಸ್ಮೃತಿಪಟಲದಲ್ಲೂ ಮಾಸದೆ ಉಳಿಯುವುದು ಅನಿವಾರ್ಯವಾಗಿದೆ. ಇಂಥ ಕಾರ್ಯವನ್ನು ಸಾಹಿತ್ಯಕೃತಿಗಳು ಮಾಡಬೇಕಾಗಿದೆ. ಈ ದೃಷ್ಟಿಯಿಂದಲೂ ಭಾರತವೀರ ನಾಟಕವು ಒಂದು ಮಹತ್ವದ ಕೃತಿಯಾಗಿದೆ.

೨

ಈ ನಾಟಕವು ಪ್ರಥಮ ಮುದ್ರಣಗೊಂಡದ್ದು ೧೯೬೩ರ ಒಂದು ವಿಶೇಷ ಸಂದರ್ಭದಲ್ಲಿ. ತಾವು ಈ ಕೃತಿಯನ್ನು ಬರೆದ ಹಿನ್ನೆಲೆಯ ಬಗ್ಗೆ ಲೇಖಕರು ತಮ್ಮ ಬಿನ್ನಹದಲ್ಲಿ ಹೀಗೆ ನುಡಿದಿದ್ದಾರೆ.

"೧೯೬೨ರ ಅಕ್ಟೋಬರ್ ೨೦ನೇ ದಿನಾಂಕ ಇದ್ದಕ್ಕಿದ್ದಂತೆ ಹಿಮಾಲಯದ ಶಾಂತಿ ಕದಡಿ ಸಿಡಿಮದ್ದಿನ ನಾತ ಹರಡಿತು, ನೀಫಾ ಲಡ್ಡಾಖಗಳಲ್ಲಿ! ಚೀಣೀಯರ ಯುದ್ಧದಾಹ ಸ್ನೇಹದ ಹೃದಯಕ್ಕೇ ಗುಂಡಿಟ್ಟು ಹೊಡೆಯಿತು! ಈ ಘಟನೆ ನಡೆದ ಎರಡು ದಿನಗಳಲ್ಲಿಯೇ ರಾಷ್ಟ್ರನಾಯಕ ಪಂಡಿತ ಜವಹರಲಾಲ ನೆಹರು ಅವರು ಭಾರತದ ವಾರ್ತಾ ಮಂತ್ರಿಗಳ ಸಭೆಯನ್ನು ಉದ್ದೇಶಿಸಿ ಮಾತನಾಡಿದಾಗ ಉಪಸ್ಥಿತನಾಗಿರುವ ಭಾಗ್ಯ ನನಗೆ ಲಭಿಸಿತು. ರಾಷ್ಟ್ರದ ದಮನಿಗಳಲ್ಲಿ ವಿದ್ಯುದೂರ್ಮಿಗಳು ನರ್ತಿಸತೊಡಗಿದ ಅವಿಸ್ಮರಣೀಯ ಪ್ರಸಂಗ ಮನದ ಮೇಲೆ ತನ್ನ ವಜ್ರಮುದ್ರೆಯನ್ನು ಮೂಡಿಸಿತು. ರಾಷ್ಟ್ರರಕ್ಷಣೆಯ ಪ್ರಯತ್ನಗಳಿಗೆ ನೆರವಾಗಬಲ್ಲ ನಾಟಕವೊಂದನ್ನು ಬರೆಯಬೇಕೆಂಬ ಸಂಕಲ್ಪ ಉದಿಸಿತು ಮನದಲ್ಲಿ."

ಹಿಂದಿನಿಂದಲೂ ಚೀನಾ ಮತ್ತು ಭಾರತಗಳು ಶಾಂತಿಪ್ರಿಯ ರಾಷ್ಟ್ರಗಳಾಗಿದ್ದು, ಪರಸ್ಪರ ಸ್ನೇಹ ಸೌಹಾರ್ದಭಾವಗಳಿಂದ ಕೂಡಿದ ನೆರೆಯ ರಾಷ್ಟ್ರಗಳಾಗಿದ್ದವು. ಭಾರತವು ಸ್ವಾತಂತ್ರ್ಯ ಪಡೆದ ತುಸು ಸಮಯದಲ್ಲೇ ಚೀನಾದೇಶವೂ ಸ್ವಾತಂತ್ರ್ಯವನ್ನು ಪಡೆದುಕೊಂಡಿತು. ಭಾರತವು ಪರಕೀಯರ ದಾಸ್ಯದ ನೊಗವನ್ನು ಕೊಡಹಿಕೊಂಡು ಅಹಿಂಸಾತ್ಮಕವಾಗಿ ಹೋರಾಡಿ ಸ್ವಾತಂತ್ರ್ಯ ಪಡೆದರೆ, ಚೀನಾ ದೇಶವು ಶತಮಾನಗಳ ಮಂಚೂದೊರೆಗಳ ದುರಾಡಳಿತದ ನಿರಂಕುಶ ಪ್ರಭುತ್ವದಿಂದ ಸಿಡಿದೆದ್ದು, ಸಶಸ್ತ್ರ ಕ್ರಾಂತಿ ಹೋರಾಟ ನಡೆಸಿ, ಜನತಾರಾಜ್ಯ ಕಮ್ಯೂನಿಸ್ಟ್ ಸರಕಾರ–ನಿರ್ಮಿಸಿತ್ತು. ಸ್ವಾತಂತ್ರ್ಯಕ್ಕಾಗಿ ತಾವು ತೆರಬೇಕಾದ ಬೆಲೆ ಎಷ್ಟೆಂಬುದನ್ನು ಸ್ವಾನುಭವದಿಂದ ಅರಿತಿದ್ದ ಚೀನಾದೇಶವು ಮಿತ್ರರಾಷ್ಟ್ರವಾಗಿದ್ದ ಭಾರತದಂಥ ಶಾಂತಿಪ್ರಿಯ ರಾಷ್ಟ್ರದೊಂದಿಗೆ ಸ್ನೇಹವನ್ನು ದೃಢಪಡಿಸುವ ಬದಲು ಸ್ವಾರ್ಥ ರಾಜಕಾರಣಗಳ

ರಾಜ್ಯದಾಹ, ದುರಾಕ್ರಮಣ ನೀತಿ, ಕುಟಿಲತನಗಳಿಂದ ಭಾರತದ ಮೇಲೆ ಯುದ್ಧ ಸಾರಿತ್ತು!

ಶತ ಶತಮಾನಗಳಿಂದ ಭಾರತೀಯರೂ ಚೀನಿಯರೂ ಸೋದರರಂತಿದ್ದರು ಚೀನಾದೇಶದ ಬೌದ್ಧಯಾತ್ರಿಕರಾದ ಹ್ಯೂಯನ್‌ತ್ಸಾಂಗ್, ಪಾಹಿಯಾನ್ ಮತ್ತು ಇತ್ಸಿಂಗರು ಬುದ್ಧನ ನಾಡಾದ ಭಾರತವನ್ನು ಪುಣ್ಯಭೂಮಿ ಎಂದು ತಿಳಿದು ಅಪಾರ ಕಷ್ಟ-ನಷ್ಟಗಳನ್ನು ಸಹಿಸಿ, ಶ್ರದ್ಧೆಯಿಂದ ಇಲ್ಲಿಗೆ ಯಾತ್ರಿಕರಾಗಿ ಬಂದಿದ್ದರು. ಭಾರತದಿಂದ ಅನೇಕ ಬೌದ್ಧ ಪಂಡಿತರೂ, ಆಚಾರ್ಯರೂ ಧರ್ಮಪ್ರಚಾರಕ್ಕಾಗಿ ಚೀನಾದೇಶಕ್ಕೆ ತೆರಳಿ, ಅಲ್ಲೇ ನೆಲೆಸಿದ್ದರು. ಹಿಂದೀ ಚೀನಿಯರನ್ನು ಎರಡು ರಾಷ್ಟ್ರಗಳವರೂ ಸಹೋದರರು–ಭಾಯಿ ಭಾಯಿ ಎಂದು ತಿಳಿದಿದ್ದರು. ಆದರೆ ಚೀನಾ ದೇಶದ ಪಟ್ಟಭದ್ರ ಹಿತಾಸಕ್ತಿಯ ಸ್ವಾರ್ಥನಾಯಕರು ಭಾರತಕ್ಕೆ ದ್ರೋಹ ಬಗೆದು, ಯುದ್ಧ ಘೋಷಿಸಿದ್ದರು. ಭಾರತದ ಉತ್ತರ ಭಾಗದ ಮೆಕ್‌ಮೋಹನ್ ಗಡಿಯನ್ನು ದಾಟಿ, ಪವಿತ್ರವಾದ ಹಿಮಾಲಯ ಪರ್ವತದ ಗಿರಿಪಂಕ್ತಿಯನ್ನು ಹಾದು, ಲಡಖ್ ಮತ್ತು ನೀಫಾಗಳ ಸಹಸ್ರಾರು ಚದುರಮೈಲಿ ಪ್ರದೇಶಗಳನ್ನು ದುರಾಕ್ರಮಣ ಮಾಡಿದರು ! ಇದು ವಿಧಿಯ ವಿಡಂಬನೆಯೇ ಸರಿ !

ಭಾರತವು ಸ್ವಾತಂತ್ರ್ಯ ಪಡೆದ ಮೇಲೆ ಪರಕೀಯ ದಾಳಿಕಾರರಿಂದ ಬಂದ ಗಂಡಾಂತರವನ್ನು ಎದುರಿಸಲು ರಾಷ್ಟ್ರದ ಜನತೆ ಒಬ್ಬ ವ್ಯಕ್ತಿಯಂತೆ ಸಿಡಿದುನಿಂತಿತು. ಜನ ದುರಾಕ್ರಮಣವನ್ನು ಸಮರ್ಥವಾಗಿ ಎದುರಿಸಿ, ಹಿಮ್ಮೆಟ್ಟಿಸಲು ಒಕ್ಕೊರಲಿನಿಂದ ಸಿಂಹಗರ್ಜನೆ ಮಾಡಿದರು. ಸಮಾಜದ ಎಲ್ಲಾ ವರ್ಗದ ಜನ, ರೈತ, ಕಾರ್ಮಿಕ, ವಿದ್ಯಾರ್ಥಿಗಳೆನ್ನದೆ ಎಲ್ಲರೂ ಈ ರಾಷ್ಟ್ರರಕ್ಷಣೆಯ ಪವಿತ್ರಕಾರ್ಯಕ್ಕೆ ಟೊಂಕಕಟ್ಟಿ ನಿಂತರು. ಇಂಥ ಪರ್ವ ಕಾಲದಲ್ಲಿ ನಾಡಿನ ಸಾಹಿತಿಗಳು ಐಕಮತ್ಯ ಭಾತೃತ್ವ ಸಾಧನೆಗಾಗಿ, ರಾಷ್ಟ್ರ ರಕ್ಷಣೆಯ ಆಪತ್ಕಾಲದಲ್ಲೂ ತಮ್ಮ ಸರ್ವಶಕ್ತಿಯನ್ನು ಒಗ್ಗೂಡಿಸಿ ಹೋರಾಡುವಂತೆ ಮಾಡಲು, ಜನತೆಯಲ್ಲಿ ಸ್ಫೂರ್ತಿಯನು, ಧೈರ್ಯಸಾಹಸ, ಬಲಿದಾನಗಳ ಭಾವನೆಗಳನ್ನು ಬೆಳೆಸಲು ತಮ್ಮ ಲೇಖನಿಯನ್ನು ಮೀಸಲಿಟ್ಟರು. ಹೀಗೆ ಜನತೆಯನ್ನು ಹುರುದುಂಬಿಸಲು ಬರೆದ ನಾಟಕವೇ 'ಭಾರತವೀರ'.

ಸಿದ್ಧಯ್ಯ ಪುರಾಣಿಕರು ಪ್ರಜ್ಞಾಶೀಲ ಸಾಹಿತಿಯಾಗಿ, ನಿಷ್ಠಾವಂತ ಪ್ರಜೆಯಾಗಿ, ಜನತೆಯನ್ನು ಎಚ್ಚರಿಸಲು ಅಂದು ಈ ಕೃತಿಯನ್ನು ಬರೆಯಲು ಸಂಕಲ್ಪಿಸಿದರು. ಗ್ರಂಥಕರ್ತರು ತಮ್ಮ ಉದ್ದೇಶವನ್ನು ನಾಟಕಕ್ಕೆ ಬರೆದ ಬಿನ್ನಹದಲ್ಲೂ ಹೀಗೆ ಸ್ಪಷ್ಟ ವಾಗಿ ಹೇಳಿದ್ದಾರೆ.

"ಭಾರತದ ಭವಿತವ್ಯವಿಂದು ಹಿಮಾಲಯದ ತಕ್ಕಡಿಯಲ್ಲಿ ತೂಗಾಡುತ್ತಲಿದೆ. ನಾವು ನಲ್ವತ್ತುನಾಲ್ಕು ಕೋಟಿ ಜನರೊಂದು ಕಡೆ, ನಮಗಿಂತಲೂ ಅರ್ಧದಷ್ಟು ಹೆಚ್ಚಿರುವ ಚೀಣೀಯರು ಇನ್ನೊಂದು ಕಡೆ ನಿಂತು ಬಲಾಬಲಗಳ, ಸತ್ವದ,

ಸಾಹಸದ ಪರೀಕ್ಷೆಯಲ್ಲಿ ತೊಡಗಿದ್ದೇವೆ. ಈ ದುರ್ಧರ ಪ್ರಸಂಗದಲ್ಲಿ, ದಾರುಣ ಸನ್ನಿವೇಶದಲ್ಲಿ ಮಹರ್ಷಿ ವೇದವ್ಯಾಸರ ಅಭಯವಾಣಿ ನಮ್ಮ ಕರ್ಣಗಳಲ್ಲಿ ನಿನದಿಸುತ್ತಲಿದೆ.

ಆರಯೋ ಯೇ ಸಮುತ್ಥಾಯ ಬಹುಭಿರ್ದಸ್ಯುಭಿಃ ಸಹ ।
ಇದಮಾತ್ಮವಧಾಯೈವ ರಾಷ್ಟ್ರಮಿಚ್ಛಂತಿ ಬಾಧಿತುಮ್ ॥
(ಮಹಾಭಾರತ : ಶಾಂತಿಪರ್ವ, ಅಧ್ಯಾಯ ೮೨, ಶ್ಲೋಕ ೨೮)

ಬಹು ಸಂಖ್ಯಾತ ದಸ್ಯುಗಳು ನಮ್ಮ ರಾಷ್ಟ್ರವನ್ನು ಬಾಧಿಸಲು ಬಂದಿದ್ದಾರೆ ! ಆದರೆ ಅವರು ಆತ್ಮವಧೆಗಾಗಿಯೇ ಬಂದಿದ್ದಾರೆ ! ಇದರಲ್ಲಿ ಅವರೇ ನಾಶವಾಗುತ್ತಾರೆ !

ಆದರೆ ಈ ಅಭಯವಾಣಿ ಸತ್ಯವಾಗಬೇಕಾದರೆ ನಮ್ಮಲ್ಲಿ ಸತ್ತ್ವೋದ್ರೇಕವಾಗಬೇಕು ; ವೀರಾವೇಶ ಉಕ್ಕಬೇಕು. ರಾಷ್ಟ್ರರಕ್ಷಣೆಗಾಗಿ ಶಸ್ತ್ರದೀಕ್ಷೆ ಪಡೆದು ಸಿಂಹನಾದಗೈಯುವ ಸಾಹಸಭೀಮತನ ಸಿಡಿದೇಳಬೇಕು !

— ಹೀಗೆ ನುಡಿದ ಸಿದ್ಧಯ್ಯ ಪುರಾಣಿಕರು ತಮ್ಮ ಲೇಖನಿಗೆ ಸಿಡಿಲಿನ ಶಕ್ತಿ ತುಂಬಿ ಈ ನಾಟಕವನ್ನು ರಚಿಸಿದ್ದಾರೆ.

೩

ಭಾರತ ವರ್ಷವು ಪ್ರಾಚೀನ ಕಾಲದಿಂದಲೂ ಜಗತ್ತಿನ ಶಾಂತಿಪ್ರಿಯ ರಾಷ್ಟ್ರಗಳಲ್ಲಿ ಅಗ್ರಮಾನ್ಯತೆಯನ್ನು ಪಡೆದಿದೆ. ತನ್ನ ಸಹಸ್ರಾರು ವರ್ಷಗಳ ಇತಿಹಾಸದಲ್ಲಿ ಅದು ಎಂದೂ ಯಾರ ಮೇಲೂ ದಂಡೆತ್ತಿ ಹೋಗಿಲ್ಲ : ದಾಳಿ ನಡೆಸಿಲ್ಲ. ಆಫ್ಘಾನಿಸ್ಥಾನ (ಗಾಂಧಾರ) ಬರ್ಮ (ಬ್ರಹ್ಮದೇಶ) ಕಾಂಬೋಡಿಯ (ಕಂಬುಜ) ಸಿಲೋನ್ (ಸಿಂಹಳ) ಮ್ಯಾಲೇಶಿಯ (ಮಲಯ) ಇಂಡೋನೇಶಿಯಾ (ಚಂಪ) ಸುಮಾತ್ರ, ಜಾವಾ, ಬಲಿದ್ವೀಪಗಳೇ ಮೊದಲಾದ ವಿದೇಶಗಳಿಗೆ ಭಾರತೀಯರು ವಾಣಿಜ್ಯೋದ್ಯಮಿಗಳಾಗಿ, ಪ್ರವಾಸಿಗಳಾಗಿ ಪ್ರಯಾಣ ಮಾಡಿದ್ದುಂಟು. ವಲಸೆಗಾರರಾಗಿ ಅಲ್ಲೇ ನಿಂತುದುಂಟು. ಆದರೆ ಅವರೆಂದೂ ವಿದೇಶೀ ಆಕ್ರಮಣಕಾರರಾಗಿ ಅಲ್ಲಿ ಬಾಳಲಿಲ್ಲ. ತಮ್ಮೊಂದಿಗೆ ತೆಗೆದುಕೊಂಡು ಹೋದ ಭಾರತದ ಉಜ್ವಲ ಪರಂಪರೆಯನ್ನು ಸಾಹಿತ್ಯ ಸಂಸ್ಕೃತಿ, ನಾಗರಿಕತೆ, ಕಲೆ, ಕೈಗಾರಿಕೆಗಳನ್ನು ಆ ನಾಡಿನಲ್ಲಿ ಬಿತ್ತಿ ಬೆಳೆಸಿದರು ; ಅವುಗಳನ್ನು ಸಂಪನ್ನ ರಾಷ್ಟ್ರಗಳನ್ನಾಗಿ ಮಾಡಿದರು. ಭಾರತೀಯ ಸಂಸ್ಕೃತಿಯ ಸನಾತನ ಮೌಲ್ಯಗಳಾದ ಸತ್ಯ, ಧರ್ಮ, ಶಾಂತಿ, ಪ್ರೇಮಗಳನ್ನು ಅಲ್ಲಿ ಹರಡಿದರು. ಉನ್ನತಜೀವನದ ಆದರ್ಶವನ್ನೂ, ಸಹಬಾಳ್ವೆಯ ತತ್ತ್ವವನ್ನೂ ನಿತ್ಯಜೀವನದಲ್ಲಿ ಅನುಷ್ಠಾನಕ್ಕೆ ತಂದರು. ಹೀಗಾಗಿ ಆ ಜನತೆ ತಮ್ಮನ್ನು ಬೃಹದ್ಭಾರತ ಜನತೆ ಎಂದು ಹೆಮ್ಮೆಪಡುವಂತೆ ಆಯಿತು.

ಹಿಂದಿನಿಂದಲೂ ಭಾರತವು ಸಂಪದ್ಭರಿತ ರಾಷ್ಟ್ರವೆಂದು ಹೆಸರು ಪಡೆದಿತ್ತು. ಪರಕೀಯರು ಭಾರತದ ನೆಲ, ಜಲ, ಹವೆಗಳನ್ನು ಮೆಚ್ಚಿಕೊಂಡಿದ್ದರು. ಸಂಸ್ಕೃತಿ, ಕಲೆ, ವಾಣಿಜ್ಯ ವ್ಯವಸಾಯಗಳು ಚಿನ್ನದ ಹೊಳೆಯನ್ನು ಹರಿಸಿತ್ತು. ಈ ನಾಡಿನ ಪುಣ್ಯಗಂಧವನ್ನು ಆಘ್ರಾಣಿಸಿದ ಸ್ವಾರ್ಥಿಗಳೂ, ಧನಪಿಪಾಸುಗಳಾದ ಬರ್ಬರ ವಿಷಯಲಂಪಟ, ಕ್ರೂರ, ದುಷ್ಟ ಜನಾಂಗಗಳಾದ ಶಕರೂ ಹೂಣರೂ. ರಾಜ್ಯ ತೃಷ್ಣೆಯ ಯವನರೂ, ಅನಂತರ ದೇಶದ ಸಂಪತ್ತಿನ ಆಸೆಯಿಂದ ದಂಡೆತ್ತಿಬಂದ ಮುಸಲ್ಮಾನರೂ, ಪೋರ್ಚುಗೀಸ, ಡಚ್ಚ ಮತ್ತು ಇಂಗ್ಲಿಷ ವ್ಯಾಪಾರಿಗಳೂ ಭಾರತದ ಮೇಲೆ ದಾಳಿ ಇಟ್ಟು ಇಲ್ಲಿನ ಸಂಪತ್ತನ್ನು ಅಪಹರಿಸಿದರು. ಅದರ ಸ್ವಾತಂತ್ರ್ಯ ವನ್ನು ಅಪಹರಿಸಿ ಗುಲಾಮ ರಾಷ್ಟ್ರವನ್ನಾಗಿ ಮಾಡಿದರು. ಬಡತನದ ಬಳುವಳಿ ಯನ್ನು ಬಿಟ್ಟರು.

ಇತರರಿಗೆ ಶಾಂತಿಮಂತ್ರವನ್ನೂ, ಸಹಬಾಳ್ವೆಯನ್ನೂ ಉಪದೇಶಿಸುತ್ತಿದ್ದ ಭಾರತಕ್ಕೆ ಇಂಥ ದುರ್ಗತಿ ಏಕೆ ಪ್ರಾಪ್ತವಾಯಿತು ? ಪರಕೀಯರ ದುರಾಕ್ರಮಣ ದೌರ್ಜನ್ಯಗಳಿಗೆ ಅದು ಏಕೆ ಪಕ್ಕಾಯಿತು ? ಇದು ವಿಚಾರಪರರು ಕೇಳುವ ಪ್ರಶ್ನೆ !

ಸಾವಿರಾರು ವರ್ಷಗಳ ಹಿಂದೆ ಮಹಾಭಾರತವನ್ನು ಬರೆದ ವೇದವ್ಯಾಸರಿಗೂ ಇಂಥ ಪ್ರಶ್ನೆ ಎದುರಾಗಿರಬೇಕು ! ಅವರು ಹೇಳುತ್ತಾರೆ :

'ಇಯಮಾಪತ್ಸಮುತ್ಪನ್ನಾ ಪರಿಚಕ್ರಭಯಂ ಮಹತ್'

"ಅಂದಿನಿಂದ ಇಂದಿನವರೆಗೆ ಈ ದೇಶಕ್ಕೆ ಪರಿಚಕ್ರ ಭಯ, ಆಪತ್ತು ಉತ್ಪನ್ನ ವಾಗುತ್ತಲೇ ಬಂದಿವೆ. ಇಂಥ ಸಂಪದ್ಭರಿತ ದೇಶಕ್ಕೆ ಆಪತ್ತುಬರದೆ ಇನ್ನೆಂಥ ದೇಶಕ್ಕೆ ಬರಬೇಕು ?" — ಎಂದು ಈ ಪ್ರಶ್ನೆಗೆ ಉತ್ತರ ಹೇಳುತ್ತಾರೆ ಸಿದ್ಧಯ್ಯ ಪುರಾಣಿಕರು.

ಅವರು ತಮ್ಮ ವಿಚಾರ ಧಾರೆಯನ್ನು ಮುಂದುವರಿಸಿ ಹೀಗೆ ನುಡಿದಿದ್ದಾರೆ :

"ಆದಿಯಿಂದಲೂ ಎಲ್ಲ ಸುಲಿಗೆಗಾರರ ದುರಾಶಾಪೂರಿತ ದೃಷ್ಟಿ ಈ ದೇಶದ ಮೇಲೆ ! ಪೀತವರ್ಣದವರು, ಶ್ವೇತವರ್ಣದವರು, ಏಷ್ಯಾದವರು, ಯೂರೋಪಿ ಯನರು — ಎಲ್ಲರೂ ಏರಿಬಂದರು ಈ ದೇಶದ ಮೇಲೆ. ಇಂದೂ ಏರಿಬರುತ್ತಿ ದ್ದಾರೆ ಚೀಣೀಯರು".

"ಈ ದುರಾಕ್ರಮಣಕಾರರ ದಾಳಿಯನ್ನು ಭಾರತವು ಎದುರಿಸುತ್ತಲೇ ಬಂದಿದೆ– ಎದೆಗಾರಿಕೆಯೊಡನೆ. ಸೃಷ್ಟಿಯ ನಿಯಮದಂತೆ ಕೆಲವು ಸಲ ಭಾರತ ಗೆದ್ದಿದೆ, ಕೆಲವು ಸಲ ಬಿದ್ದಿದೆ. ಏಳು-ಬೀಳುಗಳೆರಡನ್ನೂ ಅನುಭವಿಸದಿರುವವರು ಯಾರು ? ಕಾಲ ಚಕ್ರ ಉರುಳಿದಂತೆ ಚಕ್ರಾಧಿಪತ್ಯಗಳೂ ಉರುಳುತ್ತವೆ. ಏರಿದುದು ಇಳಿಯು ತ್ತದೆ. ಇಳಿದುದು ಮತ್ತೆ ಏರುತ್ತದೆ."

"ಆದರೆ ಭಾರತೀಯರ ಮಟ್ಟಿಗೆ ಹೇಳುವುದಾದರೆ ಅವರ ಸಾಹಸ ಪರಾಕ್ರಮ ಗಳ, ವಿಜಯ ವೈಭವಗಳ ತೇಜೋಮಯ ಇತಿಹಾಸ ಮಸುಳಿಸಿ ಪರಾಜಯ ಪರಂಪರೆಯ ಹೃದಯವಿದ್ರಾವಕ ಇತಿಹಾಸವೇ ಎದ್ದು ಕಾಣಿಸುತ್ತಿದೆ. ನಾವು ಗೆದ್ದುದ ಕ್ಕಿಂತಲೂ ಸೋತುದೇ ಹೆಚ್ಚಾಗಿ ನಮಗೆ ಕಾಣುವಂತಾಗಿರುವುದು ನಾವು ನಮ್ಮ ಇತಿಹಾಸವನ್ನು ನಿರ್ಲಕ್ಷಿಸಿರುವುದಕ್ಕೆ ಸಾಕ್ಷಿ."

"ಈಗಲಾದರೂ ನಾವು ನಮ್ಮ ವಿಜಯಗಳ ಉತ್ಸಾಹವರ್ಧಕ, ಸಾಹಸೋತ್ತೇ ಜಕ ಘಟನೆಗಳನ್ನು ವೀರ್ಯವತ್ತಾಗಿ ಚಿತ್ರಿಸಿ, ನಮ್ಮ ಯುವಜನಾಂಗದಲ್ಲಿ ಎಂಥ ಗಂಡಾಂತರವನ್ನೂ ಎದುರಿಸಿ ಚದುರಿಸಬಲ್ಲ ಮನೋದಾರ್ಢ್ಯವನ್ನು, ಕೆಚ್ಚೆದೆಯನ್ನು, ಕಲಿತನವನ್ನು, ಸಾಹಸಪ್ರಿಯತೆಯನ್ನು ಪ್ರಚೋದಿಸಬೇಕು.

ಹೀಗೆ ಮಾಡಿದಾಗ ಮಾತ್ರ ಭಾರತದ ಭವಿಷ್ಯವನ್ನು ಉಜ್ವಲಗೊಳಿಸುವ ಭವಿಷ್ಯದ ಜನಾಂಗವನ್ನು ನಿರ್ಮಿಸಲು ಸಾಧ್ಯವಾದೀತು — ಎಂಬ ಅಭಿಪ್ರಾಯ ಲೇಖಕರದು.

ಎಂಥ ದ್ರಷ್ಟಾರ ವಾಣಿ ! ಪ್ರತಿಭಾವಂತ ಕವಿಗಳೂ, ಸಮರ್ಥ ಆಡಳಿತ ಗಾರರೂ, ಉಜ್ವಲ ದೇಶಪ್ರೇಮಿಗಳೂ ಆಗಿರುವ ಸಿದ್ಧಯ್ಯ ಪುರಾಣಿಕರು ಭಾರತವೀರ ನಾಟಕದಲ್ಲಿ ನೀಡಿರುವ ಸಂದೇಶವಿದು ! ತಮ್ಮ ಕ್ಲೈಬ್ಯವನ್ನೂ, ಜಡತೆಯನ್ನೂ, ಹೇಡಿತನದ ಅಹಿಂಸೆಯನ್ನೂ, ಸ್ವಾರ್ಥ, ದ್ವೇಷ, ಅಸಹನೆ, ಅನೈಕಮತ್ಯ ಅಸಹಾಯಕತೆಗಳನ್ನೂ, ಪರಾವಲಂಬನೆ, ಪುರುಷ ಪ್ರಯತ್ನ ಶೂನ್ಯತೆಯನ್ನೂ ಹೊಡೆದಟ್ಟಿ ಸಮಾಜದ ಸಂಘಟನೆ ತ್ಯಾಗ ಸೇವೆಗಳ ರಾಷ್ಟ್ರಭಕ್ತಿಯ ದೀಕ್ಷೆ ಹಿಡಿದಾ ಗಲೇ ಭಾರತದ ಮುಕ್ತಿ ರಾಷ್ಟ್ರೋತ್ಥಾನ ಎಂದು ಲೇಖಕರು ಒತ್ತಿ ಹೇಳಿದ್ದಾರೆ.

೪

ಭಾರತವು ಸ್ವಾತಂತ್ರ್ಯ ಗಳಿಸಿದ ಮೇಲೆ ದ್ವಿತೀಯ ಮಹಾಯುದ್ಧದಿಂದ ಝರ್ಜರಿತಗೊಂಡಿದ್ದ ಜಗತ್ತಿನ ರಾಷ್ಟ್ರಗಳಿಗೆ ಪರಸ್ಪರ ಬದುಕಲು ಇದ್ದ ಒಂದೇ ಮಾರ್ಗ ಶಾಂತಿಯ ದಾರಿಯನ್ನು ಬೋಧಿಸಿತು. ಆದರ ಪ್ರಯತ್ನದ ಫಲವಾಗಿ ೧೯೫೫ರಲ್ಲಿ ಜಗತ್ತಿನ ಎಲ್ಲಾ ಶಾಂತಿಪ್ರಿಯ ರಾಷ್ಟ್ರಗಳು ಶೀತಲ ಯುದ್ಧದಿಂದ ಕಂಗೆಟ್ಟಿದ್ದ ರಾಷ್ಟ್ರದ ಬಣಗಳಲ್ಲಿ ಶಾಂತಿಸೌಹಾರ್ದ ನಂಬಿಕೆಗಳನ್ನು ಉಂಟುಮಾಡಬಲ್ಲ ಸಕ್ರಿಯ ತಾಟಸ್ಥ್ಯ ನೀತಿಯನ್ನು — ಅಲಿಪ್ತ ನೀತಿಯನ್ನು ರೂಪಿಸಲು ಇಂಡೋ ನೇಸಿಯದ ಬಾಂಡುಂಗ್ ನಗರದಲ್ಲಿ ಭಾರತದ ಜವಹರಲಾಲ್ ನೆಹರು ಅವರ ನೇತೃತ್ವದಲ್ಲಿ ಸಭೆಸೇರಿತು. ಯುಗಸ್ಲಾವಿಯದ ಮಾರ್ಷಲ್ ಟಿಟೋ, ಈಜಿಪ್ಟಿನ ನಾಸೆರ್, ಇಂಡೋನೇಸಿಯಾದ ಅಧ್ಯಕ್ಷ ಸುಕರ್ನೊ ಮುಂತಾದವರು ಭಾರತವು ರೂಪಿಸಿದ ಸಹಬಾಳ್ವೆಯ ಪಂಚಶೀಲ ತತ್ವವನ್ನು ಸ್ವೀಕರಿಸಿ, ಯುದ್ಧತಪ್ತ ಜಗತ್ತಿಗೆ

ಶಾಂತಿಯ ಸಂದೇಶವನ್ನು ನೀಡಿದರು. ಈ ಐತಿಹಾಸಿಕ ಸಮ್ಮೇಳನದಲ್ಲಿ ಚೀನಾ ದೇಶದ ಪ್ರಧಾನಮಂತ್ರಿ ಚೌಎನ್‌ಲೈ ಸಹ ಭಾಗವಹಿಸಿದ್ದನು. ಭಾರತವು ಪ್ರತಿಪಾದಿಸಿದ ಆಲಿಪ್ತ ನೀತಿಗೆ ಚೀನಾದ ನೈತಿಕ ಬೆಂಬಲವನ್ನು ನೀಡಿದನು.

ಈ ಬಾಂಡುಂಗ್ ಸಮ್ಮೇಳನವು ಕೈಗೊಂಡ ನಿರ್ಣಯದಿಂದಾಗಿ ಭಾರತದ ನೆಹರೂ ಮತ್ತು ಚೀನಾದ ಚೌಎನ್‌ಲೈ ಅವರು ಆಫ್ರಿಕಾ ಮತ್ತು ಏಷ್ಯಾ ದೇಶಗಳಿಗೆ ನೂತನ ಜಗತ್ತಿನ ಆಶೋತ್ತರಗಳ ಹರಿಕಾರರಾಗಿ ಕಾಣಿಸಿಕೊಂಡರು.

ಬಾಂಡುಂಗ್ ಸಮ್ಮೇಳನದ ಫಲಶ್ರುತಿಯನ್ನು ವಿಮರ್ಶಿಸುತ್ತಾ, ಚೀನೀ ಆಕ್ರಮಣದ ಲೇಖಕರಾದ ವಿ. ಬಿ. ಕರ್ಣಿಕರು ತಮ್ಮ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ.

''While, for Mr. Nehru, the Bandung Conference was the expression of Asia's quest for freedom, Peace and Progress through Co-operation on the basis of equality for Mr. Chou-en-Lai, on the other hand, it was an opportunity for Projecting Red China's image as a peace-loving Asian power ready to co-operate with others in establising peace in Asia.... At Bandung, Mr. Chou-en-Lai was determined to convince the participating countries that they had nothing to fear from China'' (Chinese Invasion : By V. B. Karnik, page 138).

ಚೀನಾದೇಶವು ಸ್ವಾತಂತ್ರ್ಯವನ್ನು ಪಡೆದ ಎರಡು ವರ್ಷಗಳ ನಂತರ, ೧೯೫೦ರಲ್ಲಿ ನವ ಚೀನಾದ ರಾಷ್ಟ್ರೀಯ ನೀತಿಯನ್ನು ಪ್ರತಿಪಾದಿಸುತ್ತಾ 'ದಲಿತ ರಾಷ್ಟ್ರಗಳ ಮೇಲೆ ದುರಾಕ್ರಮಣ ಮಾಡಿರುವ ಬಂಡವಾಳಶಾಹಿ ರಾಷ್ಟ್ರಗಳ ವಿರುದ್ಧ ದಲಿತರಾಷ್ಟ್ರಗಳ ಜನತೆಗೆ ಸಹಾಯಮಾಡುವುದು ತಮ್ಮ ನೀತಿ' ಎಂದು ಸ್ಪಷ್ಟ ಪಡಿಸಿತ್ತು. ಚೀನಾದೇಶದ ಅಧ್ಯಕ್ಷ ಮಾವೋತ್ಸೆತುಂಗನು ಟಿಬೇಟಿನ ಮೇಲೆ ಚೀನೀಯರು ಏರಿಹೋಗಲು ಕರೆನೀಡಿದ್ದನು. ಜನವರಿ ತಿಂಗಳಲ್ಲಿ ಚೀನಾದೇಶದ ಜನತೆಯ ವಿಮೋಚನಾ ಸೈನ್ಯವು (peoples liberation army) 'liberation of three million Tibetans from imperialist aggression' — ಎಂದು ಹೇಳಿಕೊಂಡು ಶಾಂತಿಪ್ರಿಯವಾದ ಟಿಬೇಟಿಯನ್ನರ ಸ್ವಾತಂತ್ರ್ಯವನ್ನು ಅಪಹರಿಸುವ ಪ್ರಯತ್ನ ಮಾಡಿತು.

ವಸ್ತುಸ್ಥಿತಿ ಹೀಗಿದ್ದರೂ ಭಾರತದ ಪ್ರಧಾನಿ ಜವಹರಲಾಲ್ ನೆಹರು ಅವರು ಮಾತ್ರ ಚೀನಾ ದೇಶದ ನಾಯಕರ ಶಾಂತಿಪ್ರಯತ್ನದ ಮಾತುಗಳನ್ನು ನಂಬಿಕೊಂಡೇ ಬಂದರು. ಇಬ್ಬರು ಪ್ರಧಾನಿಗಳು ನವದೆಹಲಿಯಲ್ಲಿ ಕಲೆತು ಸ್ನೇಹದ ಮಾತನಾಡಿದರು. ಪರಸ್ಪರ ಬಂಧುಗಳೆಂದು ಘೋಷಿಸಿದರು. ನೆಹರು, ಚೌಎನ್‌ಲೈಯ ಬರಿಗು ಮಾತುಗಳನ್ನು ನಂಬಿ ಟಿಬೇಟನ್ನರ ಸಹಾಯಕ್ಕೆ ಹೋಗುವ ಬದಲು, ಅದನ್ನು

ಚೀನಾದೇಶದ ಅಂಗರಾಜ್ಯವೆಂದು ಪರಿಗಣಿಸಲು ಸಮ್ಮತಿಸಿದರು. ಈ ಬಗ್ಗೆ ಒಂದು ಗೌರವ (?) ಒಪ್ಪಂದಕ್ಕೆ ಸಹಿಯನ್ನೂ ಹಾಕಿದರು.

ಈ ಒಪ್ಪಂದದ ಬಗ್ಗೆ ಕರಣಿಕರು ಹೀಗೆ ಬರೆದಿದ್ದಾರೆ. ''In the preamble of the agreement the two countries reaffirmed that they would abide by the five principles of mutual respect for each others teritorial integrity and sovereignty, mutual non-aggression, non-interference in each others internal affairs, equality and mutul benefit and peaceful co-existance'' (ಅದೇ ಗ್ರಂಥದ ಪುಟ 269).

ಚೀನಾ ದೇಶದ ನಾಯಕರು ಪಂಚಶೀಲ ಅಂದರೆ ಪರಸ್ಪರ ರಾಷ್ಟ್ರಗಳ ಅವಿಭಾಜ್ಯ ಸಾರ್ವಭೌಮತೆಯ ಬಗೆಗೆ ಸಮಾನ ಗೌರವ, ಪರಸ್ಪರ ದುರಾಕ್ರಮಣ ವರ್ಜನೆ, ಪರಸ್ಪರ ದೇಶಗಳ ಆಂತರಂಗಿಕ ವಿಷಯಗಳಲ್ಲಿ ಕೈಹಾಕದಿರುವಿಕೆ, ಪರಸ್ಪರ ಸಮತೆ ಮತ್ತು ಪರಸ್ಪರ ಪ್ರಯೋಜನವುಳ್ಳ ಶಾಂತಿಯುತ ಸಹ ಬಾಳ್ವೆ—ಈ ತತ್ವಗಳನ್ನು ಹೇಳಿಕೊಂಡೇ ಹಿಂದಿನಿಂದಲೂ ಭಾರತ ಮತ್ತು ಚೀನಾ ದೇಶಗಳ ಪ್ರಶ್ನಾತೀತ ಗಡಿರೇಖೆಯಾಗಿದ್ದ ಮೆಕ್‌ಮೋಹನ್ ಲೈನ್ (Mcmohan Line) ಅನ್ನು ಅತಿಕ್ರಮಿಸಿ, ಭಾರತದ ಭೂಪ್ರದೇಶವಾಗಿದ್ದ ಲಡಕ್ ಮತ್ತು ನೇಪಾಗಳ ಸಾವಿರಾರು ಮೈಲಿ ಪ್ರದೇಶವನ್ನು ದುರಾಕ್ರಮಿಸಿಕೊಂಡರು. ಹೀಗೆ ಸ್ನೇಹಹಸ್ತ ನೀಡಿದ್ದ ಭಾರತದ ಬೆನ್ನಿನಲ್ಲಿ ಅದು ಕಪಟತನದಿಂದ ಇರಿದು ದ್ರೋಹಮಾಡಿತು.

ತಾವು ಆಕ್ರಮಿಸಿಕೊಂಡ ಹಿಮಾಲಯದ ಪ್ರದೇಶವು ವಾಸ್ತವವಾಗಿ ತಮಗೆ ಸೇರಿದ್ದೆಂದು ಚೀನೀ ನಾಯಕರು ಹೇಳಿಕೊಂಡರು. ಈ ಬಗ್ಗೆ ಪಾರ್ಲಿಮೆಂಟಿನಲ್ಲಿ ಚರ್ಚೆಯಾದಾಗ ನೆಹರು ಅವರು ಈ ಸಮಸ್ಯೆಯನ್ನು ಲಘುವಾಗಿ ಕಂಡರು.

" ಹಿಮಾಲಯದ ಈ ಪ್ರದೇಶವು ಬೆಂಗಾಡಾಗಿದ್ದು, ಹಿಮಾವೃತವಾದ ಈ ಪ್ರದೇಶದಲ್ಲಿ ಹುಲ್ಲಿನ ಎಸಳೂ ಬೆಳೆಯುವುದಿಲ್ಲ "—ಎಂದು ನೆಹರು ಹೇಳಿದಾಗ, ಅದಕ್ಕೆ ಪ್ರತ್ಯುತ್ತರವಾಗಿ ದೇಶಭಕ್ತ ಮಹಾವೀರ ತ್ಯಾಗಿ ಅವರು.

"ನನ್ನ ತಲೆ ಬೋಳಾಗಿದೆ, ಅಲ್ಲಿ ಒಂದು ಕೂದಲೂ ಬೆಳೆಯುವುದಿಲ್ಲ ಹೀಗೆಂದು ಕೊಂಡು ತಲೆಯನ್ನು ಕತ್ತರಿಸಿಡಲು ಬಿಂದೀತೆ ? "—ಎಂದು ವ್ಯಂಗ್ಯವಾಗಿ ನುಡಿದರು. ಭಾರತದ ರಕ್ಷಣಾ ಮಂತ್ರಿ ಕೃಷ್ಣಮೆನನ್ ಮತ್ತು ಪ್ರಧಾನಮಂತ್ರಿ ನೆಹರು ಅವರು ಎಚ್ಚರಗೊಳ್ಳುವ ವೇಳೆಗೆ ಭಾರತದ ಸಹಸ್ರಾರು ಚದುರ ಮೈಲಿ ಪ್ರದೇಶವನ್ನು ಚೀನೀ ಸೈನಿಕರು ದುರಾಕ್ರಮಣ ಮಾಡಿದ್ದರು.

ವಸ್ತುಸ್ಥಿತಿ ಭಾರತದ ನಾಯಕರ ಹಾಗೂ ಜನತೆಯ ಕಣ್ಣು ತೆರೆಸುವ ವೇಳೆಗೆ ನಡೆಯಬಾರದ ದುರ್ಘಟನೆ ನಡೆದು ಹೋಗಿತ್ತು. 1954ರಲ್ಲೂ ಭಾರತದೊಂದಿಗೆ

ಮಾಡಿಕೊಂಡಿದ್ದ ಪಂಚಶೀಲ ಒಪ್ಪಂದವನ್ನು ಮರೆತು ಚೀನಾದೇಶದ ನಾಯಕರು ಭಾರತದಮೇಲೆ ಅಕಾರಣವಾಗಿ ಯುದ್ಧ ಘೋಷಿಸಿದ್ದರು.

ಈ ಮಧ್ಯೆ ಚೀನೀನಾಯಕರ ಕುಟಿಲ ನೀತಿಯನ್ನೂ, ಗೋಮುಖ ವ್ಯಾಘ್ರ ತನವನ್ನೂ ಬಯಲು ಮಾಡುವ ಒಂದು ಘಟನೆ ನಡೆಯಿತು. ೧೯೫೯ರಲ್ಲಿ ಚೀನೀ ಸೈನಿಕರು ಟಿಬೇಟನ್ನು ವಶಪಡಿಸಿಕೊಂಡಿದ್ದರಷ್ಟೇ. ಅದರ ಧರ್ಮಗುರು ದಲಾಯಿ ಲಾಮಾ ಎಂಬುವರು ಭಾರತಕ್ಕೆ ಓಡಿ ಬಂದು ಆಶ್ರಯವನ್ನು ಬೇಡಿದ್ದರು. ನೆಹರೂ ರವರು ಪ್ರಾಚೀನ ಭಾರತದ ನೀತಿಯಂತೆ ಶರಣಾಗತರಾಗಿ, ಆಶ್ರಯಬೇಡಿಬಂದ ದಲಾಯಿಲಾಮಾ ಅವರಿಗೆ ಚೀನೀಯರ ಇಷ್ಟದ ವಿರುದ್ಧ ಆಶ್ರಯ ನೀಡಿದ್ದರು. ಈ ಘಟನೆ ೧೯೬೧ರಲ್ಲಿ ಚೀನೀಯರು ಭಾರತದ ಮೇಲೆ ಯುದ್ಧ ಘೋಷಿಸುವಂತೆ ಮಾಡಿತು.

ಪ್ರಧಾನಿ ಜವಹರಲಾಲರು ಚೀನಾ ದೇಶದ ನಾಯಕರ ಕುಟಿಲತನವನ್ನು ಅರಿತು, ಅವರನ್ನು ಶತ್ರುಗಳೆಂದು ಪರಿಗಣಿಸಿದರು. ಚೀನೀ ದುರಾಕ್ರಮಣದ ವಿರುದ್ಧ ಯುದ್ಧವನ್ನು ಘೋಷಿಸಿದರು. ಈ ವೇಳೆಗಾಗಲೇ ಗಡಿ ಪ್ರದೇಶದಲ್ಲೂ ಭಾರತದ ವೀರ ಸೈನಿಕರು ಹಠಾತ್ತನೆ ಒದಗಿದ್ದ ಯುದ್ಧ ದಾಳಿಗೆ ಬಲಿಯಾಗಿ ಸಹಸ್ರ ಸಂಖ್ಯೆಯಲ್ಲಿ ಮಡಿದು ಗಾಯಗೊಂಡಿದ್ದರು. ಇಪ್ಪತ್ತು ಸಾವಿರಕ್ಕೂ ಹೆಚ್ಚು ಭೂ ಪ್ರದೇಶ ಲಡಕ್ ಮತ್ತು ನೀಫಾ ಗಡಿಗಳಲ್ಲಿ ಕೈಬಿಟ್ಟು ಹೋಗಿತ್ತು. ಆಕ್ರಮಿಸಿಕೊಂಡ ಪ್ರದೇಶಗಳಲ್ಲಿ ಮಿಲಿಟರಿ ರಕ್ಷಣಾ ಬಲಗಳು ನೆಲೆಯಾಗಿದ್ದವು. ಅಲ್ಲಿ ರಸ್ತೆ, ಮುಂತಾದ ಸಂಪರ್ಕ ಸಾಧನಗಳ ನಿರ್ಮಾಣ ಕಾರ್ಯಗಳನ್ನು ಕೈಗೊಂಡಿದ್ದರು. ಇಂಥ ಸಮಯದಲ್ಲಿ ನಾಡಿನ ರಕ್ಷಣೆಗಾಗಿ ತುರ್ತುಪರಿಸ್ಥಿತಿಯನ್ನು ಘೋಷಿಸಿ, ನೆಹರು ಅವರು ಜನತೆಗೆ ಹೋರಾಟದ ಕರೆಯನ್ನು ಕೊಟ್ಟಿದ್ದರು, ರಣದೀಕ್ಷೆಯನ್ನು ನೀಡಿದ್ದರು.

೫

ಸಿದ್ಧಯ್ಯ ಪುರಾಣಿಕರು ಕವಿಯಾಗಿದ್ದರೂ ನಾಟಕ ರಚನೆಗೆ ಬೇಕಾದ ಸಿದ್ಧತೆ ಯನ್ನು ಕಳೆದ ನಾಲ್ಕು ದಶಕಗಳಿಂದ ಮಾಡಿಕೊಂಡಿದ್ದರು. ಅವರು ವಿದ್ಯಾರ್ಥಿದೆಸೆ ಯಲ್ಲಿದ್ದಾಗ ಬಸವೇಶ್ವರರ ಜೀವನವನ್ನು ಕುರಿತು 'ಆತ್ಮಾರ್ಪಣೆ' ಎಂಬ ಐತಿಹಾಸಿಕ ನಾಟಕವನ್ನು ರಚಿಸಿದ್ದರು. ಈ ನಾಟಕವನ್ನು ಕುರಿತು "ನಾಟಕದ ಪಾತ್ರಸೃಷ್ಟಿ, ತಂತ್ರ ಮೊದಲಾದವುಗಳಂತೆಯೇ ಬಸವಣ್ಣನವರ ಜೀವನಸಾಧನೆಯನ್ನಷ್ಟೇ ಅಲ್ಲದೆ ಅವರ ಅಂತರಂಗವನ್ನೂ, ಆ ಕಾಲದ ಸಾಮಾಜಿಕ ಪರಿಸ್ಥಿತಿಯನ್ನೂ ಆಳವಾಗಿ ಅಧ್ಯಯನ ಮನನದಿಂದ ಅರಿತು, ಅವನ್ನು ಪ್ರಭಾವಿಯಾಗಿ ನಿರೂಪಿಸುವಲ್ಲಿಯೂ ಕಾವ್ಯಾನಂದರು ಯಶಸ್ವಿಯಾಗಿರುವುದನ್ನು ಇಲ್ಲಿ ಕಾಣಬಹುದು" ಎಂದು ಎಸ್. ವಿ.

ಪಾಟೀಲರು ಬರೆದಿದ್ದಾರೆ. (ಕಾವ್ಯಾನಂದ ಸಂ. ಮಿರ್ಜಿ ಅಣ್ಣಾರಾಯ ಮತ್ತು ಕೃಷ್ಣಕೊಲ್ಹಾರ ಕುಲಕರ್ಣಿ ಪುಟ ೧೬೦).

ಪುರಾಣಿಕರ ಎರಡನೆಯ ಪ್ರಯತ್ನ 'ರಜತರೇಖೆ' ಎಂಬ ರೂಪಕಗಳ ಸಂಗ್ರಹ. ಇದರಲ್ಲಿ ಮಧುಮಹೋತ್ಸವ, ಮೋಹನಮಂತ್ರ, ಮಾಯಾ ಕೋಲಾಹಲ, ಹಾಗೆ ಶ್ರದ್ಧಾಂಜಲಿ, ತುಂಗಭದ್ರೆ, ಮಂಗಲೆ, ದುಃಖಸೇತು, ರಜತರೇಖೆ ಮತ್ತು ಗಿರಿಜೆಯ ಗೆಲವು — ಈ ನಾಟಕಗಳನ್ನು ಪ್ರಸಾರಕ್ಕೆಂದು ಬರೆದಿದ್ದರೂ, ಬಾನುಲಿ ನಾಟಕಗಳಾಗಿಯೂ ರಂಗ ನಾಟಕಗಳಾಗಿಯೂ ಇವು ಯಶಸ್ವಿಯಾಗಿದ್ದವು.

ಅವರು ತಮ್ಮ ಮೊದಲ ನಾಟಕವನ್ನು ಬರೆದದ್ದು ೧೯೩೨ರಲ್ಲಿ. ಭಾರತವೀರದ ರಚನೆ ಮತ್ತು ಪ್ರಕಟಣೆ ೧೯೬೩. ಈ ಮೂರು ದಶಕಗಳ ಅವಧಿಯಲ್ಲಿ ಅವರ ಕವಿ ಚೇತನ ಬೆಳೆದಿತ್ತು. ಸಿದ್ಧಯ್ಯ ಪುರಾಣಿಕರು ಬೆಳೆದು ಕಾವ್ಯಾನಂದರಾಗಿದ್ದರು. ಆದುದರಿಂದ ಭಾರತವೀರ ನಾಟಕದಲ್ಲಿ ಪುರಾಣಿಕರ ಕಾವ್ಯಗುಣ, ಚಿಂತನಶೀಲತೆ ಮತ್ತು ಸಮಕಾಲೀನ ಪ್ರಶ್ನೆಗಳು ಮುಪ್ಪರಿಗೊಂಡು ಒಂದು ಶ್ರೇಷ್ಠ ನಾಟಕ ಕನ್ನಡಕ್ಕೆ ದೊರಕುವಂತಾಯಿತು.

ಭಾರತವೀರ ನಾಟಕದ ಕಥೆಯು ಹಂದರವನ್ನು ಹೀಗೆ ಸಂಗ್ರಹಿಸಬಹುದು. ಇದರಲ್ಲಿ ಮೂರು ಅಂಕಗಳೂ ಇಪ್ಪತ್ತು ಮೂರು ದೃಶ್ಯಗಳೂ ಇವೆ.

ನಾಟಕವು ಕಾಶ್ಮೀರದ ಒಂದು ಸಂಘರಾಮದಲ್ಲಿ ಆರಂಭವಾಗುತ್ತದೆ. ಬೌದ್ಧ ಗುರು ಶಿಷ್ಯರಲ್ಲಿ ಒಂದು ತಾತ್ವಿಕಚರ್ಚೆ ನಡೆದಿದೆ. 'ವೈರದಿಂದ ವೈರದ ಶಮನವೆ ?' ಎಂಬುದೇ ಚರ್ಚೆ. ಇದು ನಡೆದಿರುವಾಗ ಹೂಣರ ದೊರೆ ಕ್ರೂರಿಯಾದ ಮಿಹಿರ ಕುಲನ ಸೈನಿಕರು ಬಂದು ಅವರನ್ನು ಹಿಡಿಯಲೆತ್ನಿಸುತ್ತಾರೆ. ಅವರು ಅಯೋಧ್ಯೆ ಯನ್ನು ಆಳುತ್ತಿದ್ದ ಗುಪ್ತದೊರೆ ನರಸಿಂಹ ಬಾಲಾದಿತ್ಯನ ಬಳಿಗೆ ಆಶ್ರಯ ಬೇಡಿ ಬರುತ್ತಾರೆ. ತೋರಮಾನ ಕ್ರೂರಪುತ್ರ ಮಿಹಿರಕುಲನು ಮಹಾಕ್ರೂರಿ, ದುಷ್ಟ. ತನ್ನ ಒಂದು ಪೈಶಾಚಿಕ ವಿನೋದಕ್ಕೆ ಏಳುನೂರು ಆನೆಗಳನ್ನು ಪ್ರಪಾತಕ್ಕೆ ತಳ್ಳಿಸಿ ಕೊಂದಿದ್ದನಂತೆ.

ಮಗಧಾಧಿಪತಿ ಬಾಲಾದಿತ್ಯ ತಾತ ಹೂಣ ವಿಜೇತ ಸ್ಕಂಧಗುಪ್ತನಂತೆ ವೀರ, ಸ್ವಾಭಿಮಾನಿ, ಪ್ರಜಾವತ್ಸಲ, ಧರ್ಮನಿಷ್ಠ. ಅವನಿಗೆ ತಕ್ಕ ಪತ್ನಿ ಮಿತ್ರಾದೇವಿ. ದೊರೆಗೆ ಮಿಹಿರಕುಲನ ಉಪಟಳ ದುಸ್ವಪ್ನ, ಗುರುಗಳ ಬಳಿಗೆ ಬಂದಾಗ ಗುರುಗಳಾದ ವಸುಬಂಧು ರಾಷ್ಟ್ರರಕ್ಷಣೆಯ, ದುಷ್ಟಶಿಕ್ಷಣ-ಶಿಷ್ಟರಕ್ಷಣೆಯ ದೀಕ್ಷೆ ಕೊಡುತ್ತಾರೆ. ಅವರು ಮಾಳವದ ದೊರೆ ಯಶೋಧರ್ಮನ ನೆರವನ್ನು ಪಡೆಯಲು ಹೊರಡುತ್ತಾರೆ,

ಯಶೋಧರ್ಮನು ಹಿಂದೆ ಗುಪ್ತಸಾಮ್ರಾಜ್ಯದ ಸಾಮಂತನಾಗಿದ್ದನು. ಹಿಂದೊಮ್ಮೆ ಮಿಹಿರಕುಲನನ್ನು ತಾನೊಬ್ಬನೇ ಎದುರಿಸಿ, ಸೋಲಿಸಿ ಹಿಮ್ಮೆಟ್ಟಿಸಿದ್ದ. ಆಗ ಗುಪ್ತದೊರೆ ಅವನ ನೆರವಿಗೆ ಬಂದಿರಲಿಲ್ಲ. ಈ ಅಸಮಾಧಾನ ಅವನಲ್ಲಿ ಇತ್ತು.

ಇವನಿಗೆ ವಸುಬಂಧು ಭಾರತದ ಅಖಂಡತೆಯನ್ನು ಐಕ್ಯತೆಯ ಅನಿವಾರ್ಯತೆಯನ್ನು ಮನಗಾಣಿಸಿಕೊಡುತ್ತಾರೆ. ಅವನ ಪತ್ನಿ ರಾಜ್ಯಲಕ್ಷ್ಮಿಯು ವೇಷಾಂತರದಲ್ಲಿ ಅಯೋಧ್ಯೆಗೆ ಬಂದು ಪತಿ ಯಶೋಧರ್ಮನ ನೆರವನ್ನು ಪ್ರಕಟಿಸುತ್ತಾಳೆ. ಇದೇ ಸಮಯಕ್ಕೆ ಕಾಶ್ಮೀರದಿಂದ ತಪ್ಪಿಸಿಕೊಂಡ ಬೌದ್ಧ ಗುರುಗಳು ಮಿಹಿರಕುಲನಿಂದ ತಮಗೆ ಒದಗಿದ ಆಪತ್ತನ್ನು ನಿವೇದಿಸಿ ಆಶ್ರಯ ಬೇಡುತ್ತಾರೆ. ಬಾಲಾದಿತ್ಯನು ಅವರಿಗೆ ಆಶ್ರಯ ನೀಡುತ್ತಾನೆ. ಎರಡನೆಯ ಅಂಕವು ಮಿಹಿರಕುಲನ ಆಸ್ಥಾನದ ನರ್ತನದಿಂದ ಆರಂಭವಾಗುತ್ತದೆ. ತಾನು ರಕ್ತದ ನದಿ ಹರಿಯುವುದನ್ನು ನೋಡಲು ಇಚ್ಛಿಸುವುದಾಗಿ ಅವನು ಘೋಷಿಸುತ್ತಾನೆ. ಅವನಿಗೆ ಯುದ್ಧ ರಾಜಧರ್ಮವೆನಿಸು ತ್ತದೆ. ಅವನು ಬಾಲಾಧಿತ್ಯನ ಮೇಲೆ ಸೈನ್ಯದೊಡನೆ ದಂಡೆತ್ತಿಬರುವನು. ಯುದ್ಧ ದಲ್ಲಿ ಬಾಲಾದಿತ್ಯನು ಸೈನಿಕರನ್ನು ಹುರುದುಂಬಿಸಿ, ಸೋತ ಮಿಹಿರಕುಲನನ್ನು ಸೆರೆ ಹಿಡಿಯುತ್ತಾನೆ. ಅವನನ್ನು ದಂಡಿಸಬೇಕೆಂದು ಇರುವಾಗ ಪ್ರಾಣಭಿಕ್ಷೆಬೇಡಿದ ಅವನ ಕಪಟ ವರ್ತನೆಗೆ ಮಾರುಹೋದ ರಾಜಮಾತೆಯು ಅವನಿಗೆ ಪ್ರಾಣದಾನ ಮಾಡುತ್ತಾಳೆ. ಮಿಹಿರಕುಲನು ಧರ್ಮನೀಡಿದ ಪ್ರಾಣದಾನವನ್ನು ದುರುಪಯೋಗ ಪಡಿಸಿಕೊಳ್ಳುತ್ತಾನೆ.

ಮೂರನೆಯ ಅಂಕದಲ್ಲಿ ರಾಜ್ಯಕೋಶಗಳನ್ನು ಕಳೆದುಕೊಂಡ ಮಿಹಿರಕುಲನು ಮತ್ತೆ ಸೈನ್ಯಕಟ್ಟಿ ಬಾಲಾದಿತ್ಯನ ಮೇಲೆ ಯುದ್ಧಮಾಡಿ ಸೇಡು ಬಗೆಯಲು ಯೋಚಿಸುವುದರಿಂದ ಆರಂಭವಾಗುತ್ತದೆ. ಅವನ ಸಿಂಹಾಸನ ಸಹೋದರನಿಂದ ಅಪಹರಿಸಲ್ಪಟ್ಟಿದೆ. ಅವನ ಹಿಂಬಾಲಕರು ಭಾರತದಲ್ಲೇ ನೆಲೆಸಿಬಿಟ್ಟಿದ್ದಾರೆ. ಅವನ ದುರ್ಮಂತ್ರಿ ಕಾಶ್ಮೀರದ ದೊರೆ ಶೂರಸೇನನ ಬಳಿ ಆಶ್ರಯಕ್ಕೆ ಹೋಗಲು ಸೂಚಿಸು ತ್ತಾನೆ. ಅದರಂತೆ ಕಾಶ್ಮೀರಾಧಿಪತಿಯ ಬಳಿಗೆ ಹೋಗಿ ಅವನಲ್ಲಿ ರಕ್ಷಣೆ ಪಡೆಯು ತ್ತಾರೆ. ಮೋಸದಿಂದ ಅವನನ್ನು ಸಂಹರಿಸಿ ತಾನೇ ಕಾಶ್ಮೀರದ ದೊರೆಯಾಗುತ್ತಾನೆ. ಮತ್ತೆ ಅವನಿಗೆ ಕೆನ್ನೆತ್ತರಿನ ನೀರಡಿಕೆಯಾಗುತ್ತದೆ. ಅವನು ಅಯೋಧ್ಯೆಯ ಬಾಲಾದಿತ್ಯನ ಮೇಲೆ ಮತ್ತೆ ದಂಡೆತ್ತಿಬರುತ್ತಾನೆ.

ಈ ಬಾರಿ ಈ ದುಷ್ಟನನ್ನು ನಿಗ್ರಹಿಸಲು ನಿಶ್ಚಯಿಸಿದ ಗುಪ್ತದೊರೆ ಬಾಲಾದಿತ್ಯನು ದೇಶದ ಜನತೆಯ – ರೈತ, ಕಾರ್ಮಿಕ, ಬಡಗಿ, ವರ್ತಕರೆನ್ನದೆ ಸಮಸ್ತ ಸ್ತ್ರೀಪುರುಷರ–ನೆರವಿನಿಂದ ಮಿಹಿರಕುಲನನ್ನು ಸೋಲಿಸುತ್ತಾನೆ. ಮಿಹಿರ ಕುಲನು ತಪ್ಪಿಸಿಕೊಂಡು ಬಂದು ಕಾಡಿನಲ್ಲಿ ಅಡಗುತ್ತಾನೆ. ಅವನನ್ನು ಹಿಡಿಯ ಲಾಗದೆ, ಬಾಲಾದಿತ್ಯನ ಸೈನಿಕರು ದುಷ್ಟಜಂತುವನ್ನು ಕೊಲ್ಲುವಂತೆ, ಕ್ರೂರವಾಗಿ ಬೆಂಕಿ ಇಟ್ಟು ಕೊಲ್ಲುತ್ತಾರೆ. ದುಷ್ಟನಿಗೆ ತಕ್ಕ ದುರ್ಮರಣ ದೊರಕುತ್ತದೆ. ತನ್ನ ದುಷ್ಟ ವರ್ತನೆಯಿಂದ ಪ್ರಪಂಚವನ್ನು ನಡುಗಿಸಿದ ಮಿಹಿರಕುಲನು ಬಿರುಗಾಳಿಯನ್ನು ಬಿತ್ತಿ ಪ್ರಳಯಾಗ್ನಿಯನ್ನು ಪಡೆದುಕೊಂಡು ಅದಕ್ಕೆ ಆಹುತಿಯಾಗಿದ್ದನು.

ಮಿಹಿರಕುಲನ ಮರಣದೊಂದಿಗೆ ಭಾರತಕ್ಕೆ ಬಂದಿದ್ದ ಹೂಣರ ಭೀತಿ ನಿವಾರಣೆ ಯಾಯಿತು. ಅವನ ಸಿಂಹಾಸನದಲ್ಲಿ ಬಾಲಾದಿತ್ಯನು ರಾಜಗುರು ವಸುಬಂಧುವಿನ ಸಲಹೆಯಂತೆ ಮಿಹಿರಕುಲನ ಪುತ್ರ ಯೋಗ್ಯನಾದ ಬಕನೆಂಬ ರಾಜಪುತ್ರನನ್ನು ಕೂಡಿಸಿ, ಪಟ್ಟಕಟ್ಟುವನು.

೬

ಸಿದ್ಧಯ್ಯ ಪುರಾಣಿಕರು ಭಾರತವೀರ ನಾಟಕವನ್ನು ಇತಿಹಾಸಕ್ಕೆ ಚ್ಯುತಿಯಾಗ ದಂತೆ ರಚಿಸಿದ್ದಾರೆ. ಈ ಪ್ರಯತ್ನದಲ್ಲಿ ಸಾಫಲ್ಯವನ್ನೂ ಪಡೆದಿದ್ದಾರೆ. ಮಿಹಿರಕುಲ, ಬಕ, ನರಸಿಂಹಗುಪ್ತ ಬಾಲಾದಿತ್ಯ, ಯಶೋಧರ್ಮ, ರಾಜಮಾತೆ—ಮುಂತಾದ ವರು ಐತಿಹಾಸಿಕ ವ್ಯಕ್ತಿಗಳು. ನಾಟಕದಲ್ಲಿ ಚಿತ್ರಿತವಾಗಿರುವ ಘಟನೆಗಳೆಲ್ಲವೂ ಐತಿಹಾಸಿಕ ಸಂಗತಿಗಳೇ. ಕಥೆಯ ಓಟಕ್ಕೆ ಚ್ಯುತಿಬಾರದಂತೆ, ಘಟನೆಗಳ ಹಂದರಕ್ಕೆ ಪೂರಕವಾಗುವಂತೆ ಕೆಲವೊಂದು ಸಂಗತಿಗಳನ್ನು ಲೇಖಕರು ಕಲ್ಪಿಸಿಕೊಂಡಿದ್ದಾರೆ. ಕಥೆ ಮುನ್ನಡೆಯಲು ಸಹಕಾರಿಯಾಗುವಂಥ ಕಾಲ್ಪನಿಕ ಪಾತ್ರಗಳನ್ನೂ ತಂದಿದ್ದಾರೆ. ಇವೆಲ್ಲದರ ಬೆಸುಗೆ ಹದವಾಗಿ ಕೂಡಿಕೊಂಡಿದ್ದು ನಾಟಕದ ಹೆಣಿಗೆ ರಮ್ಯವಾಗಿ ಬಂದಿದೆ.

ಲೇಖಕರು ಎಲ್ಲಾ ಐತಿಹಾಸಿಕ ಚೌಕಟ್ಟನ್ನು ಮೀರಿ ಘಟನೆಗಳನ್ನು ನಡೆಸಿಲ್ಲ. ದೊರಕುವ ಅಲ್ಪಸಂಗತಿಗಳ ಆಧಾರದ ಮೇಲೆ, ಕೆಲವು ಬಾರಿ ಸೂಚನೆಗಳ ಮೇಲೆ ಉನ್ನತ ಪ್ರತಿಭೆಯಿಂದ ಮಾತ್ರ ಸಾಧ್ಯವಾಗಬಹುದಾದ ಒಂದು ಶ್ರೇಷ್ಠ ಐತಿಹಾಸಿಕ ನಾಟಕವನ್ನು ರಚಿಸಿದ್ದಾರೆ. ಲೇಖಕರು ಭಾರತೀಯ ಸಂಸ್ಕೃತಿಯಲ್ಲಿ ಉತ್ತಮವಾದ ಅಂಶಗಳಿಗೆ ಕುಂದಣವಿಟ್ಟಿದ್ದಾರೆ. ಕೇವಲ ಅಸ್ಪಷ್ಟ ಗೆರೆಗಳಾಗಿದ್ದು ಇತಿಹಾಸದ ಚಿತ್ರದಲ್ಲಿ ಕಂಡೂ ಕಾಣದಂತೆ ಮರೆಯಾಗಿ ಇದ್ದ ಅಂಶಗಳನ್ನು ಹಿಗ್ಗಿಸಿ ಸ್ವಾರಸ್ಯವೂ ಸ್ಫೂರ್ತಿಯುತವೂ ಆದ ಪ್ರಭಾವಬೀರಬಲ್ಲ ಒಂದು ಕಲಾಕೃತಿಯನ್ನು ನಿರ್ಮಿಸಿದ್ದಾರೆ.

ಮಿಹಿರಕುಲ – ಬಾಲಾದಿತ್ಯ ಇವರ ಸಂಬಂಧ, ಹೂಣರ ದಾಳಿಯನ್ನು ಹಿಮ್ಮೆಟ್ಟಿಸುವುದರಲ್ಲಿ ಗುಪ್ತಚಕ್ರವರ್ತಿ ನರಸಿಂಹವರ್ಮ ಬಾಲಾದಿತ್ಯನು ನಡೆಸಿದ ಪ್ರಯತ್ನಗಳು — ಇವುಗಳ ಬಗೆಗೆ ಇತಿಹಾಸವು ಏನನ್ನು ಹೇಳುತ್ತದೆ—ಎಂಬುದನ್ನು ಸ್ಥೂಲವಾಗಿ ಪರಿಶೀಲಿಸುವ.

ಸಂಪದ್ಭರಿತ ಭಾರತದ ಮೇಲೆ ಹಿಂದಿನಿಂದಲೂ ವಿದೇಶಿ ಆಕ್ರಮಣಕಾರರು ಮೇಲಿಂದ ಮೇಲೆ ದಾಳಿ ಇಡುತ್ತಿದ್ದುದನ್ನು ಇತಿಹಾಸದ ಪುಟಗಳಲ್ಲೂ ಕಾಣುತ್ತೇವೆ. ಇಂಥವರಲ್ಲಿ ಶಕರೂ, ಹೂಣರೂ ಮುಖ್ಯರು. ನರಸಿಂಹವರ್ಮ ಬಾಲಾದಿತ್ಯನ ತಾತ ಸ್ಕಂದಗುಪ್ತನು ಹೂಣರನ್ನು ಗೆದ್ದು "ಹೂಣ ವಿಜೇತ"ನೆಂದು ಕೀರ್ತಿಪಡೆದಿದ್ದನು. ನಾಟಕದಲ್ಲಿ ಈ ಸಂಗತಿಯು ಉಲ್ಲೇಖ ಒಂದೆಡೆ ಬಂದಿದೆ.

ಹೂಣರು ಒಂದು ಅಲೆಮಾರಿ ಜನಾಂಗ. ಕ್ರಿಸ್ತಪೂರ್ವ ಎರಡನೆಯ ಶತಮಾನದ ವೇಳೆಗೆ ಅವರು ಚೀನಾದ ಗಡಿಯಲ್ಲಿ ವಾಸಿಸುತ್ತಿದ್ದರೆಂದು ತಿಳಿಯುತ್ತದೆ. ಅವರಲ್ಲಿ ಒಂದು ಗುಂಪು ಓಲ್ಗಾ ನದಿಯ ಕಡೆಗೂ, ಇನ್ನೊಂದು ಗುಂಪು ಅಕ್ಸಸ್ ನದಿಯ ದಂಡೆಯ ಕಡೆಗೂ ಕ್ರಿ. ಪೂ. ಒಂದನೆಯ ಶತಮಾನದ ವೇಳೆಗೆ ಹೊರಟಂತೆ ತೋರುತ್ತದೆ. ಮುಂದೆ ಐದನೆಯ ಶತಮಾನದಲ್ಲಿ ಬಿಳಿಯ ಹೂಣರೆಂದು ಪ್ರಸಿದ್ಧರಾದ ಇವರು ಪರ್ಶಿಯ ಮತ್ತು ಭಾರತದ ಕಡೆಗೆ ವಲಸೆ ಹೊರಟರು. ಅವರು ಹಿಂದೂಖುಷ್ ಪರ್ವತವನ್ನು ದಾಟಿ ಗಾಂಧಾರವನ್ನು (ಆಫ್ಘನಿಸ್ಥಾನ) ಆಕ್ರಮಿಸಿಕೊಂಡು ಮುಂದೆ ಭಾರತದ ಮೇಲೆ ದಂಡೆತ್ತಿ ಬಂದರು. ಅವರನ್ನು ಕ್ರಿ.ಶ. 460ರಲ್ಲಿ ತಡೆದು ಹಿಮ್ಮೆಟ್ಟಿಸಿದವನೇ ಗುಪ್ತಸಾಮ್ರಾಟ ಸ್ಕಂಧಗುಪ್ತ.

ಪರ್ಶಿಯಾ ದೇಶದ ಕಡೆಗೆ ಹೊರಟ ಹೂಣರ ಇನ್ನೊಂದು ಗುಂಪು ಪರ್ಶಿಯಾ ದೇಶವನ್ನು (ಇಂದಿನ ಇರಾನ್) ಆಕ್ರಮಿಸಿಕೊಂಡು ಬಾಲ್ಕ (Balkh) ಎಂಬ ಪಟ್ಟಣವನ್ನು ರಾಜಧಾನಿ ಮಾಡಿಕೊಂಡು ಬಹಳ ಕಾಲ ಆಳಿದರು.

ಆರನೆಯ ಶತಮಾನದಲ್ಲಿ ತೋರಮಾನನೆಂಬ ಹೂಣ ದೊರೆಯು ಪ್ರಬಲನಾಗಿ ಪಶ್ಚಿಮಭಾರತದ ಬಹುಭಾಗದ ಪ್ರದೇಶವನ್ನು ಗೆದ್ದು ಆಳ್ವಿಕೆ ನಡೆಸಿದನು. ಇವನು ಮಧ್ಯಪ್ರದೇಶದ ಸೌಗರ್ ಪಟ್ಟಣವನ್ನೂ ಆಳುತ್ತಿದ್ದನೆಂದು ಹೇಳುತ್ತಾರೆ. ಇವನಿಗೆ ಭಾರತದ ಇಂದಿನ ಉತ್ತರ ಪ್ರದೇಶ ಪಂಜಾಬ್, ಕಾಶ್ಮೀರಗಳು ಅಧೀನವಾಗಿದ್ದುವಂತೆ. ಇವನು ತನ್ನ ಕಡೆಗಾಲದಲ್ಲಿ ಜೈನಧರ್ಮ ಸ್ವೀಕರಿಸಿದನೆಂದು ಕ್ರಿ. ಶ. 778ರಲ್ಲಿ ರಚಿತವಾದ ಕುವಲಮಾಲಾ ಎಂಬ ಗ್ರಂಥದಿಂದ ತಿಳಿಯುತ್ತದೆ.

ಈ ತೋರಮಾನನ ಮಗನೇ ಮಿಹಿರಕುಲ. ಇವನು ಕ್ರಿ. ಶ. 515ರಲ್ಲಿ ಸಾಕಲ (ಸಿಯಾಲಕೋಟೆ) ಎಂಬ ಪಟ್ಟಣದಲ್ಲಿ ಸಿಂಹಾಸನವನ್ನೇರಿದನು. ಮಿಹಿರಕುಲನು ನಿರ್ದಯಿಯೂ, ಕ್ರೂರಿಯೂ ಆಗಿದ್ದ ನಿರಂಕುಶ ಪ್ರಭುವೆಂದು ಇತಿಹಾಸದಲ್ಲಿ ವರ್ಣಿಸಲ್ಪಟ್ಟಿದ್ದಾನೆ. ಇವನು ಅತ್ಯಂತ ಘೋರವಾದ ಪೈಶಾಚಿಕ ಕರ್ಮದಲ್ಲಿ ಆಸಕ್ತನಾಗಿದ್ದನಂತೆ. ಈ ಸಂಗತಿಗಳು ಚೀನಾ ದೇಶದ ಬೌದ್ಧಯಾತ್ರಿಕ ಹ್ಯೂಯನ್ ತ್ಸಾಂಗನ ಬರವಣಿಗೆಗಳಿಂದಲೂ ತಿಳಿಯುತ್ತವೆ.

ಮಿಹಿರಕುಲನಿಗೆ ಗೊಲ್ಲಾಸ್ ಎಂಬ ಇನ್ನೊಂದು ಹೆಸರು ಇದ್ದಂತೆ ತಿಳಿಯುತ್ತದೆ. ಇವನು ಶಾಂತಿಪ್ರಿಯರಾದ ಬೌದ್ಧಭಿಕ್ಷುಗಳಿಗೆ ಹಿಂಸೆ ಕೊಡುತ್ತಿದ್ದನೆಂದೂ, ಬೌದ್ಧ ಸ್ಥೂಪಗಳನ್ನು ಕೊಳ್ಳೆ ಹೊಡೆಯುತ್ತಿದ್ದನೆಂದೂ ಚೀನಾದೇಶದ ಯಾತ್ರಿಕರ ಬರೆಹಗಳಿಂದ ತಿಳಿಯುತ್ತದೆ.

ಮಿಹಿರಕುಲನು ಒಮ್ಮೆ ಮಾಳವದ ದೊರೆ ಯಶೋಧರ್ಮನಿಂದ ಸೋಲನ್ನು ಅನುಭವಿಸಿ ನನ್ನ ರಾಜಧಾನಿಗೆ ಹಿಮ್ಮೆಟ್ಟಬೇಕಾಯಿತೆಂದೂ, ಮತ್ತೊಮ್ಮೆ ದಂಡೆತ್ತಿ ಬಂದಾಗ ಮಗಧ ರಾಜ್ಯದ ಗುಪ್ತವಂಶದ ದೊರೆ ಬಾಲಾದಿತ್ಯನು ಅವನನ್ನು ಸೋಲಿಸಿ

ಸೆರೆಹಿಡಿದನೆಂದೂ, ಆದರೆ ರಾಜಮಾತೆಯು ಅವನನ್ನು ಕ್ಷಮಿಸಿ ಜೀವದಾನ ಮಾಡಿದ ಳೆಂದೂ ರಾಜತರಂಗಿಣಿ ತಿಳಿಸುತ್ತದೆ. ಅವನು ಶೈವಧರ್ಮದ ಪೋಷಕನಂತೆ. ಕಾಶ್ಮೀರ ದೊರೆಯು ರಕ್ಷಣೆ ಪಡೆದು, ಮುಂದೆ ಅವನನ್ನು ಮೋಸದಿಂದ ಕೊಂದು ಮತ್ತೊಮ್ಮೆ ಭಾರತದ ಮೇಲೆ ದಾಳಿ ಇಟ್ಟು ಕಡೆಗೆ ಕಾಡಿನ ಬೆಂಕಿಯಲ್ಲಿ ಸಿಕ್ಕಿ ಉರಿದು ಹೋದನೆಂದೂ ರಾಜತರಂಗಿಣಿಯನ್ನು ಬರೆದ ಕಲ್ಹಣನು ಹೇಳುತ್ತಾನೆ.

ಅವನ ಕ್ರೌರ್ಯದ ಬಗೆಗೆ ಕಲ್ಹಣನು ಪ್ರಸ್ತಾಪಿಸುತ್ತಾ "ಅವನ ಬರುವಿಕೆ ಯನ್ನು ಆಗಸದಲ್ಲಿ ಗುಂಪು ಗುಂಪಾಗಿ ಮಂಡಲಾಕಾರವಾಗಿ ಹಾರಿಬರುವ ಹದ್ದು-ಕಾಗೆ ಗಳೇ ಸೂಚಿಸುತ್ತಿದ್ದವು. ಅವು ಅವನನ್ನು ಸುತ್ತುವರಿದು ಬರುತ್ತಿದ್ದ ಅವನ ಸೈನ್ಯವು ತುಂಡರಿಸಿ ಚೆಲ್ಲುತ್ತಿದ್ದ ಜೀವಿಗಳನ್ನು ಭಕ್ಷಿಸಲು ಕಾತರವಾಗಿದ್ದವು" — ಎಂಬುದಾಗಿ ತಿಳಿಸುತ್ತಾನೆ.

ಮಿಹಿರಕುಲನು ಒಮ್ಮೆ ವಿನೋದಕ್ಕೆಂದು ಕಾಶ್ಮೀರದ ಪೀರ್‌ಪಂಜರ್ ಕಣಿವೆ ಯಲ್ಲಿ ನೂರಾರು ಆನೆಗಳನ್ನು ಬೆಟ್ಟದಿಂದ ಕಣಿವೆಗೆ ನೂಕಿಸಿ ಅವು ಆಕ್ರಂದನ ಮಾಡುವು ದನ್ನು ಕೇಳಿ, ಮಡಿಯುವುದನ್ನು ನೋಡಿ ಆನಂದಿಸಿದನಂತೆ. ಇಂದಿಗೂ ಈ ಸ್ಥಳ ವನ್ನು ಹಸ್ತಿವಾಂಜ್ ಎಂದು ಕರೆಯುತ್ತಾರೆ. (ಹಸ್ತಿವಂಶನ = ಹಸ್ತಿನಾಶಕ) ಇವನು ತನಗೆ ಎದುರಾದ ಒಂದು ಬಂಡೆಯನ್ನು ಕೆಡಹಲು ಸಾವಿರಾರು ಮಂದಿ ಸ್ತ್ರೀಯರನ್ನು ಕ್ರೂರವಾಗಿ ಹಿಂಸಿಸಿ ಕೊಂದನೆಂದೂ ಕಲ್ಹಣನು ತಿಳಿಸುತ್ತಾನೆ.

ಮಿಹಿರಕುಲನು ಕಡೆಗಾಲದಲ್ಲಿ ಶೈವಮತ ಸ್ವೀಕರಿಸಿದನೆಂದೂ, ಅಶುದ್ಧವಾದ ಮ್ಲೇಚ್ಛ ಪ್ರಭಾವದಿಂದ ಬಿಡುಗಡೆ ಹೊಂದಿದನೆಂದೂ ಇನ್ನೊಂದು ಐತಿಹ್ಯವಿದೆ. ಅವನ ಲಾಂಛನ, ಹಾಗೂ ನಾಣ್ಯಗಳ ಮೇಲೆ ಅವನ ಶೈವಧರ್ಮಾಭಿಮಾನವನ್ನು ಸೂಚಿಸುವ ಚಿತ್ರಗಳಿದ್ದವು. ಅವನು ಶ್ರೀನಗರದ ಬಳಿ ಒಂದು ಶಿವಾಲಯವನ್ನು ಕಟ್ಟಿಸಿದನಂತೆ. ಇಂದಿನ ವುಲಾರ್ ಪಟ್ಟಣಕ್ಕೆ ಮಿಹಿರಪುರವೆಂದು ನೂತನ ಹೆಸರು ಇಟ್ಟಿದ್ದನಂತೆ. ವಿಜಯೇಶ್ವರದ ಬಳಿ ಒಂದು ಸಾವಿರ ಅಗ್ರಹಾರವನ್ನು ನಿರ್ಮಿಸಿದ ನೆಂದೂ, ಬೇರೆ ಶ್ರೇಷ್ಠ ಬ್ರಾಹ್ಮಣರು ಅದನ್ನು ಸ್ವೀಕರಿಸಲು ನಿರಾಕರಿಸಿದುದರಿಂದ ಗಾಂಧಾರ ಬ್ರಾಹ್ಮಣರಿಗೆ ಅದನ್ನು ದಾನಮಾಡಿದನೆಂದೂ ಉಲ್ಲೇಖನವಿದೆ. ಇವನು ದೂರದ ಕರ್ನಾಟಕ, ತಂಜಾವೂರು, ಸಿಂಹಳ, ಗುಜರಾತುಗಳ ಮೇಲೆ ದಂಡೆತ್ತಿ ಬಂದಿದ್ದನೆಂದು ಕಲ್ಹಣನು ರಾಜತರಂಗಿಣಿಯಲ್ಲಿ ಹೇಳಿರುವ ಸಂಗತಿಗಳು ಉತ್ಪ್ರೇಕ್ಷೆ ಯಿಂದ ಕೂಡಿದ್ದಂತೆ ತೋರುತ್ತದೆ.

ಮಿಹಿರಕುಲನ ಅಂತ್ಯ ಹೇಗಾಯಿತು ? ಈ ಬಗ್ಗೆ ಇತಿಹಾಸಕಾರರಲ್ಲಿ ಒಮ್ಮತ ವಿಲ್ಲ. ಇವನು ಶತ್ರುಗಳಿಗೆ ಹೆದರಿ ಓಡಿಹೋಗಿ ಕಾಡಿನಲ್ಲಿ ಅಡಗಿದ್ದಾಗ ಕಾಳ್ಗಿಚ್ಚಿಗೆ ಸಿಕ್ಕಿ ಮರಣ ಹೊಂದಿದನೆಂದು ಕೆಲವರೂ, ಮೇಲಿಂದ ಮೇಲೆ ಬಂದು ಕಾಡುತ್ತಿದ್ದ

ಮನೋವ್ಯಾಧಿಗೆ ಬೇಸತ್ತು ಹೋಮಾಗ್ನಿಯನ್ನು ರಚಿಸಿಕೊಂಡು ಈ ಚಿತೆಯನ್ನು ಪ್ರವೇಶಿಸಿದನೆಂದು ಮತ್ತೆ ಕೆಲವರೂ ಹೇಳುತ್ತಾರೆ.

ಕ್ರಿ. ಶ. ೫೨೦ರಲ್ಲಿ ಗಾಂಧಾರವನ್ನು ಆಳುತ್ತಿದ್ದ ಒಬ್ಬ ಹೂಣ ದೊರೆಯ ಆಸ್ಥಾನದಲ್ಲಿ ಇದ್ದ ಸಂಗ್‌ಯುನ್ ಎಂಬ ಚೀನಾದೇಶದ ರಾಯಭಾರಿಯು ಮಿಹಿರ ಕುಲನ ಉಲ್ಲೇಖ ಮಾಡಿದ್ದಾನೆ. ಅವನು ಕ್ರೂರಿಯೂ, ಪ್ರತೀಕಾರ ಮನೋಭಾವ ದವನೂ ಆಗಿದ್ದನೆಂದು ತಿಳಿಸುತ್ತಾನೆ. ಅವನು ಬೌದ್ಧಮತವನ್ನು ನಂಬದೆ ಭೂತಾ ರಾಧನೆ (ಲಿಂಗಾರಾಧನೆ !) ಮಾಡುತ್ತಿದ್ದನೆಂದೂ ಕಾಶ್ಮೀರ ದೊರೆಯೊಂದಿಗೆ ಗಡಿ ವಿವಾದದಲ್ಲಿ ಯುದ್ಧಮಾಡುತ್ತಿದ್ದನೆಂದೂ ಅವನು ಬರೆಯುತ್ತಾನೆ. ಮಿಹಿರಕುಲನ ಬಳಿ ಏಳುನೂರು ಮದಿಸಿದ ಆನೆಗಳು ಇದ್ದುವಂತೆ. ಯಶೋಧರ್ಮನು ಹಿಮಾಲಯ ವನ್ನು ಕೋಟೆಯನ್ನಾಗಿ ಮಾಡಿಕೊಂಡಿದ್ದ ಮಿಹಿರಕುಲನನ್ನು ಬಾಹುಬಲದಿಂದ ಜಗ್ಗಿಸಿದನೆಂದೂ ಸುಂಗ್‌ಯುನ್‌ನ ಬರೆವಣಿಗೆಯಿಂದ ತಿಳಿಯುತ್ತದೆ.

ಮಿಹಿರಕುಲನು ಬಾಲಾದಿತ್ಯನಿಗೆ ಸೋತು ಸೆರೆಸಿಕ್ಕಿದಾಗ ಅವನಿಗೆ ಪ್ರಾಣದಾನ ನೀಡಿದವಳು ಬಾಲಾದಿತ್ಯನ ತಾಯಿ ರಾಜಮಾತೆ. ಮಿಹಿರಕುಲನು ಭಾರತದ ಮೇಲೆ ದಂಡೆತ್ತಿ ಬಂದಿದ್ದಾಗ ಅವನಿಲ್ಲದಾಗ ಅವನ ಸಿಂಹಾಸನವನ್ನು ಅವನ ಸಹೋದರನು ಆಕ್ರಮಿಸಿಕೊಂಡನೆಂದೂ ಮಿಹಿರಕುಲನು ಕಾಶ್ಮೀರದ ದೊರೆಯನ್ನು ಮೋಸದಿಂದ ಕೊಂದು ಕಾಶ್ಮೀರವನ್ನು ಆಕ್ರಮಿಸಿಕೊಂಡನೆಂದೂ, ಬೌದ್ಧರನ್ನು ಹಿಂಸಿಸಿದ ಅವನನ್ನು ಬಾಲಾದಿತ್ಯನು ನಿಗ್ರಹಿಸಿ, ಕೊಂದನೆಂದೂ ಹ್ಯೂಯನ್‌ತ್ಸಾಂಗನ ಬರೆವಣಿಗೆಯಿಂದ ತಿಳಿಯುತ್ತದೆ.

ಈ ಎಲ್ಲ ಐತಿಹಾಸಿಕ ಸಂಗತಿಗಳು ಆರ್. ಸಿ. ಮಜುಮದಾರರು ಬರೆದಿರುವ ಪ್ರಾಚೀನ ಭಾರತ ಗ್ರಂಥದಲ್ಲಿ (ಪುಟಗಳು ೨೫೪-೫೫) ಬಂದಿವೆ .ಅಲ್ಲದೆ ಭಾರತೀಯ ವಿದ್ಯಾಭವನದವರು ಪ್ರಕಟಿಸಿರುವ 'ದಿ ಕ್ಲಾಸಿಕಲ್ ಏಜ್' ಎಂಬ ಗ್ರಂಥದಲ್ಲೂ ಮಜುಮದಾರ, ರಾಯಚೌಧರಿ ಮತ್ತು ಕಾಳೀಕಿಂಕರದತ್ತ ಇವರು ಬರೆದ ಭಾರತದ ಪ್ರೌಢ ಇತಿಹಾಸ ಗ್ರಂಥದಲ್ಲೂ ಉಲ್ಲೇಖಿತವಾಗಿವೆ.

ಸಿದ್ಧಯ್ಯ ಪುರಾಣಿಕರು ಈ ಎಲ್ಲ ಐತಿಹಾಸಿಕ ಸಂಗತಿಗಳ ಜತೆಗೆ. ಕಲ್ಹಣನ ರಾಜತರಂಗಿಣಿಯು ಒದಗಿಸಿರುವ ಸಂಗತಿಗಳನ್ನೂ ಉಪಯೋಗಿಸಿಕೊಂಡು ಸಮರ್ಥ ರೀತಿಯಲ್ಲಿ ಈ ನಾಟಕ ರಚನೆ ಮಾಡಿದ್ದಾರೆ.

೭

ಭಾರತವೀರ ನಾಟಕದಲ್ಲಿ ಸಮಕಾಲೀನ ಪ್ರಜ್ಞೆ ಹದವರಿತು ಬಂದಿದೆ. ಇದಕ್ಕೆ ಒಂದೆರಡು ದೃಷ್ಟಾಂತಗಳನ್ನು ನೋಡಬಹುದು.

ಭಾರತವೀರ ನಾಟಕದ ಮೊದಲ ಅಂಕದ ಪ್ರಥಮ ದೃಶ್ಯವು ಆರಂಭವಾಗು ವಾಗುವುದು ಕಾಶ್ಮೀರದ ಈಗಿನ ಲಡಕ್ ಪ್ರದೇಶದಲ್ಲಿನ ಒಂದು ಸಂಘರಾಮದಲ್ಲಿ. ಮಿಹಿರಕುಲನ ಸೈನಿಕರು ಅಲ್ಲಿನ ಬೌದ್ಧ ಗುರು-ಶಿಷ್ಯರನ್ನೂ, ಭಿಕ್ಷುಗಳನ್ನೂ ವಿನಾಕಾರಣ ಶಿಕ್ಷಿಸಲು ಪ್ರಯತ್ನ ಪಡುತ್ತಾರೆ. ಅವರು ದುಷ್ಟನಾದ ಮಿಹಿರಕುಲನ ಕೈಯಿಂದ ತಪ್ಪಿಸಿಕೊಂಡು ನರಸಿಂಹಗುಪ್ತ ಬಾಲಾದಿತ್ಯನ ಬಳಿಗೆ ಆಶ್ರಯ ಬೇಡಿಬರುತ್ತಾರೆ. ಈ ಸಂಗತಿ ಚೀನೀಯರ ವಿನಾಕಾರಣ ದ್ವೇಷಕ್ಕೆ ಪಕ್ಕಾಗಿ ಅವರಿಂದ ತಪ್ಪಿಸಿಕೊಂಡು ಭಾರತಕ್ಕೆ ಬಂದು ಆಶ್ರಯಪಡೆದ ಟಿಬೇಟಿನ ಧರ್ಮಗುರು ದಲಾಯಿಲಾಮಾ ಹಾಗೂ ಅವರ ಸಂಗಡಿಗರ ಪ್ರಸಂಗವನ್ನು ನೆನಪಿಗೆ ತರುತ್ತದೆ. ಎರಡು ಪ್ರಸಂಗದಲ್ಲೂ ಬೌದ್ಧ ಗುರುಗಳಿಗೆ ಒದಗಿದ್ದ ತೊಂದರೆ ಎದ್ದು ಕಾಣುತ್ತದೆ ; ಎರಡು ಘಟನೆಗಳು ನಡೆಯುವುದೂ ಹಿಮಾಲಯದ ಹಿಮಾವೃತವಾದ ಪವಿತ್ರಪರಿಸರದಲ್ಲಿ. ಇದು ಕಾಕತಾಳೀಯ ಘಟನೆ ಎಂದು ತೋರುವುದಿಲ್ಲ. ಸಮಕಾಲೀನ ಪ್ರಜ್ಞೆಯುಳ್ಳ ಲೇಖಕ ತಮ್ಮ ಅಭಿವ್ಯಕ್ತಿಗೆ ಬೇಕಾದ ಈ ಘಟನೆಯನ್ನು ಸಾಂಕೇತಿಕವಾಗಿ ಬಳಸಿಕೊಂಡಿದ್ದಾರೆ.

ಇನ್ನೊಂದು ಸಂದರ್ಭ. ಮಿಹಿರಕುಲನು ಕಾಶ್ಮೀರದ ದೊರೆ ಶೂರಸೇನನ ರಾಜ್ಯವನ್ನು ದುರಾಕ್ರಮಿಸಲು ಹೂಡಿದ ಸಂಚು. ಮೊದಲು ಕಾಶ್ಮೀರದ ದೊರೆಯ ಮನವೊಲಿಸಿಕೊಂಡ ಮಿಹಿರಕುಲನು ಅವನಿಂದ ಒಂದು ಸಣ್ಣಪ್ರದೇಶವನ್ನು ಬೇಡಿ, ದೊರಕಿಸಿಕೊಳ್ಳುವನು. ಅನಂತರ ಕಾಶ್ಮೀರ ದೊರೆಯೊಂದಿಗೆ ಗಡಿವಿವಾದ ಹೂಡಲು ಕುಂಟುನೆಪ ಹುಡುಕುವನು. "ನಿಮ್ಮ ಸೈನಿಕರು ನಿರ್ನಿಮಿತ್ತವಾಗಿ ನಮ್ಮ ಗಡಿಯೊಳಗೆ ನುಗ್ಗಿಬರುತ್ತಿರುವುದು ದುರದೃಷ್ಟಕರವಾದುದು" ಎಂದು ದೂರಿ, ಮೋಸದಿಂದ ಕಾಶ್ಮೀರದ ದೊರೆಯನ್ನು ಕೊಂದು, ತಾನೇ ಕಾಶ್ಮೀರಾಧಿಪತಿಯಾಗುವನು. ಈ ಸಂಗತಿ ಚೌಎನ್‌ಲೈ ಮಹಾಶಯನು ಭಾರತವು ಮೆಕ್‌ಮೋಹನ್‌ಲೈನ್ ಗಡಿರೇಖೆ ಯನ್ನು ಉಲ್ಲಂಘಿಸಿದೆ ಎಂದು ಆಕ್ಷೇಪಿಸಿ, ತಮ್ಮ ಸೈನ್ಯಕ್ಕೆ ಭಾರತದ ಭೂಭಾಗವನ್ನು ಆಕ್ರಮಿಸಿಕೊಳ್ಳಲು ಆಜ್ಞೆಮಾಡಿದ ಸಂದರ್ಭವನ್ನು ನೆನಪಿಗೆ ತರುತ್ತದೆ.

ಈ ಎರಡು ಸಂದರ್ಭಗಳಲ್ಲೂ ಸಮಾನವಾದ ಅಂಶ ಅನ್ಯಾಯದ ಈ ದುರಾಕ್ರಮಣವನ್ನು ಭಾರತೀಯ ಸ್ತ್ರೀಪುರುಷರು ಎದುರಿಸಿ ಹೋರಾಡಿದುದು ಮಾತ್ರವಲ್ಲ, ದೇಶದ ಐಕ್ಯಮತ್ಯ, ಸಮಗ್ರತೆಗೆ ಭಂಗತರುವ ಎಲ್ಲಾ ಪ್ರಯತ್ನಗಳನ್ನು ದಮನಮಾಡಿ, ಒಂದು ವ್ಯಕ್ತಿಯಂತೆ ನಿಂತುದು. ನಾಟಕದಲ್ಲಿ ಮಿತ್ರಾದೇವಿ, ರಾಜಮಾತೆ, ರಾಜಗುರು ವಸುಬಂಧು ಮುಂತಾದ ಸಮಾಜದ ಮೇಲ್ವರ್ಗದ ಸುಶಿಕ್ಷಿತ ಜನ ಮಾತ್ರವಲ್ಲ, ರೈತಕಾರ್ಮಿಕರಾದಿಯಾಗಿ ಎಲ್ಲರೂ ಸಂಘಟಿಸಿ ನಿಂತು, ಆಪತ್ತಿನ ಪ್ರಸಂಗದಲ್ಲಿ ಹೋರಾಟ ನಡೆಸುವರು.

ಭಾರತವೀರ ನಾಟಕದಲ್ಲಿ ರಾಷ್ಟ್ರರಕ್ಷಣೆಯ ಕರೆ ಬಂದಿದೆ ನಿಮ್ಮ ಉತ್ತರವೇನು ? ಎಂದು ನಾಡದೇವಿ ಕೇಳುತ್ತಾಳೆ.

"ಯುದ್ಧಮಾಡುವ ಯೋಧರಿಗಾಗಿ ಆಹಾರ ಬೆಳೆಯುತ್ತೇನೆ"—ಎನ್ನುತ್ತಾನೆ ಬೇಸಾಯಗಾರ.

"ಆಯುಧಗಳನ್ನು ತಯಾರಿಸುತ್ತೇನೆ"—ಎನ್ನುತ್ತಾನೆ ಕಮ್ಮಾರ.

"ಬಾಚಿಯನ್ನು ಹಿಡಿದ ಈ ಕೈ ಬಿಲ್ಲುಬಾಣಗಳನ್ನು ಹಿಡಿಯುವುದು"—ಎನ್ನುತ್ತಾನೆ ಬಡಗಿ.

ಕೂಲಿಗಾರ ತನ್ನ ಗಟ್ಟಿ ತೋಳುಗಳೇ ತನ್ನ ಆಯುಧವೆಂದು ಹೇಳುತ್ತಾನೆ. ಗೃಹಿಣಿ ಒನಕೆಯನ್ನು ಆಯುಧವಾಗಿ ಹಿಡಿಯುತ್ತಾಳೆ. ವರ್ತಕ ಬೆಲೆಗಳು ಏರದಂತೆ ನೋಡಿಕೊಳ್ಳುವುದಾಗಿಯೂ, ಸಂನ್ಯಾಸಿ ರಾಷ್ಟ್ರಕ್ಕೆ ಗಂಡಾಂತರ ಬಂದಿರುವ ಸಮಯದಲ್ಲಿ ಕೃಷ್ಣಾಜಿನ ಹಿಡಿದ ಕೈಯಲ್ಲಿ ಖಡ್ಗ ಹಿಡಿಯಲು ಹಿಂಜರಿಯುವುದಿಲ್ಲವೆಂದೂ ಘೋಷಿಸುತ್ತಾರೆ. ಈ ಎಲ್ಲ ಘೋಷಣೆಗಳು ಅಂದಿನ ಕರಾಳ ದಿನಗಳಲ್ಲಿ ದಿನನಿತ್ಯ ಎಲ್ಲೆಲ್ಲೂ ಕೇಳ ಬರುತ್ತಿದ್ದ ಉದ್ಗಾರದ ಮಾತುಗಳೇ, ಹಿಮಗಿರಿಯ ಕಂದರದಲ್ಲಿ ಬೆಂಕಿ ಹೊತ್ತಿದೆ ಎಂದಿತು ಅಂದಿನ ಕವಿವಾಣಿ. ಇದರ ಮೊಳಗು ಭಾರತವೀರ ನಾಟಕದಲ್ಲಿ ಕೇಳುತ್ತದೆ.

ರಾಷ್ಟ್ರಭಕ್ತಿಯ ಬಗ್ಗೆ ಈ ನಾಟಕದಲ್ಲಿ ನೆನಪಿಡಬೇಕಾದ ಅನೇಕ ಚಿರಂತನ ಮೌಲ್ಯದ ಮಾತುಗಳು ಬಂದಿದೆ. ಕೆಲವನ್ನು ಇಲ್ಲಿ ನೋಡಬಹುದು.

"ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ–ಮುಂದಿಟ್ಟ ಹೆಜ್ಜೆಯ ಹಿಂದಿಟ್ಟವ ಹೇಡಿ."

"ದೇಶ ಹಾಳಾದರೂ ನಾನು ಬದುಕಬಲ್ಲೆ ಅನ್ನೋದು ಭ್ರಮೆ. ನಾವು ದೇಶಕ್ಕಾಗಿ ಮಡಿದರೆ ಮಡದಿ ಮಕ್ಕಳನ್ನು ದೇಶವು ಸಲಹುತ್ತದೆ."

"ಭರತಮಾತೆಯ ವಾಹನ ಸಿಂಹ. ಸಿಂಹದ ಸಂತಾನ ನೀವು."

"ರಾಷ್ಟ್ರಭಕ್ತಿಯನ್ನು ತಕ್ಕಡಿಯಲ್ಲಿಟ್ಟು ತೂಗಬಹುದೇ ?"

"ಮಾನ ಹೋದಮೇಲೆ ಮರಣ ಬಂದಹಾಗೆ."

"ಮಹತ್ವಾಕಾಂಕ್ಷೆಯುಳ್ಳವರು ಮಹಾಸಾಹಸಕ್ಕೂ ಸಿದ್ಧರಾಗಿರಬೇಕು."

"ಕೈಲಾಗದವರಿಗೆ ದೊಡ್ಡ ಆಸೆ ಇರಬಾರದು."

"ಗೃಹಿಣಿಯರು ಇಂದು ಕೇಸರಿಣಿಯರು."

"ಪಶುಗಳೂ ಸಹ ಉಪಕಾರ ಗೈದವರಿಗೆ ಅಪಕಾರವೆಸಗುವುದಿಲ್ಲ."

"ಭಾರತವು ಅವಿಭಾಜ್ಯವಾದುದು, ಅಖಂಡವಾದುದು."

"ಬಿರುಗಾಳಿಗೆ ಮರ ಮುರಿದುಬಿದ್ದಾವು ; ಮೇರು-ಪರ್ವತಕ್ಕಾವ ಭಯ ?"

ಇಂಥವೇ ನೆನಪಿನಲ್ಲಿ ಉಳಿಯುವ ಮಾತುಗಳು ಪುಟ ಪುಟಗಳಲ್ಲೂ ಮಿಂಚುತ್ತವೆ. ಇಲ್ಲಿನ ಪಾತ್ರಗಳ ಬಾಯಲ್ಲಿ ಹಾಕಿರುವ ಮಾತುಗಳು ಗಂಡಾಂತರದ ಅಂದಿನ

ದಿನಗಳಲ್ಲಿ ರಾಷ್ಟ್ರನಾಯಕರು ಜನತೆಯನ್ನು ಎಚ್ಚರಿಸಲು ಆಡುತ್ತಿದ್ದ ಮಾತುಗಳೇ ಆಗಿವೆ.

ನಾಟಕ ಆರಂಭವಾಗುತ್ತಿದ್ದಂತೆ ಈ ಮಾತು ಬರುತ್ತದೆ. "ವೈರದಿಂದ ವೈರದ ಶಮನ ಸಾಧ್ಯವಿಲ್ಲ; ಅವೈರದಿಂದಲೇ ವೈರದ ಶಮನ ಸಾಧ್ಯ"—ಇದು ಬುದ್ಧನು ಹೇಳಿದ ಮಾತು, ಭಾರತದ ಆತ್ಮದ ಉಸಿರು. ಇದನ್ನೇ ನಾಟಕದಲ್ಲಿ ಬೌದ್ಧ ಗುರು ಹೇಳುತ್ತಾನೆ.

"ಭರತಮಾತೆಯ ಒಂದು ಅಂಗಕ್ಕೆ ಗಾಯವಾದರೆ ಉಳಿದ ಅಂಗಗಳಿಗೆ ನೋವಾಗುವುದಿಲ್ಲವೆ? ಶರೀರದ ಯಾವ ಅವಯವ ದುರ್ಬಲವಾದರೂ ಸಮಗ್ರ ಶರೀರವೆ ದುರ್ಬಲವಾಗುವುದಿಲ್ಲವೆ ?"–ರಾಜಗುರು ವಸುಬಂಧು ಬಾಲಾದಿತ್ಯನಿಗೆ ಹೇಳುತ್ತಾರೆ. ಇದು ಇಂದಿಗೂ ವಿಚಾರಮಾಡಬೇಕಾದ ಮಾತು.

"ಭಾರದಲ್ಲಿರುವ ಎಲ್ಲ ರಾಜ್ಯಗಳೂ ಒಂದು ಕೇಂದ್ರ ಶಕ್ತಿಗೆ ಅಧೀನವಾಗಿ ನಡೆದರೆ ಮಾತ್ರ ಅವುಗಳ ಮತ್ತು ಭಾರತದ ಕಲ್ಯಾಣ ಸಾಧ್ಯ" ಯಶೋಧರ್ಮನು ತನ್ನ ಪತ್ರದಲ್ಲಿ ಹೇಳುವ ಮಾತು ಇಂದಿನ ಪ್ರಾಂತ್ಯವಾದಿ ರಾಜಕಾರಣಿಗಳಿಗೆ ಕಣ್ಣು ತೆರೆಸುವ ಮಾತು.

"ಭಾರತಧರ್ಮ ಅಭಯ ನೀಡಿ ಬಂದವರಿಗೆ ಆಶ್ರಯ ನೀಡೆಂದು ಸಾರಿ ಸಾರಿ ಹೇಳುತ್ತಿದೆ"—ಬಾಲಾದಿತ್ಯನ ಮಾತು.

"ಸತ್ಯಮೇವ ಜಯತೇ ನಾನೃತಂ" ವಸುಬಂಧು ಹೇಳುವ ಈ ಮಾತು ಭಾರತದ ಧ್ಯೇಯವಾಕ್ಯವಾಗಿದೆ.

"ಸ್ವಾತಂತ್ರ್ಯ ಶೂರರ ಸೊತ್ತು ; ಹೇಡಿಗಳ ತುತ್ತಲ್ಲ. ವೀರರ ವಜ್ರೋಪಮ ವಕ್ಷಸ್ಥಳದಲ್ಲಿ ಸ್ವಾತಂತ್ರ್ಯಲಕ್ಷ್ಮಿ ವಾಸಿಸಬಯಸುತ್ತಾಳೆ ; ಭೀರುಗಳ ಅಳ್ಳೆದೆಯಲ್ಲಲ್ಲ"

"ಸ್ವಾತಂತ್ರ್ಯವೇ ಸ್ವರ್ಗ ; ಪಾರತಂತ್ರ್ಯವೇ ನರಕ." ಅಂದು ಬಾಲಾದಿತ್ಯ ಸೈನಿಕರಿಗೆ ಹೇಳುವ ಈ ಮಾತು ಕೇಳಿ :

"ಲೋಹದ ಬಾಹು, ಉಕ್ಕಿನ ನರ, ವಜ್ರದ ಎದೆಯೊಡನೆ ಮುನ್ನುಗ್ಗಿರಿ."

"ಸದಾ ಜಾಗ್ರತೆಯೇ ಬಿಡುಗಡೆಯ ಬೆಲೆ. ಸದಾ ಸಿದ್ಧತೆಯೇ ಬಿಡುಗಡೆಯ ಬೆಲೆ. ಬೆವರು, ಕಣ್ಣೀರು, ರಕ್ತಗಳೇ ಬಿಡುಗಡೆಯ ಬೆಲೆ"

"ಧರ್ಮವನ್ನು ರಕ್ಷಿಸಿದವರನ್ನು ಧರ್ಮ ರಕ್ಷಿಸುತ್ತದೆ ; ಅಧರ್ಮಿಗಳನ್ನಲ್ಲ'

"ದುಷ್ಟರನ್ನು ದೈವ ದಂಡಿಸುವುದು ; ಕಾಲ ಧ್ವಂಸಗೊಳಿಸುವುದು".

"ನೆನಪಿಡಿ, ಸ್ವಾತಂತ್ರ್ಯ ತರುವ ಸಂಕಟ, ದಾಸ್ಯ ನೀಡುವ ಸುಖಕ್ಕಿಂತಲೂ ಸಾವಿರ ಪಾಲು ಶ್ರೇಯಸ್ಕರ"—ನೆನಪಿನಲ್ಲೂ ಇಡಬೇಕಾದ ಮುತ್ತಿನಂಥ ಮಾತು !

"ಭಾರತದ ಭದ್ರತೆಯ ಬಾವುಟವನ್ನು ಹಿಮಗಿರಿಯ ಶಿಖರದ ಮೇಲೆ ಹಾರಿಸಿ". ಇದು ಲೇಖಕರ ಹಂಬಲ.

ನಾಟಕದುದ್ದಕ್ಕೂ ಇಂಥ ಮಾತುಗಳು ಕಾವ್ಯಮಯವಾದ ಭಾಷೆಯಲ್ಲಿ ಕಾವ್ಯಾನಂದರ ಲೇಖಣಿಯಿಂದ ಮಿಂಚಿವೆ. ನಾಟಕದ ಗದ್ಯ ಕೆಲವೆಡೆಗಳಲ್ಲಿ ಪದ್ಯದ ಬನಿ ಪಡೆದಿದೆ.

ಈ ನಾಟಕ ಓದುಗಬ್ಬವೇನೋ ನಿಜ. ರಂಗಭೂಮಿಯ ಮೇಲೆ ಪ್ರಯೋಗಿಸಿದರೆ ಯಶಸ್ವಿಯಾದೀತೆ ? ಎಂಬ ಸಂಶಯ ಓದುಗರನ್ನು ಕಾಡಬಹುದು. ಸೂಕ್ತ ಸಿದ್ಧತೆಯಿಂದ ಆಡಿದ ನಾಟಕ ಯಶಸ್ವಿಯಾದೀತೆಂದು ಲೇಖಕರ ಕಿವಿಮಾತು. ಸಮರ್ಥ ನಟರು ಇಲ್ಲಿನ ಪಾತ್ರಗಳಿಗೆ ಜೀವ ತುಂಬ ಬಲ್ಲರು. ಇಂಥ ಸಾಂಕೇತಿಕ ನಾಟಕವನ್ನು ಕನ್ನಡಕ್ಕೆಕೊಟ್ಟ ಸಿದ್ಧಯ್ಯ ಪುರಾಣಿಕರು ಧನ್ಯರು.

# ಭಾಷಣ ಕಲೆ ಮತ್ತು ಡಾ. ಸಿದ್ಧಯ್ಯ ಪುರಾಣಿಕರು

ಡಾ॥ ಎಂ. ಜಿ. ಬಿರಾದಾರ. ಎಂ. ಎ. ಪಿಹೆಚ್‌ಡಿ

ಆಡುವ ಮಾತೆಲ್ಲ ಭಾಷಣ, ಹಾಡುವ ಹಾಡೆಲ್ಲ ಸಂಗೀತ ಎಂದು ಕೊಳ್ಳುವ ಕಾಲವಿದು. ಇಂಥವರಲ್ಲಿ ಭಾಷಣ ಒಂದು ಕಲೆ ಎಂದು ಹೇಳಿದರೆ ಬಹಳ ಜನ ನಗದಿರಲಾರರು. ಯಾರು ಬೇಕಾದವರು, ಯಾವಾಗ ಬೇಕಾದಾಗ ಹೇಗೆ ಬೇಕಾದ ಹಾಗೆ ಲೀಲಾಜಾಲವಾಗಿ ಮಾತನಾಡುತ್ತಿರುವವರು ಎಷ್ಟು ಬೇಕಾದಷ್ಟು ಜನ ಸಿಗುತ್ತಿರುವಾಗ ಅದನ್ನು ಕಲೆ ಎನ್ನುವುದು ಹೇಗೆ ? ಭಾಷಣವೇ ನಮ್ಮ ದೇಶದ ದೊಡ್ಡ ಬಂಡವಾಳವಾಗಿರುವಾಗ ಅದನ್ನು ಕಲೆಯ ಗದ್ದುಗೆಗೇರಿಸುವುದು ತಪ್ಪಾದೀತೇನೋ. ಇಂದು ಭಾರತದಲ್ಲಿ ಅತಿ ಅಗ್ಗದ ಸರಕು ಯಾವುದೆಂದು ಕೇಳಿದರೆ 'ಭಾಷಣ' ಎಂದು ತಟ್ಟನೆ ಉತ್ತರಿಸಬಹುದು. ನಮ್ಮ ದೇಶ ಅನುಭವಿಸುತ್ತಿರುವ ಹಲವಾರು ಅಭಾವಗಳಲ್ಲಿ ಭಾಷಣ ಕೇಳುಗರ ತೀವ್ರ ಅಭಾವವು ಒಂದು ಎಂದು ಹೇಳುವುದೂ ಔಪಚಾರಿಕ ಮಾತೇನಲ್ಲ.

ಇಂಗ್ಲಿಷನಲ್ಲಿ Lecture, Talk, Speech, Address ಈ ಪದಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸುತ್ತಾರೆ. ಹಾಗೆ ಬಳಸುವಾಗ ನಾಲ್ಕೂ ಪದಗಳಲ್ಲಿ ಸೂಕ್ಷ್ಮ ಅರ್ಥ ವ್ಯತ್ಯಾಸ ಇದ್ದೇ ಇದೆ. ಅದರಂತೆ ಕನ್ನಡದಲ್ಲಿ 'ಮಾತನಾಡುವುದು'. 'ಭಾಷಣ ಮಾಡುವುದು', 'ಉಪನ್ಯಾಸ ನೀಡುವುದು' ಎಂಬ ಮಾತುಗಳು ಕೇಳಿ ಬರುತ್ತಿದ್ದರೂ. ಇವುಗಳಲ್ಲಿಯ ಸೂಕ್ಷ್ಮ ವ್ಯತ್ಯಾಸವನ್ನು ಗುರುತಿಸುವುದು ಕಷ್ಟವೆಂದೇ ಹೇಳಬೇಕು. ಇಂದು ಬಾಯಿಬಿಟ್ಟರೆ ಅದು ಭಾಷಣ ಎನ್ನುವಂತಾಗಿದೆ. ಹೀಗಾಗಿ ಭಾಷಣ ಪದಕ್ಕೆ ನಿಶ್ಚಿತಾರ್ಥ ಕೊಡುವುದೇ ಕಷ್ಟವಾಗಿದೆ.

ಭಾಷಣ ಎಂದರೆ ಅದನ್ನೊಂದು ಎಲುಬಿಲ್ಲದ ನಾಲಗೆಯ ಸರ್ಕಸ್ ಎಂದು ಮಾತ್ರ ತಿಳಿದ ಜನರಲ್ಲಿ ಭಾಷಣವನ್ನು ಒಂದು ಕಲೆ ಎನ್ನುವುದಾದರೂ ಹೇಗೆ ? ಭಾಷಣ ಮೂಲತಃ ಸಾಮೂಹಿಕ ಬೋಧನೆಯ ಸಾಧನವಾಗಿತ್ತು. ಓದು ಬರೆಹ ಬಾರದ ಜನರಿಗೆ ವಿಷಯ ಜ್ಞಾನ ವೈಚಾರಿಕ ಪ್ರಚೋದನೆ ಕೊಡುವುದೇ ಅದರ ಪ್ರಮುಖ ಉದ್ದೇಶವಾಗಿತ್ತು. ಅದರಲ್ಲಿ ತೂಕಬದ್ಧ ಭಾಷೆ, ತರ್ಕಬದ್ಧ ವಿಚಾರ, ಹಿತವಾದ ಶೈಲಿ ಮತ್ತು ಅಂತರಂಗವನ್ನು ಕಲಕುವ ಪ್ರಸನ್ನತೆ ಇವುಗಳಿಂದಾಗಿ ಅದು

ಕಲಾತ್ಮಕವಾಗಿತ್ತು. ಆದರೆ ಸಾಕ್ಷರತೆ ಬೆಳೆದಂತೆ ಪತ್ರಿಕೆ ಮತ್ತು ಬಾನುಲಿಗಳು ಪ್ರಚಾರಕ್ಕೆ ಬಂದಂತೆ ಭಾಷಣದ ಅವಶ್ಯಕತೆ ಕಡಿಮೆಯಾಗ ಹತ್ತಿತ್ತಾದರೂ ಭಾಷಣದ ಉದ್ದೇಶದ ವ್ಯಾಪ್ತಿಯೂ ಅಧಿಕವಾಯ್ತು. ಭಾಷಣ ಬರಬರುತ್ತ ಮೂಲ ಉದ್ದೇಶದಿಂದ ದೂರವಾಗಿ ಪ್ರಚಾರದ ಮಾಧ್ಯಮವಾಯ್ತು. ಆಗ ಅದು ತನ್ನ ಕಲಾತ್ಮಕತೆಯನ್ನು ಕಳೆದುಕೊಂಡಿತು. ಯಾವ ವಿಷಯದ ಮೇಲೂ ಯಾರು ಬೇಕಾದವರೂ ಎಷ್ಟೊತ್ತುಬೇಕಾದಷ್ಟು ಭಾಷಣ ಮಾಡಬಹುದಾದ ಪರಿಸ್ಥಿತಿ ನಿರ್ಮಾಣವಾಗಿರುವಾಗ, ತೂಕ ತರ್ಕ ಎರಡನ್ನು ತಪ್ಪಿಸುವ ಆವೇಗ ಆವೇಶಗಳು ಭಾಷಣದ ಲಕ್ಷಣಗಳೆಂದು ಹೇಳಿಕೊಳ್ಳುವಂತಾಯಿತು. ಆಂಗಿಕಾಭಿನಯದಿಂದ, ಏಕಪಾತ್ರಾಭಿನಯ ಮಾಡುವುದೇ ಉತ್ತಮ ಭಾಷಣವೆಂದುಜನಸಾಮಾನ್ಯರು ತಿಳಿಯುವಂತಾಯಿತು. ಅದಕ್ಕೆ ಪೂರಕವಾಗಿ ಮೈಕು ಹಿಡಿದು ಮೇಜು ಗುದ್ದಿ ಮುಂದಿನವರ ಮುಖಕ್ಕೆ ಪ್ರೋಕ್ಷಣೆ ಮಾಡಿ ಮಾಡುವ ಭಾಷಣಕಾರರ ತಂಡವೂ ಸಿದ್ಧವಾಯ್ತು. ಅಸ್ಖಲಿತವಾಣಿಯೇ ಉತ್ತಮ ಭಾಷಣವೆಂದು ತಿಳಿದರು ಅವರನ್ನು ಭವ್ಯ ಭಾಷಣಕಾರರೆಂದು ಜನ ಸ್ವೀಕರಿಸಿತು. ಏನೂ ತಿಳಿಯದಂತೆ ಮಾತಾಡುವುದೇ ಚೆನ್ನಾದ ಭಾಷಣವೆಂದು ಜನ ತಿಳಿಯುವಂತಾಯ್ತು. ಹೀಗಾಗಿ ಕಲಾತ್ಮಕವಾಗಿದ್ದ ಭಾಷಣ ತನ್ನ ಮೂಲ ಉದ್ದೇಶ ಸ್ವರೂಪ ಎರಡರಿಂದ ವಂಚಿತವಾಗಿ ಕಲಾತ್ಮಕತೆಯನ್ನು ಕಳೆದುಕೊಂಡಿತು. ಇಂದು ಪಾರ್ಲಿಮೆಂಟಿನಿಂದ ಹಿಡಿದು ಸ್ಮಶಾನದ ಬಯಲಿನವರೆಗಿನ ಸಾವಿರಾರು ವೇದಿಕೆಗಳಲ್ಲಿ ಭಾಷಣ ನಡೆಯುತ್ತ ಸವಕಳಿಯಾಗಿ ಹೋಗಿರುವುದರಿಂದ ಭಾಷಣದ ಸ್ವರೂಪವನ್ನು ನಿರ್ಧರಿಸುವುದೇ ಕಷ್ಟವಾಗಿದೆ. ಇದಕ್ಕೆ ಕಾರಣ ಭಾಷಣ ಮಾಡಲಿಕ್ಕೆ ಬಂಧನವಿಲ್ಲದಿರುವುದು. ಕೇಳಲಿಕ್ಕೆ ಟಿಕೇಟಿಲ್ಲದಿರುವುದು. ಕೇಳದಿದ್ದರೆ ಅದನ್ನು ಕೇಳುವವರೂ ಇಲ್ಲದಿರುವುದು ! ಮಗುವಿನ ನಿದ್ರೆಗೆ ತಾಯ ಜೋಗುಳ ಬೇಕಾದಂತೆ, ಕೆಲವರಿಗೆ ನಿದ್ರೆ ಬರಲು ಒಬ್ಬರು ಭಾಷಣ ಮಾಡಬೇಕು ! ಅಂತೆಯೇ ಪಾರ್ಲಿಮೆಂಟು, ವಿಧಾನ ಸೌಧ ಕ್ಲಾಸರೂಮ್‌ಗಳಲ್ಲಿ ನಿದ್ರಿಸುವವರ ಸಂಖ್ಯೆ ಹೆಚ್ಚಾಗುತ್ತಿದೆ. ಹೀಗೆ ನಿದ್ರೆ ಬರುವಂತೆ ಭಾಷಣ ಮಾಡುವುದೂ ಒಂದು ಕಲೆ ಎಂದು ಅಂದುಕೊಂಡರೆ ಅದಕ್ಕೆ ನಮ್ಮ ಅಭ್ಯಂತರವಿಲ್ಲ. ಇನ್ನು ಕೆಲವರ ಭಾಷಣಗಳಿಗೆ ಹೋಗುವುದು ಅನಿವಾರ್ಯವಾಗಿದ್ದರೆ ಕಿಸೆಯಲ್ಲಿ ಅನಾಸಿನ್, ಆಸ್ಪ್ರೋ ಇಟ್ಟುಕೊಂಡೇ ಹೋಗಬೇಕು.

ಭಾಷಣಗಳಲ್ಲಿಯೂ ಹಲವಾರು ರೀತಿಯ ಭಾಷಣಗಳಿವೆ. ಸಾಹಿತ್ಯಿಕ ಭಾಷಣ, ರಾಜಕೀಯ ಭಾಷಣ, ಉದ್ಘಾಟನಾ ಭಾಷಣ, ಅಧ್ಯಕ್ಷೀಯ ಭಾಷಣ, ಅತಿಥಿ ಪರಿಚಯ, ಆಭಾರಮನ್ನಣೆಗಳೂ ಭಾಷಣಗಳೆಂದೂ ಮನ್ನಣೆ ಪಡೆದಿವೆ.

ಭಾಷಣಗಳ ಬೆಲೆ ಕಡಿಮೆಯಾಗಲು ಭಾಷಣಗಳು ಬೀದಿಗಿಳಿದುದೆ ಮುಖ್ಯ ಕಾರಣವಾದರೂ ಅವುಗಳಿಗಾಗಿ ಎಲ್ಲೆಲ್ಲೂ ವೇದಿಕೆ ನಿರ್ಮಾಣವಾದುದು ! ಇನ್ನೊಂದು ಕಾರಣ. ಅಲ್ಲದೆ ಇಂದಿನ ಬಿಡುವಿಲ್ಲದ ಬದುಕಿನಲ್ಲಿ ರಾಜಕೀಯ ಕೀಳು ಪ್ರಚಾರದ,

ಅರ್ಥವಿಲ್ಲದ, ಬದುಕಿನ ಸ್ವಾಸ್ಥ್ಯಗೆ ಉಪಯುಕ್ತವಲ್ಲದ ಅವ್ಯವಸ್ಥೆಯ ಶಬ್ದಗದ್ದಲ ಕೇಳಲು ತಿಳಿದವರಾರೂ ಮನಸ್ಸು ಮಾಡುತ್ತಿಲ್ಲ. ಆದರೂ ಎಂಥ ಪುಸ್ತಕಕ್ಕೂ ಕೆಲವು ಓದುಗರಿರುವಂತೆ ಎಂಥ ಭಾಷಣಕಾರನಿಗೂ ಕೆಲವರು ಕೇಳುಗರಿದ್ದಾರೆ.

ಕೇಳುಗರಲ್ಲೂ ಸಾಕಷ್ಟು ತರಹದ ಜನರಿದ್ದಾರೆ ಲೋಕೋ ಭಿನ್ನ ರುಚಿಃ. ಕೆಲವರು ಪ್ರತಿ ಪಕ್ಷದವನನ್ನೊ, ಪಂಥದವನನ್ನೊ ತಮ್ಮ ವೈರಿಯನ್ನೊ ಬೈಯ್ಯುವುದನ್ನು ಕೇಳುವ ಚಪಲಕ್ಕೆ ಬಂದವರು. ಕೆಲವರು ಮಂತ್ರಿಯೋ, ಮೇಲಾಧಿಕಾರಿಯೋ ಭಾಷಣ ಮಾಡುತ್ತಿದ್ದರೆ ತಮ್ಮನ್ನು ಎದುರು ತೋರಿಸಿಕೊಂಡು ಅವರ ಅನುರಾಗ ಗಳಿಸಲು ಬಂದವರು. ಇನ್ನು ಕೆಲವರು ಭಾಷಣ ಏರ್ಪಡಿಸಿದ ಸಂಸ್ಥೆಯ ಸದಸ್ಯರೋ, ಉದ್ಯೋಗಿಗಳೋ ಇದ್ದು ಅನಿವಾರ್ಯವಾಗಿ ಕುಳಿತವರು. ಕೆಲವರು ಹಾಜರಾತಿಗೊ, ಟಿ. ಎ. ಗಿಟ್ಟಿಸಲೋ ಕುಳಿತವರು. ಹೀಗೆ ಸಾವಿರ ತೆರನಾದ ಸಭಿಕರನ್ನು ಕಾಣು ತ್ತೇವೆ. ಒಟ್ಟಿನಲ್ಲಿ ಜನರಲ್ಲಿ ಭಾಷಣ ಮಾಡುವ ಚಪಲ ಹೆಚ್ಚಿದಂತೆಲ್ಲ ಭಾಷಣ ಕೇಳುವ ಕುತೂಹಲ ಕಡಿಮೆಯಾಗಹತ್ತಿದೆ. ಇದಕ್ಕೆ ಕಾರಣ ನಿಜವಾದ ಅರ್ಥದಲ್ಲಿ ಭಾಷಣಗಳು ಇಂದು ಕೇಳಸಿಗದಿರುವುದು.

ಕನ್ನಡದಲ್ಲಿ ಉನ್ನತ ಮಟ್ಟದ ಭಾಷಣಗಳನ್ನು, ಭಾಷಣಕಾರರನ್ನು ಕೇಳುವ ಅವಕಾಶ ನನಗಂತೂ ಸಾಕಷ್ಟು ಲಭ್ಯವಾಗಿದೆ. ಕೇಳಬೇಕೆನ್ನುವ ರಸಿಕರಿಗೆ ಕಲಾತ್ಮಕ ಭಾಷಣಗಳ ಕೊರೆತ ಇದೆ ಎಂದು ಹೇಳಲಾಗುವುದಿಲ್ಲ. ನಾನು ಕೇಳಿದ ಕೆಲವು ಒಳ್ಳೆಯ ಭಾಷಣಕಾರರಲ್ಲಿ ಡಾ. ಸಿದ್ಧಯ್ಯ ಪುರಾಣಿಕರು ಒಬ್ಬರು. ಡಾ. ಸಿದ್ಧಯ್ಯ ಪುರಾಣಿಕರು ಕರ್ನಾಟಕದ ಉದ್ದಗಲಕ್ಕೂ ತಿರುಗಾಡಿ ಅದರ ನಾಡೀ ನೋಡಿದವರು. ಅಸಂಖ್ಯಾತ-ಖ್ಯಾತ-ಭಾಷಣಗಳನ್ನು ರಸಿಕರಿಗೆ ನೀಡಿದವರು. ಕವಿತೆಗಳನ್ನು ಹಾಡಿದ ವರು ಸರಕಾರಿ ಆಡಳಿತಾಧಿಕಾರಿ, ಅದರಿಂದ ಸಾಹಿತ್ಯಕ್ಕೆ ಇನ್ನೂ ಪ್ರಯೋಜನಕಾರಿ ; ಉಪಕಾರಿ ಆದವರು.

ಅವರು ಹಲವು ತೆರನಾದ ಭಾವ, ಸ್ವಭಾವ, 'ಅಭಾವ', 'ಪ್ರಭಾವ'ದ ಜನ ರನ್ನು ನೋಡಿದವರು ಕೂಡಿದವರು. ಸರಕಾರ, ಸಮಾಜ ಸಾಹಿತ್ಯ ಮೂರನ್ನೂ ಮನದಟ್ಟು ಮಾಡಿಕೊಂಡವರು. ಹೀಗಾಗಿ ಅಪಾರ ಲೋಕಾನುಭವವನ್ನು ತಮ್ಮಲ್ಲಿ ತುಂಬಿಕೊಂಡವರು. ಸಂಸ್ಕಾರದಿಂದ ಅನಂತ ಅಧ್ಯಯನದಿಂದ ಶಿವಾನುಭವವನ್ನು ನಂಬಿಕೊಂಡವರು.

ಭಾಷಣ ವ್ಯಕ್ತಿತ್ವದ ಅಭಿವ್ಯಕ್ತಿ. ಪಾಂಡಿತ್ಯದ ಪ್ರತ್ಯುಕ್ತಿ ; ಶಕ್ತಿ. ಪ್ರತಿಭೆ ಪಾಂಡಿತ್ಯಗಳ ವಿದ್ಯುದಾಲಿಂಗನದ ಜ್ಯೋತಿರ್ಮಯಲಿಂಗ. ಅಂತೆಯೇ ಶರಣರು 'ಶರಣರು ಬಾಯ್ದೆರೆವರೆ ಲಿಂಗವ ಕಾಣಬಹುದು' ಎಂದರು. ಇಷ್ಟು ವ್ಯಾಪಕವಾದ ಪ್ರಭಾವ ಪರಿಣಾಮ ಭಾಷಣದ್ದು.

ಸ್ವಭಾವತಃ ಸಿದ್ಧಯ್ಯನವರು ಸಿದ್ಧರೇ. ಅವರ ಎತ್ತರ ನಿಲುವು, ಗಂಭೀರ ಮುಖಮುದ್ರೆಯಲ್ಲಿ ಆಗಾಗ ಅರಳುವ ಹೂನಗೆ ಕೇಳುಗರನ್ನು ಮೊದಲ ನೋಟದಲ್ಲೆ ಪ್ರಸನ್ನ ಚಿತ್ತರನ್ನಾಗಿಸುತ್ತದೆ. ಅವರಲ್ಲಿ ಆತುರ, ವ್ಯಗ್ರತೆ ಔಷಧಕ್ಕೂ ಸಿಕ್ಕುವುದಿಲ್ಲ.

ಭಾಷಣ ಆರಂಭಿಸುವಾಗ ಅವರಿಗೆ ಅವಸರ ಎಂದೂ ಇಲ್ಲ. ಚಿಂತನ ಶೀಲತೆಯು ಶಾಂತ ಮನೋಧರ್ಮ ಅವರಲ್ಲಿ ಎದ್ದು ಕಾಣುತ್ತದೆ. ಯಾವ ವಿಷಯವನ್ನೇ ಎತ್ತಿಕೊಳ್ಳಲಿ, ಅಲ್ಲಿ ಔಪಚಾರಿಕತೆ ದಾಕ್ಷಿಣ್ಯಪರತೆ ಇಲ್ಲವೇ ಇಲ್ಲ, ಅನಿಸಿಕೆ ಮಾತ್ರ ನಿಷ್ಠುರವಾಗಿ ಅಭಿವ್ಯಕ್ತವಾಗುತ್ತದೆ.

ವಚನ, ಶರಣಜೀವನ ಮತ್ತು ಕಾವ್ಯ ಅವರ ಭಾಷಣದ ವಿಷಯ ವಿಶೇಷವೆನ್ನ ಬಹುದು. ಇದಕ್ಕೆ ಕಾರಣ ಅವರ ಬದುಕಿನ ಸಾಂಸ್ಕೃತಿಕ ಪರಂಪರೆ ಮತ್ತು ಪ್ರವೃತ್ತಿ. ವಿಷಯವಿಲ್ಲದೆ ಭಾಷಣ ಮಾಡುವ ಪ್ರವೃತ್ತಿ ಡಾ. ಪುರಾಣಿಕರದಲ್ಲವೆಂದೇ ಹೇಳಬೇಕು.

ಡಾ. ಪುರಾಣಿಕರ ಭಾಷಣದ ಇನ್ನೊಂದು ವೈಶಿಷ್ಟ್ಯವೆಂದರೆ ಅದು ಗಂಟೆಗಟ್ಟಲೆ ನಡೆಯುವಂಥದಲ್ಲ. ನಿಯಮಿತ ಕಾಲಾವಧಿಯಲ್ಲಿ ನಿಶ್ಚಿತವಾದುದನ್ನು ಸಾದರಪಡಿಸುವ ಒಂದು ವ್ಯವಸ್ಥೆಮಾತ್ರ. ಸಮಯ ಪ್ರಜ್ಞೆ ಡಾ. ಪುರಾಣಿಕರ ಭಾಷಣದಲ್ಲಿಯ ಒಂದು ಉತ್ತಮಾಂಶ. ಗಂಟೆಗಟ್ಟಲೆ ಮಾತನಾಡುವುದೊಂದು ಅಗ್ಗಳಿಕೆ ಎಂದು ತಿಳಿದ ಹಲವರ ಭಾಷಣ ನಿಲ್ಲಿಸುವುದೇ ಒಂದು ಇಂದು ಸಮಸ್ಯೆ. ಬಿಡುವಿಲ್ಲದ ಬದುಕಿನಲ್ಲಿ ಭಾಷಣಕಾರರು ಮೊದಲು ಗಮನಿಸಬೇಕಾದುದು ಈ ಸಮಯ ಪ್ರಜ್ಞೆಯನ್ನು.

ಬಹಳಷ್ಟು ಭಾಷಣಕಾರರಿಗೆ ತಾವು ಯಾವ ವಿಷಯ ಕುರಿತು ಮಾತನಾಡುತ್ತಿದ್ದೇವೆ ಎನ್ನುವುದರ ಕಲ್ಪನೆಯೇ ಇರುವುದಿಲ್ಲ. ಖ್ಯಾತರೆನ್ನಿಸಿಕೊಳ್ಳುವವರೂ ಈ ವಿಷಯಾಂತರದ ರೋಗದಿಂದ ಮುಕ್ತರಾಗಿಲ್ಲ. ನೆನಪಿಗೆ ಬಂದದ್ದು, ಅಲ್ಲ ಬಾಯಿಗೆ ಬಂದದ್ದನ್ನು ಬಿತ್ತರಿಸುತ್ತಾನೇ ಇರುತ್ತಾರೆ. ಈ ಅಸಂಬದ್ಧ ಪ್ರಲಾಪದಿಂದಾಗಿ, ಭಾಷಣ ಕಲೆಯ ಕೊಲೆ ನಡೆದುದೇ ಇಲ್ಲಿ. ಡಾ. ಸಿದ್ಧಯ್ಯನವರಲ್ಲಿ ವಿಷಯ ಪ್ರಜ್ಞೆ ಸದಾ ಜಾಗೃತವಾಗಿರುವುದನ್ನು ಅವರ ಭಾಷಣ ಕೇಳಿದವರೆಲ್ಲ ಬಲ್ಲರು. ಅದರಲ್ಲಿ ತರ್ಕ ತೂಕ ಕಾಯ್ದುಕೊಂಡು ಹೋಗುವ ಜಾಗರೂಕತೆ ಅವರಲ್ಲಿ ಸದಾ ಜಾಗ್ರತವಾಗಿರುತ್ತದೆ. ಅಲ್ಲದೆ ನಾನೊಬ್ಬನೆ, ಮಾತನಾಡುವ ವಿಷಯದ ಸರ್ವಜ್ಞ ಎನ್ನುವ ಜಂಬವಾಗಲೀ ಇನ್ನೊಬ್ಬರ ವಿಚಾರವನ್ನು ಹೀಗಳೆಯುವ ಕೀಳು ಮನೋವೃತ್ತಿಯಾಗಲೀ ಡಾ. ಪುರಾಣಿಕರದಲ್ಲ. ನಿಜವಾದ ಭಾಷಣ, ನೇರವಾದ ವಿಷಯ ಪ್ರತಿಪಾದನೆಯೇ ವಿನಹ ಇನ್ನೊಬ್ಬರ ವಿಚಾರವನ್ನು ಖಂಡಿಸುವಲ್ಲೇ ಪರ್ಯಾವಸಾನ ಹೊಂದುವುದಲ್ಲ. ಡಾ. ಪುರಾಣಿಕರ ಜ್ಞಾಪಕ ಶಕ್ತಿಯೂ ಅವರ ಭಾಷಣಕ್ಕೆ ಕಳೆಕೊಡುವ ಒಂದು ಅಂಶ. ವಚನಗಳನ್ನೊ, ಪದ್ಯಗಳನ್ನೊ, ಕಾವ್ಯ ಭಾಗಗಳನ್ನೊ ಉದಾಹರಿಸುವಾಗ,

ಔಚಿತ್ಯಪೂರ್ಣವಾಗಿ, ಮೂಲಕ್ಕೆ ವಂಚನೆಯಾಗದಂತೆ ಉದಾಹರಿಸುವುದನ್ನು ಅವರಿಂದ ಕಲಿಯಬೇಕು.

ಡಾ. ಪುರಾಣಿಕರ ಭಾಷಣದ ಪ್ರತಿಮಾತಿನಲ್ಲಿ ಪರಿಪೂರ್ಣ ಅನಿಸಿಕೆಯ ಕಳಕಳಿಯ ಅಭಿವ್ಯಕ್ತಿ ಎದ್ದು ಕಾಣುತ್ತದೆ. ಕೇಳುಗರಲ್ಲಿ ಆತ್ಮೀಯತೆ ಮೂಡಿಸುವ ಮೋಡಿ ಅವರಲ್ಲಿದೆ. ಪ್ರತಿಯೊಂದು ಪದ ಹೃದಯಾಂತರಾಳದಿಂದ ಮೇಲೆದ್ದು, ಅಂತಃಕರಣದಿಂದ ತೊಯ್ದು ಹೊರಬಂದಂತಿರುತ್ತದೆ. ಅಂತೆಯೇ ಕೇಳುಗರಿಗೆ ನೇರವಾಗಿ ನಾಟುತ್ತದೆ. ಈ ಕಲೆ ಬಹಳ ಜನರಿಗೆ ಸಾಧಿಸಿಲ್ಲವೆನ್ನಬಹುದು.

ಭಾಷಣಮಾಡುವಾಗ ಆ ತನ್ಮಯತೆಗೆ ಭಂಗ ಬಂದರೆ ಸಿದ್ಧಯ್ಯನವರು ಸಿಡಿಲಾಗಿ ಅಧಿಕಾರಿಯ ಅಧಿಕಾರವಾಣಿಯಿಂದ ಗುಡುಗಿದ್ದನ್ನು ಕೇಳಿದ್ದೇವೆ. ೧೯೬೫ ರಲ್ಲಿ ರಾಯಚೂರಿನಲ್ಲಿ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಉದ್ಘಾಟಿಸಿದ ಕವಿಸಮ್ಮೇಳನದ ಅಂಗವಾಗಿ ಶ್ರೀ ಸಿದ್ಧಯ್ಯನವರು ಮಾತನಾಡುತ್ತಿದ್ದರು. ಸಭೆಯಲ್ಲಿ ಸ್ವಲ್ಪ ಗದ್ದಲವಾದಾಗ 'ಇದು ಮನುಷ್ಯರ ಸಭೆ ಪಶುಗಳಿಗೆ ಇಲ್ಲಿ ಸ್ಥಾನವಿಲ್ಲ' ಎಂದು ಗುಡುಗಿದರು. ಮರುಗಳಿಗೆಯಲ್ಲಿ ಅದೇ ಪ್ರಶಾಂತ ವಾಗ್ಝರಿ ಹರಿಯಿತು. ಇನ್ನೊಮ್ಮೆ ಕಲಬುರ್ಗಿಯಲ್ಲಿ ಡಾ. ಪುರಾಣಿಕರು ಕನ್ನಡದಲ್ಲಿ ಭಾಷಣ ಆರಂಭಿಸಿದಾಗ ಆಂಧ್ರದ ವಿದ್ಯಾರ್ಥಿಗಳನೇಕರು 'ಇಂಗ್ಲಿಷ, ಹಿಂದೀ' ಎಂದು ಕೂಗಾಡಿದರು. ಆಗ ಸಿದ್ಧಯ್ಯನವರು ಶಾಂತಚಿತ್ತದಿಂದಲೇ ಹೇಳಿದರು. 'ಕನ್ನಡವನ್ನು ದಿಲ್ಲಿಯಲ್ಲಿ. ಬಂಗಾಲದಲ್ಲಿ ಮಾತನಾಡಲಾಗುವುದೇ ? ಇದು ಕರ್ನಾಟಕ. ಕನ್ನಡದಲ್ಲೇ ಮಾತನಾಡುವೆ. ಬೇಡಾದವರು ಹೋಗಬಹುದು' ಎಂದು.

ಡಾ. ಪುರಾಣಿಕರ ಸಭಾ ಪ್ರಜ್ಞೆ ಅಥವಾ ಸಹೃದಯ ಪ್ರಜ್ಞೆ ಸದಾ ಜಾಗರೂಕವಾಗಿರುತ್ತದೆ. ವಿಶ್ವವಿದ್ಯಾಲಯದ ಭಾಷಣಕ್ಕೂ ಪ್ರಾಥಮಿಕ ಶಾಲೆಯಲ್ಲಿಯ ಭಾಷಣಕ್ಕೂ ವಿಷಯ, ಭಾಷೆ ಮತ್ತು ಅಭಿವ್ಯಕ್ತಿಯಲ್ಲಿ ಮಹದಂತರ ಸ್ಪಷ್ಟವಾಗಿರುತ್ತದೆ. ಒಂದೆಡೆ 'ಸಿದ್ಧ ಅಯ್ಯ' ಆದರೆ ಇನ್ನೊಂದೆಡೆ 'ಪುರಾಣಿಕರೇ' ಸರಿ. ಅದರಂತೆ ಜನಸಾಮಾನ್ಯರ ಸಭೆಯಲ್ಲಿ, ಈ ಅಸಾಮಾನ್ಯರೂ ಸಾಮಾನ್ಯರೇ. ಒಂದೇ ಮಾತಿನಲ್ಲಿ ಹೇಳಬೇಕಾದರೆ ಅವರ ಭಾಷಣ ನಾಲಿಗೆಯ ಚಪಲಕ್ಕಲ್ಲ ಉದ್ದೇಶದ ಸಫಲತೆಗೆ.

ಡಾ. ಸಿದ್ಧಯ್ಯನವರನ್ನು ಒಬ್ಬ ಮಹಾ ಭಾಷಣಕಾರ ಎಂದು ಸಿದ್ಧಪಡಿಸಲು ಹೊರಟ ಪ್ರಶಂಸೆ ನನ್ನ ಉದ್ದೇಶವಲ್ಲ. ಅಥವಾ ಅವರೊಬ್ಬರು ಕಲಾಪೂರ್ಣ ಭಾಷಣಕಾರರು ಎಂದು ಹೇಳುವ ಹವ್ಯಾಸವೂ ನನ್ನದಲ್ಲ. ಸಭೆಯ ಮೇಲೆ ಕಣ್ಣಿಟ್ಟು ಸಮಯದ ಮೇಲೆ ದೃಷ್ಟಿಯಿಟ್ಟು. ವಿಷಯದಲ್ಲಿ ತನ್ಮಯತೆ ಪಡೆವ, ಅರ್ಥಪೂರ್ಣ ಆಕರ್ಷಕ ಭಾಷೆಯ ಒಬ್ಬ ಒಳ್ಳೆಯ ಭಾಷಣಕಾರ ಎಂಬುದು ನಿರ್ವಿವಾದ. ಸಾಹಿತಿಯ, ಸಾಹಿತ್ಯದ ಮನೋಧರ್ಮ, ಮಂದಗತಿಯ ವೈಚಾರಿಕತೆ, ಅದೇ ಗತಿಯ ಭಾಷೆ ಕೆಲವು

ವೇಳೆ ವೈಜ್ಞಾನಿಕ ಯುಗದ ಅವಸರಕ್ಕೆ ತಾಳಹಾಕುವದಿಲ್ಲವೇನೋ ಅನ್ನಿಸುತ್ತದೆ. ಒಮ್ಮೊಮ್ಮೆ ರಮ್ಯಸಾಹಿತಿಯ ಭಾವ ಪರವಶತೆಗೆ ತುತ್ತಾದ ಸನ್ನಿವೇಶಗಳೂ ಉಂಟು, ಆದರೂ ತೂಕ ತಪ್ಪಿ ವಿಷಯಾಂತರ ಮಾಡಿದವರಲ್ಲ.

ಕರ್ನಾಟಕದ ತುಂಬ ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ಕುರಿತಾದ ಹಲವಾರು ಭಾಷಣಗಳನ್ನು ನೀಡಿ, ಕನ್ನಡ ನಾಡಿನಲ್ಲಿ ಸಾಹಿತ್ಯದ ಪ್ರಜ್ಞೆ ಮೂಡಿಸುವುದರ ಜೊತೆಗೆ, ಜನತೆಯಲ್ಲಿ ಪರಿಶುದ್ಧ ಮಾನವಂತಃಕರಣವನ್ನು ನೆಲೆನಿಲ್ಲಿಸುವಲ್ಲಿ ಸಾಕಷ್ಟು ವಾಕ್ ಸೇವೆ ಸಲ್ಲಿಸಿದ್ದಾರೆ. ಭಾಷಣದಿಂದೇನೂ ಆಗುವುದಿಲ್ಲ ಎಂಬ ನಂಬುಗೆ ಇಂದು ಇರುವುದಾದರೂ ಡಾ. ಸಿದ್ಧಯ್ಯನವರು ತಮ್ಮ ಅಂತಃಕರಣಪೂರ್ಣ ಜೇನ್ನಾಲಿಗೆಯಿಂದ ಸಾಕಷ್ಟು ಜನರ ಮನದಲ್ಲಿ ನಿನದಿಸುತ್ತಿದ್ದಾರೆ. ಅವರ ಭಾಷಣ ತೀರ ಕಲಾತ್ಮಕ ಶಾಸ್ತ್ರೋಕ್ತವಾಗಿದ್ದರೆ, ಶಾಸ್ತ್ರೀಯ ಸಂಗೀತದಂತೆ, ವಿಶೇಷ ಸಹೃದಯರನ್ನು ಕಳೆದುಕೊಂಡು ವ್ಯಾಪಕವಾದ ಪ್ರಭಾವ ಪರಿಣಾಮದಿಂದ ವಂಚಿತವಾಗಬಹುದಿತ್ತು. ಡಾ. ಸಿದ್ಧಯ್ಯನವರ ಭಾಷಣ ಸುಗಮ ಸಂಗೀತದಂತೆ ಹಲವಾರು ರಸಿಕರಿಗೆ ಆಹ್ಲಾದಕರವಾಗಿ ಪರಿಣಮಿಸಿದೆ ಎನ್ನುವಲ್ಲಿ ಅತ್ಯುಕ್ತಿಯೇನಿಲ್ಲ. ಅವರ ಖಚಿತ ಅಭಿಪ್ರಾಯ, ನಿಶಿತಮತಿ, ಉಚಿತ ಭಾಷೆ ಸಹೃದಯ ಪ್ರಪಂಚದಲ್ಲಿ ಮೆಚ್ಚುಗೆಗೆ ಪಾತ್ರವಾಗಿವೆ.

ಡಾ. ಸಿದ್ಧಯ್ಯನವರ ಅಪಾರ ಅಧ್ಯಯನ, ಲೋಕಾನುಭವದ ಜೊತೆಗೆ ಸ್ವಂತಿಕೆ ಸಮ್ಮಿಳಿತಗೊಂಡಿರುವುದರಿಂದ ಮಾತು ಮಹತ್ತಾಗುತ್ತದೆ. ಆಗಾಗ ಸಾಹಿತಿಯ ಸಂವೇದನೆಯಿಂದ ಮುತ್ತಾಗುತ್ತದೆ. ಒಟ್ಟಿನಲ್ಲಿ ಅವರನ್ನು ಒಬ್ಬ ಪ್ರಭಾವಶಾಲಿ ಕಲಾತ್ಮಕ ಭಾಷಣಕಾರ ಎಂದು ಹೊಗಳುವ ಮನ ನನಗಿಲ್ಲ. ಆದರೆ ಅವರೊಬ್ಬ ಪರಿಣಾಮಕಾರಿ, ಸೌಜನ್ಯಶೀಲ ವೈಚಾರಿಕವಕ್ತಾರ ಎಂದು ಹೇಳಿದರೆ ನಾನು ಸತ್ಯವನ್ನಲ್ಲದೆ ಮತ್ತೇನನ್ನೂ ಹೇಳಿಲ್ಲವೆಂದು ಸಹೃದಯರು ತಿಳಿಯದಿರರು.

# ‘ವಚನೋದ್ಯಾನ’ದಲ್ಲಿ ಶಿವತತ್ತ್ವಚಿಂತನೆ

**ಡಾ. ಬಿ. ವ್ಹಿ. ಮಲ್ಲಾಪುರ**

೧

ವಿಶ್ವಸಾಹಿತ್ಯಕ್ಕೆ ಕನ್ನಡದ ಅಮೌಲ್ಯದ ಕೊಡುಗೆಯೊಂದು ಒಪ್ಪಿತವಾಗಿರುವ ವಚನಸಾಹಿತ್ಯ, ಹನ್ನೆರಡನೆಯ ಶತಮಾನದ ಬಸವಾದಿ ಪ್ರಮಥರ ಕಾಲದಲ್ಲಿ ಉಕ್ಕಿ ಮೊರೆಯಾಗಿ ಹರಿದು. ಕನ್ನಡಗರ ಮುಖ್ಯವಾಗಿ ಉದ್ಧಾರದ ಹಾದಿಕಾಣದೆ ತೊಳಲಾಡುತ್ತಿದ್ದ ಶ್ರೀಸಾಮಾನ್ಯರ ಪುನರುತ್ಥಾನದ ಮಹಾಮಣಿಹದಲ್ಲಿ ಪ್ರಮುಖ ಪಾತ್ರವಹಿಸಿತು. ಅನಂತರ ಕೆಲಕಾಲ ಗುಪ್ತಗಾಮಿನಿಯಾಗಿದ್ದ ಅದು ಎಡೆಯೂರ ತೋಂಟದ ಸಿದ್ಧಲಿಂಗಯತಿಗಳ. ಹಾಗೂ ಜೇವರಗಿಯ ಷಣ್ಮುಖಸ್ವಾಮಿಗಳ ಕಾಲದಲ್ಲಿ ಮೈದೋರಿ ಇಂದಿನ ಇಪ್ಪತ್ತನೆಯ ಶತಮಾನದಲ್ಲೂ ಮುಂದುವರಿದುಕೊಂಡು ಬಂದಿದೆ. ಈ ಶತಮಾನದ ಕೆಲವೇ ಜನ ಪ್ರಮುಖ ವಚನಕಾರರಲ್ಲಿ ಸಿದ್ಧಯ್ಯ ಪುರಾಣಿಕರದು ಎದ್ದುಕಾಣುವ ಹೆಸರು. ಅವರ ವಚನ ಸಂಕಲನ ಗ್ರಂಥ ‘ವಚನೋದ್ಯಾನ’ಕ್ಕೆ ಭಾರತೀಯ ಮಹತಿ ಪ್ರಾಪ್ತವಾಗಿರುವುದೇ ಅದಕ್ಕೆ ಹಿರಿಯ ಸಾಕ್ಷಿ.

“ಅಲ್ಪರ ಜಲ್ಪದ ಹುಚ್ಚಾಪಟ್ಟೆಯಲ್ಲಿ ಬಲ್ಲವರ ಸೊಲ್ಲುಗಳ ಬೆಲ್ಲ, ಶರಣರ ಸೊಲ್ನುಡಿಗಳ ಸಕ್ಕರೆ”[1] ಸಿಕ್ಕುವುದಿಲ್ಲವೆಂಬುದನ್ನು ಮನಗಂಡ ಸಿದ್ಧಯ್ಯನವರು. ಶರಣರ ನುಡಿಮುತ್ತುಗಳನ್ನು ಆಳವಾಗಿ ಅಭ್ಯಸಿಸಿ ಅನುಭವಿಸಿದ್ದಾರೆ. ಆ ಅನುಭಾವಿಗಳ ವಚನಗಳು ತಮ್ಮ ವ್ಯಕ್ತಿತ್ವದ ಮೇಲೆ ಬೀರಿದ ಪ್ರಭಾವವನ್ನೂ, ತಮ್ಮ ವಚನ ರಚನೆಗೆ ಅವುಗಳಿಂದ ದೊರೆತ ಪ್ರೇರಣೆಯನ್ನೂ ಅವರು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ. “ತಿಳಿವಿನ ಹೊಳಲಿನ ಬೀದಿ ಬೀದಿಯ ಸಗಣಿಯ ಶೇಖರಿಸಿ, ನಿನ್ನ ಶರಣರ ಮನೆಗಳ ಗಂಜಳ ಬೆರಸಿ, ಈ ಬೆರಣಿಗಳ ಬಡಿದಿಟ್ಟಿಹೆನಯ್ಯ”[2] ಎಂದು ಅದನ್ನು ಸ್ಪಷ್ಟವಾಗಿ ಸೂಚಿಸಿಯೂ ಇದ್ದಾರೆ. ಹೀಗೆ ಹೇಳಿದ ಅವರೇ ಮತ್ತೊಂದೆಡೆ–

---

1. ವಚನೋದ್ಯಾನ (೧೯೭೭). ವಚನ ೪೨೬. 2. ಅದೇ. ವಚನ ೫೦೩.

"ನಿನ್ನ ಶರಣರ ಅಲಿಖಿತ ವಚನಗಳ ಧ್ವನಿವೀಚಿಗಳನ್ನು ಗ್ರಹಿಸುವ ಗ್ರಾಹಕ
ವಾಗಲಯ್ಯ ನನ್ನ ಕಿವಿ ;
ನಿನ್ನ ಶರಣರ ಅವ್ಯಕ್ತ ಆಕೃತಿಗಳನ್ನು ದರ್ಶಿಸುವ, ದೂರದರ್ಶನವಾಗಲಯ್ಯ
ನನ್ನ ಕಣ್ಣು;
ನಿನ್ನ ಶರಣರ ಅಪ್ರಕಟಿತ ವಿಚಾರಸುಮಗಳ ಸೌರಭವನ್ನರಿವ, ಗಂಧಗ್ರಾಹಿ
ಯಾಗಲಯ್ಯ ನನ್ನ ನಾಸಿಕ ;
ನಿನ್ನ ಶರಣರ ಅನುಕ್ತ ಉಕ್ತಿಗಳ ಧ್ವನಿಮುದ್ರಿಕೆಯಾಗಲಯ್ಯ ನನ್ನ ರಸನೆ ;
ಸ್ವತಂತ್ರಧೀರ ಸಿದ್ಧೇಶ್ವರಾ, ಬಯಲ ಬೆರೆತ, ನಿನ್ನ ಶರಣರ ಉಸಿರ ಅಲೆ
ಗಳನ್ನರಿವ ಕುಶಲಿಯಾಗಲಯ್ಯ ನನ್ನ ತ್ವಚೆ"[3]

ಎಂದು ಪ್ರಾರ್ಥಿಸಿರುವುದನ್ನು ಗಮನಿಸಬೇಕು. ಶರಣರು ಲಿಖಿಸದೆ. ವ್ಯಕ್ತಗೊಳಿಸದೆ, ಪ್ರಕಟಿಸದೆ, ಹೇಳದೆ ಹೋದುದನ್ನು ಕೂಡ ತಮ್ಮ ಪಂಚೇಂದ್ರಿಯಗಳು ಗ್ರಹಿಸಿ, ದರ್ಶಿಸಿ, ಅರಿದು, ಧ್ವನಿಮುದ್ರಿಸಿಕೊಳ್ಳಿರಿ ಎಂಬ ಅವರ ಹೆಬ್ಬಯಕೆ ಇಲ್ಲಿ ಹೆಪ್ಪು ಗಟ್ಟಿರುವುದು ಕಂಡುಬರುತ್ತದೆ. ಅವರ ಈ ಬಯಕೆಯಲ್ಲಿ ಹಿಂದಣ ಶರಣರು ಹೇಳದುದನ್ನು ನಾನು ಇಲ್ಲಿ ಹೇಳುತ್ತೇನೆಂಬ 'ಅಹಂ' ಭಾವನೆಗಿಂತ, ಏನಕೇನ ಕಾರಣವಾಗಿ ಅವರು ಹೇಳದೆ ಉಳಿದಿರುವುದು ತಮ್ಮ ವಚನಗಳಲ್ಲಿ ಇಳಿದುಬರಲೆಂಬ ವಿನಮ್ರ ಅಭೀಪ್ಸೆಯೆ ಸ್ಥಾಯಿಯಾಗಿದೆ. "ಮಾದಾರ ಚೆನ್ನಯ್ಯನ ಮನೆಯ ಮಗ, ಡೋಹರ ಕಕ್ಕಯ್ಯನ ಡಿಂಗರಿಗ, ಹರಳಯ್ಯನ ಕರುಣದ ಕಂದ, ಅಲ್ಲಮ ಅಕ್ಕ ಮಹಾದೇವಿಯರ ಅಡಿಯಾಳು, ಬಸವನ ಭಕ್ತ"[4] ಎಂದು ತಮ್ಮನ್ನು ತಾವು ಪರಿಚಯಿಸಿಕೊಳ್ಳುವಲ್ಲಿ ಹೆಮ್ಮೆಪಡುವ ಸಿದ್ಧಯ್ಯನವರಲ್ಲಿ ಅಂತಹ 'ಅಹಂ'ಭಾವನೆ ಯನ್ನು ಕಲ್ಪಿಸುವುದು ಕರಕಷ್ಟ. ಆದರೆ ಆ ವಿನಮ್ರತೆಯ ಒಡಲಲ್ಲಿಯೆ ತಮ್ಮ 'ವಚನ'ಗಳ ಹೊಸತನದ ಧ್ವನಿಯನ್ನೂ ಹುದುಗಿಸಿರುವ ಕೌಶಲ ಪರಿಭಾವನಾರ್ಹ.

೨

ವಚನೋದ್ಯಾನದಲ್ಲಿ ಒಂದೆಡೆ ಸಿದ್ಧಯ್ಯ ಪುರಾಣಿಕರು, 'ವಚನ'ಗಳನ್ನು ಬನ್ನಿ ಬನ್ನಿ ಎಂದು ಕರೆಯುತ್ತ "...ಜೀವ, ಜೀವನ, ಜಗ, ಜಗದೀಶ್ವರನನ್ನು ಕುರಿತು ಬನ್ನಿ"[5] ಎಂದು ಪ್ರಾರ್ಥಿಸಿದ್ದಾರೆ. ಇದು ಅವರ ವಚನಗಳ ವಸ್ತುವಿನ ಸೂಚಕವೂ ಆಗಿದೆ. ಆ ವಚನಗಳು ಸತ್ತ್ವವನ್ನು ಕೆರಳಿಸಿ, ಶತ್ವವನ್ನು ಅರಳಿಸಿ. ಚಿತ್ತವನ್ನು ಅಲರಿಸಿ, ಮುತ್ತಿನಂತೆ ಉರುಳಿಬರಬೇಕೆಂಬ ಬಯಕೆ ಅವರದು.

"ಮಾತಿನ ಬಸಿರೆ ಭಾವಶಿಶುವಿನ ಭಾರದಿಂದ ಬಸವಳಿದಿದ್ದಾಳೆ !
ಬೇನೆ ಪ್ರಾರಂಭವಾಗಿ ಬಹಳದಿನಗಳುರುಳಿವೆ

3. ಅದೇ, ವಚನ ೪೯೫ 4. ಅದೇ, ವಚನ ೫೨೩ 5. ಅದೇ, ವಚನ ೫೦೨

ಹೆರಿಗೆಯೇಕೆ ಆಗದವ್ವಾ ಇನ್ನೂ? ಮದ್ದುಗಿದ್ದು ಕುಡಿಸೋಣವೆ?
ಬೇಡ, ಹೆರಿಗೆಗೆ ಬದಲು ಹಲಿವುಳಿಕೆಯಾದೀತು!
ಶಸ್ತ್ರ ಶಲಾಕೆ ಬೇಡ, ಗಿಡಮೂಲಿಕೆ ಬೇಡ,
ಒಳಗೇ ತಿಣುಕುವ ಶಕ್ತಿ ವಿಕಸಿಸಲಿ;
ಮಗುವಿನ ಮೊಗ ನೋಡಬೇಕೆಂಬ ತಾಯ್ತನದ ತವಕ ಪ್ರಬಲಿಸಲಿ!
ಸ್ವತಂತ್ರಧೀರ ಸಿದ್ಧೇಶ್ವರನ ದಯದಿಂದ ಸಹಜ ಸುಖಪ್ರಸವವೇ ಆದೀತು"[6]

ಈ ವಚನ, ಅವರ 'ವಚನಶಿಶು' ಹೇಗೆ ಹುಟ್ಟಿಬರಬೇಕೆಂಬ ಹಿನ್ನೆಲೆಯನ್ನು, ಬಹು ಅರ್ಥವತ್ತಾಗಿ ಆಕರ್ಷಕ ಶೈಲಿಯಲ್ಲಿ ನಿರೂಪಿಸುತ್ತದೆ. ಅವರ ವಚನಗಳು ಹಲಿವುಳಿದವಾಗಬಾರದು, ಮದ್ದನಿತ್ತೋ ಶಸ್ತ್ರಚಿಕಿತ್ಸೆ ಮಾಡಿಯೋ ಹೊರತೆಗೆದವುಗಳಾಗಬಾರದು, ದಿನತುಂಬಿ ಒಳಗೊಳಗೆ ವಿಕಸಿಸಿ ಸಹಜ ಸುಖಪ್ರಸವವಾಗಿ ಅವತರಿಸಿದವುಗಳಾಗಬೇಕು—ಇದು ಅವರ ಬಯಕೆ. 'ವಚನೋದ್ಯಾನ'ದಲ್ಲಿ ಸಂಕಲನಗೊಂಡಿರುವ ವಚನಗಳನ್ನು ಓದಿದಾಗ ಅವರ ಈ ಬಯಕೆ ಬಹುಮಟ್ಟಿಗೆ ಸಫಲವಾದುದು ವಿದಿತವಾಗುತ್ತದೆ. ಅವರ ಈ 'ಉದ್ಯಾನ'ದಲ್ಲಿ ಲೋಕಾನುಭವದ ಮಕರಂದವನ್ನು ಸೂಸುವ ವಚನಕುಸುಮಗಳು ಅರಳಿ ನಿಂದಿರುವಂತೆ, ಶಿವಾನುಭವದ ಸೌರಭದಿಂದ ತುಂಬಿ ಮಗಮಗಿಸುವ ಕೃತಪುಷ್ಪಗಳೂ ಇವೆ. ಇಂಥ ಶಿವಾನುಭವ-ಶಿವತತ್ತ್ವಗಳನ್ನೊಳಗೊಂಡ ವಚನಗಳ ಸ್ಥೂಲವಿವೇಚನೆಯೇ ಪ್ರಕೃತ ಲೇಖನದ ಮುಖ್ಯ ಉದ್ದೇಶ.

೩

ಜೀವ–ಜಗತ್ತು–ಜಗದೀಶ್ವರ–ಮೋಕ್ಷ–ಮೋಕ್ಷೋಪಾಯ ಇತ್ಯಾದಿ ಮೂಲಭೂತ ಆಧ್ಯಾತ್ಮಿಕ ವಿಷಯಗಳನ್ನು ಕುರಿತು 'ಇದಮಿತ್ಥಂ' ಎಂದು ಹೇಳಲು ಸಾಧ್ಯವಿಲ್ಲ. ಆಯಾ ಸಿದ್ಧಪುರುಷರ ಅನುಭಾವದ ಹಿನ್ನೆಲೆಗನುಗುಣವಾಗಿ ಅವರವರ ಹೇಳಿಕೆಯಲ್ಲಿ ಭಿನ್ನತೆ ಇರುವ ಸಾಧ್ಯತೆಯಿದೆ. ಸಿದ್ಧಯ್ಯ ಪುರಾಣಿಕ ಅವರು ಶರಣರು ತೋರಿದ ಅನುಭಾವದ ಮಾರ್ಗದಲ್ಲಿ ನಂಬಿಕೆಯಿಟ್ಟು ಮುಂದುವರಿದವರು. ಅಲ್ಲಿ ತಾವು ಕಂಡುಂಡ ಅನುಭವಗಳನ್ನು ತಮ್ಮ ವಚನಗಳಲ್ಲಿ ಹೃದ್ಯವಾಗಿ ನಿರೂಪಿಸಿದವರು. ನಿರೂಪಣಾವಸರದಲ್ಲಿ, ಸಮಕಾಲೀನ ಪ್ರಜ್ಞೆಯೂ ಕ್ರಿಯಾಶೀಲವಾದುದರ ಪರಿಣಾಮವಾಗಿ, ಕೆಲವೆಡೆ ಅವರ ವಚನಗಳಿಗೆ ಹೊಸ ವಚೋವಿನ್ಯಾಸವುಂಟಾಗಿದೆ.

"ಕಾಣದ ನಿನ್ನ ಕಂಡಂತೆ ಬಣ್ಣಿಸಿದರೆ ಒಪ್ಪುವುದೆ ಅಯ್ಯ"[7] ಎಂದು ಚಿಂತಿತರಾದ ಪುರಾಣಿಕರಿಗೆ 'ಅವನನ್ನು' ಕಾಣುವುದು ಸಾಧ್ಯವಾಗಬೇಕಾದರೆ, ಬಾಳು

---

6. ಅದೇ, ವಚನ ೪೯೫ 7. ಅದೇ, ವಚನ ೨೦

ಹಸನಾಗಬೇಕು, ಚಾರಿತ್ರ್ಯ ಶುದ್ಧವಾಗಬೇಕು, ಹಮ್ಮು ಅಳಿಯಬೇಕು. ಸಾಧನೆ ಮುಂದುವರಿಯಬೇಕೆಂಬ ಅರಿವು ಮೂಡಿದೆ. ಆದುದರಿಂದಲೇ ಅವರು,

"ಜೀವನದ ವನದಲ್ಲಿ ಪರಿಣತಿಯ ಪುಷ್ಪ ಅರಳಲಯ್ಯ;
ಪರಿಣತಿಯ ಪುಷ್ಪದಿಂದ ಪ್ರತಿಭೆಯ ಪರಿಮಳ ಹೊರಡಲಯ್ಯ;
ಪ್ರತಿಭೆಯ ಸ್ಫಟಿಕದ ಘಟದಲ್ಲಿ ಚಾರಿತ್ರ್ಯ-ಜ್ಯೋತಿ ಪ್ರಕಾಶಿಸಲಯ್ಯ;
ಸಚ್ಚಾರಿತ್ರ್ಯದ ಸಿಂಪಿನಲ್ಲಿ ಸದ್ಧ್ಯೇಯರತಿಯ ಮುತ್ತು ಮೂಡಲಯ್ಯ;
ಸದ್ಧ್ಯೇಯರತಿಯ ಕೆಚ್ಚಲಿನಿಂದ ಸಾಧನೆಯ ಹಾಲು ಸುರಿಯಲಯ್ಯ;
ಸಾಧನೆಯ ಹಾಲು ತ್ರಿವಿಧ ತಪದಲ್ಲಿ ಕಾಯ್ದು, ಹಮ್ಮಳಿವಿನ ಹೆಪ್ಪಿನಿಂದ ಹೆತ್ತು,
ಸ್ವಾನುಭವದ ಕಡೆಗೋಲಿನಿಂದ ಮಥಿತವಾಗಿ,
ಸಿದ್ಧಿಯ ಬೆಣ್ಣೆಯಾಗಿ ಹೊರಹೊಮ್ಮಲಯ್ಯ – ಸ್ವತಂತ್ರಧೀರ ಸಿದ್ಧೇಶ್ವರ"[8]

ಎಂದು ಪರಮಾತ್ಮನನ್ನು ಬೇಡಿಕೊಂಡಿದ್ದಾರೆ. ಸಿದ್ಧಿಯ ಬೆಣ್ಣೆ ಸಿದ್ಧವಾಗಬೇಕಾದರೆ. ನಡೆಯಬೇಕಾದ ಕ್ರಿಯೆಗಳೆಲ್ಲವನ್ನೂ ಪ್ರತಿಮಾ ವಿಧಾನದ ಮೂಲಕ ಇಲ್ಲಿ ಸೂಚಿಸಲಾಗಿದೆ. ಇಲ್ಲಿ ಬರುವ ರೂಪಕಮಾಲೆ ಕೂಡ ಅರ್ಥಸ್ಫುಟತೆಗೆ, ಅರ್ಥಪುಷ್ಟಿಗೆ ಪೋಷಕವಾಗಿ ಸಾರ್ಥಕತೆ ಪಡೆದಿದೆ.

ಕುರುಡು ಭಕ್ತಿಯನ್ನು ಬಯಸದ ಅವರು "ಬದುಕಿನ ಬರಡನಳಿಸುವ ಭಕ್ತಿ, ಪಶ್ಯಂತಿ ಭಕ್ತಿ! ಇಂಥ ಭಕ್ತಿಯನೆ ನೀಡಿ ಮುಕ್ತಿಯ ಬಿಸಾಡಾಚೆಗೆ"[9] ಎಂದು ಮತ್ತೆ ಮತ್ತೆ ಪರಶಿವನಲ್ಲಿ ಮೊರೆಯಿಟ್ಟಿದ್ದಾರೆ. ಮುಂದುವರಿದು "...ನನ್ನನರಿದು, ನನ್ನರಿವಿನಿಂವ ನಿನ್ನನರಿದು, ನಿನ್ನಿಂದ ಎಲ್ಲವನ್ನರಿದು ಅರಿವಾಗಿ ಅರಿವ ಬೆರೆದು ಬಯಲಾಗುವುದನ್ನು ಕರುಣಿಸು"[10] ಎಂದು 'ಸ್ವತಂತ್ರಧೀರ ಸಿದ್ಧೇಶ್ವರ'ನಲ್ಲಿ ನಿಚ್ಚನಿಚ್ಚವೂ ನಿವೇದಿಸಿಕೊಂಡಿದ್ದಾರೆ, ಸಾಧನಾನಿರತರಾಗಿದ್ದಾರೆ.

ಕಾಲ ಕಳೆದಂತೆ ನಲ್ಲಿಯ ನೀರು, ಪೇಟೆಯ ಹೂವು, ಅಂಗಡಿಯ ಅಗರುಬತ್ತಿ, ಕಾಳಸಂತೆಯ ಕಾಳಿನ ನೈವೇದ್ಯಗಳಿಂದ ಪೂಜಿಸುವ ಯಾಂತ್ರಿಕ ಪೂಜೆಯನ್ನು ತ್ಯಜಿಸಿ, ಕಲಮಲದ ಕಂಬನಿಗಳೇ ಅಭಿಷೇಕ ಜಲವಾಗಿರಲು, ಅನಿಮಿಷನಯನಗಳೇ ಕುಸುಮವಾಗಲು, ಬಿಸಿಯುಸಿರೇ ಧೂಪಧೂಮವಾಗಲು, ಗದಗದಿಕೆಗಳೇ ಮಂತ್ರಾಕ್ಷರವಾಗಲು, ಸಂಪೂರ್ಣ ಶರಣಾಗತಿಯೇ ನೈವೇದ್ಯವಾಗಲು ನೈಜಪೂಜೆಗೆ ತೊಡಗುತ್ತಾರೆ. ತತ್ಫಲವಾಗಿ "ಇದುವರೆಗೆ ಪೂಜೆಮಾಡಿದೆ ಇಂದು ಪೂಜೆ ನಾನಾದೆ"[11] ಎಂಬ ಹಂತಕ್ಕೆ ಮುಟ್ಟುತ್ತಾರೆ. "ಇದಿರು ಕಾಣುವವರೆಗೆ ಕುರುಹಿಗೆ ಕೈಮುಗಿದೆ ; ಕಾಣದಾದಾಗ ನನಗೆ ನಾ ನಮಸ್ಕರಿಸಿದೆ"[12] ಎಂಬ ಮಾತಿನಲ್ಲಿಯೂ ಅದೇ ಸಿದ್ಧ

---

8. ಅದೇ, ವಚನ ೨೧೫ 9. ಅದೇ. ವಚನ ೫೧೩ 10. ಅದೇ, ವಚನ ೪೮ 11. ಅದೇ, ವಚನ ೫೨೨ 12. ಅದೇ, ವಚನ ೯೪

ಸ್ಥಿತಿಯ ಸೂಚನೆಯಿದೆ. ಅಂತಹ ಒಂದು ನಿಲುಗಡೆಯಲ್ಲಿ ನಿಂದು ಉಸಿರಿದ ವಚನಗಳೇ ಅನುಭಾವದ ವಚನಗಳು, ಶಿವತತ್ವ ಚಿಂತನವನ್ನೊಳಗೊಂಡ ವಚನಗಳು.

೪

ಸೃಷ್ಟಿಕರ್ತನೊಬ್ಬನಿದ್ದಾನೆಂದು ಬಲವಾಗಿ ನಂಬಿದವರು ಪುರಾಣಿಕರು. ಸೃಷ್ಟಿಯ ಸೂಕ್ಷ್ಮವೀಕ್ಷಣೆಯಿಂದಲೇ, ಸೃಷ್ಟಿಕರ್ತನ ಗುಣ-ವಿಶೇಷಗಳನ್ನು ತಿಳಿಯಬಲ್ಲ ಹೃದಯ ಅವರದು. ಸೃಷ್ಟಿಯಲ್ಲಿಯ ಮಧುವಾತ–ಝಂಝಾವಾತ, ರಸ-ವಿಷ, ಹುಲ್ಲೆ-ಹುಲಿ, ಜೀವ-ಸಾವು, ಸಲಹುವ ಮಳೆ–ಕೊಲ್ಲುವ ಸಿಡಿಲು, ಕಡಲು–ಬಡಬಾನಲ, ಆಡುವಶಿಖಿ–ಜ್ವಾಲಾಮುಖಿ, ಇತ್ಯಾದಿ ಪರಸ್ಪರ ವಿರೋಧ-ವೈಚಿತ್ರ್ಯ, ವಿಶೇಷಗಳನ್ನು ಕಂಡು, ಅವೆಲ್ಲವನ್ನು ತುಂಬಿರುವ ಪರಮಾತ್ಮನು ಶಂಕರನೂ ಅಹುದು ಭಯಂಕರನೂ ಅಹುದು[13] ಎಂದು ಅವರು ತಿಳಿದಿರುವುದು ಯಥಾರ್ಥವೇ ಆಗಿದೆ. ಜೀವರಾಶಿಗಳನ್ನು ಹುಟ್ಟಿಸಿದ ಶಿವನು, ಅವು ಜೀವಿಸಿರಲು ಸೃಷ್ಟಿಯಲ್ಲಿ ಅನ್ನ ಔಷಧಿ ನೀರು ತೈಲ ಅನಿಲಾದಿಗಳನ್ನೂ, ಶಿಶು ಹುಟ್ಟುವ ಮುನ್ನ ತಾಯ ಎದೆಯಲ್ಲಿ ಹಾಲನ್ನು ಹುಟ್ಟಿಸಿರುವುದನ್ನು ಕಂಡು 'ಅವನು' ಕರುಣಾಸಿಂಧುವೆಂದು ಮನವರಿಕೆ ಮಾಡಿಕೊಂಡಿದ್ದಾರೆ.[14] "ಕಣ್ಣು ತೆರೆಯೆ ವಿಶ್ವಲಿಂಗ ದರ್ಶನ" ಎಂಬ ವಚನ[15] ಕೂಡ ಅದೇ ಸಾಲಿಗೆ ಸೇರುತ್ತದೆ.

ಹೀಗೆ ಜಗತ್ತು–ಜೀವನಗಳ ಸೂಕ್ಷ್ಮಪರಿಶೀಲನೆಯಿಂದ, ಪರಮಾತ್ಮನ ಗುಣವಿಶೇಷಗಳನ್ನು ಗುರುತಿಸಿದ ಪುರಾಣಿಕರು, ಅದೆಲ್ಲವನ್ನು ಸೃಜಿಸಿದ ಸೃಷ್ಟಿಕರ್ತನ ಸ್ವರೂಪಾದಿಗಳನ್ನು ತಿಳಿಯಲು ಹವಣಿಸಿದ್ದಾರೆ. ಅದು ಅವರಿಗೆ ಸಾಧ್ಯವಾದುದು, ಹಿಂದೆ ಹೇಳಿದಂತೆ "ಇಂದು ಪೂಜೆ ನಾನಾದೆ," "ಇದಿರು ಕಾಣುವವರೆಗೆ ಕುರುಹಿಗೆ ಕೈಮುಗಿದೆ, ಕಾಣದಾದಾಗ ನನಗೆ ನಾ ನಮಸ್ಕರಿಸಿದೆ" ಎಂಬಂತಹ ಸಿದ್ಧಸ್ಥಿತಿಗೆ ಮುಟ್ಟಿದಾಗ. ಶಿವ–ಜೀವರನ್ನು ಕುರಿತ ಅವರ ಕೆಲವು ವಚನಗಳನ್ನು ಅಭ್ಯಸಿಸಿದಾಗ, ಶರಣರ ಮತ್ತು ಸಿದ್ಧಯ್ಯ ಪುರಾಣಿಕರ ಅನುಭವಗಳಲ್ಲಿ ಪರಸ್ಪರ ಹೊಂದಾಣಿಕೆ ಇರುವುದು ಕಂಡುಬರುತ್ತದೆ.

"ಗ್ರಹ ಗೋಲಗಳಿಂದಾಚೆ, ನಕ್ಷತ್ರ ನೀಹಾರಿಕೆಗಳಿಂದಾಚೆ
ಹಾಲುಹಾದಿಗಳಿಂದಾಚೆ, ಕ್ವಾಸಾರು ಪಲ್ಸಾರುಗಳಿಂದಾಚೆ
ಕಾಳ-ಧವಳ ರಂಧ್ರಂಗಳಿಂದಾಚೆ, ಸ್ಥಲ–ಕಾಲಗಳಿಂದಾಚೆ
ಆಚೆ–ಆಚೆ–ಆಚೆ–,
ಹಬ್ಬುತ್ತಿದೆ ನಿನ್ನ ಹರವು! ಎಲ್ಲಿವೆ ತೆರಹು
ಸ್ವತಂತ್ರಧೀರ ಸಿದ್ಧೇಶ್ವರನಿಲ್ಲದ ತೆರಹು ?[16]

---

13. ಅದೇ, ವಚನ ೧೩ 14 ಅದೇ, ವಚನ ೧೮ ೧೫. ಅದೇ, ವಚನ ೧೪
೧೬. ಅದೇ, ವಚನ ೧೮೮

ಎಂಬ ವಚನದಲ್ಲಿಯೂ, ಹಾಗೆಯೆ "ಬೆಳಕಿನ ಸಾಸಿರ ಸಾಸಿರ ವರುಷ ನಿನಗೊಂದು ನಿಮಿಷ..., ಊಹಿಸಬಲ್ಲವರಾರು ನಿನ್ನ ನಿರಾಕಾರದ ವ್ಯಾಪ್ತಿಯನ್ನು? ಅರಿದುದಕ್ಕಿಂತ ಒರೆದುದಕ್ಕಿಂತ ಬರೆದುದಕ್ಕಿಂತ ಊಹಿಸಿ ಭಾವಿಸಿ ಕಲ್ಪಿಸಿದುದಕ್ಕಿಂತ ಅತೀತ ನಿನ್ನ ಅಸ್ತಿತ್ವ,"[17] "ಎಲ್ಲ ತರ್ಕಗಳ ಹಿಂದಿರುವ ನಿತ್ಯವೆ...ಎಲ್ಲ ಪ್ರಮಾಣಗಳಿಗೆ ಪ್ರಮಾಣವಾದ ಅಪ್ರಮಾಣವೆ...ಏಕಮೇವಾದ್ವಿತೀಯವೆ, ವಿಶ್ವಗೇಹ, ವಿಶ್ವದೇಹ, ವಿಶ್ವಾತೀತವೆ ಸ್ವತಂತ್ರಧೀರ ಸಿದ್ಧೇಶ್ವರವೆ!"[18] ಇತ್ಯಾದಿ ವಚನಗಳಲ್ಲಿಯೂ, ಪರಮಾತ್ಮನ ವಿಶ್ವವ್ಯಾಪಕತೆ, ಸಮಸ್ತವಸ್ತುಗಳಲ್ಲಿರುವ ಅವನ ಅಸ್ತಿತ್ವ, ಅವನು ಅಪ್ರಮಾಣ, ಅಗೋಚರ, ಸಚ್ಚಿದಾನಂದ, ಏಕಮೇವಾದ್ವಿತೀಯನಾಗಿರುವ ಬಗೆ,—ಇವೆಲ್ಲವನ್ನು ಹೃದಯದುಂಬಿ ಬಣ್ಣಿಸಿದ್ದಾರೆ. ಇಂತಹ ವಚನಗಳನ್ನು ಓದುತ್ತಿದ್ದಂತೆಯೇ ನಮಗೆ "ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ" "ಎತ್ತೆತ್ತ ನೋಡಿದಡತತ್ತ ನೀನೇದೇವಾ" ಎಂಬ ಬಸವಣ್ಣನವರ ವಚನಗಳು ನೆನಪಿಗೆ ಬರುತ್ತವೆ.

ಪರಮಾತ್ಮನು ಹಳಬರಿಗೆ ಹಳಬ, ಹೊಸಬರಲ್ಲಿ ಹೊಸಬ, ನಿರಂತರಕ್ಕೆ ನಿರಂತರ, ಚಿರಂತನಕ್ಕೆ ಚಿರಂತನ, ಅಜ ಅಜರ ಅಮರ ಪರಾತ್ಪರ.[19] ಅವನಿಗೆ ಆದಿಯಿಲ್ಲವೆಂದಮೇಲೆ ಅಂತ್ಯವಿಲ್ಲ, ಅವನು ಅಮೂರ್ತ ಆದುದರಿಂದ ಪ್ರಳಯವಿಲ್ಲ, ಅವನಿಗೆ ನಾಮವಿಲ್ಲವಾದುದರಿಂದ ಸೀಮೆಯೂ ಇಲ್ಲ, ಅರುವಿಗೆ ಎಟುಕದ ಅವನು ಪರಿಧಿರಹಿತ.[20] ಹಳೆರೆಕ್ಕೆ ಕಳಚಿ ಹೊಸರೆಕ್ಕೆ ಕೊನರಿದರೂ ಹಕ್ಕಿ ಮಾತ್ರ ಮೊದಲಿನದೆ, ಹಣ್ಣೆಲೆ ಉದುರಿ ಹಸಿರೆಲೆ ಚಿಗುರಿದರೂ ಮರ ಮಾತ್ರ ದೊದಲಿನವೆ, ಹಳೆನೀರು ಹರಿದು ಹೊಸನೀರು ಬಂದರೂ ಹಳ್ಳಮಾತ್ರ ಮೊದಲಿನದೆ, ಹಾಗೆಯೆ 'ಅವನ' ಹೆಸರಿನಲ್ಲಿ ಹಳೆ ಹೊಸ ಗ್ರಂಥ ಪಂಥ ವೇದಾಂತ ಸಿದ್ಧಾಂತ ರಾದ್ಧಾಂತಗಳು ಹುಟ್ಟಿದರೂ ಅವನು ಮಾತ್ರ ಮೊದಲಿಗ, ಮೂಲಿಗರಲ್ಲಿ ಮೂಲಗ[21]—ಹೀಗೆ ಹಲವಾರು ಸೂಕ್ತ ಉಪಮೆ-ದೃಷ್ಟಾಂತಾದಿಗಳ ಮೂಲಕ ಪರಶಿವನ ಮಹಿಮಾವರ್ಣನೆ ಅವರ ಅನೇಕ ವಚನಗಳಲ್ಲಿ ತುಂಬಿ ನಿಂತಿದೆ. ಇಂಥ ವಚನಗಳಲ್ಲಿ ಎರಡು ಬಹಳ ಗಮನಾರ್ಹವಾಗಿವೆ. ಅವುಗಳ ಸಾರ ಇಂತಿದೆ,—

ಹೆಸರಿಲ್ಲದ ಅವನು ಯಾವ ಹೆಸರಿನಿಂದ ಕರೆದರೂ 'ಓ' ಎನ್ನುತ್ತಾನೆ.ಆದುದರಿಂದಲೇ ಅವನನ್ನು ಹರಿ, ಹರ, ಸಿದ್ಧ, ಬುದ್ಧ, ಯಹ್ವ, ಮಜ್ದ, ತಾವೊ, ಅಲ್ಲಾ ಮುಂತಾಗಿ ಬೇರೆ ಬೇರೆಯವರು ಕರೆಯುತ್ತಾರೆ, ಭಾಷೆಯಿಲ್ಲದ ಅವನನ್ನು ಯಾವ ಭಾಷೆಯಲ್ಲಿ ಮೊರೆಯಿಟ್ಟರೂ 'ಬಾ' ಎನ್ನುತ್ತಾನೆ, ವರ್ಣವಿಲ್ಲದ ಅವನು ಯಾವ

---

17. ಅದೇ, ವಚನ ೧೨ 18. ಅದೇ, ವಚನ ೫ 19. ಅದೇ, ವಚನ ೧೮೮
20. ಅದೇ, ವಚನ ೧೪೯ 21. ಅದೇ, ವಚನ ೨೦೧

ವರ್ಣದವರು ಯಜಿಸಿದರೂ ಒಲಿಯುತ್ತಾನೆ, ಕುಲವಿಲ್ಲದ ಅವನು ಯಾವ ಕುಲದವರು ಭಜಿಸಿದರೂ ನಲಿಯುತ್ತಾನೆ, ತೆರಹಿಲ್ಲದ ಅವನು ಯಾವ ಕುರುಹನ್ನು ಪೂಜಿಸಿದರೂ ಪ್ರೀತನಾಗುತ್ತಾನೆ, ರೂಪವಿಲ್ಲದ ಅವನು ಯಾವ ರೂಪದಲ್ಲಿ ಆರಾಧಿಸಿದರೂ ಆನಂದಿಸುತ್ತಾನೆ, ದಿಕ್ಕಿಲ್ಲದ ಅವನು ಯಾವ ದಿಕ್ಕಿಗೆ ಮಣಿದರೂ ತಣಿಯುತ್ತಾನೆ[22]—ಇಲ್ಲಿ ಪರಶಿವನು ನಾಮ, ರೂಪ, ಕುಲ, ಭಾಷೆ, ವರ್ಣ ಮೊದಲಾದವನ್ನು ಮೀರಿನಿಂದವನೆಂಬ ಭಾವನೆಯಿರುವುದಂತೂ ಸರಿಯೆ, ಜೊತೆಗೆ ಪುರಾಣಿಕರು ಸರ್ವದೇವರನ್ನು. ಸರ್ವಭಾಷೆಗಳನ್ನು, ಸರ್ವವರ್ಣಗಳನ್ನು, ಸರ್ವಕುಲಗಳನ್ನು, ಒಟ್ಟಿನಲ್ಲಿ ಸರ್ವಧರ್ಮಗಳನ್ನು ಒಪ್ಪುವರೆಂಬ ಅವರ ವಿಶಾಲ ಮನೋಭಾವನೆಯೂ ಸೂಚಿತವಾಗಿದೆ. ಇಂತಹ ಸರ್ವದೇವ, ಸರ್ವಧರ್ಮ ಸಮಾನದೃಷ್ಟಿ ಹೆಚ್ಚು ಜನ ವಚನಕಾರರಲ್ಲಿ ಕಾಣದೊರೆಯುತ್ತದೆಯೆ ? ನಿರ್ಮಲ ಹೃದಯದಿಂದ ಯಾವ ರೂಪದಲ್ಲಿ ಪೂಜಿಸಿದರೂ ಅದು ಶಿವನಿಗೆ ಒಪ್ಪಿತವಾಗುವುದರಿಂದ ತಾವು ಇಷ್ಟಲಿಂಗದ ರೂಪದಲ್ಲಿ ಅವನನ್ನು ಪೂಜಿಸುವುದಾಗಿ ಹೇಳಿದ್ದಾರೆ. ಬೇರೆಯವರು ಅದಕ್ಕಾಗಿ ಆಕ್ಷೇಪಿಸಬಾರದೆಂಬ ಧ್ವನಿಯೂ ಅವರ ಆ ಹೇಳಿಕೆಯಲ್ಲಿ ಹುದುಗಿದೆ.

೫

ಎಲ್ಲವನ್ನು ಒಳಗೊಂಡ, ಆದಿಗೆ ಆದಿಯಾದ, ಪರಶಿವತತ್ವವನ್ನು ವೀರಶೈವದಲ್ಲಿ 'ಸ್ಥಲ' ಎಂಬ ಹೆಸರಿನಿಂದ ಕರೆಯಲಾಗಿದೆ. ಶೂನ್ಯ, ಬಯಲು, ಸಹಜ, ಎಂಬ ಪರ್ಯಾಯ ನಾಮಗಳೂ ಅದಕ್ಕುಂಟು. ಸಿದ್ಧಯ್ಯನವರಿಗೂ ಅದು ಒಪ್ಪಿತವೇ. 'ಸ್ಥಲ' ತತ್ವದಿಂದಲೇ ಸೃಷ್ಟಿ–ಸ್ಥಿತಿ–ಸಂಹಾರ ಲೀಲೆಗಳು ಹೇಗೆ ನಡೆಯುತ್ತವೆಂಬುದನ್ನು,

"ಸ್ಥಲದ ಧಾರಾಪಾತ್ರೆಯಿಂದ ಕಾಲ ಬಿಂದುಗಳುಂ ಕಳಚುತ್ತವೆ,
ಮತ್ತೆ ಧಾರಾಪಾತ್ರೆಯೊಳಕ್ಕೆ ನುಣುಚಿತ್ತಿವೆ !
ಒಂದೊಂದು ಬಿಂದುವಿಗೆ ಒಂದೊಂದು ಪರಿವರ್ತನೆ–ಒಂದೊಂದು
ಯುಗಪ್ರವರ್ತನೆ !
ಹಿಂದು ಇಂದಿನ ಉಪ್ಪುನೀರಳೆ ತಿನ್ನುತ,
ಇಂದು ಮುಂದಿನ ಮುಲ್‌ಬೆರಿ ತಿನ್ನುತ್ತ
ಎಂದಿಗೂ ಮುಗಿಯದ ಕಾಲದ ನೂಲನ್ನು ನೂಲುತ್ತಿವೆ ;
ಪ್ರಾಣ-ಮಣಿಗಳನ್ನೊಮ್ಮೆ ತಲೆಬುರುಡೆಗಳನ್ನೊಮ್ಮೆ ಪವಣಿಸುತ್ತಿವೆ ;
ಅವುಗಳನ್ನು ಸ್ಥಲದಲ್ಲಿಯೇ ಹೂಳಿ, ಸ್ಥಲದಿಂದಲೇ ಮತ್ತೆ
ಪಡೆಯುತ್ತಿವೆ !

22. ಅದೇ, ವಚನ ೭, ೮

ಚಣಗಳ ರೇಷ್ಮೆಯ ಕೀಡೆಗಳು ಗೂಡು ಕತ್ತರಿಸಿ
ಮತ್ತೆ ಮತ್ತೆ ಮೈದೋರುತ್ತಿವೆ, ಮತ್ತೆ ಮತ್ತೆ ಗೂಡು ಸೇರುತ್ತಿವೆ !
ಸ್ವತಂತ್ರಧೀರ ಸಿದ್ಧೇಶ್ವರಾ,
ಸ್ಥಲ-ಕಾಲ ಯಂಗ್ಮದಲಿ, ಲಗ್ನದಲಿ, ಗರ್ಭದಲಿ
ನಿನ್ನ ಸೃಷ್ಟಿ-ಸ್ಥಿತಿ ಸಂಹಾರಲೀಲೆ ಸಾಗುತ್ತಿದೆ
ಅರಿತವರಿಗೂ ಅರ್ಥವಾಗದಂತೆ ![23]

ಎಂಬ ವಚನ ಸಮುಚಿತ ಉಪಮೆಗಳ ಮೂಲಕ ವಿವರಿಸುತ್ತದೆ. 'ಸ್ಥಲ'ದ ಧಾರಾ ಪಾತ್ರೆಯಿಂದ ಕಾಲಬಿಂದುಗಳು ಕಳಚುತ್ತಿವೆ, ಮತ್ತೆ ಅದರೊಳಕ್ಕೆ ನುಣುಚುತ್ತಿವೆ. ಈ ಕಾಲಬಿಂದುಗಳೇ ಪ್ರಾಣಮಣಿಗಳನ್ನು ಆ 'ಸ್ಥಲ'ದಿಂದಲೇ ಮತ್ತೆ ಮತ್ತೆ ಪಡೆದು ಪವಣಿಸುವ, ತಲೆಬುರುಡೆಗಳನ್ನು ಮತ್ತೆ ಮತ್ತೆ ಅದರಲ್ಲಿಯೆ ಹೂಳುವ ನಿರಂತರ ಕ್ರಿಯೆಯಲ್ಲಿ ನಿರತವಾಗಿವೆ. ಆ ಕ್ರಿಯೆಯನ್ನು ರೇಷ್ಮೆಯ ಕೀಡೆಗಳ ಕ್ರಿಯೆಗೆ ಹೋಲಿಸಿರುವುದು ಬಹಳ ಅರ್ಥವತ್ತಾಗಿದೆ. 'ಸ್ಥಲ' ತತ್ವವನ್ನು ಕುರಿತು ವೀರಶೈವ ತತ್ವ ಗ್ರಂಥಗಳಲ್ಲಿ ಬರುವ "ಸ್ಥೀಯತೇ ಲೀಯತೇ ಯತ್ರವಿಶ್ವಮಿತಸ್ಥಲಂ", "ಸಹಜದಿಂದ ನಿರಾಲಂಬವಾಯಿತ್ತು.........ಆ ಬ್ರಹ್ಮನ ಮೂರ್ತಿಯಿಂದಾದವು ಸಕಲ ಜಗತ್ತುಗಳೆಲ್ಲ, ಇವರೆಲ್ಲಾ ನಮ್ಮ ಗುಹೇಶ್ವರನ ಕರಸ್ಥಲದ ಹಂಗಿನಲ್ಲಿ ಹುಟ್ಟಿ ಬೆಳೆದರು" ಎಂಬಂತಹ ಸೂತ್ರ ಮತ್ತು ವಚನಗಳ ಮತಿತಾರ್ಥವನ್ನೇ ಈ ವಚನ ಒಳಗೊಂಡಿರುವುದಾದರೂ, ಹೇಳುವ ರೀತಿಯಲ್ಲಿ ಹೊಸತನವಿದೆ. "ಸ್ಥಲ ತೊಟ್ಟಿಲಲ್ಲಿ ಮಲಗಿರುವ 'ಇಪ್ಪ'ದನ್ನು ಕಾಲದ ನೂಲಿನಿಂದ ತೂಗುವ ಅಪ್ಪುದೆಲ್ಲಿ ?[24] ಎಂಬ ವಚನ ಕೂಡ ಈ ದೃಷ್ಟಿಯಿಂದ ಪರಿಶೀಲನಾರ್ಹವಾಗಿದೆ.

೬

ಎಲ್ಲವನ್ನೂ ಒಳಗೊಂಡ ಒಂದೇ ಒಂದಾದ ಪರವಸ್ತು ಅರ್ಥಾತ್ 'ಸ್ಥಲತತ್ವ' ಪೂಜ್ಯ-ಪೂಜಕ ಲೀಲೆಗೋಸುಗ ಲಿಂಗ (ಶಿವ) ಅಂಗ (ಜೀವ)ವೆಂದು ಎರಡಾಗುತ್ತದೆ. "ಒಂದೆಂಬೆನೆ ಎರಡಾಗಿದೆ" ಎಂಬ ಶರಣವಾಣಿ ಸೂಚಿಸುವುದು ಇದನ್ನೇ. ಇದನ್ನು ಒಪ್ಪಿರುವ ಪುರಾಣಿಕರು, ಆ ಒಂದು ಎರಡಾಗುವ ಪೂರ್ವದ ಸ್ಥಿತಿಯನ್ನು "...ಶಬ್ದ ಹುಟ್ಟದ ಮುನ್ನಿನ ಅರ್ಥದಂತೆ, ವಾದ್ಯಹುಟ್ಟದ ಮುನ್ನಿನ ನಾದದಂತೆ ಕುಂಚಹುಟ್ಟದ ಮುನ್ನಿನ ಚಿತ್ರದಂತೆ, ಉಳಿ ಹುಟ್ಟದ ಮುನ್ನಿನ ಶಿಲ್ಪದಂತೆ, ದೇಹಹುಟ್ಟದ ಮುನ್ನಿನ ಪ್ರಾಣದಂತೆ..."[25] ಎಂಬ ವಚನದಲ್ಲಿ ಹೊಸರೀತಿಯಲ್ಲಿ ಧ್ವನಿಪೂರ್ಣವಾಗಿ ನಿರೂಪಿಸಿದ್ದಾರೆ. ಅರ್ಥವಿಲ್ಲದಿದ್ದರೆ ಶಬ್ದವಿಲ್ಲ, ನಾದವಿಲ್ಲದಿದ್ದರೆ ವಾದ್ಯವಿಲ್ಲ, ಚಿತ್ರಶಿಲ್ಪದ ಕಲ್ಪನೆಯಿಲ್ಲದಿದ್ದರೆ ಕುಂಚ ಉಳಿಗಳು ನಿರರ್ಥಕ, ಪ್ರಾಣವಿಲ್ಲದಿದ್ದರೆ ದೇಹವ್ಯರ್ಥ—

23. ಅದೇ, ವಚನ ೨೭ 24. ಅದೇ, ವಚನ ೨೪ 25. ಅದೇ, ವಚನ ೩

ಇದೆಲ್ಲ ನಿಜ. ಆದರೆ ಆ ಅರ್ಥ, ನಾದ, ಚಿತ್ರ, ಶಿಲ್ಪ, ಪ್ರಾಣಗಳಿಗೆ ವ್ಯಕ್ತತೆ ಬರುವುದು ಶಬ್ದ, ವಾದ್ಯ, ಕುಂಚ, ಉಳಿ, ದೇಹಗಳಿಂದ. ಹಾಗೆಯೇ ಅವ್ಯಕ್ತ ಪರಶಿವನು ವ್ಯಕ್ತಗೊಳ್ಳುವುದು ಭಕ್ತ (ಅಂಗ)ನಿಂದ. ಇದನ್ನೇ ಅವರು "ನಾನು ಹುಟ್ಟಿದ ಮೇಲೆ ತಾನೆ ಅರ್ಥಕ್ಕೆ ಶಬ್ದ, ನಾದಕ್ಕೆ ವಾದ್ಯ, ಚಿತ್ರಕ್ಕೆ ಕುಂಚ, ಶಿಲ್ಪಕ್ಕೆ ಉಳಿ, ನಿನಗೆ ಭಕ್ತ ದೊರೆತುದು ?"[26] ಎಂಬ ಮಾತಿನಲ್ಲಿ ವ್ಯಕ್ತಗೊಳಿಸಿದ್ದಾರೆ.

"ನೀನಿಲ್ಲದ ಮುನ್ನ ನಾನಿದ್ದೆನೆಂದು ನಂಬದಯ್ಯ ನನ್ನ ಮನವು, ನಾನಿಲ್ಲದ ಮುನ್ನ ನೀನಿದ್ದೆಯೆಂದು ನಂಬದಯ್ಯ ನನ್ನ ಮನವು......"[27] "ನಿನ್ನ ನಾಮಕರಣೋತ್ಸವಕ್ಕೆ ನೀನೆನ್ನ ಕರೆಸದಿದ್ದರೂ ನಾನಲ್ಲಿ ಇದ್ದೆನಯ್ಯ,.........ಐವರು ಮುತ್ತೈದೆಯರು ತೊಟ್ಟಿಲ ತೂಗಿ, ಜೋಗುಳ ಹಾಡಿ, ನಿನಗೆ ಲಿಂಗವೆಂದು ಹೆಸರಿಟ್ಟಾಗ ನಾನಲ್ಲಿ ಅಂಗವಾಗಿ ಉಪಸ್ಥಿತನಿದ್ದೆನಯ್ಯ !......"[28] ಎಂಬಂತಹ ವಚನಗಳಲ್ಲಿ ಲಿಂಗ ಮೊದಲೋ ? ಅಂಗ ಮೊದಲೊ ? ಎಂಬ ಮೂಲಭೂತ ಪ್ರಶ್ನೆಗೆ ಉತ್ತರವಿದೆ. ಅವರ ಪ್ರಕಾರ ಲಿಂಗವಿದ್ದಲ್ಲಿ ಅಂಗವಿದೆ, ಅಂಗವಿದ್ದಲ್ಲಿ ಲಿಂಗವಿದೆ. ಲಿಂಗವನ್ನು ಬಿಟ್ಟು ಅಂಗವಿಲ್ಲ, ಅಂಗವನ್ನು ಬಿಟ್ಟು ಲಿಂಗವಿಲ್ಲ. "ನಿನ್ನ ನಿರಾಕರಿಸಿ ನಾನಿರಬಲ್ಲೆನೆಂದರೆ ಕಡಲ ಬಿಟ್ಟು ಅಲೆಯೆಲ್ಲಿ ?"[29] "ನಾನೆ ತೆರೆ, ನೀನೆ ತೊರೆ"[30] ಸೂತ್ರ ಪ್ರಾಯವಾದ ಇಂತಹ ಅವರ ಮಾತುಗಳು ಲಿಂಗ-ಅಂಗಗಳ ಚಿರಸಂಬಂಧದ ಸೂಚಕಗಳಾಗಿವೆ, ಅವೆರಡರ ಅವಿನಾಭಾವಸಂಬಂಧದ ದ್ಯೋತಕಗಳಾಗಿವೆ. ಅಂಗನಲ್ಲಿ ಲಿಂಗ ಹುದುಗಿರುವ ಬಗೆಯನ್ನು "ಬೀಜದ ಬಸಿರಿನ ಮೊಳೆಯುದ ಬಳ್ಳಿಯ ಮೂಡದ ಹೂವಿನ ಕಂಪಿನಂತಿಹೆಯೆನಯ್ಯ ?"[31] ಎಂದು ಪ್ರಶ್ನೆಯ ರೂಪದಲ್ಲಿಯೇ ನಿರೂಪಿಸಿರುವ ಬಗೆ ಹೊಸದು.

ನಶ್ವರವೆಂದು ಪರಿಗಣಿತವಾಗಿರುವ ದೇಹವನ್ನು ಆಶ್ರಯಿಸಿದ ಅಂಗನಲ್ಲಿ, ಲಿಂಗ ಕಳೆ ಅರಳುತ್ತದೆಂಬ ನಂಬಿಕೆ ಪುರಾಣಿಕರದು ; ಅದು—

ಇಪ್ಪುದರ ಕಪ್ಪೆಚಿಪ್ಪಿನಲ್ಲಿ ಅಪ್ಪುದರ ಸುಪ್ಪಾಣಿಯ ಮುತ್ತು ಮೂಡುತ್ತ
ಲಿದೆಯಂತೆ ನೋಡವ ಬನ್ನಿರೆ !
ನಶ್ವರದ ಮೂಸೆಯಲ್ಲಿ, ಶಾಶ್ವತದ ಅದಿರು ಕರುಗುತ್ತಲಿದೆಯಂತೆ
ನೋಡುವ ಬನ್ನಿರೆ !
ಮೃಣ್ಮಯದ ಪ್ರಣತಿಯಲ್ಲಿ ಚಿನ್ಮಯದ ಜ್ಯೋತಿ ಹೊತ್ತುತ್ತಲಿದೆಯಂತೆ
ನೋಡುವ ಬನ್ನಿರೆ !

26. ಅದೇ 27. ಅದೇ, ವಚನ ೧ 28. ಅದೇ, ವಚನ ೨ 29. ಅದೇ, ವಚನ ೩೫
30. ಅದೇ, ವಚನ ೯೮ 31. ಅದೇ, ವಚನ ೪

ತತ್ಕಾಲದ ಭಿತ್ತಿಯ ಮೇಲೆ, ಅನಂತ ಕಾಲದ ಚಿತ್ರ ಚಿತ್ರಿತವಾಗುತ್ತಿದೆ
ಯಂತೆ ನೋಡುವ ಬನ್ನಿರೆ !
ಸಾಕಾರದ ಮುಕುಲದಲ್ಲಿ, ನಿರಾಕಾರದ ಸೌರಭ ಶೇಖರಿತವಾಗುತ್ತಿದೆ
ಯಂತೆ ನೋಡುವ ಬನ್ನಿರೆ !
ಸ್ವತ್ರುಂತ್ರಧೀರ ಸಿದ್ಧೇಶ್ವರನ ಸದ್ಭಕ್ತರ ಹೃದಯದಲ್ಲಿ
ಅಖಿಲಾಂಡಗಳ ಅಂತಃಸತ್ವ ಅರಳುತ್ತದೆಯಂತೆ ನೋಡುವ ಬನ್ನಿರೆ ![32]

ಎಂಬ ವಚನದಲ್ಲಿ ಚೇತೋಹಾರಿಯಾಗಿ ಮೂಡಿಬಂದಿದೆ. ಅಂಗನಲ್ಲಿ ಲಿಂಗಕಳೆ ದಳದಳ ವಾಗಿ ಅರಳುವುದನ್ನು ನೋಡಬಯಸಿದ ಸಿದ್ಧಯ್ಯನವರು, ಉಳಿದವರನ್ನೂ 'ನೋಡ ಬನ್ನಿರೆ' ಎಂದು ಕರೆಯುವುದು ವಚನದ ಸ್ವಾರಸ್ಯವನ್ನು ಹಿಗ್ಗಲಿಸುವ ಜೊತೆಗೆ ಅವರ ಹೃದಯವಂತಿಕೆಯತ್ತಲೂ ಬೆರಳು ತೋರಿಸುತ್ತದೆ. ಹಿಂದಣ ಪ್ರಮುಖ ಶರಣರಿಗೆ ಸಮಜೋಡಿಯೆಂಬಂತೆ, ಸಿದ್ಧಯ್ಯನವರ ವಚನರಚನಾ ಪ್ರತಿಭೆ ಇಲ್ಲಿ ಕ್ರಿಯಾಶೀಲವಾಗಿರುವುದನ್ನು ಕಾಣುತ್ತೇವೆ.

ಅಂಗನಲ್ಲಿ ಲಿಂಗಕಳೆ ಅರಳಿಸಿಲ್ಲಬೇಕಾದರೆ, ಅಂಗಗತ ಶಕ್ತಿಯಾದ ಭಕ್ತಿ ವಿಕಾಸ ಗೊಳ್ಳಬೇಕು. ಪ್ರವೃತ್ತಿಪರ ಲಿಂಗಶಕ್ತಿಗಿಂತ, ನಿವೃತ್ತಿಪರ ಅಂಗನ ಭಕ್ತಿ ಹಿರಿದು. "ಕೊಲುವೆನೆಂಬ ಭಾಷೆ ದೇವನದಾದರೆ, ಗೆಲುವೆನೆಂಬ ಭಾಷೆ ಭಕ್ತನದು" ಎಂಬ ಶರಣ ವಾಣಿ ಇದನ್ನೇ ಉಗ್ಗಡಿಸುತ್ತದೆ..."ನಿನ್ನದು ಅಗಮ್ಯಶಕ್ತಿ, ನನ್ನದು ಅನನ್ಯಭಕ್ತಿ"[33] "ನಿನ್ನ ಶಕ್ತಿ ಹಿರಿದೊ, ನನ್ನ ಭಕ್ತಿ ಹಿರಿದೊ ಓ ಸರ್ವಶಕ್ತ"[34] "ನಾನು ಮಾಡುವ ಭಕ್ತಿ ಮೇಲೋ ನೀನು ನೀಡುವ ಮುಕ್ತಿಮೇಲೋ ?"[35] ಸಿದ್ಧಯ್ಯ ಪುರಾಣಿಕರ ಇಂತಹ ಮಾತುಗಳನ್ನು ನೋಡಿದಾಗ, ಅವರಲ್ಲಿ ಮುಕ್ತಿಗಿಂತ ಭಕ್ತಿಯೇ ಮೇಲೆಂಬ ನಂಬಿಕೆ ಗಟ್ಟಿಗೊಂಡಿರುವುದು ತಿಳಿದು ಬರುತ್ತದೆ.

ಲಿಂಗಗತ ಶಕ್ತಿಗಿಂತ ಅಂಗಗತ ಭಕ್ತಿ ಹಿರಿದಾದರೂ, ವಿಕಾಸಗೊಂಡ ಭಕ್ತಿ ಸಂಯೋಗಗೊಳ್ಳುವುದು ಶಿವಶಕ್ತಿಯಲ್ಲಿಯೆ. ವೀರಶೈವದ ಚರಮಧ್ಯೇಯವಾದ ಈ ಶಕ್ತಿ-ಭಕ್ತಿಗಳ ಸಂಯೋಗ ಅಥವಾ ಲಿಂಗಾಂಗಸಾಮರಸ್ಯ ಬೇಗ ಸಾಧ್ಯವಾಗಬೇಕಾ ದರೆ, ಸತಿ-ಪತಿ ಭಾವ ಬಲಗೊಳ್ಳಬೇಕು. "ಶರಣ ಸತಿ ಲಿಂಗಪತಿ" ಎಂಬ ಮಾತು ಶರಣ ಸಾಹಿತ್ಯದಲ್ಲಿ ಸುಪ್ರಸಿದ್ಧ. ಲಿಂಗಪತಿಯನ್ನು ಕೂಡಬೇಕು, ಅವನಲ್ಲಿ ಬೆರೆತು ಬೇರಿಲ್ಲವಾಗಬೇಕು ಎಂಬ ಅಂಗಸತಿಯ ಹಂಬಲ ಹೊಳೆಯಾಗಿ ಹರಿದಿರುವ ಹಲವಾರು ವಚನಗಳು "ವಚನೋದ್ಯಾನ'ದಲ್ಲಿವೆ[36]. ಅವುಗಳಲ್ಲಿ ತನ್ನ ನಿಜ ಪತಿಯನ್ನು ಕಾಣ ಬಯಸಿದ ಸತಿಯ ಆತುರ, ಕಾತರ, ನಿರೀಕ್ಷೆ ಅವನ ಬರುವಿಕೆಗಾಗಿ ಮಾಡಿಟ್ಟುಕೊಳ್ಳುವ ಅವಳ ಸಿದ್ಧತೆ, ಅವನು ಬೇಗ ಬರದಿದ್ದಾಗ ಅವಳಲ್ಲಿ ಉಂಟಾಗುವ ನಿರಾಶೆ, ಹುಸಿ

32. ಅದೇ, ವಚನ ೨೬ 33. ಅದೇ, ವಚನ ೫೯ 34. ಅದೇ, ವಚನ ೬೦
35. ಅದೇ, ವಚನ ೫೧೫ 36. ಅದೇ, ವಚನ ೬೧, ೬೨, ೫೧೫ ರಿಂದ ೫೨೧

ಮುನಿಸು ಇತ್ಯಾದಿಗಳೆಲ್ಲ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿವೆ. ಉದಾಹರಣೆಗಾಗಿ, "ನನಗೆ ಬೇಕಾದದು ನಾನೇ ಬಾಯಿಬಿಟ್ಟು ಕೇಳಬೇಕೆ ? ನಾನೇ ಕೇಳಬೇಕೆಂಬ ಹಟ ವೇಕೆ ಹೃದಯೇಶ್ವರ ? ಸರ್ವಜ್ಞನೆಂದು ಜಂಬಕೊಚ್ಚಿಕೊಳ್ಳುವ ನಿನಗೆ ತಿಳಿಯದೆ ?.... ನನಗೆ ಬೇಕಾದುದೇ ನಿನಗೂಬೇಕೆಂಬುದ ಬಲ್ಲೆ, ಇಷ್ಟೂ ತಿಳಿಯದಿದ್ದರೆ ನೀನೆಂಥ ನಲ್ಲ ನಾನೆಂಥ ನಲ್ಲೆ ? ಇಬ್ಬರೂ ಒಬ್ಬರೊಬ್ಬರಿಗೆ ಹೇಳದೆ ತಬ್ಬಿಬ್ಬಾಗಿದ್ದೇವೆ, ನನಗೆ ನಾಚಿಕೆ ನಿನಗೆ ಬಿಗುಮಾನ—ಬಿಂಕ, ಬಯಕೆಗೆ ಬಾಯ ಎಂಜಲವೇಕೆ ಅಂಟಬೇಕಾಳ್ದ ! ನಯನದ ನುಡಿ ಮೌನದ ಮಾತು ಭಾವದ ಭಾಷೆ ಸಾಕು ನೀರ, ಸ್ವತಂತ್ರಧೀರ ಸಿದ್ಧೇಶ್ವರ"[37] ಎಂಬ ವಚನವನ್ನು ನೋಡಬಹುದು. ಪರಸ್ಪರರನ್ನು ತಿಳಿದ ದಂಪತಿಗಳ ಮಧುರ ದಾಂಪತ್ಯದಲ್ಲಿ ನಡೆಯಬಹುದಾದ ಈ ರಸಮಯ ಸನ್ನಿವೇಶ ವೀರಶೈವದ ಸತಿ-ಪತಭಾವದ ರೀತಿ ನೀತಿಗಳನ್ನು ಅತ್ಯಂತ ಅರ್ಥವತ್ತಾಗಿ ಪ್ರತಿಮಿಸುತ್ತದೆ. "ನನಗೆ ಬೇಕಾದುದೇ ನಿನಗೂ ಬೇರೆಂಬುದ ಬಲ್ಲೆ" ಎಂಬ ಮಾತು, ಅಂಗಸತಿಯಲ್ಲಿ ಲಿಂಗಪತಿಯನ್ನು ಕೂಡಬೇಕೆಂಬ ಬಯಕೆ ಬಲವತ್ತರ ವಾಗಿರುವಂತೆ, ಲಿಂಗಪತಿಯಲ್ಲೂ ಅಂಗಸತಿಯನ್ನು ಕೂಡಬೇಕೆಂಬ ಬಯಕೆ ಇರುವುದನ್ನು ಸೂಚಿಸುತ್ತದೆ. ಇದು ವೀರಶೈವಕ್ಕೆ ಅನುಗುಣವಾಗಿಯೇ ಇದೆ. ಹಾಗೆಯೇ, ಇಬ್ಬರಲ್ಲೂ ಮಿಲನದ ಬಯಕೆ ಅತಿಯಾಗಿದ್ದರೂ, ಒಮ್ಮೆಯಾದರೂ ಒಂದಾಗದುದಕ್ಕೆ, ಮದುವೆಯ ಬದುಕು ಚಂದಾಗದುದಕ್ಕೆ ಪರಿತಪಿಸುವ,[38] ತನ್ನ ಅರತು ಬರತ ಅಧರಗಳಿಗೆ ಸವಿಮುತ್ತಿನ ಜೇನನೆರೆದು ಸಾಂತ್ವನಗೊಳಿಸೆಂದು ಲಿಂಗ ಪತಿಯನ್ನು ಬೇಡಿಕೊಳ್ಳುವ[39] ಅಂಗಸತಿಯ ನಿರಾಶೆ ನಿರೀಕ್ಷೆಗಳನ್ನು ಬಿಚ್ಚಿದ ಪುಸ್ತಕ ವಾಗಿಸಬಲ್ಲ ವಚನಗಳೂ ಕಾವ್ಯಮಾಧುರ್ಯದಿಂದ ಕೂಡಿ ಅತ್ಯಂತ ಆಪ್ಯಾಯಮಾನ ವಾಗಿವೆ.

ಅರಿತು ಆಚರಿಸುವವನಿಗೆ ಮಾನವ ಜೀವನ ಮತ್ತು ಸಂಸಾರಾದಿಗಳು, ಅವನ ಆಧ್ಯಾತ್ಮ ಸಾಧನೆಗೆ ಬಾಧಕವಾಗಲಾರವೆಂಬುದು ಸಿದ್ಧಯ್ಯನವರ ಸ್ಪಷ್ಟ ಅಭಿಪ್ರಾಯ. ನಿಜವಾದ ಅರ್ಥದಲ್ಲಿ ಮೊದಲು ನಾವು ಮಾನವರಾಗಬೇಕು, ಆಮೇಲೆ ದೇವತ್ವದ ಸಾಧನೆಗೆ ತೊಡಗಬೇಕು. ಆದುದರಿಂದಲೇ ಅವರು ಒಂದೆಡೆ ತಮ್ಮ 'ವಚನೋದ್ಯಾನ' ದಲ್ಲಿ "ಮನುಜತ್ವವನ್ನು ಪಡೆಯದೆ ದೇವತ್ವವನ್ನು ಪಡೆಯುವುದೆಂತಯ್ಯ ?" ಎಂದು ಪ್ರಶ್ನಿಸಿದ್ದಾರೆ.[40] "ಮರುಹುಟ್ಟು ಇದೆಯೆಂದು ಈ ಹುಟ್ಟನ್ನು ಕಡೆಗಣಿಸುವುದೆ ?"[41] ಎಂಬ ಅವರ ಮಾತಿನಲ್ಲಿ ಇಹಜೀವನವನ್ನು ಕಡೆಗಣಿಸಬಾರದೆಂಬ ಎಚ್ಚರಿಕೆ ಇದೆ. ಹಾಗೆಯೇ, "ಸಂಸಾರ ಬಾಧಕ ಅಳಿಮನದವರಿಗೆ, ಅದೇ ಸಾಧಕ ನಿನ್ನವರಿಗೆ"[42]

---

37. ಅದೇ, ವಚನ ೬೨ 38. ಅದೇ, ವಚನ ೫೧೭ 39. ಅದೇ, ವಚನ ೫೧೮
40. ಅದೇ, ವಚನ ೪೮೯ 41. ಅದೇ, ವಚನ ೪೧೦ 42. ಅದೇ, ವಚನ ೪೨೧

ಎಂದು ಮತ್ತೊಂದೆಡೆ ಗಟ್ಟಿಯಾಗಿಯೇ ಹೇಳಿರುವುದನ್ನು ಗಮನಿಸಬೇಕು. ಕರ್ಮ, ಕಾಯಕಗಳಲ್ಲಿಯ ವ್ಯತ್ಯಾಸ, ಕಾಯಕದ ಮಹತಿಯ ವಿವರ ಕೂಡ ಕೆಲವಚನಗಳಲ್ಲಿದೆ.[43]

ಒಟ್ಟಿನಲ್ಲಿ, ಸಿದ್ಧಯ್ಯ ಪುರಾಣಿಕ ಅವರ ಶಿವತತ್ತ್ವಚಿಂತನೆ, ಶರಣರ ಶಿವತತ್ತ್ವ ಚಿಂತನೆಯ ಜಾಡಿನಲ್ಲಿಯೇ ಮುಂದುವರಿದಿರುವುದು ಸ್ಪಷ್ಟ. ಆದರೆ ಸಮಕಾಲೀನ ಪ್ರಜ್ಞೆಯ ಪ್ರಭಾವದಿಂದಾಗಿ ಒಂದೆರಡು ಹೊಸ ಅಂಶಗಳು ಅಲ್ಲಲ್ಲಿ ಸೇರಿಕೊಳ್ಳುವ ಜೊತೆಗೆ ಪ್ರಾಚೀನ ಪ್ರಮುಖ ವಚನಕಾರರ ವಚನಗಳಲ್ಲಿ ಕಂಡುಬರದ ಹೊಸ ಉಪಮೆ, ದೃಷ್ಟಾಂತ, ಸಾದೃಶ್ಯಗಳು ಇವರ ವಚನಗಳಲ್ಲಿ ಉಚಿತ ರೀತಿಯಲ್ಲಿ ಮೇಳವಿಸಿ ಹೊಸತನ ಅಲ್ಲಲ್ಲಿ ಹೊಡೆದು ಕಾಣುವಂತಾಗಿದೆ.

43. ಅದೇ, ವಚನ ೭೭, ೧೬೨, ೨೪೨, ೨೪೮

# ಭಾರತೀಯ ಕಾವ್ಯಮೀಮಾಂಸೆಗೆ ಹಿನ್ನೆಲೆಯಾದ ಭಾರತೀಯ ತತ್ತ್ವಶಾಸ್ತ್ರ

ಡಾ. ಕೆ. ಕೃಷ್ಣಮೂರ್ತಿ

ಭಾರತೀಯ 'ಕಾವ್ಯಮೀಮಾಂಸೆ' ಇಂದಿನ ಶಬ್ದ. ಇದಕ್ಕೆ ಹಿಂದಿನವರು ಹೆಚ್ಚಾಗಿ ಬಳಸುತ್ತಿದ್ದ ಹೆಸರು–"ಅಲಂಕಾರ–ಶಾಸ್ತ್ರ". 'ಶಾಸ್ತ್ರ' ಎಂದ ಮೇಲೆ ಅದರ ಮೊದಲ ಲಕ್ಷಣ ನಿಷ್ಕೃಷ್ಟ ಪ್ರಮಾಣಗಳಿಗೆ ನಿಲುಕುವ ಪ್ರಮೇಯ–ನಿರೂಪಣೆ ಇರಬೇಕಾದದ್ದೇ ಎನ್ನಬಹುದು. ರಸಾವೇಶ, ಪ್ರತಿಭೆ, ರಸಿಕತೆ, ಭಿನ್ನರುಚಿಗಳಿಗೆ ಎಡೆಯಿರುವ ಈ ಕ್ಷೇತ್ರದಲ್ಲಿ ಖಚಿತ ಶಾಸ್ತ್ರದ ನಿಷ್ಕೃಷ್ಟತೆ ಅಶಕ್ಯ ಎಂದೇ 19ನೆಯ ಶತಮಾನದವರೆಗೆ ಅನೇಕರ ಭಾವನೆಯಿತ್ತು. ಆದ್ದರಿಂದಲೇ ತರ್ಕ–ವೇದಾಂತ ವ್ಯಾಕರಣ ಮುಂತಾದ ಶಾಸ್ತ್ರಪಾರಂಗತರು ಅಲಂಕಾರ-ಶಾಸ್ತ್ರವನ್ನು "ಕಚ-ಕುಚ-ಶಾಸ್ತ್ರ" ಎಂದು ಅಪಹಾಸ್ಯ ಮಾಡುವುದೂ ನಡೆದಿತ್ತು.

ಆದರೆ ಇಪ್ಪತ್ತನೆಯ ಶತಮಾನದಲ್ಲಿ, ಅದುವರೆಗೆ ದುರ್ಮಿಳವಾಗಿದ್ದ ಆಕರ ಗ್ರಂಥಗಳು—ಭರತಮುನಿಯ ನಾಟ್ಯಶಾಸ್ತ್ರ, ಆನಂದವರ್ಧನನ ಧ್ವನ್ಯಾಲೋಕ, ಅಭಿನವಗುಪ್ತರ ಲೋಚನ ಮತ್ತು ಅಭಿನವಭಾರತೀ, ರಾಜಶೇಖರನ ಕಾವ್ಯಮೀಮಾಂಸೆ, ಕುಂತಕನ ವಕ್ರೋಕ್ತಿಜೀವಿತ, ಭಾಮಹನ ಕಾವ್ಯಾಲಂಕಾರ ಇತ್ಯಾದಿ ಮೊದಲ ಬಾರಿಗೆ ಹಸ್ತಪ್ರತಿಗಳಲ್ಲಿ ದೊರೆತುದಷ್ಟೇ ಅಲ್ಲ, ಪ್ರಕಟನೆಯ ಪ್ರಸಾರವನ್ನೂ ಕಂಡುವು. ಅವುಗಳ ದೀರ್ಘ ಹಾಗೂ ವಿಶೇಷ ಅಧ್ಯಯನದ ಫಲವಾಗಿ, ಈ ಅಪಪ್ರಥೆಯನ್ನು ಇಂದು ನಿರಾಧಾರವೆಂದು ನಿಶ್ಶೇಷವಾಗಿ ಖಂಡಿಸುವ ಪ್ರಸಂಗವುಂಟಾಗಿದೆ.

## ೧

ಕಾವ್ಯಮೀಮಾಂಸೆಯ ವಿಶೇಷಾಧ್ಯಯನ ಮಾಡಿರುವ ವಿದ್ವಾಂಸರು ಕೂಡ ನಾಟಶಾಸ್ತ್ರದಲ್ಲಿ ನೇರವಾಗಿ ರಸ–ಭಾವಗಳನ್ನು ಕುರಿತ 6–7ನೆಯ ಅಧ್ಯಾಯಗಳತ್ತ ಮಾತ್ರ ತಮ್ಮ ಲಕ್ಷ್ಯವನ್ನಿಟ್ಟು, ಮಿಕ್ಕ ಮುಂದಿನ ಮೂವತ್ತು ಅಧ್ಯಾಯಗಳನ್ನು ಕಡೆಗಣಿಸಿದ್ದರ ಫಲವಾಗಿ ಅಲಂಕಾರಶಾಸ್ತ್ರಕ್ಕೆ ಪ್ರಮಾಣಗಳಿವೆಯೆ ? ಎಂಬ ಪ್ರಶ್ನೆ

ಯನ್ನು ಯಾರೂ ಎತ್ತಿಯೇ ಇಲ್ಲವೆಂದು ಭಾವಿಸುವ ದುರವಸ್ಥೆ ಇಂದಿನವರೆಗೆ ಉಳಿದು ಬಂದಿದೆ. ಮಹಿಮಭಟ್ಟನ ವ್ಯಕ್ತಿವಿವೇಕದಲ್ಲಿ :

"ಲೋಕೋ ವೇದಸ್ತಥಾಧ್ಯಾತ್ಮಂ ಪ್ರಮಾಣಂ ತ್ರಿವಿಧಂ ಸ್ಮೃತಮ್"

ಎಂಬ ಅವತರಣಿಕೆ ಪ್ರಸಿದ್ಧವಿದ್ದರೂ, ಇದರ ಮೂಲ ಆಕರವಾವುದೆಂಬುದೇ ಪ್ರಸ್ತುತ ಲೇಖಕನು ಇದನ್ನು ಭರತನಾಟ್ಯಶಾಸ್ತ್ರದ ಇಪ್ಪತ್ತನೆಯ ಅಧ್ಯಾಯದಲ್ಲಿರುವು ದನ್ನು ಮೊನ್ನೆ ಮೊನ್ನೆ ಎತ್ತಿ ತೋರಿಸುವವರೆಗೆ ವಿದ್ವಾಂಸರಿಗೆ ಅಜ್ಞಾತವಾಗಿಯೇ ಉಳಿದಿತ್ತು.[1] ಇದು ಭರತನ 20 ನೆ ಅಧ್ಯಾಯದ ಶ್ಲೋಕದ ಪೂರ್ವಾರ್ಧ. ಅದರ ಉತ್ತರಾರ್ಧ ಹೀಗಿದೆ :

"ವೇದಾಧ್ಯಾತ್ಮಪದಾರ್ಥೇಷು ಪ್ರಾಯೋ ನಾಟ್ಯಂ ಪ್ರತಿಷ್ಠಿತಮ್ ॥"[2]

ಭರತಮುನಿಯ ಪ್ರಕಾರ ಕಾವ್ಯಮೀಮಾಂಸಾಶಾಸ್ತ್ರಕ್ಕೆ ಪ್ರಮಾಣಗಳು ಮೂರು :-

೧. ಲೋಕ
೨. ವೇದ
೩. ಅಧ್ಯಾತ್ಮ

ಈ ಮೂರೂ ಸರಿಯಾದ ವಿವರಣೆಯಿಲ್ಲದಿದ್ದರೆ ಅಪಾರ್ಥಕ್ಕೆ ಎಡೆಗೊಡುವಂತೆಯೇ ಇವೆ; ಏಕೆಂದರೆ ಅವುಗಳ ಸಾಮಾನ್ಯಾರ್ಥವೇ ಬೇರೆ ; ಇಲ್ಲಿ ವಿವಕ್ಷಿತವಾಗಿರುವ ಪಾರಿ ಭಾಷಿಕ ಅರ್ಥವೇ ಬೇರೆ. ಅಭಿನವಗುಪ್ತರ ಅಭಿನವಭಾರತಿಯಲ್ಲಿ ಹಾಗು ರುಯ್ಯಕನ ವ್ಯಕ್ತಿ ವಿವೇಕವ್ಯಾಖ್ಯಾನದಲ್ಲಿ ಅವುಗಳ ಪಾರಿಭಾಷಿಕ ಅರ್ಥ ಲಭ್ಯವಾಗಿರುವುದು ನಮ್ಮ ಸುದೈವ :- "ಲೋಕ" ಎಂದರೆ ಲೋಕಸಿದ್ಧವಾದ 'ಪ್ರತ್ಯಕ್ಷ', 'ಅನುಮಾನ' ಮತ್ತು 'ಆಗಮ' ವೆಂಬ ಪ್ರಮಾಣಗಳು[3] ಎಂದು ಅಭಿನವಗುಪ್ತನೂ, 'ಅನಿಬಂಧ-ಪ್ರಸಿದ್ಧ-ಸ್ವಭಾವ' ಎಂದು ರುಯ್ಯಕನೂ ವ್ಯಾಖ್ಯಾನ ಮಾಡಿದ್ದಾರೆ. ತಾತ್ಪರ್ಯವಿಷ್ಟೆ : ಲೋಕ ವ್ಯವಹಾರದಲ್ಲಿ ಎಲ್ಲರ ಅನುಭವದಲ್ಲೂ ಸುಸ್ಪಷ್ಟವಾಗಿರುವ, ಪುಸ್ತಕಾವಲೋಕನದ ಪ್ರಸಕ್ತಿಯಿಲ್ಲದ, ಸತ್ಯವೇ ಲೋಕಪ್ರಮಾಣ. ಸಾಹಿತ್ಯದಲ್ಲಿ ಇದಕ್ಕೆ ಮಾತ್ರ ಸರ್ವ ಪ್ರಥಮ ಸ್ಥಾನ ಎಂಬುದನ್ನು ಗಮನಿಸಬೇಕು. ಲೋಕ ಸತ್ಯಕ್ಕೆ ವಿರುದ್ಧವಾ

---

1. ಇದರ ವಿವರಗಳಲ್ಲಿ ಆಸಕ್ತರಾದವರು K. Krishnamoorthy, 'The Pramanas or Criteria in Indian Aesthetics', Indian Literary Theory and Practical Criticism-An Integral approach ; B. T. Institute, Ahmedabad 1980 ಎಂಬ ಉಪನ್ಯಾಸ ಗ್ರಂಥವನ್ನು ಓದಬಹುದು.
2. ನಾಟ್ಯಶಾಸ್ತ್ರ, ಬರೋಡಾ ಆವೃತ್ತಿ, ಸಂಪುಟ 3, 1954, ಪು. 286-287.
3. 'ಲೋಕಸಿದ್ಧಾನಿ ಪ್ರತ್ಯಕ್ಷಾನುಮಾನಾಗಮ ಪ್ರಮಾಣಾನಿ ಲೋಕಶಬ್ದೇನೋಚ್ಯನ್ತೇ' ಅಭಿನವಭಾರತೀ, ಉಕ್ತಸ್ಥಳ.

ದುದು ಸಾಹಿತ್ಯವೆನಿಸಲಾರದು. ಜನರ ಜೀವನಾನುಭವಕ್ಕೆ ಅದು ಸುಸಂಗತವಾಗಿಯೇ ಇರಬೇಕು : ವಿಸಂಗತವಾಗಿರಬಾರದು. ಇದು ಕಾವ್ಯಮಿಮಾಂಸೆಯ ಮೊದಲ ನಿಯಮ.

ಎರಡನೆಯದಾದ 'ವೇದ' ಎಂದರೆ ಇಲ್ಲಿ ಋಗ್ವೇದಾದಿ ಗ್ರಂಥರಾಶಿಯ ಪ್ರಸಕ್ತಿಯೇ ಇಲ್ಲ. 'ಅರಿವು', 'ಹಿಂದಿನವರ ಅರಿವು', 'ಪುಸ್ತಕರೂಪವಾಗಿ ಅವರು ನಮಗೆ ಬಿಟ್ಟುಹೋಗಿರುವ ತಮ್ಮ ಅನುಭವ' ಎಂಬ ಸಾಮಾನ್ಯಾರ್ಥವಷ್ಟೇ ಇಲ್ಲಿ ಪ್ರಸಕ್ತ. ಇದನ್ನೇ ಅಭಿನವಗುಪ್ತರು "ವೇದಃ ಇತಿ ಯಥಾಸ್ವಂ ನಿಯತರೂಪಃ ಲೋಕಪ್ರಸಿದ್ಧಃ, ಯಥಾ ಧನುರ್ವೇದಃ, ಗಾಂಧರ್ವವೇದಃ ಇತ್ಯಾದಿ" ಎಂದು ವಿವರಿಸಿದ್ದಾರೆ. ಲೌಕಿಕವಾದ ಬಿಲ್ಲುವಿದ್ಯೆಯನ್ನೇ 'ಧನುರ್ವೇದ' ಎಂದೂ, ಗಾನವಿದ್ಯೆಯನ್ನೇ 'ಗಾಂಧರ್ವ ವೇದ' ಎಂದೂ ಕರೆಯುವಂತೆ, ವಿಶಾಲಾರ್ಥದಲ್ಲಿ ಲೋಕದಲ್ಲಿ ವಿಶಿಷ್ಟ ವಿದ್ಯೆ ಅಥವಾ ಇಂದಿನ ಭಾಷೆಯಲ್ಲಿ ವೈಜ್ಞಾನಿಕ ಅರಿವನ್ನೇ 'ವೇದ'ವೆಂದರಿಯಬೇಕು[4].

ಇನ್ನು ಮೂರನೆಯದಾದ 'ಅಧ್ಯಾತ್ಮ' ಎಂಬುದಕ್ಕೆ "ಆತ್ಮ ಸಂವೇದನೆ' 'ಸ್ವಾನುಭವ' ಎಂಬ ಸಾಮಾನ್ಯಾರ್ಥವಿದೆಯೇ ಹೊರತು ಇಂದಿನ ಅರ್ಥಾಂತರಗಳಿಗೆ ಅವಕಾಶವೇ ಇಲ್ಲ. "ಅಧ್ಯಾತ್ಮಂ ತು ಸ್ವಸಂವೇದನಮ್" ಎಂದೇ ಅಭಿನವಗುಪ್ತರು ಬರೆಯುತ್ತಾರೆ. ರುಯ್ಯಕನು 'ಪುಸ್ತಕಗಳ ಸಹಾಯವಿಲ್ಲದೆ ತನ್ನಲ್ಲಿಯೇ ಒಳಗಿಂದ ಮೂಡಿಬರುವ ಅರಿವು' ಎಂದು ವಿವರಿಸಿದ್ದಾನೆ.

ಹೀಗೆ ಲೋಕಾನುಭವ ಅಥವಾ ಜೀವನದ ಅರಿವು, ಪುಸ್ತಕವಿದ್ಯೆ, ಸ್ವಸಂವೇದನೆ ಈ ಮೂರೂ ಕಾವ್ಯಮೀಮಾಂಸೆಗೆ ಪರಮ ಪ್ರಮಾಣಗಳು. ಮಿಕ್ಕ ಶಾಸ್ತ್ರಗಳಲ್ಲಿ ಲೋಕಾನುಭವಕ್ಕಾಗಲಿ ಸ್ವಾನುಭವಕ್ಕಾಗಲಿ ಹೆಚ್ಚಿನ ಬೆಲೆಯಿಲ್ಲ ; ಅಲ್ಲಿ ಆಗಮ ಅಥವಾ ಶ್ರುತಿಗೆ ಮಾತ್ರ ಏಕೈಕ ಪ್ರಾಶಸ್ತ್ಯ. ಈ ವ್ಯತ್ಯಾಸ ಸಾಹಿತ್ಯಕ್ಕೂ ಇತರ ಶಾಸ್ತ್ರಗಳಿಗೂ ಮೂಲಭೂತವಾದದ್ದು.

೨

ಹಾಗಾದರೆ ಭಾರತೀಯ ತತ್ತ್ವಶಾಸ್ತ್ರಗಳಲ್ಲಿ ವಿದ್ವಜ್ಜನರ ಮನ್ನಣೆಗೆ ಪಾತ್ರವಾದ ಸಾಂಖ್ಯ-ಯೋಗ-ವೇದಾಂತಾದಿ ದರ್ಶನಗಳ ತಾತ್ತ್ವಿಕ ಹಿನ್ನೆಲೆ ಕಾವ್ಯಮೀಮಾಂಸೆಗೆ ಅಪ್ರಸ್ತುತವಾದೀತೆ ? ಎಂಬ ಪ್ರಶ್ನೆಯೇಳುತ್ತದೆ. ಈ ಪ್ರಶ್ನೆಗೆ ಉತ್ತರ ದೊರೆಯಲು ನಾವು ಇತರ ದರ್ಶನ ಶಾಸ್ತ್ರಗಳ ಗುರಿ ಅಥವಾ ಧ್ಯೇಯವನ್ನು ಕಾವ್ಯದ

---

4. 'ನಿಬಂಧ ಪ್ರಸಿದ್ಧರೂಪಂ ವೇದಃ' ಎಂದರೆ ಪುಸ್ತಕಗಳಲ್ಲಿ ಪ್ರಸಿದ್ಧಿಗೆ ಬಂದಿರುವ ಜ್ಞಾನರಾಶಿ ಎಂದೇ ರುಯ್ಯಕನೂ ಇದನ್ನು ವಿವರಿಸಿದ್ದಾನೆ. (ವ್ಯಕ್ತಿವಿವೇಕ, ಕಾಶೀ ಮುದ್ರಣ, 1905, ಪು. 42)

ಧ್ಯೇಯದೊಂದಿಗೆ ಹೋಲಿಸಬೇಕಾಗುತ್ತದೆ. ಕುಂತಕನು ಒಂದೇ ಮಾತಿನಲ್ಲಿ ಸ್ಥೂಲವಾಗಿ ಹೇಳುವುದಿಷ್ಟು : ಶಾಸ್ತ್ರ ಹಾಗು ಕಾವ್ಯ ಎರಡರ ಪರಿ ಬೇರೆಯಾದರೂ ಗುರಿ ಒಂದೇ—ಅದೆಂದರೆ, ಅಜ್ಞಾನದ ಪರಿಹಾರ. ಶಾಸ್ತ್ರ ಕಹಿಯಾದ ಔಷಧದಂತೆ ನಮ್ಮ ಅಜ್ಞಾನವೆಂಬ ರೋಗವನ್ನು ಪರಿಹರಿಸುತ್ತದೆ : ಆದರೆ ಕಾವ್ಯ ಮಾತ್ರ ಸವಿಯಾದ ಅಮೃತದಂತೆ ಅದೇ ಕಾರ್ಯವನ್ನು ಮಾಡುತ್ತದೆ :

ಕಟುಔಷಧವಚ್ಛಾಸ್ತ್ರಂ ಅವಿದ್ಯಾವ್ಯಾಧಿನಾಶನಮ್ ।
ಆಹ್ಲಾದ್ಯಮೃತವತ್ ಕಾವ್ಯಮವಿವೇಕಗದಾಪಹಮ್ ॥[5]

ನಮ್ಮ ಅಜ್ಞಾನದ ನಿವಾರಣೆಯೆಂದರೇನು ? ಯಾವುದರ ಅಜ್ಞಾನ ? ಎಂದು ಕೇಳಬಹುದು. ಅದಕ್ಕೆ ಭಾರತೀಯ ಸಂಸ್ಕೃತಿಯ ಉತ್ತರ ಒಂದೇ ಮಾತಿನಲ್ಲಿ ಅಡಗಿದೆ–'ಪುರುಷಾರ್ಥ' ಅಥವಾ ಬಾಳಿಗೆ ಸಾರ್ಥಕ್ಯವನ್ನೀಯುವ ಮೌಲ್ಯಗಳ ಅಜ್ಞಾನವೇ ನಮ್ಮ ರೋಗ. ಧರ್ಮ–ಅರ್ಥ–ಕಾಮ–ಮೋಕ್ಷ ಎಂಬ ಐಹಿಕ-ಆಮುಷ್ಮಿಕ ಪುರುಷಾರ್ಥಗಳ ಪರಿಜ್ಞಾನ ಮಾಡಿಕೊಡುವುದೇ ಶಾಸ್ತ್ರ-ಕಾವ್ಯ ಎರಡಕ್ಕೂ ಸಮಾನವಾದ ಪ್ರಯೋಜನ. ಆದ್ದರಿಂದಲೇ ಅಭಿನವಗುಪ್ತರ ಗುರುಗಳಾದ ಭಟ್ಟತೋತರು 'ಕಾವ್ಯಕೌತುಕ' ಎಂಬ ತಮ್ಮ ಗ್ರಂಥದಲ್ಲಿ ಹೇಳುವಂತೆ [6]—

ದ್ವೇ ವರ್ತ್ಮನೀ ಗಿರಾಂ ದೇವ್ಯಾಃ ಶಾಸ್ತ್ರಂ ಚ ಕವಿಕರ್ಮ ಚ ।
ಪ್ರಜ್ಞೋಪಜ್ಞಂ ತಯೋರಾದ್ಯಂ ಪ್ರತಿಭೋದ್ಭವಮಂತಿಮಮ್ ॥

ವಾಗ್ದೇವಿಯು ಸಾಗುವ ಮಾರ್ಗಗಳು ಎರಡು :— ಒಂದು ಶಾಸ್ತ್ರ, ಇನ್ನೊಂದು ಕಾವ್ಯ, ಶಾಸ್ತ್ರ ಬರುವುದು ಪ್ರಜ್ಞಾ ಬಲದಿಂದ; ಆದರೆ ಕಾವ್ಯ ಮೂಡುವುದು ಪ್ರತಿಭಾ ಬಲದಿಂದ. ಪ್ರಜ್ಞೆಯೇ ನವನವೋನ್ಮೇಷಶಾಲಿನಿಯಾದಾಗ ಮಾತ್ರ ಪ್ರತಿಭೆಯೆನಿಸುತ್ತದೆ. ಹಿಂದಿನದರ ಅರಿವು 'ಸ್ಮೃತಿ' ; ಭವಿಷ್ಯದ ಅರಿವು 'ಮತಿ'; ತಾತ್ಕಾಲಿಕ ಅರಿವೇ 'ಬುದ್ಧಿ' ; ತ್ರಿಕಾಲಜ್ಞಾನವೇ 'ಪ್ರಜ್ಞೆ'; ಹೊಸ ಹೊಸ ಉನ್ಮೇಷವೇ 'ಪ್ರತಿಭೆ'—ಅವರ ಪರಿಭಾಷೆಯಲ್ಲಿ : [7] ಇರಲಿ. ತ್ರಿಕಾಲಜ್ಞಾನಿಗಳಾದ ಋಷಿಗಳೇ ಮೂಲ ಶಾಸ್ತ್ರಕಾರರಲ್ಲ, ಅವರಿಗಿಂತಲೂ ಹೆಚ್ಚಿನ ನವನವೋನ್ಮೇಷ ಶಕ್ತಿಯುಳ್ಳವರು ಕವಿಗಳು. ಆದ್ದರಿಂದಲೇ ಅವರಿಗೆ ವಿಶೇಷ ಪುರಸ್ಕಾರ ; ನಿರಂತರವಾದ ಸತ್ಕಾರ !

---

5. ವಕ್ರೋಕ್ತಿ ಜೀವಿತ, ಸಂ : ಕೆ. ಕೃಷ್ಣಮೂರ್ತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1977, ಪು. 5.
6. ಈ ಗ್ರಂಥ ಈಗ ಉಪಲಬ್ಧವಿಲ್ಲ.
7. ಸ್ಮೃತಿರ್ವ್ಯತೀತ ವಿಷಯಾ ಮತಿರಾಗಾಮಿಗೋಚರಾ । ಬುದ್ಧಿಸ್ತಾತ್ಕಾಲಿಕೀ ಜ್ಞೇಯಾ ಪ್ರಜ್ಞಾ ತ್ರೈಕಾಲಿಕೀ ಮತಾ । ಪ್ರಜ್ಞಾ ನವನವೋನ್ಮೇಷಶಾಲಿನೀ ಪ್ರತಿಭಾ ಮತಾ॥

ಇನ್ನು ಕಾವ್ಯದಲ್ಲಿ ಎಲ್ಲಕ್ಕಿಂತಲೂ ಪ್ರಬಲ ಹಾಗು ಪ್ರಮುಖವಾದ ಮೂರನೆಯ ಪ್ರಮಾಣ—ಸ್ವಸಂವೇದನೆ ಅಥವಾ ಸ್ವಾನುಭವ. ಇದೇ ಅನುಭವೈಕವೇದ್ಯವಾದ ರಸಾನಂದ. ಇದು ರಸಿಕನ ಸಂಸ್ಕಾರಾಗತ ಮನೋಧರ್ಮದಲ್ಲಿ ಬೇರೂರಿದೆ. ಇದಿಲ್ಲದವನಿಗೆ ಕಾವ್ಯದ ಕದ ತೆರೆಯದು.

೩

ಭರತಮುನಿಗಳೇ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಕಾವ್ಯ ಯಾವ ರೀತಿ ಜೀವನ ಮೌಲ್ಯಗಳನ್ನು ಸರಸ-ಮಧುರವಾಗಿ ಬೋಧಿಸುವಲ್ಲಿ ಲೋಕಪ್ರಮಾಣವನ್ನೇ ಎಂದರೆ 'ಶೀಲ'ವನ್ನೇ ಮುಖ್ಯವಾಗಿ ಆಶ್ರಯಿಸುತ್ತದೆ ಎಂದೂ ವಿವರಿಸಿದ್ದಾರೆ:

ವೇದಾಧ್ಯಾತ್ಮೋಪಪನ್ನಂ ತು ಶಬ್ದಚ್ಛಂದಸ್ಸಮನ್ವಿತಮ್ ।
ಲೋಕಸಿದ್ಧಂ ಭವೇತ್ ಸಿದ್ಧಂ ನಾಟ್ಯಂ ಲೋಕಾತ್ಮಕಂ ತಥಾ ॥
ನ ಚ ಶಕ್ಯಂ ಹಿ ಲೋಕಸ್ಯ ಸ್ಥಾವರಸ್ಯ ಚರಸ್ಯ ಚ ।
ಶಾಸ್ತ್ರೇಣ ನಿರ್ಣಯಂ ಕರ್ತುಂ ಭಾವಾಚೇಷ್ಟಾವಿಧಿಂ ಪ್ರತಿ ॥
ನಾನಾಶೀಲಾಃ ಪ್ರಕೃತಯಃ ಶೀಲೇ ನಾಟ್ಯಂ ಪ್ರತಿಷ್ಠಿತಂ ।
ತಸ್ಮಾಲ್ಲೋಕ ಪ್ರಮಾಣಂ ತು ವಿಜ್ಞೇಯಂ ನಾಟ್ಯ ಯೋಕ್ತೃಭಿಃ ॥

ಕಾವ್ಯದ ಬೇರು ಲೋಕವೃತ್ತ ಎಂದ ಮೇಲೆ ಅದು ಅನಂತ ಮುಖವಾಗಿಯೇ ಇರುವುದರಿಂದ ಶಾಸ್ತ್ರದಲ್ಲಿ ಅದನ್ನು ವರ್ಗೀಕರಿಸಿ ಮುಗಿಸಲು ಬಾರದು. ಜನರ ಶೀಲ ನಾನಾ ರೀತಿಯಿರುತ್ತದೆ. ಅದೆಲ್ಲ ಹಾಗೆಯೇ ಕಾವ್ಯದಲ್ಲಿ ಪ್ರತಿಬಿಂಬಿತವಾಗುವಂತಿರಬೇಕು ಎನ್ನುವುದು ಮೂಲಸೂತ್ರ.

ಲೌಕಿಕ ಶಾಸ್ತ್ರಗಳನ್ನು ಬರೆದವರೆಲ್ಲ ಈ ಜೀವನ ಮೌಲ್ಯಗಳ ಮಾತನ್ನು ಮುಕ್ತ ಕಂಠದಿಂದ ಒಪ್ಪಿದ್ದಾರೆ. 'ಅರ್ಥ' ಅಥವಾ ಲೌಕಿಕ ಸಂಪತ್ಪ್ರಾಪ್ತಿಯ ಉಪಾಯ ನಿರೂಪಣೆಗೆಂದೇ ಅರ್ಥಶಾಸ್ತ್ರ ಬರೆದಿರುವ ಕೌಟಿಲ್ಯ—

ಸ್ವಧರ್ಮಂ ಸಂದಧಾನೋ ಹಿ
ಪ್ರೇತ್ಯ ಚೇಹ ಚ ನಂದತಿ [8]

ಸ್ವಧರ್ಮದಲ್ಲಿ ನಿಷ್ಠನಾಗಿರುವವನಿಗಷ್ಟೇ ಇಹ-ಪರಗಳೆರಡರಲ್ಲೂ ಆನಂದ ಎನ್ನುತ್ತಾನೆ. ಕಾಮಶಾಸ್ತ್ರವನ್ನು ಬರೆದ ವಾತ್ಸ್ಯಾಯನಮುನಿ ಕೂಡ ಧರ್ಮಕ್ಕೆ ಅವಿರುದ್ಧವಾಗಿ ಮಾತ್ರ ಅರ್ಥ-ಕಾಮಗಳನ್ನು ಸೇವಿಸಬೇಕೆಂದು ಕಾಮಸೂತ್ರದ ಮೊದಲಲ್ಲೇ ಹೇಳುತ್ತಾನೆ. ವೈಶೇಷಿಕ ಸೂತ್ರವನ್ನು ಬರೆದ ಕಣಾದಮುನಿ—

ಯತೋಽಭ್ಯುದಯ-ನಿಃಶ್ರೇಯಸಿದ್ಧಿಃ ಸ ಧರ್ಮಃ

8. ಅರ್ಥಶಾಸ್ತ್ರ, ತಿರುವಾಂಕೂರು ಆವೃತ್ತಿ, 1, 3 ; ಪು. 29-31.

ಎಂದು ಧರ್ಮದ ವ್ಯಾಖ್ಯೆ ಮಾಡಿದನಂತರವೇ ದರ್ಶನನಿರೂಪಣೆಗೆ ಕೈ ಹಾಕುತ್ತಾರೆ. ಒಟ್ಟಿನ ಮೇಲೆ—ಧರ್ಮಕ್ಕೆ ಮಾನವನ ಜೀವನ ಮೌಲ್ಯಗಳಲ್ಲಿ ಮೊದಲ ಸ್ಥಾನ; ಅದಕ್ಕೆ ಬಾಧೆ ಬಾರದಂತೆ ಅರ್ಥ ಕಾಮಗಳನ್ನು ಇಹದಲ್ಲೂ ಮೋಕ್ಷವನ್ನು ಪರದಲ್ಲೂ ಸಾಧಿಸಬೇಕು ಎಂಬುದು ಭಾರತೀಯ ಶಾಸ್ತ್ರಕಾರರೆಲ್ಲರ ಸಿದ್ಧಾಂತ. ಕಾವ್ಯವೂ ಅದನ್ನು ಪೂರ್ಣವಾಗಿ ಅಂಗೀಕರಿಸುತ್ತದೆ; ಆದರೆ ಅದು ಅನುಸರಿಸುವ ದಾರಿ ಮಾತ್ರ ಬೇರೆಯೇ.

ಲೋಕರಂಜನೆ ಅಥವಾ ಜನಾಕರ್ಷಣೆ ಕಾವ್ಯದ ಪ್ರಥಮಕಾರ್ಯ. ಆದ್ದರಿಂದ ಅದು ವ್ಯಾವಹಾರಿಕ ಭಾಷಾಶೈಲಿಯನ್ನು ದೂರ ಬಿಟ್ಟು ತನ್ನದೇ ಆದ ಚಮತ್ಕಾರಕ ಭಾಷಾಶೈಲಿಯನ್ನು ಹುಡುಕಿಕೊಳ್ಳುತ್ತದೆ. ಶಾಸ್ತ್ರಕ್ಕೆ ಸಂಗತವೇ ಅಲ್ಲದ ಮಾನವನ ಚಿತ್ತ–ವೃತ್ತಿ–ಪ್ರಪಂಚವನ್ನು ನಾನಾ ವರ್ಣಚ್ಛಾಯೆಗಳಿಂದ ಚಿತ್ರೀಕರಿಸುತ್ತದೆ.

ಕಥೆಯ ರೋಚಕವಿಧಾನ ಮತ್ತು ರಸೈಕ ದೃಷ್ಟಿಯಿಂದ ಸಂವಿಧಾನ, ಆದರ್ಶ ಪಾತ್ರಗಳ ಕಾರ್ಯಾನುಸಂಧಾನ, ಧರ್ಮವಿಜಯ, ಅಧರ್ಮ ಪರಾಜಯದ ಫಲಶ್ರುತಿ ಇವು ಭಾರತೀಯ ಕಾವ್ಯಗಳೆಲ್ಲ ಒಪ್ಪಿರುವ ಸಾಮಾನ್ಯ ಸ್ಥಿತಿ. ರಾಮನಂತೆ ಬಾಳಬೇಕು, ರಾವಣನಂತಲ್ಲ ಎಂಬ ಹಿತೋಪದೇಶ ಇಲ್ಲಿ ಆನುಷಂಗಿಕವಾಗಿ, ಕಾಂತಾಸಮ್ಮಿತವಾಗಿ, ಬರುತ್ತದೆಯೇ ಹೊರತು ನೇರವಾಗಿ ಅಲ್ಲ. ಒಂದು ಸುಭಾಷಿತ ಹೇಳುವಂತೆ—

ಯದೇವ ರೋಚತೇ ಮಹ್ಯಂ ತದೇವ ಕುರುತೇ ಪ್ರಿಯಾ।
ಇತಿ ವೇತ್ತಿ ನ ಜಾನಾತಿ ತತ್ಪ್ರಿಯಂ ಯತ್ಕರೋತಿ ಸಾ॥

ಪ್ರಿಯಕರನೆಂದು ಕೊಳ್ಳುತ್ತಾನೆ:—"ನಾನು ಬಾಯಿ ಬಿಟ್ಟು ಏನು ಹೇಳದಿದ್ದರೂ, ಯಾವಾಗ ನನಗೆ ಏನು ಬೇಕೋ ಅದನ್ನೇ ನನ್ನ ಪ್ರಿಯೆ ಹೇಗೋ ಮಾಡಿ ಸಂತೋಷ ಪಡಿಸುತ್ತಾಳೆ; ಇದು ಸೋಜಿಗವೇ ಸರಿ" ಎಂದು. ಆದರೆ ವಸ್ತುಸತ್ಯ ಬೇರೆಯೇ ಆಗಿದೆ. ಅವಳು ಏನನ್ನೇ ಮಾಡಿದರೂ ಅದು ಅವನಿಗೆ ತುಂಬಾ ಪ್ರಿಯವೆನಿಸುತ್ತದೆ. ಸಾಹಿತ್ಯದ ಸಂದೇಶ ಈ ಜಾತಿಯದು. ಅದು ಏನನ್ನು ಹೇಳಿದಂತೆ ಮೇಲ್ನೋಟಕ್ಕೆ ಕಂಡರೂ, ಕಡೆಗೆ ಅದರಿಂದ ಉಂಟಾಗುವ ಪರಿಣಾಮ ಬಾಳಿನ ಮರ್ಮದ ಅರಿವು; ಒಳ್ಳೆಯ ಜೀವನದ ನಿಲವು! ಉತ್ತಾನ ಶೃಂಗಾರದ, ಅಥವಾ ಶೃಂಗಾರಾಭಾಸದ ಪರ್ಯವಸಾನ—ಕೂಡ ಶಾಂತಭಾವದಲ್ಲಿಯೇ!

೪

ಈಗ ಗಹನವಾದ ತತ್ತ್ವಶಾಸ್ತ್ರ ಪ್ರಕ್ರಿಯೆಗಳಿಗೂ ಕಾವ್ಯಮೀಮಾಂಸೆಗೂ ಒಕ್ಕೂಡಿಸುವ ಒಂದು ಸೀಮಾರೇಖೆಯೊಂದಿದೆ. ಅದರತ್ತ ಗಮನ ಹಾಯಿಸೋಣ. ಮಾನವನ ಆತ್ಮದ ಅನಂತ ವ್ಯಾಪ್ತಿ ವೈಭವ ಸಾಧು ಸಂತರ, ಶರಣ ಋಷಿಗಳ,

ಅನುಭವ ವಿಷಯವೆಂಬುದು ಸರ್ವಸಮ್ಮತ. ಇದು ಹೇಳಿಕೇಳಿ ಅವಾಙ್ಮನಸಗೋಚರ. ಮಾತು ಅಲ್ಲಿಗೆ ನಿಲುಕದು ; ಮನಸ್ಸು ಅಲ್ಲಿಯವರೆಗೆ ಓಡದು. ಎಂದಮೇಲೆ ಅದನ್ನು ಗ್ರಹಿಸಲು ಅಥವಾ ಅರುಹಲು ಅನುಭಾವಿಗಳಿಗೆ ಮೌನವೇ ಒಂದು ಸಾಧನವಾಗ ಬಹುದು—"ಅವಚನವ್ ಬುದ್ಧವಚನವ್" ಎಂಬಂತೆ ; ಇಲ್ಲವೆ ಶಾಸ್ತ್ರ ಮಹಾ ವಾಕ್ಯಗಳ ಭಾಷ್ಯಾರೂಪವನ್ನು ತಳೆಯುಬಹುದು ; ಇಲ್ಲವೆ ಗೀತೆಯಂತೆ ಪ್ರಾಸಾದಿಕ ಕಾವ್ಯವಾಣಿಯಾಗಿ, ಶಿವಶಣರ ವಚನಗಳಂತೆ ಅನುಭಾವಸಾಂದ್ರ ಬೆಡಗಿನ ರೂಪ ವೈವಿಧ್ಯ ತಾಳಿ, ಹೊರಹೊಮ್ಮಬಹುದು. ಇಲ್ಲಿ ವಾಗದ್ವೈತದ ವೈಖರಿ ಪ್ರಸ್ತುತ ವಲ್ಲ ; ವಾಗತೀತವಾದ ಅದ್ವೈತಾನುಭವದ ಸಂವಹನದ ಪರಿಯಷ್ಟೇ ಪ್ರಸಕ್ತ. ಇದನ್ನೇ "ರಸೋ ವೈ ಸಃ" ಎಂದು ತೈತ್ತಿರೀಯೋಪನಿಷತ್ತು ಉದ್ಗರಿಸಿದೆ. 'ಆನಂದ–ಮೀಮಾಂಸೆ'—ಆತ್ಮಮೀಮಾಂಸೆ ಬ್ರಹ್ಮಮೀಮಾಂಸೆಯೆಲ್ಲ ಒಂದೇ ಆಗಿ ಮಾರ್ಪಡುತ್ತದೆ.

ಕಾವ್ಯದಲ್ಲೂ ಕವಿ-ರಸಿಕರ "ಹೃದಯ ಸಂವಾದ" ಪ್ರಕ್ರಿಯೆ, ಸ್ವ–ಪರ ತಟಸ್ಥ ಭಾವಗಳ ಲಯವಾಗಿ, "ಸಾಧಾರಣೀಕರಣ"ದ ಪ್ರಭಾವದಿಂದ ಉಕ್ಕೇರುವ "ತನ್ಮಯೀ ಭವನ"–ಇವು ಕಾವ್ಯರಸದ ನಿರೂಪಣೆಯಲ್ಲಿ ಮಹಾಮಾಹೇಶ್ವರ ಅಭಿನವ ಗುಪ್ತಾಚಾರ್ಯರ ಮಹತ್ತಾದ ಕೊಡುಗೆ. ಇದನ್ನು ಎಲ್ಲ ಕಾವ್ಯಮೀಮಾಂಸಕರೂ ಒಪ್ಪಿದ್ದಾರೆ. ಎಂದಮೇಲೆ ಸಾಂಖ್ಯರು ಹೇಳುವ ಪ್ರಕೃತಿ–ಪುರುಷ ವಿವೇಕದಿಂದ ಅರಳುವ 'ಕೈವಲ್ಯ', ವೇದಾಂತಿಗಳು ಒಮ್ಮತದಿಂದ ಒಪ್ಪುವ 'ಭಕ್ತಿಯ ನಿರ್ಭರ ಆನಂದ' ಮತ್ತು 'ಅದ್ವೈತಾನುಭವ', ಯೋಗಿಗಳು ಸವಿಕಲ್ಪಕ–ನಿರ್ವಿಕಲ್ಪಕ ಸಮಾಧಿ ಸ್ಥಿತಿಯಲ್ಲಿ ಬಣ್ಣಿಸುವ ಪರಮಾನಂದ—ಇವೆಲ್ಲಕ್ಕೂ ಒಂದು ಏಕಸೂತ್ರ ಅಥವಾ ಏಕ ರೂಪ ಎದ್ದುಕಾಣುವಂತಿದೆ. ಅವಿದ್ಯೆಯೆನ್ನಲಿ, ಮಾಯೆಯೆನ್ನಲಿ, ಅಜ್ಞಾನವೆನ್ನಲಿ, ಅಧ್ಯಾಸವೆನ್ನಲಿ, ಮರವೆನ್ನಲಿ—ಏನೇ ಶಬ್ದಾಂತರದಿಂದ ಹೇಳಿದರೂ ಸಾಮಾನ್ಯ ಸಂಸಾರಿ ಜೀವದ ನಿತ್ಯಾನುಭವವೆಲ್ಲ ಆ ಪರಮಾನುಭವದಿಂದ ವಿಮುಖವಾಗಿರುವುದ ರಿಂದ ಆ ಅಜ್ಞಾನದ ವ್ಯಾಪ್ತಿಯಲ್ಲೇ ಬರಬೇಕಾಗುತ್ತದೆ ; ಅಷ್ಟೇಕೆ, ಸಕಲ ಪುಸ್ತಕ ವಿದ್ಯೆಗಳೂ—ಎಂದರೆ ಕಲೆ, ವಿಜ್ಞಾನ, ಯಾಂತ್ರಿಕ ಕೌಶಲ ಇತ್ಯಾದಿಗಳೂ—ವ್ಯಾವ ಹಾರಿಕ ಗುರಿಯ ಕಾರಣದಿಂದಲೇ ಆತ್ಮನ ಪರಮಾನುಭವಕ್ಕೆ ಅವಿಷಯವೆನಿಸಿ ಅಜ್ಞಾ ನದ ಪರಿಧಿಯಲ್ಲೇ ಅಂತರ್ಗತವಾಗುತ್ತವೆ. ಬುದ್ಧಿಯ ಪರಮೋಚ್ಚ ಸಾಧನೆಗಳೆನಿಸಿದ ಅಂತರಿಕ್ಷದಲ್ಲಿ ಗ್ರಹಾಂತರ ವಿಹಾರಾದಿಗಳು ಕೂಡ ಪರಮಾರ್ಥ ಜ್ಞಾನಿಗೆ ಅದ್ಭುತ ಜ್ಞಾನವೆನಿಸಲಾರವು. ಭಾರತೀಯ ಸಂಸ್ಕೃತಿಯಲ್ಲಿ ಯೋಗಿಗಳ ಅಣಿಮಾದಿ ಅಷ್ಟ ಸಿದ್ಧಿಗಳಿಗೆ ಕೂಡ ಕಾಸಿನ ಬೆಲೆಯಿಲ್ಲ. ಆದ್ದರಿಂದ ಕಾವ್ಯ, ತನ್ನ ಉನ್ನತೋನ್ನತ ಸ್ತರದಲ್ಲಿ ರಸಿಕನ ಹೃದಯದ ಗುಹಾಂತರಾಳದ ಆನಂದವನ್ನೇ ತಾತ್ಕಾಲಿಕವಾಗಿ ಯಾದರೂ ಚಿಮ್ಮಿಸುವ ಮೂಲಕ ಅವನ ಬಾಳನ್ನು ಸಾರ್ಥಕಗೊಳಿಸಬಲ್ಲದು, ಅವನ ಮನಸ್ಸಿನ ಪದರಗಳಲ್ಲಿ ಬೇರುಬಿಟ್ಟಿರುವ ಚಿತ್ತವೃತ್ತಿಗಳನ್ನು ಉಪಶಮನಗೊಳಿಸಿ,

ಮೇಲ್ನೋಟಕ್ಕೆ ಉದ್ರೇಕಿಸಿದಂತೆ ಭಾಸವಾದರೂ ಪರಿಣಾಮದಲ್ಲಿ ಪ್ರಶಾಂತಗೊಳಿಸುವುದರಲ್ಲಿ ಯಶಸ್ವಿಯಾಗಬಹುದು. ಶಾಸ್ತ್ರದ್ದು ಸಚ್ಚಿದಾನಂದದ ಸಚ್ಚಿದ್ರೂಪಗಳ ವಿಷಯವಾದರೆ, ಕಾವ್ಯದ್ದು ಆನಂದಮುಖವನ್ನು ಕುರಿತದ್ದು. ಹೀಗೆ ಭಾರತೀಯ ಕಾವ್ಯಮೀಮಾಂಸೆಯ ಸಾರಸರ್ವಸ್ವವಾದ ರಸಸಿದ್ಧಾಂತ ಭಾರತೀಯ ತತ್ತ್ವಶಾಸ್ತ್ರದ ಆನಂದಮೀಮಾಂಸೆಗೆ ಅವಿರುದ್ಧವಾಗಿ, ತನ್ನದೇ ಆದ ತಾತ್ತ್ವಿಕ ಆನಂದಮೀಮಾಂಸೆಯನ್ನೂ ಒಳಗೊಳ್ಳಬಲ್ಲದು. ಇದೇ ಭಾರತೀಯ ಕಾವ್ಯಮೀಮಾಂಸೆಯ ಮಹತ್ತ್ವ. ಇಲ್ಲಿ ಕವಿಯ ಸೃಷ್ಟಿಕಾರಕ ಪ್ರತಿಭೆಗೆ ಜಾತಿ-ಗೀತಿಗಳ, ಉಚ್ಚ-ನೀಚಗಳ ಇತಿ-ಮಿತಿಗಳಿಲ್ಲ. ಈ ಕಾವ್ಯಪ್ರಪಂಚ ಜಗದಗಲ, ಮುಗಿಲಗವಷ್ಟೇ ಅಲ್ಲ ಅದಕ್ಕಿಂತಲೂ ಅಗಲ : ಏಕೆಂದರೆ ಕವಿ ಪ್ರತಿಭೆಯ ವೈಶಾಲ್ಯ ಅನಂತ, ಅಸೀಮ :—

ಅಪಾರೇ ಕಾವ್ಯಸಂಸಾರೇ ಕವಿರೇವ ಪ್ರಜಾಪತಿಃ ।
ಯಥಾಸ್ಮೈ ರೋಚತೇ ವಿಶ್ವಂ ತಥೇದಂ ಪರಿವರ್ತತೇ ॥

ಕವಿಯ ಜಗತ್ತಿನಲ್ಲಿ ಅವನೇ ಬ್ರಹ್ಮ. ಅವನ ಇಚ್ಛಾನುವರ್ತಿಯೇ-ಪ್ರಕೃತಿ, ಪುರುಷ ; ದೇವ-ಜೀವ-ಸಕಲವೂ !

# ಭಾರತೀಯ ಕಾವ್ಯಮೀಮಾಂಸೆಗೆ ತೊಲ್‌ಕಾಪ್ಪಿಯರ್ ಕೊಡುಗೆ

ಡಾ. ಪಾ. ಶ ಶ್ರೀನಿವಾಸ

ದ್ರಾವಿಡ ಭಾಷೆಗಳಲ್ಲಿ ಅತಿ ಪ್ರಾಚೀನವಾದ ಸಾಹಿತ್ಯವನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಉಳಿಸಿಕೊಂಡು ಬಂದಿರುವ ಭಾಷೆ ತಮಿಳು. ತೊಲ್‌ಕಾಪ್ಪಿಯಮ್, ತಮಿಳಿನಲ್ಲಿ ಬಂದ ಅತ್ಯಂತ ಪ್ರಾಚೀನವಾದ ಲಕ್ಷಣ ಗ್ರಂಥ. ತೊಲ್ ಕಾಪ್ಪಿಯಮ್ ಎಂದರೆ ಮೊದಲ ಕಾವ್ಯ ಎಂದು ಅರ್ಥ. ತಮಿಳಿನಲ್ಲಿ ಸಿಕ್ಕಿರುವ ಅತಿ ಪ್ರಾಚೀನವಾದ ಗ್ರಂಥ ಎಂಬ ದೃಷ್ಟಿಯಿಂದ ಈ ಹೆಸರು ಕೃತಿಗೆ ಬಳಕೆಯಲ್ಲಿ ಬಂದಿರಬೇಕೆಂದು ತೋರುತ್ತದೆ. ಈ ಕೃತಿಯು ರಚನೆಯು ಕಾಲ ಕ್ರಿ.ಪೂ. ೨ನೆಯ ಶತಮಾನವೆಂದು ವಿದ್ವಾಂಸರುಗಳ ಅಭಿಪ್ರಾಯ, ಅಂದರೆ ಎರಡ ನೆಯ ಸಂಗದ ಕಾಲ. ಇದರ ಕರ್ತೃ ಯಾರೆಂಬುದು ತಿಳಿಯದಿರುವುದರಿಂದ, ಕರ್ತೃವಿನ ಹೆಸರನ್ನು ತೊಲ್‌ಕಾಪ್ಪಿಯರ್ ಎಂದೇ ಕರೆಯುವುದು ವಾಡಿಕೆ. ಸಂಗಕಾಲದ ಸಾಹಿತ್ಯ ಕೃತಿಗಳ ಮೇಲೆ, ಅಂದಿನ ಸಾಮಾಜಿಕ, ಸಂಪ್ರದಾಯ ಪದ್ಧತಿಗಳ ಮೇಲೆ ಬೆಳಕು ಚೆಲ್ಲುವುದರಿಂದ ಈ ಕೃತಿಯು ತುಂಬ ಮಹತ್ವದ್ದೆಂದು ತಮಿಳಿನಲ್ಲಿ ಪರಿಗಣಿಸಲ್ಪಟ್ಟಿದೆ. ಸಂಗಕಾಲದ ಸಾಹಿತ್ಯವು ಸಂಸ್ಕೃತ ಮತ್ತಿತರ ಭಾರತೀಯ ಭಾಷಾ ಸಾಹಿತ್ಯಗಳಿಂದ ಭಿನ್ನವಾಗಿ ಬೆಳೆದು ಬಂದಿರುವುದರಿಂದ ತೊಲ್‌ಕಾಪ್ಪಿಯಮ್‌ನಲ್ಲಿ ಹೇಳಿರುವ ಕಾವ್ಯಸಂಪ್ರದಾಯದ ಲಕ್ಷಣಗಳು, ಭಾರತೀಯ ಕಾವ್ಯಮೀಮಾಂಸೆಯಲ್ಲಿ ವಿಶಿಷ್ಟವಾಗಿ ಎದ್ದುನಿಲ್ಲುತ್ತವೆ.

ಕನ್ನಡದ ಕವಿರಾಜಮಾರ್ಗದಂತೆ, ನಾಗವರ್ಮನ ಕಾವ್ಯಾವಲೋಕನದಂತೆ, ತೊಲ್‌ಕಾಪ್ಪಿಯಮ್ ಕೂಡ ವ್ಯಾಕರಣ, ಛಂದಸ್ಸು, ಕಾವ್ಯಾಲಂಕಾರಗಳನ್ನೂ ಮೇಳವಿಸಿಕೊಂಡಿದೆ. ಇದರಲ್ಲಿ ಪ್ರಮುಖವಾಗಿ ಮೂರು ಭಾಗಗಳಿವೆ. ೧) ಎಟುತ್ತಧಿಕಾರವ್–ಅಕ್ಷರ ಪ್ರಕರಣ ೨) ಶೊಲ್ಲಧಿಕಾರಮ್–ಶಬ್ದ ಪ್ರಕರಣ ೩) ಪೊರುಳಧಿಕಾರಮ್-ಕಾವ್ಯ ಲಕ್ಷಣ, ಸಾಮಾಜಿಕ ಜೀವನ, ತಮಿಳು ಸಂಪ್ರದಾಯಗಳನ್ನು ಹೇಳುವ ವಿಶಿಷ್ಟವಾದ ಭಾಗ.

ವ್ಯಾಕರಣದೊಂದಿಗೆ ಕಾವ್ಯ ಮೀಮಾಂಸೆಯನ್ನು ಕುರಿತು ಹೇಳುವ ಪದ್ಧತಿಗೆ ತೊಲ್‌ಕಾಪ್ಪಿಯಮ್ ಮೊದಲು ಸಂಪ್ರದಾಯ ಹಾಕಿಕೊಟ್ಟಿತೆಂದು ತೋರುತ್ತದೆ. ಕಾವ್ಯಮೀಮಾಂಸೆ, ಛಂದಸ್ಸುಗಳು ಭಾಷೆಯ ಅಭಿವ್ಯಕ್ತಿ ಮತ್ತು ಶೈಲಿಯನ್ನು ಒಂದು ಕ್ರಮದಲ್ಲಿ ತೊಡಗಿಸುವುದರಿಂದ, ವ್ಯಾಕರಣಕಾರರು ಈ ಮೂರನ್ನು ಒಂದೆಡೆ ಸೇರಿಸಿ ಹೇಳುವ ಪದ್ಧತಿ ಸಮರ್ಥನೀಯವಾಗಿ ಕಾಣುತ್ತದೆ. ಅಕ್ಷರ; ಶಬ್ದಗಳು ಭಾಷೆಯ ಅರ್ಥ ಮತ್ತು ಶೈಲಿಯನ್ನು ಸ್ಫುರಿಸುವುದಕ್ಕಾಗಿಯೇ ಇರುವುದರಿಂದ ಪ್ರಾಚೀನ ಲಕ್ಷಣಕಾರರು ಇದನ್ನು ರೂಢಿಸಿಕೊಂಡುಬಂದರು. ಭರತನ ನಾಟ್ಯಶಾಸ್ತ್ರದ ಕಾಲದಲ್ಲಿ ಸಂಸ್ಕೃತದಲ್ಲಿ ವ್ಯಾಕರಣ ಮತ್ತು ಕಾವ್ಯ ಮೀಮಾಂಸೆಗಳು ಬೇರೆ ಬೇರೆಯಾಗಿ ವ್ಯವಹರಿಸಲ್ಪಡುತ್ತಿದ್ದರೂ, ವ್ಯಾಕರಣವು ಕಾವ್ಯಮೀಮಾಂಸೆಯೊಂದಿಗೆ ನಿಕಟವಾದ ಸಂಪರ್ಕ ಹೊಂದಿರುವುದಕ್ಕೆ ನಿದರ್ಶನಗಳಿವೆ, ಭಾಮಹನ ಕಾವ್ಯಾಲಂಕಾರದಲ್ಲಿ ಅವನಿಗಿಂತ ಮುಂಚೆ ಇದ್ದ ಕಾವ್ಯಾಲಂಕಾರ ಗ್ರಂಥಗಳಲ್ಲಿ, ಕಾವ್ಯದ ಮೌಲ್ಯವನ್ನು ತಿಳಿಯುವಲ್ಲಿ ವ್ಯಾಕರಣ ಶುದ್ಧತೆಯನ್ನು ಗಮನದಲ್ಲಿಟ್ಟುಕೊಳ್ಳಲಾಗುತ್ತಿತ್ತು ಎಂಬುದು ತಿಳಿದು ಬರುತ್ತದೆ. (ಭಾಮಹ ಕಾವ್ಯಾಲಂಕಾರ ಭಾಗ-I, ೧೪) ಶಬ್ದ ಮತ್ತು ಅರ್ಥ ಸೇರಿದರೆ ಕಾವ್ಯವಾಗುತ್ತದೆಂದು ಹೇಳಿದ ಭಾಮಹನು ಈ ಸಂಪ್ರದಾಯವನ್ನು ಮೀರಿ ಕಾವ್ಯಾಲಂಕಾರಗಳಿಂದಲೆ ಕಾವ್ಯದ ಸೊಬಗು ಹೆಚ್ಚುತ್ತದೆ ಎಂದು ಪ್ರತಿಪಾದಿಸಲು ಯತ್ನಿಸಿದ. ಆಮೇಲೆ ಬಂದ ದಂಡಿ ಮೊದಲಾದ ಸಂಸ್ಕೃತದ ಅಲಂಕಾರಿಕರು ಕಾವ್ಯಲಕ್ಷಣಗಳನ್ನೆ ಪ್ರತ್ಯೇಕವಾಗಿ ಹೇಳುವುದು ವಾಡಿಕೆಯಾಯಿತು. ಇದು ತಮಿಳಿನ ಮೇಲೆ ಕೂಡ ಪ್ರಭಾವ ಬೀರಿ, ವ್ಯಾಕರಣ, ಛಂದಸ್ಸು, ಅಲಂಕಾರಗ್ರಂಥಗಳು ಪ್ರತ್ಯೇಕವಾಗಿ ಬರತೊಡಗಿದವು. ಕ್ರಿ.ಶ. ೧೧ನೆಯ ಶತಮಾನದ ಮೇಲೆ ಬಂದ, ಯಾಪ್ಪರುಂಗಲಮ್ (ಛಂದಸ್ಸು) ದಂಡಿಯಲಂಕಾರಮ್, ಮತ್ತು ವೀರಶೋಟೀಯಮ್, ಇವಕ್ಕೆ ನಿದರ್ಶನಗಳು.

ತೊಲ್‌ಕಾಪ್ಪಿಯಮ್, ಕನ್ನಡ ಮತ್ತು ಇತರ ಭಾಷೆಗಳಲ್ಲಿ ಬಂದ ಅಲಂಕಾರ ಗ್ರಂಥಗಳಂತೆ, ಸಂಸ್ಕೃತ ಕಾವ್ಯಲಕ್ಷಣಗಳ ಪಡಿಯಚ್ಚಾಗಿರದೆ, ಸ್ವತಂತ್ರವಾಗಿ ತಮಿಳು ಕಾವ್ಯಸಂಪ್ರದಾಯದ ರೀತಿಯಲ್ಲಿ ರಚಿಸಿದ ವಿಶಿಷ್ಟ ಕೃತಿಯಾಗಿದೆ. ದ್ರಾವಿಡ ವಿಶಿಷ್ಟವಾದ, ಸಂಗಕಾಲದ 'ಅಗಮ್' ಮತ್ತು 'ಪುಱಮ್'- ಕಾವ್ಯಗಳ ಲಕ್ಷಣ ವಿವೇಚನೆಗೆ, ತೊಲ್‌ಕಾಪ್ಪಿಯಮ್ ಬಹಳ ಉಪಯುಕ್ತವಾದ ಪಳೆಯುಳಿಕೆಯಾಗಿರುವುದರಿಂದ, ಅದನ್ನು ಮರ್ಯಾದೆಯಿಂದ ಕಾಣಲಾಗಿದೆ.ದ್ರಾವಿಡ ಪದ್ಧತಿಯ ಮೂಲ ಸಂಪ್ರದಾಯಗಳನ್ನು ಆದಷ್ಟು ಮಲಿನವಾಗದಂತೆ ಕಾಪಾಡಿಕೊಂಡು ಬಂದಿರುವುದು ಅದರ ಹೆಗ್ಗಳಿಕೆ. ಕ್ರಿ.ಶ.೧೧ನೆ ಶತಮಾನದ , ದಂಡಿಯಲಂಕಾರಮ್, ವೀರಶೋಟೀಯಮ್, ೧೬ನೆ ಶತಮಾನದ ಮಾಱನಲಂಕಾರಮ್, ೧೯ನೆ ಶತಮಾನದ ಕುವಲಯಾನಂದಮ್– ಇವೆಲ್ಲವೂ ಕನ್ನಡದಲ್ಲಿರುವಂತೆ ಮೂಲ ಸಂಸ್ಕೃತ ಕಾವ್ಯಾಲಂಕಾರಗಳ ಪಡಿಯಚ್ಚು ಇಲ್ಲವೆ ಛಾಯಾನುವಾದಗಳು. ತೊಲ್‌ಕಾಪ್ಪಿಯಮ್ ಕಾಲಕ್ಕೂ, ಮೇಲೆ ತಿಳಿಸಿದ

ಲಕ್ಷಣ ಗ್ರಂಥಗಳ ಕಾಲಕ್ಕೂ ಶತಶತಮಾನಗಳ ಅಂತರವಿರುವುದರಿಂದ, ಮೂಲ ಪದ್ಧತಿಯ ತಂತು ಕಡಿದುಹೋಗಿರುವುದು ಸಾಧ್ಯ.

ತೊಲ್‌ಕಾಪ್ಪಿಯಮ್ ಪದ್ಯಗಳೆಲ್ಲವೂ ಸೂತ್ರರೂಪದಲ್ಲಿವೆ. ಆದರೆ ಈ ಸೂತ್ರಗಳಿಗೆ ಯಾವ ನಿಯಮ, ಕಟ್ಟುಪಾಡುಗಳು ಇರುವಂತೆ ತೋರುವುದಿಲ್ಲ. ಒಂದು ಸಾಲಿನಿಂದ ಅರವತ್ತು ಸಾಲುಗಳವರೆಗೆ ಈ ಸೂತ್ರಗಳು ವ್ಯತ್ಯಾಸವಾಗುತ್ತ ಹೋಗುತ್ತವೆ. ಇದು ಕ್ರಿಸ್ತ ಪೂರ್ವದಲ್ಲಿಯೇ ಬಂದ ಕಾವ್ಯ ಲಕ್ಷಣ ಗ್ರಂಥವಾದರೂ ಇದರ ಮೇಲಿನ ವ್ಯಾಖ್ಯಾನಗಳು ಕ್ರಿ.ಶ. ೧೧ನೆಯ ಶತಮಾನದ ನಂತರ ಬರಲಾರಂಭಿಸಿರುವುದು ಇದರ ಅಭ್ಯಾಸದಲ್ಲಿ ತೊಡಕಾಗಿದೆ. ತೊಲ್‌ಕಾಪ್ಪಿಯರ್, ಸೂಕ್ಷ್ಮವಾಗಿ, ಸಂಗ್ರಹವಾಗಿ ಹೇಳಿರುವ ವಿಷಯಗಳನ್ನು ವಿಶದಪಡಿಸಿ ಹೇಳುವುದು ಕಷ್ಟವಾದ ಕೆಲಸ. ಈ ಶತಮಾನಗಳ ಅಂತರದಲ್ಲಿ, ಭಾಷೆ, ಸಾಮಾಜಿಕ ಪದ್ಧತಿ, ಪರಿಸರಗಳು ಬದಲಾಗಿವೆ. ಇದರ ಮೇಲೆ ಬಂದ ವ್ಯಾಖ್ಯಾನಗಳಲ್ಲಿ ಇಳಂಪೂರಣರ್, ಶೇನಾವರೈಯಾರ್, ಪೇರಾಶಿರಿಯರ್, ನಚ್ಚಿನಾರ್ ಕಿನಿಯರ್ ರಚಿಸಿರುವ ವಾಖ್ಯಾನಗಳು ಪ್ರಮುಖವಾಗಿವೆ, ಅವುಗಳಲ್ಲಿಯೂ ಇಳಂಪೂರಣರ ವಾಖ್ಯಾನವು ಉಲ್ಲೇಖಾರ್ಹವಾದುದು. ಏಕೆಂದರೆ, ಇದ್ದುದರಲ್ಲಿ ಇವರು ಅತ್ಯಂತ ಹಳೆಯ ವ್ಯಾಖ್ಯಾನಕಾರರು (ಕ್ರಿ. ಶ. ೧೧ನೆಯ ಶತಮಾನ). ಮತ್ತು ತೊಲ್‌ಕಾಪ್ಪಿಯಮ್ ಮೇಲೆ ಸಮಗ್ರ ವಾಖ್ಯಾನ ಮಾಡಿದವರು ಇವರೊಬ್ಬರೆ. ಮೇಲೆ ತಿಳಿಸಿದ ವ್ಯಾಖ್ಯಾನಗಳನ್ನು ಗಮನದಲ್ಲಿಟ್ಟುಕೊಂಡು, ತೊಲ್‌ಕಾಪ್ಪಿಯಮ್ ಲಕ್ಷಣ ಗ್ರಂಥವು ಚಿತ್ರಿಸಿರುವ ಕಾವ್ಯ ಸಂಪ್ರದಾಯ ಲಕ್ಷಣಗಳನ್ನು ಸ್ಥೂಲವಾಗಿ ಪರಿಚಯಮಾಡಿಕೊಟ್ಟು ಅವು ಹೇಗೆ ಭಾರತೀಯ ಕಾವ್ಯಮೀಮಾಂಸೆಯ ಪ್ರಾಚೀನ ಪರಂಪರೆಗೆ ನೀಡಿದ ವಿಶಿಷ್ಟ ಕೊಡುಗೆಗಳಾಗಿವೆ ಎಂಬುದನ್ನು ಪ್ರಸ್ತುತಪಡಿಸುವುದು ಈ ಪ್ರಬಂಧದ ಉದ್ದೇಶ.

**ಕಾವ್ಯದಲ್ಲಿ, ವಸ್ತು, ಪ್ರಣಯ ನಿಸರ್ಗ ಇತ್ಯಾದಿ :**

ಸಂಸ್ಕೃತದಲ್ಲಿ ಅಲಂಕಾರಿಕರು ಭರತನ ನಾಟ್ಯಶಾಸ್ತ್ರವನ್ನೇ ಆಧಾರವಾಗಿಟ್ಟುಕೊಂಡಿರುವುದರಿಂದ ಸಾಮಾನ್ಯವಾಗಿ ವಸ್ತು ವಿವೇಚನೆ ಮಾಡುವಾಗ ನಾಟಕವನ್ನೆ ಹಿನ್ನೆಲೆಯಾಗಿಟ್ಟುಕೊಂಡು ಬಂದರು, 'ಕಾವ್ಯೇಷು ನಾಟಕಮ್ ರಮ್ಯಂ' ಎಂಬ ನಂಬಿಕೆ ಅವರದಾಗಿತ್ತು. ಕಾವ್ಯವಸ್ತುವನ್ನು ಅಷ್ಟಾಗಿ ಗಣನೆಗೆ ತೆಗೆದುಕೊಳ್ಳಲಿಲ್ಲ. ಕಾವ್ಯವಸ್ತುವನ್ನು ಕುರಿತು ಮೊದಲು ಪ್ರಸ್ತಾಪಿಸಿದವನು ದಂಡಿ ಎಂಬ ಆಲಂಕಾರಿಕ (ಕ್ರಿ.ಶ. ೭ನೆಯ ಶತಮಾನ). ಅವನು ತನ್ನ ಕಾವ್ಯಾದರ್ಶದಲ್ಲಿ ಮಹಾಕಾವ್ಯವೊಂದರ ವಸ್ತುವನ್ನು ಆರಿಸಿಕೊಳ್ಳುವ ಮತ್ತು ನಿರೂಪಿಸುವ ರೀತಿಯನ್ನು ಕುರಿತು ವಿವರವಾಗಿ ಹೇಳಿದ್ದಾನೆ (ಅಧ್ಯಾಯ ೧, ೧೪-೨೨). ಸಾಮಾನ್ಯವಾಗಿ ಕಾವ್ಯ ನಿರ್ಮಾಣಕ್ಕೆ ವಸ್ತುವನ್ನು ಪ್ರಚಲಿತವಾಗಿರುವ ರಾಮಾಯಣ, ಮಹಾಭಾರತ, ಬೃಹತ್ಕಥೆ

ಮೊದಲಾದ. ಇತಿಹಾಸ. ಕಥೆಗಳಿಂದ ಆರಿಸಿಕೊಳ್ಳಬೇಕೆಂದು ದಂಡಿ ಮೊದಲಾದ ಆಲಂಕಾರಿಕರು ಅಭಿಪ್ರಾಯ ಪಟ್ಟಿದ್ದರು. ಆನಂದವರ್ಧನನು ಕೂಡ ತನ್ನ ಧ್ವನ್ಯಾಲೋಕದಲ್ಲಿ ಕವಿಗಳು ಹೊಸ ವಸ್ತುವಿನ ಆಯ್ಕೆಯೇ ಕಾವ್ಯ ವಿನೂತನತೆಗೆ ಮುಖ್ಯವೆಂದು ಭಾವಿಸಬೇಕಿಲ್ಲ, ಬೇರೆಯವರು ಈಗಾಗಲೇ ಬರೆದ ವಸ್ತುವನ್ನು ಆರಿಸಿಕೊಳ್ಳುವುದರಲ್ಲಿ ಔಚಿತ್ಯವಿಲ್ಲವೆಂದು ತಿಳಿಯಬಾರದು ಎಂದು ಹೇಳಿದ್ದಾನೆ (ಅಧ್ಯಾಯ ೪–೧೭). ಕವಿಗಳು ತಾವೇ ಕಾವ್ಯ ಕಥೆ ಅಥವಾ ವಸ್ತುವನ್ನು ಸೃಷ್ಟಿಸಬಹುದು. ಆದರೆ ಅದನ್ನು ಕಾವ್ಯಧರ್ಮದ ಗುಣಗಳೊಂದಿಗೆ ನಿರೂಪಿಸುವಾಗ ಹಲವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಮಹಾ ಪ್ರತಿಭೆಯುಳ್ಳ ಕವಿಗಲ್ಲದೆ ಉಳಿದವರಿಗೆ ಅದು ಕಷ್ಟದ ಕೆಲಸ. ಅದರಿಂದಲೆ ಸಾಮಾನ್ಯವಾಗಿ ಪ್ರಚಲಿತವಾದ ವಸ್ತುವನ್ನು ಬಳಸಿಕೊಳ್ಳುವುದು ಕವಿಗಳಿಗೆ ಕ್ಷೇಮಕರ ಎಂದು ಅಲಂಕಾರಿಕರು ಭಾವಿಸಿದರು. ಸಾಮಾನ್ಯವಾಗಿ, ಕನ್ನಡ ಮತ್ತಿತರ ಭಾರತೀಯ ಭಾಷೆಗಳಲ್ಲಿಯೂ ಈ ಸಂಸ್ಕೃತ ಅಲಂಕಾರಿಕರ ಮತವನ್ನೆ ಅನುಸರಿಸಿರುವುದು ಕಾಣಬರುತ್ತದೆ. ಈ ಭಾಷೆಗಳಲ್ಲಿನ ಮಹಾಕವಿಗಳು ರಾಮಾಯಣ, ಭಾರತಾದಿ ಇತಿಹಾಸ ಕಥೆಗಳಿಗೆ ಮಹತ್ವ ಕೊಟ್ಟು, ಅವುಗಳ ನಿರೂಪಣೆಯಲ್ಲಿ ತಮ್ಮ ಸ್ವಂತಿಕೆಯನ್ನು, ಕಾವ್ಯ ಪ್ರತಿಭೆಯನ್ನು ಮೆರೆದಿದ್ದಾರೆ.

ಪ್ರಾಚೀನ ತಮಿಳು ಕಾವ್ಯಸಂಪ್ರದಾಯವು, ಇದಕ್ಕೆ ಭಿನ್ನವಾದ ರೀತಿಯಲ್ಲಿ ಕಾಣಿಸಿಕೊಂಡಿದೆ. ಸಂಗಕಾಲದಲ್ಲಿ ಬಂದ 'ಅಗನಾನೂಱು' 'ಪುಱನಾನೂಱು', 'ಪತ್ತುಪಾಟ್ಟು' 'ಎಟ್ಟುತ್ತೊಗೈ' ಮೊದಲಾದ ಕಾವ್ಯಸಂಕಲನಗಳು ಇದಕ್ಕೆ ನಿದರ್ಶನ. ಇವುಗಳಲ್ಲಿ ಯಾವ ಪ್ರಚಲಿತವಾದ ಕಥಾಸಾಹಿತ್ಯವೂ ಇಲ್ಲ. ಕಾವ್ಯವಸ್ತುವಿಗೆ ಕಥೆ ಬೇಕೆಂಬ ನಿಯಮವಿಲ್ಲ. ಸಂಬಂಧವುಳ್ಳ ಅಥವಾ ಬಿಡಿಯಾದ ಕುತೂಹಲವನ್ನು ಹುಟ್ಟಿಸುವ ಭಾವ ಸಂಚಾರದ ವಿಷಯಗಳು, ಕಾವ್ಯದ ವಸ್ತುಮಾನ್ಯತೆಯನ್ನು ಪಡೆದಿದ್ದುವು. ಇದರಿಂದಲೆ ಏನೋ, ಕಾವ್ಯದಲ್ಲಿ ಕಥಾವಸ್ತುವಿನ ಸ್ಥಾನವನ್ನು ಕುರಿತು ತೊಲ್‌ಕಾಪ್ಪಿಯರ್ ಎಲ್ಲಿಯೂ ಪ್ರಸ್ತಾಪಿಸದೆ ಬಿಟ್ಟಿದ್ದಾರೆ. ತೊಲ್‌ಕಾಪ್ಪಿಯರ್ ದೃಷ್ಟಿಯಲ್ಲಿ ಜನಜೀವನದಲ್ಲಿ ಬೆರತು ಹೋಗಿರುವ, ಪ್ರಣಯ, ವೀರ, ನೀತಿ, ಲೌಕಿಕ ವಿಚಾರಗಳು ಕಾವ್ಯವಸ್ತುವಿಗೆ ಆಕರವಾಗಬಲ್ಲುವು'. ನಾಯಕ, ನಾಯಿಕೆಯರ ಪ್ರಣಯ ಭಾವನೆಗಳು, ಅವುಗಳನ್ನು ವ್ಯಕ್ತಪಡಿಸುವ ರೀತಿ, ಮತ್ತಿತರ ವ್ಯವಹಾರ ಸಂಗತಿಗಳನ್ನು ತೊಲ್‌ಕಾಪ್ಪಿಯರ್ ವಿಶದವಾಗಿ ಪ್ರಸ್ತಾಪಿಸಿದ್ದಾರೆ. ಮುಖ್ಯವಾಗಿ ಅವರು ತಮಿಳು ಕಾವ್ಯಗಳನ್ನು ಅಗತ್ತಿಣೈ ಮತ್ತು ಪುಱತ್ತಿಣೈ ಎಂಬ ಎರಡು ಶೀರ್ಷಿಕೆಗಳ ಕೆಳಗೆ ವಿಂಗಡಿಸುತ್ತಾರೆ. ಅಗತ್ತಿಣೈ–ಪ್ರಣಯ ವಸ್ತುಗಳನ್ನು ನಿರೂಪಿಸುವ ಕಾವ್ಯಗಳು. ಪುಱತ್ತಿಣೈಯಲ್ಲಿ ವೀರ, ನೀತಿ, ತಾತ್ತ್ವಿಕ ಮತ್ತು ಲೌಕಿಕ ವಸ್ತುಗಳೆಲ್ಲವೂ ಅಡಕವಾಗಿವೆ. ಪುಱತ್ತಿಣೈಯಲ್ಲಿ ಪ್ರಣಯ ಕಾವ್ಯವಲ್ಲದೆ ಬೇರೆಲ್ಲವೂ ಸೇರಬಹುದು. ಅಗಮ್ ಎಂದರೆ ವ್ಯಕ್ತಿಯ ಅಂತರ್ಗತವಾದ ಭಾವನೆಯನ್ನು ವರ್ಣಿಸುವುದು.

ಪ್ರಣಯವು ಹೆಣ್ಣು ಗಂಡುಗಳ ನಡುವೆ ಮಾತ್ರ ಏರ್ಪಟ್ಟು ಅವರ ಅಂಗರ್ತತವಾದ ಸ್ವಕೀಯ ಭಾವನೆಗಳನ್ನ ಅಭಿವ್ಯಕ್ತಿಗೊಳಿಸುವುದು. ವೀರ, ನೀತಿ, ತಾತ್ತ್ವಿಕ ಹಾಗೂ ಲೌಕಿಕ ವಿಚಾರಗಳು ಸಾರ್ವತ್ರಿಕವಾದುವು. ಆದರಿಂದಲೇ ಅವನ್ನು ಪುಱಮ್ ಎಂದರೆ ಬಾಹ್ಯ ಎಂದು ಕರೆದರು.

ಪುಱಮ್ ಕಾವ್ಯಗಳಲ್ಲಿ ಮುಖ್ಯವಾಗಿ ವೀರವಸ್ತು ಪ್ರಧಾನವಾಗುಳ್ಳ ವಸ್ತುಗಳಲ್ಲಿ ಯುದ್ಧ ವರ್ಣನೆಗಳು ಬರುತ್ತವೆ, ಕೋಟೆ, ಬಯಲು ಸೀಮೆಗಳಲ್ಲಿ ಯುದ್ಧಗಳು ಸಂಭವಿಸುತ್ತವೆ. ಅದರಲ್ಲಿ ಕೋಟೆಗೆ ವಿಶೇಷವಾದ ಮಹತ್ವವಿದೆ. ಅರಸನ ಬಲವೆಲ್ಲ ಕೋಟೆ ಮತ್ತು ಸೈನ್ಯವನ್ನು ಅವಲಂಬಿಸಿರುತ್ತದೆ. ಇಲ್ಲಿ ಸಂಭಾಷಣೆಗಳಿಗೆ ಹೆಚ್ಚು ಅವಕಾಶವಿಲ್ಲ. ವರ್ಣನೆಗಳು ಪ್ರಧಾನ. ಇಲ್ಲಿ ಕವಿಯು ತನಗೆ ಬೇಕಾದ ತಂತ್ರವನ್ನು ಬಳಸಬಹುದು. 'ಆಱ್ಱುಪ್ಪಡೈ'[1] ಎಂಬ ಪುಱಮ್ ವಸ್ತುವಿನಲ್ಲಿ ಮಾತ್ರ ಸಂಭಾಷಣೆಗಳಿಗೆ ಅವಕಾಶವುಂಟು. ಇದರಲ್ಲಿ ಅರಸನಿಂದ ಉಪಕೃತನಾದ ಕವಿಯು, ಅವನ ವೀರ, ಪ್ರಣಯ, ಉದಾರಗುಣಗಳನ್ನೂ ಅವನ ನಗರ ವರ್ಣನೆಯನ್ನೂ ಸಂಭಾಷಣೆಯ ರೂಪದಲ್ಲಿ ಮತ್ತೊಬ್ಬ ಕವಿಗೆ ಹೇಳುವಂತೆ ಚಿತ್ರಿಸಲಾಗುವುದು. ಸಾಮಾನ್ಯವಾಗಿ ವಿಶ್ವದಲ್ಲಿ ಬಂದ ಕಾವ್ಯಗಳನ್ನೆಲ್ಲ ಈ ಎರಡು ವಿಭಾಗಗಳಲ್ಲಿ ಸೇರಿಸಿ ಬಿಡಬಹುದು. ತೊಲ್‌ಕಾಪ್ಪಿಯರ್ ಪ್ರಕಾರ ಅಗಮ್ ಮತ್ತು ಪುಱಮ್ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಈ ಕಲ್ಪನೆಯು ತೊಲ್‌ಕಾಪ್ಪಿಯರ್ ವಿಶ್ವದ ಕಾವ್ಯಮೀಮಾಂಸೆಗೆ ನೀಡಿದ ದೇಣಿಗೆಯೆನ್ನಬಹುದು.

**ಪ್ರಣಯ ಕಾವ್ಯಗಳು** (ಅಗಮ್).

ಪ್ರಣಯ ಕಾವ್ಯಗಳಲ್ಲಿಯೂ ತೊಲ್‌ಕಾಪ್ಪಿಯರ್ ಕಳವು ಮತ್ತು ಕಪ್ಪು್ ಎಂದು ಮತ್ತೆ ಎರಡು ವಿಧವಾಗಿ ವಿಭಜನೆ ಮಾಡಿದ್ದಾರೆ. ಕಳವು ಎಂದರೆ ರಹಸ್ಯ ಪ್ರಣಯ. ಇಲ್ಲಿ ಗಂಡು ಹೆಣ್ಣಿನ (ನಾಯಕ, ನಾಯಿಕೆಯರ) ವೈವಾಹಿಕ ಜೀವನಕ್ಕೆ ಪೂರ್ವದ ಪ್ರಣಯ ಭಾವನೆಗಳನ್ನು ವರ್ಣಿಸುತ್ತಾರೆ. ಕಪ್ಪು್–ಹೆಣ್ಣಿನ ಚಾರಿತ್ರ್ಯವನ್ನು ಕುರಿತಾದುದು. ಇಲ್ಲಿ ವಿವಾಹಾನಂತರದ ಪ್ರಣಯ ಜೀವನವು ವರ್ಣಿತವಾಗಿದೆ. ಕಳವಿನಲ್ಲಿ ನಾಯಕ ನಾಯಿಕೆಯರು ಒಂದು ಗೊತ್ತಾದ ಸ್ಥಳದಲ್ಲಿ ಯಾರಿಗೂ ತಿಳಿಯದಂತೆ ಸಂಧಿಸುವುದು, ಇವರ ಮಿಲನಕ್ಕೆ (ಕೂಟಕ್ಕೆ) ನಾಯಕೆಯ ಸಖಿಯು ಏರ್ಪಡಿಸುವುದು, ಇವರು ಸಂಧಿಸುವುದರ ರಹಸ್ಯವನ್ನು ಕಾಪಾಡಿಕೊಳ್ಳುವುದು, ಒಮ್ಮೆ ರಹಸ್ಯವು ಬಯಲಾಗುವ ಘಟ್ಟವನ್ನು ತಲುಪಿದಾಗ, ನಾಯಿಕೆಯ ಸಖಿ (ತೋೞಿ) ಅಥವಾ ಸಾಕುತಾಯಿ (ಶೆವ್ವಿಲಿತ್ತಾಯ್) ಇವರ ಸಹಾಯದಿಂದ, ತಂದೆ ತಾಯಿಯರೊಂದಿಗೆ ವಿವಾಹಕ್ಕೆ, ವ್ಯವಹರಿಸುವುದು ಇತ್ಯಾದಿ ವಿವರಗಳು ಬರುತ್ತವೆ. ಕಪ್ಪು್

1. ಇದನ್ನು ಆಟ್ರುಪ್ಪಡೈ ಎಂದು ಓದಿಕೊಳ್ಳಬೇಕು–ತಮಿಳಿನಲ್ಲಿ ಒತ್ತಕ್ಷರದ ಱ-ಟ್ರ ಎಂದು ಉಚ್ಚಾರಣೆಯಾಗುತ್ತದೆ.

ಏನಲ್ಲಿ ಏವಾಹ ತರುಣದ ಪ್ರಣಯಜೀವನ, ಸತಿಪತಿಯರ ಅಗಲಿಕೆ, ಇಲ್ಲವೆ ನಾಯಿಕೆಯು ಗರ್ಭವತಿಯಾದುದರಿಂದ ತನ್ನ ಕಾಮತೃಪ್ತಿಗಾಗಿ, ನಾಯಕನು ಮಾಡುವ ವೇಶ್ಯಾಸಂಗ, ಇದರಿಂದ ಅಥವಾ ನಾಯಕನು, ಕಾರ್ಯಾರ್ಥವಾಗಿ ವಿದೇಶ ಪ್ರಯಾಣ ಮಾಡುವುದರಿಂದ ಉಂಟಾಗುವ ಪ್ರಣಯದ ಮುನಿಸು (ಊಡಲ್)–ಇವು ಪ್ರಧಾನ ಸಂಗತಿಗಳಾಗಿರುತ್ತವೆ. ಕಪ್ಪು ಅಥವಾ ವೈವಾಹಿಕ ಜೀವನದ ಪ್ರಣಯದಲ್ಲಿ ಕಳವಿ ನಲ್ಲಿರುವಂತೆ ಮುಗ್ಧ ಪ್ರಣಯ ಭಾವನೆಗಳಿಂದ ಕೂಡಿರದೆ ಪ್ರಬುದ್ಧಾವಸ್ಥೆಯಲ್ಲಿರು ತ್ತದೆ. ಅದರ 'ಹಾದಿ ಅಷ್ಟು ಸುಗಮವಾಗಿರುವುದಿಲ್ಲ, ನಾಯಕ–ನಾಯಿಕೆಯರು ಪರಸ್ಪರ ನಿಕಟವಾಗಿರುವುದರಿಂದ, ವೈಮನಸ್ಸು, ಕಲಹಗಳು ಏರ್ಪಡುವುದು ಸ್ವಾಭಾವಿಕ.

ಕಳವಿನಲ್ಲಿ ನಾಯಕ, ನಾಯಿಕೆಯರು ಅಡಿಗಡಿಗೆ ರಹಸ್ಯವಾಗಿ ಸಂಧಿಸಿದರೂ ಅವರು ಪರಸ್ಪರ ಅರ್ಥಮಾಡಿಕೊಳ್ಳಲು, ಕಾಲಾವಕಾಶ ಹಿಡಿಯುತ್ತದೆ. ಸಮಾಗಮ ದಲ್ಲಿ ಭಾವನೆಗಳ ತೀವ್ರತೆಯಿಂದ, ನಿಕಟತೆಯನ್ನು ಅನ್ಯೋನ್ಯವಾಗಿ ಅನುಭವಿಸುವುದು ಕಷ್ಟ. ಏಕೆಂದರೆ, ಅವರು ಸದಾ ತಮ್ಮ ರಹಸ್ಯವನ್ನು ಕಾಪಾಡಿಕೊಳ್ಳುವ ಭೀತಿಯಿಂದ ಜಾಗ್ರತರಾಗಿರುತ್ತಾರೆ. ವೈವಾಹಿಕ ಜೀವನದಲ್ಲಿ ಹಾಗಿಲ್ಲ. ಅವರಿಗೆ ಸಮಾಜದ ಯಾವ ಭೀತಿಯೂ ಇರುವುದಿಲ್ಲ. ದಂಪತಿಗಳು ಸದಾ ಒಟ್ಟಿಗೆ ನೆಲಸುವುದರಿಂದ ಹೆಚ್ಚು ಅನ್ಯೋನ್ಯತೆಯಿಂದ ತಮ್ಮ ಪ್ರೇಮವನ್ನು ಅನುಭವಿಸಬಹುದು. (ತೊಲ್. ಸೂತ್ರ. ೧೪೪.)

ಅಗವ್ ಕಾವ್ಯಗಳಲ್ಲಿ ಬರುವ ಕಳವಿನಲ್ಲಿ ನಾಯಕ, ನಾಯಿಕೆಯರು ಏಕಾಂತದಲ್ಲಿ ಸಂಧಿಸುವಾಗ, ದೈಹಿಕ ಸಂಪರ್ಕಕ್ಕೆ ಎಡೆಕೊಡುತ್ತಾರೊ ಇಲ್ಲವೊ ಎಂಬುದು ತೊಲ್‌ಕಾಪ್ಪಿಯರ್ ಸೂತ್ರಗಳಿಂದ ತಿಳಿಯುವುದು ಕಠಿಣ. ಅವರ ಸೂತ್ರಗಳು ಎರಡು ರೀತಿಯಲ್ಲಿಯೂ ಅರ್ಥೈಸುವಂತೆ ಇರುತ್ತವೆ. ಆದರೆ ಸಂಗಕಾಲದಲ್ಲಿ ಬಂದ ಕೆಲವು ಪ್ರಣಯ ಕಾವ್ಯಗಳನ್ನು ಪರಿಶೀಲಿಸಿದಾಗ, ವಿವಾಹಪೂರ್ವ ದೈಹಿಕ ಸಂಪರ್ಕಕ್ಕೆ ಅವಕಾಶವಿರುವುದು ತಿಳಿದುಬರುತ್ತದೆ.

ಅಗವ್ ಕಾವ್ಯದಲ್ಲಿ ಬರುವ ಪಾತ್ರಗಳನ್ನು ಕುರಿತು ತೊಲ್‌ಕಾಪ್ಪಿಯರ್ ತಮ್ಮ ಸೂತ್ರಗಳಲ್ಲಿ ಚರ್ಚಿಸಿದ್ದಾರೆ. ಮುಖ್ಯವಾಗಿ ಬರುವ ಪಾತ್ರಗಳೆಂದರೆ, ಬ್ರಾಹ್ಮಣರು, ನಾಯಕ (ತಲೈವನ್), ನಾಯಿಕೆ (ತಲೈವಿ), ನಾಯಿಕೆಯ ಸಖಿ (ತೋೞಿ), ಸಾಕು ತಾಯಿ, (ಶೆವ್ವಿಲಿತ್ತಾಯ್), ಈ ಪಾತ್ರಗಳು ಮಾತ್ರ ಸಂಭಾಷಣೆ ಯಲ್ಲಿ ಭಾಗವಹಿಸಬೇಕು. ಪಾತ್ರಗಳು ಸಂಭಾಷಿಸಬೇಕಾದ ಸಂದರ್ಭಗಳನ್ನು ಕುರಿತು ಅವರು ನಿಯಮಗಳಿಗೊಳಪಡಿಸಿದ್ದಾರೆ. ನಾಯಕ, ನಾಯಿಕೆಯರ ಅರ್ಹತೆಯನ್ನು ಕುರಿತು ವಿವರವಾಗಿ ಚರ್ಚಿಸಿದ್ದಾರೆ. ನಾಯಕ ನಾಯಿಕೆಯರು ಮೇಲುವರ್ಗದವ ರಾಗಿರಬೇಕು. ಆನುವಂಶಿಕತೆ, ಚಾರಿತ್ರ್ಯ, ಪೌರುಷ, ವಯಸ್ಸು (ಹದಿನಾರು

ತುಂಬಿರಬೇಕು), ರೂಪ, ಪ್ರೇಮ, ನಮ್ರತೆ, ಪ್ರಸನ್ನಗುಣ, ಬುದ್ಧಿ ಚಾತುರ್ಯ, ಮತ್ತು ಐಶ್ವರ್ಯ–ಈ ಹತ್ತುಗುಣಗಳಿರಬೇಕು. ಅಸೂಯೆ, ಕ್ರೌರ್ಯ, ಗರ್ವ, ಹಿಂದಿನಿಂದ ಆಡಿಕೊಳ್ಳುವುದು, ಕಟುಮಾತು, ಅಸಂಧಿಗ್ಧತೆ, ಆಲಸ್ಯ, ವಂಶವನ್ನು ನೆನೆದು ಅಹಂಕಾರ ಪಡುವುದು, ಕೀಳರಿಮೆ, ಬಡತನ, ಮರೆವು, ಅಸಂಭವ ಪ್ರಣಯ –ಈ ಹನ್ನೆರಡು ಅವಗುಣಗಳಿರಬಾರದು.

ಕಪ್ಪುರ್ ಅಥವಾ ವೈವಾಹಿಕ ಜೀವನದಲ್ಲಿ ನಾಯಕ, ನಾಯಿಕೆಯರ ಪ್ರಣಯದಲ್ಲಿ ಕಲಹ, ವೈಮನಸ್ಸುಗಳು ಉಂಟಾಗುವುದರಿಂದ ಈ ರೀತಿ ಪ್ರಣಯ ಕಲಹಗಳು ಏರ್ಪಡಲು ಇರುವ ಕಾರಣಗಳನ್ನು ಕುರಿತು ತೊಲ್‌ಕಾಪ್ಪಿಯರ್ ವಿಶದಪಡಿಸಿದ್ದಾರೆ.

೧. ನಾಯಿಕೆಯು ಗರ್ಭಧಾರಣೆ ಮಾಡಿರುವುದರಿಂದ, ನಾಯಕನ ಕಾಮೇಚ್ಛೆಯನ್ನು ತೀರಿಸಲಶಕ್ತಳಾದಾಗ, ನಾಯಕನು ವೇಶ್ಯೆಯ ಸಂಗ ಮಾಡುವುದರಿಂದ ಈ ವೇಶ್ಯೆಯರಲ್ಲಿ ಎರಡು ಬಗೆ, ನಾಯಕನ ಕಾಮೇಚ್ಛೆಯನ್ನು ಪೂರೈಸುವುದಲ್ಲದೆ ಅವನನ್ನೆ ನಂಬಿಕೊಂಡು ಬಾಳುವ ಕಾಮುಕ್ಕಿಳತ್ತಿಯರು ಮತ್ತು ಹಣಕ್ಕಾಗಿ ದೇಹಸುಖ ನೀಡುವ–ಪರತ್ತೈಯರು. ನಾಯಕನಿಗೆ ಒಬ್ಬಳಿಗಿಂತ ಹೆಚ್ಚು ಮಂದಿ ವೇಶ್ಯೆಯರು ಇರಬಹುದು.

೨. ನಾಯಕನು ವಿವಾಹಾನಂತರ ತನ್ನ ಉನ್ನತ ಶಿಕ್ಷಣಕ್ಕಾಗಿ ವಿದೇಶ ಪ್ರವಾಸ ಮಾಡುವುದರಿಂದ,

೩. ತನ್ನ ದೇಶಕ್ಕೂ ಪರದೇಶಕ್ಕೂ ಯುದ್ಧ ಏರ್ಪಟ್ಟಾಗ ರಾಯಭಾರಿಯಾಗಿ ಹೋಗುವ ಇಚ್ಛೆ ತೋರುವುದರಿಂದ,

೪. ತನ್ನ ಐಶ್ವರ್ಯವನ್ನು ವೃದ್ಧಿಪಡಿಸಲು ಬೇರೆ ದೇಶಗಳಿಗೆ ಧನಾರ್ಜನೆಗೆ ಹೋಗುವುವರಿಂದ.

ಈ ರೀತಿ ಏರ್ಪಟ್ಟ ತಾತ್ಕಾಲಿಕವಾಗಿದ್ದರೆ 'ಪುಲವಿ' ಯೆಂದೂ ದೀರ್ಘಕಾಲದ್ದಾಗಿದ್ದರೆ, 'ಊಡಲ್' ಎಂದೂ ಕರೆದಿದ್ದಾರೆ. ಸಾಮಾನ್ಯವಾಗಿ ಇಂಥ ಕಲಹಗಳಿಗೆ ನಾಯಕನೆ ಮೂಲಕಾರಣನಾಗಿರುತ್ತಾನೆ. ಆದರೆ ಕಲಹವು ಆರಂಭವಾಗುವುದು ನಾಯಿಕೆಯಿಂದ. ಈ ರೀತಿ ಏರ್ಪಟ್ಟ ವೈಮನಸ್ಸನ್ನು ಬಗೆಹರಿಸಲು, ಸಖಿಯು ಮಧ್ಯೆ ಪ್ರವೇಶಿಸಬಹುದು. ಇಲ್ಲವೆ ನಾಯಕನಸಂಗಮಾಡಿದ ವೇಶ್ಯೆಯೇ ಕಾರಣಳಾಗಬಹುದು. ಮೇಲೆ ತಿಳಿಸಿದ ಸಂಧಾನದಿಂದ, ನಾಯಕ, ನಾಯಿಕೆಯರ ಮುನಿಸು ಪರಿಹಾರವಾಗಿ ಮತ್ತೆ ತಮ್ಮ ಅಂತರಂಗವನ್ನು ತಿಳಿಯಾಗಿಸಿ, ಸರಸ ದಾಂಪತ್ಯಕ್ಕೆಡೆಗೊಟ್ಟರೆ ಅಂಥ ಸಂದರ್ಭವನ್ನು 'ಉಣರಾಡಲ್' ಎಂದು ಕರೆದಿದ್ದಾರೆ.

ಸಂಸ್ಕೃತ ಕಾವ್ಯಗಳಲ್ಲಿ ಕೂಡ ಪ್ರಣಯದಲ್ಲಿ ವೈಮನಸ್ಸು ಅಸಮಾಧಾನಗಳು ಏರ್ಪಡುವುದನ್ನು ಸಾಮಾನ್ಯವಾಗಿ ಚಿತ್ರಿಸಲಾಗಿದ್ದರೂ ಅದನ್ನು ಹಲವು ಮುಖಗಳಲ್ಲಿ

ವಿಭಜನೆ ವಿಶ್ಲೇಷಿಸಿರುವುದು ತಮಿಳು ಕಾವ್ಯ ಸಂಪ್ರದಾಯದ ಪ್ರತ್ಯೇಕ ಗುಣವಾಗಿದೆ.

ಕಾವ್ಯವಸ್ತುವನ್ನು ವಿಭಜಿಸುವಾಗ ತೊಲ್‌ಕಾಪ್ಪಿಯರ್ ಮತ್ತೆ ಮೂರು ಸ್ಥೂಲವಾದ ವಿಭಾಗಗಳನ್ನು ತರುತ್ತಾರೆ. ಅವೆಂದರೆ, ೧. ಮುದಲ್‌ಪ್ಪೊರುಳ್. ೨. ಕರುಪ್ಪೊರುಳ್ ೩. ಉರಿಪ್ಪೊರುಳ್. **ಮುದಲ್‌ಪ್ಪೊರುಳ್** ಕಾಲ ಮತ್ತು ದೇಶವನ್ನು ಕುರಿತಾದುದು. ಯಾವ ವಸ್ತುವೇ ಆಗಲಿ ಕಾಲ-ದೇಶಗಳ ಪರಧಿಗೊಳ ಪಟ್ಟಿರುತ್ತದೆ. ತಮಿಳು ಪ್ರಾಚೀನ ಕಾವ್ಯಸಂಪ್ರದಾಯದಲ್ಲಿ ದೇಶವನ್ನು ಐದು ಭಾಗಗಳಾಗಿ ವಿಂಗಡಿಸಿ ಐನ್ದಿಣೈ ಎಂದು ಕರೆದಿದ್ದಾರೆ.

೧. ಮುಲ್ಲೆ – ದಟ್ಟವಾದ ಕಾಡು ಅಥವಾ ಸಸ್ಯಪ್ರದೇಶ
೨. ಕುಱಿಂಜಿ – ಬೆಟ್ಟಗುಡ್ಡಗಳಿಂದ ಆವೃತವಾದ ಮಲೆನಾಡು
೩. ಮರುದಮ್ – ಬಯಲು ಸೀಮೆ
೪. ನೆಯ್ದಲ್ – ಕಡಲು ಅಥವಾ ನದೀತೀರ
೫. ಪಾಲೈ – ಬಂಜರು ಅಥವಾ ಮರಳುಗಾಡು

ಈ ಐದು ವಿಭಜನೆಗೆ ಸೂಚಿಸಿರುವ ಹೆಸರುಗಳು ಆಯಾ ಪ್ರದೇಶಗಳಲ್ಲಿ ಬೆಳೆಯುವ ಹೂಗಳ ಹೆಸರುಗಳು. **ಕರುಪ್ಪೊರುಳ್**, ದೇವತೆಗಳು, ಮಾನವರು, ಪ್ರಾಣಿಗಳು, ಸಸ್ಯಗಳು ಮೊದಲಾದವುಗಳ ವರ್ಣನೆಯಿಂದ ಕೂಡಿರುತ್ತದೆ. ಇವು ಮೇಲೆ ಹೇಳಿದ ಐದು ಪ್ರದೇಶಗಳನ್ನು ಹೊಂದಿಕೊಂಡಿರುತ್ತವೆ. **ಉರಿಪ್ಪೊರುಳ್** ಇದನ್ನು ಕುರಿತು ತೊಲ್‌ಕಾಪ್ಪಿಯರ್ ಸರಿಯಾದ ವಿವರಣೆ ನೀಡಿಲ್ಲವಾದರೂ ಆಯಾ ಪಾತ್ರ ಗಳ ಮಾನಸಿಕ ಓನ್ನೆಲೆ ಸ್ವಭಾವಗಳನ್ನು ಅನುಸರಿಸಿ ಬರುವ ವರ್ಣನೆ ಇರುತ್ತದೆ ಎಂಬುದು ವ್ಯಾಖ್ಯಾನಗಳಿಂದ ತಿಳಿಯುತ್ತದೆ. ಅವು ಯಾವುವೆಂದರೆ.

೧. ಇರುತ್ತಲ್ – ನಾಯಕ ನಾಯಿಕೆಯರು ಒಬ್ಬರಿಗೊಬ್ಬರು ಕಾತರದಿಂದ ನಿರೀಕ್ಷಿಸುವುದು
೨. ಪುಣರ್‌ಚ್ಚಿ – ನಾಯಕ, ನಾಯಿಕೆಯರ ಸಮಾಗಮ (ಸಂಭೋಗ ಶೃಂಗಾರ)
೩. ಊಡಲ್ – ಪ್ರಣಯದ ಮುನಿಸು
೪. ಪಿರಿದಲ್ ನಾಯಕ ನಾಯಿಕೆಯರ ತಾತ್ಕಾಲಿಕ ವಿರಹ
೫. ಇರಂಗಲ್ – ನಾಯಕ ನಾಯಿಕೆಯರ ಮನಸ್ಸು ತಿಳಿಯಾಗಿ ನಡೆದ ಸಂಗತಿಗಳಿಗೆ ಪಶ್ಚಾತ್ತಾಪಪಡುವುದು

ಮೇಲೆ ತಿಳಿಸಿದ ಮುಲ್ಲೈ ಮೊದಲಾದ ಐದು ಭಾಗಗಳಲ್ಲದೆ ಕೈಕ್ಕಿಳೈ ಮತ್ತು ಪೆರುನ್ದಿಣೈಗಳೆಂಬ ಮತ್ತೆರಡು ಭಾಗಗಳನ್ನು ತೊಲ್‌ಕಾಪ್ಪಿಯರ್ ಹೆಸರಿಸುತ್ತಾರೆ. ಮುಲ್ಲೈಯಿಂದ ಪಾಲೈವರೆಗಿನ ಭಾಗಗಳಲ್ಲಿ ಯೋಗ್ಯ ನಾಯಕ, ನಾಯಿಕೆಯರ ಪ್ರಣ ಯದ ಪ್ರಸ್ತಾಪವಿದ್ದರೆ, ಕೈಕ್ಕಿಳೈಯು ನಾಯಕನ ಏಕಮುಖ ಪ್ರಣಯವನ್ನು

ಪೆರುನ್ದಿಣೈಯು ಬಲಾತ್ಕಾರ ಪ್ರೇಮ ಅಥವಾ ಅನುಚಿತವಾದ ಪ್ರೇಮವನ್ನು (ಅಪ್ರಬುದ್ಧರ ನಡುವೆ, ಇಲ್ಲವೆ ಮೇಲು-ಕೀಳುವರ್ಗದ ನಡುವೆ) ವಿವರಿಸುತ್ತದೆ. ಕಾವ್ಯಗಳಲ್ಲಿ ಸಾಮಾನ್ಯವಾಗಿ ಕೈಕ್ಕಿಳೈ ಮತ್ತು ಪೆರುನ್ದಿಣೈ, ಕವಿಗಳಿಗಾಗಲೀ, ಸಹೃದಯರಿಗಾಗಲಿ, ಇಷ್ಟವಾಗದ ವಸ್ತುಗಳು. ಅದರಿಂದ ಕಾವ್ಯದಲ್ಲಿ ಇವು ಬರುವುದು ಅಪರೂಪ. ತೊಲ್‌ಕಾಪ್ಪಿಯರ್ ಇವುಗಳನ್ನು ಕುರಿತು ಹೇಳಿರುವುದು ಕಾವ್ಯ ಪದ್ಧತಿಯನ್ನು ಪೂರ್ಣಗೊಳಿಸುವುದಕ್ಕಾಗಿ.

**ಪ್ರಕೃತಿ ವರ್ಣನೆ**

ಅಗವಮ್ ಕಾವ್ಯಗಳಲ್ಲಿ ನಿಸರ್ಗವನ್ನು ಮಾನವ ಸ್ವಭಾವದ ಹಿನ್ನೆಲೆಯಾಗಿಟ್ಟುಕೊಂಡು ಚಿತ್ರಿಸುವುದು ಕಂಡುಬರುತ್ತದೆ. ಮಾನವ ಸ್ವಭಾವಗಳಿಗೆ ಪ್ರಕೃತಿ ವರ್ಣನೆಯು ಪೂರ್ವ ಸಿದ್ಧತೆಯನ್ನು ಸೃಷ್ಟಿಸಿದಾಗ ಮಾತ್ರ ಅದರ ಸಾರ್ಥಕತೆ ವ್ಯಕ್ತವಾಗುವುದು. ಪ್ರಕೃತಿ ವರ್ಣನೆಯನ್ನು ಬಲವಂತವಾಗಿ ನಡುವೆ ತುರುಕಿದರೆ ಕಾವ್ಯ ಸೌಂದರ್ಯವು ತನ್ನ ಕಾಂತಿಯನ್ನು ಕಳೆದುಕೊಂಡು ಕಾವ್ಯವು ನಿಸ್ತೇಜವಾಗುತ್ತದೆ. ಅದರಿಂದಲೆ ಕಾವ್ಯವಸ್ತುವಿನಲ್ಲಿ ಬರುವ ಪ್ರದೇಶಗಳನ್ನು ಮುಲ್ಲೈ ಮೊದಲಾಗಿ ಐದು ಭಾಗಗಳಾಗಿ ವಿಭಜಿಸಿ, ಆಯಾ ಪ್ರದೇಶಗಳಲ್ಲಿ ವಾಸಿಸುವ ಜನರ ಮತ್ತು ಆ ಪ್ರದೇಶಗಳ ಭೌಗೋಳಿಕ ಸ್ವರೂಪವನ್ನು ಗಮನದಲ್ಲಿಟ್ಟುಕೊಂಡು ಪ್ರಕೃತಿ ವರ್ಣನೆಯು ಸಂಗ ಕಾಲದ ಕಾವ್ಯಗಳಲ್ಲಿ ಮೂಡಿಬಂದಿದೆ.

**ಭಾವ ವಿಭಾವಾದಿಗಳು (ಮೆಯ್‌ಪ್ಪಾಡು)**

ತೊಲ್‌ಕಾಪ್ಪಿಯರ್ ಹೇಳುವ ಮೆಯ್‌ಪ್ಪಾಡು ಎಂಬ ಶಬ್ದಕ್ಕೆ ದೈಹಿಕವಾಗಿ ಕಾಣಿಸಿಕೊಳ್ಳುವ ಪ್ರತಿಕ್ರಿಯೆ ಎಂದು ಅರ್ಥ. ಇದು ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಪ್ರಸಿದ್ಧವಾಗಿರುವ ಭಾವ ವಿಭಾವಾದಿಗಳಿಗೆ ಸಮಾನ ಪದ. ಭರತನು ಮುಖ್ಯವಾಗಿ ಐದು ಬಗೆಯ ಭಾವಗಳನ್ನು ಹೆಸರಿಸುತ್ತಾನೆ. ಇವು ವಿಭಾವ, ಅನುಭಾವ, ವ್ಯಭಿಚಾರಿ ಅಥವಾ ಸಂಚಾರಿಭಾವ, ಸಾತ್ವಿಕಭಾವ ಮತ್ತು ಸಾತ್ವಿಕ ಭಾವಗಳು. ಸಂಸ್ಕೃತದಲ್ಲಿ ಈ ಭಾವಗಳು ರಸಸಿದ್ಧಾಂತದೊಂದಿಗೆ ನಿಕಟವಾಗಿ ಸೇರಿಕೊಂಡಿವೆ. ರಸ ಕಲ್ಪನೆಗೆ ಇಂಬು ಕೊಡುವುದರಲ್ಲಿಯೇ ಭಾವಗಳ ಮಹತ್ವವಿರುವುದನ್ನು ಭರತನೂ ನಿರೂಪಿಸಿದ್ದಾನೆ. ತನ್ನ ರಸಸೂತ್ರದಲ್ಲಿ ವಿಭಾವ, ಅನುಭಾವ, ಸಂಚಾರಿಭಾವ. ಸಾತ್ವಿಕ ಭಾವಗಳಿಂದ ಉದ್ದೀಪನಗೊಂಡ ಸ್ಥಾಯಿಭಾವವೇ ರಸ ಎಂದು ಹೇಳಿದ್ದಾನೆ. ಈ ಸ್ಥಾಯಿ ಭಾವಗಳು ಸುಸಂಸ್ಕೃತ ಸಹೃದಯನ ಮನಸ್ಸಿನಲ್ಲಿ ನೆಲೆಸಿರುತ್ತವೆ. ಅವು ದೃಶ್ಯ ಅಥವಾ ಕಾವ್ಯಗಳ ಆಸ್ವಾದನೆಯಲ್ಲಿ ವಿಭಾವಾದಿಗಳಿಂದ ಸಂಚಲನ ಹೊಂದಿ, ವಿಸ್ತರಿತವಾಗಿ ಉದ್ದೀಪನಗೊಂಡು ರಸರೂಪದಲ್ಲಿ ಹರಿಯುತ್ತವೆ. ರಸವು ಈ ಭಾವಗಳ ಪ್ರಕಟಣೆ ಮಾತ್ರ.

ತೊಲ್‌ಕಾಪ್ಪಿಯರ್ ಹೇಳುವ ಮೆಯ್‌ಪ್ಪಾಡು ಕೂಡ ಸಂಸ್ಕೃತದ ವಿಭಾವಾದಿ ಭಾವಗಳನ್ನೆಲ್ಲ ಒಳಗೊಂಡಿರುವಂತೆ ಕಾಣುತ್ತದೆ. ತೊಲ್‌ಕಾಪ್ಪಿಯಮ್‌ನಲ್ಲಿ

ಮೂವತ್ತೆರಡು ಮೆಯ್‌ಪ್ಪಾಡುಗಳ ದೊಡ್ಡ ಪಟ್ಟಿಯೇ ಇದ್ದರೂ ಮುಖ್ಯವಾಗಿ ಎಂಟು ಬಗೆಯ ಮೆಯ್‌ಪ್ಪಾಡುಗಳನ್ನು ತಮ್ಮ ೨೪೭ನೆಯ ಸೂತ್ರದಲ್ಲಿ ಹೆಸರಿಸಿದ್ದಾರೆ. ಅವೆಂದರೆ ೧. ನೆಗೈ (ಹಾಸ್ಯ), ೨. ಅಳುಗೈ (ಕರುಣ), ೩. ಇಳಿವರಲ್ (ಬೀಭತ್ಸ) ೪. ಮರುಟ್‌ಕೈ (ಅದ್ಭುತ) ೫. ಅಚ್ಚಮ್ (ಭಯಾನಕ) ೬, ಪೆರುಮಿದಮ್ (ವೀರ) ೭. ವೆಗುಳಿ (ರೌದ್ರ) ೮. ಉವಗೈ (ಶೃಂಗಾರ). ತೊಲ್‌ಕಾಪ್ಪಿಯರ್ ಈ ಮೆಯ್‌ಪ್ಪಾಡುಗಳನ್ನು ಸಂಸ್ಕೃತದಲ್ಲಿರುವ ಇದೇ ಹೆಸರಿನ ರಸಗಳಿಗೆ ಸಂವಾದಿಯಾಗಿ ಬಳಸುತ್ತಾರೆ ಅಥವಾ ಸ್ಥಾಯಿಭಾವಗಳಿಗೂ ಎಂಬುದು ಸ್ಪಷ್ಟವಾಗಿಲ್ಲ. ಭರತನು ಹೇಳಿರುವ ಎಂಟು ರಸಗಳಿಗೂ ಇವುಗಳಿಗೂ ಹೋಲಿಕೆ ಇದ್ದರೂ ಅವರು ಹೇಳಿರುವ ಕ್ರಮದಲ್ಲಿಯೂ ವ್ಯತ್ಯಾಸವಿದೆ. ಭರತನು ಶೃಂಗಾರ, ಹಾಸ್ಯ ಕರುಣ, ಬೀಭತ್ಸ, ವೀರ, ಭಯಾನಕ, ಅದ್ಭುತ, ರೌದ್ರ ಎಂಬ ಅನುಕ್ರಮದಲ್ಲಿ ಹೇಳಿದ್ದಾನೆ. ಮೆಯ್‌ಪ್ಪಾಡುಗಳಿಗೂ ರಸಕ್ಕೂ ಸಂಬಂಧವಿದೆಯೇ ಎಂಬುದು ಅವರ ಸೂತ್ರಗಳಿಂದ ಸ್ಪಷ್ಟವಾಗುವುದಿಲ್ಲ. ಅಲ್ಲದೆ ಈ ಮೆಯ್‌ಪ್ಪಾಡುಗಳು ಸಾಂದರ್ಭಿಕವೆ ಹೊರತು ಸರ್ವತ್ರವಲ್ಲ ಎಂದು ತೊಲ್‌ಕಾಪ್ಪಿಯರ್ ಹೇಳುತ್ತಾರೆ. ಈ ಎಂಟು ಮೆಯ್‌ಪ್ಪಾಡುಗಳನ್ನು ಮತ್ತೆ ವಿಸ್ತರಿಸಿ ಮೂವತ್ತೆರಡು ಹೆಸರುಗಳನ್ನು ಹೇಳುತ್ತಾರೆ. ಕಳವು ಅಥವಾ ರಹಸ್ಯ ಪ್ರಣಯದ ನಾಯಕ ನಾಯಿಕೆಯರ ಭಾವಗಳೇ ಬೇರೆ ಕಪ್ಪು ಅಥವಾ ವೈವಾಹಿಕ ಪ್ರಣಯದ ನಾಯಕ ನಾಯಿಕೆಯರ ಭಾವಗಳೇ ಬೇರೆ ಎಂದು ಹೇಳಿರುವುದರಿಂದ, ಸಂಸ್ಕೃತದ ಭಾವ ವಿಭಾವಾದಿಗಳಿಗೆ ಮೆಯ್‌ಪ್ಪಾಡು ಸಂವಾದಿಯಲ್ಲ ಎಂಬ ಅಭಿಪ್ರಾಯವೂ ಇದೆ. ತೊಲ್‌ಕಾಪ್ಪಿಯರ್ ಈ ರೀತಿ ವಿಭಜಿಸಿ ಹೇಳಿರುವುದು ಈ ಎಂಟು ಮೆಯ್‌ಪ್ಪಾಡುಗಳನ್ನು ಉದ್ದೀಪನಗೊಳಿಸಲು ಪ್ರೇರಕವಾಗುವ ಕಾವ್ಯ ಸನ್ನಿವೇಶಗಳಷ್ಟೆ ಹೊರತು ಅವೇ ಮೆಯ್‌ಪ್ಪಾಡುಗಳು ಎಂದು ಸಿದ್ಧಾಂತ ಪಡಿಸುವುದು ಕಷ್ಟ. ತೊಲ್‌ಕಾಪ್ಪಿಯರ್ ಹೇಳಿರುವ ಮೂವತ್ತೆರಡು ಮೆಯ್‌ಪ್ಪಾಡುಗಳಲ್ಲಿ ಕೆಲವು ಮಾತ್ರ ಸಂಸ್ಕೃತದಲ್ಲಿ ಸಾಮಾನ್ಯವಾಗಿ ಹೆಸರಿಸುವ ಮೂವತ್ತುನಾಲ್ಕು ವ್ಯಭಿಚಾರಿ ಭಾವಗಳಲ್ಲಿ ಕೆಲವಕ್ಕೆ ಹೋಲುತ್ತವೆ. ಉಳಿದವುಗಳ ಪಾತ್ರವೇನೆಂಬುದು ಸ್ಪಷ್ಟವಾಗಿಲ್ಲ.

## ಉಪಮಾಲಂಕಾರ (ವುವಮೈ)

ತೊಲ್‌ಕಾಪ್ಪಿಯರ್ ಉಪಮೈಯನ್ನು ಕುರಿತು ಪೊರುಳಧಿಕಾರದಲ್ಲಿ ಒಂದು ಅಧ್ಯಾಯವನ್ನೆ ಮೀಸಲಾಗಿಟ್ಟಿರುವುದು, ಅವರು ಅದಕ್ಕೆ ನೀಡಿರುವ ಮಹತ್ತ್ವವನ್ನು ಸೂಚಿಸುತ್ತದೆ. ಅಲ್ಲದೆ ಅವರು ಬೇರಾವ ಅಲಂಕಾರಗಳನ್ನು[2] ಹೆಸರಿಸದಿರವುದೂ ಕುತೂಹಲಕಾರಿಯಾಗಿದೆ. ಸಂಗಕಾಲದ ಸಾಹಿತ್ಯದಲ್ಲಿ ಉಪಮೆಯಲ್ಲದೆ ರೂಪಕಾದಿ

2. ಅಲಂಕಾರಗಳಿಗೆ ತಮಿಳಿನಲ್ಲಿ ಅಣಿ ಎಂದು ಹೇಳುತ್ತಾರೆ.

ಬೇರೆ ಬೇರೆ ಅಲಂಕಾರಗಳೂ ಬಂದಿವೆ. ಕಾವ್ಯದಲ್ಲಿ ಹಲವು ಅಲಂಕಾರಗಳಿದ್ದರೂ ಅವು ನೇರವಾಗಿಯೋ ಸೂಚ್ಯವಾಗಿಯೋ ಉಪಮೆಯನ್ನೆ ಮೂಲಭೂತವಾಗಿಟ್ಟು ಕೊಂಡು ಸೃಷ್ಟಿಯಾದವು. ಆದರಿಂದಲೆ, ತೊಲ್‌ಕಾಪ್ಪಿಯರ್, ಉಳಿದ ಅಲಂಕಾರ ಗಳ ಬಗ್ಗೆ ಮೌನ ವಹಿಸಿರಬಹುದೆಂದು ಕೆಲವು ವಿದ್ವಾಂಸರ ಮತ.

ಉಪಮೈ ಎಂಬ ಶಬ್ದವನ್ನು ಉಪಮಾನ, ಉಪಮೇಯಗಳೆರಡಕ್ಕೂ ಅವರು ಬಳಸಿರುವುದು ಕಂಡು ಬರುತ್ತದೆ. ಸಂದರ್ಭಕ್ಕನುಸಾರವಾಗಿ ಅದನ್ನು ಅರ್ಥೈಸ ಬೇಕಾಗುತ್ತದೆ. ಉಪಮೈಯು ಕ್ರಿಯೆ, ಪರಿಣಾಮ, ಸ್ವಭಾವ, ಮತ್ತು ವರ್ಣಗ ಳೆಂಬ ನಾಲ್ಕು ಸೂತ್ರಗಳನ್ನು ಅವಲಂಬಿಸಿದೆ ಎಂದು ತೊಲ್‌ಕಾಪ್ಪಿಯರ್ ೨೭೨ನೆಯ ಸೂತ್ರದಲ್ಲಿ ಹೇಳಿದ್ದಾರೆ. ಒಬ್ಬ ಯೋಧನು ಹುಲಿಯಂತಿದ್ದಾನೆ ಎನ್ನುವಾಗ ಹುಲಿಯ ಮತ್ತು ಯೋಧನ ಕ್ರಿಯೆಯನ್ನು ಹೇಳಿದಂತಾಯಿತು. ಹುಲಿಯಂತೆ ವೇಗವಾಗಿ, ಧೈರ್ಯವಾಗಿ ನಡೆದುಕೊಳ್ಳಬಲ್ಲನು ಎಂಬುದು ಇದರ ತಾತ್ಪರ್ಯ. ಇಲ್ಲಿ ಕ್ರಿಯೆ ಪ್ರಧಾನವಾಗುತ್ತದೆ. ಒಬ್ಬ ದಾನಿಯ ಕರಗಳನ್ನು ನಿರಂತರ ಧಾರೆಯಾಗಿ ಸುರಿಯುವ ವರ್ಷಕ್ಕೆ ಹೋಲಿಸುವಾಗ, ದಾನಿಯ ಕರಗಳ ಉದಾರತೆಯೂ ಮಳೆಯ ಪರಿಣಾಮವೂ ಒಂದೇ ಎಂಬುದು ವ್ಯಕ್ತವಾಗುತ್ತದೆ. ಅಂದರೆ ಪರೋಪಕಾರ ಮಾಡುವುದು. ಇಲ್ಲಿ ಪರಿಣಾಮ ಮುಖ್ಯ. ಅದೇ ರೀತಿ ಹೆಣ್ಣಿನ ಕಟಿಯನ್ನು ಢಮರುಕಕ್ಕೆ ಹೋಲಿಸು ವಾಗ ಆ ಎರಡು ವಸ್ತುಗಳ ಸ್ವರೂಪ ವಿನ್ಯಾಸ, ಸ್ವಭಾವ ಒಂದೇ ಎಂದು ತಿಳಿಯು ತ್ತದೆ. ಇಲ್ಲಿ ಸ್ವಭಾವ ಮುಖ್ಯ. ಕೊನೆಯದಾಗಿ ಹೆಣ್ಣಿನ ಶರೀರವು ಹೊನ್ನಿನಂತಿದೆ ಎಂದು ಹೇಳುವಾಗ, ಹೊನ್ನಿನ ಕಾಂತಿ ಮತ್ತು ಬಣ್ಣ ಹೆಣ್ಣಿನ ಅಂಗ ಲಾವಣ್ಯದ ಬಣ್ಣ ಮತ್ತು ಕಾಂತಿ ಒಂದೇ ರೀತಿ ಇವೆ ಎಂದು ಸ್ಫುರಿಸುತ್ತದೆ. ಇಲ್ಲಿ ಬಣ್ಣ ಮುಖ್ಯ ತೊಲ್‌ಕಾಪ್ಪಿಯರ್ ಪ್ರಕಾರ ಈ ನಾಲ್ಕು ಜಾತಿಯ ಉಪಮೈಗಳು ಒಂದೇ ಪದ್ಯ ಅಥವಾ ಕಾವ್ಯದಲ್ಲಿ ಇರಬಹುದು, ಬೇರೆ ಬೇರೆಯಾಗಿಯೂ ವ್ಯಕ್ತವಾಗಬಹುದು.

ಸೂತ್ರ ೨೭೫–೨೭೬ ರಲ್ಲಿ ತೊಲ್‌ಕಾಪ್ಪಿಯರ್ ಉಪಮೈಗಳು ಸೃಷ್ಟಿ ಯಾಗಲು ಮತ್ತೆ ಐದು ಬಗೆಯ ಕಾರಣಗಳನ್ನು ಹೇಳುತ್ತಾರೆ. ಮೇಲ್ಮೆ, ಸೌಂದರ್ಯ ಪ್ರೇಮ, ಶೌರ್ಯ, ಮತ್ತು ಕೀಳ್ತನಗಳೇ ಆ ಐದು ಕಾರಣಗಳು. ಮೊದಲು ಹೇಳಿದ ನಾಲ್ಕು ಬಗೆಗಳು ಉಪಮೈಯನ್ನು ಸೃಷ್ಟಿಸುವಲ್ಲಿ ಕವಿಯ ಉದ್ದೇಶವನ್ನು ವ್ಯಕ್ತ ಪಡಿಸಿದರೆ, ಈ ಐದು ಬಗೆಗಳು ಉಪಮೆಯು ಸೃಷ್ಟಿಯಾಗಲು ಇರುವ ಕಾರಣಗಳನ್ನು ಹೇಳುತ್ತವೆ.

ಉಪಮಾನ, ಉಪಮೇಯಗಳನ್ನು ಸೃಷ್ಟಿಸುವಾಗ ಎರಡು ವಸ್ತುಗಳೂ ಸಮಾನ ಅರ್ಹತೆಗಳನ್ನು ಹೊಂದಿರಬೇಕೆಂದು ತೊಲ್‌ಕಾಪ್ಪಿಯರ್ ಹೇಳುತ್ತಾರೆ. ಆದರೆ ಇಲ್ಲೂ ಅಪವಾದಗಳುಂಟು. ಕೆಲವು ಸಂದರ್ಭಗಳಲ್ಲಿ, ತೀರ ಭಿನ್ನವಾದ ವಸ್ತು ಗಳಿಗೆ ಹೋಲಿಸುವ ವಾಡಿಕೆ ಸಂಗಸಾಹಿತ್ಯದಲ್ಲಿ ಕಂಡುಬಂದಿವೆ. ಉದಾಹರಣೆಗೆ,

ಹೆಣ್ಣಿನ ಸ್ತನದ್ವಯಗಳನ್ನು ಜನರ ಒಡ್ಡೊಡೆದ ಆಶೋತ್ತರಗಳಿಗೆ ಹೋಲಿಸುವುದು, ಹೆಣ್ಣಿನ ಕೇಶರಾಶಿಯನ್ನು ಅಪಾರ ಜಲರಾಶಿಗೂ, ಅವಳ ಹಣೆಯನ್ನು ಸಾಗರದಿಂದ ಮೇಲೇರುತ್ತಿರುವ ಚಂದ್ರನಿಗೂ ಹೋಲಿಸುವುದು, ನಾಯಿ, ಮಧ್ಯಗಳೂ ಹೋಲಿಕೆಯ ವಸ್ತುಗಳಾಗಿ ಬಂದಿರುವ ಸಂದರ್ಭಗಳೂ ಉಂಟು. ಕವಿಯು ಇಂಥ ಸಂದರ್ಭಗಳ ಔಚಿತ್ಯವರಿತು ಬಳಸಿಕೊಂಡಲ್ಲಿ, ಅವು ಜನರನ್ನು ರಂಜಿಸುವಂತಿದ್ದರೆ, ಇಂಥ ಉಪಮೆಗಳನ್ನು ಸೃಷ್ಟಿಸಬಹುದು ಎಂಬುದು ತೊಲ್ ಕಾಪ್ಪಿಯರ್‌ಮತ.

ಕಾವ್ಯದಲ್ಲಿ ಉಪಮೈಯ ಸ್ಥಾನವೇನೆಂಬುದು ತೊಲ್‌ಕಾಪ್ಪಿಯರ ಸೂತ್ರಗಳಿಂದ ಸ್ಪಷ್ಟವಾಗುವುದಿಲ್ಲ. ವ್ಯಾಖ್ಯಾನಕಾರರೂ ಭಿನ್ನ ರೀತಿಯಲ್ಲಿ ಅರ್ಥೈಸಿದ್ದಾರೆ, ಅದೊಂದು ಅಲಂಕಾರ ಎಂಬ ವಿಷಯದಲ್ಲೂ ಸಂದಿಗ್ಧತೆ ಇದೆ. ಉಪಮೆ ಎನ್ನುವುದು ಕಾವ್ಯದ ಅರ್ಥವನ್ನು ಹೆಚ್ಚು ಮನದಟ್ಟು ಮಾಡಲು ನೆರವಾಗುವ ಸಾಧನ. ಮೆಯ್‌ಪ್ಪಾಡು ಅಥವಾ ಭಾವಾದಿಗಳು ಪಾತ್ರಗಳ ಸ್ವಭಾವವನ್ನೂ, ಭಾವವನ್ನೂ ಸ್ಪಷ್ಟವಾಗುವಂತೆ, ಉಪಮೇಯು ಕಾವ್ಯದ ಅರ್ಥವನ್ನು ಹೆಚ್ಚು ಪರಿಣಾಮಕಾರಿಯಾಗಿ ಮನದಟ್ಟುಮಾಡಿಕೊಡಲು ನೆರವಾಗುತ್ತದೆ. ಉಪಮೈಯಲ್ಲಿ ಹಲವು ಭೇದಗಳನ್ನು ತೊಲ್‌ಕಾಪ್ಪಿಯರ್ ಹೇಳಿದ್ದಾರೆ. ಆದರೆ ಮುಂದೆ ಬಂದ ದಂಡಿಯಾಶಿರಿಯರ್ ಮೊದಲಾದ ತಮಿಳು ಆಲಂಕಾರಿಕರು ಸಂಸ್ಕೃತದ ಪ್ರಭಾವಕ್ಕೊಳಗಾಗಿ, ಅವುಗಳನ್ನು ಬೇರೆ ಬೇರೆ ಅಲಂಕಾರಗಳಾಗಿ ಗುರುತಿಸಿದ್ದಾರೆ.

## ಧ್ವನ್ಯಾರ್ಥ (ಉಳ್ಳುರೈ)

ತೊಲ್‌ಕಾಪ್ಪಿಯರ್ ಉಪಮೈಯೊಂದಿಗೆ ಹೆಸರಿಸಿರುವ ಮತ್ತೊಂದು ಗಮನ ಸೆಳೆಯುವ ಕಾವ್ಯಾಂಗವೆಂದರೆ ಉಳ್ಳುರೈ. ಉಳ್ಳುರೈ ಎಂದರೆ (ಕಾವ್ಯದಲ್ಲಿ) ಒಳಧ್ವನಿ ಎಂಬರ್ಥ ಬರುತ್ತದೆ. ಸಂಸ್ಕೃತದಲ್ಲಿ ಭಾಮಹ, ದಂಡಿ, ವಾಮನ, ರುದ್ರಟ, ವಿಶ್ವನಾಥ ಮೊದಲಾದವರು ಕಾವ್ಯದ ಅಂತರಂಗವನ್ನು ತಿಳಿಯಲು ಹಲವು ಯತ್ನಗಳನ್ನು ನಡಸಿದರೂ ಕಾವ್ಯದ ಮೂಲಭೂತ ಅಂಶವಾದ ಧ್ವನಿಯನ್ನೇ ಅವರು ಮರೆತಿದ್ದರು. ಕೆಲವರು ಅಲಂಕಾರವು ಕಾವ್ಯದ ಮುಖ್ಯ ಅಂಗ ಎಂದರು. ಮತ್ತೆ ಕೆಲವರು ರಸವೆ ಕಾವ್ಯದ ಆತ್ಮ ಎಂದರು. ಆದರೆ ಇವರು ಯಾರೂ, ಕಾವ್ಯದ ಅಂತರಂಗವೇನೆಂಬುದನ್ನೆ ಕಂಡುಕೊಳ್ಳಲು ಸಾಧ್ಯವಾಗಲಿಲ್ಲ. ಅದನ್ನು ತಿಳಿಸಲು, ಕ್ರಿ.ಶ. ೯ನೆಯ ಶತಮಾನದಲ್ಲಿ ಆನಂದವರ್ಧನನೇ ಬರಬೇಕಾಯಿತು. ಅವನು ತನ್ನ ಧ್ವನ್ಯಾಲೋದಲ್ಲಿ ಕಾವ್ಯದ ಆತ್ಮ ಧ್ವನಿಯನ್ನು ಕುರಿತು ವಿಸ್ತಾರವಾಗಿ ಚರ್ಚಿಸಿ, ಸಿದ್ಧಾಂತ ಪಡಿಸಿದ ಮೇಲೆ, ಉಳಿದ ಆಲಂಕಾರಿಕರು ಕಣ್ಣು ತೆರೆದರು. ಈ ಸಿದ್ಧಾಂತ ಇಡಿ ಸಂಸ್ಕೃತ ಕಾವ್ಯ ಮೀಮಾಂಸೆಯ ಪದ್ಧತಿಯನ್ನೆ ತಲೆಕೆಳಗು ಮಾಡಿತು. ಅಲ್ಲೋಲಕಲ್ಲೋಲವೆಬ್ಬಿಸಿತು. ಆಮೇಲೆ ಬಂದ ಕಾಶ್ಮೀರದ ಅಭಿನವಗುಪ್ತ ತನ್ನ ಧ್ವನ್ಯಾಲೋಕ ಲೋಚನದಿಂದ,

ಆನಂದ ವರ್ಧನನ ಧ್ವನಿಸಿದ್ಧಾಂತವನ್ನು ಸಮರ್ಥಿಸಿ, ಟೀಕಾಕಾರರ ಬಾಯಿ ಮುಚ್ಚಿ ಸಬೇಕಾಯಿತು.

ಆನಂದವರ್ಧನನು ಹೇಳಿರುವ ಧ್ವನಿಗೆ ಸಮೀಪವಾದ, ಉಳ್ಳುರೈಯನ್ನು ಕುರಿತು ತೊಲ್‌ಕಾಪ್ಪಿಯರ್ ಸುಮಾರು ಹನ್ನೆರಡು ಶತಮಾನಗಳಷ್ಟು ಹಿಂದೆಯೇ ಹೇಳಿರುವುದು ಕಾವ್ಯಮೀಮಾಂಸೆಯಲ್ಲಿ ಕುತೂಹಲವನ್ನು ಕೆರಳಿಸುವ ಅಂಶ. ತೊಲ್‌ಕಾಪ್ಪಿಯರ್ ಹೇಳಿರುವ ಉಳ್ಳುರೈ, ಆನಂದವರ್ಧನನ ಧ್ವನಿಗೆ ಸಂವಾದಿಯಾದ ಕಲ್ಪನೆಯಾಗುವುದು ಸಾಧ್ಯವಿಲ್ಲ. ಅದು ಬೀಜರೂಪ ಮಾತ್ರ. ಅವರು ಅದನ್ನು ಎಲ್ಲಿಯೂ ಸಿದ್ಧಾಂತ ಪಡಿಸಲೂ ಹೋಗುವುದಿಲ್ಲ. ಕಾವ್ಯಮಾರ್ಗಕ್ಕೂ ಉಳ್ಳುರೈಗೂ ಇರುವ ಸಂಬಂಧವನ್ನು ಕೂಡ ಚರ್ಚಿಸಿಲ್ಲ. ಅವರ ಪ್ರಕಾರ ಉಳ್ಳುರೈ ಅಗತ್ತಿಣೈ ಎಂದರೆ ಪ್ರಣಯ ಕಾವ್ಯಗಳಲ್ಲಿ ಮಾತ್ರ ತೋರಿಬರುವ ಅಂಶ. ಸಂಭಾಷಣೆಯೇ ಪ್ರಧಾನವಾದ ಅಗಮ್‌ಕಾವ್ಯಗಳಲ್ಲಿ , ಪಾತ್ರಗಳು ಯಾವ ಯಾವ ಸಂದರ್ಭದಲ್ಲಿ ಸಂಭಾಷಣೆಯಲ್ಲಿ ಉಳ್ಳುರೈಯನ್ನು ಬಳಸಿಕೊಳ್ಳಬೇಕೆಂಬುದನ್ನು ಅವರು ಹೇಳಿದ್ದಾರೆ. ತಮಿಳು ಕಾವ್ಯಗಳಲ್ಲಿ, ದೇಶವನ್ನು ಐದು ಭಾಗಗಳಾಗಿ ವಿಂಗಡಿಸಿರುವುದರಿಂದ, ಆಯಾ ಸಂದರ್ಭ, ಪರಿಸರಗಳಿಗನುಗುಣವಾಗಿ, ಸಂಭಾಷಣೆಯಲ್ಲಿ ಉಳ್ಳುರೈಯೂ, ಉಪವ್ಮೈಯೂ ವ್ಯತ್ಯಾಸ ಹೊಂದಬೇಕೆಂದು ಅವರ ಅಭಿಪ್ರಾಯ.

ಉಳ್ಳುರೈಯನ್ನು ಕುರಿತು ತೊಲ್‌ಕಾಪ್ಪಿಯರ್ ಪೊರುಳಧಿಕಾರದಲ್ಲಿ ನಾಲ್ಕು ಎಡೆಗಳಲ್ಲಿ ಪ್ರಸ್ತಾಪಿಸಿದ್ದಾರೆ. ಉಳ್ಳುರೈಯಲ್ಲದೆ. ಉಪಮಪ್ಪೋಲಿ, ಇಱೈಚ್ಚಿ. ಉಡಣುರೈ ಎಂಬ ಮತ್ತೆ ಕೆಲವು ಶಬ್ದಗಳನ್ನು ಇದೇ ಅರ್ಥದ ಛಾಯೆಯಲ್ಲಿ ಬಳಸಿದ್ದಾರೆ. ಉಳ್ಳುರೈಗೂ ಇವುಗಳಿಗೂ ಇರುವ ಸಂಬಂಧವೇನೆಂಬುದು ಅವರ ಸೂತ್ರಗಳಿಂದ ತಿಳಿಯುವುದಿಲ್ಲ. ಇವು ಉಳ್ಳುರೈಯ ಪ್ರಭೇದಗಳಿರಬಹುದು ಎಂದು ವ್ಯಾಖ್ಯಾನಕಾರರ ವಿವರಣೆಯಿಂದ ತಿಳಿಯುತ್ತದೆ. ಇಱೈಚ್ಚಿಯಿಂದ ಧ್ವನಿತವಾದ ಅರ್ಥವು ಪಂಡಿತರಿಂದ ಉಚಿತವಾದ ಸಂದರ್ಭಗಳಲ್ಲಿ ತಿಳಿಯಲ್ಪಡುತ್ತದೆ ಎನ್ನುತ್ತಾರೆ ತೊಲ್‌ಕಾಪ್ಪಿಯರ್. ನಾಯಕ ಅಥವಾ ನಾಯಿಕೆಯು ವಿರಹದ ದುಃಖದಲ್ಲಿರುವಾಗ ಅವರ ಮನಸ್ಸಿಗೆ ಸಮಾಧಾನ ಅಥವಾ ಸಂದೇಶ ನೀಡುವ ಉದ್ದೇಶವನ್ನು ಇಱೈಚಿ ಹೊಂದಿರಬೇಕೆಂದು ಹೇಳುತ್ತಾರೆ. ಉದಾಹರಣೆಗೆ ನಾಯಕನು ನಾಯಿಕೆಯನ್ನು ಬಿಟ್ಟು ದೂರ ದೇಶಕ್ಕೆ ಪ್ರಯಾಣಮಾಡುತ್ತಾನೆ. ಆ ಸಮಯದಲ್ಲಿ ನಾಯಿಕೆ ಮತ್ತು ಅವಳ ಸಖಿ ಅವನು ಶೀಘ್ರವಾಗಿ ಹಿಂದಿರುಗುವ ಆಶಯವನ್ನು ತಾಳುತ್ತಾರೆ. ಅವರ ಭರವಸೆಗೆ ಇರುವ ಕಾರಣವೆಂದರೆ–ನಾಯಕನು ಹೋಗುವ ಮಾರ್ಗ ಕಠಿಣವಾದುದು. ಅವನು ಹಾದಿಯಲ್ಲಿ ಕಾಡು ಪ್ರಾಣಿಗಳ ಪ್ರಣಯ ಜೀವನವನ್ನು ವೀಕ್ಷಿಸುತ್ತಾನೆ. ಹೆಣ್ಣಾನೆಯೊಂದು ಸಲಗದೊಂದಿಗೆ ನಡೆದು ಬರುವಾಗ ಬಾಯಾರುತ್ತದೆ. ಗಂಡಾನೆಯು ಮರವೊಂದರ ರಸವಿರುವ ತೊಗಟೆಯನ್ನು ತೆಗೆದು, ಹೆಣ್ಣಾನೆಯ ದಾಹವನ್ನು ತೀರಿ

ಸುತ್ತದೆ. ನಾಯಕನು ಇಂಥ ಹಲವು ಪ್ರಾಣಿಗಳ ಪ್ರೇಮ ಜೀವನವನ್ನು ಕಂಡು ನಾಯಿಕೆಯನ್ನು ಕೂಡುವ ಕಾತರವನ್ನು ತೋರುತ್ತಾನೆ. ಇಲ್ಲಿ ನಾಯಿಕೆಗೆ ಸಮಾಧಾನ ಅಥವಾ ಸಂದೇಶ ನೀಡುವ ಮಾತುಗಳಿವೆ. ಇಂಥ ಸಂದರ್ಭಗಳಲ್ಲಿ ತೊಲ್‌ಕಾಪ್ಪಿಯರ್ ಪ್ರಕಾರ ಇಜ್ಜೈಚ್ಚಿಯೂ ಪ್ರಧಾನವಾಗುತ್ತದೆ.

ಮೇಲೆ ಹೇಳಿದವುಗಳಲ್ಲದೆ, ಉಡಣುರೈ, ಉಪಮಮ್, ಶುಟ್ಟು, ನಗೈ ಮತ್ತು ರೆಜಿಪ್ಪು ಎಂದು ಮತ್ತೆ ಐದು ಧ್ವನಿಪ್ರಭೇದಗಳನ್ನು ತೊಲ್‌ಕಾಪ್ಪಿಯರ್ ಗುರುತಿಸುತ್ತಾರೆ. ಇವುಗಳ ಬಗ್ಗೆ ಸರಿಯಾದ ವಿವರಣೆಯಿಲ್ಲದೆ ತೊಲ್‌ಕಾಪ್ಪಿಯರ್ ಇವುಗಳನ್ನು ಹೇಳುವ ಉದ್ದೇಶ ಸ್ಪಷ್ಟವಾಗುವುದಿಲ್ಲ. ಉಡಣುರೈಗೂ ಇಜ್ಜೈಚ್ಚಿಗೂ ಸಂಬಂಧವಿರುವಂತೆ ತೋರುತ್ತದೆ. ಕಾವ್ಯಧ್ವನಿಯಲ್ಲಿ ಆಶಾಭಾವನೆ, ಸಂದೇಶಗಳಿದ್ದರೆ ಇಜ್ಜೈಚ್ಚಿ ಎಂದು ಹೇಳಿರುವುದರಿಂದ, ಉಡುಣುರೈಯ ಕೆಲಸವೂ ಅದೇ ಎಂದು ವ್ಯಾಖ್ಯಾನಕಾರರು ಕೊಡುವ ಉದಾಹರಣೆಗಳಿಂದ ತಿಳಿಯುತ್ತದೆ. ಉಡಣುರೈ, ಶುಟ್ಟು,ನಗೈ ಮತ್ತು ಶಿಜಿಪ್ಪು[3] ಇವುಗಳನ್ನು ಆನಂದವರ್ಧನನು ಹೇಳಿರುವ ಕೆಲವು ಧ್ವನಿ ಪ್ರಭೇದಗಳಿಗೆ ಈಚಿನ ಕೆಲವು ವಿದ್ವಾಂಸರು ಹೋಲಿಸಿದ್ದಾರೆ. ಉಡಣುರೈ ವಸ್ತು ಧ್ವನಿಯನ್ನೂ, ಉಪಮಮ್, ಉಪಮಾಧ್ವನಿಯನ್ನೂ, ನನ್ಯೆ ಭಾವಧ್ವನಿಯನ್ನೂ, ಶಿಜಿಪ್ಪು ಅಲಂಕಾರ ಧ್ವನಿಯನ್ನೂ ಸಾಮಾನ್ಯವಾಗಿ ಹೋಲುತ್ತವೆ ಎಂಬುದು ಈ ವಿದ್ವಾಂಸರ ಮತ. ಆನಂದವರ್ಧನನ ಕಾಲಕ್ಕೂ, ತೊಲ್‌ಕಾಪ್ಪಿಯರ ಕಾಲಕ್ಕೂ ಶತ ಶತಮಾನಗಳ ಅಂತರವಿರುವುದನ್ನೂ ಗಮನಿಸಿದರೆ, ಈ ಹೋಲಿಕೆ ಅಸಂಬದ್ಧವೆನಿಸುತ್ತದೆ. ಅಲ್ಲದೆ, ತೊಲ್‌ಕಾಪ್ಪಿಯರ್ ರಸಧ್ವನಿಯನ್ನು ಕುರಿತು ಪ್ರಸ್ತಾಪಿಸದಿರುವುದು ಮೇಲಿನ ತರ್ಕಕ್ಕೆ ಅಡಿಪಾಯ ಕಳಚಿ ಬೀಳುವಂತೆ ಮಾಡುತ್ತದೆ. ಉಳ್ಳುರೈ ಎಂಬ ಮಾತಿನಲ್ಲೇ ಧ್ವನಿಯನ್ನೂ ಸೂಚಿಸಿರುವುದರಿಂದ, ಧ್ವನಿಯನ್ನು ಒಪ್ಪಿಕೊಂಡು,

---

3. ಶುಟ್ಟು ಎಂದರೆ ಸಂಜ್ಞೆ ಅಥವಾ ಸಂಕೇತದ ಮೂಲಕ ತೋರಿಸುವುದು. 'ಅವಳು ತನ್ನ ಕೈಬಳೆಗಳನ್ನು ನೋಡಿದಳು, ನಳಿದೋಳುಗಳನ್ನು ನೋಡಿದಳು, ತನ್ನ ಪಾದಗಳನ್ನು ನೋಡಿದಳು' ಎಂಬ ದೃಷ್ಟಾಂತದಲ್ಲಿ ಅವಳ ಕೋಮಲತೆಯನ್ನು ಒಂದಕ್ಕಿಂತ ಹೆಚ್ಚು ವಸ್ತು ಅಥವಾ ಅವಯವಗಳಿಂದ ಸಾಂಕೇತಿಕವಾಗಿ ಬಣ್ಣಿಸಲಾಗಿದೆ. ಅವಳು ನಾಯಿಕೆಯು ಸ್ವಲ್ಪ ಸೊರಗಿದರೆ ಸಾಕು, ಕೃಶವಾಗಿ ಬಳೆಗಳು ಸಡಿಲವಾಗಿ ಕಳಚಿ ಬೀಳುತ್ತವೆ. ನಳಿದೋಳುಗಳು, ಪಾದಗಳು ಬಡವಾಗುತ್ತವೆ ಎಂಬುದು ಇಲ್ಲಿ ಸೂಚ್ಯವಾಗಿ ಹೇಳಿದೆ.

ನಗೈ ಎಂದರೆ ಹಾಸ್ಯ. ಉದಾಹರಣೆಗೆ "ನಾನು ಅವಳತ್ತ ನೋಡುವಾಗಲೆಲ್ಲ ಅವಳು ಮುಗುಳ್ನಗೆಯನ್ನೂ ಚೆಲ್ಲುತ್ತಾಳೆ. ಅವಳ ಆ ನಗೆಯಲ್ಲಿ ಸೊಬಗಿದೆ" ಎಂದು ನಾಯಕನು ಹೇಳುವಾಗ ಅವಳ ನಗೆಯಲ್ಲಿ ಸೂಚ್ಯವಾದ ಭಾವವು ಅವನನ್ನು ಅರಳಿಸುವುದರಿಂದ. ಇದು ಭಾವಧ್ವನಿಯಲ್ಲಿ ಸೇರಬೇಕೆಂದು ಅಭಿಪ್ರಾಯವಿದೆ.

ಶಿಜಿಪ್ಪು ಎಂದರೆ ವಿಶೇಷ. ಇಲ್ಲಿ ಬಳಸುವ ಉಪಮೆಯು ಹಿಂದಾಗಿ ಧ್ವನಿಯು ಪ್ರಧಾನವಾಗುವುದರಿಂದ, ಅಲಂಕಾರ ಧ್ವನಿಯಿದೆ ಎಂದು ಹೇಳುತ್ತಾರೆ.

ರಸವನ್ನು ಅವರು ಕೈ ಬಿಡುವುದು ಸಾಧ್ಯವಿಲ್ಲ. ರಸವನ್ನು ಅದರಲ್ಲೆ ಒಪ್ಪಿಕೊಂಡಂತೆ ಆಯಿತು ಎಂಬ ವಾದವೂ ಇದೆ. ಪಿ. ಎಸ್. ಸುಬ್ರಹ್ಮಣ್ಯ ಶಾಸ್ತ್ರಿಗಳು ತಮ್ಮ ತೊಲ್‌ಕಾಪ್ಪಿಯಮ್ ಆಂಗ್ಲಾನುವಾದದಲ್ಲಿ ಈ ವಾದವನ್ನು ಮಂಡಿಸಿದ್ದಾರೆ. "The declaration coming from a series of superior experiences, is also included under ullurai that, this sutra is a clear evidence to Tolkappiar's recognition of rasadhvani". ಭರತನ ಕಾಲಕ್ಕೆ ಸ್ವಲ್ಪ ಹಿಂದೆಯೋ ಮುಂದೆಯೋ ಇದ್ದ ತೊಲ್‌ಕಾಪ್ಪಿಯರ್ ಆನಂದವರ್ಧನನ ಕಾಲಕ್ಕೆ ವಿಕಸನಗೊಂಡ ಧ್ವನಿ ಪ್ರಭೇದಗಳನ್ನು ಮೊದಲೆ ಗುರುತಿಸಿದ್ದಾರೆ ಎಂದು ಹೇಳುವುದು ಒಪ್ಪುವ ಮಾತಲ್ಲ. ಅವರು ಹೇಳಿರುವ ಮೆಯ್‌ಪ್ಪಾಡುಗಳ ವಿವರಣೆಯಲ್ಲಿ ರಸವನ್ನು ಅವರು ಹೆಸರು ಹೇಳದೆ ಒಪ್ಪಿಕೊಂಡಿದ್ದರು.[4] ಅದೇ ಕಾವ್ಯದ ಆತ್ಮ ಎಂಬ ಖಚಿತವಾದ ನಿಲವು ಅವರು ತಾಳಿದಂತೆ ಎಲ್ಲಿಯೂ ಉಲ್ಲೇಖವಿಲ್ಲ. ಇವೆಲ್ಲವೂ ಈಚಿನ ವಿದ್ವಾಂಸರ ಊಹೆಗೆ ಸಿಲುಕಿರುವ ವಿಷಯಗಳು. ಆನಂದವರ್ಧನನ ಕಾಲದ ಹೊತ್ತಿಗೆ ಕಾವ್ಯಮೀಮಾಂಸೆಯು ಸಾಕಷ್ಟು ವಿಕಸನಗೊಂಡು ಬೆಳೆದಿತ್ತು. ಅದುವರೆಗೆ ಬಂದ ಸಿದ್ಧಾಂತಗಳ ನಡುವೆ ತನ್ನ ಧ್ವನಿಯನ್ನು ಪ್ರತಿಷ್ಠಾಪಿಸುವ ಜವಾಬ್ದಾರಿ ಅವನ ಮೇಲಿತ್ತು. ತೊಲ್‌ಕಾಪ್ಪಿಯರ್ ಕಾಲದಲ್ಲಿ ಇನ್ನೂ ಲಕ್ಷಣ ಶಾಸ್ತ್ರವು, ಅರಳುವ ದೆಸೆಯಲ್ಲಿತ್ತು. ಅದರಿಂದ ಅವರಿಗೆ ಯಾವುದನ್ನೂ ಸಮರ್ಥಿಸಿಕೊಳ್ಳುವ ಸಂದರ್ಭ ಒದಗಿ ಬರಲಿಲ್ಲ. ಕಾವ್ಯದಲ್ಲಿ ವ್ಯಂಜಕತೆಯನ್ನು ಕುರಿತು ಉಳ್ಳುರೈಯಲ್ಲಿ ಅವರು ಸೂಕ್ಷ್ಮವಾಗಿ ಪ್ರಸ್ತಾಪಿಸಿದ್ದರೂ ಉಪಮೈಯಂತೆ ಅದೂ ಒಂದು ಕಾವ್ಯದ ಮಹತ್ವದ ಅಂಶಗಳಲ್ಲಿ ಒಂದಾಗಿತ್ತು ಅಷ್ಟೆ.

**ಔಚಿತ್ಯ ವಿಚಾರ:**

ಸಂಸ್ಕೃತ ಕಾವ್ಯದಲ್ಲಿ ಔಚಿತ್ಯವನ್ನು ಕುರಿತು ಪ್ರಧಾನವಾಗಿ ಪ್ರಸ್ತಾಪಿಸಿ, ಕಾವ್ಯ ರಸಿಕರ ಗಮನ ಸೆಳೆದವರಲ್ಲಿ ಆನಂದವರ್ಧನನೆ ಮೊದಲನೆಯವನು. ತನ್ನ ಧ್ವನ್ಯಾಲೋಕದ ಮೂರನೆಯ ಅಧ್ಯಾಯದಲ್ಲಿ ಇದನ್ನು ಸವಿಸ್ತಾರವಾಗಿ ಪ್ರಸ್ತಾಪಿಸಿದ್ದಾನೆ. ವಸ್ತು ರಚನೆಯಲ್ಲಿ, ಪ್ರಧಾನ ಕಥೆಯ ನಡೆಯಲ್ಲಿ, ಉಪವಸ್ತುವಿನ ಸ್ಥಾನ ನಿರ್ದೇಶನದಲ್ಲಿ, ಪಾತ್ರನಿರ್ವಹಣೆಯಲ್ಲಿ, ರಸಪೋಷಣೆಯಲ್ಲಿ—ಕಾವ್ಯದ ಪ್ರತಿ ಹಂತದಲ್ಲಿಯೂ ಔಚಿತ್ಯ ನಿಯಮಗಳು ಮೀರದಂತೆ, ಎಚ್ಚರವಹಿಸಬೇಕು ಎಂಬುದು ಅವನ ಮತ. ರಸಪೋಷಣೆಯಲ್ಲಿ ಕವಿ ತನ್ನ ಪರಿಶ್ರಮ ತೋರಿದರೂ ಅನೌಚಿತ್ಯದಿಂದ ರಸಭಂಗವಾಗಿ ಕಾವ್ಯ ಕೆಡುವುದು ಸಾಧ್ಯ. ಅದರಿಂದ ಔಚಿತ್ಯವನ್ನು ಮರೆಯಬಾರದು ಎಂದು ಹೇಳಿದ್ದಾನೆ. ರಾಜಶೇಖರ, ಕುಂತಕ, ಕ್ಷೇಮೇಂದ್ರ ಮೊದಲಾದವರು ಔಚಿತ್ಯದ ಬಗ್ಗೆ ಚರ್ಚೆ ನಡೆಸಿದ್ದರೂ, ಆನಂದವರ್ಧನನೇ ಈ ವಿಷಯದಲ್ಲಿ ತಿಲಕಪ್ರಾಯನಾಗಿದ್ದಾನೆ.

---

4. ತಮಿಳಿನಲ್ಲಿ ರಸಕ್ಕೆ 'ಸುವೈ' ಎಂದು ಕರೆಯುತ್ತಾರೆ

ತೊಲ್‌ಕಾಪ್ಪಿಯರ್, ಔಚಿತ್ಯ ಶಬ್ದವನ್ನು ತಮ್ಮ ಲಕ್ಷಣ ಗ್ರಂಥದಲ್ಲಿ ಎಲ್ಲಿಯೂ ಬಳಸಿಲ್ಲವಾದರೂ, ಕಾವ್ಯದಲ್ಲಿ ಔಚಿತ್ಯದ ಬಗ್ಗೆ ಕೆಲವು ಸ್ಪಷ್ಟವಾದ ನಿಲವನ್ನು ತಳೆದಿರುವುದು ಕಂಡುಬರುತ್ತದೆ. ಕಾವ್ಯವು ಬದುಕಿಗೆ ವಿಧೇಯವಾಗಿರಬೇಕು. ಕಾವ್ಯದಲ್ಲಿ ಕೆಳವರ್ಗದ ನಾಯಕನು ನಾಯಿಕೆಯನ್ನಗಲಿ ರಾಯಭಾರಿಯಾಗಿಯೋ ಉನ್ನತ ವ್ಯಾಸಂಗಕ್ಕಾಗಿಯೋ. ಐಶ್ವರ್ಯದ ಗಳಿಕೆಗೊ ಹೋಗುತ್ತಾನೆಂದು ಚಿತ್ರಿಸುವುದು-ಬದುಕಿಗೆ ವಿರುದ್ಧವಾದುದು. ಸಾಮಾನ್ಯವಾಗಿ ಉನ್ನತ ವ್ಯಾಸಂಗ, ರಾಯಭಾರ, ಮೇಲುವರ್ಗಕ್ಕೆ ಮೀಸಲು. ನಾಯಕನು ಉನ್ನತ ಕುಲದವನಾಗಿರಬೇಕು. ನಾಯಿಕೆಯ ವರ್ಣನೆಯಲ್ಲಿ ಅಸಂಗತ ಅಶ್ಲೀಲ ವರ್ಣನೆ ಇರಬಾರದು. ಉದಾಹರಣೆಗೆ ಸಂಗ ಕಾಲದ ಕಾವ್ಯಗಳಲ್ಲಿ ನಾಯಕನಾದವನು, ತಾಳೆಯೋಲೆಯಿಂದ ಮಾಡಿದ ಕುದುರೆಯನ್ನೇರಿ ನಾಯಿಕೆಯ ಕಡೆಯವರ ಗಮನ ಸೆಳೆಯುವ ಪದ್ಧತಿ ಇರುವುದು ಕಂಡುಬರುತ್ತದೆ. ಈ ಸಂಪ್ರದಾಯಕ್ಕೆ 'ಮಡಲೇಱುದಲ್' ಎಂದು ಕರೆಯುತ್ತಾರೆ. ನಾಯಕನು ನಾಯಿಕೆಯ ಗಮನಸೆಳೆಯಲು ಅಸಮರ್ಥನಾದಾಗ, ನಾಯಿಕೆಯ ಹೆಸರು ಕೆತ್ತಿದ ತಾಳೆಗರಿಯ ಮಡಲು ಕುದುರೆಯನ್ನೇರಿ, ನಾಲ್ಕು ರಸ್ತೆಗಳು ಸಂಧಿಸುವ ಸ್ಥಳದಲ್ಲಿ ನಿಂತು ಹಾದಿಯಲ್ಲಿ ಹೋಗುವವರ ಗಮನ ಸೆಳೆದು ಇದರಿಂದ ಜನರ ಅನುಕಂಪಕ್ಕೆ ಪಾತ್ರನಾಗುವುದು, ಅವನ ಉದ್ದೇಶ. ಇದೊಂದು ರೀತಿ, ಏಕಮುಖವಾದ, ಬಲಾತ್ಕಾರ ಪ್ರಣಯವೂ ಕೂಡ. ಪೆರುನ್ದಿಣೈ ಕಾವ್ಯಗಳಲ್ಲಿ ಮಾತ್ರ ಇಂಥ ಬಲಾತ್ಕಾರ ಪ್ರಣಯ ಸಾಧ್ಯ. ಆದರೆ ಇದೇ ರೀತಿ ನಾಯಿಕೆಯು ವರ್ತಿಸುವುದು ಕಾವ್ಯದ ಔಚಿತ್ಯಕ್ಕೆ ಕುಂದುತರುತ್ತದೆ. ಅದು ಹೆಣ್ಣಿನ ಮೃದು ಸಂಕೋಚದ ಸ್ವಭಾವಗಳಿಗೆ ವಿರುದ್ಧವಾದುದು. ಹೆಣ್ಣಿನ ಅಂತರಂಗದ, ಕಾಮಭಾವನೆಗಳನ್ನು ವಿವರಿಸುವಾಗಲೂ ಔಚಿತ್ಯವನ್ನು ಮೀರಬಾರದು. ಅವು ಸಾಂಕೇತಿಕವಾಗಿರಬೇಕು. ಇಂಥ ಸಂದರ್ಭಗಳಲ್ಲಿ ಔಚಿತ್ಯ ಮೀರಿದರೆ ಸಹೃದಯರು ಅರಗಿಸಿಕೊಳ್ಳುವುದು ಕಷ್ಟವಾಗುತ್ತದೆ ಎನ್ನುತ್ತಾರೆ ತೊಲ್‌ಕಾಪ್ಪಿಯರ್. ಆಯಾ ಪಾತ್ರಗಳು ಸಂಭಾಷಿಸುವಾಗಲೂ, ಔಚಿತ್ಯವನ್ನು ಗಮನದಲ್ಲಿಟ್ಟುಕೊಳ್ಳಬೇಕು. ಸಂದರ್ಭ, ಪರಿಸರಗಳನ್ನು ಅದು ಅನುಸರಿಸಿರಬೇಕು. ವೀರೋಚಿತವಾದ, ಯುದ್ಧವರ್ಣನೆಯನ್ನು ತರುವಾಗ, ಅರಸನೇ ತನ್ನ ಪರಿವಾರದೊಂದಿಗೆ, ಶತ್ರುವನ್ನು ಎದುರಿಸಲು ಹೋಗಬೇಕು. ಸಮರಶಿಬಿರಗಳಲ್ಲಿ, ಯುದ್ಧ ಪ್ರಸಂಗಗಳಲ್ಲಿ ನಾಯಿಕೆಯೊಂದಿಗಿನ ಪ್ರಣಯವನ್ನು ಚಿತ್ರಿಸಬಾರದು-ಹೀಗೆ ಕಾವ್ಯದಲ್ಲಿ ಔಚಿತ್ಯವಲ್ಲದ ಹಲವು ಸಂದರ್ಭಗಳನ್ನು ಅವರು ಹೇಳುತ್ತಾರೆ.

ಕಾವ್ಯದಲ್ಲಿ ಗುಣದೋಷಗಳು ಸಾಪೇಕ್ಷವೆಂಬ ಅರಿವು, ಭರತನಿಂದ ಮೊದಲಾಗಿ ಭಾಮಹ, ದಂಡಿ, ರುದ್ರಟ ಮೊದಲಾದ ಸಂಸ್ಕೃತ ಆಲಂಕಾರಿಕರಲ್ಲಿಯೂ ಕಂಡುಬರುತ್ತದೆ. "ಔಚಿತ್ಯವು ಕೇವಲ ಸೂತ್ರಗಳಿಗೆ ನಿಲುಕತಕ್ಕುದ್ದಲ್ಲ, ಅದರ ಅರಿವಿಗೆ ಆಧಾರವೆಲ್ಲ-ಲೋಕಸ್ವಭಾವ, ಸಾಮಾಜಿಕ ವ್ಯವಹಾರ, ಕವಿ ಪ್ರತಿಭೆ, ಸಹೃದಯಾನು

ಭವ. ಲಕ್ಷಣಕಾರನಿಗೂ ಇದೇ ಪ್ರಮಾಣ"[5]. ಈ ಅರಿವನ್ನು ಕ್ರಿಸ್ತಪೂರ್ವದಲ್ಲಿಯೇ ತೊಲ್‌ಕಾಪ್ಪಿಯರ್ ಮನಗಂಡು, ಸಮಾಜದ ಬದುಕಿಗೆ, ಕಾವ್ಯವು ವಿಧೇಯವಾಗಿರಬೇಕೆಂಬ, ಸ್ಪಷ್ಟನಿಲವು ತಳೆದಿರುವುದು, ಅವರ ದೂರದೃಷ್ಟಿಯ ಕಾವ್ಯಲಕ್ಷಣ ವಿವೇಚನೆಯ ಹೆಗ್ಗುರುತಾಗಿದೆ. ತೊಲ್‌ಕಾಪ್ಪಿಯರ್, ಭರತ, ಭಾಮಹ, ದಂಡಿ ಮೊದಲಾದವರಿಗೆ ಪೂರ್ವದಲ್ಲಿಯೇ ಇದ್ದುದು ನಿಜವಾದರೆ ಅವರು ಹೇಳಿರುವ ಕಾವ್ಯಲಕ್ಷಣಗಳಲ್ಲಿ ಕಾಣುವ ಅಲ್ಪ ಸ್ವಲ್ಪ ಸಂಸ್ಕೃತದ ಛಾಯೆಯು ಭರತಾದಿಗಳಿಗೂ ಹಿಂದೆ ಇದ್ದ ಕಾವ್ಯ ಸಂಪ್ರದಾಯದ ಅನುಸರಣೆಯಾಗಿರಬೇಕು, ಅದರಿಂದಲೆ, ಅವು ಹಸಿ ಹಸಿಯಾಗಿ, ಅರೆಬೆಂದ ಪಾಕದಂತೆ ಕಾಣಿಸಿಕೊಂಡು, ವಿವರಣೆಯಲ್ಲಿ ಸಂಧಿಗ್ಧತೆ ಏರ್ಪಟ್ಟಿವೆ. ಉಳಿದ ದ್ರಾವಿಡ ವಿಶಿಷ್ಟವಾದ, ಕಾವ್ಯಸಂಪ್ರದಾಯ, ವಸ್ತು ವಿವೇಚನೆ, ಮತ್ತು ಸಾಮಾಜಿಕ ಧರ್ಮಗಳನ್ನು ವಿವರಿಸುವಲ್ಲಿ ಅವರು ತಮ್ಮ ಸ್ವಂತಿಕೆಯನ್ನು ಮೆರೆದಿದ್ದಾರೆ. ತಮಿಳು ಪಾರಿಭಾಷಿಕ ಪದಕೋಶಗಳಿಂದ, ಅವರ ಲಕ್ಷಣ ಗ್ರಂಥವು ಸಮೃದ್ಧವಾಗಿ, ಭಾರತೀಯ ಕಾವ್ಯಮೀಮಾಂಸೆಗೆ ವಿಶಿಷ್ಟವಾದ ಕೊಡುಗೆಯಾಗಿದೆ,

---

5. ತೀ.ನಂ.ಶ್ರೀ.-ಭಾರತೀಯ ಕಾವ್ಯಮೀಮಾಂಸೆ. ಪುಟ : ೪೬೩

# ಅಲಂಕಾರ ಪ್ರಸ್ಥಾನ

ಎಂ. ವಿ. ಸೀತಾರಾಮಯ್ಯ

ಭಾರತೀಯ ಕಾವ್ಯಮೀಮಾಂಸೆಯ ಚರಿತ್ರೆಯಲ್ಲಿ ಅಲಂಕಾರ, ಗುಣ, ರೀತಿ, ರಸ, ಧ್ವನಿ, ವಕ್ರೋಕ್ತಿ, ಔಚಿತ್ಯ ಎಂಬ ಪಾರಿಭಾಷಿಕ ಶಬ್ದಗಳು ಕಾಲಕ್ರಮಾನುಗತವಾಗಿ ಬೇರೆ ಬೇರೆ ಪಂಥದವರು ತಳೆದ ನಿಲುವುಗಳನ್ನು ಪ್ರತಿನಿಧಿಸುತ್ತವೆ ಎಂದು ಹೇಳಬಹುದು. ವಾಸ್ತವವಾಗಿ ಈ ಎಲ್ಲ ಲಕ್ಷಣಗಳೂ ಕಾವ್ಯದಲ್ಲಿ ಇರುವಂಥವೆ. ಕಾವ್ಯವನ್ನು ಕಾವ್ಯಪುರುಷ ಎಂದೋ ಕಾವ್ಯವಧು ಎಂದೋ ರೂಪಕಮಾಡಿ ಹೇಳುವುದು ಕೆಲವು ಲಾಕ್ಷಣಿಕರಲ್ಲಿಯೂ ಕವಿಗಳಲ್ಲಿಯೂ ರೂಢಿಗೆ ಬಂದಿತು. 'ಕಾವ್ಯಮೀಮಾಂಸೆ'ಯ ರಾಜಶೇಖರ (೧೧ನೆಯ ಶತಕ) ಒಬ್ಬನೇ ಎಂದು ಕಾಣುತ್ತದೆ ಕಾವ್ಯಪುರುಷ ಎಂಬ ಮಾತನ್ನು ಬಳಸಿರುವವನು, ಸಂಸ್ಕೃತ ಲಾಕ್ಷಣಿಕರಲ್ಲಿ. ರಾಜಶೇಖರನಿಗಿಂತ ಬಲು ಹಿಂದೆಯೆ 'ಕವಿರಾಜಮಾರ್ಗ'ಕಾರನಾದ ಶ್ರೀ ವಿಜಯ 'ಕಾವ್ಯ (ವಸ್ತು) ಪುರುಷ' ಎಂಬ ಮಾತನ್ನು ಬಳಸಿರುವುದನ್ನು ಗಮನಿಸಬೇಕು :

> ನರಲೋಕಚಂದ್ರ ಮತದಿಂ
> ಪರಮಾಲಂಕಾರಮಂ ಶರೀರಮುಂ ಎಂದಿಂ
> ತೆರಡಕ್ಕುಂ ಭೇದಂ ಬಹು
> ಪರಿಕರಮಾ ಕಾವ್ಯವಸ್ತುಪುರುಷಂಗೆಂದುಂ (೧–೨೩)

ಕಾವ್ಯಪುರುಷನ ಶರೀರವೇ ಬೇರೆ, ಪರಮ ಅಲಂಕಾರವೇ ಬೇರೆ ; ಇವು ಬಹು ಪರಿಕರ ರೂಪದವು ಎಂಬ ಮಾತಿನಿಂದ ಶಬ್ದಾಲಂಕಾರ ಅರ್ಥಾಲಂಕಾರ ಪ್ರಭೇದಗಳೂ ಕಾವ್ಯಪುರುಷನ ಶರೀರದ ಶಬ್ದಾರ್ಥ ಗುಣ-ರೀತಿ (ಮಾರ್ಗ)ಗಳೂ ಸೂಚಿತವಾಗಿವೆ. ಮೊತ್ತಮೊದಲಿಗೆ ಕಾವ್ಯವನ್ನು ವಧುವಾಗಿ ರೂಪಕ ಮಾಡಿರುವವನೂ ಶ್ರೀವಿಜಯನೇ[1]

---

1. ಭಾಮಹನಿಂದ ಸೂಚನೆ ಪಡೆದಿರಬಹುದು ; "ನ ಕಾಂತಮಪಿ ನಿರ್ಭೂಷಂ ವಿಭಾತಿ ವನಿತಾಮುಖಂ "(ಕಾವ್ಯಾಲಂಕಾರ, ೧–೧೩). ಭಾಮಹ ವನಿತಾಮುಖವನ್ನು ಮಾತ್ರ ಲಕ್ಷಿಸಿದ್ದಾನೆ, ಪೂರ್ತಿ ಶರೀರವನ್ನಲ್ಲ.

ಪರಮ ಶ್ರೀ ಕೃತಿವಧುವಾ
ಶರೀರಶೋಭಾಕರಂಗಳಪ್ಪ ಗುಣಂಗಳ್
ನಿರತಿಶಯಾಲಂಕಾರ
ಪ್ರರೂಪಿತಂಗಳ್ ಪುರಾಣ ಕವಿ ವಿದಿತಂಗಳ್

'ಕಾವ್ಯ ಶೋಭಾಕರಾನ್ ಧರ್ಮಾನ್ ಅಲಂಕಾರಾನ್ ಪ್ರಚಕ್ಷತೇ' ಎಂಬ ದಂಡಿಯ ಉಕ್ತಿ (2-1) ಯಲ್ಲಿ 'ಕಾವ್ಯ' ಶಬ್ದ 'ಕಾವ್ಯವಧು' ಎಂಬ ರೂಪಕವಾಗಿ ಪರಿಣಮಿಸಿರುವುದಲ್ಲದೆ, 'ಧರ್ಮ'ದೊಂದಿಗೆ 'ಗುಣ'ವನ್ನು ಸಮೀಕರಿಸಿ, ಗುಣಗಳೂ ಕಾವ್ಯಶರೀರದ ( = ಶಬ್ದ ಮತ್ತು ಅರ್ಥ) ಶೋಭೆಯನ್ನು ( = ಸೌಂದರ್ಯವನ್ನು) ಉಂಟುಮಾಡತಕ್ಕವು ಎಂದು ಹೇಳಿರುವುದಲ್ಲದೆ ಅವು 'ನಿರತಿಶಯಾಲಂಕಾರ ಪ್ರರೂಪಿತಂಗಳ್ ಎಂದೂ ಹೇಳಿರುವುದರಿಂದ, ಕವಿರಾಜಮಾರ್ಗಕಾರನು ದಂಡಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ, ಶರೀರಭಿನ್ನವಾದ 'ಅಲಂಕಾರ' ಒಂದು, ಶರೀರಕ್ಕೆ ಸಂಬಂಧಪಟ್ಟ 'ಅಲಂಕಾರ' ಮತ್ತೊಂದು ಎಂದು ಅಲಂಕಾರ ಶಬ್ದದ ಅರ್ಥವ್ಯಾಪ್ತಿಯನ್ನು 'ಭೂಷಣ' (ಒಡವೆ, ತೊಡಿಗೆ) ಮಟ್ಟದಿಂದ ವಿಶಾಲಾರ್ಥದ 'ಸೌಂದರ್ಯ'ಕ್ಕೆ ವಿಸ್ತರಿಸಿರುವುದು ಗಮನಾರ್ಹ.

ಕಾವ್ಯಾವಲೋಕನದ ನಾಗವರ್ಮನು (೧೦೪೨) ತನಗೆ ಹಿಂದಿನ ಸಂಸ್ಕೃತದ ಅಲಂಕಾರ ಪಂಥದ ಆಲಂಕಾರಿಕರನ್ನೇ ಅನುಸರಿಸುತ್ತಿದ್ದರೂ, ಕಾವ್ಯಸೌಂದರ್ಯ ವಿಚಾರದಲ್ಲಿ ಅವನ ದೃಷ್ಟಿ ಏನು ಎನ್ನುವುದು ಗಮನಾರ್ಹ. ವಾಮನನ 'ಸೌಂದರ್ಯಂ ಅಲಂಕಾರಃ' ಎಂಬ ಉಕ್ತಿಯಿಂದ ಅವನು ಪ್ರಭಾವಿತನಾದಂತೆ ಕಾಣುತ್ತದೆ. ಅವನ ಈ ಪದ್ಯ ಗಮನಾರ್ಹ :

ನಿಜದಿಂದಂ ಚೆಲ್ವೆಗೆ ವಿಬು
ಧಜನ ಪ್ರಿಯೆಗಖಿಳಲೋಕವಿನುತ ಪ್ರಮದಾ-
ಗ್ರಜೆಗೆ ಕೃತಿ ಸತಿಗೆ ಶಬ್ದಾ
ರ್ಥಜಾತಮಂತೆರಡು ತೆಜಿದಲಂಕೃತಿಯಕ್ಕುಂ-

(ಕಾವ್ಯಾವಲೋಕನ, ೧೨೬-೫೨೩)

'ನಿಜದಿಂದಂ ಚೆಲ್ವೆಗೆ' ಎಂಬ ಮಾತಿನಿಂದ 'ಸಹಜವಾಗಿಯೆ ಸುಂದರವಾಗಿರುವ ಕಾವ್ಯ' ಎಂಬ ಅರ್ಥಮೂಡಿ, ಶಬ್ದಾರ್ಥಾಲಂಕಾರಗಳು ಹೊರಗಿನಿಂದ ತೊಡಿಸಿದ ಒಡವೆಗಳು ಎಂಬ ಅರ್ಥ ಹೊರಡುತ್ತದೆ.

೨

ನಮ್ಮ ಕನ್ನಡ ಲಾಕ್ಷಣಿಕರು ತಳೆದ ನಿಲವು ಸಂಸ್ಕೃತ ಆಲಂಕಾರಿಕರ ನಿಲುವನ್ನು ಸ್ಥೂಲವಾಗಿ ಪ್ರತಿಬಿಂಬಿಸುತ್ತವೆ ಎನ್ನಬಹುದು. ಅಲಂಕಾರ ಪ್ರಸ್ಥಾನದ ಚರಿತ್ರೆ

ಯನ್ನು ಸಂಕ್ಷೇಪವಾಗಿ ಅವಲೋಕನ ಮಾಡಿದರೆ, ಅದು ಇತರ ಪ್ರಸ್ಥಾನಗಳು ರೂಪ ಗೊಳ್ಳಲು ಹೇಗೆ ದಾರಿಮಾಡಿಕೊಟ್ಟಿತು ಎನ್ನುವುದು ಅರಿವಾಗುತ್ತದೆ.

ಇಂಗ್ಲಿಷಿನಲ್ಲಿ ಯಾವುದನ್ನು Poetics ಎಂದು ಹೇಳುತ್ತಾರೋ ಅದನ್ನು ಈಗ ರೂಢಿಯಾಗಿ ಕಾವ್ಯಮೀಮಾಂಸೆ, ಕಾವ್ಯತತ್ತ್ವ, ಕಾವ್ಯಶಾಸ್ತ್ರ, ಸಾಹಿತ್ಯಶಾಸ್ತ್ರ ಎಂದು ಕರೆಯುತ್ತೇವೆ. ಕಾವ್ಯಮೀಮಾಂಸೆ ಎಂಬ ಮಾತನ್ನು ಮೊತ್ತಮೊದಲಿಗೆ ಬಳಸಿದವನು ರಾಜಶೇಖರ. ಆದರೆ ಬಹಳ ಕಾಲದವರೆಗೆ, ಮೊನ್ನೆ ಮೊನ್ನೆಯ ವರೆಗೂ, ಕಾವ್ಯಲಕ್ಷಣವನ್ನು ವಿವರಿಸುವ ಶಾಸ್ತ್ರವನ್ನು 'ಅಲಂಕಾರಶಾಸ್ತ್ರ' ಎಂದೇ ಹೆಸರಿಸುವುದು ರೂಢಿಯಾಗಿತ್ತು. ಈ ಸಂಗತಿ ಲಾಕ್ಷಣಿಕರ ಮತ್ತು ಕವಿಗಳ ದೃಷ್ಟಿಯಲ್ಲಿ ಶಬ್ದಾರ್ಥಾಲಂಕಾರಗಳು ಪಡೆದಿದ್ದ ಮಹತ್ವವನ್ನೆ ಸೂಚಿಸುತ್ತದೆ.

ಅಲಂಕಾರ, ಅಲಂಕೃತಿ, ಅಲಂಕರಣ ಎನ್ನುವ ಮಾತುಗಳಿಗೆ ಭೂಷಣ, ಒಡವೆ, ಎಂಬುದು ನೈಘಂಟುಕ ಅರ್ಥ. ಆದರೆ 'ಅಲಂಕಾರ' ಶಬ್ದದ ಯೌಗಿಕಾರ್ಥವೇ ಬೇರೆ. 'ಅಲಂ' ಎಂದರೆ 'ಸಾಲ್ದುಂ, ಸಾಕು' ಎಂದು ಅರ್ಥ. 'ಕಾರ' ಶಬ್ದ ಕ್ರಿಯಾವಾಚಕ 'ಸಾಲುವಂತೆ, ಎಂದರೆ ತೃಪ್ತಿಕರವಾಗುವಂತೆ, ಪರ್ಯಾಪ್ತವಾಗು ವಂತೆ ಮಾಡುವುದು ಅಲಂಕಾರ. ಇಂಗ್ಲಿಷಿನ Poet ಶಬ್ದಕ್ಕೆ maker ಮಾಡು ವವನು ಎಂಬ ಅರ್ಥ ಇರುವುದನ್ನು ಇಲ್ಲಿ ಗಮನಿಸಬಹುದು. ಅವನು 'ಮಾಡಿದ್ದು', ಅವನ 'ಕಾರ್ಯ' ಅಥವಾ 'ಕ್ರಿಯೆ', ಅದೇ ಕಾವ್ಯ. ದಂಡಿಗಿಂತಲೂ ಪೂರ್ವದಲ್ಲಿ ಅಲಂಕಾರಶಾಸ್ತ್ರ 'ಕ್ರಿಯಾಕಲ್ಪ' ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು ಎಂದು ತಿಳಿದು ಬರುತ್ತದೆ. ಕ್ರಿಯಾಕಲ್ಪಕ್ಕೆ ಪರ್ಯಾಯವಾಗಿ ದಂಡಿ 'ಕ್ರಿಯಾವಿಧಿ' ಎಂಬ ಹೆಸರನ್ನು ಬಳಸಿದ್ದಾನೆ.[2] ವಿಧಿ (ವಿಧಾನ) ಎಂದರೂ ಒಂದೆ ಕಲ್ಪ ಎಂದರೂ ಒಂದೇ. 'ಅಲಂಕಾರ'ಕ್ಕೆ 'ಅಲಂಕ್ರಿಯೆ', 'ಅಲಂಕೃತಿ' ಎಂಬ ಪರ್ಯಾಯ ನಾಮಗಳಿರು ವುದನ್ನು ಗಮನಿಸಿದರೆ, 'ತೃಪ್ತಿಕರವಾಗಿ (ಸಾಲುವಂತೆ) ಕೃತಿಗೆಯ್ಯುವುದು' ಅಲಂಕಾರ ಎನ್ನಬೇಕಾಗುತ್ತದೆ. (ಕಾವ್ಯವನ್ನು ಇಂಗ್ಲಿಷಿನಲ್ಲಿ Work ಎಂದೂ ಸಂಸ್ಕೃತ–ಕನ್ನಡಗಳಲ್ಲಿ ಕೃತಿ ಎಂದೂ ನಿರ್ದೇಶಿಸುತ್ತೇವೆ. ಈ ಅಂಶವೂ ಗಮನಾರ್ಹ) 'ಸಾಲುವಂತೆ, ತೃಪ್ತಿಕರವಾಗಿ, ಮಾಡುವುದು' ಎಂದರೆ ಏನು ? ಅರ್ಥಾತ್, 'ಅಲಂಕಾರ' ಎಂದರೆ ಏನು, ಕವಿಕರ್ಮ ದೃಷ್ಟಿಯಿಂದ; ಡಿ. ವಿ. ಜಿ. ಅವರ

2. "ವಾಚಾಂ ವಿಚಿತ್ರ ಮಾರ್ಗಾಣಾಂ ನಿಬಬಂಧುಃ ಕ್ರಿಯಾವಿಧಿಮ್" (ಕಾವ್ಯಾದರ್ಶ ೧–೯). ಅಲಂಕಾರ ಶಾಸ್ತ್ರಕ್ಕೆ 'ಕ್ರಿಯಾಕಲ್ಪ' ಮತ್ತು ಇತರ ಹೆಸರುಗಳು ಹೇಗೆ ಬಳಕೆಗೆ ಬಂದುವು ಎಂಬುದನ್ನು ಡಾ॥ ವಿ. ರಾಘವನ್ ಅವರ Some Concepts of Alankara Sastra (Adyar Library, 1942) ಎಂಬ ಗ್ರಂಥದಲ್ಲಿನ 'The evolution of the Names of Sanaskrit Poeties and KRIYA KALPA' ಎಂಬ ಲೇಖನ ದಿಂದ ಅರಿಯಬಹುದು.

ವಿವರಣೆ ಹೀಗೆ : " ಕಾವ್ಯಲೋಕದಲ್ಲಿಯ ಅಸ್ಪಷ್ಟಾಂಶಗಳನ್ನು ಸ್ಪಷ್ಟವಾಗಿಸುವುದು, ಅಪ್ರಸಿದ್ಧಾಂಶಗಳನ್ನು ಪ್ರಸಿದ್ಧಿಗೆ ತರುವುದು, ದುರ್ಬಲಾಂಶಗಳನ್ನು ಪ್ರಬಲಗೊಳಿಸಿ ತೋರಿಸುವುದು, ಅಲಂಕಾರದ ಉಪಕಾರ."[3] ಬ್ರಹ್ಮ ಸೃಷ್ಟಿಯಲ್ಲಿ ಕೂಡ ವಸ್ತುಗಳು, ಪ್ರಾಣಿಗಳು, ಅಲಂಕೃತಗಳು. ಗಿಳಿಗೆ ಬಣ್ಣವೇಕೆ ? ನವಿಲಿನ ಸೋಗೆ ಅಷ್ಟೊಂದು ವರ್ಣರಂಜನೆ, ಚಿತ್ರ ವಿಚಿತ್ರ ಕಲಾಪ ಇವುಗಳಿಂದ ಮೆರೆಯುವುದೇಕೆ ? ಪುಷ್ಪಕೋಟಿಯ ಬಗೆಬಗೆಯ ಆಕೃತಿರಚನೆ, ವರ್ಣವಿನ್ಯಾಸ ಇವುಗಳನ್ನು ಮೆಚ್ಚದವರಾರು ? ವರ್ಣಗಳಲ್ಲಿ ಎಷ್ಟು ವಿಧ ! ಬಗುಗೊಳ ಚೆನ್ನೋ ಕಮಲಾಕರ ಚೆನ್ನೋ ? ನೀರಿಗೆ ನೈದಿಲೆ ಶೃಂಗಾರ ಅಲ್ಲವೆ ? ಕಾವ್ಯಕ್ಕೆ ಅಲಂಕಾರದ ಅಗತ್ಯವನ್ನು ಡಿ.ವಿ.ಜಿ. ಹೀಗೆ ಮನಗಾಣಿಸುತ್ತಾರೆ : "ಒಂದು ಅಂಗಭಾವದ ಚೆಲುವು ಚೆನ್ನಾಗಿ ಎದ್ದು ಕಾಣಿಸದಂತೆ ಇದ್ದರೆ ಅಥವಾ ಒಂದು ಅವಯವ ಬರಿ ಬಿಡುವಾಗಿರುವಂತೆ ತೋರಿದರೆ, ಆಗ ಚತುರೆಯಾದ ಸುಂದರಿ ಆ ಪ್ರದೇಶದಲ್ಲಿ ಒಂದು ಒಡವೆಯನ್ನೋ, ಹೂವನ್ನೋ, ಬೊಟ್ಟನ್ನೋ ಇಟ್ಟು ಆ ಕೊರತೆಯನ್ನು ಹೋಗಲಾಡಿಸಿಕೊಳ್ಳುತ್ತಾಳೆ. ಹಾಗೆಯೇ ಕವಿ ತನ್ನ ಒಂದು ವಸ್ತುವಿನ ಸ್ವಭಾವವೋ ಒಂದು ಸಂಗತಿಯ ಸ್ವರೂಪವೋ ತಕ್ಕಷ್ಟು ಸ್ಫುಟವಾಗಿಲ್ಲವೆನಿಸಿದಾಗ ಒಂದು ಉಪಮಾನವನ್ನೊಡ್ಡುತ್ತಾನೆ. ಅದು ಪಂಜಿನಂತೆ ಉಪಮೇಯದ ಮೇಲೆ ಬೆಳಕು ಬೀರಿ, ಅದರ ಸಂದು ಮೂಲೆಗಳನ್ನೆಲ್ಲ ಬೆಳಗುತ್ತದೆ."[4] ಈ ಎಲ್ಲ ಮಾತಿನ ತಾತ್ಪರ್ಯ, ಅಲಂಕಾರ ಕಾವ್ಯದ ಬಾಹ್ಯಸೌಂದರ್ಯವರ್ಧಕ, ಕಾವ್ಯ ಶರೀರದ ಸೌಂದರ್ಯವನ್ನು ಹೆಚ್ಚಿಸತಕ್ಕದ್ದು, ಎಂದು. ಕಾವ್ಯಾಲಂಕಾರಗಳು ಬಾಹ್ಯ ಸೌಂದರ್ಯವರ್ಧಕ ಎಂಬ ಮಾತನ್ನು ಒಪ್ಪಬಹುದು. ಆದರೆ, ಕಾವ್ಯಲೋಕದ ಅಲಂಕಾರವನ್ನು ಮಾನವಲೋಕದ ಕಟಕ ಕೇಯೂರಾದಿ ಭೂಷಣಗಳಿಗೆ ಹೋಲಿಸಿರುವ ಉಪಮೆಯಲ್ಲಿಯೂ ಔಚಿತ್ಯವಿಲ್ಲ ಎಂದು ಅನ್ನಿಸುತ್ತದೆ. ಶಬ್ದಾರ್ಥಾಲಂಕಾರಗಳು ಕಾವ್ಯ ಶರೀರಕ್ಕೆ ಕೃತಕಾಲಂಕಾರಗಳೆ, ಸಹಜಸಿದ್ಧವಾದುವೆ ? ಎಂಬ ಪ್ರಶ್ನೆ ವಿಚಾರಣೀಯ.

ಸಾಮಾನ್ಯ ಕವಿ ಅಲಂಕಾರವನ್ನು ಪ್ರಯತ್ನ ಪೂರ್ವಕವಾಗಿ ಪೂರ್ವಸಿದ್ಧವಾದ ಕಾವ್ಯಕ್ಕೆ–ಕೃತಿಸತಿಗೆ–ಜೋಡಿಸಲು ಹವಣಿಸಬಹುದು. ಇಂಥಲ್ಲಿ, ಅದು ಡಿ.ವಿ.ಜಿ. ಹೇಳಿರುವಂತೆ[5] — "ಭಾಷೆಯ ಕೃತಕ ಶಕ್ತಿಮೂಲವಾದದ್ದು. ಆದರೆ, ಪ್ರತಿಭಾ ಶಾಲಿ

---

3. 'ಸಾಹಿತ್ಯ ಶಕ್ತಿ'. ಪು. ೧೯೪.
4. ಅದೇ.
5. ಅದೇ, ಪುಟ. ೧೯೩.

ಯಾದ ಕವಿಯ ವಿಚಾರದಲ್ಲಿ 'ಅಲಂಕಾರ' 'ಸಹಜ ಶಕ್ತಿ ಮೂಲ'ವಾದದ್ದು ಎಂದೇ ಹೇಳಬಹುದು.[6]

ಇನ್ನು ಅಲಂಕಾರ ಪಂಥದ ಬೆಳವಣಿಗೆಯ ಕ್ರಮವನ್ನು ಗಮನಿಸೋಣ.

ಆಲಂಕಾರಿಕರನ್ನು ಪ್ರಾಚೀನರೆಂದೂ ನವೀನರೆಂದೂ ವಿಂಗಡಿಸುವುದು ರೂಢಿ.[7] ಭರತ, ಭಾಮಹ, ದಂಡಿ, ವಾಮನ, ರುದ್ರಟ, ರಾಜಶೇಖರ, ಕುಂತಕ, ಇವರುಗಳು ಪ್ರಾಚೀನರ ಗುಂಪಿಗೆ ಸೇರುತ್ತಾರೆ. ಇದು ಕಾಲ ದೃಷ್ಟಿಯಿಂದ ಮಾಡಿದ ವಿಭಜನೆಯಲ್ಲ. ಹತ್ತು ಹನ್ನೊಂದನೆಯ ಶತಮಾನಗಳಿಗೆ ಸೇರಿದ ರಾಜಶೇಖರ ಕುಂತಕರು ಧ್ವನಿಪ್ರಸ್ಥಾನದ ಪ್ರವರ್ತಕನಾದ ಒಂಬತ್ತನೆಯ ಶತಮಾನದ ಆನಂದ ವರ್ಧನನಿಗಿಂತ ಈಚಿನವರು. ಪ್ರಾಚೀನರು ಅಲಂಕಾರ ಪಂಥ ಅಥವಾ ಪ್ರಸ್ಥಾನಕ್ಕೆ ಸೇರಿದವರು. ಇವರು ವಾಚ್ಯಾರ್ಥಕ್ಕೂ ಅಲಂಕಾರಕ್ಕೂ ಪ್ರಾಧ್ಯಾನ್ಯ ಕೊಟ್ಟರು, ಅಷ್ಟೆ. ಇವರು ವ್ಯಂಗ್ಯಾರ್ಥವನ್ನು 'ಧ್ವನಿ' ಎಂಬ ಮಾತಿನಿಂದ ಗುರುತಿಸಿರದಿದ್ದರೂ ಅದರ ಕಲ್ಪನೆ ಇದ್ದಿತು. ವ್ಯಂಗ್ಯಾರ್ಥವು ಇದ್ದಲ್ಲಿ ಅದು ವಾಚ್ಯಾರ್ಥವನ್ನು ಸೃಷ್ಟಿಗೊಳಿಸುವುದಕ್ಕಾಗಿ ಎಂಬುದು ಅವರ ಅಭಿಪ್ರಾಯ. ಪ್ರಾಚೀನರಿಗೆ ರಸದ ಕಲ್ಪನೆಯೇ ಇರಲಿಲ್ಲ ಎಂದಲ್ಲ. ಭಾಮಹನು ರಸವದಲಂಕಾರವನ್ನು ವಿವರಿಸುವ ಕಾರಿಕೆಯಲ್ಲಿ (೩–೬) 'ರಸವದ್‌ದರ್ಶಿತ ಸ್ಪಷ್ಟಃ ಶೃಂಗಾರಾದಿರಸಂ' ಎಂದು ಸೂಚಿಸಿದ್ದಾನೆ. ಅವನನ್ನು ಬಲುಮಟ್ಟಿಗೆ ಅನುಸರಿಸಿರುವ ಉದ್ಭಟನು ನಾಟ್ಯಶಾಸ್ತ್ರದ ಪರಿಭಾಷೆಯನ್ನೇ ಬಳಸಿ ಅವನ ಹೇಳಿಕೆಯನ್ನು ವಿಸ್ತರಿಸಿದ್ದಾನೆ.[8] ದಂಡಿ ಮಹಾಕಾವ್ಯ ಲಕ್ಷಣವನ್ನು ವಿವರಿಸುವ ಸಂದರ್ಭದಲ್ಲಿಯೂ, ರಸವದ್, ಊರ್ಜಸ್ವಿ ಈ ಅಲಂಕಾರ ಲಕ್ಷಣ ವಿವರಣೆಯ ಸಂದರ್ಭದಲ್ಲಿಯೂ ಕಾವ್ಯದಲ್ಲಿ ರಸದ ವ್ಯಾಪಕತ್ವವನ್ನು ಸೂಚ್ಯವಾಗಿ

---

6. "ಒಡವೆಗಳನ್ನು ಮೈಮೇಲೆ ಹಾಕಿಕೊಂಡು ಕಳಚಿಬಿಡುವಂತೆ, ಕವಿ ಅಲಂಕಾರಗಳನ್ನು ಪ್ರತ್ಯೇಕವಾಗಿ ರಚಿಸಿ ಕಾವ್ಯಕ್ಕೆ ಸೇರಿಸುತ್ತಾನೆ ಎಂದು ತಿಳಿಯಬಾರದು. ಕರ್ಣನು ಹುಟ್ಟುವಾಗಲೇ ಕವಚ ಕುಂಡಲಗಳನ್ನು ಧರಿಸಿಕೊಂಡು ಹುಟ್ಟಿದಂತೆ, ಕಾವ್ಯನಿರ್ಮಾಣ ಕಾಲದಲ್ಲಿ ಅಲಂಕಾರಗಳು ಕಾವ್ಯಶರೀರದ ಒಂದು ಜೀವಂತ ಭಾಗವಾಗಿ ಅದರೊಂದಿಗೆ ರೂಪಕಗೊಂಡಿರುತ್ತವೆ. ಹೂವು ಗಿಡದಲ್ಲಿಯೆ ಬಿಟ್ಟು ಗಿಡಕ್ಕೆ ಅಲಂಕಾರವಾಗಿರುವಂತೆ ; ಅರಳುವಾಗ ಹೂವಿನ ಜೊತೆಯೇ ಅದರ ಬಣ್ಣ ಇರುವಂತೆ, ಕಾವ್ಯದ ಅಲಂಕಾರ ಗಿಡಕ್ಕೆ ಸಿಕ್ಕಿಸಿದ ಬಣ್ಣದ ಕಾಗದದ ಹೂವಲ್ಲ." (ಎಂ. ವಿ. ಸೀತಾರಾಮಯ್ಯ : 'ಶಾಸ್ತ್ರಸಾಹಿತ್ಯ, ೧೯೭೫ ; ಪು. ೨೯).
7. ನವೀನರನ್ನೂ ಆಲಂಕಾರಿಕರು ಎಂದು ಕರೆದಿರುವಲ್ಲಿ ಅಲಂಕಾರ ಶಬ್ದದ ವಿಶಾಲಾರ್ಥವನ್ನೂ ಪ್ರಾಮುಖ್ಯವನ್ನೂ ಲಕ್ಷಿಸಬಹುದು.
8. ರಸವದ್ದರ್ಶಿತ ಸ್ಪಷ್ಟಃ ಶೃಂಗಾರಾದಿರಸಾದಯಮ್ ।
ಸ್ವಶಬ್ದಸ್ಥಾಯಿ ಸಂಚಾರಿ ವಿಭಾವಾಭಿನಯಾಸ್ಪದಂ ॥ (ಕಾವ್ಯಾಲಂಕಾರ ಸಾರಸಂಗ್ರಹ, ೪–೪)

ಹೇಳಿದ್ದಾನೆ.[9] ಭಾಮಹನು ವಾಙ್ಮಯವನ್ನು ವಕ್ರೋಕ್ತಿ, ಸ್ವಭಾವೋಕ್ತಿ ಎಂದು ಇಬ್ಬಗೆ ಮಾಡಿ, ಮಾತುಗಾರಿಕೆ ಲೋಕೋತ್ತರವಾಗಿ ಪ್ರಕಟವಾಗುವುದೇ 'ವಕ್ರತೆ' ಎಂದು ಹೇಳಿ, ವಕ್ರೋಕ್ತಿ ಅಲ್ಲದ್ದನ್ನು (ಅವಕ್ರೋಕ್ತಿಯನ್ನು) ಅಕಾವ್ಯ ಎಂದು ತಳ್ಳಿ ಹಾಕಿ, ಕಾವ್ಯದಲ್ಲಿ ವ್ಯಂಗ್ಯತ್ವವನ್ನು ಮೊತ್ತ ಮೊದಲಿಗೆ ಗುರುತಿಸಿದನು. ಧ್ವನಿ ಪ್ರಸ್ಥಾನದ ಬೀಜಾಂಕುರವನ್ನು ನಾವು ಇಲ್ಲಿ ಕಾಣಬಹುದು.[10] ಭಾಮಹನು 'ವಕ್ರೋಕ್ತಿ' ಶಬ್ದವನ್ನು ಬಹಳ ವಿಶಾಲವಾದ ವ್ಯಾಪಕವಾದ ಅರ್ಥದಲ್ಲಿ ಬಳಸಿದ್ದಾನೆ ಎಂಬುದನ್ನು ಗಮನಿಸಬೇಕು. ಈ 'ವಕ್ರತೆ' ಶಬ್ದಾರ್ಥವೆರಡರಲ್ಲೂ ನಿಹಿತವಾಗಿರ ತಕ್ಕದ್ದು. (ಇದನ್ನು ಕನ್ನಡದಲ್ಲಿ 'ಕೊಂಕುಮಾತು,' 'ಕೊಂಕು ನುಡಿ' ಎಂದು ಹೆಸರಿಸಬಹುದು.) ಆಂಗ್ಲ ಕಾವ್ಯ ವಿಮರ್ಶೆಯಲ್ಲಿ ಇದನ್ನೇ obliquity ಎಂದು ಕರೆದಿದೆ. ಇದು ಕಾವ್ಯ ಭಾಷೆಯ ಸೌಂದರ್ಯ ; 'ವಾಚಾಮಲಂಕೃತಿಃ'. ಭಾಮಹನ ದೃಷ್ಟಿಯಲ್ಲಿ ವಕ್ರೋಕ್ತಿಯು ಅಲಂಕಾರಗಳೆಲ್ಲಕ್ಕೂ ಅನ್ವಯಿಸುವ ಸರ್ವಸಾಮಾನ್ಯ ಲಕ್ಷಣ. ಶಬ್ದಾರ್ಥಾಲಂಕಾರಗಳು ವಕ್ರೋಕ್ತಿಯ ವಿವಿಧ ವಿಲಾಸಗಳು. ದಂಡಿ ಮುಂತಾದ ಮುಂದಿನ ಆಲಂಕಾರಿಕರು ವಕ್ರೋಕ್ತಿ, ಅತಿಶಯೋಕ್ತಿ, ಸ್ವಭಾವೋಕ್ತಿ– ಈ ಶಬ್ದಗಳ ಅರ್ಥವನ್ನು ಸಂಕುಚಿತಗೊಳಿಸಿ, ಅವುಗಳನ್ನು ಪ್ರತ್ಯೇಕ ಅಲಂಕಾರಗಳನ್ನಾಗಿ ಎಣಿಸಿ, ಲಕ್ಷಣಿಸಿದರು. ಭಾಮಹನು ಪ್ರಸ್ಥಾಪನೆ ಮಾಡಿದ ಕಾವ್ಯದ ವಕ್ರತೆಯ ಲಕ್ಷಣವನ್ನು ಕುಂತಕನು ವಿವರ ಪೂರ್ಣವಾಗಿ ವಿಸ್ತರಿಸಿ 'ವಕ್ರೋಕ್ತಿ ಜೀವಿತ' ಎಂಬ ಸಿದ್ಧಾಂತವನ್ನು ಮುಂದಿಟ್ಟನು. ಭಾಮಹನ "ವಕ್ರೋಕ್ತಿ ತತ್ತ್ವವು ಮುಂದಿನ ಸಂಪೂರ್ಣ ಧ್ವನಿ ತತ್ತ್ವಕ್ಕೆ ಪ್ರೇರಕವೂ ಪ್ರಚೋದಕವೂ" ಆಯಿತು.[11]

ಅಲಂಕಾರಗಳ ಬಗೆಗೆ ದಂಡಿಯ ಹೇಳಿಕೆಯೂ ಗಮನಾರ್ಹ. "ಕಾವ್ಯಶೋಭಾಕರಾನ್ ಧರ್ಮಾನ್ ಅಲಂಕಾರಾನ್ ಪ್ರಚಕ್ಷತೆ,"[12] ಇದು ಅವನ ಸ್ಪಷ್ಟವಾದ ಹೇಳಿಕೆ. ಕಾವ್ಯದ ಕಾವ್ಯತ್ವ ಅದರ ಶೋಭೆಯಲ್ಲಿ ಎಂದರೆ ಅದರ ಸೌಂದರ್ಯದಲ್ಲಿ ಅಡಗಿದೆ. ಕಾವ್ಯದ ಶೋಭೆಯನ್ನು ಅಲಂಕಾರಗಳು ವಹಿಸಿಕೊಂಡಿವೆ ಎಂದರೂ ಒಂದೆ, ಅಲಂಕಾರಗಳಿಲ್ಲದಿದ್ದಲ್ಲಿ ಕಾವ್ಯ ಶೋಭಿಸುವುದಿಲ್ಲ ಎಂದರೂ ಒಂದೆ. ದಂಡಿಯ ಅಭಿಪ್ರಾಯದಲ್ಲಿ ಅಲಂಕಾರಗಳು 'ಶೋಭಾಕರ'ಗಳೇ ಹೊರತು 'ಶೋಭಾವರ್ಧಕ'

---

9. ಅಲಂಕೃತಮಸಂಕ್ಷಿಪ್ತಂ ರಸಭಾವನಿರಂತರಮ್ । (ಕಾವ್ಯಾದರ್ಶ, ೧-೧೮)

10. i) ಯುಕ್ತಂ ವಕ್ರಸ್ವಭಾವೋಕ್ತ್ಯಾ ಸರ್ವಂ (ಇಲ್ಲಿ ಧರ್ಮಂ ಎಂದರೆ ಗಾಥೆ, ಶ್ಲೋಕ, ಅನಿಬದ್ಧ ಮುಂತಾದ ಕಾವ್ಯಪ್ರಕಾರಗಳು) (೧-೩೦)

ii) ವಕ್ರಾಭಿಧೇಯ ಶಬ್ದೋಕ್ತಿರಿಷ್ಟಾ ವಾಚಾಮಲಂಕೃತಿಃ (೧–೩೬)

11. ಡಾ॥ ಕೆ. ಕೃಷ್ಣಮೂರ್ತಿ : 'ಕನ್ನಡ ಕಾವ್ಯಾಲಂಕಾರ', ಮೈಸೂರು, ೧೯೬೧ ; ಪೀಠಿಕೆ, ಪು. X-VII.

12. ಕಾವ್ಯಾದರ್ಶ : ೨-೧

ಗಳಲ್ಲ. ಎಂದಮೇಲೆ ಅಲಂಕಾರಗಳು ಕಾವ್ಯಶರೀರದಿಂದ ಭಿನ್ನವಾದ ಒಡವೆ ಅಲ್ಲ. ಕಾವ್ಯಶರೀರ ಎನ್ನಿಸಿದ ಶಬ್ದಾರ್ಥಗಳ ಸೌಂದರ್ಯಕ್ಕೆ ಕಾರಣಭೂತವಾದವು ಅಲಂಕಾರಗಳು. ವಾಮನನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, 'ಕಾವ್ಯಂ ಗ್ರಾಹ್ಯಂ ಅಲಂಕಾರಾತ್ । ಸೌಂದರ್ಯಂ ಅಲಂಕಾರಃ' [13] ಎಂದು ಅಲಂಕಾರ ಪಂಥದವರ ದೃಷ್ಟಿಯನ್ನು ಖಚಿತಪಡಿಸಿದ. ಅಲಂಕಾರಗಳು ಭೂಷಣಪ್ರಾಯವಾದವು, ಅಲಂಕರಣ ಸಾಧನ. ಕಾವ್ಯಸೌಂದರ್ಯವನ್ನು ಹೆಚ್ಚಿಸತಕ್ಕವು ಎಂಬುದು ಅಲಂಕಾರ ಪ್ರಸ್ಥಾನದವರ ಮತ ಎನ್ನುವುದಾದರೆ ಅದು ಅಲಂಕಾರ ಶಬ್ದದ ಅರ್ಥವ್ಯಾಪ್ತಿಯನ್ನು ಸಂಕುಚಿತಗೊಳಿಸಿದಂತಾಗುತ್ತದೆ. ವಿಶಾಲದೃಷ್ಟಿಯಲ್ಲಿ ಅಲಂಕಾರಗಳು ಕಾವ್ಯದ ಸಮಷ್ಟಿ ಸೌಂದರ್ಯ; ಆಲಂಕಾರಿಕರ ಮತವೇ ಅದು. ಈ ಸಮಷ್ಟಿ ಸೌಂದರ್ಯದಲ್ಲಿ ಬಾಹ್ಯಸೌಂದರ್ಯ (ಶರೀರ ಸೌಂದರ್ಯ), ಆಂತರಿಕ ಸೌಂದರ್ಯ ಎಂದು ಇಬ್ಬಗೆ. ಈ ಆಂತರಿಕ ಅಥವಾ ಆತ್ಮಸೌಂದರ್ಯ ದೃಷ್ಟಿ ಭಾಮಹ-ಕುಂತಕರ ವಕ್ರೋಕ್ತಿವಾದದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಹಣ್ಣಿನ ಬಣ್ಣ ಆಕಾರಗಳಂತೆ ಬಾಹ್ಯ ಸೌಂದರ್ಯ; ಅದು ತ್ಯಾಜ್ಯವಲ್ಲ. ರಸವತ್ತಾದ ಹಣ್ಣನ್ನು ಆಯ್ಕೆಮಾಡಿಕೊಳ್ಳುವನು. 'ಆಹಾ ಎಷ್ಟು ಚೆನ್ನಾಗಿದೆ!' ಎಂದು ಹಣ್ಣಿನ ಹೊರ ಚೆಲುವಿಗೇ ಮೊದಲು ಮಾರು ಹೋಗುವುದು. ಅನಂತರ ಅದರ ರಸದ ಆಸ್ವಾದನೆ, ಪೂರ್ಣತೃಪ್ತಿ ಪಡೆಯುವಿಕೆ, ಕಾವ್ಯದ ವಿಷಯವೂ ಅಷ್ಟೆ: ಉಕ್ತಿಸೌಂದರ್ಯದಿಂದ ರಸಿಕನ ಮನಸ್ಸನ್ನು ಕಾವ್ಯದ ಕಡೆಗೆ ಪರಿಣಾಮಕಾರಿಯಾಗಿ ಸೆಳೆಯುವುದು. ಬಲಿತಿಲ್ಲದ ಕಸುಗಾಯಿ ಹೇಗೆ ಚೆನ್ನಾಗಿ ಮಾಗಿ ಬಣ್ಣವೇರಿ ರಸತುಂಬಿದ ಹಣ್ಣಾಗದೋ ಹಾಗೆ ರಸಪುಷ್ಟಿಯಿಲ್ಲದ ಕಾವ್ಯ ಎಷ್ಟೇ ಅಲಂಕಾರಗಳನ್ನು ಹೊಂದಿದ್ದರೂ ಅಲಂಕಾರಗಳು ಕಾವ್ಯಕ್ಕೆ ಶೋಭಾಕರಗಳಾಗಲಾರವು.

೩

ದೃಶ್ಯಕಾವ್ಯಗಳಲ್ಲಿ ನಿರೂಪಣೆಯೆಲ್ಲವೂ ಪಾತ್ರಗಳ ಮೂಲಕ: ಸ್ಥಳವರ್ಣನೆ ಮುಂತಾದ ವರ್ಣನೆಗಳು ಕೂಡ ಪಾತ್ರಗಳ ಮೂಲಕವೆ; ದೃಶ್ಯ ಕಾವ್ಯದಲ್ಲಿ ವಿಭಾವ ಅನುಭಾವ ವ್ಯಭಿಚಾರಿಭಾವಗಳು ಪಾತ್ರಚರ್ಯೆಯ ಆಂಗಿಕ ವಾಚಿಕ ಅಭಿನಯಗಳ ಮೂಲಕ ವ್ಯಕ್ತವಾಗುವುವಷ್ಟೆ. ರಸವದಲಂಕಾರ ನಿರೂಪಣ ಸಂದರ್ಭದಲ್ಲಿ ಉದ್ಭಟ ಇದನ್ನು ಸ್ಪಷ್ಟಪಡಿಸಿದ್ದಾನೆ. (ನೋಡಿ: ಅಡಿಟಿಪ್ಪಣಿ 8). ಅಲಂಕಾರ ಪ್ರಸ್ಥಾನದ ಆಲಂಕಾರಿಕರಿಗೆ ರಸತತ್ತ್ವವನ್ನು ವಿವೇಚಿಸುವ ಅಗತ್ಯ ಕಂಡು ಬರಲಿಲ್ಲ. ಆದರೆ ತಮ್ಮ ಕಾಲದವರೆಗೆ ಬೆಳೆದು ಬಂದ ಮಹಾಕಾವ್ಯಗಳಲ್ಲಿ ರಸಸ್ಯಂದಿ

---

13. 'ಕಾವ್ಯಾಲಂಕಾರ ಸೂತ್ರ ವೃತ್ತಿ,' ೧ ಮತ್ತು ೨. (೧ ರಮೇಲಣ ವೃತ್ತಿ: 'ಕಾವ್ಯ ಶಬ್ದೋಽಯಂ ಗುಣಾಲಂಕಾರ ಸಂಸ್ಕೃತಯೋಃ ಶಬ್ದಾರ್ಥಯೋರ್ವರ್ತತೇ...) "ರೀತಿರಾತ್ಮಾ ಕಾವ್ಯಸ್ಯ" ಎಂದು ಕಾವ್ಯದ ಆತ್ಮ ಅಥವಾ ಆಂತರಿಕ ಸೌಂದರ್ಯದ ಕಡೆಗೆ ಮೊದಲು ದೃಷ್ಟಿಹರಿಸಿದವನು ವಾಮನ.

ಯಾದ ಕಾವ್ಯಭಾಗಗಳನ್ನೂ ಭರತನು ನಾಟ್ಯಶಾಸ್ತ್ರದಲ್ಲಿ ಉಪಮಾದಿ ನಾಲ್ಕು ಅಲಂಕಾರಗಳಲ್ಲದೆ ಅಲಂಕಾರನಾಮಕ್ಕೆ ಯೋಗ್ಯವಾದ ಇತರ ಅನೇಕ ಉಕ್ತಿವೈಚಿತ್ರ್ಯಗಳನ್ನೂ ಆಲಂಕಾರಿಕರು (ಭಾಮಹನಿಗೂ ಹಿಂದೆ ಇದ್ದವರು) ಗುರುತಿಸಿ ಹೆಸರಿಸಿದ್ದಿರಬೇಕು. ಈ ಅಲಂಕಾರಗಳು ಪ್ರಾಯಿಕವಾಗಿ ಕಾವ್ಯದ ವರ್ಣನಾಭಾಗಗಳಲ್ಲಿ ಕಂಡು ಬರುತ್ತಿದ್ದುವು.[14] ಹೀಗಿರುತ್ತ, ದಂಡಿ ಭಾಮಹರು ರಸಸ್ಯಂದಿ ಕಾವ್ಯಭಾಗಗಳನ್ನು ರಸವದಲಂಕಾರ ಎಂದು ನಿರ್ದೇಶಿಸಿದ್ದು ಅವರ ರಸಪ್ರಜ್ಞೆಗೆ ನಿದರ್ಶನ. ವರ್ಣನಾಭಾಗಗಳಲ್ಲಿ ಇತರ ಅಲಂಕಾರಗಳನ್ನು ಗುರುತಿಸಿ, ಒಟ್ಟು ೩೫ ಅಲಂಕಾರಗಳನ್ನು ನಿರೂಪಿಸಿದರು. ಹೀಗೆ, ಶ್ರವ್ಯಕಾವ್ಯದಲ್ಲಿ ಅಲಂಕಾರಕ್ಕೆ ಒಂದು ಪ್ರಮುಖಸ್ಥಾನ ದೊರೆಯಿತು. ಮುಂದಿನ ಕವಿಗಳೂ ಕೆಲವು ಆಲಂಕಾರಿಕರೂ ಅಲಂಕಾರಗಳನ್ನು ಸೃಷ್ಟಿಸುತ್ತ, ಅವುಗಳನ್ನು ಬೆಳೆಸಿಕೊಂಡು ಹೋದರು. ಅಪ್ಪಯ್ಯದೀಕ್ಷಿತನ 'ಕುವಲಯಾನಂದ'ದ ಕಾಲಕ್ಕೆ ಅಲಂಕಾರಗಳ ಸಂಖ್ಯೆ ಸುಮಾರು ೧೫೦ಕ್ಕೆ ಏರಿತು.[15]

ಅಲಂಕಾರಗಳನ್ನು ಬಗೆ ಬಗೆಯಲ್ಲಿ ವರ್ಗೀಕರಿಸುವ ಕೆಲಸವೂ ನಡೆದಿದೆ. ರುದ್ರಟನು ತನ್ನ ಕಾವ್ಯಾಲಂಕಾರದಲ್ಲಿ ಒಂದು ಶಾಸ್ತ್ರೀಯ ಕ್ರಮವನ್ನು ಅನುಸರಿಸಿ ಅವುಗಳನ್ನು ನಾಲ್ಕು ವರ್ಗಗಳನ್ನಾಗಿ ವಿಂಗಡಿಸಿದ್ದಾನೆ. ಅವನನ್ನು ಅನುಸರಿಸಿರುವ ನಾಗವರ್ಮನ ಮಾತಿನಲ್ಲಿ ಆ ಕ್ರಮವನ್ನು ತಿಳಿಯಬಹುದು: "ಪ್ರವರಾರ್ಥಾಲಂಕಾರಂ। ವಿವಿಧ ವಿಕಲ್ಪಪ್ರಪಂಚಿತಂ ; ಕ್ರಮದಿಂ ವಾ। ಸ್ತವಮುಪಮೆಯತಿಶಯಂ ಶ್ಲೇ।ಷ ವೆಂದು ನಾಲ್ಕು ಪ್ರಕಾರದಿಂ ನೆಱೆದಿರ್ಕುಂ."

ಅಲಂಕಾರ ಶಾಸ್ತ್ರದಲ್ಲಿ ಭೋಜನಿಗೆ ಒಂದು ವಿಶಿಷ್ಟಸ್ಥಾನವುಂಟು. ತನಗಿಂತ ಹಿಂದಿನ ಎಲ್ಲ ಆಲಂಕಾರಿಕರ ಸಿದ್ಧಾಂತಗಳನ್ನೂ ಓದಿ ಚಿಂತನ ಮಾಡಿ ತನ್ನದೇ ಆದ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾನೆ. ಆನಂದವರ್ಧನನು ಕಾವ್ಯ ಸೌಂದರ್ಯಪೋಷಕ ಅಂಶಗಳೆಲ್ಲವನ್ನೂ ಧ್ವನಿ ಸಿದ್ಧಾಂತದಲ್ಲಿ ಅಳವಡಿಸಿದ ರೀತಿಯಲ್ಲಿ ಭೋಜನು ವಾಮನನ 'ಸೌಂದರ್ಯಮಲಂಕಾರಃ' ಎಂಬ ತತ್ತ್ವವನ್ನು ಅನುಮೋದಿಸಿ, "ತ್ರಿವಿಧಃ ಖಲು ಅಲಂಕಾರ ವರ್ಗಃ, ವಕ್ರೋಕ್ತಿಃ, ಸ್ವಭಾವೋಕ್ತಿಃ, ರಸೋಕ್ತಿರಿತಿ...ತತ್ರೋಪಮಾದ್ಯಲಂಕಾರ ಪ್ರಾಧಾನ್ಯೇ ವಕ್ರೋಕ್ತಿಃ ಸೋಽಪಿ ಗುಣ ಪ್ರಾಧಾನ್ಯೇ ಸ್ವಭಾವೋಕ್ತಿಃ,

---

14. ಮಹಿಮಭಟ್ಟನ ವ್ಯಕ್ತಿ ವಿವೇಕದಲ್ಲಿ ಕಾವ್ಯ ಮತ್ತು ನಾಟ್ಯಗಳ ನಡುವಣ ಭೇದವನ್ನು ವಿವರಿಸುವ ಶ್ಲೋಕ ಉದ್ಧೃತವಾಗಿದೆ : "ಅನುಭಾವ ವಿಭಾವಾನಾಂ ವರ್ಣನಾ ಕಾವ್ಯಮುಚ್ಯತೇ। ತೇಷಾಮೇವ ಪ್ರಯೋಗಸ್ತು ನಾಟ್ಯಂ ಗೀತಾದಿ ರಂಜಿತಮ್॥" (ವಿ. ರಾಘವನ್ ಅವರ 'ಭೋಜನ ಶೃಂಗಾರ ಪ್ರಕಾಶ'ದಲ್ಲಿ ಉದ್ಧೃತ ೧೯೬೩ : ಪು. ೮೦)

15. ಪ್ರಸ್ತುತ ಲೇಖನದ ಲೇಖಕನು 'ಅನುಭೂತ್ಯಾಭಾಸ' ('ವಿರೋಧಾಭಾಸ' ಎನ್ನುವ ಹಾಗೆ) ಎಂಬ ನೂತನ ಅಲಂಕಾರವನ್ನು ಗುರುತಿಸಿ ವಿವರಿಸಿರುವುದನ್ನು ಇಲ್ಲಿ ಉಲ್ಲೇಖಿಸಬಹುದು. (ನೋಡಿ : 'ಸಾಧನೆ', ಸಂ. ೧-೧)

ವಿಭಾವಾನುಭಾವ ವ್ಯಭಿಚಾರಿ ಸಂಯೋಗಾತ್ತು ರಸನಿಷ್ಪತ್ತೌ ರಸೋಕ್ತಿರಿತಿ" ಎಂದು ಎಲ್ಲವನ್ನೂ ಅಲಂಕಾರ ಎಂದು ಬಿಟ್ಟನು![16] ಭೋಜನ ದೃಷ್ಟಿಯಲ್ಲಿ ಧ್ವನಿಯೂ ಅಲಂಕಾರವೇ.[17] ಅವನ ದೃಷ್ಟಿಯಲ್ಲಿ, "ಕಾವ್ಯಕ್ಕೆ ರಮಣೀಯತೆಯನ್ನು ನೀಡುವ ಎಲ್ಲ ಲಕ್ಷಣಗಳೂ ಅಲಂಕಾರ." ಭೋಜನಿಗೂ ಬಲು ಮುಂಚೆ ಶ್ರೀವಿಜಯ ಕವಿರಾಜ ಮಾರ್ಗದಲ್ಲಿ 'ಧ್ವನಿಯೆಂಬುದಲಂಕಾರಂ' ಎಂದು ಘೋಷಿಸಿರಲಿಲ್ಲವೆ ? ಭೋಜನಲ್ಲಿ ಇನ್ನೊಂದು ಸೋಜಿಗದ ಕಲ್ಪನೆ ಎಂದರೆ, ಅವನು ಹೇಳುವ ಪ್ರಬಂಧಾಲಂಕಾರಗಳು. ಇವನ್ನು ಶಬ್ದ, ಅರ್ಥ, ಉಭಯ ಎಂದು ಮೂರು ವರ್ಗಗಳಾಗಿ ವಿಂಗಡಿಸಿದ್ದಾನೆ. ದಂಡಿ ಹೇಳುವ ಮಹಾಕಾವ್ಯಲಕ್ಷಣಗಳಿಗೆ ದೃಶ್ಯಕಾವ್ಯದ ಬೀಜ ಬಿಂದು ಪತಾಕಾದಿ ಅಂಗಗಳು ಮುಂತಾದವನ್ನು ಸೇರಿಸಿ ಪ್ರಬಂಧಾಲಂಕಾರಗಳನ್ನು ರೂಪಿಸಿದ್ದಾನೆ.[18]

ಅಲಂಕಾರ ಪ್ರಸ್ಥಾನ ಧ್ವನಿಸಿದ್ಧಾಂತದಲ್ಲೂ ವಕ್ರೋಕ್ತಿವಾದದಲ್ಲೂ ಒಂದು ಸಹಜವಿಕಾಸವನ್ನು ಪಡೆದುಕೊಂಡು, ಒಟ್ಟು ಕಾವ್ಯಮೀಮಾಂಸೆಗೇ 'ಅಲಂಕಾರಶಾಸ್ತ್ರ' ಎಂದು ಹೆಸರಾಗಲು ಕಾರಣವಾಗಿರುವ ಸಂಗತಿಯಲ್ಲಿ ಆ ಪ್ರಸ್ಥಾನದ ಸಾರ್ಥಕ್ಯವನ್ನೂ ಪ್ರಾಮುಖ್ಯವನ್ನೂ ನಾವು ಕಾಣಬಹುದು. ಡಾ॥ ವಿ. ರಾಘವನ್ ಅವರು ಅಲಂಕಾರ ಪ್ರಸ್ಥಾನದ ಪ್ರಾಮುಖ್ಯವನ್ನು ಚೆನ್ನಾಗಿ ವಿವರಿಸಿದ್ದಾರೆ :

> "ಸಂಸ್ಕೃತ ಕಾವ್ಯಮೀಮಾಂಸೆಯ ಅಲಂಕಾರಯುಗ ರುದ್ರಟನ ಕಾಲಕ್ಕೆ ಕೊನೆಗೊಂಡಿತೆಂದು ಸರಿಸುಮಾರಾಗಿ ಹೇಳಬಹುದು ; ಆ ಯುಗ ಸಂಸ್ಕೃತ ಕಾವ್ಯಮೀಮಾಂಸೆಯ ಚರಿತ್ರೆಯಲ್ಲಿ ಬಹಳ ಗಮನಾರ್ಹವಾದುದೂ ಆಗಿದೆ. ಏಕೆಂದರೆ, ಅಲಂಕಾರಗಳ ವಿಶ್ಲೇಷಣೆ ವಕ್ರೋಕ್ತಿಯ ಉದಯಕ್ಕೆ ದಾರಿ ಮಾಡಿಕೊಟ್ಟಿತು : ಇನ್ನೊಂದು ದಿಕ್ಕಿನಲ್ಲಿ ದೀಪಕ, ಸಮಾಸೋಕ್ತಿ, ಪರ್ಯಾಯೋಕ್ತ–ದಂಥ ವ್ಯಂಗ್ಯಾಂಶವನ್ನು ಹೊಂದಿರುವ ಅಲಂಕಾರಗಳ ಮೂಲಕ ಧ್ವನಿ ಎಂಬ ವ್ಯಂಗ್ಯಾರ್ಥದ ಪರಿಕಲ್ಪನೆಗೆ ಎಡೆಮಾಡಿಕೊಟ್ಟಿತು. ವಕ್ರೋಕ್ತಿ ಅಲಂಕಾರದ ಮುಂಬರಿದ ಬೆಳವಣಿಗೆ ; ಅದರ ಅತ್ಯಂತ ಪ್ರಭಾವಶಾಲಿ ಪ್ರತಿಪಾದಕನಾದ ಕುಂತಕನು ತನ್ನ 'ವಕ್ರೋಕ್ತಿ ಜೀವಿತ'ವನ್ನು ಕಾವ್ಯಾಲಂಕಾರ ಎಂದು ವರ್ಣಿಸಿದ್ದಾನೆ."[19]

---

16. ಡಾ॥ ವಿ. ರಾಘವನ್ : 'ಶೃಂಗಾರ ಪ್ರಕಾಶ', ಪು. ೧೧೬.
17. ಭೋಜ : 'ಸರಸ್ವತೀಕಂಠಾಭರಣ', I-೬೩, ಪು. ೫೫ (ಶೃಂಗಾರ ಪ್ರಕಾಶ, ಪು. ೧೫೩-೪) : "ಧ್ವನಿಮತ್ತಾತು ಗಾಂಭೀರ್ಯಮ್" ಧ್ವನಿ ಗಾಂಭೀರ್ಯವೆಂಬ ಶಬ್ದಗುಣ.
18. 'ಶೃಂಗಾರ ಪ್ರಕಾಶ', ಪು. ೬೦೧
19. ಡಾ॥ ವಿ. ರಾಘವನ್ : Some Concepts of Alankara Sastra, Adyar Library, 1942 ; P. 260.

ವಾಮನನ ದೃಷ್ಟಿಯಲ್ಲಿ ಅಲಂಕಾರವು ಸೌಂದರ್ಯ ಎಂದೇ ಎಣಿಕೆಗೊಂಡು, ಕಾವ್ಯದ ಎಲ್ಲ ಅಂಶಗಳೂ ಸೌಂದರ್ಯಾಂಶಗಳು ಎಂಬ ಭಾವನೆ ಮೂಡಿತು. ಧ್ವನಿಯೂ ಕಾವ್ಯಸೌಂದರ್ಯದ ಒಂದು ಅಂಶವೆಂದೇ ಸಿದ್ಧವಾಯಿತು. ಧ್ವನಿಕಾವ್ಯವು ಯಥೋಜಿತ ವಾಗಿ ಅಲಂಕಾರಯುಕ್ತವಾಗಿದ್ದರೆ ಚಿನ್ನದ ಹೂವಿನಲ್ಲಿ ಕಂಪು ಇದ್ದಂತೆ. ಸಾಲಂಕೃತ ವಲ್ಲದ ಎಷ್ಟೇ ಉತ್ತಮವಾದ ಧ್ವನಿಕಾವ್ಯವಾದರೂ ಕುಂಕುಮ ಬೊಟ್ಟಿಲ್ಲದ ಗರತಿಯ ಹಣೆಯಂತೆ ಶೋಭಿಸದು.

ರಾಘವಾಂಕನು ಚಿತ್ರಿಸಿರುವ ಸರ್ವಾಂಗಸುಂದರಿಯಾದ ಕಾವ್ಯಕನ್ನಿಕೆಯ ವರ್ಣನೆಯೊಂದಿಗೆ ಈ ಲೇಖನವನ್ನು ಮುಗಿಸಬಹುದು :

ರಸಜೀವ ಭಾವವೊಡಲರ್ಥವವಯುವ ಶಬ್ದ
ವಿಸರವೇ ನುಡಿಯಲಂಕಾರವೇ ತೊಡಿಗೆಯು ತ
ವೆ ಸುಲಕ್ಷಣವೆ ಲಕ್ಷಣ ವಿಮಳ ಪದನ್ಯಾಸ ನಡೆ ರೀತಿ ಸುಕುಮಾರತೆ
ರಸಿಕತನ ಸುಳಿ ಸುಖಂ ನಿಳಯವಂತಪ್ಪಯಿಾ
ಪೊಸ ಕಾವ್ಯಕನ್ಯಕೆಯ ಪಡೆದು ಪಂಪಾಂಬಿಕೆಯ—
ರಸ ವಿರೂಪಾಕ್ಷಂಗೆ ಕೊಟ್ಟ ಪಂಪೆಯ ರಾಘವಾಂಕನೇಂ ಧನ್ಯನೋ.

# ಶಬ್ದಾಲಂಕಾರಗಳು

ಸೀತಾರಾಮ ಜಾಗೀರ್‌ದಾರ್

೧

ಶಬ್ದ ಇಲ್ಲದೆ ಸಾಹಿತ್ಯವಾವುದೂ ಇಲ್ಲ; ಆದರೆ ಕೇವಲ ಶಬ್ದರಾಶಿ–ಸಾಹಿತ್ಯವಾಗಲೂ ಸಾಧ್ಯ ಇಲ್ಲ. ಶಬ್ದ, ಸಾಹಿತ್ಯದ ಶರೀರ; ಭಾವ ಅದರ ಜೀವ. ಭಾವಭರಿತ ತುಡಿತಪೂರ್ಣ ಶಬ್ದಶರೀರವೇ ಕಾವ್ಯ; ವಿಶೇಷ ಒಲ್ಟೇಜವುಳ್ಳ ವಿದ್ಯುತ್ ತಂತಿಯಂತೆ–ಕಾವ್ಯದಭಾಷೆ; 'ಅರ್ಥಕೊಗ್ಗದ ಶಬ್ದಗಳ ಪವಣಿಸುವ ತಂತ್ರ' ಅದಲ್ಲ. ಪ್ರಜ್ಞೆಗೆ ಕಾವ್ಯ, ಐಂದ್ರಿಯಕ ಭಾವನಾತ್ಮಕ ಮತ್ತು ಕಲ್ಪನಾತ್ಮಕ ಆಯಾಮಗಳನ್ನು ಒದಗಿಸುತ್ತದೆ; ರಸವೇ ಅದರ ಪರಿಧಿ. ಶಬ್ದದ ಕಾರ್ಯವನ್ನು ನಾದ (Sound), ಅರ್ಥ (Denotation) ಮತ್ತು ಆನುಷಂಗಿಕಾರ್ಥ (Connotation) ರೂಪದಲ್ಲಿ ಪಾಶ್ಚಾತ್ಯ ಪ್ರಕಾರದಲ್ಲೂ ಅಭಿಧಾ, ಲಕ್ಷಣಾ ಹಾಗೂ ವ್ಯಂಜನಾ ವ್ಯಾಪಾರ ಎಂದು ಪ್ರಾಚ್ಯ ರೀತಿಯಲ್ಲೂ ವಿವರಿಸಬಹುದು. ಈ ಒಂದೊಂದಕ್ಕೂ ಅದರದೇ ಆದ ಇತಿಮಿತಿಗಳಿವೆಯೆಂಬುದನ್ನು ವಿಮರ್ಶಕ ಮರೆಯಬಾರದು[1]. ಅಭಿಧಾವ್ಯಾಪಾರ ಹಾಗೂ ಅರ್ಥ (Denotation) ಇವುಗಳನ್ನು ಮಾತ್ರ ಏಕೀಕರಿಸಬಹುದು. ಶಬ್ದದ ಹುಟ್ಟನ್ನು ಪ್ರಾಚೀನರ ರೀತಿಯಲ್ಲಿ ಮತ್ತು ಅರ್ವಾಚೀನರ ರೀತಿಯಲ್ಲಿ—ಎರಡು ವಿಧದಲ್ಲಿ ನಾವು ವಿವರಿಸಬಹುದು:—

ಪ್ರಾಚೀನರ ರೀತಿಯಲ್ಲಿ : ಅನುಕೂಲಪವನನಿಂ ಜೀ
ವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂ

---

1. The qualifications of a good critic are three. He must be an adept at experiencing, without eccentricities, the state of mind relevent to the work of Art he is judging Secondly, he must be able to distinguish experiences from one another as regards their less superficial features. Thirdly, he must be a sound judge of values.

ಗಿನವೊಲ್ ಶಬ್ದದ್ರವ್ಯಂ
ಜನಯಿಸುಗುಂ ಶ್ವೇತಮದಜಿ ಕಾರ್ಯಂ ಶಬ್ದಂ॥[2]

ಅರ್ವಾಚೀನ ರೀತಿಯಲ್ಲಿ: ಆ ಕಾಮ ಮನುಷ್ಯನ
ಮಾನಸ ಮೈಥುನದಿಂದ
ಬುದ್ಧಿ ಬಸರಾಗಿ–
ಹಡೆದಿದೆ
ಶಬ್ದಗಳ ನಾಯಿಯನ್ನು[3]

ಮತ್ತೆ ಸಂಸ್ಕೃತದಲ್ಲಿ 'ಸ್ಫೋಟವಾದ' ಎಂಬುದೊಂದೂ ಇದೆ[4]. ಇಂದಿನ ಕಾವ್ಯ ಪ್ರವಾಹದ ಹಿಂದೆ ಈ ಎಲ್ಲ ಪ್ರವಾಹಗಳ ಸಂಗಮ—ಸಂಮಿಶ್ರಣ—ಐಕ್ಯತೆ ಇವೆ. ಆದುದರಿಂದ ಇಂದು ವ್ಯಾಪಾರವನ್ನು ಸಂಕೀರ್ಣ ದೃಷ್ಟಿಯಿಂದ ನೋಡಬೇಕು. ಆಡುವ ಮಾತಿಗೆ ಭೂಷಣವಾದ ಮೆರುಗನ್ನು ಕಲ್ಪಿಸುವುದು ಅಲಂಕಾರವೆನಿಸುತ್ತದೆ. ಕನ್ನಡದಲ್ಲಿ ಸುಮಾರು ಆರು ಬಗೆಯ ಶಬ್ದಾಲಂಕಾರಗಳು ಮುಖ್ಯವಾಗಿ ಇರುವುದು ಕಂಡು ಬರುತ್ತದೆ: ಅನುಪ್ರಾಸ, ಯಮಕ, ಚಿತ್ರ, ಪ್ರತಿಮಾವಿಧಾನ, ಪ್ರತೀಕ ಮತ್ತು ಸಾಂದರ್ಭಿಕ ನಿದರ್ಶನ. ಇವುಗಳಿಗೆ ಒಳಭೇದಗಳೂ ಇವೆ.

೨

**ಅನುಪ್ರಾಸ :**[5] ಇದರ ಇತಿಹಾಸ ಸದ್ಯ ಭಾಮಹನ ಕಾವ್ಯಾಲಂಕಾರ ಗ್ರಂಥದಲ್ಲಿ ಮೊದಲು ದೊರೆಯುತ್ತದೆ. ಭಾಮಹ 'ಅನುಪ್ರಾಸ' 'ಗ್ರಾಮ್ಯಾನುಪ್ರಾಸ' ಮತ್ತು 'ಲಾಟೀಯಾನುಪ್ರಾಸ' ಎಂದು ಮೂರು ಬಗೆಗಳನ್ನು ವಿವರಿಸಿದ್ದಾನೆ.[6] ಸದೃಶಾಕ್ಷರದ ಆವೃತ್ತಿ ಅನುಪ್ರಾಸ ಎನ್ನಿಸಿಕೊಳ್ಳುತ್ತದೆ :

ನೆರೆ ಬಂತು ತೊರೆಗೆ, ನೊರೆ ಬಂತು ತೆರೆಗೆ, ಹರೆ ಬಂತು ದರಿಯ ಝರಿಗೆ
ಮದ ಬಂತು ವನಕೆ, ಮುದ ಬಂತು ಜನಕೆ, ನಿಧಿ ಬಂತು ಗದ್ದೆ ಕೆರೆಗೆ
ಸಂಭ್ರಮದ ಪಯಿರು ಸಂತಸದ ಸುಗ್ಗಿಗೌತಣದ ಓಲೆಯಾಗಿ
ಕಾರ್ಗಾಲ ಬಂತು ಕಾಶ್ಮೀರ ಶ್ರೀಗೆ ಶ್ರೀಗಂಧ ಸ್ನಾನಮಾಗಿ ॥[7]

---

2. ಶಬ್ದಮಣಿ ದರ್ಪಣಂ (ಸಂ. ಪ್ರೊ. ಡಿ. ಎಲ್. ಎನ್.) ಪೀಠಿಕೆ, ಸೂ. ೯ ಪು. ೭ (೧೯೬೪)
3. ನಂದೀಕೋಲು (ಚಂದ್ರಕಾಂತ ಕುಸನೂರು) ಹೊಸ ಕಾವ್ಯ ಹೊಸ ದಿಕ್ಕು ಪು. ೧೦೫
4. ಭಾರತೀಯ ಕಾವ್ಯಮೀಮಾಂಸೆ (ತೀ.ನಂ.ಶ್ರೀ) ಪುಟ ೫೬-೫೪ (೧೯೬೧)
5. ಇಂಗ್ಲಿಷ್ ಭಾಷೆಯಲ್ಲಿ 'Alliteration' 'Assonance' ಮತ್ತು 'Consonance' ಎಂದು ಇದನ್ನು ವಿಭಜಿಸಿ ವಿವರಿಸುವುದುಂಟು. ಆದರೆ 'Alliteration' ಒಂದೇ ವಿಶೇಷ ಬಳಕೆಯಲ್ಲಿದೆ.
6. ಕನ್ನಡ ಕಾವ್ಯಾಲಂಕಾರ (ಡಾ. ಕೆ. ಕೃಷ್ಣಮೂರ್ತಿ) ಪು. ೨೩–೨೪)
7. ಕರುಣಾ ಶ್ರಾವಣ (ಡಾ. ಸಿದ್ಧಯ್ಯ ಪುರಾಣಿಕ) ಪು. ೩೯

ಇಲ್ಲಿ 'ನ, ರ, ಗ, ದ, ಬ, ಕ ಮತ್ತು ಸ' ಅಕ್ಷರಗಳ ಆವರ್ತನೆ ಇದೆ. ಅನುಪ್ರಾಸದ ಜೊತೆ ಒಳಪ್ರಾಸವೂ ಇದೆ. ದಂಡಿ ಅನುಪ್ರಾಸವನ್ನು 'ವರ್ಣಾವೃತ್ತಿರನುಪ್ರಾಸಃ' ಎಂದು ಹೇಳಿ ಕೊಟ್ಟಿರುವ ಉದಾಹರಣೆ ಕನ್ನಡದ ಪ್ರಾಸದ ಮೂಲವನ್ನೂ ತೋರ ಬೆರಳಿನಿಂದ ತೋರಿಸುತ್ತದೆ :

ಚಂದ್ರೇಶರನ್ನಿಶೋತ್ತಂಸೇ ಕುಂದಸ್ತ ಬಕವಿಭ್ರಮೇ ।
ಇಂದ್ರನೀಲನಿಭಂ ಲಕ್ಷ್ಮ ಸಂದಧಾತ್ಯಲಿನಃ ಶ್ರಿಯಮ್ ॥[8]

ಈ ಮಾರ್ಗಕಾರರನ್ನೇ ಅನುಸರಿಸಿದ ಕವಿರಾಜಮಾರ್ಗಕಾರ 'ವಿನುತಪ್ರಾಸ' 'ಶಾಂತಪ್ರಾಸ' 'ವರ್ಗಪ್ರಾಸ' 'ಸಮೀಪಪ್ರಾಸ' 'ಅನುಪ್ರಾಸ' ಮತ್ತು 'ಅಂತಗತ ಪ್ರಾಸ' ಎಂದು ಆರು ವಿಧವಾಗಿ ವಿವರಿಸಿದ್ದಾನೆ.[9] ಅವುಗಳಲ್ಲಿ 'ಪ್ರಾಸ,' ಅನುಪ್ರಾಸ ಮತ್ತು 'ಅಂತಪ್ರಾಸ' ಅತಿಶಯುವಾದುವುಗಳು ಎಂದು ನುಡಿದಿದ್ದಾನೆ. ಅನುಪ್ರಾಸದ ನಾದ ಮಾಧುರ್ಯ ಕನ್ನಡ ಸಾಹಿತ್ಯದ ಎಲ್ಲ ರೂಪಗಳಲ್ಲೂ ದೊರೆಯುತ್ತದೆ ; ಎಲ್ಲ ಕವಿಗಳ ಕೃತಿ ರಚನೆಗಳಲ್ಲೂ ಕಾಣಲು ಸಿಗುತ್ತದೆ. ಆಂತರಿಕ ತುಡಿತವನ್ನು ಉಂಟು ಮಾಡುವುದರಿಂದ ಅದು ಕಾವ್ಯದಲ್ಲಿ ಅಲ್ಲಲ್ಲಿ ತಂತಾನೆ ಅವತಾರ ಎತ್ತಿ ನಿಲ್ಲುತ್ತದೆ. ಎರಡೆರಡು ಅಕ್ಷರಗಳು ಜತೆ ಜತೆಯಾಗಿ ಹಲವು ಕಡೆ ಬಂದರೆ ಅದನ್ನು 'ಛೇಕಾನು ಪ್ರಾಸ' ಎಂದು ಹೇಳುತ್ತಾರೆ.[10]

**ಯಮಕ*** : ಭಾರತೀಯ ಕಾವ್ಯಮೀಮಾಂಸೆಯಲ್ಲಿ ಶಬ್ದಾಲಂಕಾರಗಳಲ್ಲಿ 'ಯಮಕ' ಎಂಬುದೇ ಪ್ರಥಮವಾದದ್ದು. ಭರತನು 'ನಾಟ್ಯಶಾಸ್ತ್ರ' ಗ್ರಂಥದಲ್ಲಿ ನಾಲ್ಕು ಅಲಂಕಾರಗಳಲ್ಲಿ ಒಂದೆಂದು 'ಯಮಕ' ಅಲಂಕಾರವನ್ನು ವಿವರಿಸಿದ್ದಾನೆ :

ಉಪಮಾ ದೀಪಕಂ ಚೈವ ರೂಪಕಂ ಯಮಕಂ ತಥಾ
ಕಾವ್ಯಸ್ಯೈತೇಹ್ಯಲಂಕಾರಾಶ್ಚತ್ವಾರಃ ಪರಿಕೀರ್ತಿತಾಃ॥[11]

'ಯಮಕ' ಎಂದರೆ ಶಬ್ದಾವೃತ್ತಿ. ಇದನ್ನು ಆತ ಕ್ರಮವಾಗಿ 'ಪಾದಾಂತ ಯಮಕ' 'ಕಾಂಚೀಯಮಕ' 'ಸಮುದ್ಗಯಮಕ' 'ವಿಕ್ರಾಂತಯಮಕ' 'ಚಕ್ರವಾಲಯಮಕ' 'ಸಂದಷ್ಟಯಮಕ' 'ಪಾದಾದಿಯಮಕ' 'ಆಮ್ರೇಡಿತಯಮಕ' 'ಚತುರ್ವ್ಯವಸಿತ

8. ಕನ್ನಡ ಕಾವ್ಯಾದರ್ಶ (ಡಾ. ಕೆ. ಕೃಷ್ಣಮೂರ್ತಿ) ಪುಟ ೨೬
9. ಕವಿರಾಜ ಮಾರ್ಗಂ (ಸಂ. ಪ್ರೊ. ಎಂ. ವಿ. ಸೀತಾರಾಮಯ್ಯ) II-೩೦ ರಿಂದ ೪೫
10. ಕನ್ನಡ ಕೈಪಿಡಿ (ಮೈ. ವಿ. ವಿ. ಪ್ರ) ಪು. ೨೬೮ (೧೯೬೫)
11. ನಾಟ್ಯಶಾಸ್ತ್ರ (ಸಂ. ಮನ್ಮೋಹನ ಘೋಷ) ಸಂಪುಟ-೧, ಅ. ೧೭-೪೩, ಪು. ೮೩
* ಮರಾಠಿ ಭಾಷೆಯಲ್ಲಿ ಯಮಕವನ್ನೇ ಪ್ರಾಸವೆಂದು ಹೇಳಲಾಗುತ್ತದೆ.
ನೋಡಿ : ಛಂದೋರಚನಾ, ಪು. ೪೮-೬೨

ಯಮಕ' ಮತ್ತು 'ಮಾಲಾಯಮಕ' ಎಂದು ಹತ್ತು ಬಗೆಯದ್ದಾಗಿ ವಿವರಿಸಿದ್ದಾನೆ.[12] ಭಾಮಹನು ಇವನ್ನು ಕೇವಲ ಐದೇ ಎಂದು ಹೇಳಿದ್ದಾನೆ :

> ಆದಿಮಧ್ಯಾಂತಯಮಕಂ ಪಾದಾಭ್ಯಾಸಂ ತಥಾವಲೀ ।
> ಸಮಸ್ತಪಾದಯಮಕಂ ಇತ್ಯೇತತ್ ಪಂಚಧೋಚ್ಯತೇ ॥[13]

'ಯಮಕ' ಅರ್ಥ ಭೇದಗಳ ಮೂಲಕ ಭಾವವನ್ನು ಸವಿಯಲು ಅನೇಕ ಸಲ ಅಡ್ಡಿಯಾಗುತ್ತದೆ. ಅದು ಒಗಟದ ಹಾಗೆ ಬೆಡಗಿನ ವಚನವಾಗುತ್ತದೆ. ಅರ್ಥೈಸಿಕೊಳ್ಳಲು ಪಾಂಡಿತ್ಯ ಬೇಕೇಬೇಕು. ಇದನ್ನು ಬಗೆದೇ ಇಂತಹ ಕಾವ್ಯವನ್ನು ಭಾಮಹ ಗೇಲಿಮಾಡಿದ್ದಾನೆ :

> ಕಾವ್ಯಾನ್ಯಪಿ ಯದೀಮಾನಿ ವ್ಯಾಖ್ಯಾಗಮ್ಯಾನಿ ಶಾಸ್ತ್ರವತ್ ।
> ಉತ್ಸವಃ ಸುಧಿಯಾಮೇವ ಹನ್ತ ದುರ್ಮೇಧಸೋ ಹತಾಃ ॥

[ಶಾಸ್ತ್ರವೇನೋ ವ್ಯಾಖ್ಯಾನವಿಲ್ಲದೆ ಅರ್ಥವಾಗುವುದಿಲ್ಲ. ಈ ಕಾವ್ಯಗಳೂ ಶಾಸ್ತ್ರದಂತೆಯೇ ವ್ಯಾಖ್ಯಾನವಿಲ್ಲದೆ ತಿಳಿಯದೆ ಹೋಗುವುದಾದರೆ ಪಂಡಿತರಿಗೆ ಮಾತ್ರ ಆನಂದವಾಗಬಹುದು. ಆದರೆ ಅಲ್ಪಮತಿಗಳೆಲ್ಲರೂ ಹತರಾದಂತೆಯೇ.][14]

ದಂಡಿಯು ಯಮಕ, ಚಿತ್ರಬಂಧ ಮತ್ತು ಪ್ರಹೇಳಿಕಾ(ಒಗಟೆ) ಮುಂತಾದುವನ್ನು ಸಾಕಷ್ಟು ವಿಸ್ತಾರವಾಗಿ ಸೋದಹಾರಣೆಗಳೊಂದಿಗೆ ವಿಂಗಡಿಸಿ ವಿವರಿಸಿದ್ದಾನೆ.[15] ಇಲ್ಲಿನ ಚಮತ್ಕಾರಗಳು ವಿಶೇಷವಾಗಿ ಸಂಸ್ಕೃತ ಭಾಷೆಗೆ ಅನ್ವಯಿಸುವಂತಹವು. ಕನ್ನಡ ಭಾಷೆ ಅವೆಲ್ಲವನ್ನೂ ಒಳಗೊಳ್ಳಲು ಸಾಧ್ಯವಿಲ್ಲ. ಈ ದೃಷ್ಟಿಯಿಂದ ಕನ್ನಡ ಭಾಷೆ ಅಪ್ರಗಲ್ಭ ಎಂದು ಹೇಳಿದರೆ ತಪ್ಪಾಗದು. ಸರಳತೆ ಕನ್ನಡದ ಹುಟ್ಟುಗುಣ, ಕವಿರಾಜಮಾರ್ಗಕಾರನು ಕವಿಗಳು ಅನೇಕ, ಅನಾದಿಲೋಕೋದ್ಭವರು, ಅವರ ಲೆಕ್ಕ ಅಗಣಿತ ; ಆದುದರಿಂದ ಅವರು ನಿರೂಪಿಸಿದ ವೈಶಿಷ್ಟ್ಯಗಳೂ ಅನಂತ ; ಮಾರ್ಗಗಳೂ ಅನಂತಯೆಂದಿದ್ದಾನೆ ; ಎರಡನೆಯ ಪರಿಚ್ಛೇದ-ಸಂಪೂರ್ಣ ಶಬ್ದಾಲಂಕಾರಗಳಿಗೆ ಮೀಸಲಾಗಿಸಿದ್ದಾನೆ ; ದಶಗುಣಗಳನ್ನು ವಿವರಿಸುವದರ ಜೊತೆಗೆ ದಕ್ಷಿಣೋತ್ತರ ಮಾರ್ಗಗಳನ್ನು ವಿವರಿಸಿ 'ಯಮಕ' ಕೂಡ 'ದುಷ್ಕರ ಕಾವ್ಯ' ಎಂದೇ ಹೇಳಿದ್ದಾನೆ[16]

---

12. ಅದೇ ಪು. ೮೪-೮೭. ಲಕ್ಷಣ ಹಾಗೂ ಉದಾಹರಣೆಗಳನ್ನು ನೋಡಬಯಸುವವರು ನಾಟ್ಯಶಾಸ್ತ್ರವನ್ನು ನೋಡಬಹುದು.
13. ಕನ್ನಡ ಕಾವ್ಯಾಲಂಕಾರ, ಪು ೨೫
14. ಅದೇ ಪು. ೨೯
15. ಕನ್ನಡ ಕಾವ್ಯಾಲಂಕಾರ, ಪು. ೧೧೪ ಮತ್ತು ೧೨೯-೧೪೩. ಸುಮಾರು ೧೨೪ ಪದ್ಯಗಳಲ್ಲಿ ಎಲ್ಲ ವಿವರಗಳನ್ನೂ ನೀಡಿದ್ದಾನೆ.
16. ಕವಿರಾಜ ಮಾರ್ಗಂ II. ೧೧೨, ಪು. ೫೯

ಅವುಗಳನ್ನು ವಿಶದವಾಗಿ ವಿವರಿಸಿದ್ದಾನೆ. ಆಶ್ಚರ್ಯದ ಸಂಗತಿಯೆಂದರೆ ಭಾಮಹ ನನ್ನು ನೋಡಿದ ಆತ ಯಮಕಗಳಿಗೆ ಹೆಸರನ್ನು ಕೊಟ್ಟಿಲ್ಲದಿರುವುದು ; ದಂಡಿಯನ್ನೇ ಇಲ್ಲಿ ಸಂಪೂರ್ಣ ಅನುಸರಿಸಿದಂತಿದೆ. ಇವರೆಲ್ಲರನ್ನೂ ಅನುಸರಿಸಿದ 'ಕಾವ್ಯಾವ ಲೋಕನಂ' ಗ್ರಂಥದ ಕರ್ತೃ ನಾಗವರ್ಮ (ಕ್ರಿ.ಶ. ೧೦೪೨) ಹೇಳಿರುವ ಶಬ್ದಾಲಂಕಾ ರದ ವಿವರಣೆ ತುಂಬ ಗಮನಾರ್ಹವಾಗಿದೆ :

ಅವಱೊಳ್ ಶಬ್ದಾಲಂಕಾ
ರ ವಿಭಾಗಂ ಯಮಕಮೆಸೆವನು ಪ್ರಾಸಂಚಿ
ತ್ರ ವಿಚಿತ್ರಭಿತ್ತಿ ವಕ್ರೋ
ಕ್ತಿ ವಿಶೇಷಮುಮೆನೆ ಚತುರ್ವಿಧಂ ತಾನಕ್ಕುಂ॥ [17]

ಕೃತಿಸತಿಗೆ ಇರುವ ಎರಡು ಬಗೆಯ ಅಲಂಕಾರ (ಶಬ್ದ ಜಾತ, ಅರ್ಥಜಾತ ಎಂಬೆರಡು ವಿಧ)ಗಳಲ್ಲಿ 'ಶಬ್ದ ಜಾತ' ಅಲಂಕಾರಗಳನ್ನು 'ಯಮಕ' 'ಅನುಪ್ರಾಸ' 'ಚಿತ್ರವಿಚಿತ್ರ ಭಿತ್ತಿ' (ಚಿತ್ರಕಾವ್ಯ) ಮತ್ತು 'ವಕ್ರೋಕ್ತಿ ವಿಶೇಷ' ಎಂದು ನಾಲ್ಕು ವಿಧದಲ್ಲಿ ವಿಭಾ ಗಿಸಲಾಗುವುದು. 'ವಕ್ರೋಕ್ತಿ' ಎಂದರೆ ಶಬ್ದದ ಅಭಿಧಾರ್ಥದಲ್ಲಿ ಅರ್ಥಾಂತರ ವನ್ನು (ಎರಡು ಬಗೆಯ ಅರ್ಥಗಳನ್ನು) ಉಂಟುಮಾಡಿ ಕಾಕುವನ್ನು ವ್ಯಕ್ತವಾಡು ವುದು. ಇದನ್ನು 'ವ್ಯಂಜನಾವ್ಯಾಪಾರ'[18] ಎಂದರೂ ಸರಿಹೋಗುತ್ತದೆ.

ಯಮಕ (Refrain) ಇಂಗ್ಲಿಷ್‌ನಲ್ಲೂ ಇದೆ. ಗೀತಗಳ ರೀತಿಯ ಕಾವ್ಯದಲ್ಲಿ ಅದು ವಿಶೇಷ. ಅದರಲ್ಲೂ ನುಡಿಗಳ ಮುಕ್ತಾಯದಲ್ಲಿ ಹೆಚ್ಚಾಗಿ ಬರುತ್ತದೆ,

(೧) ಮೊದಲ ತಾಯ ಹಾಲ ಕುಡಿದು
ಬಲ್ಲೆಯಿಂದ ತೊದಲಿ ನುಡಿದು
ಕೆಳೆಯರೊಡನೆ ಬೆಳೆದು ಬಂದ
ಮಾತದಾವುದು–
ನಲ್ಲೆಯೊಲವ ತೆರೆದು ತಂದ
ಮಾತದಾವುದು[19]

---

17. ಕಾವ್ಯಾವಲೋಕನಂ (ಮೈ.ವಿ.ವಿ.ಪ್ರ) ಪದ್ಯ-೫೨೪ ಮತ್ತು ೬೦೧.
18. 'ವ್ಯಂಜನಾ ವ್ಯಾಪಾರ'ವನ್ನು 'ವ್ಯಂಜನಾವೃತ್ತಿ' ಎಂದೂ ಹೇಳಲಾಗುತ್ತದೆ. ಭಾ. ಕಾ. ಮೀ. ಐದು ಬಗೆಯ ವಿವರಣೆ ಅಥವಾ ಪಕ್ಷಗಳನು ಹೊಂದಿದೆ.



ಇಲ್ಲಿನ 'ಮಾತದಾವುದು' ಇದು ಯಮಕವೇ. ಬಿ.ಎಂ.ಶ್ರೀ ಅವರ ಇಂಗ್ಲಿಷ್ ಗೀತಗಳಲ್ಲಿ ಅನೇಕ ಕಡೆಗೆ ಈ ಬಗೆಯ ಯಮಕವನ್ನು ಕಾಣಬಹುದು.

(೨) ಸುಂದರ ದಿನ, ಸುಂದರ ಇನ
ಸುಂದನ ವನ, ನೋಡು ಬಾ !
ಎಳೆ ಬಿಸಿಲೊಳು ತಿಳಿಗೊಳದೊಳು
ಜಲದಲೆಗಳು ನಲಿನಲಿಯಲು
ನೋಡು ಬಾ ! ಕೂಡು, ಬಾ !
ಬೇಗ, ಬಾ ! ಬಾ ! ಬಾ ![20]

'ಸುಂದರ' ಇಲ್ಲಿ 'ಯಮಕ' ಕುವೆಂಪು ಅನೇಕ ಕಡೆಯಲ್ಲಿ ಯಮಕಗಳನ್ನು ಸೃಜಿಸಿದ್ದಾರೆ.

(೩) ಪ್ರೇಮವೇ ಪ್ರೇಮದಿಂ ಕುಸುರಿಸಿಹ ಲತೆ ನೀನು
ಕಾಮುನಾ ಕಾಮುನೆಯ ಕೊನರು ನಾನು[21]

(೪) 'ಇಲ್ಲ ಇಲ್ಲ ನೆಹರೂ ನಿವೃತ್ತರಾಗುವುದಿಲ್ಲ' 'ನೀನು ಬಂದೆಯು
ಬಾ ಮಗು ನಂದನ' 'ಒಳ್ಳಿತನ ಸಹಜವೇನಲ್ಲ;
ಸಹಜದೊಳಗಿನ ಕಿಡಿಗೆ [22]

ಮುಂತಾಗಿ ಅನೇಕ ಕಡೆಗಳಲ್ಲಿ ನವ್ಯಕಾವ್ಯದಲ್ಲೂ 'ಯಮಕ' ಅರ್ಥವತ್ತಾಗಿ ಧ್ವನಿಪೂರ್ಣವಾಗಿ ಬಂದಿದೆ. ಈ ಬಗೆಯುವನ್ನು ಓದುವಾಗ್ಗೆ ಎಲ್ಲೂ ಕ್ಲೀಷೆ-ಕ್ಲಿಷ್ಟ ಅನ್ನಿಸುವದಿಲ್ಲ. ಅನೇಕರ ಕಾವ್ಯಗಳಿಂದ ಉದಾಹರಣೆಗಳನ್ನು ಎತ್ತಿಕೊಡಬಹುದು. ಆದರೆ ಒಂದು ಮಾತು, 'ಯಮಕ' ಹಿತಮಿತವಾಗಿ ಬರಬೇಕು, ಇಲ್ಲದಿದ್ದರೆ ಅದು ಯಮಯಾತನೆಯನ್ನುಂಟುಮಾಡುತ್ತದೆ. ಆಧುನಿಕ ಕಾವ್ಯದ ವಿಮರ್ಶೆಯಲ್ಲಿ ಇದಕ್ಕೊಂದು ವಿಶಿಷ್ಟಸ್ಥಾನ ಇರಲೇಬೇಕು. ಪ್ರಾಚೀನ ರೀತಿಯಲ್ಲಿ ಬಂದರೆ ಅದು ಸುಖಕರವಾಗದು. ನೋಡಿ :

ಕುವಲಯಕಧಿಪತಿಯಪ್ಪನೆ
ತವೆ ಲಕ್ಷಣ ಯುಕ್ತನಲ್ಲದಿರ್ದೊಡೆ ರಾಜಂ ।
ಕುವಲಯಕಧಿಪತಿಯಪ್ಪನೆ
ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ ॥

ಅಥವಾ

---

19. ಇಂಗ್ಲಿಷ್ ಗೀತಗಳು, ಕಾಣಿಕೆ, ಪು. ೧ (೧೮೫೩)
20. ಡಾ. ಕೆ. ವಿ. ಪುಟ್ಟಪ್ಪ, ಕೊಳಲು ಸಂಗ್ರಹ
21. ಕಾವ್ಯಾನಂದ (ಡಾ. ಸಿದ್ಧಯ್ಯ ಪುರಾಣಿಕ) ಜಲಪಾತ 'ಶಂಕಾ-ಸಮಾಧಾನ' ಪು ೯೦
22. ಎಂ. ಗೋಪಾಲಕೃಷ್ಣ ಅಡಿಗರ 'ಸಮಗ್ರ ಕಾವ್ಯ' ಗ್ರಂಥದಿಂದ ಆಯ್ದುಕೊಂಡಿದ್ದೇನೆ.

ವಾರಿ ವಾರಿಯೊಳಾದಾನಂ ವಾರಿ ವಾರಿ ವಿತರ್ಕಮುಂ ।
ವಾರಿ ವಾರಿ ಜಪ್ರೋದನಂ ವಾರಿ ವಾರಿಜನಾಭನೊಳ್ ॥
ಇಂತಹವು ಸಹೃದಯನ ಹೃದಯವನ್ನು ಸಹಜವಾಗಿ
ತಟ್ಟವು[23]

**ಚಿತ್ರಕವಿತ್ವ :**

ಚಿತ್ರಕವಿತ್ವ ಎಂದರೆ ಅಕ್ಷರಗಳು ಇಲ್ಲವೇ ಪದಗಳನ್ನು ಚತುರತೆಯಿಂದ ಆರಿಸಿ ರಚಿಸಿದ ಶಬ್ದ ವೈಚಿತ್ರ್ಯ; ಅವನ್ನು ಅಭ್ಯಾಸಬಲ ಅರ್ಥಾತ್ ಪಾಂಡಿತ್ಯದ ಬಟ್ಟಿಗೆಯಿಂದ ಬರೆಯಲು ಮಾತ್ರ ಸಾಧ್ಯ. ಶರ, ಶೂಲ, ಚಾಪ, ಚಕ್ರ, ಅಸಿರೂಪ ಗಜ, ರಥ, ತುರಂಗ, ಪದಗತ, ಮುರಜ, ಗೋಮೂತ್ರಿಕೆ, ಪುಷ್ಕರ, ಅರ್ಧಭ್ರಮಣ, ಸರ್ವತೋಭದ್ರ ಅಕ್ಷರಚ್ಯುತ, ಬಿಂದುಚ್ಯುತ, ದ್ವ್ಯಕ್ಷರಿ, ಏಕಾಕ್ಷರಿ, ನಿರೋಷ್ಠ್ಯ, ಅತಾಲವ್ಯ, ಚ್ಯುತದತ್ತಾಕ್ಷರ, ಗೋಪಿತ ಕ್ರಿಯಾಕಾರಕಗಳು, ನಿಗೂಢ ಚತುರ್ಥ, ಗತಪ್ರತ್ಯಾಗತ ಇವು ಚಿತ್ರ ರಚನೆಗಳು. ವಿನೋದಕ್ಕೆ ಉಪಯುಕ್ತವಾದ ರಚನೆಗಳ ಪ್ರಹೇಳಿಕೆಗಳು(ಹೇಳಿಕೆ ಅಥವಾ ಒಗಟು); ಇವುಗಳಲ್ಲೂ—ನುಸುಳು, ಒರ್ನುಡಿ, ಭಾಮೆ, ಅಸ್ಪಷ್ಟಾರ್ಥ. ಉಟಿವು, ನಾಮಾಂತರ, ಕುಸುರಿ ಎಂದು ಮುಂತಾಗಿ ಭೇದಗಳಿವೆ, ಮದನತಿಲಕಂ (ಚಂದ್ರರಾಜ ಕ್ರಿ. ಶ. ೧೦೨೪-೪೨. ಗ್ರಂಥದಲ್ಲಿ ಕೆಲವು ಚಿತ್ರಕವಿತೆಗಳನ್ನು ಕಾಣಬಹುದು. ಒಂದು ಉದಾಹರಣೆ :

ಅಂಗ ನೃಪಾಯತಿ ತುಂಗಭುಜಂ ಕಲಿಯುಂಗಿತ ಶಿಕ್ಷಿತನಿಂದು ಯಶಂ ।
ಪಿಂಗಜದೊಂಗತ ಭೃಂಗಕಚಂ ಕಲಿ ಮಂಗಳ ಲಕ್ಷಣಯುಕ್ತನಿವಂ॥
ಸಂಗರ ಕೇಸರಿ ಸಂಗಗುಣಂ ಬಲಿ ಭೃಂಗರ ದಕ್ಷನು ವಾಯುತನುಂ ।
ಸಂಗದ ಸನ್ಮತಿ ರಂಗವಹಂ ಸವಭಂಗಿಯನೀಕ್ಷಿಸಿ ಮಾಚನೃಪಂ ॥

ಇದುವೆ ಎಡೆಯಕ್ಕರಮುಂ ಕಿಱಿಯಕ್ಕರಮುಂ ಚೌಪದಿಕೆಯುಂ, ಎರಡು ಪಟ್ಪದಿಯುಂ, ತ್ರಿಪದೋನ್ನತಿಯುಂ, ವಲ್ಜಮುಖಿಯುಂ, ತ್ರೋತೋಟಕಮುಂ, ಚಿತ್ರಪದಕಮುಂ, ಕಮಳಮುಂ, ಚಂದ್ರಿಕೆಯುಂ, ಇಂದುಮುಖಿಯುಂ ಮೊದಲಾಗಿ ೮೪ ವೃತ್ತಮುಂ, ಪಾದ ಮುರಜಬಂಧಮುಂ ಗೋಮೂತ್ರಿಕೆಯುಂ ಅಕ್ಕುಂ[24]

---

23. ಲಕ್ಷಣ ಗ್ರಂಥಗಳಲ್ಲಿ ಎಲ್ಲಕ್ಕೂ ಉದಾಹರಣೆ ದೊರೆಯುತ್ತವೆ.

24. ಕ.ಕ.ಚ. ಸಂಪುಟ-೧, ಪು. ೮೭ (೧೯೬೧ ಕ.ಸಾ.ಪ. ಮುದ್ರಣ)

ಈ ಪದ್ಯದ ರಚನೆ ಯಥಾಸ್ಥಿತಿಯಲ್ಲಿ ಸ್ವೀಕರಿಸಿದರೆ 'ಭಭಭಭಭಭಭಗ'ದ ವನಮಂಜರಿ ಅಥವಾ 'ರಸಮಂಜರಿ' ಎಂಬ ವೃತ್ತ. ಆದರೆ ಪ್ರತಿಯೊಂದು ಪಾದವನ್ನು 'ಭಭಭಗಸಸಸಸ' ಎಂದೂ ವಿಭಜಿಸಿ ಪ್ರಸನ್ನಾ (ವೃತ್ತ ಜಾತಿ ಸಮುಚ್ಚಯ ೬-೩೨) ಎಂಬ ಅರ್ಧ ಸಮಚತುಷ್ಪದಿಯ ಲಕ್ಷಣವನ್ನೂ ಇಲ್ಲಿ ಗುರುತಿಸಬಹುದು.

—ಈ ಒಂದು ಪದ್ಯದಲ್ಲಿ ಕೃತಿಕಾರ ಎಂತಹ ಪಾಂಡಿತ್ಯ ಪ್ರದರ್ಶನ ಮಾಡಿದ್ದಾನೆಂಬುದು ಆಗದೆ ಇರದು. ಚಂದ್ರರಾಜನಂತಹ ಪಂಡಿತರು ಕರ್ನಾಟಕದಲ್ಲಿ ಒಬ್ಬರೂ ಈಗ ಇಲ್ಲವೆಂದರೆ ಅತಿಶಯೋಕ್ತಿಯಾಗದು.

**ಪ್ರತಿಮಾ ವಿಧಾನ** (Imagery) : ಯಾವುದೇ ಭಾಷೆಯಲ್ಲಿನ ಬರವಣಿಗೆಯಲ್ಲಿಯು ವಿಶಿಷ್ಟ ಪದರಚನೆ ಸಹೃದಯನಿಗೆ 'ಸ್ವರೂಪ' ಒಂದನ್ನು (Picture) ಅನುಭವಿಸಲು ಸೃಜಿಸಿಕೊಡುತ್ತಿದ್ದರೆ ಆ ಪದ ಅಥವಾ ಪದಗಳ ರಚನೆಯನ್ನು ಪ್ರತಿಮೆ (Image) ಎಂದೂ, ಆ ಕ್ರಿಯೆಯನ್ನು ಪ್ರತಿಮಾವಿಧಾನ (Imagery) ಎಂದು ಹೇಳಲಾಗುತ್ತದೆ. ಇಂಗ್ಲಿಷ್ ಭಾಷೆಯಲ್ಲಿಯ ಎರಡು ಹೇಳಿಕೆಗಳನ್ನು ನಿರೂಪಿಸಿದರೆ ಇದು ಸ್ಪಷ್ಟವಾಗುತ್ತದೆ.

1. Imagery may be defined as the representation through language of sense experience[25].
2. The terms image and imagery have many connotations and meanings. Imagery as a general term covers the use of language to represent objects, actions, feelings, thoughts, ideas, states of mind and any sensory or extra-sensory experience.[26]

ಪ್ರತಿಮಾ ವಿಧಾನದ ಮೂಲ ಲ್ಯಾಟಿನ ಶಬ್ದ 'imago[27] (image - likeness.)ದಲ್ಲಿ ಹೋಲಿಕೆಗಳ ನಿರೂಪಣೆ (making of likeness) ಎಂದು ಪ್ರತಿಮಾ ವಿಧಾನವನ್ನು ನಿರೂಪಿಸಬಹುದು. ಇವು ಮೂರು ಬಗೆಯದ್ದಾಗಿವೆ: Literal (ಸ್ವಾಭಾವಿಕ) Perceptual (ಐಂದ್ರಿಯಾನುಭವಿಕ) ಮತ್ತು conceptual (ಭಾವನಾತ್ಮಕ) ಪ್ರತಿಮೆಗಳು. ಇವುಗಳನ್ನು ಉದಾಹರಣೆಯೊಂದರಿಂದ ವಿವರಿಸಿದರೆ ಹೆಚ್ಚು ಸ್ಫುಟವಾಗುತ್ತದೆ.

There once the penitents took off their shoes
And then walked bare foot the remaining mile;
And the small trees, a stream and hedgerows file

---

25. Laurence Perrine, Sound and Sense 'Imagery' p. 40
26. J. A. Cuddon, A Dictionary of Literary Terms, pp. 316-18
27. ಚೇಂಬರ್ಸ ಮುಂತಾದ ಯಾವುದಾದರೂ ನಿಷ್ಪತ್ತಿಯನ್ನುಳ್ಳ ನಿಘಂಟನ್ನು ಪರಿಶೀಲಿಸಿರಿ. ಭಾರತೀಯ ಕಾವ್ಯಮೀಮಾಂಸೆಯ 'ಅಭಿಧಾ' 'ಲಕ್ಷಣಾ' ಹಾಗೂ 'ವ್ಯಂಜನಾ' ವೃತ್ತಿಗಳ ಪರಿಧಿಯಲ್ಲೇ ಇವು ಬರಲು ಸಾಧ್ಯ 'Tone' ಎಂಬ ಇಂಗ್ಲಿಷಿನ ಇನ್ನೊಂದು ವೃತ್ತಿಯನ್ನೂ ಇಲ್ಲಿ ಸೇರಿಸಬೇಕು. ಪೂರ್ವೋಕ್ತ ಕೃತಿ 'Sound & Sense' ಇದರಲ್ಲಿ 'Tone' ಎಂಬುದನ್ನೂ ನೋಡಿ.

Slowly along the munching English lane,
Like cows to the old shrine, until you lose
Track of of your dragging pain
The stream flows down under the durid tree,
Shiloah's whirlpools gurgle and make glad
The castle of God[28]

ಇಲ್ಲಿ ಮೊದಲಿನ ಎರಡು ಪಾದಗಳಲ್ಲಿ ಸ್ವಾಭಾವಿಕ (Literal) ಪ್ರತಿಮೆ ಇದೆ[29]; 'hedgerows file slowly' ಎಂಬ ನುಡಿಗಟ್ಟಿನಲ್ಲಿ ಐಂದ್ರಿಯಾನುಭವಿಕ (Perceptual) ಪ್ರತಿಮೆ ಇದೆ[30]; ಮತ್ತೆ 'The castle of God' ಎಂಬ ನುಡಿಗಟ್ಟಿನಲ್ಲಿ ಭಾವನಾತ್ಮಕ (conceptual) ಪ್ರತಿಮೆ ಇದೆ. 'The castle of God' ಕಣ್ಣಿಗೆ ಕಾಣಿಸದ ಅಗೋಚರ ವಿಷಯು; ಆದರೆ ಅದನ್ನು ಭಾವಿಸಿಕೊಳ್ಳಲು ಸಾಧ್ಯ; ಅರ್ಥಾತ್ ಅದು ಭಾವಗಮ್ಯ[31]. ಕನ್ನಡ ಪದ್ಯವೊಂದನ್ನು ಉದಾಹರಿಸಿದರೆ ಈ ಸಂಗತಿ ಇನ್ನಷ್ಟು ಸ್ಪಷ್ಟವಾಗಬಹುದು.

ಏನಾದರೂ ಮಾಡುತಿರು ತಮ್ಮ;
ನೀ ಸುಮ್ಮನಿರ ಬ್ಯಾಡ;
ಆ ಸಸಿಯ ಕೀಳು, ಚಿವುಟೀಚಿಗುರ.
ಹೂ ಕಂಡರೆ ಹಿಸುಕಿ ಬಿಸುಡು; ಹುಲ್ಲೆಲ್ಲೆಲ್ಲಿ
ಅಲ್ಲಲ್ಲಿ ಕೊಳ್ಳಿ ಹಿಡಿದಾಡು ಲಂಕಾದಹನ.
ಮರಿಚಿಟ್ಟೆ, ಗಿಳಿ, ಗುಬ್ಬಿ—ಎಲ್ಲಿ ಕಂಡರೆ ಅಲ್ಲಿ
ಅಟ್ಟು, ಹಿಡಿ, ಕುಟ್ಟು; ಕಿತ್ತೆಸೆ ಪಕ್ಕಪುಕ್ಕಗಳ.
ಕಾಡಾನೆ ಹೊಕ್ಕ ನಂದನದಲ್ಲಿ
ಬಿಕ್ಕುತಿದೆ ಇಲ್ಲಿ ಮಲ್ಲಿಗೆ ಅಲ್ಲಿ ಹೊಂಬಾಳೆ,[32]

ಏನಾದರೂ ಮಾಡುವುದು ಜೀವದ ಹುಟ್ಟುಗುಣ. ಅದು **ಸ್ವಾಭಾವಿಕ**. ಸಸಿಯನ್ನು ಕೀಳುವುದು, ಚಿಗುರನ್ನು ಚಿವುಟುವುದು-ಇತ್ಯಾದಿಗಳನ್ನು ಕಣ್ಣಿಂದ ಕಂಡು ಅನುಭವಿಸಬಹುದು; ಆದುದರಿಂದ ಇವು ಐಂದ್ರಿಯಾನುಭವಿಕ ಸಂಗತಿಗಳು ಅಥವಾ

---

28. A Dictionary of Literary Terms, p 317
29. ಇದನ್ನು ಭಾ.ಕಾ. ಮೀಮಾಂಸೆಯ 'ಸ್ವಭಾವೋಕ್ತಿ ಅಲಂಕಾರ' ಎಂದು ಹೇಳಿದರೆ ತಪ್ಪಾಗದು.
30. ಇದು ಭಾ.ಕಾ. ಮೀಮಾಂಸೆಯ 'ಭೋಗೀಕರಣ ವ್ಯಾಪಾರ'
31. ಇದು ಭಾ.ಕಾ. ಮೀಮಾಂಸೆಯ 'ಭಣಿತಿ ವೈಚಿತ್ರ್ಯ ಅಥವಾ ಉಕ್ತಿ ವೈಚಿತ್ರ್ಯ'. ಉಕ್ತಿ ವೈಚಿತ್ರ್ಯವೆಂದರೆ ವಿಶಿಷ್ಟವಾದ ಅರ್ಥವನ್ನು ಹೇಳುವ ಮಾತು.
32 ಗೋಪಾಲಕೃಷ್ಣ ಅಡಿಗ, ಸಮಗ್ರ ಕಾವ್ಯ, ಪು. ೨೬೭.

ಹೋಲಿಕೆಗಳು. ಕಾರಣ ಇವು ಐಂದ್ರಿಯಾನುಭವಿಕ ಪ್ರತಿಮೆಗಳು ; 'ಹುಲ್ಲೆಲ್ಲೆಲ್ಲಿ ಅಲ್ಲಲ್ಲಿ ಕೊಳ್ಳಿ ಹಿಡಿದಾಡು ಲಂಕಾದಹನ'– ಇದರಲ್ಲಿ 'ಲಂಕಾದಹನ' ಒಂದನ್ನು ಬಿಟ್ಟರೆ ಇದೂ ಐಂದ್ರಿಯಾನುಭವಿಕ ಪ್ರತಿಮೆ; 'ಲಂಕಾದಹನ ಶಬ್ದ, ಅದನ್ನು ಐಂದ್ರಿಯಾನುಭವಿಕದಾಚೆಗೆ ಒಯ್ದು ವಿಶಿಷ್ಟ ವಿಷಯದ ನೆನಪಿನ ಮೂಲಕವೇ ಸಾಂಕೇತಿಕವಾಗಿಸಿದೆ; ಅನುಭವವನ್ನು ಗಾಢವಾಗಿಸುವಲ್ಲಿ ಯಶಸ್ವಿಯಾಗಿದೆ. ಆದುದರಿಂದ ಅದು ಪತಿಮೆ-ಸಂಕೇತ-ಸಾಂದರ್ಭಿಕ ನಿದರ್ಶನ-ಹೀಗೆ ಒಂದರಲ್ಲಿಯೇ ಹಲವು ವಿಷಯಗಳನ್ನು ನಿರೂಪಿಸುವ ಶಕ್ತಿಶಾಲಿ ಶಬ್ದವಾಗಿದೆ. 'ನಂದನ' ಇದು ಸಮೃದ್ಧಿಯ ಸಂಕೇತ. ಇಲ್ಲಿ ಈ ಒಂದು ಭಾವನೆಗಿಂತ ಹೆಚ್ಚಿನ ಅಂಶ ಇಲ್ಲ. ಈ ನಂದನ ಇಂದ್ರನ ವನವಲ್ಲದಿದ್ದರೂ ಅದರಂತಹ ಸಂತೋಷದ ಕುರುಹು ಎನ್ನುವುದು ಭಾವನೆಯ ಬಸಿರಿಗೆ ತಟ್ಟುತ್ತದೆ. ಆದುದರಿಂದ ಇದು ಭಾವನಾತ್ಮಕ ಪ್ರತಿಮೆ.

**ಪ್ರತೀಕ** : ಪ್ರತೀಕ, ಸಂಕೇತ-ಇವು ಇಂಗ್ಲಿಷ್ ಭಾಷೆಯಲ್ಲಿನ 'Symbol' ಶಬ್ದದಿಂದ ಜನ್ಮತಳೆದುನಿಂತ ಶಬ್ದಗಳು. ಪ್ರತಿಮಾ, ಪ್ರತೀಕ, ರೂಪಕ,—ಈ ಮೂರೂ ಒಂದರಲ್ಲಿ ಇನ್ನೊಂದರ ನೆರಳನ್ನು ಹೊಂದಿವೆ. ಕೆಲಸಲ ಇವನ್ನು ಪ್ರತ್ಯೇಕಿಸುವುದು ತುಂಬ ಕಷ್ಟದ ಪ್ರಾಯಃ ಆಗದ – ಕೆಲಸ. Image, metaphor, and symbol shade into each other and are sometimes difficult to distinguish[33]. ಎ. ಕೆ. ರಾಮಾನುಜನ್ ಅವರ ಒಂದು ಪದ್ಯದ ಈ ಪಂಕ್ತಿಗಳನ್ನು ನೋಡಿ :

ಒಂದು ಜಾತಿಯ ಕವಿಗೆ
ನೆರಳು ಅಂದರೆ ಪ್ರಾಣ
ಕಾರಣ ನೆರಳು। ಬೆಳಕು
Instant ಪದ್ಯ
ಹೇಳಿ ಮಾಡಿಸಿದ
ಕೃಷ್ಣ। ರಾಧೆ[34]

ಮೊದಲಿನ 'ನೆರಳು' ಇಮೇಜಿಸ್ಟ್ಸ್ (Imagists) ಕವಿಗಳನ್ನು ಕುರಿತಿದೆ. ಇಜ್ರಾ ಪೌಂಡ್ (Ezrapound) ಎಮಿ ಲೋವೆಲ್ (Amy Lowell), ಟಿ. ಇ. ಹುಲ್ಮೆ (T. E. Hulme) ರಿಚರ್ಡ್ ಆಲ್ಡಿಂಗಟನ್ (Richard Aldington) ಮೊದಲಾದ

33. ಪೂರ್ವೋಕ್ತ 'Sound and Sense' p. 63

34. ಎ. ಕೆ. ರಾಮಾನುಜನ್ 'ನಲವತ್ತು ನೆರಳು' ಪದ್ಯ. ಪ್ರಾಯೋಗಿಕ ವಿಮರ್ಶೆಯ ಗ್ರಂಥದಲ್ಲಿ ಶ್ರೀ ಡಿ. ಎ. ಶಂಕರ ಬೇರೊಂದು ರೀತಿಯಲ್ಲಿ ವಿವರಿಸಿದ್ದಾರೆಯೆಂಬುದರ ಅರಿವು ನನಗಿದೆ. 'ನೆರಳು' ಇದರ ಸುತ್ತ ಭಾವನಾಲಹರಿಯನ್ನು ಹರಿಬಿಟ್ಟಿದ್ದಾರೆ ಶ್ರೀ ರಾಮಾನುಜನ್ ಎಂದು ನನಗೆ ತೋರುತ್ತದೆ. Stream of consciousness ಇಲ್ಲಿದೆ.

ವರನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. 'ನೆರಳು' Image ಎಂಬರ್ಥದಲ್ಲಿ ಪ್ರಯೋಗಗೊಂಡಿದೆ. ಆದರೆ ಮುಂದೆ 'ನೆರಳು' ಕತ್ತಲೆಯನ್ನು ಪ್ರತಿನಿಧಿಸಿದೆ; ಅರ್ಥಾತ್ ಕತ್ತಲೆಗೆ ಅದು ಪ್ರತೀಕವಾಗಿ ಬಂದಿದೆ. ಅಷ್ಟೇ ಅಲ್ಲ ಈ ನೆರಳು। ಬೆಳಕು ಗಳು ದುಃಖ-ಸುಖ ಇವನ್ನೂ ಸಹೃದಯನ ಮನೋಮಂದಿರದಲ್ಲಿ ಮೂಡಿಸಿ ನಿಲ್ಲು ತ್ತವೆ. ಅನಂತರದಲ್ಲಿ ಬರುವ ಕೃಷ್ಣ-ರಾಧೆ—ಇವರು ನೆರಳು-ಬೆಳಕುಗಳನ್ನು ಪ್ರತಿ ನಿಧಿಸುವುದು ಸ್ಪಷ್ಟವೇ ಇರುವುದರಿಂದ ಸಂಕೇತಗಳೆಂದು ಗುರುತಿಸಬೇಕಾಗುತ್ತದೆ. ನೆರಳು ಕೃಷ್ಣನಲ್ಲೂ ಬೆಳಕು ರಾಧೆಯಲ್ಲೂ ಅಭೇದರೂಪದಲ್ಲಿರುವದರಿಂದ ರೂಪಕ (Metophor) ಅಲಂಕಾರ ಸ್ವರೂಪ ಪಡೆದಿವೆಯೆಂದರೆ ತಪ್ಪಾಗದೆಂದು ನನ್ನ ಗ್ರಹಿಕೆ. ಇಡಿಯ ಪದ್ಯ ನೆರಳು (Image) ಕುರಿತು ಬರೆದ ಕವಿತೆಯೆಂದು ನನಗೆ ತೋರುತ್ತದೆ.

**ಸಾಂದರ್ಭಿಕ ನಿದರ್ಶನ :** ಸಾಂದರ್ಭಿಕ ನಿದರ್ಶನ ಇಂಗ್ಲಿಷಿನ Allusion ಎಂಬುದರ ಪ್ರತೀಕ. ಇದು ಪೂರ್ವಕೃತಿ, ಪೌರಾಣಿಕ ಇಲ್ಲವೇ ಐತಿಹಾಸಿಕ ವ್ಯಕ್ತಿ ಅಥವಾ ಯಾವದೇ ಪ್ರಸಿದ್ಧ ಘಟನೆಗೆ ಸಂಬಂಧಪಟ್ಟಿರಬಹುದು. ಉದಾ :

೧. ಭೂ–ವ್ಯೋಮಗಳನೆರಡು ತೆಕ್ಕೆಗೊಳಗಾಗಿಸಿ
ನೂರು–ಸಾವಿರದಳದಿ ದಿಗ್–ದಿಗಂತವನೆ ವ್ಯಾಪಿಸಿ
ಬಯಲಿಗೂ ಬಣ್ಣವ ಪೂಸಿ
ನಿಂತಿರುವ ನಿರ್ಜರ ಹೂವು
ಈ ಚೆಲುವು
ಇದು ಮೃದ್‌ಗಂಧಿ ;
ಆದರೂ ವಿಯತ್‌ಸ್ಪಂದಿ !
ಯೋಜನ–ಯೋಜನಗಂಧಿ !
ನಾನು
ಬಡ ಶಂತನು
ಈ ಇದಕೆ ಬಂದಿ ![35]

ಕವಿ, ಚೆಲುವನ್ನು ಯೊಜನೆಗಂಧಿಗೂ ತನ್ನನ್ನು ಶಂತನು ಮಹಾರಾಜನಿಗೂ ಸಂಕೇತ ವಾಗಿಸಿಕೊಂಡಿದ್ದಾನೆ. ಮಹಾಭಾರದಲ್ಲಿಯ ಯೋಜನಗಂಧಿ–ಶಂತನು–ಇವರ ಮಿಲನದ ಕಥೆ ಸಂಪೂರ್ಣ ಒಂದು ಸಲ ಮನಸ್ಸಿನ ಪಾತಳಿಯ ಮೇಲೆ ಹಾಯ್ದು ಕವಿ ಚೆಲುವಿಗೆ ಸೋತುದನ್ನು ಹೇಗೆ ಎಂಬುದನ್ನು ಸಾಂದರ್ಭಿಕ ನಿದರ್ಶನವೊಂದರಿಂದ ಪುಷ್ಟೀಕರಿಸಿ ದ್ದಾನೆ.

---

35. ಡಾ॥ ಎಂ. ಅಕ್ಬರ ಅಲಿ, ಚೆಲುವಿನ ನಿಲುವು 'ತಮಸಾ ನದಿ ಎಡಬಲದಿ' ಪು. ೬೬-೬೭ (೧೯೮೦)

೨. ದೂರದಲಿ ಹಸಿರು ಚಪ್ಪರದೊಳಗೆ ಮದುವೆ ಬ್ಯಾಂಡಿನ ಮೋಡಿ,
ಮೈ ತುಂಬ ಹೂಮುಡಿದು ಹುಚ್ಚಾದ ಮರ ಚೈತ್ರದಲಿ
ಮೆರವಣಿಗೆ ಹೊರಟು ನಿಂತಿವೆ ನೋಡಿ.
ಚಿಕ್ಕೆ ಚಿಕ್ಕೆಗೆ ಒಂದು ಉಯ್ಯಾಲೆಯನು ತೂಗಿ
ದಿಗ್ದಿಗಂತದ ನೀಲಗಾಜುಗೋಡೆಗೆ ತಾಗಿ
ಜೋಕಾಲಿಯಾಡುವ ಬಯಕೆ—
'ನಾ ನಿನಗೆ ನೀನೆನಗೆ ಜೇನಾಗುವ
ರಸದೇವ ಗಂಗೆಯಲಿ ಮೀನಾಗುವ'[36]

ಕೊನೆಯ ಎರಡು ಪಂಕ್ತಿಗಳು ಕುವೆಂಪು ಅವರ ಕವಿತೆ 'ಜೇನಾಗುವಾ' ಇದರಿಂದ ಎತ್ತಿಕೊಂಡವು. ಸಂದರ್ಭಕ್ಕೆ ಒಗ್ಗುವಾಗ ಕವಿಗಳು ಬೇರೆ ಆಕರಗಳಿಂದ ಎತ್ತಿಕೊಳ್ಳುತ್ತಿದ್ದುದು ಪ್ರಾಚೀನರಲ್ಲೂ ಕಂಡು ಬರುತ್ತದೆ.[37] ಅದಕ್ಕೆ 'ವಾಕ್ಯವೇಷ್ಟನ' ಎಂದು ಹೇಳಲಾಗುತ್ತಿತ್ತು. ಆದರೂ ಅದು ಅಪರೂಪ; ನವ್ಯರಲ್ಲಿ ಬಂದಿರುವ ಸೊಗಸೇ ಬೇರೆ.*

36. ಡಾ. ಜಿ. ಎಸ್. ಶಿವರುದ್ರಪ್ಪ, ಕವಿತೆ 'ಮಬ್ಬಿನಿಂದ ಮಬ್ಬಿಗೆ'

37. a) ಪಂಪಭಾರತ, ೬-೪ ಕಃ ಕೇನಾರ್ಥೀಕೋ ದರಿದ್ರುಃ ಪೊನ್ನನಲ್ಲೂ ಇದೆ. ನೋಡಿ. ಶಾಂತಿ ಪುರಾಣ b) ಆದಿಪುರಾಣ, ೧೩-೮೪, ನದೇವ ಚರಿತಂ ಚರೇತೆನಿಸಿದ್ಧೈ ತ್ರಿಲೋಕೇಶ್ವರಾ

* ಈ ಲೇಖನ ಬರೆಯುವಲ್ಲಿ ಡಾ. ಜಿ. ವರದರಾಜರಾಯರಿಗೂ ಮತ್ತು ಡಾ. ಹಾ. ಮಾ. ನಾಯಕರಿಗೂ ಋಣಿಯಾಗಿರುವೆ.

# ಭಾವಿಕಾಲಂಕಾರ

**ಗುಂಡ್ಮಿ ಚಂದ್ರಶೇಖರ ಐತಾಳ**

೧

ಭಾರತೀಯ ಕಾವ್ಯಮೀಮಾಂಸೆಯಲ್ಲಿ ಅಲಂಕಾರ ಪ್ರಸ್ಥಾನವು ಸ್ಥಾನದಲ್ಲಿ ಮಾತ್ರವಲ್ಲ : ಆಲಂಕಾರಿಕರ ದೃಷ್ಟಿಯಲ್ಲಿಯೂ ಪ್ರಥಮವೆನ್ನಿಸಿದೆ. ಅಲಂಕಾರಗಳ ಬಗೆಗೆ ಪ್ರಸ್ತಾಪಿಸಿದಷ್ಟು ಆಲಂಕಾರಿಕರು ಇತರ ಪ್ರಸ್ಥಾನಗಳನ್ನು ಕುರಿತು ಪ್ರಸ್ತಾಪಿಸಲಿಲ್ಲ. ಅವರು ಕಾವ್ಯಸೌಂದರ್ಯಕ್ಕೆ ಕಾರಣಗಳೇನು ಎಂದು ಹುಡುಕುವ ಪ್ರಯತ್ನದಲ್ಲಿ ತಮಗೆ ಸುಂದರವೆಂದು ಕಂಡುಬಂದ ಮಾತಿನ ರೀತಿಗಳಿಗೆಲ್ಲ ಬಗೆಬಗೆಯ ನಾಮಕರಣ ಮಾಡುತ್ತ ಹೋದರು ; 'ರಸಾತ್ಮಕವಾದ ವಾಕ್ಯವೇ ಕಾವ್ಯ' ಎಂದು ವಿಶ್ವನಾಥನು ಹೇಳಿದರೂ ಅವನ ಮಾತನ್ನು ಅಷ್ಟೊಂದು ಗಮನಿಸದೆ ಮಾತಿನ ಬಗೆಬಗೆಯ ಸುಂದರ ರೀತಿಗಳನ್ನು ವಿಶ್ಲೇಷಿಸುತ್ತ, ಅವುಗಳಿಗೆ ಹೆಸರು ಕೊಡುತ್ತ, ಅವುಗಳ ಲಕ್ಷಣಗಳನ್ನು ನಿರೂಪಿಸುತ್ತ ಕೂದಲೆಳೆಯನ್ನು ಸೀಳುವ ಕೆಲಸವನ್ನು ಮಾಡಿದರು. ಕೂದಲೆಳೆ ಸೀಳುವ ಕೆಲಸ ಬಹಳಕ್ಲಿಷ್ಟ ; ಆದರೂ ಈ ಕಾರ್ಯವನ್ನು ನಮ್ಮ ಆಲಂಕಾರಿಕರು ನಿಷ್ಠೆಯಿಂದ ಮಾಡಿದರು. ಭರತನ ನಾಟ್ಯಶಾಸ್ತ್ರದಲ್ಲಿ ಉಕ್ತವಾದ ನಾಲ್ಕು ಅಲಂಕಾರಗಳ ಅಂಕೆ ಅಪ್ಪಯ್ಯ ದೀಕ್ಷಿತನ ಕಾಲಕ್ಕೆ ನೂರಿಪ್ಪತ್ತರಷ್ಟು ಅಧಿಕ ಸಂಖ್ಯೆಗೆ ಬೆಳೆಯಿತು. "ಧ್ವನಿ ತತ್ತ್ವವು ಪ್ರಸಿದ್ಧವಾದ ಬಳಿಕ ಅಲಂಕಾರದ ಸ್ಥಾನವು ಕಾವ್ಯದಲ್ಲಿ ಬಿದ್ದುಹೋಗಿ ಅದೊಂದು ಉಕ್ತಿವಿಶೇಷಮಾತ್ರವೆಂಬ ಭಾವನೆ ಪ್ರಚುರವಾಗಿತ್ತು. 'ಅನಂತಾ ಹಿ ವಾಗ್ವಿಕಲ್ಪಾಃ ತತ್ಪ್ರಕಾರಾ ಏವ ಚ ಅಲಂಕಾರಾಃ' (ಮಾತಿನ ವಿಕಲ್ಪಗಳು ಅನಂತ ; ಅವುಗಳ ಬಗೆಗಳೇ ಅಲಂಕಾರಗಳು) – ಹೀಗೆಂದು ಆನಂದವರ್ಧನನು ನಿರೂಪಿಸಿದ್ದನು."[1] "ಅಲಂಕಾರಾಣಾಮನಂತತ್ವಾತ್ ಇತಿ ಪ್ರತಿಭಾ ಅನಂತ್ಯಾತ್"[2] –ಅಲಂಕಾರಗಳ ಅನಂತತೆಗೆ ಪ್ರತಿಭೆಯ ಅನಂತತೆಯೇ ಕಾರಣವೆಂದು ಅಭಿನವಗುಪ್ತನೂ ಅನುಮೋದಿಸಿದನು.

1. ತೀ. ನಂ. ಶ್ರೀಕಂಠಯ್ಯ: ಭಾರತೀಯ ಕಾವ್ಯಮೀಮಾಂಸೆ: ಪು. ೬೫ : ೧೯೬೩
2. ಧ್ವನ್ಯಾಲೋಕಲೋಚನ : ಪು. ೮೮

೨

ಭಾವಿಕಾಲಂಕಾರವು ಆಲಂಕಾರಿಕರು ಹೆಸರಿಸುತ್ತ ಬಂದ ನೂರಾರು ಅಲಂಕಾರಗಳಲ್ಲಿ ಒಂದೆನ್ನಿಸಿದೆ. ಇದರ ಲಕ್ಷಣವನ್ನು ಹೇಳುವಲ್ಲಿ ಒಬ್ಬ ಆಲಂಕಾರಿಕನಿಗೂ, ಇನ್ನೊಬ್ಬನಿಗೂ ವ್ಯತ್ಯಾಸವಾಗುವುದರಿಂದ ಆಲಂಕಾರಿಕರಿಗೆ ಭಾವಿಕಾಲಂಕಾರದ ಹೃದಯ ತಿಳಿಯಲಿಲ್ಲ; ಮರ್ಮ ಅರಿವಾಗಲಿಲ್ಲ ಎಂದು ಕಾಣಿಸುತ್ತದೆ. ಆದರಿಂದ ಅಲಂಕಾರ ಪ್ರಸ್ಥಾನವನ್ನು ಬಳಸಿದ, ಬೆಳೆಯಿಸಿದ ಎಲ್ಲ ಆಲಂಕಾರಿಕರೂ ಇದರ ಲಕ್ಷಣವನ್ನು ಒಂದೊಂದು ರೀತಿಯಲ್ಲಿ ಹೇಳುತ್ತ ಹೋದರೇ ವಿನಾ ಸರ್ವಸಮ್ಮತವಾದ ಒಂದು ಲಕ್ಷಣವನ್ನು ಹೇಳಲು ಯಾರೂ ಸಮರ್ಥರಾಗಲಿಲ್ಲ. ಯಾವ ಯಾವ ಆಲಂಕಾರಿಕರು ಭಾವಿಕಾಲಂಕಾರವನ್ನು ಕುರಿತು ಯಾವ ಯಾವ ಲಕ್ಷಣವನ್ನು ಹೇಳಿದ್ದಾರೆ? ಅವರು ಕೊಟ್ಟಿರುವ ಲಕ್ಷ್ಯಗಳು ಯಾವುವು? ಅದರ ಬಗೆಗೆ ಅವರವರ ಅಭಿಪ್ರಾಯಗಳೇನು? – ಎಂಬುದನ್ನು ಒಂದುಕಡೆ ಇಟ್ಟು ನೋಡುವುದು, ಅದರ ಲಕ್ಷಣವನ್ನು ಇತ್ಯರ್ಥ ಮಾಡುವುದು ನಮ್ಮ ಪ್ರಬಂಧದ ಉದ್ದೇಶವಾಗಿದೆ.

೩

ಭಟ್ಟಿಯು ತನ್ನ 'ಭಟ್ಟಿಕಾವ್ಯ'ದಲ್ಲಿ ಭಾವಿಕಾಲಂಕಾರವನ್ನು ಕುರಿತು ಪ್ರಸ್ತಾಪಿಸಿದ್ದಾನೆ. ಆಲಂಕಾರಿಕರಲ್ಲಿ ಭಾವಿಕಾಲಂಕಾರವನ್ನು ಕುರಿತು ಪ್ರಸ್ತಾಪಿಸಿದವರಲ್ಲಿ ಭಟ್ಟಿಯೇ ಮೊದಲನೆಯವನು. ಅವನು 'ಭಾವಿಕ'ವನ್ನು ಕುರಿತು ಹೀಗೆ ಹೇಳಿದ್ದಾನೆ:

"ಭಾವಿಕತ್ವಂ ಅಲಂಕಾರಃ ಪ್ರಬಂಧವಿಷಯ ಉಕ್ತಃ. ನೈಕದೇಶಿಕಂ ತಸ್ಯ ಚಿತ್ರಾದಯೋಽರ್ಥಾಃ ಪ್ರವೃತ್ತಿಹೇತವಃ. ತಥಾ ಚ ಉಕ್ತಂ–

ಭಾವಿಕತ್ವಮಿತಿ ಪ್ರಾಹುಃ ಪ್ರಬಂಧವಿಷಯಂ ಗುಣಂ
ಪ್ರತ್ಯಕ್ಷಾ ಇವ ದೃಶ್ಯಂತೇ ಯತ್ರಾರ್ಥಾ ಭೂತಭಾವಿನಃ ॥"[3]

ಭಟ್ಟಿಯ ಕಾಲ ಭಾಮಹನಿಗಿಂತ ಪೂರ್ವದಲ್ಲಿ ಸುಮಾರು ಕ್ರಿ.ಶ. ೫೦೦ ರಿಂದ ೬೫೦ ರೊಳಗೆ ಇದ್ದಿರಬೇಕು.[4] ಭಟ್ಟಿಕಾವ್ಯಕ್ಕೆ 'ಜಯಮಂಗಲಂ' ಎಂಬ ವ್ಯಾಖ್ಯಾನವಿದೆ. ವಾಖ್ಯಾನದಲ್ಲಿ 'ಹೀಗೂ ಹೇಳುತ್ತಾರೆ' ಎಂದು ಭಾಮಹನು ಕೊಟ್ಟ 'ಭಾವಿಕತ್ವಮಿತಿ... ಪ್ರಚಕ್ಷತೇ' ಎಂಬ ಶ್ಲೋಕಗಳನ್ನು ಉಲ್ಲೇಖಿಸಿದ್ದಾನೆ. ಆದುದರಿಂದ ಭಟ್ಟಿಯು ಹೇಳಿದ ಅಸ್ಪಷ್ಟವಾದ ಲಕ್ಷಣವನ್ನು ಭಾಮಹ ಇನ್ನಷ್ಟು ಸ್ಪಷ್ಟಗೊಳಿಸಿ ಹೇಳುತ್ತಾನೆ. ಭಟ್ಟಿಯು ತನ್ನ ಕಾವ್ಯವನ್ನು ಮುಖ್ಯವಾಗಿ ವ್ಯಾಕರಣ ಸೂತ್ರಗಳಿಗೆ ಲಕ್ಷ್ಯರೂಪವಾಗಿ ರಚಿಸಿದ್ದಾನೆ. ಭಾವಿಕಾಲಂಕಾರವು ಇಡಿಯ ಪ್ರಬಂಧದಲ್ಲಿ ಉಕ್ತ

---

3. ಭಟ್ಟಿಕಾವ್ಯ : ದ್ವಾದಶಃ ಸರ್ಗಃ ಪು. ೩೮೬, ನಿರ್ಣಯ ಸಾಗರ ಪ್ರೆಸ್, ಬೊಂಬಾಯಿ. ೧೯೩೪

4. ತೀ. ನಂ. ಶ್ರೀಕಂಠಯ್ಯ : ಭಾರತೀಯ ಕಾವ್ಯಮೀಮಾಂಸೆ : ಪು. ೧೭; ೧೯೭೩

ವಾಗುವುದರಿಂದ ಭಟ್ಟಿಯು ಅದಕ್ಕೆ ಉದಾಹರಣೆಯನ್ನು ಕೊಟ್ಟಿಲ್ಲ ಎಂದು ಕಾಣಿಸುತ್ತದೆ.

೪

ಮುಂದೆ ಬಂದ ಭಾಮಹನು ಹೀಗೆ ಹೇಳುತ್ತಾನೆ :

ಭಾವಿಕತ್ವಮಿತಿ ಪ್ರಾಹುಃ ಪ್ರಬಂಧ ವಿಷಯಂ ಗುಣಮ್
ಪ್ರತ್ಯಕ್ಷಾ ಇವ ದೃಶ್ಯಂತೇ ಯತ್ರಾರ್ಥಾ ಭೂತಭಾವಿನಃ ॥
ಚಿತ್ರೋದಾತ್ತಾದ್ಭುತಾರ್ಥತ್ವಂ ಕಥಾಯಾಃ ಸ್ವಭಿನೀತತಾ
ಶಬ್ದಾನಾಕುಲತಾ ಚೇತಿ ತಸ್ಯ ಹೇತುಂ ಪ್ರಚಕ್ಷತೇ ॥[5]

(ಕೆಲವರು) ಪ್ರಬಂಧವನ್ನೆಲ್ಲ ವ್ಯಾಪಿಸುವ ಗುಣವು 'ಭಾವಿಕತ್ವ' ಎಂದು ಹೇಳುತ್ತಾರೆ. ಹಿಂದಿನ ಮತ್ತು ಮುಂದಿನ ಸಂಗತಿಗಳೆಲ್ಲ ಕಣ್ಣೆದುರಿಗೆ ಈಗ ನಡೆಯುವಂತೆ ವರ್ಣಿಸುವುದೇ ಅದರ ಲಕ್ಷಣ. (ಪ್ರಬಂಧದಲ್ಲಿ) ವಿಚಿತ್ರವೂ ಉದಾತ್ತವೂ ಅದ್ಭುತವೂ ಆದ ಸಂಗತಿಗಳಿರುವುದು, ಕಥೆಯಲ್ಲಿ ಸುಂದರವಾದ ಸಂಯೋಜನೆ ಕಾಣುತ್ತಿರುವುದು, ಶಬ್ದಗಳಲ್ಲಿ ಕಿವಿಗೆ ಅಹಿತವಾಗುವ ಅಂಶಗಳಿಲ್ಲದಿರುವುದು – ಇದೇ ಭಾವಿಕತ್ವಕ್ಕೆ ಕಾರಣವೆಂದೂ ಹೇಳುವರು. "ಇದನ್ನು ಉದಾಹರಿಸುವ ಸಮುದ್ರಬಂಧನು (ಅಲಂಕಾರ ಸರ್ವಸ್ವ ಟೀಕೆ) ಕಥೆಯ 'ಸ್ವಭಿನೀತತಾ' ಎಂದರೆ 'ಆಂಗಿಕಾದಿ ಚತುರ್ವಿಧಾಭಿನಯ ಶಾಲಿತ್ವಮ್' ಎಂದು ವ್ಯಾಖ್ಯಾನ ಮಾಡಿದ್ದಾನೆ. ಇದನ್ನು ಸ್ವೀಕರಿಸಿದರೆ 'ಚತುರ್ವಿಧ ಅಭಿನಯ ಯೋಗ್ಯವಾದ ಕಥೆ' ಎಂದು ಅರ್ಥವಾಗುತ್ತದೆ."[6]

'ಜಯಮಂಗಲ' ವ್ಯಾಖ್ಯಾನವಂತೆಯೇ ಭಾಮಹನು 'ಭಾವಿಕತ್ವ' ಎನ್ನುತ್ತಾನೆಯೇ ಹೊರತು ನವೀನರ ಹಾಗೆ 'ಭಾವಿಕ' ಎನ್ನುವುದಿಲ್ಲ. ಅಲ್ಲದೆ ಇವನು ಹೇಳುವ ಲಕ್ಷಣವೂ ಇತರರಿಗಿಂತ ಭಿನ್ನವಾಗಿದೆ. "ಪ್ರಬಂಧವ್ಯಾಪಿಯಾದ ಈ ಅಲಂಕಾರದ ವೈಶಾಲ್ಯವು ಮುಂದಿನವರ ನಿರೂಪಣೆಗಳಲ್ಲಿ ಸಂಕುಚಿತವಾಗುತ್ತ ಹೋಗುತ್ತದೆ. ವಾಮನ ರುದ್ರಟರು ಇದನ್ನು ಒಪ್ಪುವುದೇ ಇಲ್ಲ."[7]

೫

ಮುಂದೆ ಬಂದ ದಂಡಿಯು ತನ್ನ ಕಾವ್ಯಾದರ್ಶದಲ್ಲಿ 'ಭಾವಿಕ'ವನ್ನು ಕುರಿತು ಮೂರು ಶ್ಲೋಕಗಳನ್ನು ಹೇಳಿದ್ದಾನೆ.

---

5. ಡಾ. ಕೆ. ಕೃಷ್ಣಮೂರ್ತಿ : ಕನ್ನಡ ಕಾವ್ಯಾಲಂಕಾರ : ಪು. ೭೧ ; ೧೯೭೧
6. ಅದೇ ಪು. ೭೨ ; ಅಡಿಟಿಪ್ಪಣಿ
7. ಅದೇ ಪು. ೭೧ ; ಅಡಿಟಿಪ್ಪಣಿ

ತದ್ಭಾವಿಕಮಿತಿ ಪ್ರಾಹುಃ ಪ್ರಬಂಧವಿಷಯಂ ಗುಣಮ್
ಭಾವಃ ಕವೇರಭಿಪ್ರಾಯಃ ಕಾವ್ಯೇಷ್ವಾಸಿದ್ಧಿ ಸಂಸ್ಥಿತಃ ॥
ಪರಸ್ಪರೋಪಕಾರಿತ್ವಂ ಸರ್ವೇಷಾಂ ವಸ್ತುಪರ್ವಣಾಮ್
ವಿಶೇಷಣಾನಾಂ ವ್ಯರ್ಥಾನಾಮಕ್ರಿಯಾ ಸ್ಥಾನವರ್ಣನಾ ॥
ವ್ಯಕ್ತಿರುಕ್ತಿಕ್ರಮಬಲಾದ್ಗಭೀರಸ್ಯಾಪಿ ವಸ್ತುನಃ
ಭಾವಾಯತ್ತಮಿದಂ ಸರ್ವಮಿತಿ ತದ್ಭಾವಿಕಂ ವಿದುಃ ॥[8]

ಇಡಿಯ ಪ್ರಬಂಧವ್ಯಾಪಿಯಾದ ಗುಣವನ್ನೇ 'ಭಾವಿಕ' ಎನ್ನುವರು. ಭಾವ ಎಂದರೆ ಕಾವ್ಯಗಳಲ್ಲಿ ಆದಿಯಿಂದ ಅಂತ್ಯದವರೆಗೂ ಅನುಸ್ಯೂತವಾಗಿ ಬರುವ ಕವಿಯ ಅಭಿಪ್ರಾಯವಾಗಿದೆ. ಕಾವ್ಯದ ಕಥಾವಸ್ತುವಿನ ಸಕಲ ಅಂಶಗಳಲ್ಲಿಯೂ ಪರಸ್ಪರ ಉಪಕಾರಿತ್ವವಿರುವುದು ; ವ್ಯರ್ಥ ವಿಶೇಷಣಗಳ ಪ್ರಯೋಗಗಳಿಲ್ಲದಿರುವುದು, ವ್ಯರ್ಥವಾದ ವರ್ಣನೆಗಳು ಇಲ್ಲದಿರುವುದು, ವಚನಾನುಕ್ರಮದ ಸಾಮರ್ಥ್ಯದಿಂದಲೇ ಗೂಢವಾದ ಅರ್ಥಗಳ ಅಭಿವ್ಯಕ್ತಿ–ಇವೆಲ್ಲ ಕವಿಯ ಭಾವಕ್ಕೆ ಅಧೀನವಾಗಿರುವುದರಿಂದ ಅದು 'ಭಾವಿಕ' ಎನ್ನಿಸುವುದು. ಇಲ್ಲಿ 'ಭಾವಿಕತ್ವ' ಎಂಬ ಮಾತನ್ನು ಬಿಟ್ಟು ದಂಡಿ 'ಭಾವಿಕ' ಎಂದು ಹೇಳಿರುವುದು ಹೊಸತು. ಇವನೂ ಭಟ್ಟಿ ಭಾಮಹರ ಅಭಿಪ್ರಾಯವನ್ನೇ ವಿಶದೀಕರಿಸುತ್ತಾನೆ.

ಇವರ ಮಾರ್ಗವನ್ನೇ ಅನುಸರಿಸಿ ನಾಗವರ್ಮನು 'ಕಾವ್ಯಾವಲೋಕನ'ದಲ್ಲಿ 'ಭಾವಿಕ'ದ ಲಕ್ಷಣವನ್ನು ಹೀಗೆ ಹೇಳಿದ್ದಾನೆ.

ಭಾವಿಕಮೆಂದರೆಬರ್ ಕವಿ
ಭಾವಗತಾರ್ಥಮನೆ ತಾಮಲಂಕೃತಿಗಳೊಳು–
ದ್ಭಾವಿಸಿ ಪೇಟ್ವರ್ ಶಕ್ತಿಸ–
ಮಾವಿರ್ಭೂತ ಪ್ರಬಂಧ ವಿಷಯಮುದಕ್ಕುಂ॥
ಸ್ಥಾನೋಪವರ್ಣನಂ ಶ–
ಬ್ದಾನಾಕುಳ ಭಾವಮುದ್ಭುತಾರ್ಥತ್ವಂ ಸ್ವಾ–
ಧೀನರಸವೃತ್ತಿ ಸಂಬಂ
ಧಾನುಗಮಂ ಭಾವಿಕಕ್ಕೆ ಭಾವಮಿವಕ್ಕುಂ ॥[9]

೬

ಮಮ್ಮಟನು ತನ್ನ 'ಕಾವ್ಯಪ್ರಕಾಶ'ದಲ್ಲಿ ಹೀಗೆ ಹೇಳಿದ್ದಾನೆ.

---

8. ಡಾ. ಕೆ. ಕೃಷ್ಣಮೂರ್ತಿ : ಕನ್ನಡ ಕಾವ್ಯಾಲಂಕಾರ ಮತ್ತು ಕನ್ನಡ ಕಾವ್ಯಾದರ್ಶ : ಪು. ೨೯೩; ೧೯೭೫.
9. ನಾಗವರ್ಮ ವಿರಚಿತಂ ಕಾವ್ಯಾವಲೋಕನಂ : ಪು. ೧೬೮ ; ಮೈಸೂರು ವಿಶ್ವವಿದ್ಯಾನಿಲಯ: ೧೯೭೭

ಪ್ರತ್ಯಕ್ಷಾ ಇವ ಯದ್ ಭಾವಾಃ ಕ್ರಿಯನ್ತೇಭೂತಭಾವಿನಃ
ತದ್ಭಾವಿಕಮ್...[10]

ಹಿಂದೆ ನಡೆದ ಮತ್ತು ಮುಂದೆ ನಡೆಯಲಿರುವ ಅಂಶಗಳನ್ನು ಪ್ರತ್ಯಕ್ಷವಾಗಿ ಈಗ ಕಾಣುವಂತೆ ಮಾಡುವುದೇ 'ಭಾವಿಕ'. ಮಮ್ಮಟನು ಇದಕ್ಕೆ ಉದಾಹರಣೆಯನ್ನು ಕೊಟ್ಟಿರುವುದು ವಿಶೇಷ. ಮಮ್ಮಟನು 'ಭಾವಿಕ'ದ ಲಕ್ಷಣವನ್ನು ಹೇಳುವಾಗ ಭಾಮಹ ದಂಡಿಯರು ಹೇಳಿದ ವಿಶಾಲಾರ್ಥವನ್ನು ಒಪ್ಪುವ ಹಾಗೆ ಕಾಣಿಸುತ್ತದೆ. ಆದರೆ ಅವನು ಕೊಟ್ಟ ಲಕ್ಷ್ಯಪದ್ಯವನ್ನು ಅನುಲಕ್ಷಿಸಿದರೆ 'ಭಾವಿಕ'ದ ಅಪರಿಮಿತ ವ್ಯಾಪ್ತಿಯನ್ನು ಪರಿಮಿತಗೊಳಿಸಿ ಅದನ್ನು ಕೇವಲ ಒಂದು ಅಲಂಕಾರ ಮಾತ್ರದ ಸ್ಥಾನವನ್ನು ಕೊಟ್ಟಂತೆ ತೋರುತ್ತದೆ. ಅಂತು, ಮಮ್ಮಟನು 'ಭಾವಿಕ'ದ ಬಗೆಗೆ ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಬರೆದಿದ್ದಾನೆ. ಅವನು ಕೊಟ್ಟ ಲಕ್ಷ್ಯಪದ್ಯವಿದು :

ಆಸೀದಂಜನಮತ್ರೇತಿ ಪಶ್ಯಾಮಿ ತವಲೋಚನೇ
ಭಾವಿಭೂಷಣ ಸಂಭಾರಾಂ ಸಾಕ್ಷಾತ್ಕುರ್ವೇ ತವಾಕೃತಿಮ್ ॥
ನಿನ್ನಯ ಕಣ್ಣೊಳ್ ಕಾಡಿಗೆ
ಮುನ್ನಿರ್ದಾ ಪರಿಯನರಿವೆನೈಸಲೆ ಮುಂದುಂ
ಸನ್ನಿದವಪ್ಪಾ ಭೂಷಣ-
ದುನ್ನತರುಚಿ ಕಣ್ಗೆವರ್ಪುದೀಗಳೆ ನೋಡಲ್ ॥

ಪದ್ಯದ ಪೂರ್ವಾರ್ಧದಲ್ಲಿ ಹಿಂದಿನ ಅಂಶವೂ ಉತ್ತರಾರ್ಧದಲ್ಲಿ ಮುಂದೆ ನಡೆಯಲಿರುವ ಅಂಶವೂ ಪ್ರತ್ಯಕ್ಷವಾಗಿರುವಂತೆ ವರ್ಣಿತವಾಗಿದೆ.[11]

೭

ಉದ್ಭಟನೂ ಮಮ್ಮಟನ ಹಾಗೆಯೇ ಭಾವಿಕಾಲಂಕಾರದ ಲಕ್ಷಣವನ್ನು ಹೇಳಿದ್ದಾನೆ :

ಪ್ರತ್ಯಕ್ಷಾ ಇವ ಯತ್ರಾರ್ಥಾ ದೃಶ್ಯಂತೇ ಭೂತಭಾವಿನಃ
ಅತ್ಯದ್ಭುತಾಃ ಸ್ಯಾತ್ ತದ್ವಾಚಾಮನಾಕುಲ್ಯೇನ ಭಾವಿಕಮ್ ॥[12]

ಅತ್ಯಂತ ಅದ್ಭುತವೂ, ಭೂತ ಹಾಗೂ ಭವಿಷ್ಯತ್ ಪದಾರ್ಥಗಳ ಉಕ್ತಿಯ ಅನಾಕುಲತೆಯ ಕಾರಣದಿಂದ ಪ್ರತ್ಯಕ್ಷ ಎಂಬಂತೆ ಕಾಣಿಸುವುದೇ ಭಾವಿಕ. ಉದ್ಭಟನು

10. ಡಾ. ಕೆ. ಕೃಷ್ಣಮೂರ್ತಿ, ಕನ್ನಡ ಕಾವ್ಯ ಪ್ರಕಾಶ : ಪು. ೨೪೧ ; ೧೯೫೯
11. ಅದೇ : ಪು. ೨೪೨
12. ಕಾವ್ಯಾಲಂಕಾರಸಾರ ಸಂಗ್ರಹಂ ೬-೬

ಭಾವಿಕಕ್ಕೆ ಮುಕ್ತಕದ ಗುಣವನ್ನು ಅನ್ವಯಿಸಿದ್ದಾನೆಯೇ ಹೊರತು ಪ್ರಬಂಧವ್ಯಾಪೀ ಗುಣವನ್ನಲ್ಲ. ಭಾಮಹನು ಹೇಳುವ ಶಬ್ದಸಂದರ್ಭಗಳ ಅನಾಕುಲತೆಯನ್ನು ಮಾತ್ರ ಉದ್ಭಟನು ಸ್ವೀಕರಿಸಿದ್ದಾನೆ. ವಾಮನ ರುದ್ರಟರು 'ಭಾವಿಕ'ದ ಪ್ರಸ್ತಾವವನ್ನೇ ಎತ್ತುವುದಿಲ್ಲ.

೮

ವಿಶ್ವನಾಥನು ತನ್ನ 'ಸಾಹಿತ್ಯದರ್ಪಣ'ದಲ್ಲಿ ಹೀಗೆ ಹೇಳಿದ್ದಾನೆ :

ಅದ್ಭುತಸ್ಯ ಪದಾರ್ಥಸ್ಯ ಭೂತಸ್ಯಾಥ ಭವಿಷ್ಯತಃ
ಯತ್ಪ್ರತ್ಯಕ್ಷಾಯಮಾಣತ್ವಂ ತದ್ಭಾವಿಕಮುದಾಹೃತಮ್ ॥[13]

ಅದ್ಭುತ ಪದಾರ್ಥದ ಭೂತ ಹಾಗೂ ಭವಿಷ್ಯವನ್ನು ಕಣ್ಣಮುಂದೆಯೇ ಕಾಣುವಂತೆ ವರ್ಣಿಸಿದಾಗ ಅದು 'ಭಾವಿಕ' ವೆನ್ನಿಸುತ್ತದೆ. ಇದು ವಿಶ್ವನಾಥನ ಅಭಿಪ್ರಾಯ. ಇದಕ್ಕೆ ಎರಡು ಸೊಗಸಾದ ಉದಾಹರಣೆಗಳನ್ನು ಕೊಡುತ್ತಾನೆ :

ಮುನಿರ್ಜಯತಿ ಯೋಗೀಂದ್ರೋ ಮಹಾತ್ಮಾ ಕುಂಭಸಂಭವಃ
ಯೇನೈಕ ಚುಲುಕೇ ದೃಷ್ಟೌ ದಿವ್ಯೌ ತೌ ಮತ್ಸ್ಯಕಚ್ಛಪೌ ॥
ಆಸೀದಂಜನಮತ್ರೇತಿ ಪಶ್ಯಾಮಿ ತವ ಲೋಚನೇ
ಭಾವಿಭೂಷಣ ಸಂಭಾರಾಂ ಸಾಕ್ಷಾತ್ ಕುರ್ವೇ ತವಾಕೃತಿಮ್ ॥[14]

ಇವುಗಳಲ್ಲಿ ಎರಡನೆಯದನ್ನು ಮಮ್ಮಟನೂ ಉದಾಹರಿಸಿದ್ದಾನೆ. ಮೊದಲನೆಯ ಶ್ಲೋಕದ ಅರ್ಥ ಹೀಗೆ : ಯೋಗೀಂದ್ರನೂ, ಮಹಾತ್ಮನೂ, ಮುನಿಯೂ ಆಗಿರುವ ಅಗಸ್ತ್ಯನು ತನ್ನ ಒಂದು ಕೈಯಲ್ಲಿ ಸಮುದ್ರವನ್ನು ಆಪೋಶನ ಮಾಡುವಾಗ ವಿಷ್ಣುವಿನ ಎರಡು ಅವತಾರಗಳಾದ ಮತ್ಸ್ಯಕೂರ್ಮ ರೂಪಗಳನ್ನು ಕಂಡನು ! ಈ ವರ್ಣನೆಯು ಸಹೃದಯನಿಗೆ ಪ್ರತ್ಯಕ್ಷವಾದಂತೆ ನಿರೂಪಿತವಾಗಿದೆ.

೯

'ಅಲಂಕಾರಸರ್ವಸ್ವಂ'ವನ್ನು ಬರೆದ ರುಯ್ಯಕನು 'ಅತೀತಾನಾಗತ ಯೋಃ ಪ್ರತ್ಯಕ್ಷಾಯಮಾಣತ್ವಮ್ ಭಾವಿಕಮ್'[15] ಭಾವಿಕದ ಲಕ್ಷಣವನ್ನು ಹೇಳಿದ್ದಾನೆ. ಅತೀತ ಮತ್ತು ಅನಾಗತಗಳನ್ನು (ಭೂತ ಭವಿಷ್ಯತ್) ಪ್ರತ್ಯಕ್ಷವೆಂಬಂತೆ ತಿಳಿಸುವುದೇ 'ಭಾವಿಕ' ಎನ್ನಿಸುವುದು ಎಂಬುದು ಅವನ ಮತ. ಇದನ್ನು ಮತ್ತೆ ವಿವರವಾಗಿ

---

13. ಡಾ॥ ಪಿ. ವಿ. ಕಾಣೆ : ಸಾಹಿತ್ಯ ದರ್ಪಣ : ಪು. ೬೦ · ೧೯೬೫
14. ಅದೇ
15. ಡಾ. ರೇವಾ ಪ್ರಸಾದ ದ್ವಿವೇದೀ : 'ಅಲಂಕಾರ ಸರ್ವಸ್ವಂ' ಹಿಂದೀ ಭಾಷಾನುವಾದ : ಪು. ೬೭೧; ೧೯೭೧

ವಿಶದಪಡಿಸಿದ್ದಾನೆ. ಸಂದೇಹಗಳನ್ನು ನಿವಾರಿಸಿದ್ದಾನೆ. ಅನೇಕ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಅವುಗಳ ವಿವರವನ್ನು ಪರಿಚಯಮಾಡಿಕೊಳ್ಳೋಣ :

ಆ ಬೋಧದ ಲೋಕೋತ್ತರತೆ. ಅದ್ಭುತತೆ ಹಾಗೂ ಇನ್ನಿತರ ಅಂಥ ಶಬ್ದ ಸಂದರ್ಭಗಳಿಂದ ಇದು ಉಪಸ್ಥಿತವಾಗುತ್ತದೆ. ಅದು ಪ್ರತ್ಯಕ್ಷವಾದಂತೆ ಕಾಣಿಸುವುದು ಭ್ರಾಂತಿಯಲ್ಲ ; ಭೂತ ಭಾವೀ ವಿಷಯಗಳು ಭೂತ ಭಾವಿಗಳಾಗಿಯೇ ಇರುತ್ತವೆ. ಇದು ಅತಿಶಯೋಕ್ತಿಯೂ ಅಲ್ಲ. ಅದ್ಭುತ ಧರ್ಮ ವಸ್ತುವಿನಲ್ಲಿಯೇ ಇರುತ್ತದೆ. ಅತೀಂದ್ರಿಯ ಪದಾರ್ಥದ ಪ್ರತ್ಯಕ್ಷತ್ವವು ಇಲ್ಲಿ ಭಾವನಾತ್ಮಕವಾಗಿರುತ್ತದೆ. ಇದು ಸಹೃದಯನಲ್ಲಿ ಮಾನ್ಯತೆ ಪಡೆಯುವುದರಿಂದ ಉತ್ಪ್ರೇಕ್ಷೆಯೂ ಅಲ್ಲ. ಇದು ರಸವದಲಂಕಾರವೂ ಅಲ್ಲ. ಕಾರಣ, ಇಲ್ಲಿ ವಿಭಾವಾದಿ ಸಂಬಂಧವೂ ಚಿತ್ತವೃತ್ತಿಯೂ ಇರುವುದಿಲ್ಲ. ಇದು ಸೂಕ್ಷ್ಮವಸ್ತುಸ್ವಭಾವವರ್ಣನೆಯಲ್ಲದಿರುವುದರಿಂದ ಸ್ವಭಾವೋಕ್ತಿಯೂ ಆಗಿರುವುದಿಲ್ಲ. ಶಬ್ದಾರ್ಥಗಳ ಸ್ಪಷ್ಟವಾದ ಅರ್ಥತೆ ಇರುವುದರಿಂದ ಭಾವಿಕವನ್ನು ಪ್ರಸಾದಗುಣದಲ್ಲಿಯೂ ಅಂತರ್ಗತಗೊಳಿಸಲಾಗುವುದಿಲ್ಲ.

ದರ್ಭಾಂಕುರೇಣ ಚರಣಃ ಕ್ಷತ ಇತ್ಯಕಾಂಡೇ
ತನ್ವೀ ಸ್ಥಿತಾ ಕತಿಚಿದೇವ ಪದಾನಿ ಗತ್ವಾ
ಆಸೀದ್ವಿವೃತ್ತವದನಾ ಚ ವಿಮೋಚಯಂತೀ
ಶಾಖಾಸು ವಲ್ಕಲಮಸಕ್ತಮಪಿ ದ್ರುಮಾಣಾಮ್ ॥[16]

—ಶಾಕುಂತಲಂ

ದರ್ಭೆಹುಲ್ಲು ಅಲ್ಲಿ ಇಲ್ಲದಿದ್ದರೂ ಶಕುಂತಲೆ 'ಕುಶಾಂಕುರದಿಂದ ಕಾಲು ಗಾಯವಾಯಿತು' ಎಂದು ನಿಂತುಬಿಟ್ಟಳು. ಆಗ ಹತ್ತಿರವೇ ಇದ್ದ ಮರಗಳ ಶಾಖೆಗಳಲ್ಲಿ ವಲ್ಕಲವು ಸಿಕ್ಕಿಬೀಳದಿದ್ದರೂ ಅದನ್ನು ಬಿಡಿಸುವ ನೆವದಿಂದ ನನ್ನನ್ನು ನೋಡುತ್ತ ನಿಂತಳು ! ಇಲ್ಲಿ ಶಕುಂತಲೆಯ ರೂಪ ಪ್ರತ್ಯಕ್ಷವೆಂಬಂತೆ ಕಾಣಿಸುವುದರಿಂದ ಭಾವಿಕಾಲಂಕಾರವಿದೆ.

೧೦

ಜಯದೇವನ 'ಚಂದ್ರಾಲೋಕ'ದಲ್ಲಿ 'ಭಾವಿಕ'ವನ್ನು ಕುರಿತು ಹೀಗೆ ಹೇಳಿದೆ :

ಭಾವಿಕಂ ಭೂತಭಾವ್ಯರ್ಥ ಸಾಕ್ಷಾದ್ದರ್ಶನವರ್ಣನಮ್
ಅಲಂ ವಿಲೋಕಯಾದ್ಯಾಪಿ ಯುದ್ಧ್ಯಂತೇऽತ್ರ ಸುರಾಸುರಾಃ ॥
ದೇಶಾತ್ಮ ವಿಪ್ರಕೃಷ್ಟಸ್ಯ ದರ್ಶನಂ ಭವಿಕಚ್ಛವಿಃ
ತ್ವಂ ವಸನ್ ಹೃದಯೇ ತಸ್ಯಾಃ ಸಾಕ್ಷಾತ್ಪಂಚೇಷುರೀಕ್ಷ್ಯಸೇ ॥[17]

---

16. ಶಾಕುಂತಲಂ : ೨-೧೩ ; ರುಯ್ಯಕ ಉದ್ಧರಿಸಿದ್ದಾನೆ.
17. 'ಚಂದ್ರಾಲೋಕಃ' ಪು. ೧೦೭ ಚೌಖಂಬಾ ಸಂಸ್ಕೃತ ಸೀರೀಸ್, ವಾರಣಾಸಿ, ೧೯೩೮

'ಚಂದ್ರಾಲೋಕ'ದಲ್ಲಿ ಮೊದಲನೆಯ ಪಂಕ್ತಿಯಲ್ಲಿ ಲಕ್ಷಣವನ್ನೂ, ಎರಡನೆಯ ಪಂಕ್ತಿಯಲ್ಲಿ ಲಕ್ಷ್ಯವನ್ನೂ ಹೇಳಿರುವುದು ವೈಶಿಷ್ಟ್ಯವಾಗಿದೆ. ಭೂತಭಾವೀ ಅರ್ಥಗಳ ದರ್ಶನವನ್ನು ಸಾಕ್ಷಾತ್ಕಾರಕಥನವೇ ಭಾವಿಕಾಲಂಕಾರವೆನ್ನಿಸುವುದು. ಉದಾಹರಣೆ ರಣಭೂಮಿ ವರ್ಣನೆ. ವರ್ತಮಾನದಲ್ಲಿಯೇ ಯುದ್ಧವನ್ನು ನೋಡಿದ ಕಥನವಾಗಿದೆ. ಭಾವಿಕವು ವಿರಲಾಲಂಕಾರವಾಗಿಯೂ ಬರುವುದಕ್ಕೆ ಇದು ನಿದರ್ಶನ. ದೇಶದಲ್ಲಿ ಆಶ್ರಯೋತ್ಕರ್ಷವಶದಿಂದ ಸಾಕ್ಷಾದ್ದರ್ಶನ ಕಥನವು 'ಭಾವಿಕಚ್ಛವಿ' ಎಂಬ ಅಲಂಕಾರವೆನ್ನಿಸುತ್ತದೆ. ಉದಾಹರಣೆ: ಅನ್ಯಹೃದಯ ನಿಷ್ಠನಾದ ಕಾಮುನ ದರ್ಶನದ ಉಕ್ತಿ.

೧೧

ತಿರುಮಲಾರ್ಯ ವಿರಚಿತ 'ಅಪ್ರತಿಮವೀರಚರಿತೆ'ಯಲ್ಲಿ ಭಾವಿಕಾಲಂಕಾರವನ್ನು ಕುರಿತು ಹೀಗೆ ಹೇಳಲಾಗಿದೆ :

ಭಾವಿಕಂ ಭೂತಭಾವ್ಯರ್ಥ ಸಾಕ್ಷಾತ್ಕಾರಸ್ಯ ವರ್ಣನಂ ॥

ಪಿಂದೆ ಪೋದುದಂ ಮುಂತೆ ಬರ್ಪುದನಾವುದನಾದೊಡಮೊಂದು ರಸಾವೇಶದಿಂ ಪ್ರತ್ಯಕ್ಷದಂತೆ ಕಾಣ್ಬುದು ಭಾವಿಕಮೆನಿಪುದು. ಎಂತೆನೆ :

ಇದೆ ಬಂದರ್ ಮಹಿಶೂರವ-
ರಿದೆ ಕೊಂದರ್ ಕೂಪುಖಾನನಂ ಮಿಕ್ಕವರಂ
ಸದೆದಪರಿದೆ ಸಲಪುವುದೆಂ-
ದೊದಱುವನಾ ಚೆನ್ನಬಸವನಿರ್ಕೇರಿಯೊಳಂ ॥

ಇದಱೊಳ್ ರಣಭೀತಿಯಿಂ ಚೆನ್ನಬಸವಂ ಪುಯಿಲೊಳ್ ಕಂಡುದಂ ಪುರದೊಳ್ ಸಾಕ್ಷಾತ್ಕರಿಪುದಱಿಂದಿದು ಭಾವಿಕಾಲಂಕಾರಂ.[18]

೧೨

ಅಪ್ಪಯ್ಯ ದೀಕ್ಷಿತನು ಭಾವಿಕಾಲಂಕಾರದ ಲಕ್ಷಣವನ್ನು ಸಂಕ್ಷಿಪ್ತ ರೂಪದಲ್ಲಿ ಹೀಗೆ ಹೇಳಿದ್ದಾನೆ :

ಭಾವಿಕಂ ಭೂತಭಾವ್ಯರ್ಥ ಸಾಕ್ಷಾತ್ಕಾರಸ್ಯ ವರ್ಣನಮ್ ॥

ಅವನು ಕೊಟ್ಟ ಉದಾಹರಣೆ : 'ಅಹಂ ವಿಲೋಕಯೇಽದ್ಯಾಪಿ ಯುಧ್ಯಂತೇಽತ್ರ ಸುರಾಸುರಾಃ'– ಇಂದೂ ಸುರಾಸುರರು ಯುದ್ಧಮಾಡುತ್ತಿದ್ದಾರೆಂಬುದನ್ನು ನಾನು ಕಾಣುತ್ತಿದ್ದೇನೆ. ಇದರಲ್ಲಿ ವಸ್ತುಗತ ಅದ್ಭುತತೆಯಾಗಲೀ, ಕವಿಕರ್ಮದ ಸೂಕ್ಷ್ಮಗತಿ

18. ಅಪ್ರತಿಮವೀರಚರಿತೆ : ಪು. ೧೨೧; ೯೭೭

ಯಾಗಲೀ ಕಂಡು ಬರುವುದಿಲ್ಲ. ಮಮ್ಮಟನಿಂದ ಆರಂಭವಾದ ಈ ಸಂಕ್ಷೇಪರೂಪ ಅಪ್ಪಯ್ಯ ದೀಕ್ಷಿತನಲ್ಲಿ ಪರಾಕಾಷ್ಠೆ ಮುಟ್ಟಿದ ಹಾಗೆ ಕಾಣಿಸುತ್ತದೆ.

೧೩

ಮೇಲೆ ನೋಡಿದ ಹಾಗೆ, ಭಾವಿಕಾಲಂಕಾರಕ್ಕೆ ಲಕ್ಷಣವನ್ನು ಹೇಳಿದ ಆಲಂಕಾರಿಕರಲ್ಲಿ ಸ್ಪಷ್ಟವಾಗಿ ಎರಡು ಪಕ್ಷ ಎದ್ದು ಕಾಣಿಸುತ್ತದೆ. ಭಟ್ಟಿ, ಭಾಮಹ, ದಂಡಿಯರು ಅರ್ಥವ್ಯಾಪೀ ಪ್ರಬಂಧಸೌಂದರ್ಯವನ್ನು ಗುರುತಿಸಿದರೆ, ನವೀನರು ಅದನ್ನು ಪುನಃ ಸಂಕುಚಿತಗೊಳಿಸಿ 'ಭಾವಿಕ'ಕ್ಕೆ ಕೇವಲ ಅಲಂಕಾರದ ಪರಿಮಿತ ಅರ್ಥವನ್ನು ಕೊಟ್ಟಿದ್ದಾರೆ. ಅಗಸ್ತ್ಯಮುನಿ ಅಂಗೈಯಲ್ಲಿ ಅಂಬುಧಿಯನ್ನು ಆಪೋಶನ ಮಾಡುವಾಗ ಕಂಡ ದೃಶ್ಯದ ಶ್ಲೋಕವನ್ನು ಆನಂದವರ್ಧನನು ಯಾವ ಅಲಂಕಾರವಿಲ್ಲದೆಯೂ ಇದು ರಸವತ್ತಾಗಿದೆ ಎಂಬುದಕ್ಕೆ ಉದಾಹರಣೆಯಾಗಿ ಕೊಟ್ಟಿದ್ದಾನೆ. "ಅತಏವ ಚ ರಸಾನುಗುಣಾರ್ಥ ವಿಶೇಷೋಪನಿಬಂಧನಮಲಂಕಾರಾಂತರವಿರಹೇಽಪಿ ಛಾಯಾತಿಶಯ ಯೋಗಿ ಲಕ್ಷ್ಯೇ ದೃಶ್ಯತೇ ಯಥಾ 'ಮುನಿರ್ಜಯತಿ...''[19] "ಕಾವ್ಯದಲ್ಲಿ ಪ್ರಧಾನವಾದೊಂದು ರಸದ ಆಶ್ರಯವಿರುವಂತೆ ಮಾಡುವುದರಿಂದ ಹೊಸತನವು ಬರುವುದಲ್ಲದೆ ಹೆಚ್ಚಿನ ಸೌಂದರ್ಯವೂ ಬರುತ್ತದೆ. ಆದುದರಿಂದಲೇ ಬೇರೆ ಅಲಂಕಾರಗಳಿಲ್ಲದೆ ಹೋದರೂ ರಸಾನುಗುಣವಾದ ವಿಶಿಷ್ಟ ವಿಷಯಗಳನ್ನು ಸೇರಿಸಿಕೊಳ್ಳುವುದರಿಂದ ಅತಿಶಯವಾದ ಸೊಗಸು ಲಕ್ಷ್ಯಗಳಲ್ಲಿ ಬರುವುದನ್ನು ನೋಡಬಹುದು."[20] ಎಂದು 'ಮುನಿರ್ಜಯತಿ...' ಎಂಬ ಶ್ಲೋಕವನ್ನು ಉದಾಹರಿಸಲಾಗಿದೆ. "ಒಂದೇ ಸೇರೆಯಲ್ಲಿ ಮತ್ಸ್ಯಕೂರ್ಮಾವತಾರಗಳೆರಡನ್ನೂ ನೋಡಿದನೆಂದಿರುವುದು ಅಪೂರ್ವ ಸೌಂದರ್ಯಯುಕ್ತವಾಗಿರುವುದಕ್ಕೆ ಅದು ಅದ್ಭುತ ರಸಾನುಗುಣವಾಗಿರುವುದೇ ಕಾರಣ."[21] ಇಲ್ಲಿ ಅದ್ಭುತರಸದ ಸ್ಥಾಯಿಭಾವವಾದ ವಿಸ್ಮಯ ದಟ್ಟವಾಗಿರುವುದರಿಂದ ಇದು ಅದ್ಭುತರಸವೇ ಹೊರತು ಭಾವಿಕಾಲಂಕಾರವಲ್ಲ.

ಇದನ್ನು 'ಭಾವಿಕ' ಎಂದು ಏಕೆ ಕರೆದರು? 'ಕವೇರಾಶಯಃ' ಅಥವಾ 'ಅಭಿಪ್ರಾಯಃ' ಭಾವ ಎನ್ನಿಸಿಕೊಳ್ಳುವುದು. ಕವಿಯ ಭಾವ ಇಲ್ಲಿ ಇಷ್ಟು ಸಮರ್ಥವಾಗಿ ಅಭಿವ್ಯಕ್ತವಾದುದರಿಂದ ಇದನ್ನು ಭಾವಿಕ ಎಂದು ಕರೆಯಲಾಯಿತು. ಡಾ. ಪಿ. ವಿ. ಕಾಣೆಯವರು ಇದನ್ನು 'Vision' ಎಂದು ಕರೆದಿದ್ದಾರೆ. ಇದನ್ನು ಕೆಲವರು ಪ್ರಸಾದ ಗುಣದಲ್ಲಿ ಸೇರಿಸಲು ಪ್ರಯತ್ನಿಸಿದರು, ಪ್ರಸಾದ ಗುಣವು ಎಲ್ಲ ರಸಗಳಿಗೂ

---

19. ಧ್ವನ್ಯಾಲೋಕ: ಪು. ೨೪೯ Quoted by Dr. P. V Kane in Sahityadarpana P 306 1965.
20. ಡಾ. ಕೆ. ಕೃಷ್ಣಮೂರ್ತಿ: ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ: ಪು. ೨೫೦; ೧೯೬೧
21. ಅಲ್ಲೇ

ಸಮಾನವಾದುದು ; ಸಾಧಾರಣವಾದುದು. ಇದನ್ನು ವಿರೋಧಿಸಿ ಕೆಲವರು ಹೀಗೆ ವಾದಿಸಿದರು : ಅದ್ಭುತರಸಕ್ಕೂ ಭಾವಿಕಾಲಂಕಾರಕ್ಕೂ ಸ್ಪಷ್ಟವಾದ ವ್ಯತ್ಯಾಸವಿದೆ. ಅದ್ಭುತರಸವಾಗಬೇಕಾದರೆ ವಿಸ್ಮಯ ಎಂಬ ಸ್ಥಾಯಿಭಾವ ಮಾತ್ರ ಸಾಲದು ; ವಿಭಾವ ಅನುಭಾವಗಳೂ ಅಗತ್ಯ. ಬರಿಯ ಅದ್ಭುತತೆ ಕಂಡಾಗ ಅದು ಭೂತಭಾವೀ ಅರ್ಥಗಳನ್ನು ಪ್ರತ್ಯಕ್ಷ ಕಾಣುವಂತೆ ಹೇಳಿದಲ್ಲಿ ಭಾವಿಕಾಲಂಕಾರವಾಗುವುದೇ ಹೊರತು ಅದ್ಭುತರಸವಲ್ಲ ಎಂದರು. ಹೀಗೆ ಭಾವಿಕಕ್ಕೂ, ಅತಿಶಯೋಕ್ತಿ, ಭ್ರಾಂತಿ, ಸ್ವಭಾವೋಕ್ತಿಗಳಿಗೂ ಪರಸ್ಪರ ವ್ಯತ್ಯಾಸವುಂಟೆಂಬುದನ್ನು 'ಅಲಂಕಾರ ಸರ್ವಸ್ವ'ದಲ್ಲಿ ರುಯ್ಯಕ ಪ್ರತಿಪಾದಿಸಿದ್ದಾನೆ.

"ಧ್ವನಿಪ್ರಸ್ಥಾನಕ್ಕೆ ಸೇರದ ಪ್ರಾಚೀನಾಲಂಕಾರಿಕರು ಕಾವ್ಯಾನುಭವದ ರಹಸ್ಯವನ್ನು ನಿರ್ವಚನ ಮಾಡಲು ಉಪಯೋಗಿಸುವ ತತ್ತ್ವವೇ ಭಾವಿಕ"[22] ಈ ಅಭಿಪ್ರಾಯವನ್ನು ಸಮರ್ಥಿಸುವುದಕ್ಕೆ ಡಾ. ಕೆ. ಕೃಷ್ಣಮೂರ್ತಿಯವರು ಉದ್ಭಟನ ವ್ಯಾಖ್ಯಾಕಾರನಾದ ಪ್ರತೀಹಾರೇಂದುರಾಜನು ಹೇಳಿದ ಎರಡು ಸೂಕ್ತಿರತ್ನಗಳನ್ನು ಉಲ್ಲೇಖಿಸಿದ್ದಾರೆ :

"ರಸೋಲ್ಲಾಸೀ ಕವೇರಾತ್ಮಾ ಸ್ವಚ್ಛೇಶಬ್ದಾರ್ಥ ದರ್ಪಣೇ
ಮಾಧುರ್ಯೌಜೋಯುತ ಪ್ರೌಢೇ ಪ್ರತಿವಿಂಬ್ಯ ಪ್ರಕಾಶತೇ ॥
ಸಂಪೀತ ಸ್ವಚ್ಛ ಶಬ್ದಾರ್ಥದ್ರಾವಿತಾಭ್ಯಂತರಸ್ತತಃ
ಶ್ರೋತಾ ತತ್ಸಾಮ್ಯತಃ ಪುಷ್ಟಿಂ ಚತುರ್ವರ್ಗೇ ಪರಾಂ ವ್ರಜೇತ್ ॥

ಕಾವ್ಯಸಮಾಧಿಯಲ್ಲಿ ಪರವಶನಾಗುತ್ತಿರುವ ಸಹೃದಯನಿಗೆ ತನ್ನ ವಿಕಲ್ಪಗಳು ತತ್ಕಾಲದಲ್ಲಿ ತೊಲಗಿ ಕವಿಯ ಭಾವದಲ್ಲಿ ತಾದಾತ್ಮ್ಯ ಬರುತ್ತದೆ. ರಸಮಯವಾದ ಕವಿಯ ಅನುಭವದಲ್ಲಿ ಏಕೀಭಾವ ಬರುತ್ತದೆ. ಸಹೃದಯನ ಅನುಭವವೂ ಒಂದು ಅಪರೋಕ್ಷವಾದ ಅನುಭೂತಿ. ಆ ಅನುಭೂತಿ ಕವಿಯ ಅನುಭೂತಿಯಷ್ಟೇ ಪ್ರಬಲ ಮತ್ತು ಪರಿಶುದ್ಧ ; ಮೊದಲು ತಾನರಿಯದಿದ್ದ ಎಷ್ಟೋ ಧರ್ಮಾದಿ ರಹಸ್ಯಗಳು ಈಗ ಕವಿಯೊಡನೆ ಸಹಾನುಭೂತಿಯ ಪ್ರಭಾವದಿಂದ ಪ್ರತ್ಯಕ್ಷವೆಂಬಂತೆ ಸಹೃದಯನ ಸಾಕ್ಷಾತ್ಕಾರಪದವಿಯನ್ನು ಪಡೆಯುತ್ತವೆ. ಕವಿಯ ಆತ್ಮವು ರಸೋಲ್ಲಾಸಿಯಾಗಿರುವಂತೆಯೇ ಸಹೃದಯನ ಆತ್ಮವೂ ದ್ರವೀಭೂತವಾಗಿ ಪರಾನಂದವನ್ನು ಅನುಭವಿಸುತ್ತವೆ. ಕವಿಯ ಶಬ್ದಾರ್ಥಗಳು ಆಗ ಕೇವಲ ಕನ್ನಡಿಯಂತೆ ಕೆಲಸ ಮಾಡುತ್ತವೆ. ಮಾಧುರ್ಯ, ಓಜಸ್ಸೆಂಬ ಗುಣಗಳೇ ಆ ಕನ್ನಡಿಯ ರನ್ನಚೌಕಟ್ಟು. ಆ ಗುಣಗಳಿದ್ದಲ್ಲದೆ ಸಹೃದಯನನ್ನು ಶಬ್ದಾರ್ಥಗಳು ಆಕರ್ಷಿಸಲಾರವು. ಕನ್ನಡಿಯು ನಿರ್ಮಲವಾಗಿ ಪ್ರತಿಫಲಿಸುವಂತೆ ಮಾಡುವ ಗುಣ ಕವಿಯ 'ಭಾವ'ದ್ದು ; ರಸಮಯವಾದ ಕವಿಯ ಆತ್ಮದ್ದು ; ಎಂದರೆ ಕವಿಯ ಸಹಜವಾದ ಪ್ರತಿಭಾವೇಶದ್ದು. ಆ

---

22. ಡಾ, ಕೆ. ಕೃಷ್ಣಮೂರ್ತಿ : ಕನ್ನಡ ಕಾವ್ಯಪ್ರಕಾಶ : ಪು. ೨೪೧ ಅಡಿಟಿಪ್ಪಣಿ. ೧೯೫೫.

ಭಾವದ, ಆ ರಸದ, ಆ ಆವೇಶದ ನೈಜತೆ ಹೆಚ್ಚಿದಷ್ಟೇ ಪ್ರಮಾಣದಲ್ಲಿ ಕವಿವಾಣಿಯ ಸ್ವಚ್ಛ ಪ್ರತಿಬಿಂಬಕತೆ ಬೆಳೆಯುತ್ತದೆ. ಸಹೃದಯನನ್ನೂ ಕವಿಯ ಅನುಭವಕ್ಕೆ ತಂದುಬಿಡುತ್ತದೆ. ಕವಿಯಲ್ಲಿ ಈ ಗುಣವಿದ್ದಾಗ ಮಾತ್ರ ಭಾವಿಕತ್ವವುಂಟೆನ್ನ ಬಹುದು. ಪ್ರಾಚೀನರ ಈ ಸಿದ್ಧಾಂತವೇ ಮುಂದಿನ ರಸಮೀಮಾಂಸೆಗೆ ಮಾರ್ಗ ದರ್ಶಿಯಾಯಿತೆನ್ನಬಹುದು."[23]

## ೧೪

ಪ್ರಾಚೀನಾಲಂಕಾರಿಕರ ಅಭಿಪ್ರಾಯಗಳನ್ನೆಲ್ಲ ಪರಿಶೀಲಿಸಿದಾಗ ನಮಗೆ ಭಾವಿ ಕಾಲಂಕಾರದ ಲಕ್ಷಣ ಹೀಗೆ ವ್ಯಕ್ತವಾಗುತ್ತದೆ. ಭೂತಭಾವೀ ಪದಾರ್ಥಗಳನ್ನು ಪ್ರತ್ಯಕ್ಷವೆಂಬಂತೆ ವರ್ಣಿತವಾಗುವುದೇ ಭಾವಿಕಾಲಂಕಾರ. ಅದು ಅದ್ಭುತವೆನ್ನಿಸಿದಾಗ ಅದು ಅದ್ಭುತರಸವಾಗುವುದೇ ಹೊರತು ಅಲಂಕಾರವಾಗುವುದಿಲ್ಲ. ಭಟ್ಟಿ, ಭಾಮಹ, ದಂಡಿಯರು ಗುರುತಿಸಿರುವುದು ಈ ರಸವನ್ನೇ ವಿನಾ ಅಲಂಕಾರವನ್ನಲ್ಲ ; ಅದಕ್ಕಾಗಿ ಅವರು ಉದಾಹರಣೆಯನ್ನು ಕೊಡಲು ಹೋಗಲಿಲ್ಲ. ಹೀಗೆ ಸೀಮಿತವಾದ ಅರ್ಥ ದಲ್ಲಿ ಒಂದು ದೇಶದ, ಸನ್ನಿವೇಶದ, ಯುದ್ಧದ ವರ್ಣನೆಯನ್ನು, ಅದು ಭೂತ ವಾಗಿರಲಿ, ಭವಿಷ್ಯವಾಗಿರಲಿ, ಪ್ರತ್ಯಕ್ಷವೆಂಬಂತೆ ಬಂದಾಗ ಭಾವಿಕಾಲಂಕಾರವೆನ್ನಿಸು ವುದು. ಇದಕ್ಕೆ ಮಮ್ಮಟನ ಕಾವ್ಯಪ್ರಕಾಶ, ಜಯದೇವನ ಚಂದ್ರಾಲೋಕ, ತಿರುಮಲಾರ್ಯನ ಅಪ್ರತಿಮವೀರಚರಿತೆಗಳಲ್ಲಿ ಭಾವಿಕಾಲಂಕಾರಕ್ಕೆ ಕೊಟ್ಟ ಉದಾಹರಣೆ ಗಳು ಸಾಕ್ಷಿಯಾಗಿವೆ. ಅಲ್ಲಿ ಯಾವ ಅದ್ಭುತರಸವೂ ಇಲ್ಲ. 'ಮುನಿರ್ಜಯತಿ', 'ದರ್ಭಾಂಕುರೇಣ' ಮೊದಲಾದ ಉದಾಹರಣೆಗಳಲ್ಲಿ ರಸವೇ ಹೊರತು ಅಲಂಕಾರ ವಲ್ಲ. ಭಟ್ಟಿ, ಭಾಮಹ, ದಂಡಿಯರು ಸ್ಪಷ್ಟವಾಗಿ ಭಾವಿಕವನ್ನು ಸೋದಾಹರಣ ವಾಗಿ ಹೇಳಲು ಹಿಂಜರಿದಂತೆ ಕಾಣಿಸುತ್ತದೆ. ಅವರಿಗೆ ಅಲಂಕಾರದ ಪಕ್ಷವನ್ನು ಬಿಡಲು ಮನಸ್ಸಿಲ್ಲ ; ರಸವೆಂದು ಹೇಳಲು ಒಪ್ಪಲಾರರು. ಹೀಗೆ ಉಭಯಸಂಕಟ ದಲ್ಲಿ ಅಲಂಕಾರ ಪ್ರಸ್ಥಾನದ ಕೊನೆಕೊನೆಯಲ್ಲಿ ಭಾವಿಕವನ್ನು ಹೇಳಿದರು. ಒಬ್ಬಿಬ್ಬರು ಭಾವಿಕ ಅಲಂಕಾರವೂ ಹೌದು ; ಸ್ವಭಾವೋಕ್ತಿಯೂ ಹೌದು ಎಂದವರೂ ಇದ್ದಾರೆ ! ಇದು 'ಅಲಂಕಾರ ಸಂಕರ' ಎಂದು ಅವರು ನಿರೂಪಿಸಿದ್ದಾರೆ. ಅಲಂಕಾರ ಸಂಕರ ವಾಗುವುದು ಸಾಧ್ಯವಿಲ್ಲ ; ಯಾವುದಾದರೂ ಒಂದೇ ಅಲಂಕಾರ ಕಂಡುಬರಬೇಕು. 'ಅಲಂಕಾರ ಸರ್ವಸ್ವ'ಕ್ಕೆ ವ್ಯಾಖ್ಯಾನ ಬರೆದ ಜಯರಥನು ಇದಕ್ಕೊಂದು ಉದಾಹರಣೆ ಯನ್ನು ಹೀಗೆ ಕೊಟ್ಟಿದ್ದಾನೆ :[24]

---

23. ಅದೇ. ಪುಟ : ೨೪೧-೨೪೨ ಅಡಿಟಿಪ್ಪಣಿ.
24. ಡಾ. ರೇವಾ ಪ್ರಸಾದ ದ್ವಿವೇದೀ : ಹಿಂದೀ ಅಲಂಕಾರ ಸರ್ವಸ್ವ: ಪು. ೬೭೮, ಚೌಖಂಬಾ ಪ್ರಕಾಶನ. ೧೯೭೧.

ಹೇರಂಬೇऽತ್ರ ಹರೀಶ್ವರೇ ನಖಮುಖೈಃ ಕಂಡೂಯಮಾನೇಗಲಂ
ಕುರ್ವನ್ ಪುಚ್ಛ ವಿವರ್ತನಾನಿ ವಿರತೋ ರೋಮಂಥಲೀಲಾಯತಾತ್
ಸಂಮೀಲನ್ನಯನಂ ವಿಸಂಸ್ಥುಲಲಸತ್ಸಾಗ್ರಂ ನತೋನ್ನಮಿತ–
ಗ್ರೀವಂ ನಿಶ್ಚಲಕರ್ಣ ಮೀಶ್ವರ ಬಲೀವರ್ದಃ ಸುಖಂ ಮನ್ಯತೇ ॥

ಇಲ್ಲಿ ವೃಷಭದ ಬಾಲಬೀಸುವಿಕೆ, ಮೆಲುಕಾಡುವಿಕೆ– ಇವೆಲ್ಲ ಸ್ವಭಾವೋಕ್ತಿ ಎಂದೂ, ಇದನ್ನು ಪ್ರತ್ಯಕ್ಷವೆಂಬಂತೆ ಬಣ್ಣಿಸಿರುವುದರಿಂದ ಭಾವಿಕಾಲಂಕಾರವೆಂದೂ ಅವನ ಅಭಿಪ್ರಾಯ. ವಾಸ್ತವವಾಗಿ ಇಲ್ಲಿ ಸ್ವಭಾವೋಕ್ತಿಯೊಂದೇ ಅಲಂಕಾರ. ಈ ಒಂದು ಭ್ರಮೆಯುಂಟಾದುದರಿಂದಲೇ ಸ್ವಭಾವೋಕ್ತಿಯನ್ನು ಹೇಳಿದ ಮೇಲೆ ಭಾವಿಕಾಲಂಕಾರವನ್ನು ಹೆಚ್ಚಿನ ಆಲಂಕಾರಿಕರು ಹೇಳಿದ್ದಾರೆ. ಇಲ್ಲಿ ಅಲಂಕಾರಸಂಕರವಾಗಿಲ್ಲ. ಹೀಗೆಯೇ ಅದ್ಭುತಾದಿ ರಸಗಳಿಗೂ ಭಾವಿಕಾಲಂಕಾರಕ್ಕೂ ಆಲಂಕಾರಿಕರಲ್ಲಿ ಭ್ರಾಂತಿಯುಂಟಾಯಿತು. ಅದರಿಂದ ಅವರಲ್ಲೇ ಬೇರೆ ಬೇರೆ ಅಭಿಪ್ರಾಯಗಳು ಉಂಟಾದುವು. ಭಾವಿಕಕ್ಕೂ, ರಸಗಳಿಗೂ ಇರುವ ಅಂತರವಿಷ್ಟೇ. ಭೂತಭಾವೀ ವಿಷಯವನ್ನು ಪ್ರತ್ಯಕ್ಷವೆಂಬಂತೆ ವರ್ಣಿಸಿದರೆ ಅದು ಭಾವಿಕಾಲಂಕಾರ. ಇದು ಕೇವಲ ಒಂದು ಅಲಂಕಾರದಲ್ಲಿ ಪರ್ಯವಸಾನವಾಗುವುದು. ಅಲ್ಲಿ ವಿಸ್ಮಯವೇ ಮೊದಲಾದ ಸ್ಥಾಯಿಭಾವವಿದ್ದು ಅದನ್ನು ಪೋಷಿಸುವ ವಿಭಾವ, ಅನುಭಾವಗಳಿದ್ದಲ್ಲಿ ಅದು ರಸವೆನ್ನಿಸುವುದು. ಅದು ಯಾವ ರಸವೂ ಆಗಬಹುದು. 'ಮುನಿರ್ಜಯತಿ...' ಎಂಬ ಉದಾಹರಣೆಯಲ್ಲಿ ವಿಸ್ಮಯ ಸ್ಥಾಯಿಯಾದುದರಿಂದ ಅಲ್ಲಿ ಅದ್ಭುತ ರಸ ಅನುಭವಕ್ಕೆ ಬರುತ್ತದೆ. 'ದರ್ಭಾಂಕುರೇಣ' ಎಂಬ ಉದಾಹರಣೆಯಲ್ಲಿ ರತಿಸ್ಥಾಯಿಯಾದುದರಿಂದ ಅಲ್ಲಿ ಶೃಂಗಾರರಸ ಪ್ರತೀತವಾಗುತ್ತದೆ.

# ಧ್ವನಿ: ಕೆಲವು ವಿಚಾರಗಳು

ಸಿ. ಪಿ. ಕೆ.

ರಸ, ಧ್ವನಿ, ಔಚಿತ್ಯ–ಇವು 'ಕಾವ್ಯಗಾಯತ್ರಿ'; ಭಾರತೀಯ ಕಾವ್ಯ ಮೀಮಾಂಸೆ ದೀರ್ಘಕಾಲೀನ ಮಥನದಿಂದ ಹೊರದೆಗೆದ ರತ್ನತ್ರಯ. ಧ್ವನಿತತ್ತ್ವವನ್ನು ಕುರಿತು ಇಲ್ಲಿ ತುಸು ವಿವೇಚಿಸಬಹುದು.

ಧ್ವನಿತತ್ತ್ವ ತುಂಬ ವ್ಯಾಪಕವೂ ಉಪಾದೇಯವೂ ಆದದ್ದು. ಅದು ಪ್ರಾಚೀನವೆಂತೊ ಅಂತೇ ನಿತ್ಯನೂತನವೂ ಹೌದು. ಆಧುನಿಕವೆನಿಸುವ ಸಂಕೇತ, ಪ್ರತೀಕ, ಪ್ರತಿಮೆಗಳ ಹಿಂದಿರತಕ್ಕದ್ದು ವಾಸ್ತವವಾಗಿ ಧ್ವನಿಯೇ. ಪಾಶ್ಚಾತ್ಯರಲ್ಲಿ, ಸಂಕೇತವಾದಿ ಚಳುವಳಿಯ ಮೂಲಪುರುಷನೆನ್ನಲಾದ ಎಡ್ಗರ್ ಆಲೇನ್ ಪೋನ 'Suggestive indefiniteness' ಎನ್ನುವ ಮಾತು ಭಾರತೀಯ ಧ್ವನಿಸಿದ್ಧಾಂತವನ್ನೆ ಬೇರೊಂದು ಭಂಗಿಯಲ್ಲಿ ಹೇಳಿದಂತಿದೆ. ಅನಿರ್ದಿಷ್ಟ (indefinite) ಎಂಬ ವಿಶೇಷಣ ಧ್ವನಿಯ ಸ್ವರೂಪವನ್ನು ಬೆಳಗುವಂಥದು.

"ಕಾವ್ಯಸ್ಯಾತ್ಮಾ ಧ್ವನಿಃ" ಎಂಬ ಉಕ್ತಿ ಕಾವ್ಯದಲ್ಲಿ ಧ್ವನಿಯ ಸ್ಥಾನವನ್ನು ನಿರ್ದೇಶಿಸುತ್ತದೆ ಮಾತ್ರವಲ್ಲ, ಬರವಣಿಗೆಯ ಇತರ ಜಾತಿಗಳಿಂದ ಕಾವ್ಯ ಹೇಗೆ ಭಿನ್ನವಾಗುತ್ತದೆ ಎಂಬುದನ್ನೂ ಸೂಚಿಸುತ್ತದೆ. ಈ ಸಂದರ್ಭದಲ್ಲಿ ಅಗ್ನಿಪುರಾಣದ ಉಪಯುಕ್ತವಾದ ಮಾತೊಂದನ್ನು ಸ್ಮರಿಸಬಹುದು : ಶಾಸ್ತ್ರದಲ್ಲಿ ಶಬ್ದಕ್ಕೂ ಇತಿಹಾಸದಲ್ಲಿ ಅರ್ಥಕ್ಕೂ ಕಾವ್ಯದಲ್ಲಿ ಧ್ವನಿಗೂ ಪ್ರಾಧಾನ್ಯವೆಂದು ಅಲ್ಲಿ ಹೇಳಿದೆ.

ಲೌಕಿಕ, ವ್ಯಾವಹಾರಿಕ ಭೂಮಿಕೆಯಲ್ಲಿ ತುಂಬಿ ನಿಂತಿರುವ ಅರ್ಥ ಅಥವಾ ವಾಚ್ಯಾರ್ಥಕ್ಕಿಂತ ಬೇರೆಯಾದದ್ದು ವ್ಯಂಗ್ಯಾರ್ಥ ಅಥವಾ ಧ್ವನಿ. ಅದು ದಂಡಿ ಹೇಳುವ 'ಇಷ್ಟಾರ್ಥ'; ಜಗನ್ನಾಥ ಹೇಳುವ 'ರಮಣೀಯಾರ್ಥ', ವಾಚ್ಯಾರ್ಥ ಪ್ರಸಿದ್ಧಾರ್ಥವಾದರೆ, ಧ್ವನಿ ಸಿದ್ಧಾರ್ಥ ಎನ್ನಬಹುದು. ವಾಚ್ಯಾರ್ಥ ಗ್ರಹಿಕೆಗೆ ಅರ್ಥಕೋಶ ಸಾಕು, ಆದರೆ ಧ್ವನಿ ಗ್ರಹಿಕೆಗೆ ಭಾವಕೋಶ ಬೇಕಾಗುತ್ತದೆ. ಧ್ವನಿ ನಿಘಂಟನ್ನು ಮೀರಿನಿಂತ ಒಂದು 'ಗಂಟು'; ಆದರೆ 'ಒಗಂಟು' ಅಲ್ಲ, ಅದು ಬುದ್ಧಿಗ್ರಾಹ್ಯವಾದುದಲ್ಲ : "ಸಹೃದಯ ಹೃದಯ ಸಂವೇದ್ಯ'ವಾದುದು. "ಅದು ತಿಳಿದದ್ದಲ್ಲ, ಹೊಳೆದದ್ದು ಮತ್ತು ಬೆಳೆದದ್ದು."

ವಾಚ್ಯಾರ್ಥ ಶಬ್ದನಿಷ್ಠವಾದರೆ, ಧ್ವನಿ 'ಅಶಬ್ದಗೋಚರ' ಎನ್ನಲಾಗಿದೆ. ಅಲ್ಲಮಪ್ರಭು ತನ್ನೊಂದು ವಚನದಲ್ಲಿ ಭಗವಂತನ ನಿಲುವನ್ನು "ಶಬ್ದದೊಳಗಣ ನಿಶ್ಶಬ್ದದಂತೆ" ಎಂಬ ಹೋಲಿಕೆಯಿಂದ ನಿರೂಪಿಸಿದ್ದಾನೆ. ಧ್ವನಿಯನ್ನೂ 'ಶಬ್ದದೊಳಗಣ ನಿಶ್ಶಬ್ದ' ಎಂದು ಕರೆಯಬಹುದು. ಅದು ಮೌನ; ಆದರೆ ಮಾತಿನಾಚೆಯ ಮೌನ. ಕೀಟ್ಸ್ ಕವಿಯ "Heard melodies are sweet, but those unheard are sweeter" ("ಶ್ರುತಗಾನಮಭಿರಾಮಮಾದೊಡಶ್ರುತಗಾನಮಭಿರಾಮತರಂ") ಎಂಬ ಉದ್ಗಾರ ಧ್ವನಿಗೂ ಅನ್ವಯಿಸಬಲ್ಲುದು.

ಧ್ವನಿ ಒಂದು ಅರ್ಥವಲ್ಲ, ಅರ್ಥಪರಂಪರೆ ; ಪುಂಖಾನುಪುಂಖವಾಗಿ ಹೊಮ್ಮುವಂಥದು. ಅದೊಂದು ಪರಿವೇಷ. ಎ. ಆರ್. ಕೃಷ್ಣಶಾಸ್ತ್ರಿಯವರು ಒಂದು ಹೋಲಿಕೆಯ ಮೂಲಕ ಧ್ವನಿಸ್ವರೂಪವನ್ನು ಸ್ಪಷ್ಟೀಕರಿಸುತ್ತಾರೆ : "ಒಂದು ಮರದ ದಿಮ್ಮಿಯನ್ನು ಸಲಾಕೆಯಿಂದ ಹೊಡೆದರೆ 'ಥಡ್' ಎಂದು ಸದ್ದಾಗುತ್ತದೆ ; ಉತ್ತರ ಕ್ಷಣದಲ್ಲಿಯೇ ಅಡಗಿಹೋಗುತ್ತದೆ. ಅದೇ ಒಂದು ಲೋಹದ, ಅದರಲ್ಲಿಯೂ ಬೆಳ್ಳಿಯ ಅಥವಾ ಕಂಚಿನ ಪಾತ್ರೆಯನ್ನು ಹೊಡೆದರೆ, 'ಠಣ್' ಎಂದು ಸದ್ದಾಗುತ್ತದೆ. ಆ ಸದ್ದು ಅಲ್ಲಿಯೇ ಅಡಗಿಹೋಗುವುದಿಲ್ಲ ; ಹರಡುತ್ತದೆ, ಅಲೆಅಲೆಯಾಗಿ ಮುಂದುವರಿಯುತ್ತದೆ, 'ಅನುರಣನ'ವಾಗುತ್ತದೆ. ಹಾಗೇ, ಪರ್ವತಪ್ರಾಂತದಲ್ಲಿ ಸಿಡಿಯುವ ಸಿಡಿಲು ಮಾರ್ದನಿ ಪಡಿಮಾರ್ದನಿಗೊಟ್ಟು ಕುಡಿವರಿದು ಆ ಪ್ರಾಂತವನ್ನೆಲ್ಲಾ ಗುಡುಗುಡು ಶಬ್ದದಿಂದ ತುಂಬುತ್ತದೆ. ವಸ್ತುತಃ ಅದು 'ಥಂ!' ಎಂಬ ಒಂದೇ ಏಟು, ಒಂದೇ ಸದ್ದು. ಹೀಗೆ ಸತ್ತ್ವವುಳ್ಳ ಜೀವವುಳ್ಳ ಒಂದು ಮಾತೂ ಹತ್ತು ಮಾತಿನ ಕೆಲಸ ಮಾಡುತ್ತದೆ ; ಮಾತನಾಡಿ ಆಗದ ಕೆಲಸವನ್ನೂ ಮಾಡುತ್ತದೆ: ಇದು 'ಧ್ವನಿ'ಯ ಮಹತ್ವ."[1] ಕೊಳವೊಂದಕ್ಕೆ ಕಲ್ಲೆಸೆದಾಗ ಒಂದಾದಮೇಲೊಂದರಂತೆ ಮೂಡುವ ತರಂಗಾವರ್ತಗಳನ್ನು ಹೋಲುತ್ತದೆ ಧ್ವನಿ.

ಕುವೆಂಪು ತಮ್ಮ 'ಕಿಂಕಿಣಿ'ಯ ಬಗೆಗೆ "ಅರ್ಥಮುಕ್ತ, ಭಾವದೀಪ್ತ, ಧ್ವನಿಪ್ರಚುರ" ಎಂದು ಹೇಳಿಕೊಂಡಿರುವುದನ್ನೂ ಇಲ್ಲಿ ನೆನೆಯಬಹುದು. 'ಅರ್ಥಮುಕ್ತ' ಎಂಬ ನುಡಿ ಧ್ವನಿಯನ್ನು ಕುರಿತದ್ದು. 'ಅರ್ಥಮುಕ್ತ'ವೆಂದರೆ ಅರ್ಥರಹಿತ ಎಂದಲ್ಲ ; ವಾಚ್ಯಾರ್ಥ ಸೀಮಿತವಲ್ಲದ್ದು, ವಾಚ್ಯಾರ್ಥವನ್ನು ಮೀರಿದ್ದು ಎಂದು ಅಭಿಪ್ರಾಯ. ತಮ್ಮ 'ಭಾವಗೀತ' ಎಂಬ ಕವನದಲ್ಲಿ ಬೇಂದ್ರೆಯವರು "ಅರ್ಥವಿಲ್ಲ, ಸ್ವಾರ್ಥವಿಲ್ಲ, ಬರಿಯ ಭಾವಗೀತ" ಎಂದಿರುವಲ್ಲಿಯೂ 'ಅರ್ಥವಿಲ್ಲ' ಎಂಬ ಮಾತು ಕೇವಲ ವಾಚ್ಯಾರ್ಥವನ್ನೊಪ್ಪದೆ, ಧ್ವನಿಯತ್ತ ಬೆರಳು ಮಾಡುತ್ತದೆ. ಇದಮಿತ್ಥಂ ಎಂದು ವಾಚ್ಯಾರ್ಥವನ್ನು ಕರಾರುವಾಕ್ಕಾಗಿ ನಿರ್ಣಯಿಸುವಂತೆ ವ್ಯಂಗ್ಯಾರ್ಥವನ್ನು

1. ಎ. ಆರ್. ಕೃಷ್ಣಶಾಸ್ತ್ರೀ, 'ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ'ದ (೧೯೬೧) ಮುನ್ನುಡಿ ಪು. ix

ನಿರ್ಣಯಿಸುವುದು ಅಶಕ್ಯ. ಈ ಅರ್ಥದಲ್ಲಿ ಅದು ಅನಿಶ್ಚಿತ, ಅನಿರ್ದಿಷ್ಟ. ಧ್ವನಿ ಒಂದು ನಿಯತ ಬಿಂದುವಲ್ಲ; ಅದೊಂದು ವಿಸ್ತರಣಶೀಲ ಪ್ರಭಾಪುಂಜ, ಹೀರು ಕಾಗದದ ಮೇಲೆ ಲೆಕ್ಕಣಿಯನ್ನಿಟ್ಟಾಗ, ಮಸಿ ಹರಡಿಕೊಳ್ಳುತ್ತ ಹೋಗುವ ಪರಿ ಧ್ವನಿಯದು.

ಧ್ವನಿಯನ್ನು ಲಕ್ಷಣೀಕರಿಸುವ ಆನಂದವರ್ಧನನ ಕಾರಿಕೆ ಸುಪ್ರಸಿದ್ಧವಾಗಿದೆ:

ಪ್ರತೀಯಮಾನಂ ಪುನರನ್ಯದೇವ
ವಸ್ತ್ವಸ್ತಿ ವಾಣೀಷು ಮಹಾಕವೀನಾಮ್
ಯತ್ತತ್ಪ್ರಸಿದ್ಧಾವಯವಾತಿರಿಕ್ತಮ್
ವಿಭಾತಿ ಲಾವಣ್ಯಮಿವಾಂಗನಾಸು ('ಧ್ವನ್ಯಾಲೋಕ', ೧-೪)

ಬಿಡಿ ಅವಯವಗಳ ಸೆಲುವಿನಿಂದ ಬೇರೆಯಾದ, ಎಲ್ಲ ಅವಯವಗಳ ಚೆಲುವಿನಿಂದ ಸಿದ್ಧಿಸುವ ಒಟ್ಟಂದವೊಂದು ಹೆಣ್ಣಿನಲ್ಲಿರುತ್ತದೆ; ಧ್ವನಿ ಅಂತಹುದು. ಅದು ಕಾವ್ಯದ ಸಮಗ್ರ ಸೌಂದರ್ಯ; ಸಾಮರಸ್ಯಪೂರ್ಣವಾದದ್ದು. ಆನಂದವರ್ಧನನ ಧ್ವನಿ ನಿರೂಪಣೆಯಲ್ಲಿ ಔಚಿತ್ಯ ತತ್ತ್ವವೂ ಇಂಗಿತವಾಗಿರುವಂತೆ ತೋರುತ್ತದೆ.

ಆನಂದವರ್ಧನ ಹೆಣ್ಣಿನ ವಿಷಯದಲ್ಲಿ ಸೂಚ್ಯವಾಗಿ ಹೇಳಿರುವುದನ್ನು ನೇಮಿಚಂದ್ರ ವಾಚ್ಯಗೊಳಿಸಿದ್ದಾನೆ ತನ್ನೊಂದು ಸ್ವಾರಸ್ಯವಾದ ಪದ್ಯದಲ್ಲಿ; ಅದು ಗಮನಾರ್ಹವಾದುದ್ದು:

ಲಲಿತಂ ಪ್ರತೀಮ ಮಾನೋ
ಪಲಕ್ಷಿತಂ ವಾಚ್ಯಮಾದೊಡೊಪ್ಪದು ಕೃತಿ ಪೆ
ರ್ಮೊಲೆಯುಂ ಮೆಱೆದೊಡೆ ಸಲೆ ಕ
ಣ್ಮಲರಂ ಮುಚ್ಚಿಯದೊಡೆ ಯುವತಿಯೇನೊಪ್ಪುವಳೇ
('ಲೀಲಾವತಿ', ೧-೬೬)

ನೇಮಿ ಇಲ್ಲಿ ಹೇಳಿರುವ 'ಪೆರ್ಮೊಲೆ' ಸ್ಥೂಲತೆಯ ಪ್ರತೀಕ; ಅದೇ ಸೌಂದರ್ಯದ ಆಕರವಲ್ಲ. ಅದಕ್ಕೆ ಬೆಲೆ ಬರತಕ್ಕದ್ದು ಬೇರೊಂದರಿಂದ: ಕಣ್ನೋಟ ದಿಂದ. ಕಣ್ಣು ಜೀವಸೂಚಕವಾದದ್ದು. ಅಂಗಾಂಗ ಸೌಂದರ್ಯ ಎಷ್ಟೇ ಇದ್ದರೂ, ಕಣ್ಣು ಮುಚ್ಚಿಕೊಂಡಿದ್ದರೆ ಅದು ಜಡತ್ವವೋ ಮೃತಿಯೋ ಆಗಿಬಿಡಬಹುದು. ಹೆಣ್ಣಿನ ಚಲನಯನ ವಿಲಾಸದ ಪಾಲು ಅವಳ ಆಕರ್ಷಣೆಯಲ್ಲಿ ಮಿಗಿಲಾಗಿರುತ್ತದೆ. ಅದಿಲ್ಲದಿದ್ದರೆ ದೈಹಿಕ ಸೌಂದರ್ಯ ವ್ಯರ್ಥವಾಗಬಹುದು; ಕಡೆಯ ಪಕ್ಷ, ಪರಿಣಾಮ ರಮಣೀಯವಾಗದಿರಬಹುದು. ಈ ಕಣ್ನೋಟ ದೇಹಜನ್ಯವಾಗಿಯೂ ಅದರಿಂದ ಬೇರೆಯಾಗಿ, ಆಚೆನದಾಗಿ ಭಾಸವಾಗುತ್ತದೆ.

ಆದ್ದರಿಂದ, ಧ್ವನಿ ಕಾವ್ಯದ ಕಣ್ಣು. ವಾಚ್ಯಾರ್ಥ ಸ್ಥೂಲವಾದರೆ, ಧ್ವನಿ ಸೂಕ್ಷ್ಮವಾದದ್ದು ; ಒಂದು ಅಂಗ, ಇನ್ನೊಂದು ಭಂಗಿ. ಮೋಹಕತೆಯಿರತಕ್ಕದ್ದು ಬರಿಯ ಅಂಗದಲ್ಲಲ್ಲ, ಅದರ ಭಂಗಿಯಲ್ಲಿ. ವಾಚ್ಯಾರ್ಥ ಮೃಣ್ಮಯವಾದರೆ, ಧ್ವನಿ ಚಿನ್ಮಯವಾದದ್ದು ಎಂದರೂ ತಪ್ಪಾಗುವುದಿಲ್ಲ. ಅದರಿಂದಲೇ ಕಾವ್ಯಕ್ಕೆ ಚೈತನ್ಯ, ಲವಲವಿಕೆ, ಕಾಂತಿ ಮತ್ತು ಕಮನೀಯತೆ.

ಭಾರತೀಯ ಧ್ವನಿಸಿದ್ಧಾಂತಕ್ಕೆ ಸಂವಾದಿಯಾದ ಎಷ್ಟೋ ಹೇಳಿಕೆಗಳು ಪಾಶ್ಚಾತ್ಯ ವಿಮರ್ಶಕರಲ್ಲೂ ಸಿಕ್ಕುತ್ತವೆ. "ಎಲ್ಲ ಕಾವ್ಯವೂ ವಕ್ರವಾದದ್ದು, ನೇರವಾದ ಕಾವ್ಯ ಎಂಬುದಿಲ್ಲ" ಎನ್ನುತ್ತಾನೆ ಟೆಲ್‌ಯಾರ್ಡ್.[2] "ಒಬ್ಬ ಕವಿ ಬಳಸುವ ಶಬ್ದಗಳ ಅರ್ಥವೆಂದು ನಾವು ಕರೆಯುತಕ್ಕದ್ದರ ಮೇಲೆ ಧ್ವನಿಯ ಒಂದು ಸತತ ವಿಲಾಸ — ಪ್ರತಿಯೊಬ್ಬನ ಸ್ವಂತ ಶಬ್ದಸಾಹಸಗಳಿಂದ ಗೃಹೀತವಾದದ್ದು—ನಡೆದಿರುತ್ತದೆ" ಎಂದು ಲೊವ್ಸ್ ಹೇಳುತ್ತಾನೆ. "ಶಬ್ದಗಳು ತಮ್ಮಿಂದಾಚೆಗೆ ಮತ್ತೇನೊ ಆಗಿ ಪರಿವರ್ತಿತವಾಗುತ್ತವೆ ; ಅವುಗಳ ವ್ಯವಸ್ಥೆ ಬೇರೊಂದು ಲೋಕದ ಭಾಷೆಯಾಗಿ ಮಾರ್ಪಡುತ್ತದೆ" ಎಂಬುದು ವಿಂಡ್‌ಹ್ಯಾಮ್ ಲೂಯಿಯ ಹೇಳಿಕೆ. "ಶ್ರೇಷ್ಠ ಕವಿತೆಯ ಸುತ್ತ ಅನಂತಧ್ವನಿಯ ಆವರಣವೊಂದು ತೇಲುತ್ತಿರುತ್ತದೆ" ಎಂಬುದು ಎ. ಸಿ. ಬ್ರಾಡ್ಲೆಯ ಉಕ್ತಿ.[3]

ಧ್ವನಿಯ ವಿಷಯವಲ್ಲಿ ಲಕ್ಷಿಸಬೇಕಾದ ಮುಖ್ಯಾಂಶವೊಂದಿದೆ. ಧ್ವನಿ ಬರಿಯ ಹೇಳಿಕೆಯಲ್ಲ, ನಿಜ ; ಆದರೆ ಅದು ಪ್ರಹೇಳಿಕೆಯೂ ಅಲ್ಲ. ಅದು ಅನಿರ್ದಿಷ್ಟ ಎಂದಾಕ್ಷಣ, ಅಸ್ಪಷ್ಟ ಎಂದು ಖಂಡಿತ ಅರ್ಥವಲ್ಲ. ಕಾವ್ಯವೊಂದು ಖಾಸಗಿ ಭಾಷೆಯಾಗಿ ಪರಿಣಮಿಸಲು ಧ್ವನಿ ಅವಕಾಶ ಕೊಡುವುದಿಲ್ಲ. ಎಸ್. ಕೆ. ದೇ ಅವರ ಈ ಹೇಳಿಕೆಯನ್ನು ನೋಡಬಹುದು : "Sanskrit poetry does not aim at leaving the unexpressed to be darkly gathered, not does the theory of poetics regard it as indeterminate. The unexpressed is bound up by means of definite links with the expressed, without which it cannot exist ; but it is wrapped up in such a manner as to make it possible only for the initiated....the unexpressed is not understood by those who know grammar and lexicon, but only by men of taste and literary instinct,

2. ಕುಂತಕನ ವಕ್ರೋಕ್ತಿಯಲ್ಲಿ ಧ್ವನಿಯೂ ಸೇರುತ್ತದೆ. "ವಕ್ರೋಕ್ತಿ ವಾದಕ್ಕೂ ಧ್ವನಿ ವಾದಕ್ಕೂ ವಸ್ತುತಃ ಭೇದವಿಲ್ಲ" ಎಂಬ ಮಹಿಮಭಟ್ಟನ ಆಕ್ಷೇಪಣೆಯನ್ನು ನೆನೆಯಬಹುದು.

3. ಇಲ್ಲಿ ಕಾವ್ಯಕ್ಕೆ ಕೊಟ್ಟಿರುವ 'ಶ್ರೇಷ್ಠ' ಎಂಬ ವಿಶೇಷಣ, ಆನಂದವರ್ಧನನ 'ವಾಣೀಷು ಮಹಾಕವೀನಾಂ' ಎಂಬುದಕ್ಕೆ ಸಂವಾದಿಯಾಗಿದೆ.

who know the essence of poetry."[4] ಯಾರಿಗೂ ಕಾವ್ಯ ಅರ್ಥವಾಗದಿದ್ದರೆ, ಅದರಲ್ಲಿರುವುದು ಧ್ವನಿಯಲ್ಲ, ಯಾವುದೋ ದೋಷ ಎಂದು ತಿಳಿಯಬೇಕಷ್ಟೆ.

ಧ್ವನಿಗೆ ಸಂಬಂಧಿಸಿದಂತೆ ಒಂದು ಮೂಲಭೂತವಾದ ಪ್ರಶ್ನೆಗೆ ಆಸ್ಪದವಿದೆ. ಧ್ವನಿ ವಾಚ್ಯಾರ್ಥದಿಂದ ಬೇರೆ ಎಂದಮೇಲೆ, ಅದು ಅತೀತದಿಂದ ಅವತರಿಸಿದ್ದೆ? ಕಾವ್ಯವೊಂದು ಅಲೌಕಿಕ ಪದಾರ್ಥವೆಂಬ ನಿಲುವಿಗೆ ಧ್ವನಿಯು ವಿಶಿಷ್ಟ ಸ್ವರೂಪ ಎಡೆಮಾಡಿಕೊಡುತ್ತದೆಯೆ? 'ಇಲ್ಲ'ವೆಂಬುದೇ ದೃಢವಾದ ಉತ್ತರ. ವಾಚ್ಯವಿಲ್ಲದೆ ವ್ಯಂಗ್ಯವಿಲ್ಲ ಎಂಬ ಮಹತ್ವದ ಸಂಗತಿಯನ್ನು ನಾವು ಮರೆಯಕೂಡದು. ವಾಚ್ಯಾರ್ಥ ದೀವಿಗೆಯಿದ್ದಂತೆ ಎಂದು ಆನಂದವರ್ಧನನೇ ಹೇಳಿದ್ದಾನೆ: ಅದರ ಬೆಳಕಿನಲ್ಲಿ ಧ್ವನಿಯನ್ನು ಕಂಡುಕೊಳ್ಳಬೇಕು. ಕಾವ್ಯದಲ್ಲಿ ವಾಚ್ಯಾರ್ಥ ಕೆಲವೊಮ್ಮೆ ನಿರಾಕೃತವಾಗುವುದುಂಟು. ಆದರೆ ಅದು ಮೊದಲು ಪ್ರವರ್ತಿಸಿ, ಅನಂತರ ನಿವೃತ್ತವಾಗುತ್ತದೆ. ಅದು ಇಲ್ಲವೇ ಇಲ್ಲ ಎಂದು ಎಲ್ಲಿಯೂ ಹೇಳುವಂತಿಲ್ಲ.

ವಾಚ್ಯಾರ್ಥ ಮುಖ್ಯವಾಗಿ ಲೌಕಿಕ ಸ್ತರಕ್ಕೆ ಸೇರಿದುದಾದ್ದರಿಂದ, ಧ್ವನಿ ಅದರ ಸಂಪರ್ಕವನ್ನು ಕಡಿದುಕೊಳ್ಳುವುದು ಸಾಧ್ಯವಿಲ್ಲವಾದ್ದರಿಂದ, ಕಾವ್ಯ-ಅಥವಾ, ಒಳ್ಳೆಯ ಕಾವ್ಯ-"ಮಣ್ಣಿನ ವಾಸನೆ'ಯನ್ನು ಎಂದೂ ಕಳೆದುಕೊಳ್ಳುವುದಿಲ್ಲ: ಭವದೂರವೂ ಭವವಿರುದ್ಧವೂ ಆಗುವುದಿಲ್ಲ. ಕುವೆಂಪು ಸೂಚಿಸುವಂತೆ, ಕಾವ್ಯದ ಸ್ವರೂಪವನ್ನು 'ಅಲೌಕಿಕ' ಎಂದು ಕರೆಯುವುದಕ್ಕಿಂತ 'ಲೋಕೋತ್ತರ' ಎಂದು ಕರೆಯುವುದೇ ಉಚಿತ. ಲೋಕವನ್ನು ಕಾವ್ಯ ತಿರಸ್ಕರಿಸುವುದಿಲ್ಲ; ಅದನ್ನು ಕಟ್ಟಿಕೊಂಡೇ ಮೆಟ್ಟಿನಿಲ್ಲುತ್ತದೆ. ಈ ಸತ್ಯವನ್ನು ಧ್ವನಿಸ್ವರೂಪವೂ ಸಾರುತ್ತದೆ. ವ್ಯಂಗ್ಯಾರ್ಥ ವಾಚ್ಯಾರ್ಥಕ್ಕಿಂತ ಭಿನ್ನ ಎನ್ನುವುದಕ್ಕಿಂತ, ಅದನ್ನು ಮೀರಿದ್ದು ಎಂದಿಟ್ಟುಕೊಳ್ಳುವುದೇ ಸೂಕ್ತ. ಆನಂದವರ್ಧನನ ಕಾರಿಕೆಯಲ್ಲಿ ಬಂದಿರುವ 'ಅತಿರಿಕ್ತ' ಎಂಬ ವಿಶೇಷಣ ಇದಕ್ಕೆ ಪೋಷಕವಾಗಿದೆ. ಹೀಗಾಗಿ, ಧ್ವನಿಪೂರ್ಣವಾದ ಕಾವ್ಯದ ನೆಲೆ 'ಲೋಕಾತಿಕ್ರಾಂತ'ವಾದದ್ದು ಹೊರತು ಲೋಕವಿಮುಖವಾದುದಲ್ಲ.

ಕಾವ್ಯದಲ್ಲಿ ವಾಚ್ಯಾರ್ಥ ಕೂಡ ಎಷ್ಟು ಮುಖ್ಯ ಎಂಬುದನ್ನು ಪಾಶ್ಚಾತ್ಯ ವಿಮರ್ಶಕರೂ ಸ್ಪಷ್ಟಪಡಿಸಿದ್ದಾರೆ: "ಮೂಲಾರ್ಥ, ಅತೀತಾರ್ಥ ಎರಡರಿಂದಲೂ ಕವಿ ತನ್ನ ರಚನೆಯನ್ನು ಸಿದ್ಧಗೊಳಿಸುತ್ತಾನೆ"—ಲೋವ್ಸ್: "ಕಾವ್ಯದ ಧ್ವನಿಪೂರ್ಣತೆ, ಒಂದು ಉಜ್ವಲ ಸ್ಪಷ್ಟಕೇಂದ್ರದ ಸುತ್ತ ಇರುವ ಪ್ರಭಾವಳಿ; ಆ ಪ್ರಭಾವಳಿಯೊಂದನ್ನೆ ಪಡೆಯುವುದು ಸಾಧ್ಯವಿಲ್ಲ"-ಟಿ. ಎಸ್. ಇಲಿಯಟ್: "ವ್ಯಕ್ತ ಮತ್ತು ಧ್ವನಿತ ಭಾವನೆ ಬೆಸುಗೆ...ಕವಿಯ ಆಲೋಚನೆಗಳು. ಲೋಕದ ತರ್ಕಹದಿಯಿಂದ ಸಿದ್ಧವಾದ ರಾಗಗಳ ರೆಕ್ಕೆಗಳನ್ನೇರಿ ನಮ್ಮ ಬಳಿಗೆ ಬರುತ್ತವೆ" - ಮ್ಯೂಯರ್.

4. S. K. De, History of Sanskrit Poetics (1960) P. 174

ಕಾವ್ಯವನ್ನು ಆಗಾಗ ಸಂಗೀತಕ್ಕೆ, ಮಂತ್ರಕ್ಕೆ ಹೋಲಿಸುವುದುಂಟೆಂಬುದನ್ನು ಈ ಪ್ರಸ್ತಾವದಲ್ಲಿ ಗಮನಿಸಬಹುದು. "ಎಲ್ಲ ಕಲೆಯೂ ಸಂಗೀತದ ಅವಸ್ಥೆಯತ್ತ ತುಡಿಯುತ್ತದೆ" ಎಂಬುದು ವಾಲ್ಟರ್ ಪೇಟರ್‌ನ ಉಕ್ತಿ. ಯಾವುದೋ ಅರ್ಥದಲ್ಲಿ ಇದು ದಿಟ. ಆದರೂ, ಸಂಗೀತ ಮಂತ್ರಗಳಿಗೂ ಕಾವ್ಯಕ್ಕೂ ಸಾಕಷ್ಟು ಅಂತರ ವಿರುವುದನ್ನು ಮರೆಯುವಂತಿಲ್ಲ. ಸಂಗೀತದಲ್ಲಿ ವಾಚ್ಯಾರ್ಥವೇ ಇಲ್ಲದೆ ನೇರವಾಗಿ ಧ್ವನಿ ಹೊರಡುತ್ತದೆ ; ಮಂತ್ರದಲ್ಲಿ ವಾಚ್ಯಾರ್ಥಕ್ಕೆ ಏನೇನೂ ಪ್ರಾಶಸ್ತ್ಯವಿಲ್ಲ. ಕಾವ್ಯದಲ್ಲಾದರೋ ವಾಚ್ಯಾರ್ಥ ಎಂದೂ ತನ್ನ ಬೆಲೆ ಕಳೆದುಕೊಳ್ಳುವುದಿಲ್ಲ. ಮಂತ್ರ, ಸಂಗೀತ, ಕಾವ್ಯಗಳು ಪರಿಣಾಮದಲ್ಲಿ ಒಂದೇ ಆಗಬಹುದಾದರೂ, ಮೂಲತಃ ಅವು ಬೇರೆ ಬೇರೆ ಎಂದು ಹೇಳಬೇಕು. ಅಂತೂ ಕಾವ್ಯ ಸಂಪೂರ್ಣವಾಗಿ, ಸಂಗೀತ ಮಂತ್ರಗಳಂತೆ, ಅಲೌಕಿಕ ಅಥವಾ ಆಧ್ಯಾತ್ಮಿಕವಲ್ಲ ಎಂಬುದು ಸ್ಪಷ್ಟ. ಆದ್ದರಿಂದಲೇ ಬೇಂದ್ರೆ ಅದನ್ನು "ಓಂಕಾರದ ಶಂಖನಾದಕಿಂತ ಕಿಂಚಿದೂನ" ಎಂದು ಬಣ್ಣಿಸಿದ್ದು.

ಕವಿ ಹೇಳಬೇಕಾದ್ದನ್ನು ವಾಚ್ಯವಾಗಿಯೇ ಹೇಳಬಹುದಲ್ಲ, ಧ್ವನಿಯನ್ನು ಆಶ್ರಯಿಸುತ್ತಾನೇಕೆ ? ಉತ್ತರವಿಷ್ಟೆ : ತಾನು ಹೇಳಬೇಕಾದುದನ್ನು ಕವಿ ವಾಚ್ಯಾರ್ಥದ ಮೂಲಕ ಹೇಳುವುದು ಸಾಧ್ಯವೇ ಇಲ್ಲ. ಅನುಭವದ ಸಂವಹನ ಧ್ವನಿಯ ಮೂಲಕವೇ ಸಾಧ್ಯ. ಧ್ವನಿಯ ಅವಲಂಬನಕ್ಕೆ ಈ ಅನಿವಾರ್ಯತೆ ಒಂದು ಕಾರಣವಾದರೆ, ಅದರ ಆಹ್ಲಾದಕತ್ವ ಇನ್ನೊಂದು ಕಾರಣ. ಯಾವುದೇ ವಿಷಯ ವನ್ನು 'ಹೇಳು'ವುದರಿಂದ ಸಂತೋಷವಾಗುವುದಿಲ್ಲ, ಧ್ವನಿಸುವುದರಿಂದ ಆಗುತ್ತದೆ. ಮಲಾರ್ಮೆಯ ಈ ಮಾತು ಗಮನಾರ್ಹ: "To name an object is largely to destroy poetic enjoyment, which comes from gradual divination. The idea is to suggest the object.''

ಧ್ವನಿಸಂಬಂಧವಾದ ಸಂತೋಷ ದ್ವಿವಿಧವಾದುದೆಂದು ತೋರುತ್ತದೆ. ಧ್ವನಿ ಯನ್ನು ಗ್ರಹಿಸಿದಾಗ, ಆಸ್ವಾದಿಸಿದಾಗ ಸಹಜವಾಗಿಯೇ ಸಹೃದಯನಿಗೆ ಆನಂದ ಉಂಟಾಗುತ್ತದೆ. ಜೊತೆಗೆ, ಕವಿ ಕೇವಲ ಸೂಚಿಸಿದ್ದನ್ನು ನಾನು ಅರ್ಥಮಾಡಿಕೊಂಡೆ ನೆಂಬ ಹೆಮ್ಮೆ ಆ ಆನಂದವನ್ನು ಇಮ್ಮಡಿಸುತ್ತದೆ. ಕವಿ ಎಲ್ಲವನ್ನೂ ವಾಚ್ಯವಾಗಿ ಸದೆ, ವಾಚಕನಿಗೂ ಕೆಲಸವನ್ನುಳಿಸಬೇಕಾದುದು ಅತ್ಯಗತ್ಯ. ಕಾವ್ಯಾನುಭವ ಏಕಮುಖ ಸಂಚಾರವಲ್ಲ. ಆದರೆ, ತಾನು ಧ್ವನಿಸತಕ್ಕದ್ದು ಓದುಗನಿಗೆ ಅರ್ಥವಾಗು ತ್ತದೊ ಇಲ್ಲವೊ ಎಂಬ ಸಂಶಯದಿಂದ ಕವಿ ಕೆಲವೊಮ್ಮೆ ತಾನೇ ವಿವರಣೆಕೊಡುವು ದುಂಟು. ಇದರಿಂದ ಧ್ವನಿಗೇಡು, ವಾಚಕನ ಸಂತೋಷಕ್ಕೆ ಕುಂದು. ಕವಿ ಸಹೃದಯನನ್ನು ನಂಬಬೇಕು : ಅವನ 'ಅಹಂಕಾರ'ಕ್ಕೆ ಭಂಗತರದೆ ಅದನ್ನು ಪೋಷಿಸಬೇಕು. ಅರ್ಥಸಂಗೋಪನ ಅತ್ಯುತ್ತಮ ವಿಧಾನ.

# ವ್ಯಂಗ್ಯ – ಧ್ವನಿ

ಅ. ರಾ. ಮಿತ್ರ

ವ್ಯವಹಾರದಲ್ಲಿ ಮತ್ತು ಸಾಹಿತ್ಯದಲ್ಲಿ ವ್ಯಂಗ್ಯ, ಧ್ವನಿಗಳಿಗೆ ಸಮಾನ ಪ್ರಾಶಸ್ತ್ಯ ಇದೆ. ಬಿಟ್ಟ ಬಾಣದಂತೆ ಶಬ್ದಗಳು ಇಲ್ಲಿ ನೇರವಾಗಿ ಪ್ರಯಾಣ ಮಾಡುವುದಿಲ್ಲ. ತುಂಬ ಬಳಸುದಾರಿಯನ್ನು ಹಿಡಿದು ಅಡ್ಡಾದಿಡ್ಡಿಯಾಗಿ ತಿರುಗುತ್ತವೆ. ನುರಿತ ಶಿಕಾರಿಯಂತೆ ಪ್ರಾಣಿಯನ್ನು ನೇರವಾಗಿ ಬೆನ್ನಟ್ಟಿ ಅಥವಾ ಮುಖಾಮುಖಿಯಾದ ಯುದ್ಧವನ್ನು ಬಯಸಿ ಸಾಗುವುದಿಲ್ಲ. ಹಳೆಯ ಬೇಟೆಗಾರನಂತೆ ಹೊಂಚು ಹಾಕಿ ಅಥವಾ ಬೇಟೆನಾಯಿ, ಬಲೆ, ಬೆಡ್ಡಾದ ಹಳ್ಳ, ಬೆಂಕಿ, ಮಿಕಗಳನ್ನು ಬಳಸಿಕೊಂಡು ಬೇಕಾದ ಪ್ರಾಣಿಯನ್ನು ಹಿಡಿದು ಹಾಕುವ ಕ್ರಮ ಇಲ್ಲಿ ಸ್ವಾಗತಾರ್ಹವಾಗುತ್ತದೆ. ಹೊಗೆ ಪರದೆಯ (smoke screen) ತಂತ್ರ, ಗೆರಿಲ್ಲಾ ಕಾರ್ಯಾಚರಣೆ, ಮುಸುಕಿನ ಯುದ್ಧ ಇವುಗಳಲ್ಲಿ ತರಪೇತಿ ಪಡೆದ ಶಬ್ದಗಳು ದಾಳಿ ನಡೆಸುವ ಪರಿ ಇಲ್ಲಿಯದು. ಆಡುಮಾತಿನಲ್ಲಿ ಈ ವ್ಯಂಗ್ಯ ತನ್ನೆಲ್ಲ ಅಸಲು ಬಣ್ಣಗಳೊಂದಿಗೆ ಪ್ರಯೋಗಗೊಳ್ಳುತ್ತದೆ. ಉದಾಹರಣೆಗೆ ಸತ್ತ ಎಂಬ ಒಂದು ಮಾತನ್ನೇ ತೆಗೆದುಕೊಳ್ಳಿ. ಪತ್ರಿಕೆಗಳಲ್ಲಿ ಅಥವಾ ಬರವಣಿಗೆಯಲ್ಲಿ ನಿಧನಹೊಂದಿದ, ದೈವಾಧೀನನಾದ, ತೀರಿಕೊಂಡ ಮೊದಲಾದ ಸೂಕ್ಷ್ಮಶಬ್ದಗಳು ಬಳಕೆಹೊಂದಿದರೆ ಆಡುಮಾತಿನಲ್ಲಿ ಗೋತಾಹೊಡೆದ. ನೆಗೆದುಬಿದ್ದು ನೆಲ್ಲಿಕಾಯಾದ, ನಿಗರಿಕೊಂಡ, ಕಂತೆ ಒಗೆದ, ಪಾಪ–ಹೋಗಿಬಿಟ್ಟ ಮೊದಲಾದ ಎಲ್ಲ ಬಗೆಯ ಪ್ರತಿಕ್ರಿಯಾತ್ಮಕವಾದ ಹೇಳಿಕೆಗಳು ಕಿವಿಗೆ ಬೀಳುತ್ತವೆ. ಸೂಕ್ತ ರೂಪದಲ್ಲಿ ಶಬ್ದಕ್ಕೆ ತಕ್ಕ ಭಾವಾಭಿನಯ, ಶಬ್ದದ ತಿರುಚುವಿಕೆ, ಉಬ್ಬಿಕೆಗಳೆಲ್ಲ ವಿಚಿತ್ರಸ್ವರದಲ್ಲಿ ಮೇಳವಿಸಿ ಮಾತಿಗೆ ಬರಪಕ್ಕಿಲ್ಲದ ವೈವಿಧ್ಯ ಲಭಿಸುತ್ತದೆ. ವಿವಿಧ ಸಂದರ್ಭಗಳಲ್ಲಿ ಬಳಸುವ ವಕ್ಕರಿಸು, ಲಗಾಯಿಸು, ಕುಕ್ಕರಬಡಿ, ನೆಕ್ಕು ಚಾರಲು ಬುದ್ಧಿ, ಮೈನೀರಿಳಿಸು, ಬೆಂಡೆತ್ತು, ಹುಟ್ಟಲಿಲ್ಲ ಅನ್ನಿಸು, ಮೊದಲಾದ ಅಸಂಖ್ಯ ಶಬ್ದರೂಪಗಳು ವ್ಯಂಗ್ಯ ಸರಕಿನ ನಿಸ್ಸೀಮ ವಲಯವನ್ನು ತೋರುತ್ತವೆ. ಸಾಹಿತ್ಯದಲ್ಲಿ ಬಳಕೆಯಾಗುವ ವ್ಯಂಗ್ಯದ ಸರಕು ಇಲ್ಲಿಂದಲೇ ಎತ್ತಿಕೊಂಡವು ಎನ್ನಬಹುದು.

ಸಾಹಿತ್ಯದಲ್ಲಿ ಈ ಬಗೆಯ ಸಪ್ತವ್ಯಂಗ್ಯಗಳನ್ನು ಎಂಪ್‌ಸನ್ ಗುರುತಿಸಿದ್ದಾನೆ. ವ್ಯಂಗ್ಯಕ್ಕೆ ಈ ಎಲ್ಲ ಅರ್ಥದಛಾಯೆಗಳಿಗೆ ಹರಡಿಕೊಳ್ಳುವ ಶಕ್ತಿಯಿದೆ. ಆಡಿದ ಮಾತು ವಿಭಿನ್ನ ಪರಿಸರಗಳಲ್ಲಿ ಹೇಗೆ ಹಿಗ್ಗಲಿಸುತ್ತವೆಂಬುದನ್ನು ಗುರುತಿಸಲು ಸಾಕಷ್ಟು ಅಧ್ಯಯನಗಳು ನಡೆದಿವೆ. ಒಂದು ಮಾತಿನ ಪದರದಲ್ಲಿ ಆರಂಭವಾಗಿ ಇನ್ನೊಂದು ಕ್ಷೇತ್ರವನ್ನು ಅಥವಾ ಹಲವಾರು ಕ್ಷೇತ್ರಗಳನ್ನು ತಲಪುವ, 'ಪ್ರಯಾಣ ಪ್ರಜ್ಞೆ' ಸದಾ ಜಾಗೃತವಾಗಿರುವ ವ್ಯಂಗ್ಯದ ಕೆಲವು ನೆಲೆಗಳನ್ನು ಮಾತ್ರ ಇಲ್ಲಿ ಗುರುತಿಸಲಾಗಿದೆ.

ಸಾಹಿತ್ಯದಲ್ಲಿ ಈ ವ್ಯಂಗ್ಯ ಹೇಗೆ ಕಾರ್ಯ ನಿರ್ವಹಿಸುತ್ತದೆಂಬುದನ್ನು ಕೆಲವು ಉದಾಹರಣೆಗಳಿಂದ ಗಮನಿಸಬಹುದು.

ಅಂತು ದಿವ್ಯಮುನಿಗಳ್ಗೇಗೆಯ್ದೊಡಂ ತೀರದೇ !– ಪಂಪ
ನಿನ್ನ ಕೈದುವನೆಂತುಂ ಬಿಸುಟಿರ್ದ ಲೆಕ್ಕಮೇ – ಪಂಪ
ಈಸುದಿನ ವೀ ಮಕ್ಕಳೊಡನಾಯಾಸವಿದು ಸಾಮಾನ್ಯವೇ ?
– ಕುಮಾರ ವ್ಯಾಸ

ಅಂತು ದಿವ್ಯಮುನಿಗಳ್ಗೇಗೆಯ್ದೊಡಂ ತೀರದೇ ! ಈ ಮಾತು ಪಂಪನದು. ಪರಾಶರ ಮುನಿಯ ವರ್ತನೆಯ ಬಗೆಗೆ ಪಂಪನ ಧೋರಣೆ ಏನೆಂಬುದು ಇಲ್ಲಿ ವ್ಯಕ್ತವಾಗುತ್ತದೆ. ಪರಾಶರರು ಮತ್ಸ್ಯಗಂಧಿ ದೋಣಿ ನಡೆಸುತ್ತಿದ್ದ ಬಳಿಗೆ ಬಂದು ಸಾವಿರ ಜನರ ಭಾರವನ್ನು ತಾವೊಬ್ಬರೇ ಪ್ರದರ್ಶಿಸಿ ದೋಣಿಯಲ್ಲಿ ಕುಳಿತು ಆಕೆಯ ಸಂಗ ಬೆಳೆಸಿ ವ್ಯಾಸನನ್ನು ಮಗನಾಗಿ ಪಡೆದ ಸಂದರ್ಭ ಇದು. ವೈದಿಕ ಧರ್ಮದಿಂದ ಸಿಡಿದು ನಿಂತು ಜೈನಧರ್ಮವನ್ನು ತಮ್ಮವರು ಆಶ್ರಯಿಸಿದ ನೆನಪು ಪಂಪನಲ್ಲಿ ಹಸಿರಾಗಿದೆ. ಪರಾಶರರಂತಹ ಶುದ್ಧ ವೈದಿಕರ ಲೈಂಗಿಕ ಪ್ರವೃತ್ತಿ ಪಂಪನಿಗೆ ಆಡಿಕೊಳ್ಳಲು ಒಂದು ಪ್ರಕಟವೇದಿಕೆಯಾಗಬೇಕು. ಆದರೆ ತನ್ನ ದೊರೆಯಾದ ಅರಿಕೇಸರಿಯನ್ನಾಗಲಿ ಆಸ್ಥಾನದ ಬಹುಮಟ್ಟಿನ ವೈದಿಕ ವಿದ್ವಾಂಸರನ್ನಾಗಲಿ ಘರ್ಷಿಸುವ ಕೆಲಸಕ್ಕೆ ಕೈಹಾಕಲು ಪಂಪನಿಗೆ ಇಷ್ಟವಿಲ್ಲ. ಆದರೆ ಇಂಥ ಸಂದರ್ಭವೊಂದರಲ್ಲಿ ಸಿಡಿದೇಳುವ ತನ್ನ ಮನೋಧರ್ಮವನ್ನು ಹತ್ತಿಕ್ಕುವ ಕೆಲಸವನ್ನು ಆತ ಮಾಡಲಾರ. ಆದ್ದರಿಂದ ವ್ಯಂಗ್ಯದ ಮರೆಹೊಕ್ಕು ತನ್ನ ಅನಿಸಿಕೆಗೆ ಒಂದು ರೂಪ ಕೊಟ್ಟಿದ್ದಾನೆ. ಪರಾಶರರು 'ದಿವ್ಯ' ಮುನಿಗಳು. ದಿವ್ಯ ಚೇತನಗಳೆನಿಸಿಕೊಂಡವರ ನಡವಳಿಕೆ ಪ್ರಶ್ನಾತೀತವಾಗಿ ಉಳಿಯಬೇಕೇ ಎಂಬ ಪ್ರಶ್ನೆ ; ಅಂಥವರ ಬಗೆಗೆ ಏನು ಹೇಳಲೂ ಸಾಧ್ಯವಾಗುವುದಿಲ್ಲವಲ್ಲ ಎಂಬ ಕೊರಗು; ಅಂಥವರು ಹೀಗೂ ಮಾಡಿಯಾರೇ ಎಂಬ ಬೆರಗು– ಈ ಎಲ್ಲ ಭಾವಗಳು ಇಲ್ಲಿ ವ್ಯಂಗ್ಯದ ಹಿನ್ನೆಲೆಯುಲ್ಲಿ ಸೂಚಿತವಾಗಿವೆ. ಜೈನ ಮುನಿಗಳ ಕಾಮದಮನ ಸಾಮರ್ಥ್ಯವನ್ನೂ ಕಠೋರ ವ್ರತ ನಿಷ್ಠೆಯನ್ನೂ ಬಲ್ಲ ಪಂಪನಿಗೆ ಈ ವೈದಿಕ ಋಷಿಗಳ ಶೀಲಪತ್ರವನ್ನು ಕೊಡುವಾಗ ಕೈ ಸ್ವಲ್ಪ ಹಿಡಿ

ದಂತಾಗಿದ್ದರೆ ಆಶ್ಚರ್ಯವೇನೂ ಇಲ್ಲ. ಆದ್ದರಿಂದ ಈ ವ್ಯಂಗ್ಯೋಕ್ತಿ ಪಂಪನ ದೃಷ್ಟಿಕೋನವನ್ನು ಸ್ಪಷ್ಟಪಡಿಸುತ್ತದೆ. ಅಲ್ಲದೆ ವೈದಿಕ ಮುನಿಗಳಲ್ಲಿ ಅನೇಕರ ಸಂಗತಿಗಳನ್ನು ಬಲ್ಲ ಪಂಪ ಅಂತು ದಿವ್ಯ 'ಮುನಿಗಳ್ಗೆ' ಎಂಬ ಬಹುವಚನವನ್ನು ಸೇರಿಸಿ ಈ ಸಮಸ್ಯೆಗೆ ಒಂದು ಸಾರ್ವತ್ರಿಕ ರೂಪವನ್ನು ಕೊಡುವ ಪ್ರಯತ್ನದಲ್ಲೂ ಯಶಸ್ವಿಯಾಗಿದ್ದಾನೆ.

ಎರಡನೆಯ ನಿದರ್ಶನವೂ ಪಂಪನದೇ. 'ನಿನ್ನ ಕೈದುವನೆಂತುಂ ಬಿಸುಟಿರ್ದ ಲೆಕ್ಕಮೇ !' ಅಂದರೆ 'ನಿನ್ನಲ್ಲಿ ಆಯುಧ ಇದ್ದರೂ ಇಲ್ಲದ ಲೆಕ್ಕವೇ !' ಎಂದರ್ಥ. ಪಂಪಭಾರತದ ಹನ್ನೆರಡನೇ ಆಶ್ವಾಸದಲ್ಲಿ ಕರ್ಣನಿಗೆ ಪಟ್ಟಕಟ್ಟಲು ಕೌರವ ತೀರ್ಮಾನಿಸಿದ ಸಂದರ್ಭದಲ್ಲಿ ಅಶ್ವತ್ಥಾಮ ಸಿಟ್ಟಿನಿಂದ ಕರ್ಣನನ್ನು ಜರೆಯುತ್ತಾನೆ. ಅವರಿಬ್ಬರಲ್ಲಿ ವಾದ ವಿವಾದ ಉಗ್ರವಾಗುತ್ತದೆ. ಕೊನೆಗೆ ಅಶ್ವತ್ಥಾಮನು ಕರ್ಣ ಬದುಕಿರುವವರೆಗೆ ತಾನು ಆಯುಧವನ್ನೇ ಹಿಡಿಯುವುದಿಲ್ಲ ಎಂದು ಆರ್ಭಟಿಸುತ್ತಾನೆ. ಅದರಿಂದ ವಿಚಲಿತನಾಗದ ಕರ್ಣನು "ಅಯ್ಯಾ ಅಶ್ವತ್ಥಾಮಾ ನಿನ್ನ ಕೈಯಲ್ಲಿ ಕತ್ತಿ (ಬಿಲ್ಲು) ಇದ್ದರೂ ಅದು ಬಿಸಾಡಿದ ಲೆಕ್ಕಕ್ಕೇ ಸೇರುತ್ತದೆ. ಅದರಿಂದ ಬಿಸಾಡುವ ಪ್ರಶ್ನೆಯೇ ಬರುವುದಿಲ್ಲ ಎಂದು ಹಂಗಿಸುತ್ತಾನೆ. ಕೌರವರ ಪಕ್ಷದಲ್ಲಿ ನಡೆಯುವ ಒಳಜಗಳದಲ್ಲೆಲ್ಲ ಜಾತಿಯ ಪ್ರಶ್ನೆಯನ್ನು ಆಳವಾಗಿ ಕೆದಕುವ ಪ್ರಕ್ರಿಯೆ ಕಂಡುಬರುತ್ತದೆ. ಕರ್ಣನಿಗೆ ತನ್ನ ಶೌರ್ಯಕ್ಕೆ ತಕ್ಕ ಸ್ಥಾನಮಾನ ಸಿಕ್ಕುತ್ತಿಲ್ಲ ಎನಿಸಿದಾಗ ತನ್ನ ವಿರೋಧಿಗಳನ್ನು ಜಾತಿಯ ಗಾಳಕ್ಕೇ ಸಿಕ್ಕಿಸಿ ಅವರ ಮೇಲೆ ಹರಿಹಾಯುವಷ್ಟು ಸಿಟ್ಟುಬರುತ್ತದೆ. ಭೀಷ್ಮರ ಆಯ್ಕೆಯನ್ನು ತಾನು ಪ್ರತಿಭಟಿಸಿದಂತೆಯೇ ತಾತ್ತ್ವಿಕವಾಗಿ ಅಶ್ವತ್ಥಾಮನು ತನ್ನ ಆಯ್ಕೆಯನ್ನು ಪ್ರತಿಭಟಿಸುತ್ತಿದ್ದಾನೆ ಎನ್ನಿಸುವುದಿಲ್ಲ ಕರ್ಣನಿಗೆ. ಮಾತೆತ್ತಿದರೆ ಜಾತಿಯ ಪ್ರಶ್ನೆ ಎತ್ತಿ ಮುಖಭಂಗ ಮಾಡಬಯಸುವವರ ಮೇಲೆ ತಾನೇಕೆ ಮೊದಲ ದಾಳಿ ನಡೆಸಬಾರದು ಎಂದುಕೊಳ್ಳುತ್ತಾನೆ. ಬ್ರಾಹ್ಮಣ್ಯದಲ್ಲಿ ಸಾಮಾನ್ಯವಾದ ಯುದ್ಧಪರಾಙ್ಮುಖ ದೋಷವನ್ನು ಆಸ್ಫೋಟಿಸುವುದಷ್ಟೇ ಕರ್ಣನ ಗುರಿ. ಆದ್ದರಿಂದ ಮೊದಲಿಗೇ ಅಶ್ವತ್ಥಾಮನನ್ನು ಒಳ್ಳೆ (ಕೇರೇ ಹಾವು) ಗೆ ಹೋಲಿಸಿ ವಿಷ 'ಒಳ್ಳೆ'ಗೆ ಇದ್ದರೂ ಅದು ಒಳ್ಳೆಯೆನಿಸಿಕೊಳ್ಳುತ್ತದೆಯೇ ಹೊರತು ಕಾಳಿಯನಾಗನಾಗುವುದಿಲ್ಲ ಎಂದು ಹಂಗಿಸಿದ್ದಾನೆ. ಅಶ್ವತ್ಥಾಮನಿಗೆ ಸಿಟ್ಟು ಬರಲೆಂದೇ ಒಡ್ಡಿದ ಈ ಬಗೆಯ ಬಲೆಗೆ ಅಶ್ವತ್ಥಾಮ ಸಹಜವಾಗಿ ಸಿಕ್ಕಿಬೀಳುತ್ತಾನೆ. ಕರ್ಣನಿರುವವರೆಗೂ ತಾನು ಆಯುಧವನ್ನೇ ಮುಟ್ಟುವುದಿಲ್ಲ ಎಂದು ಪ್ರತಿಜ್ಞೆ ಮಾಡುವ ತನಕ ಹೋಗುತ್ತಾನೆ. ಶಸ್ತ್ರಸನ್ಯಾಸದ ಪ್ರಸ್ತಾವ ಬಂದದ್ದು ಕರ್ಣನಿಗೆ ಇನ್ನಷ್ಟು ಉತ್ತೇಜಕವೆನಿಸುತ್ತದೆ. "ಆಯ್ಯಾ ಅಶ್ವತ್ಥಾಮ, ಕೈಯಲ್ಲಿ ಶಸ್ತ್ರ ಹಿಡಿಯುವುದಿಲ್ಲ ಎನ್ನುತ್ತೀಯಾ ? (ಬ್ರಾಹ್ಮಣನಾದ) ನಿನ್ನ ಕೈಯಲ್ಲಿ ಶಸ್ತ್ರ ಇದ್ದರೂ ಅದು (ಯುದ್ಧದಲ್ಲಿ ಪ್ರಯೋಜನಕಾರಿಯಲ್ಲದ್ದರಿಂದ) ಬಿಸಾಡಿದ ಲೆಕ್ಕಕ್ಕೇ ಸೇರುತ್ತದೆ. (ಆದ್ದರಿಂದ ನೀನು ಔಪಚಾರಿಕವಾಗಿ ಬಿಸಾಡುವ ಅಗತ್ಯವಿಲ್ಲ)." ಸ್ವತಃ ಯುದ್ಧಸತ್ವವನ್ನು

ಕಳೆದುಕೊಂಡ ಬ್ರಾಹ್ಮಣರು ಅದನ್ನು ಮುಚ್ಚಿಕೊಳ್ಳಲು ನಾಟಕವಾಡುತ್ತಾರೆ ಎಂಬುದು ಕರ್ಣನ ಗ್ರಹಿಕೆಯಾಗಿತ್ತು. ನೆನೆಸಿಕೊಂಡ ಕೂಡಲೇ ಶಸ್ತ್ರವನ್ನು ಕೆಳಗೆ ಬಿಸಾಡುವ ಮತ್ತು ಪಟಪಟನೆ ಕಣ್ಣೀರು ಸುರಿಸುವ ವಿದ್ಯೆಯನ್ನು ಅಶ್ವತ್ಥಾಮನು ತನ್ನಪ್ಪ ದ್ರೋಣನಿಂದ ಕಲಿತಿರಬೇಕು ಎಂದು ಕರ್ಣನು ಹಂಗಿಸುತ್ತಾನೆ. ಇಲ್ಲಿ ವ್ಯಂಗ್ಯ ತಟಕ್ಕನೆ ಇಮ್ಮಡಿ ಪಡೆದುಕೊಂಡು ಅಶ್ವತ್ಥಾಮನಿಂದ ದ್ರೋಣರಿಗೂ ತಗುಲಿಕೊಳ್ಳು ತ್ತದೆ. ಜಾತಿಯ ಪ್ರಶ್ನೆ ಎತ್ತಿ ದ್ರೋಣರು ತನ್ನನ್ನು ಹಂಗಿಸಿದ್ದ ನೆನಪು ಕರ್ಣನನ್ನು ಇನ್ನೂ ಬಾಧಿಸುತ್ತಲೇ ಇದೆ. ಅಷ್ಟೊಂದು ಮಾತಾಡಿದ ದ್ರೋಣರು ಕೊನೆಗೆ ಆಯುಧಗಳನ್ನು ಬಿಸಾಡಿ ಯುದ್ಧಭೂಮಿಯನ್ನೇ ಯೋಗಭೂಮಿಕೆಯನ್ನಾಗಿಮಾಡಿ ಕೊಂಡು ತಪಸ್ಸಿಗೆ ನಿಂತರು. ಕರ್ಣನ ಸಹಜ ಕ್ಷಾತ್ರಕ್ಕೆ ಇಂಥವೆಲ್ಲ ಕಪಟವೆನ್ನಿಸಿ ಕಂಡಕೂಡಲೇ ಸಿಡಿಯುವ ಮನಸ್ಸಾಗುತ್ತದೆ.

ಇನ್ನೊಂದು ಪ್ರಕರಣ ಕುಮಾರವ್ಯಾಸನದು. 'ಈ ಸುದಿನವೀ ಮಕ್ಕಳೊಡ ನಾಯಾಸವಿದು ಸಾಮಾನ್ಯವೇ ?' ಈ ಮಾತು ಆದಿಪರ್ವದಲ್ಲಿ ಬರುತ್ತದೆ. ಕುರು ವಂಶಕ್ಕೇ ಹಿರಿಯರಾದ ಭೀಷ್ಮ ಈ ಮಾತನ್ನು ಮೆಚ್ಚಿಕೆಯ ರೂಪದಲ್ಲಿ ದ್ರೋಣಾ ಚಾರ್ಯರಿಗೆ ಹೇಳುತ್ತಾರೆ. ದ್ರೋಣರು ಪಾಂಡವ-ಕೌರವರಿಗೆ ಶಸ್ತ್ರದ ಜಾಣ್ಮೆಯನ್ನು ಕಲಿಸಿ ತನ್ನ ಶಸ್ತ್ರಾಭ್ಯಾಸದ ಜವಾಬ್ದಾರಿ ಮುಗಿಯಿತೆಂದು ಹೇಳಲು ಬರುತ್ತಾರೆ. ಪಾಂಡವ-ಕೌರವರು ಶಸ್ತ್ರಾಸ್ತ್ರದಲ್ಲಿ ಆನೆ ಕುದುರೆಗಳನ್ನು ಬಳಸಿ ಹೋರಾಡುವುದರಲ್ಲಿ, ಹದಿನಾಲ್ಕು ವಿದ್ಯೆಗಳಲ್ಲಿ ಗಣಿತ, ಗಾರುಡ, ಭರತಕಲೆ ಮೊದಲಾದವುಗಳಲ್ಲಿ ಪರಿಣತ ರಾಗಿದ್ದಾರೆಂದು ಹೇಳುತ್ತಾ, ಬೇಕಾದರೆ ಪರೀಕ್ಷಿಸಬಹುದು ಎನ್ನುತ್ತಾರೆ. ಆದರೆ ಭೀಷ್ಮರಿಗೆ ದ್ರೋಣರು ಹೇಳಿದ ಮಾತೇ ಕಿವಿಗೆ ಬೀಳುತ್ತಿಲ್ಲ. ಮಕ್ಕಳ ಸಾಮರ್ಥ್ಯದ ಬಗೆಗೆ ಅವರು ಏನೂ ಕೇಳುವುದಿಲ್ಲ. ತುಂಬ ಅನುಭವಿಗಳಾದ ಭೀಷ್ಮರಿಗೆ ದ್ರೋಣರ ಶಸ್ತ್ರಕೌಶಲದ ಬಗೆಗಾಗಲಿ ಅವರು ಪಾಠ ಕಲಿಸುವ ಬಗೆಗಾಗಲಿ ಅನುಮಾನವಿಲ್ಲ. ತುಂಬ ತುಂಟರಾದ ಕಲಹಲಂಪಟರಾದ ನೂರೈದು ಜನ ಮಕ್ಕಳೊಂದಿಗೆ ದ್ರೋಣರು ಏಗಿರುವ ರೀತಿಯಿಂದಲೇ ಭೀಷ್ಮರಿಗೆ ಸಂತೋಷವಾಗಿದೆ. ಈ ಮಕ್ಕಳೊಡನೆ ದ್ರೋಣರು ಪಟ್ಟಿರುವ ಆಯಾಸ ಸಾಮಾನ್ಯವಾದದ್ದಲ್ಲ ಎಂದು ಅವರಿಗೆ ಅನ್ನಿಸಿತಂತೆ. ಬರಿಯ ಪಾಠ ಕಲಿಸುವ ಅದ್ಭುತ ಪಾಂಡಿತ್ಯ ಮಾತ್ರ ಇದ್ದರೆ ಸಾಲದು. ಶಿಕ್ಷಕನಾದವ ನಿಗೆ, ಬಗೆ ಬಗೆಯ ಅಭಿರುಚಿಗಳುಳ್ಳ ವಿದ್ಯಾರ್ಥಿಗಳ ಸಮಸ್ಯೆಗಳನ್ನು ಅರ್ಥಮಾಡಿ ಕೊಂಡು ಅವರನ್ನೆಲ್ಲ ಹದ್ದುಬಸ್ತಿನಲ್ಲಿಡುವುದು ಬಹು ಮುಖ್ಯವಾದ ಕರ್ತವ್ಯ. ಈ ಮೊದಲ ಹೆಜ್ಜೆಯನ್ನು ಸರಿಯಾಗಿಟ್ಟರೆ ಮುಂದಿನ ದಾರಿ ಅಷ್ಟೇನೂ ಕಷ್ಟವಲ್ಲ. ಅದ ರಲ್ಲಿ ದ್ರೋಣರು ಜಯಶಾಲಿಯಾಗಿರುವುದನ್ನು ಭೀಷ್ಮರು ಗುರುತಿಸುತ್ತಾರೆ. ಹೀಗೆ ಕುಮಾರವ್ಯಾಸನು ವಿನೋದದ ಕವಚವನ್ನು ಹೊತ್ತ ವಾಕ್ಯವೊಂದನ್ನು ಭೀಷ್ಮರ ಬಾಯಿಂದ ಹೇಳಿಸಿ ಗಂಭೀರವಾದ, ಮೂಲಭೂತವಾದ ಸಮಸ್ಯೆಯ ಆಳಕ್ಕೆ ಇಳಿಯುವ ಸಾಮರ್ಥ್ಯ ತೋರಿದ್ದಾನೆ.

ಅರಿಸ್ಟಾಟಲ್ ಈ ವ್ಯಂಗ್ಯದ ಧ್ವನಿಯನ್ನು ವಿವರಿಸಲು ಎರಡು ಉದಾಹರಣೆಗಳನ್ನು ಕೊಡುತ್ತಾನೆ. ಫಿಲೋಕ್ಟೆಟಸ್ ತನ್ನ ಹಳೆಯ ಗಾಯ ವ್ರಣವಾಗುತ್ತಿರುವುದನ್ನು ಕುರಿತು,

''This ulcer eats the flesh of this foot of mine', ಎನ್ನುತ್ತಾನೆ. ಅದನ್ನೆ ಯೂರಿಪಿಡಿಸ್,

''The ulcer is feasting upon my foot', ಎನ್ನುತ್ತಾನಂತೆ. ಒಂದು ಸಾಧಾರಣ ಸಂದರ್ಭ ಇಲ್ಲಿ ಉಗ್ರವಾಗಿ ವೈವಿಧ್ಯದಿಂದ ಬಳಕೆಗೊಂಡಿದೆ. ಯೂರಿಪಿಡಿಸ್ ದೃಷ್ಟಿಯಲ್ಲಿ ಹುಣ್ಣು ಭಾರಿಯ ಔತಣವನ್ನು ಬಯಸಿ ನಿಲ್ಲುವ ರಾಕ್ಷಸನಾಗಿಬಿಡುತ್ತದೆ.

ಷೇಕ್ಸ್‌ಪಿಯರನ Antony and Cleopatra ದಿಂದ ಇನ್ನೊಂದು ಉದಾಹರಣೆಯನ್ನೆತ್ತಿಕೊಳ್ಳಬಹುದು. ಯುದ್ಧದಲ್ಲಿ ಸೋಲಿನ ದವಡೆಯಲ್ಲಿದ್ದಾನೆ ಆಂಟೊನಿ. ಸೋತು ಸೆರೆಯಾಳಾಗುವುದು ಆತನಿಗಿಷ್ಟವಿಲ್ಲ. ಸಾಯುವ ಸಮಯ ಬಂತೆಂದು ಭಾವಿಸುತ್ತಾನೆ. ಅಂಥ ವಿಷಮ ಗಳಿಗೆ ಬಂದಾಗ ತನ್ನನ್ನು ಕೊಲ್ಲಬೇಕೆಂದು ಸೇವಕ ಈರೋಸ್‌ನಿಂದ ಪ್ರತಿಜ್ಞೆ ಮಾಡಿಸಿಕೊಂಡಿದ್ದಾನೆ. ಈರೋಸ್‌ನಿಗೆ ಮನವಿ ಮಾಡಿಕೊಳ್ಳುತ್ತಾನೆ,

Thou art sworn, Eros,
That when the exigent should come—which now
Is come indeed–when I should see behind me
The Inevitable prosecution of
Disgrace and horror, that, on my Command,
Then thou would'st kill me, Do't ; the time is come.
Thou strik'st not me ; 'tis caesar thou defeat'st
Put color in thy cheek.

ಆಂಟೊನಿಯ ಉಕ್ತಿ ಪ್ರತಿಭೆ ತಗ್ಗುವುದಿಲ್ಲ. ನಿರ್ವಿಕಾರವಾಗಿ ಲೀಲಾಜಾಲವಾಗಿ ಆವೇಶದ ಗೊಂದಲದಲ್ಲಿ ಗೋಜಾಗದ ರೀತಿಯಲ್ಲಿ ಮಾತಾಡುತ್ತಾನೆ. ಆದರೂ ಈರೋಸ್‌ಗೆ ಕೊಲ್ಲಲು ಕೈಬರುವುದಿಲ್ಲ. ಆಗ ಆತನೊಂದಿಗೆ ಆಂಟೊನಿ ವಾದಿಸಿ ಮನವೊಲಿಸಬೇಕಾಗಿದೆ :

.....................Eros,
Would'st thou be window'd in great Rome and see
Thy master with his pleach'd arms bending down
His corrigible neck, his face subdued
To penetrate shame, whilst the wheel'd seat

Of fortunate caesar, drawn before him, branded
His baseness and ensued ?

ಈ ಮಾತನ್ನು ಹೇಳುತ್ತಿರುವಂತೆಯೇ ಆಂಟೊನಿ ಕೈಜೋಡಿಸುತ್ತಾನೆ, ತಲೆ ಬಗ್ಗಿಸುತ್ತಾನೆ. ತನ್ನ ಮಾತಿಗೆ ತಕ್ಕ ಭಾವಾಭಿನಯದಲ್ಲೂ ತೊಡಗಿದ್ದಾನೆ ಎಂದು ಓದುಗ ಸುಲಭವಾಗಿ ಊಹಿಸಬಲ್ಲ. ಆತನ ಸಜೀವ ಅನುಕರಣ ಎರಡು ಮಾಧ್ಯಮಗಳನ್ನು ಒಂದೇ ಬಾರಿಗೆ ಪ್ರಯತ್ನಿಸುತ್ತದೆ. ಏಕೆಂದರೆ ನಿಶ್ಚಲನಾಗಿ ಮತ್ತು ಸ್ವಲ್ಪ ಮಟ್ಟಿಗೆ ನಿರೂಹಾಪರನಾಗಿ ನಿಂತವನನ್ನು ಕಾರ್ಯದಲ್ಲಿ ತೊಡಗಿಸಲು ಈ ರೀತಿಯ ಮಾತು ಅಗತ್ಯ. ಉನ್ನತಮಟ್ಟದ ಸೃಜನಶೀಲತೆ ಪರಿಣತ ಸಂವೇದನೆಗಳಿಂದ ಪಕ್ವಗೊಂಡ ಕಾವ್ಯತೆ ಇಲ್ಲಿದೆ. ಮುಂದೆ ಅನೇಕ ತಿರುವುಗಳಲ್ಲಿ ಕಥೆ ಸಾಗಿ ಕೊನೆಗೆ ಆಂಟೊನಿ ಸಾಯುತ್ತಾನೆ. ಆದರೆ ಸಾವಿನ ಚಿತ್ರ ಮೊದಲಿಗೇ ಮೂಡಿಬಂದಿದೆ. ತನ್ನ ಸಾಭಿನಯವಾದದಿಂದಲೇ ಆಂಟೊನಿ ಭಯಾನಕತೆಯನ್ನು ಮೆಟ್ಟಿನಿಂತಿದ್ದಾನೆ. ನಾವೂ ಪಾರಾಗುತ್ತೇವೆ. ರ್‍ಯಾನ್‌ಸಮ್ ಹೇಳುವಂತೆ ವ್ಯಂಗ್ಯದ ಕಲಾತ್ಮಕ ಸಾರ್ಥಕತೆಯನ್ನು ಇಲ್ಲಿ ಕಾಣಬಹುದಾಗಿದೆ.

ವ್ಯಂಗ್ಯ ಚಿತ್ರಗಳಲ್ಲಿನ ವ್ಯಂಗ್ಯ ಇನ್ನೂ ಒಂದು ಹೆಜ್ಜೆ ಮುಂದೆ ಹೋಗುತ್ತದೆ. ಬರವಣಿಗೆಯಲ್ಲಿ ಎಷ್ಟೆಂದರೂ ವಾಸ್ತವಿಕತೆಯನ್ನು ಕೊಂಡಿಯಷ್ಟಾದರೂ ಕಾಣಬಯಸುವ ಬುದ್ಧಿ ನಮಗೆ ಹೋಗುವುದಿಲ್ಲ. ಆದರೆ ವ್ಯಂಗ್ಯಚಿತ್ರ ಕಲಾಮಾಧ್ಯಮವನ್ನಾಶ್ರಯಿಸಿ ಸಾಗುತ್ತದಾದ್ದರಿಂದ ಅತಿರೇಕಗಳ ಅವಾಸ್ತವಗಳ ಆವರಣದಲ್ಲೇ ಜಿಗಿದಾಡಲು ಸಾಧ್ಯವಾಗುತ್ತದೆ. ಒಂದು ಗೆರೆ, ಒಂದು ಕೊಂಕು, ಹುಬ್ಬಿನ ವಿನ್ಯಾಸ ಇಷ್ಟರಿಂದಲೇ ವ್ಯಂಗ್ಯಚಿತ್ರಕಾರ ನಮ್ಮ ಪರಿಚಿತ ನಾಯಕರನ್ನು ರೂಪಿಸಬಲ್ಲ. ಗುಲಾಬಿ, ಕನ್ನಡಕ, ವಾಕಿಂಗ್‌ಸ್ಟಿಕ್ ಮತ್ತು ಕನ್ನಡಕ, ಆನೆಗಿವಿ—ಇವುಗಳ ಮೊದಲ ನೋಟಕ್ಕೇ ನಾವು ನೆಹರೂ, ಗಾಂಧಿ, ರಾಜಾಜಿ, ಮೊರಾರ್ಜಿ ಮೊದಲಾದ ನಾಯಕರನ್ನು ತಟಕ್ಕನೆ ಗುರುತಿಸುವುದು ಸಾಧ್ಯವಾಗುತ್ತದೆ. ಎರಡು ಹುಬ್ಬುಗಳನ್ನೂ ಒಂದೇ ನೇರರೇಖೆಯಲ್ಲಿರಿಸಿ ಚರಣಸಿಂಗರ ಚಿತ್ರ ಬಿಡಿಸಿದ್ದ ರಾಮಮೂರ್ತಿಯವರ ಕಾರ್ಟೂನ್ ಎಲ್ಲರ ಗಮನ ಸೆಳೆಯಿತು. ಪ್ರಚಲಿತ ರಾಜಕೀಯ, ಸಮಸಾಮಯಿಕ ಸಂಗತಿಗಳು, ಪ್ರಸಿದ್ಧ ಗಾದೆಗಳು, ಹಾಡಿನ ಸಾಲುಗಳು, ಘೋಷಣೆಗಳು, ಹೇಳಿಕೆಗಳು, ಬಿಸಿ ಬಿಸಿ ಸುದ್ದಿಗಳು, ಪೌರಾಣಿಕ ಹಾಗೂ ಬಿಬ್ಲಿಕಲ್ ಉಲ್ಲೇಖಗಳು ಇವೆಲ್ಲ ವಿಚಿತ್ರ ರೀತಿಯಲ್ಲಿ ಕಲಬೆರಕೆಯಾಗಿ ಒಂದು ವ್ಯಂಗ್ಯಚಿತ್ರ ಹುಟ್ಟಿಕೊಳ್ಳುತ್ತದೆ. ಚಿತ್ರದ ಬದಿಗಿನ ಬರಹದ ಹಿನ್ನೆಲೆಯಲ್ಲಿ ಚಿತ್ರಕ್ಕೆ, ಬರಹಕ್ಕೆ ಪರಸ್ಪರ ವಿಶೇಷ ಶಕ್ತಿ ಬೆಳೆಯುತ್ತ ಹೋಗುತ್ತದೆ. ನಿದರ್ಶನಕ್ಕೆ ರಾಮಮೂರ್ತಿಯವರ ಈಚಿನ ಒಂದು ಕಾರ್ಟೂನ್ ಮಿ. ಸಿಟಿಜನ್‌ನಲ್ಲಿ ಕಾಣಿಸಿಕೊಂಡದ್ದನ್ನು ಗಮನಿಸಬಹುದು. ರೋಹಿಣಿ ರಾಕೆಟ್ಟನ್ನು ಭಾರತ ಬಾಹ್ಯಾಂತರಿಕ್ಷಕ್ಕೆ ಹಾರಿಸಿ ಲೋಕ ಮನ್ನಣೆ ಪಡೆದ ದಿನಕ್ಕೆ ಸಂಬಂಧಿಸಿದ ಚಿತ್ರ ಅದು. ಆದರೆ ಆಕಾಶದ ಕಡೆ ನೋಡುವ ಉತ್ಸಾಹಕ್ಕೆ ತಣ್ಣೀರೆ

ರೆಚವೆ ಅಲ್ಲಿಯ ಪರಿಚಿತ ಪಾತ್ರದ ಮೂಲಕ ಒಂದು ವಿಚಿತ್ರ ಪ್ರಶ್ನೆ ಹಾಕುತ್ತಾರೆ ಮೂರ್ತಿ. 'ಎತ್ತರದಲ್ಲಿ ಹಾರಾಡುವ ಆ ರಾಕೆಟ್ಟಿಗೆ ನಮ್ಮ ಭಾರತದ ಬೆಲೆ ಏರಿಕೆಯ ರೇಖೆಯನ್ನುಎಲ್ಲಾದರೂ ಸಂಧಿಸಲು ಸಾಧ್ಯವಾಯಿತೆ ?' ಮೇಲುನೋಟಕ್ಕೆ ವಿಸಂಗತವೆನಿಸುವ ಎರಡು ವಸ್ತುಗಳನ್ನು ಒಂದು ವಿಚಿತ್ರ ಸಂದರ್ಭದಲ್ಲಿ ಮುಖಾಮುಖಿಯಾಗಿ ಮಾಡುವುದರ ಮೂಲಕ ವ್ಯಂಗ್ಯ ಇಲ್ಲಿ ತನ್ನ ಸಾಧ್ಯತೆಗಳನ್ನು ಪ್ರಕಟಪಡಿಸಿದೆ. ವ್ಯಂಗ್ಯ ಚಿತ್ರಕಲೆ, ಬರವಣಿಗೆಯ ಸಾಹಿತ್ಯ ಇವೆರಡು ಮಾಧ್ಯಮಗಳ ಸಂಯುಕ್ತ ಪ್ರಯತ್ನದಿಂದ ದೃಶ್ಯವತ್ತಾಗಿ ಮನಸ್ಸನ್ನು ಆವರಿಸುವ ತಂತ್ರ ಇಲ್ಲಿ ಸಾಧಿತವಾಗಿದೆ.

# ಸಾಹಿತ್ಯದಲ್ಲಿ ಸಂಪ್ರದಾಯ, ಹೊಸ ಮಾರ್ಗ ಮತ್ತು ಸಾಹಿತ್ಯ ನಿರ್ಮಿತಿ

ಗಿರಡ್ಡಿ ಗೋವಿಂದರಾಜು

ಯಾವುದೇ ಸಾಹಿತ್ಯದ ಇತಿಹಾಸದಲ್ಲಿಯೂ ಕಾಲಕಾಲಕ್ಕೆ ಬರವಣಿಗೆಯ ಸಂಪ್ರದಾಯಗಳು ಬದಲಾಗುವುದು ಒಂದು ಸಾಮಾನ್ಯ ಸಂಗತಿ. ಪ್ರತಿಯೊಂದು ಹೊಸ ಸಂಪ್ರದಾಯವೂ ತನ್ನ ಹಿಂದಿನ ಸಂಪ್ರದಾಯದಲ್ಲಿಯ ಕೆಲವೊಂದು ಗುಣಧರ್ಮಗಳ ಬಗೆಗೆ ಭಿನ್ನಾಭಿಪ್ರಾಯ ತಳೆದು, ಅದಕ್ಕೆ ಪ್ರತಿಕ್ರಿಯೆಯಾಗಿ ಪ್ರತಿಭಟನೆಯಾಗಿ ಆರಂಭವಾಗುತ್ತದೆ; ಚಳುವಳಿಯಾಗಿ ಬೆಳೆಯುತ್ತದೆ ; ಕೊನೆಗೆ ತಾನೂ ಒಂದು ಸಂಪ್ರದಾಯವಾಗಿ ಪ್ರತಿಷ್ಠಿತವಾಗುತ್ತದೆ. ಹೀಗೆ ಒಂದು ಸಂಪ್ರದಾಯ ಸ್ಥಾಪಿತವಾಗಿ ಅದರಲ್ಲಿ ಸಾಕಷ್ಟು ಪ್ರಮಾಣದ ಕೃತಿರಚನೆ ನಡೆದ ಮೇಲೆ ಅದರದೇ ಆದ ಒಂದು ಸಿದ್ಧಮಾರ್ಗ ನಿರ್ಮಾಣವಾಗುತ್ತದೆ. ಅದಕ್ಕೆ ವಿಶಿಷ್ಟವಾದ ವಸ್ತುಗಳು, ಶೈಲಿ, ಧೋರಣೆಗಳು ಹುಟ್ಟಿಕೊಳ್ಳುತ್ತವೆ. ಇಷ್ಟಾದಮೇಲೆ ವ್ಯಾಪಕವಾದ ಅನುಕರಣೆ ನಡೆದು ಸಾಹಿತ್ಯ ಜಾಡುಬಿದ್ದ ಹಾದಿಯಾಗುತ್ತದೆ. ಆ ಸಂಪ್ರದಾಯ ಹುಟ್ಟಿಕೊಳ್ಳುವಾಗ ಹೊಸದಾಗಿ ಗೋಚರಿಸಿದ್ದ ಬದುಕಿನ ಹಾಗೂ ಅಭಿವ್ಯಕ್ತಿಯ ಹೊಸ ಅವಕಾಶಗಳು ಮುಗಿದುಹೋಗಿ ಚರ್ವಿತಚರ್ವಣಕ್ಕೆ ಆರಂಭವಾಗುತ್ತದೆ. ಆಗ ಈ ಸಂಪ್ರದಾಯದ ದೌರ್ಬಲ್ಯಗಳು ಕೂಡ ಬಯಲಿಗೆ ಬೀಳುತ್ತವೆ. ಇಂಥ ದೌರ್ಬಲ್ಯಗಳ ವಿರುದ್ಧ ಮತ್ತೆ ಅಸಮಾಧಾನ, ಪ್ರತಿಭಟನೆ ಆರಂಭವಾಗಿ ಇನ್ನೊಂದು ಹೊಸ ಮಾರ್ಗದ ಅನ್ವೇಷಣೆ ಆರಂಭವಾಗುತ್ತದೆ.

ಈ ರೀತಿ ಸಾಹಿತ್ಯದಲ್ಲಿ ಹೊಸ ಸಂಪ್ರದಾಯಗಳು ಆರಂಭವಾಗುವುದು ಕೇವಲ ಫ್ಯಾಷನ್ನಿಗಾಗಿ ಅಲ್ಲ ; ನಾವೀನ್ಯತೆಯ ಸಲುವಾಗಿ ಅಲ್ಲ, ಪ್ರಯೋಗಶೀಲತೆಯ ಪರಿಣಾಮವಾಗಿಯೂ ಅಲ್ಲ. ಅದೊಂದು ಸೃಜನಶೀಲತೆಯ ಸ್ವಾಭಾವಿಕ ಆವಶ್ಯಕತೆಯಾಗಿದೆ. ಜೊತೆಗೆ ಇಂಥ ಬದಲಾವಣೆಗೆ ಸುತ್ತಲಿನ ಬದುಕಿನಲ್ಲಿ ಕಾಣಿಸಿಕೊಳ್ಳುವ ಬದಲಾವಣೆಗಳೇ ಪ್ರೇರಕ ಶಕ್ತಿಗಳಾಗಿರುತ್ತವೆ. ಬದುಕು ಹರಿಯುವ ನೀರಿನಂತೆ ನಿರಂತರವಾಗಿ ಬದಲಾಗುತ್ತಲೇ ಇರುವಂಥದು. ಅದರಲ್ಲಿಯ ಬದಲಾವಣೆಗಳು ಬೇಸಿಗೆಯ ಕಾಲದ ಶಾಂತ ಪ್ರವಾಹದಂತೆ ನಮ್ಮ ಗಮನಕ್ಕೆ ಬಾರದಷ್ಟು ನಿಧಾನವಾಗಿ

ನಡೆಯುಬಹುದು ; ಇಲ್ಲವೆ ಮಳೆಗಾಲದ ಅಬ್ಬರದ ಪ್ರಹಾದಂತೆ ಧುಮ್ಮಿಕ್ಕಿಯೂ ಬರಬಹುದು. ಆದರೆ ಈ ಬದಲಾವಣೆಗಳು ಒಳಗಿನಿಂದ ಒಳಗೇ ನಮ್ಮ ಸಂವೇದನೆಗಳನ್ನು ಪ್ರಭಾವಿಸುತ್ತವೆ. ಅಷ್ಟು ಸೂಕ್ಷ್ಮಸಂವೇದಿಗಳಲ್ಲದವರಿಗೆ ಈ ಪ್ರಭಾವಗಳು ಕೇವಲಅಸ್ಪಷ್ಟವಾಗಿ ಗೋಚರಿಸಿದರೆ, ಹೆಚ್ಚು ಸಂವೇದನಾಶೀಲರಾದವರಿಗೆ ಬೇಗನೇ ಅರ್ಥವಾಗುತ್ತದೆ. ಹೆಚ್ಚಿನ ಜನ ಸೃಜನಶೀಲರು ಈ ಬಗ್ಗೆ ಬಹಳಷ್ಟು ತಲೆ ಕೆಡಿಸಿಕೊಳ್ಳದೆ ಜನಪ್ರಿಯ ಮಾರ್ಗವನ್ನೇ ಅನುಸರಿಸುತ್ತಾರೆ. ಇನ್ನು ಕೆಲವರು ಪ್ರಚಲಿತ ಸಾಹಿತ್ಯಮಾರ್ಗದಲ್ಲೇ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡು ತಮ್ಮ ಭಿನ್ನವಾದ ಸಂವೇದನೆಗಳಿಗೆ ಅಭಿವ್ಯಕ್ತಿ ಕೊಡಲು ಯತ್ನಿಸುತ್ತಾರೆ. ಈ ಸಂವೇದನೆಯ ಭಿನ್ನತೆಯನ್ನು ಹೆಚ್ಚು ತೀವ್ರವಾಗಿಅನುಭವಿಸಬಲ್ಲ ಕೆಲವೇ ಕೆಲವರು ಮಾತ್ರ ತಮ್ಮ ಬದವಾದ ಸಂವೇದನೆಯ ಸೂಕ್ಷ್ಮತೆಗಳಿಗೆ ಧ್ವನಿ ಕೊಡಬಯಸಿ, ಆದರೆ ಪ್ರಚಲಿತ ಸಾಹಿತ್ಯ ಮಾರ್ಗದಲ್ಲಿ ಅದಕ್ಕೆ ಅವಕಾಶ ಸಿಗದೇ ತೊಳಲಾಡುತ್ತಾರೆ. ತಮ್ಮ ವಿಶಿಷ್ಟ ಸಂವೇದನೆಗೆ ತಕ್ಕದಾದ ಅಭಿವ್ಯಕ್ತಿಯ ಮಾರ್ಗವನ್ನೂ ಶೈಲಿಯನ್ನೂ ಹೊಸದಾಗಿ ರೂಪಿಸಿಕೊಳ್ಳುವಲ್ಲಿ ಯಶಸ್ವಿಯಾಗುವವರು ಎಲ್ಲೋ ಅಪರೂಪಕ್ಕೆ ಒಬ್ಬರು ಮಾತ್ರ ಇರುತ್ತಾರೆ. ಇವರ ಪ್ರಯತ್ನಗಳಿಂದಾಗಿ, ಸಾಹಿತ್ಯದಲ್ಲಿ ಮತ್ತೆ ಬದುಕಿನ ಹಾಗೂ ಅಭಿವ್ಯಕ್ತಿಯ ಹೊಸ ಅವಕಾಶಗಳು ಹುಟ್ಟಿಕೊಳ್ಳುತ್ತವೆ. ಅವರಂತೆಯೇ ಸ್ಪಷ್ಟವಾಗಿಯೋ, ಅಸ್ಪಷ್ಟವಾಗಿಯೋ ಅನುಭವಿಸುತ್ತಿದ್ದವರು ಈ ಹೊಸ ಅವಕಾಶಗಳ ಬೆಳಕಿನಲ್ಲಿ ತಮ್ಮ ಅನುಭವಗಳನ್ನು ಶೋಧಿಸತೊಡಗುತ್ತಾರೆ ಹೀಗೆ ಪ್ರತಿಯೊಂದು ಹೊಸ ಸಾಹಿತ್ಯ ಮಾರ್ಗವೂ, ಬದುಕಿನ ಹಾಗೂ ಅಭಿವ್ಯಕ್ತಿಯ ಹೊಸ ಸಾಧ್ಯತೆಗಳ ಶೋಧನೆಯೇ ಆಗಿದೆಯೆನ್ನಬಹುದು.

ಇಂಗ್ಲಿಷ್ ಸಾಹಿತ್ಯದಲ್ಲಿ ರೋಮ್ಯಾಂಟಿಕ್ ಕಾವ್ಯದ ಆರಂಭವನ್ನು ಈ ಹಿನ್ನೆಲೆಯಲ್ಲಿ ನೋಡಿದಾಗ ಈ ಮಾತು ಹೆಚ್ಚು ಸ್ಪಷ್ಟವಾಗುತ್ತದೆ. ಇಂಗ್ಲಿಷಿನಲ್ಲಿ ರೋಮ್ಯಾಂಟಿಕ್ ಯುಗ ೧೭೯೮ರಲ್ಲಿ ಪ್ರಕಟವಾದ ವರ್ಡ್ಸ್‌ವರ್ಥ ಹಾಗೂ ಕೋಲ್‌ರಿಜ್‌ರ The Lyrical Ballads ದಿಂದ ಆರಂಭವಾಯಿತು ಎಂಬುದು ಎಲ್ಲರೂ ಒಪ್ಪುವ ಮಾತು. ರೋಮ್ಯಾಂಟಿಕ್ ಕಾವ್ಯ ಆರಂಭವಾದುದು ಹದಿನೆಂಟನೆಯ ಶತಮಾನದಲ್ಲಿ ಪ್ರತಿಷ್ಠಿತವಾಗಿದ್ದ ಕಾವ್ಯಸಂಪ್ರದಾಯಕ್ಕೆ ಪ್ರತಿಕ್ರಿಯೆಯಾಗಿ. ಹದಿನೆಂಟನೆಯ ಶತಮಾನವನ್ನು ನವಅಭಿಜಾತಯುಗ (Neo-classical)ವೆಂದು ಕರೆದಿದ್ದಾರಾದರೂ ಪ್ರಾಚೀನ ಗ್ರೀಕ್ ಅಭಿಜಾತ ಸಾಹಿತ್ಯದ ರೀತಿಗೂ ಇದರ ರೀತಿಗೂ ಬಹಳ ಅಂತರವಿದೆ. ಈ ಕಾವ್ಯ ಕಲ್ಪಕತೆ, ತನ್ಮಯತೆ, ಭಾವನಾಮಯತೆ, ಪ್ರಾಕೃತಿಕತೆಗಳಿಗೆ ವಿರುದ್ಧವಾದುದು. ಇದನ್ನು ಆಳುವ ತತ್ವಗಳು ತರ್ಕ, ಬುದ್ಧಿ, ವಾಸ್ತವತೆ, ಶಿಷ್ಟತೆ, ನಗರ ಸಂಸ್ಕೃತಿ, ಸಂಯಮ ಮುಂತಾದುವು. ಅಂತೆಯೇ ಕಲ್ಪಕತೆಯ ಎತ್ತರಗಳನ್ನು, ತನ್ಮಯತೆಯ ರಸಾವೇಶವನ್ನು ನಾವಿಲ್ಲಿ ಕಾಣಲಾರೆವು. ಎಲ್ಲವನ್ನೂ ತರ್ಕದ ಒರೆಗಲ್ಲಿಗೆ ತಿಕ್ಕಿ ಕಾವ್ಯ ತನ್ನ ಅಗಮ್ಯತೆಯನ್ನು ಕಳೆದುಕೊಂಡಿತು.

ಪ್ರಾಚೀನ ಗ್ರೀಕ್ ಅಭಿಜಾತ ಕಲೆಯ ಭವ್ಯತೆಯೂ ಇದಕ್ಕೆ ದೊರೆಯಲಿಲ್ಲ. ಬದಲಾಗಿ ವಿಡಂಬನೆ, ವ್ಯಂಗ್ಯ, ಲೇವಡಿಗಳೇ ಸಾಹಿತ್ಯದ ಮುಖ್ಯ ಧೋರಣೆಗಳಾದವು. ಇದರ ಅಭಿರುಚಿ ನಾಗರಿಕ ಶಿಷ್ಟತೆಗೆ ಸೀಮಿತವಾಯಿತು. ಪೋಪ್, ಜಾನ್ಸನ್ ಮೊದಲಾದವರು ಈ ಮಾರ್ಗದ ಮುಖ್ಯ ಲೇಖಕರಾದರು. ಈ ಬಗೆಯ ಧೋರಣೆಯ ಬಗ್ಗೆ ಅಸಮಾಧಾನಪಟ್ಟುಕೊಂಡವರೂ ಅನೇಕರಿದ್ದರು. ಅಂಥವರಲ್ಲಿ ಗ್ರೇ, ಕಾಲಿನ್ಸ್‌ಮೊದಲಾದವರು ಪ್ರಚಲಿತ ಕಾವ್ಯಮಾರ್ಗದಲ್ಲಿಯೇ ತಮ್ಮ ಪ್ರಕೃತಿ ಪ್ರೇಮ, ವಿಸ್ಮಯ, ಮುಗ್ಧತೆ ಮೊದಲಾದ ಭಿನ್ನ ಧೋರಣೆಗಳನ್ನು ಪ್ರಕಟಿಸಲು ಯತ್ನಿಸಿದರು. ಕೌಪರ್, ಯಂಗ್ ಮುಂತಾದವರ ಕಾವ್ಯದಲ್ಲೂ ಮುಂದೆ ಬರಲಿದ್ದ ರೊಮ್ಯಾಂಟಿಕ್ ಯುಗದ ಕೆಲವು ಧೋರಣೆಗಳು ಸೌಮ್ಯರೂಪದಲ್ಲಿ ಕಾಣಿಸಿಕೊಂಡವು, ಹೀಗೆ ಈ ಕವಿಗಳಲ್ಲಿ ಸಂವೇದನೆಯ ಬದಲಾವಣೆಯ ಪ್ರಕ್ರಿಯೆ ಆಗಲೇ ಆರಂಭವಾಗಿದ್ದುದನ್ನು ಗುರುತಿಸಬಹುದಾಗಿದೆ. ಆದರೆ ಈ ಕವಿಗಳಿಗೆ ಇದನ್ನೇ ಹೊಸದೊಂದು ಕಾವ್ಯಮಾರ್ಗದ ಅಸ್ತಿವಾರವನ್ನಾಗಿ ಮಾಡಿಕೊಳ್ಳುವ ಶಕ್ತಿ ಇರಲಿಲ್ಲ. ಕಾಲವೂ ಅದಕ್ಕೆ ಪಕ್ವವಾಗಿರಲಿಲ್ಲ. ಮುಂದೆ ಫ್ರಾನ್ಸಿನ ರಾಜ್ಯಕ್ರಾಂತಿ ಎತ್ತಿ ಹಿಡಿದ ಸ್ವಾತಂತ್ರ್ಯ, ಸಮಾನತೆಗಳು, ರೂಸೋನ ಪ್ರಕೃತಿಗೆ ಮರಳಿ ಹೋಗಬೇಕೆನ್ನುವ ಕರೆ ಹೊಸ ಜೀವನಾದರ್ಶಗಳನ್ನು ಸ್ಪಷ್ಟವಾಗಿ ರೂಪಿಸಿಕೊಟ್ಟವು. ಮನುಷ್ಯಚೇತನದ ಅದಮ್ಯ ಸ್ವಾತಂತ್ರ್ಯದ ಬಯಕೆ, ಮನುಷ್ಯಶಕ್ತಿಯ ಅಪ್ರಕಟಿತ ಅನಂತ ಸಾಧ್ಯತೆಗಳು, ಕಲ್ಪಕತೆಯ ಅನಿರ್ಬಂಧಿತ ಸ್ವಾತಂತ್ರ್ಯ, ಕನಸುಗಾರಿಕೆ, ಬದುಕಿನ ಹೊಸ ಶೋಧಗಳ ಬಗೆಗೆ ವಿಸ್ಮಯ ಮುಂತಾದ ನಿಲುವುಗಳು ಹೊಸದಾಗಿ ಹುಟ್ಟಿಕೊಂಡವು, ಈ ಹೊಸ ಧೋರಣೆಗಳಿಗೆ ತಕ್ಕುದಾದ ಹೊಸ ಅಭಿವ್ಯಕ್ತಿಮಾರ್ಗವೊಂದನ್ನು ರೂಪಿಸಿಕೊಳ್ಳುವುದು ಅನಿವಾರ್ಯವಾಯಿತು. ವರ್ಡ್ಸ್‌ವರ್ಥ್ ಮತ್ತು ಕೋಲ್‌ರಿಜ್ ತಮ್ಮ ಲಿರಿಕಲ್ ಬ್ಯಾಲಡ್ಸ್‌ನ ಕವಿತೆಗಳಲ್ಲಿ ಈ ಹೊಸ ಮಾರ್ಗದ ಹೊಳಹು ಹಾಕಿಕೊಟ್ಟರು. ಅವರನಂತರ ಬಂದ ಕೀಟ್ಸ್, ಬೈರನ್, ಷೆಲ್ಲಿ, ಮುಂತಾದ ಕವಿಗಳು ಈ ಮಾರ್ಗವನ್ನು ತಮ್ಮ ಸ್ವಂತದ ಆವಶ್ಯಕತೆಗಳಿಗೆ ಒಗ್ಗಿಸಿಕೊಂಡು ಮುಂದುವರಿದರು. ರೊಮ್ಯಾಂಟಿಕ್ ಸಂಪ್ರದಾಯ ಸ್ಥಿರಗೊಂಡಿತು. ಅನಂತರ ಅದಕ್ಕೂ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಹಲವಾರು ಪ್ರತಿಭಟನೆಗಳು ಹುಟ್ಟಿಕೊಂಡವು. ನಮ್ಮ ಸಾಹಿತ್ಯದಲ್ಲಿಯೂ ಕೂಡ ಕಳೆದ ಶತಮಾನದ ಕೊನೆ ಹಾಗೂ ಈ ಶತಮಾನದ ಆರಂಭದಲ್ಲಿ ಇಂಥದೇ ಸ್ಥಿತಿ ಇತ್ತು.

ಹೀಗೆ ಯಾವುದೇ ಸಾಹಿತ್ಯಮಾರ್ಗದಲ್ಲೂ ಜೀವನದೃಷ್ಟಿ ಹಾಗೂ ಅಭಿವ್ಯಕ್ತಿ ಮಾರ್ಗಗಳು ಪರಸ್ಪರಾವಲಂಬಿಯಾದ ಎರಡು ಮಹತ್ವದ ಸಂಗತಿಗಳಾಗಿರುತ್ತವೆ. ಜೀವನದೃಷ್ಟಿ ಬದಲಾದರೆ ಅಭಿವ್ಯಕ್ತಿ ಮಾರ್ಗವೂ ಕೂಡ ಅನಿವಾರ್ಯವಾಗಿ ಬದಲಾಗಬೇಕಾಗುತ್ತದೆ. ಇದಕ್ಕೆ ಮುಖ್ಯವಾದ ಕಾರಣವೇನೆಂದರೆ ಪ್ರತಿಯೊಂದು ಸಾಹಿತ್ಯ ಸಂಪ್ರದಾಯವೂ ತನ್ನ ವಿಶಿಷ್ಟ ಜೀವನದೃಷ್ಟಿಯನ್ನು ಪ್ರಭಾವಪೂರ್ಣವಾಗಿ ಪ್ರಕಟಿಸ

ಬಲ್ಲ ಅಭಿವ್ಯಕ್ತಿಮಾರ್ಗವೊಂದನ್ನು ಹುಡುಕಿಕೊಳ್ಳುತ್ತದೆ. ಆ ಜೀವನದೃಷ್ಟಿಯು ಒಳಗೇ ಹುಟ್ಟಿಕೊಳ್ಳುವ ಸೂಕ್ಷ್ಮಭೇದಗಳನ್ನೂ, ಸಂಕೀರ್ಣತೆಯನ್ನೂ ಒಳಗೊಳ್ಳುವಂತೆ ಆ ಅಭಿವ್ಯಕ್ತಿಯ ಮಾರ್ಗ ಸಮರ್ಥ ಲೇಖಕರ ಕೈಯಲ್ಲಿ ಪಳಗುತ್ತ, ಹಿಗ್ಗುತ್ತ ಸಾಕಷ್ಟು ವಿಕಸನಶೀಲತೆಯನ್ನು ಗಳಿಸಿಕೊಳ್ಳುತ್ತದೆ. ಆದರೆ ಅದೇ ಕಾಲಕ್ಕೆ ಅದಕ್ಕೆ ತೀರ ವಿರುದ್ಧವಾದ ವಸ್ತು ಧೋರಣೆಗಳಿಗೆ ಒಗ್ಗದ ಸಂಕೋಚಗಳನ್ನು ಕೂಡ ಬೆಳೆಸಿಕೊಳ್ಳುತ್ತದೆ. ಅಂತೆಯೇ ಹೊಸ ಸಂವೇದನೆಯು ಹಳೆಯ ಕಾವ್ಯಮಾರ್ಗದಲ್ಲಿ ತನ್ನೆಲ್ಲ ಸೂಕ್ಷ್ಮತೆ, ತೀವ್ರತೆ. ಸಂಕೀರ್ಣತೆಗಳೊಂದಿಗೆ ಅಭಿವ್ಯಕ್ತಿ ಪಡೆಯಲು ಸಾಧ್ಯವಾಗುವುದಿಲ್ಲ. ಇದೇ ಕಾರಣಕ್ಕಾಗಿಯೇ ನಿಜವಾಗಿಯೂ ಹೊಸದಾದ ಜೀವನದೃಷ್ಟಿ ಹೊಸ ಅಭಿವ್ಯಕ್ತಿ ಮಾರ್ಗವನ್ನು ಹುಡುಕಿಕೊಳ್ಳುವುದು ಅನಿವಾರ್ಯವಾಗುತ್ತದೆ. ಅಭಿವ್ಯಕ್ತಿ ಮಾರ್ಗದ ಹೊಸತನ ಹೊಸ ಸಾಹಿತ್ಯರೂಪಗಳಲ್ಲಿ, ಆಡುಮಾತಿಗೆ ಹೆಚ್ಚು ಸಮೀಪವಾದ ನುಡಿಗಟ್ಟಿನಲ್ಲಿ, ಹೊಸಲಯಗಳಲ್ಲಿ, ಹೊಸ ಪ್ರತಿಕ್ರಿಯೆಗಳಲ್ಲಿ, ಹೊಸ ತಂತ್ರದ ಪ್ರಯೋಗಶೀಲತೆಯಲ್ಲಿ ಕಾಣಿಸಿಕೊಳ್ಳಬಹುದು. ನವ್ಯ ಕಾವ್ಯ ನವೋದಯ ಕಾವ್ಯಕ್ಕಿಂತ ತೀರಾ ಭಿನ್ನವಾದ ಪ್ರತಿಮಾಸಂಯೋಜನೆ, ಮುಕ್ತಛಂದ, ಆಡುಮಾತಿನ ಲಯ, ಆಧುನಿಕ ಪಾರಿಭಾಷಿಕ ಶಬ್ದಗಳ ಬಳಕೆ, ಅನ್ಯಕೃತಿಗಳಿಂದ ಉದ್ಧರಣ, ಮಾಂಟಾಜ್ ತಂತ್ರ ಮುಂತಾದುವುಗಳನ್ನು ಬಳಸಿಕೊಂಡು ಹೊಸದೊಂದು ಮಾರ್ಗವೊಂದನ್ನು ನಿರ್ಮಿಸಿಕೊಂಡುದನ್ನು ಇಲ್ಲಿ ನೆನೆಪಿಸಿಕೊಳ್ಳಬಹುದು. ಜೀವನದೃಷ್ಟಿ ಮತ್ತು ಸಾಹಿತ್ಯಮಾರ್ಗಗಳ ನಡುವೆ ಹೀಗೆ ಒಂದು ಅನ್ಯೋನ್ಯವಾದ ಸೃಜನಶೀಲ ಸಂಬಂಧವೇ ಏರ್ಪಟ್ಟಿದೆ. ಈ ಸಂಬಂಧ ಎಷ್ಟರಮಟ್ಟಿಗೆ ಇದೆಯೆಂದರೆ ಅನೇಕ ಸಲ ಸಾಹಿತ್ಯದಲ್ಲಿಯ ಸಂಪ್ರದಾಯಗಳನ್ನು ಅವುಗಳಿಗೆ ಸಂಬಂಧಿಸಿದ ಅಭಿವ್ಯಕ್ತಿಮಾರ್ಗಗಳ ಮೂಲಕವೇ ಗುರುತಿಸುವ ಪರಿಪಾಠವೂ ಬೆಳೆದಿದೆ. ನಮ್ಮ ಸಾಹಿತ್ಯದಲ್ಲಿ ಚಂಪೂ ಕಾವ್ಯ ವೀರ ಹಾಗೂ ಪುರಾಣ ಕಾವ್ಯಗಳ ಸಂಪ್ರದಾಯಕ್ಕೆ, ವಚನ, ರಗಳೆ, ಷಟ್ಪದಿಗಳು ಭಕ್ತಿಕಾವ್ಯದ ಸಂಪ್ರದಾಯಕ್ಕೆ ಸಂವಾದಿಯಾಗಿ ನಿಲ್ಲುತ್ತವೆ. ಇಂಥ ಸಂಬಂಧದಿಂದಾಗಿಯೇ ಅನೇಕ ಸಲ ಒಂದು ಸಾಹಿತ್ಯಸಂಪ್ರದಾಯದ ಬದಲಾವಣೆ ಎಂದರೆ ಅದರ ಅಭಿವ್ಯಕ್ತಿಮಾರ್ಗದ ಬದಲಾವಣೆ ಎಂಬ ಅಭಿಪ್ರಾಯವೂ ಬೆಳೆದಿದೆ.

ಈ ಮಾತು ಇನ್ನೊಂದು ಕುತೂಹಲಕರವಾದ ಪ್ರಶ್ನೆಯ ಕಡೆಗೆ ಬೆರಳು ತೋರಿಸುತ್ತದೆ. ಜೀವನದೃಷ್ಟಿ ಹಾಗೂ ಅಭಿವ್ಯಕ್ತಿಮಾರ್ಗಗಳು ಹೀಗೆ ಅನ್ಯೋನ್ಯವಾಗಿರುವುದಾದರೆ ಒಂದು ಬದಲಾದರೆ ಇನ್ನೊಂದು ಬದಲಾಗಬೇಕು. ಆದರೆ ಸಾಹಿತ್ಯದಲ್ಲಿ ಇಂಥ ಮಾತುಗಳನ್ನು ವೈಜ್ಞಾನಿಕ ತೂಕದಿಂದ ಹೇಳುವುದು ಕಷ್ಟ. ಪ್ರತಿಭಾವಂತ ಲೇಖಕ ತನ್ನ ಪ್ರತಿಭೆಯ ಮೂಲಕ ತಕ್ಕ ಹೊಂದಾಣಿಕೆಗಳನ್ನು ಯೋಜಿಸಿಕೊಂಡು ಇಂಥ ಮಾತುಗಳ ಬಗೆಗೆ ಮತ್ತೊಮ್ಮೆ ಯೋಚಿಸುವಂತೆ ಮಾಡಬಲ್ಲ. ಮುದ್ದಣನಂಥ ಲೇಖಕ ಹಳಗನ್ನಡದ ಭಾಷೆಯಲ್ಲೂ ಮುದ್ದಣ–ಮನೋರಮೆಯರ ಪ್ರಸಂಗಗಳ ಹೊಸಗನ್ನಡದ ಆಡುಮಾತಿನ ಲಯಗಳನ್ನು ಸಾಧಿಸಿದ

ಉದಾಹರಣೆ ಇದೆ. ಹೀಗೆಯೇ ಸಿದ್ಧಮಾರ್ಗದಲ್ಲಿಯೇ ಸೂಕ್ತ ಬದಲಾವಣೆಗಳ ಮೂಲಕ ಹೊಸ ಸಂವೇದನೆಯ ಅಭಿವ್ಯಕ್ತಿಗೆ ಅವಕಾಶ ಕಲ್ಪಿಸಿಕೊಳ್ಳಬಾರದೆಂದಿಲ್ಲ. ನವೋದಯ ಕಾಲದಲ್ಲಿ ಬಂದ ಪ್ರಗತಿಶೀಲ ಕಾವ್ಯ ನವೋದಯದ ಛಂದೋರೂಪಗಳಲ್ಲೇ ಭಿನ್ನವಾದ ರೆಟರಿಕ್ಕನ್ನು ಬಳಸಿಕೊಂಡು ಆವೇಶ, ರೊಚ್ಚುಗಳನ್ನು ಪ್ರಕಟಿಸಿತು. ಅದೇ ಬಂಡಾಯಸಾಹಿತ್ಯದ ಹೆಸರಿನ ಇಂದಿನ ನವಪ್ರಗತಿಶೀಲ ಕಾವ್ಯ ಮುಕ್ತಛಂದದ ಮೂಲಕವೂ ಅದೇ ಕೆಲಸ ಮಾಡುತ್ತಿದೆ. ಇಂಥ ಸಂದರ್ಭಗಳಲ್ಲೆಲ್ಲ ಸೂಕ್ಷ್ಮಹೊಂದಾಣಿಕೆಯ ಪ್ರಶ್ನೆ ಬಹಳ ಮಹತ್ವದ್ದಾಗುತ್ತದೆ.

ಹಾಗೆಯೇ, ಜೀವನದೃಷ್ಟಿ ಬದಲಾಗದೆಯೂ, ಹೊಸ ಅಭಿವ್ಯಕ್ತಿಮಾರ್ಗವನ್ನು ಬಳಸಿಕೊಳ್ಳಲು ಸಾಧ್ಯವೇ—ಎಂಬ ಪ್ರಶ್ನೆಯೂ ಈ ನಡುವೆ ಬಂದಿದೆ. ವಿ. ಕೃ. ಗೋಕಾಕರು ನವ್ಯತೆ ಒಂದು ತಂತ್ರ ; ಅದನ್ನು ಯಾರು ಬೇಕಾದರೂ ಬಳಸಬಹುದು ; ಯಾವ ದರ್ಶನಕ್ಕಾದರೂ ಬಳಸಬಹುದು ಎಂಬ ಮಾತೊಂದನ್ನು ಹೇಳಿದ್ದಾರೆ. ಒಬ್ಬ ಕವಿ ನವೋದಯದ ಜೀವನದೃಷ್ಟಿಯನ್ನೂ ನವ್ಯದ ತಂತ್ರವನ್ನೂ ಕೂಡಿಯೇ ಬಳಸಿಕೊಂಡು ಹೊಸ ಸಮನ್ವಯವನ್ನು ಸಾಧಿಸಬಹುದೆಂದು ಅವರ ಅಭಿಪ್ರಾಯ. ಅಂಥ ಕೆಲವು ಜನ 'ಸಮನ್ವಯ' ಕವಿಗಳೂ ಕನ್ನಡದಲ್ಲಿ ಬಂದಿದ್ದಾರೆ. ಆದರೆ ಈ ಸಮನ್ವಯ ಗೋಕಾಕರು ಹೇಳುವಷ್ಟು ಸರಳವಾಗಿಲ್ಲ. ತಂತ್ರವು ಜೀವನಾನುಭವದ ಶೋಧನೆ ಅನಾವರಣಗಳ ಸಾಧನ ಎಂಬ ಮಾತನ್ನು ಒಪ್ಪಿಕೊಂಡರೆ ಯಾವ ಅನುಭವಕ್ಕಾದರೂ ಯಾವ ತಂತ್ರವಾದರೂ ನಡೆಯುತ್ತದೆಂದು ಹೇಳುವಂತಿಲ್ಲ. ನವ್ಯದ ತಂತ್ರ ಅದಕ್ಕೆ ವಿಶಿಷ್ಟವಾದ ಜೀವನಾನುಭವಗಳಿಗಾಗಿ ರೂಪಿಸಿದ್ದಾದ್ದರಿಂದ ಅದು ತೀರಾ ಬೇರೆ ಬಗೆಯ ಅನುಭವಗಳಿಗೆ ಒಗ್ಗುವುದು ಕಷ್ಟ. ಹಾಗೆ ಉದ್ದೇಶಪೂರ್ವಕವಾಗಿ ಬಳಸಿಕೊಂಡಾಗ ಅದು ತನ್ನೊಂದಿಗೆ ತನ್ನ ವಿಶಿಷ್ಟ ವಸ್ತು, ಧೋರಣೆಗಳನ್ನು ಜೊತೆಗೇ ತರುತ್ತದೆ. ಹೊಸ ಅಭಿವ್ಯಕ್ತಿಮಾರ್ಗವನ್ನು ರೂಪಿಸುವುದೆಂದರೆ ಕೇವಲ ಹೊಸ ಆಕಾರ, ಲಯ, ಶೈಲಿ, ತಂತ್ರಗಳನ್ನು ರೂಪಿಸುವುದಲ್ಲ ; ಆ ಆಕಾರ, ಲಯ, ಶೈಲಿ, ತಂತ್ರಗಳಿಗೆ ಯೋಗ್ಯವಾದ ಸಾಮಗ್ರಿಯನ್ನು ರೂಪಿಸಿಕೊಳ್ಳುವುದೂ ಅದರ ಅನಿವಾರ್ಯ ಭಾಗವೇ ಆಗಿರುತ್ತದೆ. ಸಮನ್ವಯ ಕವಿಗಳಲ್ಲಿ ಒಬ್ಬರಾದ ಚೆನ್ನವೀರ ಕಣವಿಯವರು ನವೋದಯ ಹಾಗೂ ನವ್ಯ ಮಾರ್ಗಗಳೆರಡರಲ್ಲೂ ಬರೆದಿರುವ ಶಿಶುಗೀತೆಗಳ ಅಭ್ಯಾಸ ಈ ಮಾತನ್ನು ಇನ್ನಷ್ಟು ಸ್ಪಷ್ಟಪಡಿಸಬಲ್ಲದು.[1] ಒಟ್ಟಿನಲ್ಲಿ ಒಂದು ಸಂಪ್ರದಾಯದ ಅಭಿವ್ಯಕ್ತಿ ಮಾರ್ಗವನ್ನು ಇನ್ನೊಂದು ಸಂಪ್ರದಾಯಕ್ಕೆ ಇದ್ದಕ್ಕಿದ್ದಂತೆ ಆಮದು ಮಾಡಿಕೊಳ್ಳುವುದು ಕಷ್ಟಸಾಧ್ಯ. ಹಾಗೆ ಮಾಡಿಕೊಂಡಾಗ ಅಭಿವ್ಯಕ್ತಿ

---

1. ಕಣವಿಯವರ ಕಾವ್ಯಮಾರ್ಗ ಮತ್ತು ಅವರ ಶಿಶುಗೀತೆಗಳು' (ಚೆಂಬೆಳಕು" ಸಂ : ಡಾ॥ ಜಿ. ಎಸ್. ಕಾಪಸೆ, ೧೯೮೦, ಪುಟ ೧೮೪-೨೦೨) ಎಂಬ ಲೇಖನದಲ್ಲಿ ಈ ಬಗ್ಗೆ ವಿವರವಾಗಿ ಚರ್ಚಿಸಿದ್ದೇನೆ.)

ಮಾರ್ಗದಲ್ಲಾದರೂ ಹೊಂದಾಣಿಕೆ ಮಾಡಿಕೊಳ್ಳಬೇಕಾಗುತ್ತದೆ. ಇಲ್ಲವೇ ಜೀವನ ದೃಷ್ಟಿಯೇ ಹೊಂದಾಣಿಕೆಗೊಳಗಾಗುತ್ತದೆ.

ಕೆಲವು ಸಾಹಿತ್ಯಗಳ ಇತಿಹಾಸವನ್ನು ನೋಡಿದರೆ ಕೆಲವೊಂದು ಸಂಪ್ರದಾಯ ಗಳು ದೀರ್ಘಕಾಲ ಬಾಳಿರುವುದನ್ನು, ಇನ್ನು ಕೆಲವು ಕೇವಲ ಸಣ್ಣ ಅವಧಿಗೆ ಸೀಮಿತ ವಾಗಿರುವುದನ್ನು ಗಮನಿಸಬಹುದಾಗಿದೆ. ಕನ್ನಡ ಸಾಹಿತ್ಯದಲ್ಲಿ ಚಂಪೂಯುಗ ಇನ್ನೂರು ವರ್ಷಕ್ಕೂ ಹೆಚ್ಚು ಕಾಲ ಸೃಜನಶೀಲವಾಗಿ ಉಳಿದಿತ್ತು. ವಚನಯುಗವೂ ಶತಮಾನ ಕಾಲ ಉಳಿದಿತ್ತು. ಆದೇ ಈ ಶತಮಾನದ ಎಂಟು ದಶಕಗಳಲ್ಲಿ ಈಗಾಗಲೇ ನಾಲ್ಕು ಹೆಸರಿಸಬಹುದಾದ—ನವೋದಯ, ಪ್ರಗತಿಶೀಲ, ನವ್ಯ, ನವಪ್ರಗತಿಶೀಲ (ಬಂಡಾಯ) —ಸಂಪ್ರದಾಯಗಳು ಹುಟ್ಟಿಕೊಂಡಿವೆ. ಇದಕ್ಕೆ ಆಯಾ ಕಾಲಾವಧಿಗಳಲ್ಲಿದ್ದ ಜೀವನ ವಿಧಾನದ ಸ್ಥಿರತೆ, ಸಂವೇದನೆಯಲ್ಲಿಯ ಬದಲಾವಣೆಯ ಗತಿ, ಜೀವನದೃಷ್ಟಿಯಲ್ಲಿಯ ತಾಳಿಕೆಯ ಗುಣ, ಸೂಕ್ಷ್ಮವಾಗಿ ಬದಲಾಗುವ ಸಂವೇದನೆಯನ್ನು ಅರ್ಥಮಾಡಿ ಕೊಂಡು ಅದಕ್ಕೆ ತಕ್ಕ ಹೊಸ ಅಭಿವ್ಯಕ್ತಿಮಾರ್ಗವನ್ನು ರೂಪಿಸುವ ಸ್ವೋಪಜ್ಞ ಪ್ರತಿಭೆಯ ಆಗಮನ ಇತ್ಯಾದಿಗಳೆಲ್ಲ ಕಾರಣವಾಗಿರುತ್ತವೆ. ಹತ್ತು ಹನ್ನೊಂದನೆಯ ಶತಮಾನಗಳ ಜೀವನ ವಿಧಾನದಲ್ಲಿ ಅಂಥ ಮಹತ್ವದ ಬದಲಾವಣೆಗಳೇನೂ ಆಗಲಿಲ್ಲ. ರಾಜ್ಯಪದ್ಧತಿ, ಧರ್ಮ, ಜನಜೀವನ ಪರಂಪರಾಗತ ಮೌಲ್ಯಗಳ ಜಾಡಿನಲ್ಲೇ ನಡೆದಿ ದ್ದವು. ಹೀಗಾಗಿ ಆ ಕಾಲದ ಸಾಹಿತ್ಯದಲ್ಲೂ ಒಂದು ಬಗೆಯ ಏಕರೂಪತೆ ಇದೆ. ಯುದ್ಧದ ವೈಭವೀಕರಣ, ರಾಜನಿಷ್ಠೆ, ಧರ್ಮಶ್ರದ್ಧೆಗಳು ಅದರ ಮುಖ್ಯಧೋರಣೆ ಗಳಾಗಿವೆ. ಹನ್ನೆರಡನೆಯ ಶತಮಾನದಲ್ಲಿ ಕಂಡು ಬಂದ ವೀರಶೈವ ವೈಚಾರಿಕ, ಧಾರ್ಮಿಕ ಕ್ರಾಂತಿ ಆ ಕಾಲದ ಜೀವನವಿಧಾನ, ಜೀವನದೃಷ್ಟಿಗಳನ್ನು ಆಳವಾಗಿ ಪ್ರಭಾ ವಿಸಿತು. ಅದು ಹೊಸದೊಂದು ಸಾಹಿತ್ಯಮಾರ್ಗ ಉದಯಕ್ಕೆ ಕಾರಣವಾಯಿತು. ಆದೇ, ಈ ಶತಮಾನದಲ್ಲಿ ಜೀವನದಲ್ಲಿಯ ಬದಲಾವಣೆಯ ಗತಿ ಹೆಚ್ಚು ತೀವ್ರವಾಗಿದೆ. ಅಂತೆಯೇ ಹಿಂದಿನಂತೆ ಸಾಹಿತ್ಯ ಸಂಪ್ರದಾಯಗಳು ಶತಮಾನಗಳಷ್ಟು ದೀರ್ಘಕಾಲ ಬೆಳೆದು ಬರುವ ಸಂಭವ ಈಗ ಬಹಳ ಕಡಿಮೆಯಾಗಿದೆ. ಸಂವಹನ ಕ್ಷೇತ್ರದಲ್ಲಾಗಿರುವ ಕ್ರಾಂತಿ, ವಿವಿಧ ರಾಜಕೀಯ ಪ್ರಣಾಲಿಗಳ ಒತ್ತಡ, ತೀವ್ರಗತಿಯಲ್ಲಿ ನಡೆದಿರುವ ರಾಷ್ಟ್ರದಲ್ಲಿಯ-ನಗರೀಕರಣ-ಔದ್ಯೋಗಿಕರಣಗಳು, ಶಿಕ್ಷಣದ ವಿಸ್ತಾರ, ಹೊರಜಗತ್ತಿ ನಿಂದ ಬರುವ ವೈಚಾರಿಕ ಹಾಗೂ ಸಾಹಿತ್ಯಿಕ ಆಂದೋಲನಗಳ ಪ್ರಭಾವ—ಇತ್ಯಾದಿ ಗಳಿಂದಾಗಿ ನಮ್ಮ ಜೀವನದೃಷ್ಟಿ ಹಾಗೂ ಸಾಹಿತ್ಯಿಕ ಆಂದೋಲನಗಳು ಬಹುಬೇಗ ಬದಲಾಗುವ ಸಾಧ್ಯತೆ ಹೆಚ್ಚಾಗಿದೆ.

ಇದಕ್ಕೆ ಹೊರತಾಗಿ ಇನ್ನೂ ಕೆಲವು ಸಾಹಿತ್ಯಿಕ ಆಂದೋಲನಗಳು ಇರುತ್ತವೆ. ಇವು ಕೇವಲ ಕೆಲವೇ ಜನ ಲೇಖಕರ ಬುದ್ಧಿಪೂರ್ವಕ ಪ್ರಯತ್ನಗಳಿಂದಾಗಿ ಹುಟ್ಟುವ ಆಂದೋಲನಗಳು. ಎಷ್ಟೋ ಸಲ ಇವು ಕೇವಲ ಒಬ್ಬ ವ್ಯಕ್ತಿಗೆ ಸೀಮಿತವಾಗಿ ಉಳಿದು

ಯಾವ ಅನುಯಾಯಿಗಳನ್ನೂ ಆಕರ್ಷಿಸದೇ ಹೋಗುತ್ತವೆ. ಇಲ್ಲವೇ ನಾಲ್ಕೈದು ಜನರ ಸಾಮೂಹಿಕ ಕಾರ್ಯಕ್ರಮವಾಗಿ ಮಾತ್ರ ನಿಲ್ಲುತ್ತವೆ. ಇಂಗ್ಲಿಷ್ ಸಾಹಿತ್ಯದ ಪ್ರಿರಾಫೆಲಾಯಿಟ್ ಪಂಥ, ಕಲೆಗಾಗಿ ಕಲೆ ಎಂದು ಸಾರಿದ ಕಲೈಕನಿಷ್ಠರ ಗುಂಪು ಈ ಬಗೆಯವು. ಈ ಪಂಥಗಳ ವಾದಸರಣಿ ಹೆಚ್ಚು ಜನಕ್ಕೆ ಒಪ್ಪಿಗೆಯಾಗಲಿಲ್ಲ. ಜೊತೆಗೆ ಈ ವಾದಗಳು ಸುತ್ತಲಿನ ಬದುಕಿನ ಒತ್ತಾಯದಲ್ಲಿ ಹುಟ್ಟಿದುವಾಗಿರದೆ ಕೇವಲ ಬುದ್ಧಿ ಜನ್ಯವಾಗಿದ್ದವು. ತನ್ನ ಸುತ್ತಲಿನ ಬದುಕಿನಲ್ಲಿ ಬೇರಿಲ್ಲದ ಯಾವ ಸಾಹಿತ್ಯಿಕ ಆಂದೋಲನವೂ ವ್ಯಾಪಕವಾಗಿ ಹರಡಲಾರದು. ಬಹಳವಾದರೆ ಅದೊಂದು ವಿಕ್ಷಿಪ್ತ ಪ್ರಯೋಗ ಶೀಲತೆಯಾಗಿ ಮಾತ್ರ ಉಳಿದೀತು.

ಅದೇನಿದ್ದರೂ, ಸಾಹಿತ್ಯದಲ್ಲಿ ಸಂಪ್ರದಾಯಗಳ ಬದಲಾವಣೆ ಒಂದು ಆಂತರಿಕ ಅಗತ್ಯವಾಗಿದೆ. ಅದು ಸಾಹಿತ್ಯವೊಂದರ ಜೀವಂತಿಕೆಯ ಲಕ್ಷಣವೂ ಹೌದು. ಸಾಹಿತ್ಯ ನಿಂತ ನೀರಾಗದಂತೆ, ಸದಾ ಹೊಸ ಸಾಧ್ಯತೆಗಳ ಶೋಧದಲ್ಲಿ ತೊಡಗಿಕೊಳ್ಳುವಂತೆ, ಕಾಲಕಾಲಕ್ಕೆ ಅದು ಮರುಹುಟ್ಟು ಪಡೆಯುವುದು ಅವಶ್ಯವಾಗಿದೆ.

ಸಾಹಿತ್ಯ ಸಂಪ್ರದಾಯಗಳು ಬದಲಾಗುವುದು ಮುಖ್ಯವಾಗಿ ಎರಡು ವಿಧದಲ್ಲಿ ಎಂದು ಹೇಳಬಹುದು : ಮೊದಲನೆಯದು ವೈಯಕ್ತಿಕ ಪ್ರಯತ್ನದ ಮೂಲಕ, ಎರಡನೆಯದು ಸಾಮೂಹಿಕ ಚಳುವಳಿಯ ಮೂಲಕ.

ಸೂಕ್ಷ್ಮ ಸಂವೇದನಾಶೀಲನಾದ ಪ್ರತಿಭಾವಂತ ಲೇಖಕ ಮೊದಲು ತನ್ನ ವೈಯಕ್ತಿಕ ಸಂವೇದನೆಗೂ ಪ್ರಚಲಿತ ಸಾಹಿತ್ಯಮಾರ್ಗದ ಸಂವೇದನೆಗೂ ತೀವ್ರವಾದ ಭಿನ್ನತೆಯಿರುವುದನ್ನು ಗುರುತಿಸುತ್ತಾನೆ. ಈ ಬದಲಾದ ಸಂವೇದನೆಯನ್ನು ಪ್ರಚಲಿತ ಸಾಹಿತ್ಯಮಾರ್ಗದ ಮೂಲಕ ಪ್ರಕಟಿಸುವುದು ಸಾಧ್ಯವಾಗದೇ, ತಾನು ಹೇಳ ಬೇಕೆಂದದ್ದು ಇದಲ್ಲ, ಹೀಗಲ್ಲ ಎಂದು ಅಸಮಾಧಾನ ತಳೆಯುತ್ತಾನೆ. ಅನಂತರ ತಾನು ಹೇಳಬೇಕಾದುದನ್ನು ಯಥಾವತ್ತಾಗಿ ಹೇಳಬಲ್ಲ ಹೊಸ ಸಾಹಿತ್ಯಮಾರ್ಗದ ಅನ್ವೇಷಣೆಗೆ ತೊಡುಗುತ್ತಾನೆ. ತನ್ನ ಅನ್ವೇಷಣೆಯಲ್ಲಿ ಅವನು ಯಶಸ್ವಿಯಾದಾಗ ಬದುಕನ್ನು ಅರ್ಥೈಸುವ, ಈ ಅರ್ಥಕ್ಕೆ ಅಭಿವ್ಯಕ್ತಿ ಕೊಡುವ ಹಲವಾರು ಹೊಸ ಅವಕಾಶಗಳು ತೆರೆದುಕೊಳ್ಳುತ್ತವೆ. ಸಂವೇದನೆಯ ಬದಲಾವಣೆಯನ್ನು ಸ್ಪಷ್ಟವಾಗಿಯೋ ಅಸ್ಪಷ್ಟವಾಗಿಯೋ ಗುರುತಿಸಬಲ್ಲ. ಆದರೆ ಅದಕ್ಕೆ ತಕ್ಕದಾದ ಹೊಸ ಅಭಿವ್ಯಕ್ತಿ ಮಾರ್ಗವನ್ನು ಸ್ವತಃ ಕಂಡುಕೊಳ್ಳಲಾಗದ ಅನೇಕ ಲೇಖಕರು ಇಂಥ ಮಹತ್ವದ ಲೇಖಕನಲ್ಲಿ ತಮ್ಮ ಸಂವೇದನೆಯ ಸ್ವರೂಪವನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳುತ್ತಾರೆ. ಅವನು ತೋರಿಸಿಕೊಟ್ಟ ಅಭಿವ್ಯಕ್ತಿಯ ಹೊಸ ಸಾಧ್ಯತೆಗಳ ಬೆಳಕಿನಲ್ಲಿ ತಮ್ಮ ಅನುಭವ ದೃಷ್ಟಿಕೋನಗಳಿಗೆ ತಕ್ಕುದಾದ ಕೆಲವು ಹೊಂದಾಣಿಕೆ ಮಾಡಿಕೊಂಡು ಆ ಮಾರ್ಗದ ಸಾಧ್ಯತೆಗಳನ್ನು ಇನ್ನಷ್ಟು ವಿಸ್ತರಿಸುತ್ತಾರೆ. ಮೊದಲನೆಯವರು ಮೇಜರ್ ಲೇಖಕ, ಎರಡನೆಯ ಗುಂಪಿಗೆ ಸೇರಿದವರು ಮೈನರ್ ಲೇಖಕರು. ಒಂದು ಸಂಪ್ರದಾಯದ

ಸಾಧನೆಯನ್ನು ಇಂಥವರ ಬರವಣಿಗೆಯಲ್ಲೇ ಗುರುತಿಸಬೇಕು. ಇವರ ನಂತರ ದೊಡ್ಡ ಸಂಖ್ಯೆಯಲ್ಲಿ ಬರುವವರು ಉತ್ಸಾಹಿ ಹಿಂಬಾಲಕರು. ಇವರಲ್ಲಿ ಅನುಕರಣೆ ಹೆಚ್ಚು ವಸ್ತು, ಶೈಲಿ, ಧೋರಣೆಗಳು ಇವರ ಮೂಲಕವೇ ಜಾಡಿಗೆ ಬೀಳುತ್ತವೆ. ಎಷ್ಟೋ ಸಲ ತಮಗೆ ಹಾಗೆ ಅನಿಸದಿದ್ದರೂ ಅನಿಸಿದಂತೆ ಇವರು ಭಾವಿಸುತ್ತಾರೆ, ನಟಿಸುತ್ತಾರೆ. ಹೀಗೆ ಅಪ್ರಮಾಣಿಕತೆಯೂ ಆ ಸಾಹಿತ್ಯಮಾರ್ಗದಲ್ಲಿ ಸೇರಿಸಿಕೊಳ್ಳುತ್ತದೆ. ಆದರೂ ಇದರಿಂದಾಗಿಯೇ ಒಂದು ಸಂಪ್ರದಾಯಕ್ಕೆ ಸಾರ್ವತ್ರಿಕತೆ ಬರುವುದು. ಇಂತಹ ಸಂದರ್ಭದಲ್ಲಿ ಹೊಸ ಸಂಪ್ರದಾಯದ ಆಗಮನದ ಕಾಲಕ್ಕೆ ಅದರ ಧ್ಯೇಯ—ಧೋರಣೆಗಳು ಸ್ಪಷ್ಟವಾಗಿರುವುದಿಲ್ಲ. ಸಂಪ್ರದಾಯ ಆರಂಭವಾಗಿ ಬೆಳೆಯುತ್ತ ಹೋಗಿ ಸಾಕಷ್ಟು ಕೃತಿರಚನೆಯಾದ ಮೇಲೆಯೇ ಅದರ ವೈಶಿಷ್ಟ್ಯಗಳು ಸ್ಪಷ್ಟವಾಗುತ್ತ ಹೋಗುತ್ತವೆ. ಇಲ್ಲಿ ಕೃತಿರಚನೆ ಮೊದಲು ನಡೆಯುತ್ತದೆ, ಲಕ್ಷಣ ವಿವೇಚನೆ ಅನಂತರ ನಡೆಯುತ್ತದೆ. ನಮ್ಮಲ್ಲಿ ನವೋದಯ, ನವ್ಯಮಾರ್ಗಗಳು ಆರಂಭವಾದದ್ದು ಹೀಗೆ. ಇಂದಿಗೂ ಕೂಡ ನವೋದಯ, ನವ್ಯಮಾರ್ಗಗಳ ವ್ಯಾಖ್ಯೆಯನ್ನಾಗಲೀ, ಧ್ಯೇಯ ಧೋರಣೆಗಳನ್ನಾಗಲೀ ನಿಖರವಾಗಿ ರೂಪಿಸುವುದು ಕಷ್ಟ.

ಇದು ಸಾಹಿತ್ಯಮಾರ್ಗವೊಂದು ನಿಧಾನವಾಗಿ, ವ್ಯಾಪಕವಾಗಿ ಹರಡಿಕೊಳ್ಳುವ ರೀತಿ. ಇದು ವೈಯಕ್ತಿಕ ಪ್ರಯತ್ನದಲ್ಲಿ ಆರಂಭವಾಗಿ ಸಾರ್ವತ್ರಿಕ ಸ್ವರೂಪ ತಳೆಯುತ್ತದೆ. ಆದರೆ ಹೀಗೆ ಸಾರ್ವತ್ರಿಕ ಸ್ವರೂಪ ತಳೆದಾಗಲೂ ಅದರಲ್ಲಿ ವೈಯಕ್ತಿಕ ವೈಶಿಷ್ಟ್ಯಗಳು ಮಾಸಿಹೋಗುವುದಿಲ್ಲ. ಅಂತೆಯೇ ಇಲ್ಲಿ ಒಂದು ಸಾಮೂಹಿಕವಾದ, ಎಲ್ಲರಿಗೂ ಒಪ್ಪಿತವಾದ ಕಾರ್ಯಕ್ರಮವೇನೂ ಇರುವುದಿಲ್ಲ. ಇದ್ದರೂ ತೀರಾ ಸ್ಥೂಲವಾಗಿರುತ್ತದೆ. ಇಲ್ಲವೇ ಪ್ರಕಟಿತ ಕಾರ್ಯಕ್ರಮಕ್ಕೂ ಅನಂತರದ ಬೆಳವಣಿಗೆಗೂ ಸಂಬಂಧವೇ ಇರುವುದಿಲ್ಲ. ಆದ್ದರಿಂದ ಇಂತಹ ಸಾಹಿತ್ಯಮಾರ್ಗಗಳ ರೀತಿ—ನೀತಿಗಳನ್ನು ಅದರ ಸೃಜನಶೀಲ ಕೃತಿಗಳ ಅಭ್ಯಾಸದ ಮೂಲಕವೇ ಗುರುತಿಸಿಕೊಳ್ಳಬೇಕಾಗುತ್ತದೆ. ಇಂಗ್ಲಿಷ್ ರೋಮ್ಯಾಂಟಿಕ್ ಯುಗದ ಆರಂಭವನ್ನು ಸಾರಿ "ಲಿರಿಕಲ್ ಬ್ಯಾಲಡ್ಸ್"ಗೆ ವರ್ಡ್ಸ್‌ವರ್ಥ್ ಒಂದು ದೀರ್ಘವಾದ ಮುನ್ನುಡಿಯನ್ನು ಬರೆದು ತನ್ನ ಹೊಸ ಕಾವ್ಯಮಾರ್ಗದ ಉದ್ದೇಶ, ವಸ್ತು, ಶೈಲಿಗಳ ಸ್ವರೂಪವನ್ನು ವಿವರಿಸಿದ. ಆದರೆ ಈ ಮ್ಯಾನಿಫೆಸ್ಟೊ ಉಳಿದವರಿಗೆ ಒಪ್ಪಿಗೆಯಾಗಲಿಲ್ಲ. "ಲಿರಿಕಲ್ ಬ್ಯಾಲಡ್ಸ್"ಗೆ ತನ್ನ ಕವಿತೆಗಳನ್ನೂ ಸೇರಿಸಿದ್ದ ಕೋಲ್‌ರಿಜ್‌ನೆ ವರ್ಡ್ಸ್‌ವರ್ಥ್‌ನ ವಿಚಾರಗಳನ್ನು ಅನಂತರ ತರ್ಕಬದ್ಧವಾಗಿ ಖಂಡಿಸಿದ. ಅಷ್ಟೇ ಏಕೆ, ಸ್ವತಃ ವರ್ಡ್ಸ್‌ವರ್ಥ್‌ನ ಉತ್ತಮ ಕಾವ್ಯ ಅವನ ಮ್ಯಾನಿಫೆಸ್ಟೋಕ್ಕೆ ಬದ್ಧವಾಗಿ ಬರೆದುದಲ್ಲ. ಕನ್ನಡ ನವ್ಯಕಾವ್ಯದ ಆರಂಭದಲ್ಲಿ ವಿ. ಕೃ. ಗೋಕಾಕರೂ ಹೀಗೆಯೇ ಅದರ ವಸ್ತು, ತಂತ್ರಗಳ ಬಗೆಗೆ ನೀಲನಕ್ಷೆಯೊಂದನ್ನು ಒದಗಿಸಿದ್ದರು. ಆದರೆ ನಮ್ಮ ನವ್ಯಕಾವ್ಯಕ್ಕೆ ಸೃಜನಶೀಲ ಪ್ರೇರಣೆ ಬಂದದ್ದು ಅಡಿಗರ ಕಾವ್ಯದಿಂದಲೇ ಹೊರತು, ಗೋಕಾಕರ ನೀಲಿನಕ್ಷೆಯಿಂದಲ್ಲ. ಹೀಗೆ ಧ್ಯೇಯ—ಧೋರಣೆಗಳ ನಿರೂಪಣೆ ಇಲ್ಲಿ ಮಹತ್ವದ ಸಂಗತಿಯಾಗುವುದಿಲ್ಲ.

ಇದಕ್ಕೆ ತೀರ ಭಿನ್ನವಾದ ಇನ್ನೊಂದು ರೀತಿ ಚಳುವಳಿಯ ಮಾರ್ಗ. ಚಳುವಳಿ ಎಂದೊಡನೆ ಸ್ವಲ್ಪಿಲ್ಲ ಸ್ವಲ್ಪ ರಾಜಕೀಯ ವಾಸನೆ ಅನಿವಾರ್ಯವೆಂದೇ ಕಾಣುತ್ತದೆ. ಚಳುವಳಿಗಳು ಆರಂಭವಾಗುವುದು ವೈಯಕ್ತಿಕ ನೆಲೆಯಲ್ಲಿ ಅಲ್ಲ, ಸಾಮೂಹಿಕವಾಗಿ. ಚಳುವಳಿ ಎಂಬ ಶಬ್ದವೇ ಸಮೂಹ—ಸೂಚಕವಾದದ್ದು. ಯಾವುದೇ ಚಳವಳಿಗೂ ಒಂದು ನಿರ್ದಿಷ್ಟ ಸೈದ್ಧಾಂತಿಕ ನಿಲುವು ಬೇಕೇಬೇಕು. ಎಂದರೆ ಇಲ್ಲಿ ಸೈದ್ಧಾಂತಿಕ ಘೋಷಣೆಯೇ ಪ್ರಧಾನವಾದದ್ದು. ಮತ್ತು ಹೆಚ್ಚಿನ ಸಂದರ್ಭಗಳಲ್ಲಿ ಸೃಜನಶೀಲ ಸಾಹಿತ್ಯಕ್ಕಿಂತ ಮುಂಚೆಯೇ ಸೈದ್ಧಾಂತಿಕ ಘೋಷಣೆ ತಯಾರಾಗುತ್ತದೆ. ಹೀಗೆ ಒಂದು ಸಮೂಹವನ್ನು ಒಂದು ಕಡೆ ಕೂಡಿಸಿ ಹಿಡಿಯಲು, ಆ ಸಮೂಹಕ್ಕೆಲ್ಲ ಒಪ್ಪಿಗೆಯಾಗಬಲ್ಲ ಸೈದ್ಧಾಂತಿಕ ಕಾರ್ಯಕ್ರಮವೊಂದನ್ನು ರೂಪಿಸಲು ಒಂದು ಸಂಘಟನೆ ಬೇಕಾಗುತ್ತದೆ. ಈ ಸಂಘಟನೆಯ ಹಿನ್ನೆಲೆಯಲ್ಲಿ ವ್ಯಕ್ತಿಗಳ ಸಮೂಹವೊಂದು ಸೇರಿ ಸಿದ್ಧಾಂತವನ್ನು ಘೋಷಿಸುತ್ತದೆ. ಅದರಲ್ಲಿ ಸಾಹಿತ್ಯ ಏನು ಹೇಳಬೇಕು, ಹೇಗೆ ಹೇಳಬೇಕು ಎಂಬುದುದರ ಬಗ್ಗೆ ನಿದರ್ಶನಗಳಿರುತ್ತವೆ. ಈ ಘೋಷಣೆಯನ್ನು ಪ್ರಚಾರಪಡಿಸಲು ಸಭೆ—ಸಮ್ಮೇಳನಗಳು ಏರ್ಪಡುತ್ತವೆ. ಉತ್ಸಾಹೀ ಕಾರ್ಯ—ಕರ್ತರು ದೊಡ್ಡ ದನಿಯಲ್ಲಿ ಘೋಷಣೆಯನ್ನು ಉಗ್ಗಡಿಸುತ್ತಾರೆ. ಅನಂತರ ಈ ಪ್ರಚಾರವನ್ನು ಆರಂಭಿಸುವವರೂ, ಅದಕ್ಕೆ ಒಲಿಯುವವರೂ ಆ ಕಾರ್ಯಕ್ರಮಕ್ಕೆ ಹೊಂದುವ ಸಾಹಿತ್ಯದ ರಚನೆಗೆ ತೊಡಗುತ್ತಾರೆ. ಇಲ್ಲಿ ಘೋಷಣೆ ಮೊದಲು ಬರುತ್ತದೆ, ಅನಂತರ ಸಾಹಿತ್ಯ.

ಈ ಮಾತುಗಳನ್ನು ಹೇಳುವಾಗ ನಮ್ಮ ಸಾಹಿತ್ಯದಲ್ಲಿ ನಾಲ್ವತ್ತರ ದಶಕದಲ್ಲಿ ಕಾಣಿಸಿಕೊಂಡಿದ್ದ ಪ್ರಗತಿಶೀಲ ಚಳುವಳಿ ಮತ್ತು ಇತ್ತೀಚಿನ ಬಂಡಾಯಸಾಹಿತ್ಯ ಚಳುವಳಿ (ಇದನ್ನು ನವಪ್ರಗತಿಶೀಲ ಚಳುವಳಿ ಎಂದೂ ಕರೆಯಬಹುದು)ಗಳು ನನ್ನ ಮನಸ್ಸಿನಲ್ಲಿವೆ. ಮೇಲೆ ವಿವರಿಸಿದ ಅರ್ಥದಲ್ಲಿ ನಮ್ಮ ನವೋದಯದ ಕಾಲವಾಗಲೀ, ನವ್ಯದ ಕಾಲವಾಗಲೀ ಚಳುವಳಿಗಳಲ್ಲ. ಆದರೆ ಪ್ರಗತಿಶೀಲ ಚಳುವಳಿಗಳು ಸ್ಪಷ್ಟವಾಗಿ ಆ ಸ್ವರೂಪದವು. ಈ ಚಳುವಳಿಗಳಿಗೆ ಎಡಪಂಥೀಯ ಒಲವುಗಳಿವೆ, ಕಮ್ಯೂನಿಷ್ಟ ಸಿದ್ಧಾಂತಗಳ ಹಿನ್ನೆಲೆಯಿದೆ. ಎಡಪಂಥೀಯ ರಾಜಕೀಯ ಪಕ್ಷಗಳ ಸಂಘಟನೆಯ ನೆರವೂ ಇದೆ. ವರ್ಗಸಂಘರ್ಷ, ಶೋಷಣೆ, ಸಾಮ್ಯವಾದದಲ್ಲಿ ಸಾಹಿತ್ಯದ ಪಾತ್ರ, ಸಮಾಜರಚನೆಯ ಕಲ್ಪನೆ, ಸಾಹಿತ್ಯ ಚಿತ್ರಿಸಬೇಕಾದ ವಸ್ತುಗಳು, ಸಾಹಿತಿ ಎತ್ತಿಹಿಡಿಯಬೇಕಾದ ಮೌಲ್ಯಗಳು, ವಹಿಸಬೇಕಾದ ಪಕ್ಷ—ಇತ್ಯಾದಿಗಳ ಬಗ್ಗೆ ಇಲ್ಲಿ ಸ್ಪಷ್ಟ ಆದೇಶಗಳಿವೆ. ಎಂದರೆ ಈ ಚಳುವಳಿಗಳಿಗೆ ಪೂರ್ವನಿಶ್ಚಿತವಾದ ಒಂದು ಸೈದ್ಧಾಂತಿಕ ಕಾರ್ಯಕ್ರಮವಿದೆ, ಅನಂತರ ಅದನ್ನು ಅನುಸರಿಸಿದ ಸಾಹಿತ್ಯ ಸೃಷ್ಟಿಯಾಗುತ್ತದೆ.

ನವೋದಯ ಮತ್ತು ನವ್ಯ ಸಂಪ್ರದಾಯಗಳಿಗೆ ಕಾರಣವಾಗಿದ್ದಂತೆ ಈ ಚಳುವಳಿಗೂ ಸುತ್ತಲಿನ ಬದುಕಿನ ಒತ್ತಾಯವಿದ್ದೇ ಇದೆ. ಆದರೆ ಅಲ್ಲಿ ಸಂವೇದನೆಗಳಿ

ಮೇಲೆ ಒತ್ತು ಇದ್ದರೆ ಚಳುವಳಿಗಳಲ್ಲಿ ಬದುಕಿನ ವಿಶಾಲ ಸಂಗತಿಗಳ ಮೇಲೆ, ವಿವರಗಳ ಮೇಲೆ ಒತ್ತು ಬೀಳುತ್ತದೆ. ಪ್ರಗತಿಶೀಲ ಸಾಹಿತ್ಯದ ಜೊತೆಗೆ ವಾಸ್ತವತಾವಾದವೂ ಪ್ರಬಲವಾದದ್ದು ಕೇವಲ ಆಕಸ್ಮಿಕವೇನೂ ಅಲ್ಲ.

ವೈಯಕ್ತಿಕ ನೆಲೆಯಿಂದ ಆರಂಭವಾಗುವ ಸಾಹಿತ್ಯ ಸಂಪ್ರದಾಯಗಳಲ್ಲಿ ಸಹಜವಾಗಿಯೆ ವೈಯಕ್ತಿಕ ಜೀವನದೃಷ್ಟಿಗೆ ಮಹತ್ವ ಬರುತ್ತದೆ. ಬದುಕು ಹೇಗಿದೆ ಎನ್ನುವುದಕ್ಕಿಂತ ಬದುಕು ಒಬ್ಬ ವ್ಯಕ್ತಿಯ ಅನುಭವಕ್ಕೆ ಹೇಗೆ ತಟ್ಟುತ್ತದೆ ಎನ್ನುವುದು ಇಲ್ಲಿ ಮುಖ್ಯವಾಗುತ್ತದೆ. ವ್ಯಕ್ತಿಯ ಅಂತರಂಗದ ಬದುಕು, ವೈಯಕ್ತಿಕ ಆಶೆ ಆಕಾಂಕ್ಷೆಗಳು: ವೈಯಕ್ತಿಕ ಮಾನವೀಯ ಸಂಬಂಧಗಳು, ಬದುಕಿನ ಆತ್ಮಶೋಧನೆ ಇಲ್ಲಿ ಅಭಿವ್ಯಕ್ತಿ ಪಡೆಯುತ್ತವೆ. ಅಸ್ತಿತ್ವವಾದದಂಥ ವ್ಯಕ್ತಿಕೇಂದ್ರಿತವಾದ ವಿಚಾರಧಾರೆಗಳು ಜನಪ್ರಿಯವಾಗುವುದು ಇಂತಹ ಸಂಪ್ರದಾಯಗಳಲ್ಲಿಯೇ. ಇದಕ್ಕೆ ವಿರುದ್ಧವಾಗಿ ಚಳುವಳಿಗಳು ಸಾಮೂಹಿಕ ಸ್ವರೂಪದವಾದ್ದರಿಂದ ಅಲ್ಲಿ ಸಮೂಹದ ಎಂದರೆ ಸಮಾಜದ ಒಟ್ಟು ಬದುಕು ಮಹತ್ವ ಪಡೆಯುತ್ತದೆ. ವ್ಯಕ್ತಿ ಸಮಾಜದ ಒಂದು ಘಟಕವಾಗಿ ತನ್ನ ವೈಯಕ್ತಿಕ ವೈಶಿಷ್ಟ್ಯವನ್ನು ಕಳೆದುಕೊಳ್ಳುತ್ತಾನೆ. ಸಾಹಿತಿ ತನ್ನ ವೈಯಕ್ತಿಕ ನೋವು—ನಲಿವುಗಳನ್ನೇ ಸಾಮಾನ್ಯೀಕರಿಸುವ ಬದಲಾಗಿ, ಇಡೀ ಸಮೂಹದ ನೋವು—ನಲಿವುಗಳಲ್ಲಿ ತನ್ನನ್ನು ಸೇರಿಸಿಕೊಳ್ಳುತ್ತಾನೆ. ಇಂತಹ ನೋವು ನಲಿವುಗಳು ಆದಷ್ಟು ಸಾಮೂಹಿಕವೆನಿಸಲೆಂಬ ಕಾರಣದಿಂದ ಅವುಗಳ ವೈಯಕ್ತಿಕ ಸೂಕ್ಷ್ಮಗಳನ್ನೂ, ವೈಶಿಷ್ಟ್ಯಗಳನ್ನೂ ಬಿಟ್ಟುಕೊಟ್ಟು ಸಾಮಾನ್ಯಗೊಳಿಸುತ್ತಾನೆ. ಪರಿಣಾಮವಾಗಿ ಸಾಹಿತ್ಯದ ಅನುಭವ ಹೆಚ್ಚು ಸ್ಥೂಲವಾಗುತ್ತದೆ. ಎಷ್ಟೋ ಸಲ ಪೂರ್ವನಿಶ್ಚಿತ ಸಿದ್ಧಾಂತಗಳಿಗೊಂದು ಉದಾಹರಣೆಯಾಗುತ್ತದೆ. ಇಂಥಲ್ಲಿ ಸೂಕ್ಷ್ಮಗಳು ಕಳೆದುಹೋಗಿ ವಿವರಗಳು ಹೆಚ್ಚುತ್ತವೆ. ಇಲ್ಲಿ ಲೇಖಕನಿಗೆ ಸ್ವಾತಂತ್ರ್ಯ ಕಡಿಮೆ ಒಂದು ನಿಶ್ಚಿತ ಸಿದ್ಧಾಂತದ ಚೌಕಟ್ಟಿನಲ್ಲಿಯೇ ಅವನು ಅನುಭವಗಳನ್ನು ಅರ್ಥೈಸಬೇಕಾಗುತ್ತದೆ. ಇಲ್ಲವಾದರೆ ವ್ಯವಸ್ಥಿತ ಗುಂಪಿನ ತೀವ್ರ ತಿರಸ್ಕಾರಕ್ಕೆ ಗುರಿಯಾಗಬೇಕಾಗುತ್ತವೆ. ಇಂಥ ಚಳುವಳಿಗಳಲ್ಲಿ ಹಿಂದಿನ ಸಾಹಿತ್ಯಸಂಪ್ರದಾಯಗಳ ಬಗೆಗೆ ಅಸಹನೆಯೂ ಬಹಳ ತೀವ್ರವಾಗಿಯೇ ಇರುತ್ತವೆ.

ಸಾಮಾನ್ಯವಾಗಿ, ವಿಮರ್ಶೆಯ ವಲಯದಲ್ಲಿ, ಪೂರ್ವನಿಶ್ಚಿತವಾದ ಸಿದ್ಧಾಂತವನ್ನು ಇರಿಸಿಕೊಂಡು ಹೊರಡುವ ಬರವಣಿಗೆಯ ಬಗೆಗೆ ಅಷ್ಟು ಸಹಾನುಭೂತಿ ಇಲ್ಲ. ಇದು ಬದುಕಿನಲ್ಲಿ ನಾವು ಅನುಭವಗಳನ್ನು ಪಡೆಯುವ, ಹಾಗೂ ಅವುಗಳನ್ನು ಅರ್ಥಮಾಡಿಕೊಳ್ಳುವ ಸ್ವಾಭಾವಿಕ ಕ್ರಮಕ್ಕೆ ವಿರುದ್ಧವಾದುದು ಎಂಬುದು ಇದಕ್ಕೆ ಮುಖ್ಯಕಾರಣವಾಗಿರಬಹುದು. ಸಾಹಿತ್ಯದಲ್ಲಿ ಒಂದು ಅನುಭವ ತನ್ನ ಅರ್ಥವಂತಿಕೆಯನ್ನು ಸಹಜವಾಗಿ ಪ್ರಕಟಿಸಬೇಕೆಂದು ಅಪೇಕ್ಷಿಸುವುದು ಸರಿಯೇ. ಆದರೆ ಸೃಜನ ಕ್ರಿಯೆಯಲ್ಲಿ ಅನುಭವ ಮೊದಲೋ, ಅದರ ಅರ್ಥವಂತಿಕೆ ಮೊದಲೋ ಎಂಬುದು ಅಷ್ಟು

ಪ್ರಸ್ತುತವಲ್ಲದ ಪ್ರಶ್ನೆ. ಪೂರ್ವಸಿದ್ಧಾಂತದೊಂದಿಗೆ ಹೊರಡುವ ಬರವಣಿಗೆ ಅನುಭವವನ್ನು ಕೃತಕವಾಗಿ ಅದಕ್ಕೆ ತಿರುಚಿ ಹೊಂದಿಸಿಕೊಳ್ಳುವ ಅಪಾಯವಿದೆ, ನಿಜ. ಆದರೆ ಅನುಭವದೊಂದಿಗೆ ಹೊರಡುವ ಬರವಣಿಗೆ ಕೂಡ ಇಲ್ಲದ ಅರ್ಥವನ್ನು ಅನುಭವಕ್ಕೆ ಆರೋಪಿಸಲೆತ್ನಿಸುವ ಅಪಾಯಕ್ಕೆ ಪಕ್ಕಾಗಬಹುದು, ಇಲ್ಲವೇ ಬರವಣಿಗೆ ಅರ್ಥವಿಲ್ಲದ ಸಂಗತಿಗಳ ನಿರರ್ಥಕ ಮಾಲೆಯಾಗಬಹುದು. ಪ್ರತಿಭಾವಂತನಾದ ಲೇಖಕ ಯಾವ ದಿಕ್ಕಿನಿಂದಾದರೂ ಕೃತಿರಚನೆಗೆ ತೊಡಗಿ ಸಮರ್ಥ ಕೃತಿಯನ್ನು ಕೊಡಬಲ್ಲ. ನಮಗೆ ಕೃತಿಯ ಶ್ರೇಷ್ಠತೆ ಮುಖ್ಯವೇ ಹೊರತು, ಅದರ ಸೃಷ್ಟಿಕ್ರಿಯೆ ಯಾವ ದಿಕ್ಕಿನಿಂದ ಆರಂಭವಾಯಿತೆಂಬುದಲ್ಲ.

ಸಂಪ್ರದಾಯ ಯಾವುದೇ ಇರಲಿ, ಅದು ಹೊಸದಾಗಿ ಆರಂಭವಾಗುವಾಗ ತೀವ್ರವಾದ ವಿರೋಧವನ್ನು ಎದುರಿಸಬೇಕಾಗುತ್ತದೆ. ಪ್ರಚಲಿತ ಸಂಪ್ರದಾಯದ ರೀತಿ–ನೀತಿಗಳಿಗೆ ಒಗ್ಗಿಹೋದ ಜನ ಹೊಸ ಮಾರ್ಗವನ್ನು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಹೊಸದು ಸಾಹಿತ್ಯವೇ ಅಲ್ಲ ಎನ್ನುವವರೆಗೂ ವಿರೋಧ ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಹೊಸ ಅಭಿವ್ಯಕ್ತಿಮಾರ್ಗದ ಪ್ರವರ್ತಕರ ಮೇಲೆ ವಿಶೇಷವಾದ ಹೊಣೆಗಾರಿಕೆ ಇರುತ್ತದೆ. ಅವರು ತಮ್ಮ ಮಾರ್ಗವನ್ನು ಅರ್ಥಮಾಡಿಕೊಳ್ಳಬಲ್ಲ, ಸಹಾನುಭೂತಿಯಿಂದ ನೋಡಬಲ್ಲ ಹಾಗೂ ಮೆಚ್ಚಬಲ್ಲ ಹೊಸ ಅಭಿರುಚಿಯನ್ನು ಓದುಗರಲ್ಲಿ ಬೆಳೆಸಬೇಕಾಗುತ್ತದೆ. ತಮ್ಮ ಸೃಜನಶೀಲ ಪ್ರತಿಭೆಯಿಂದ ಶ್ರೇಷ್ಠ ಕೃತಿಗಳನ್ನು ರಚಿಸಿ, ಅವುಗಳ ಸಾಹಿತ್ಯಿಕ ಮಹತ್ವವನ್ನು ಆ ಸಂಪ್ರದಾಯದ ಕಡು ವೈರಿಗಳೂ ಕೂಡ ಒಪ್ಪಿಕೊಳ್ಳುವಂತೆ ಮಾಡಬೇಕಾಗುತ್ತದೆ. ಯಾಕೆಂದರೆ, ಶ್ರೇಷ್ಠ ಕೃತಿಗಳ ಮೂಲಕವೇ ಯಾವುದೇ ಸಂಪ್ರದಾಯ ತನ್ನನ್ನು ತಾನು ಸಮರ್ಥಿಸಿಕೊಳ್ಳುವುದು ಅನಿವಾರ್ಯ. ಒಂದು ಸಂಪ್ರದಾಯದ ಮಹತ್ವವನ್ನು ಅದರ ಕೇವಲ ಉದ್ದೇಶದಿಂದ ಅಲ್ಲ, ಸಾಹಿತ್ಯಿಕ ಸಾಧನೆಯಿಂದಲೇ ಅಳೆಯಬೇಕಾಗುತ್ತದೆ.

ಲೇಖಕ ಒಂದಲ್ಲ ಒಂದು ಸಾಹಿತ್ಯ ಸಂಪ್ರದಾಯಕ್ಕೆ ಸೇರುವುದರಿಂದ ಕೆಲವು ಅನುಕೂಲಗಳೂ ಇವೆ, ಕೆಲವು ಅನಾನುಕೂಲಗಳೂ ಇವೆ. ಒಂದು ನಿರ್ದಿಷ್ಟ ಸಂಪ್ರದಾಯಕ್ಕೆ ಸೇರುವ ಲೇಖಕನಿಗೆ ಆ ಸಂಪ್ರದಾಯದಲ್ಲಿ ಅಭಿರುಚಿ ಬೆಳೆಸಿಕೊಂಡ ಸಿದ್ಧ ಓದುಗರ ಗುಂಪು ಸಿಕ್ಕುತ್ತದೆ. ಅವನನ್ನು ತತ್‌ಕ್ಷಣ ಅರ್ಥಮಾಡಿಕೊಳ್ಳಬಲ್ಲ, ಮೆಚ್ಚಬಲ್ಲ ಜನ ಸಿಗುತ್ತಾರೆ. ಇದು ಲೇಖಕನಾದವನಿಗೆ ಒಂದು ನೆಮ್ಮದಿಯ ವಿಷಯ. ಅದರಿಂದ ಅವನ ಆತ್ಮವಿಶ್ವಾಸ ಬೆಳೆಯುತ್ತದೆ. ಆದರೆ ಆ ಸಂಪ್ರದಾಯದ ಸೀಮಿತ ಚೌಕಟ್ಟಿನಲ್ಲಿಯೇ ಅವನನ್ನು ಓದಿಕೊಂಡು ಅವನ ಕೃತಿಗಳಲ್ಲಿರಬಹುದಾದ ಹೆಚ್ಚಿನ ಅರ್ಥವನ್ನು ಗಮನಿಸದೇ ಹೋಗಬಹುದಾದ ಸಾಧ್ಯತೆಯೂ ಇರುತ್ತದೆ. ಹಾಗೆಯೇ ತಮಗೆ ಮೆಚ್ಚುಗೆಯಾದ ಸಂಪ್ರದಾಯಕ್ಕೆ ಸೇರಿದವನೆಂಬ ಕಾರಣದಿಂದ ಕೆಲವರು ಅವನನ್ನು ಅವಾಸ್ತವಿಕವಾಗಿ ಮೆಚ್ಚುವ, ತಮಗೆ ಇಷ್ಟವಲ್ಲದ ಸಂಪ್ರದಾಯಕ್ಕೆ ಸೇರಿ

ದವನೆಂದು ಇನ್ನೂ ಕೆಲವರು ತೀರಾ ಅಲಕ್ಷಿಸುವ ಸಂಭವವೂ ಇಲ್ಲದೇ ಇಲ್ಲ. ಈ ವಿಷಯದಲ್ಲಿ ಎಲ್ಲ ಲೇಖಕರೂ ಸಮಾನ ಸುಖಿಗಳು, ಸಮಾನ ದುಃಖಿಗಳು. ತನ್ನ ಹಿಂದಿನ ಸಂಪ್ರದಾಯವನ್ನು ತಿರಸ್ಕರಿಸಿ, ತನ್ನ ಸಂಪ್ರದಾಯದ ಏರಿಕೆಯ ದಿನಗಳಲ್ಲಿ ಮನ್ನಣೆ ಗಳಿಸುವ ಲೇಖಕ ತನ್ನ ಮುಂದಿನ ಸಂಪ್ರದಾಯದಿಂದ ತಾನೂ ತಿರಸ್ಕರಿಸಲ್ಪಡುವ ಸಾಧ್ಯತೆ ಇದ್ದೇ ಇದೆ. ಈ ಗೊಂದಲಗಳ ನಡುವೆ ಸದಾ ಜಾಗೃತವಾದ ಸಂವೇದನಾಶೀಲತೆ, ಅದಕ್ಕನುಗುಣವಾದ ಅಭಿವ್ಯಕ್ತಿ ಮಾರ್ಗದ ನಿರಂತರ ಶೋಧನೆಯ ಸಾಮರ್ಥ್ಯ, ತಾನು ಮಾಡುತ್ತಿರುವುದು ಸರಿಯೆಂಬ ದೃಢವಾದ ವಿಶ್ವಾಸ–ಇವುಗಳಿಂದ ಮಾತ್ರ ಒಬ್ಬ ಲೇಖಕ ಎಲ್ಲ ಸಂಪ್ರದಾಯಗಳಿಗೂ ಅರ್ಥಪೂರ್ಣವಾಗಿ ಉಳಿಯುತ್ತಾನೆ.

ಒಂದು ಸಂಪ್ರದಾಯದ ಬೆಂಬಲ ಸ್ವತಃ ಹೊಸ ಅಭಿವ್ಯಕ್ತಿಮಾರ್ಗವೊಂದನ್ನು ಕಟ್ಟಿಕೊಳ್ಳಲಾರದ ಅನೇಕ ಜನ ಉತ್ತಮ ಲೇಖಕರಿಗೆ ಸೃಜನಶೀಲತೆಯ ದೃಷ್ಟಿಯಿಂದ ಬಹಳ ಮಹತ್ವದ ಸಂಗತಿಯಾಗಿರುತ್ತದೆ. ಇಂಥವರಲ್ಲಿ ಅರ್ಥಪೂರ್ಣವಾದ ವಿಶೇಷ ಅನುಭವಗಳೇನೋ ಇರುತ್ತವೆ. ಆದರೆ ಅವಕ್ಕೆ ವಿಶಿಷ್ಟವಾದ ಆಕಾರವನ್ನು ಸ್ವತಃ ಕಂಡುಕೊಳ್ಳುವ ಶಕ್ತಿ ಇರುವುದಿಲ್ಲ. ಆದರೂ ಹಳೆಯ ಜಾಡು ತಮ್ಮ ಅನುಭವಕ್ಕೆ ಒಗ್ಗುವುದಿಲ್ಲವೆಂದು ಇವರಿಗೆ ಸ್ಪಷ್ಟವಾಗಿರುತ್ತದೆ. ಇಂಥವರು ತಮಗೆ ಬೇಕಾದ ಹೊಸ ಮಾರ್ಗದ, ಹೊಸ ತಂತ್ರದ ಶೋಧನೆಗೂ ತೊಡಗಿದರೆ ಅವರ ಸೃಜನಶೀಲನೆಯ ಹೆಚ್ಚಿನ ಶಕ್ತಿಯೆಲ್ಲಾ ಮಾರ್ಗದ ಶೋಧನೆಯಲ್ಲಿಯೇ ಕಳೆದು ಹೋಗುತ್ತದೆ. ಇದರಿಂದ ಮಹತ್ವದ ಕೃತಿ ಹುಟ್ಟುವುದು ಕಷ್ಟವಾಗುತ್ತದೆ. ಅದೇ, ಇಂಥ ಲೇಖಕರಿಗೆ ಅನುಕೂಲವಾದ ಅಭಿವ್ಯಕ್ತಿಯ ಹೊಸ ಅವಕಾಶಗಳು ಸುಲಭವಾಗಿ ಸಿಕ್ಕುಬಿಟ್ಟರೆ, ಅವುಗಳ ಹುಡುಕಾಟದಲ್ಲಿ ವ್ಯರ್ಥವಾಗುವ ಶಕ್ತಿಯನ್ನೆಲ್ಲಾ ಉಳಿಸಿಕೊಂಡು ಕೃತಿ ರಚನೆಯ ಕಾಲಕ್ಕೆ ಅನುಭವ ಸಾಮಗ್ರಿಯ ಕಡೆಗೆ ಹೆಚ್ಚು ಗಮನ ಕೊಡಲು ಸಾಧ್ಯವಾಗುತ್ತದೆ. ಹೀಗೆ ಒಂದು ಅನುಕೂಲವಾದ ವಿಕಸನಶೀಲ ಅಭಿವ್ಯಕ್ತಿಯ ಮಾರ್ಗ ಲಭ್ಯವಿದ್ದಾಗ ಲೇಖಕನ ಕೆಲಸ ಸುಲಭವಾಗುತ್ತದೆ. ಈ ವಿಷಯದಲ್ಲಿ ಷೇಕ್ಸ್‌ಪಿಯರ್ ಬಹಳ ಸುದೈವಿಯಾಗಿದ್ದ ಎನ್ನುತ್ತಾನೆ ಟಿ. ಎಸ್. ಎಲಿಯಟ್. ಅವನಿಗಿಂತ ಮುಂಚೆ ನಾಟಕಗಳನ್ನು ಬರೆದಿದ್ದ ಕ್ರಿಸ್ಟಫರ್ ಮಾರ್ಲೋವ್ ಆಗಲೇ ಎಲಿಜಬೀಥನ್ ನಾಟಕದ ಸ್ವರೂಪಕ್ಕೆ ಸರಿಯಾದ ತಳಪಾಯವನ್ನು ಹಾಕಿಕೊಟ್ಟಿದ್ದ. ಸರಳರಗಳೆಯನ್ನು ನಾಟಕೀಯ ಉದ್ದೇಶಗಳಿಗೆ ಪಳಗಿಸಿದ್ದ. ತನ್ನ ಜೀವನದೃಷ್ಟಿ ಹಾಗೂ ಯುಗಧರ್ಮಗಳ ಅಭಿವ್ಯಕ್ತಿಗೆ ನಾಟಕವನ್ನು ಸರಿಯಾದ ಮಾಧ್ಯಮವನ್ನಾಗಿ ಮಾಡಿಕೊಳ್ಳುವುದರಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ್ದ. ಆದರೂ ಎಲಿಜಬೀಥನ್ ನಾಟಕದ ಸ್ವರೂಪ ಅವನ ಕೈಯಲ್ಲಿ ಇನ್ನೂ ಕಚ್ಚಾ ಆಗಿಯೇ ಇತ್ತು. ಆದರೆ ಅದಕ್ಕೆ ಸರಿಯಾದ ಸೂಕ್ಷ್ಮ ಸಂಸ್ಕಾರವನ್ನಿತ್ತು ಬಳಸಿಕೊಳ್ಳಬಹುದಾದ ಹಲವಾರು ಸಾಧ್ಯತೆಗಳಿದ್ದುವು. ಷೇಕ್ಸ್‌ಪಿಯರ್‌ನ ಪ್ರತಿಭೆ ಈ ಸಾಧ್ಯತೆಗಳನ್ನು ಗ್ರಹಿಸಿತು. ಅವುಗಳನ್ನು ಅವನು ಪೂರ್ಣ

ಪ್ರಮಾಣದಲ್ಲಿ ಬಳಸಿಕೊಂಡ. ಅವನ ಕೈಯಲ್ಲಿ ಎಲಿಜಬೀಥನ್ ನಾಟಕ ಆ ಯುಗದ ಎಲ್ಲ ಬಗೆಯ ಅನುಭವಗಳಿಗೆ, ಭಾವಸೂಕ್ಷ್ಮಗಳಿಗೆ ಸರಿಯಾಗಿ ಸ್ಪಂದಿಸಬಲ್ಲ ತಕ್ಕ ವಾಹಕವಾಯಿತು. ಆ ಕಾಲದ ಹಲವು ಲೇಖಕರಿಗೆ ಅಭಿವ್ಯಕ್ತಿಯ ಹಲವು ಹೊಸ ಅವಕಾಶಗಳನ್ನು ತೋರಿಸಿಕೊಟ್ಟಿತು. ಅವರು ಷೇಕ್ಸ್‌ಪಿಯರ್‌ನ ನಾಟಕದ ಸ್ವರೂಪ ವನ್ನು ಒಂದು ವಿಶಾಲ ಚೌಕಟ್ಟನ್ನಾಗಿ ಸ್ವೀಕರಿಸಿ, ಅದರಲ್ಲಿ ತಮಗೆ ಬೇಕಾದ ವೈವಿಧ್ಯ ವನ್ನು ಹುಟ್ಟಿಸಿಕೊಂಡರು. ಇಂಥ ಸಂದರ್ಭದಲ್ಲಿ ಲೇಖಕನಿಗೆ ಸ್ವತಃ ಮಾಡಬೇಕಾದ ಕೆಲಸ ಹೆಚ್ಚಿಗಿರುವುದಿಲ್ಲ. ತನ್ನ ಕೃತಿ ತನ್ನ ಸ್ವಂತದ್ದಾಗುವಂತೆ, ಇತರ ಯಾವದೇ ಲೇಖಕನ ಕೃತಿಗಿಂತಲೂ ಭಿನ್ನವಾಗಿರುವಂತೆ ನೋಡಿಕೊಳ್ಳಲು ಅವಶ್ಯವಾದ ಹೊಂದಾ ಣಿಕೆ–ಬದಲಾವಣೆಗಳನ್ನು ಮಾಡಿಕೊಂಡರೆ ಸಾಕು. ಹೀಗೆ ಪ್ರಯತ್ನದ ಮಿತವ್ಯಯ ಸಾಧ್ಯವಾದಾಗ ಏಕಕಾಲಕ್ಕೆ ಹಲವಾರು ಜನ ಉತ್ತಮ ಲೇಖಕರು ಹುಟ್ಟಿಕೊಳ್ಳಲು ಸಾಧ್ಯ. ಸಾಹಿತ್ಯದಲ್ಲಿ ಸುವರ್ಣಯುಗ ಎಂದು ಕರೆಸಿಕೊಳ್ಳುವ ಕಾಲಾವಧಿಗಳು ಹೆಚ್ಚು ಜನ ಪ್ರತಿಭಾವಂತರನ್ನೇನೂ ಪಡೆದಿರಲಿಲ್ಲ; ಆದರೆ ಬಹಳಷ್ಟು ಪ್ರತಿಭೆ ವ್ಯರ್ಥವಾಗದಂತೆ ನೋಡಿಕೊಂಡವು. ತನ್ನದೇ ಆದ ಸಮರ್ಥ ಅಭಿವ್ಯಕ್ತಿಮಾರ್ಗ ವಿಲ್ಲದ ಯುಗದಲ್ಲಿ ಮೈನರ್ ಲೇಖಕನ ಪ್ರತಿಭೆಯ ವಿಕಾಸಕ್ಕೆ ಅವಕಾಶಗಳು ಬಹಳ ಕಡಿಮೆ. ಅವನ ಶಕ್ತಿಯೆಲ್ಲಾ ಅಭಿವ್ಯಕ್ತಿಮಾರ್ಗದ ಹುಡುಕಾಟದಲ್ಲಿಯೇ ಹೋಗು ತ್ತದೆ. ಯಾವ ಲೇಖಕನಿಗೂ ಹೊಸ ಅಭಿವ್ಯಕ್ತಿಮಾರ್ಗವನ್ನು ಹುಡುಕಿಕೊಂಡು ಅದನ್ನು ಪರಿಪೂರ್ಣವನ್ನಾಗಿಯೂ ಮಾಡುವುದು ಕಷ್ಟದ ಕೆಲಸ. ಅಭಿವ್ಯಕ್ತಿಯ ಮೇಲೆಯೇ ಗಮನವನ್ನು ಕೇಂದ್ರೀಕರಿಸಿದರೆ, ಅನುಭವ ಸಾಮಗ್ರಿಯ ಮೇಲೆ ಸಾಕಷ್ಟು ಗಮನ ಕೊಡಲು ಸಾಧ್ಯವಾಗುವುದಿಲ್ಲ.[2]

ಅನುಕೂಲವಾದ ವಾತಾವರಣದಲ್ಲಿ ಮೈನರ್ ಲೇಖಕರೂ ಕೂಡ ಎಷ್ಟೋ ಸಲ ಉತ್ಕೃಷ್ಟ ಕೃತಿರಚನೆ ಮಾಡಲು ಸಾಧ್ಯ. ಅಷ್ಟೇ ಏಕೆ, ಮೇಜರ್ ಲೇಖಕರ ಕೃತಿಗಳಿಗಿಂತ ಶ್ರೇಷ್ಠವಾದುದನ್ನೂ ಅವರು ಕೊಡಬಲ್ಲರು. ನಮ್ಮ ನವೋದಯದ ಸಣ್ಣ ಕತೆಗಳನ್ನೇ ತೆಗೆದುಕೊಳ್ಳಿ. ಆನಂದರು ಈ ಯುಗದ ಮಹತ್ವದ ಮೈನರ್ ಲೇಖಕರಲ್ಲಿ ಒಬ್ಬರು. ಶ್ರೀನಿವಾಸರು ಹಾಕಿಕೊಟ್ಟ ಪರಂಪರೆಯ ಒಳಗೇ 'ನಾನು ಕೊಂದ ಹುಡುಗಿ'ಯಂಥ ಕಥೆಗಳನ್ನು ಕೊಡಲು ಅವರಿಗೆ ಸಾಧ್ಯವಾಯಿತು. ಈ ಕಥೆ ತನ್ನ ನೈತಿಕ ಬಿಕ್ಕಟ್ಟಿನಲ್ಲಿ, ಶೋಷಣೆಯ ಸೂಕ್ಷ್ಮ ಚಿತ್ರವನ್ನು ಕೊಡುವುದರಲ್ಲಿ, ಸಂಕೀರ್ಣತೆಯಲ್ಲಿ ಶ್ರೀನಿವಾಸರ ಕತೆಗಳಿಗಿಂತಲೂ ಮಹತ್ವದ್ದಾಗಿದೆ. ಇದು ಸಾಹಿತ್ಯ ಸಂಪ್ರದಾಯವೊಂದು ಲೇಖಕರಿಗೆ ಒದಗಿಸುವ ಸೌಲಭ್ಯದ ಕುರುಹಾಗಿದೆ.

ಇನ್ನು ಸಾಮಾನ್ಯ ಲೇಖಕರ ಸ್ಥಿತಿ ಬೇರೆ. ಇವರು ಹೆಚ್ಚಾಗಿ ಅನುಕರಣ ಶೀಲರು. ಮಹತ್ವದ ಮೈನರ್ ಲೇಖಕರಲ್ಲಿರುವ ಅಳವಡಿಕೆಯ ಸಾಮರ್ಥ್ಯವಾಗಲಿ,

---

2. ನೋಡಿ : T. S. Eliot—'The Possibility of a Poetic Drama' in The Sacred Wood

ಸ್ವಂತಿಕೆಯಾಗಲೀ ಇವರಲ್ಲಿರುವುದಿಲ್ಲ. ಹೊಸದಾಗಿ ಆರಂಭವಾಗುವ ಸಾಹಿತ್ಯ ಮಾರ್ಗವನ್ನು ಇವರು ನಾವೀನ್ಯದ ಆಕರ್ಷಣೆಯಿಂದಾಗಿಯೇ ಅನುಸರಿಸುತ್ತಾರೆ. ಹೊಸತನ ಇಂಥವರಲ್ಲಿ ಕೇವಲ ಫ್ಯಾಷನ್ನಾಗುತ್ತದೆ. ಹೊಸ ಸಂಪ್ರದಾಯವೇ ಆಗಲೀ, ಚಳುವಳಿಯೇ ಆಗಲೀ, ತರುಣರನ್ನು ಹೆಚ್ಚಾಗಿ ಆಕರ್ಷಿಸುತ್ತವೆ. ಅವುಗಳ ಆರಂಭದ ಅಬ್ಬರ, ಪ್ರಚಾರಗಳಲ್ಲಿ ತರುಣರ ಉತ್ಸಾಹ, ಹುಮ್ಮಸ್ಸಿನ ದನಿ ಹೆಚ್ಚು ಎತ್ತರವಾಗಿ ಕೇಳುತ್ತದೆ. ಬಹಳ ಬೇಗ ಅಲ್ಲಿ ಅವರಿಗೆ ಮರ್ಯಾದೆಯೂ ಸಿಗುತ್ತದೆ. ಅದಕ್ಕಾಗಿಯೇ, ಯಾವಾಗಲೂ ಪ್ರಚಾರದ ಮುಂಚೂಣಿಯಲ್ಲಿಯೇ ಇರಬೇಕೆನ್ನು ವವರು ಸಾಹಿತ್ಯಮಾರ್ಗಗಳು ಬದಲಾದಂತೆಲ್ಲ, ಏನಾದರೂ ಮಾಡಿ ಸದಾ ಆಳುವ ಪಕ್ಷದಲ್ಲೇ ಇರಬೇಕೆನ್ನುವ ರಾಜಕಾರಣಿಗಳಂತೆ, ತಮ್ಮ ನಿಲುವನ್ನು ಬದಲಾಯಿಸುತ್ತ ಹೋಗುತ್ತಾರೆ. ಒಬ್ಬ ಲೇಖಕನಲ್ಲಿ ಇದು ನೈಜವಾದ ಬೆಳೆವಣಿಗೆಯಾಗಿಯೂ ಇರ ಬಾರದೆಂದಿಲ್ಲ. ಆಗ ಅವನ ಬರವಣಿಗೆ ನೈಜ ಕಾಳಜಿಗಳ ಸಾಹಿತ್ಯವಾಗಿ, ಅವನ ಬದಲಾವಣೆಯ ಅಂತರಿಕ ಹೋರಾಟವನ್ನು ಸಹ ಒಳಗೊಂಡು ಬೆಳೆಯುತ್ತ ಹೋಗು ತ್ತದೆ.

ಹಾಗೆಯೇ ಹೊಸ ಸಾಹಿತ್ಯಮಾರ್ಗಗಳು ತಮ್ಮನ್ನು ತಾವು ಸಮರ್ಥಿಸಿಕೊಳ್ಳು ವುದಕ್ಕಾಗಿ ಹಿಂದಿನ ಸಾಹಿತ್ಯಮಾರ್ಗಗಳಲ್ಲಿಯ ದೌರ್ಬಲ್ಯಗಳನ್ನು ದೊಡ್ಡದು ಮಾಡಿ ತೋರಿಸುವುದೂ, ತಮ್ಮ ಉದ್ದೇಶಗಳನ್ನು ವೈಭವೀಕರಿಸಿ ತೋರಿಸುವುದೂ ಸಾಮಾನ್ಯ ಸಂಗತಿ. ತಾವು ತುಳಿಯುತ್ತಿರುವ ಹಾದಿಯೇ ಸರಿಯಾದದ್ದು, ತಾವು ತಳೆದಿರುವ ಧೋರಣೆಯೊಂದೇ ಬೆಲೆಯುಳ್ಳದ್ದು–ಎಂದು ಸಾರುತ್ತ, ಹಿಂದಿನ ಸಾಹಿತ್ಯ ಸಂಪ್ರದಾಯಗಳಲ್ಲಿಯ ಒಳ್ಳೆಯ ಅಂಶಗಳ ಕಡೆಗೆ ಗಮನ ಹೋಗದ ಹಾಗೆ ಮಾಡಿ ಬಿಡುತ್ತವೆ. ತಮ್ಮಷ್ಟಕ್ಕೆ ತಾವೇ ಸಂಪೂರ್ಣ ಎಂಬ ಭ್ರಮೆಯನ್ನು ಹುಟ್ಟಿಸುತ್ತವೆ. ಮೇಜರ್ ಲೇಖಕ ಸಹಜವಾಗಿಯೇ ಇಂಥ ಸೀಮಿತ ದೃಷ್ಟಿಕೋನವನ್ನು ಮೀರಬಲ್ಲ ಸಾಮರ್ಥ್ಯ ಉಳ್ಳವನು. ತಾನು ಹೊಸದಾಗಿ ಹುಟ್ಟಿಸಿಕೊಳ್ಳುವ ಸಾಹಿತ್ಯಮಾರ್ಗ ದಲ್ಲಿಯೂ, ಹಿಂದಿನ ಸಾಹಿತ್ಯದ ಉಪಯುಕ್ತ ಅಂಶಗಳನ್ನು ಉಳಿಸಿಕೊಳ್ಳುವ ಎಚ್ಚರ ವಹಿಸಿರುತ್ತಾನೆ. ತನ್ನ ಸಾಹಿತ್ಯದ ಹೊರಗೆ ಏನೇ ಹೇಳಲಿ, ಸೃಜನಕ್ರಿಯೆಯಲ್ಲಿ ಅವನ ದೃಷ್ಟಿ ತನ್ನ ಕಾಲದ ತಾತ್ಕಾಲಿಕ ಪ್ರತಿಕ್ರಿಯೆಯನ್ನು ಮೀರಿದ ಅರ್ಥವ್ಯಾಪ್ತಿ ಯನ್ನು ಪಡೆದಿರುತ್ತದೆ. ಉತ್ತಮ ಲೇಖಕರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಈ ಸಮಸ್ಯೆಗೆ ತಮ್ಮದೇ ಆದ ಉತ್ತರ ಹುಡುಕಿಕೊಳ್ಳಬೇಕಾಗುತ್ತದೆ. ಸಾಮಾನ್ಯ ಲೇಖಕರದೇ ಮುಖ್ಯ ಸಮಸ್ಯೆ. ಇವರು ತಮ್ಮ ಸಾಹಿತ್ಯ ಸಂಪ್ರದಾಯಕ್ಕೆ ಜನ್ಮ ಕೊಟ್ಟ ಸಂದರ್ಭದ ತಾತ್ಕಾಲಿಕ ಕ್ಷಣಕ್ಕೆ ಹೆಚ್ಚು ತೀವ್ರವಾಗಿ ಸ್ಪಂದಿಸುತ್ತಾರೆ, ಮತ್ತು ಅದನ್ನು ಅತಿರೇಕಕ್ಕೊಯ್ಯುತ್ತಾರೆ. ಆ ಸಂದರ್ಭದ ತೀವ್ರತೆ ಮುಗಿದ ಮೇಲೆ ಅವರ ಬರವಣಿಗೆ ಕೂಡ ಅರ್ಥ ಕಳೆದುಕೊಂಡು ಬಿಡುತ್ತದೆ.

# ಸಂಶೋಧನೆ ಮತ್ತು ವಿಮರ್ಶೆ

ಡಾ. ಎಂ. ಚಿದಾನಂದಮೂರ್ತಿ

'ಸೃಜನಾತ್ಮಕ ಸಂಶೋಧನೆ' ಯೆಂಬ ಮಾತನ್ನು ಹಲವರು ತಮ್ಮ ಮಾತು ಕತೆಗಳಲ್ಲಿ ಬಳಸುವುದನ್ನು ಕೇಳಿದ್ದೇನೆ, ಆದರೆ ಆ ಮಾತಿನ ಬಳಕೆಯ ವ್ಯಾಪ್ತಿ ಯೇನು ಎಂಬುದರ ಅರಿವು ಹಾಗೆ ಬಳಸುವವರಲ್ಲೆಲ್ಲ ಇದೆಯೇ ಎಂಬ ಸಂದೇಹ ನನಗಿದೆ. ನಾನು ಜ್ಞಾಪಕ ಮಾಡಿಕೊಳ್ಳುವುದಾದರೆ, ಹಾಗೆ ಆ ಮಾತನ್ನು ಬಳಸಿರು ವವರೆಲ್ಲ ಬಹುಮಟ್ಟಿಗೆ ಸಾಹಿತ್ಯದ ಅಭ್ಯಾಸಿಗಳು ಮತ್ತು 'ಸಂಶೋಧನೆ' ಮಾತಿನ ಹಿಂದೆ 'ಸೃಜನಾತ್ಮಕ'ವನ್ನು ತರುವುದರಲ್ಲಿ ಅವರಿಗೆ ಒಂದು ಬಗೆಯ ಸಂತೋಷ ವುಂಟು; ಆ ಪದದ ಜೋಡಣೆಯ ಮೂಲಕ ಅನೇಕರ ಕಣ್ಣಲ್ಲಿ ಅಷ್ಟು ಮಹತ್ವ ದ್ದಲ್ಲದ ಚಟುವಟಿಕೆಯಾದ ಸಂಶೋಧನೆಗೆ ಏನೋ ಒಂದು ಮಾನ್ಯಸ್ಥಾನವನ್ನು ತಂದುಕೊಡುತ್ತಿದ್ದೇವೆ ಎಂಬ ಭಾವನೆ ಇರುವಂತಿದೆ. ಹೀಗೆ ಅಂದುಕೊಳ್ಳುತ್ತಿರು ವುದು ಸ್ವಲ್ಪಮಟ್ಟಿಗೆ ನನ್ನ ಕಲ್ಪನೆಯಿರಬಹುದಾದರೂ, 'ಸೃಜನಾತ್ಮಕ' ಮಾತಿನ ಬಳಕೆಯ ಕಾರಣ ತೀರ ಸ್ಪಷ್ಟವಾಗಿದೆ. ಸಾಹಿತ್ಯದಲ್ಲಿ ಸೃಜನಾತ್ಮಕ ಸಾಹಿತ್ಯ ಮತ್ತು ವಿಮರ್ಶೆ ಎಂಬ ಎರಡು ಚಟುವಟಿಕೆಗಳಿವೆ. ಇವುಗಳಲ್ಲಿ ಪ್ರಾಶಸ್ತ್ಯ ಮೊದಲನೆಯು ದಕ್ಕೆ ಮತ್ತು ಮೊದಲನೆಯದರಲ್ಲಿ ನಿಷ್ಫಲನಾದವನು ಎರಡನೆಯುದಕ್ಕೆ ಕೈಹಾಕುತ್ತಾನೆ. ಎಂಬ ಸ್ವಲ್ಪ ನಿಜವಿರಬಹುದಾದ ದಂತಕತೆಯುಂಟು. ಇವೆರಡರ ಜೊತೆಗೆ, ಸಾಹಿತ್ಯ ದಲ್ಲಿ ಸಂಶೋಧನೆ ಎಂಬುದೂ ಒಂದು ಉಂಟು ತಾನೆ? ಮೇಲೆ ನೋಡಿದಂತೆ, ಸಾಹಿತ್ಯದಲ್ಲಿ ಸೃಜನಾತ್ಮಕ ಮತ್ತು ಸೃಜನಾತ್ಮಕೇತರ (ಅಥವಾ ವಿಮರ್ಶೆ) ಎಂದು ಎರಡು ವಿಭಾಗಗಳನ್ನು ಸಾಹಿತ್ಯಜ್ಞರು ಏರ್ಪಡಿಸಿಕೊಳ್ಳಲು ಬಯಸುತ್ತಿರುವಂತೆ ತೋರುತ್ತದೆ ಮತ್ತು ಅವೆರಡರಲ್ಲಿ ಸೃಜನಾತ್ಮಕ ಭಾಗವೇ ಉತ್ಕೃಷ್ಟವೆಂಬ ಭಾವನೆ ಇರುವಂತೆ ತೋರುತ್ತದೆ.

ಹಾಗೆ ನೋಡಿದರೆ. ಎಲ್ಲ ಸಂಶೋಧನೆಯೂ ಒಂದಲ್ಲ ಒಂದು ರೀತಿಯಲ್ಲಿ ಸೃಜನಾತ್ಮಕವೇ. (ಈ ಮಾತನ್ನು ಹೇಳುವುದರ ಮೂಲಕ ಸಂಶೋಧನೆಗೆ ಒಂದು ಸ್ಥಾನ ಅಥವಾ ಮಹತ್ವವನ್ನು ಕಲ್ಪಿಸಲು ಯತ್ನಿಸುತ್ತಿದ್ದೇನೆಂದು ಯಾರೂ ಭಾವಿಸ

ಬಾರದು) ಕಲೆಗಳ ಹೊರತು ಉಳಿದ ಎಲ್ಲ ಶಿಸ್ತುಗಳಲ್ಲಿ ಸಂಶೋಧನೆಯೊಂದೇ ಮಹತ್ವದ ಚಟುವಟಿಕೆ. ಆ ಶಿಸ್ತುಗಳ ಚಟುವಟಿಕೆಗಳಲ್ಲಿ ಇಲ್ಲವೇ ಸಂಶೋಧಕರಿರುತ್ತಾರೆ, ಇಲ್ಲವೇ ಪಠ್ಯಪುಸ್ತಕ ಲೇಖಕರಿರುತ್ತಾರೆ. ಸಂಶೋಧಕರು ಹೊಸದನ್ನು ಕಾಣುವವರು ಮತ್ತು ತನ್ಮೂಲಕ ಪ್ರಚಲಿತ ಜ್ಞಾನವನ್ನು ಹೆಚ್ಚಿಸುವವರು ಆಯಾ ಕಾಲಕ್ಕೆ ಬೆಳವಣಿಗೆ ಹೊಂದುತ್ತ ಬಂದ ಜ್ಞಾನವನ್ನು ಸಂಗ್ರಹಿಸಿ ಅದನ್ನು ತಿಳಿಗೊಳಿಸಿ ಹೇಳುವವರು ಪಠ್ಯಪುಸ್ತಕ ಲೇಖಕರು. ಇವರಿಬ್ಬರ ಚಟುವಟಿಕೆಗಳೂ ಮಾನ್ಯ ಮತ್ತು ಪರಸ್ಪರ ಪೂರಕಗಳೇ ಆಗಿದ್ದರೂ. ಇವರಿಬ್ಬರಲ್ಲಿ ಸಂಶೋಧಕನಿಗೆ ಹೆಚ್ಚಿನ ಮಾನ್ಯಸ್ಥಾನ ಲಭ್ಯವಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಅರ್ಥಶಾಸ್ತ್ರ, ಸಮಾಜವಿಜ್ಞಾನ, ಮನೋವಿಜ್ಞಾನಗಳಂತಹ ಸಾಮಾಜಿಕ ವಿಜ್ಞಾನಗಳಲ್ಲಿ, ಭೌತವಿಜ್ಞಾನ ರಸಾಯನವಿಜ್ಞಾನಗಳಂತಹ ಭೌತಿಕವಿಜ್ಞಾನಗಳಲ್ಲಾಗಲಿ, ಸಸ್ಯವಿಜ್ಞಾನದಂತಹ ಜೀವವಿಜ್ಞಾನಗಳಲ್ಲಾಗಲಿ ಲೇಖನ ವ್ಯವಸಾಯವನ್ನು ಕೈಗೊಳ್ಳುವವರು ಎರಡು ಬಗೆಯ ಜನ ; ಇಲ್ಲವೇ ಸಂಶೋಧಕರು ಅಥವಾ ಪಠ್ಯಪುಸ್ತಕ ಲೇಖಕರು. [ಬೇಕಾದರೆ 'ಜನಪ್ರಿಯ ಲೇಖಕರು' ಎಂಬ ಒಂದು ವರ್ಗವನ್ನು ಸೇರಿಸಿಕೊಳ್ಳಬಹುದು] ಎಂದರೆ, ಆ ಶಿಸ್ತುಗಳಲ್ಲಿ ಸಂಶೋಧನೆಗೆ ಪ್ರಬಲ ಪ್ರತಿಸ್ಪರ್ಧಿಯ ಮಾತಿರಲಿ, ಪ್ರತಿಸ್ಪರ್ಧಿಯೇ ಇಲ್ಲ, ಇದರಿಂದಾಗಿ, ಆ ಶಿಸ್ತುಗಳಲ್ಲಿ ಸಂಶೋಧಕರು ಮತ್ತು ಸಂಶೋಧನೆಗಳಿಗೆ ಅಗ್ರಸ್ಥಾನವಿದೆ.

ಇದೇ ಮಾತನ್ನು ಸಾಹಿತ್ಯದಂತಹ 'ಸೃಜನಾತ್ಮಕ' ಚಟುವಟಿಕೆಗಳ ಕಲಾಮಾಧ್ಯಮ ಕ್ಷೇತ್ರಗಳಲ್ಲಿ ಹೇಳಲು ಸಾಧ್ಯವಿಲ್ಲ. ಇಲ್ಲಿ ಸಂಶೋಧನೆಗೆ ತೀವ್ರ ಸ್ಪರ್ಧಿಗಳು (ಈ ಮಾತಿನ ಬಗ್ಗೆ ಆಕ್ಷೇಪಿಸುವವರು ಮುಂದೆ ಬರುವ ನನ್ನ ವಿವರಣೆಯನ್ನು ನೋಡಬೇಕು) ಸೃಜನಾತ್ಮಕ ಸಾಹಿತ್ಯ(ಕಾವ್ಯ, ನಾಟಕ, ಕಾದಂಬರಿ, ಸಣ್ಣಕತೆ ಇತ್ಯಾದಿ) ಮತ್ತು ವಿಮರ್ಶೆ. ಸೃಜನಾತ್ಮಕ ಸಾಹಿತ್ಯವು ವ್ಯಕ್ತಿಯ ಅಂತರಂಗದ ಮೂಲ ದ್ರವ್ಯದಿಂದ ಜನಿಸಿ ಬಂದುದಾಗಿದ್ದು, ಅದನ್ನು ಸೃಜಿಸಿದ ಸಾಹಿತಿ ತನ್ನ ಸಾಹಿತ್ಯ ಕೃತಿಗೆ ತನ್ನಿಂದ ಹೊರಗೆ ಏನು ಆಧಾರವೆಂದು ತೋರಿಸಬೇಕಾಗಿಲ್ಲ. ಸಣ್ಣ ಕತೆಯೊಂದನ್ನು ಬರೆದ ಕತೆಗಾರ ತಾನು ಕಂಡ ಜಗತ್ತಿನ ಯಾವುದೋ ಒಂದು ಘಟನೆ ಅಥವಾ ಘಟನೆಗಳನ್ನೇ ಆಧರಿಸಿದ್ದರೂ, ಅವನ ಕೃತಿ ಆ ಘಟನೆಗೆ 'ಪ್ರಾಮಾಣಿಕ'ವಾಗಿರಬೇಕಾಗಿಲ್ಲ, ಮತ್ತು ಅವನ ಕೃತಿಯು ನಿರ್ಮಿತಿಗೆ ಪ್ರೇರಕವಾದ ಘಟನೆಯನ್ನು ಅವನು ಸಾಮಾನ್ಯವಾಗಿ ದಾಖಲು ಮಾಡುವುದಿಲ್ಲ. ದಾಖಲು ಮಾಡಿದರೂ ಅದು ಒಂದು ಘಟನೆ. ಒಂದು ಸಾಹಿತ್ಯ ಕೃತಿಯಾಗಿ ಹೊರಬರುವಾಗ ಏನು ರೂಪಾಂತರವನ್ನು ತಾಳಬಹುದು ಎಂಬುದನ್ನು ಕುರಿತು ಚಿಂತಿಸುವವನಿಗೆ ಒಳ್ಳೆಯ ಸಾಮಗ್ರಿಯಾಗಬಹುದೆ ಹೊರತು ಆ ಸಾಹಿತ್ಯಕೃತಿಯ ಮೌಲ್ಯ ನಿರ್ಣಯಕ್ಕೆ ಸಹಾಯಕವಾಗುವುದಿಲ್ಲ ಮತ್ತು ಕೃತಿಯ ಆಸ್ವಾದನಕ್ಕಂತೂ ಅದು ತೀರ ಅನಗತ್ಯ. (ಮೂಲ ಕೃತಿಯೊಂದರ ವಸ್ತುವಿನ ಆಧಾರದ ಮೇಲೆ ರಚಿತವಾದ ಇನ್ನೊಂದು ಕೃತಿಯ ವಿಷಯಕ್ಕೆ ಇದು ಅನ್ವಯಿಸ

ಲಾರದು), ಒಟ್ಟು ಈ ಚರ್ಚೆಯ ಸಾರಾಂಶವೆಂದರೆ, ಸೃಜನಾತ್ಮಕ ಕಲೆಯನ್ನು ಅದರದೇ ರೀತಿ ನೀತಿಗಳಿಂದ ಪರಿಗಣಿಸುತ್ತೇವೆಯೋ ಹೊರತು, ಅದಕ್ಕೆ ಹೊರಗೆ ನಿಲ್ಲುವ ಅಂಶಗಳ ಜೊತೆ ಅದನ್ನು ಸಂಬಂಧಿಸುವುದಿಲ್ಲ.

ವಿಮರ್ಶೆ ಸೃಜನಾತ್ಮಕ ಸಾಹಿತ್ಯವನ್ನು ಅವಲಂಬಿಸಿದ್ದು. ಅಂತಹ ಸಾಹಿತ್ಯವಿಲ್ಲದಿದ್ದರೆ ವಿಮರ್ಶೆ ಎಂಬುದೇ ಇರಲಾರದು. ವಿಮರ್ಶೆ ಏಕೆ ಎಂಬ ಪ್ರಶ್ನೆಗೆ ಸಾಹಿತ್ಯ ಕೃತಿಯನ್ನು ಹೆಚ್ಚು ಚೆನ್ನಾಗಿ ತಿಳಿದುಕೊಳ್ಳಲು ಎಂಬ ಉತ್ತರದಲ್ಲೇ ಅವರ ಪರಾವಲಂಬಿತ್ವ ಸೂಚಿತವಾಗುತ್ತದೆ. ಒಂದು ಸಾಹಿತ್ಯ ಕೃತಿಯನ್ನು ಬೇರೆ ಬೇರೆ ನಿಲುವುಗಳಿಂದ ವಿಶ್ಲೇಷಿಸಿ ಅದು ಒಂದು ಅನುಭವವನ್ನು ಏಕೆ ತಂದುಕೊಟ್ಟಿತು(ಅಥವಾ ತಂದುಕೊಡಲಿಲ್ಲ) ಕೃತಿಕಾರನ ಉದ್ದೇಶ ಅದರಲ್ಲಿ ಮೂಡಿವೆಯೇ ಇಲ್ಲವೇ ಇವುಗಳನ್ನು ವಿಚಾರ ಮಾಡುವುದಾಗಬಹುದು. ಆ ಕೃತಿಯ ಬೆಲೆಗಟ್ಟುವ ಕೆಲಸವೂ ನಡೆಯಬಹುದು. ಏನೇ ಆಗಲಿ ವಿಮರ್ಶೆ ಸಾಹಿತ್ಯವನ್ನೇ ಅವಲಂಬಿಸಿ ನಡೆಯುವ ಕ್ರಿಯೆ ಎಂಬುದು ಸ್ಪಷ್ಟ. ಸಾಹಿತ್ಯದ ವಲಯಗಳಲ್ಲಿ ಉತ್ಕೃಷ್ಟ ವಿಮರ್ಶೆಗೆ, ವಿಮರ್ಶಕನಿಗೆ ಬೆಲೆಯಿರುವುದಾದರೂ ಯಾರು ಏನೇ ಹೇಳಲಿ ಶ್ರೇಷ್ಠ ಸಾಹಿತ್ಯ ಸಾಹಿತಿಗಳಿಗಿಂತ ಎರಡನೆಯ ಸ್ಥಾನವನ್ನು ಅವಕ್ಕೆ ಕೊಡಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಸಂಶೋಧನೆಯನ್ನು ನೋಡಬೇಕು. ಸಾಹಿತ್ಯದ ಉದ್ದೇಶ ರಸಾನುಭವ. (ಇದನ್ನು ಬೇರೆ ಜ್ಞಾನಗಳಿಗಿಂತ ಭಿನ್ನವಾದ ಒಂದು ವಿಶಿಷ್ಟ ಜ್ಞಾನ, 'ಕಲಾತ್ಮಕ ಜ್ಞಾನ' ಎಂದು ಕರೆದರೂ ತಪ್ಪೇನೂ ಕಾಣದು); ವಿಮರ್ಶೆ ಸಾಹಿತ್ಯದ ಉದ್ದೇಶಕ್ಕೆ ಸಮೀಪವಾದುದೆಂದು ಭಾವಿಸಲಾಗುವುದರಿಂದ ಅವೆರಡೂ ನೇರವಾಗಿ ಪರಸ್ಪರ ಸಂಬಂಧಿಸಿರುವ ಚಟುವಟಿಕೆಗಳೆಂದೇ ಪರಿಗಣಿತವಾಗಿವೆ. ಸಂಶೋಧನೆ ಸಾಹಿತ್ಯದ ಉದ್ದೇಶದಿಂದ ಬಹುದೂರ ನಿಲ್ಲುವುದೆಂಬ ಕಲ್ಪನೆಯೇ ಪ್ರಧಾನವಾಗಿರುವುದರಿಂದ ಅದನ್ನು ಬಹುದೂರವೇ ನಿಲ್ಲಿಸಲಾಗುತ್ತದೆ ಮತ್ತು ಸಾಹಿತ್ಯದ ವಲಯಗಳಲ್ಲಿ ಸಂಶೋಧನೆಗೆ ಅಂತಹ ಆದರದ ಸ್ವಾಗತವಿರುವಂತೆ ಕಾಣುವುದಿಲ್ಲ. ಹಿಂದೆ 'ಸ್ಪರ್ಧಿ'ಗಳ ಮಾತು ಹೇಳುವಾಗ, ಸಂಶೋಧನೆಗೆ ಸಾಹಿತ್ಯ ಮತ್ತು ವಿಮರ್ಶೆಗಳು ಕ್ರೂರ ಶತ್ರುಗಳು ಮತ್ತು ಅವುಗಳಿಂದ ಅದು ಸೋಲನ್ನು ಅನುಭವಿಸಿದೆ ಎಂಬ ಧ್ವನಿಯೂ ಅನುದ್ದೇಶಿತವಾಗಿ ಹೊರಟಿತೋ ಏನೋ ಎಂಬ ಅಳುಕು ನನಗಿರುವುದರಿಂದ ಅದನ್ನು ಸ್ಪಷ್ಟಪಡಿಸುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ. ಸಾಹಿತ್ಯದ ವಲಯಗಳಲ್ಲಿ ಸಾಹಿತ್ಯ ಮತ್ತು ವಿಮರ್ಶೆಗಳಿಗಿರುವ ಪ್ರಾಶಸ್ತ್ಯ ಸಂಶೋಧನೆಗೆ ಇಲ್ಲವೆಂಬುದು ಕನ್ನಡದಲ್ಲಂತೂ ನಿಜ. ಇದು ಸರಿಯೇ, ಅದಕ್ಕೆ ಕಾರಣಗಳೇನು, ಆ ಭಾವನೆ ಇರಲು ಸಂಶೋಧಕರು ತಾವೇ ಎಷ್ಟು ಕಾರಣ ಅಥವಾ ಸಂಶೋಧನೆಯ ಬಗ್ಗೆ ಸರಿಯಾದ ತಿಳಿವಳಿಕೆ ಇಲ್ಲದಿರುವುದು ಎಷ್ಟು ಕಾರಣ ಎನ್ನುವ ಬಗ್ಗೆ ಹೆಚ್ಚಿನ ವಿಚಾರ ಮಾಡಲು. ಸಂಶೋಧಿಸಲು ಅವಕಾಶವುಂಟು. ಕನ್ನಡದಲ್ಲಿ ಕೆಲಸ ಮಾಡಲು

ಬಯಸುವ ವ್ಯಕ್ತಿ ಮೊದಲು ಸಾಹಿತಿಯಾಗಲು ಬಯಸುತ್ತಾನೆ; ವಿಮರ್ಶಕನಾಗಲೂ ಬಯಸುತ್ತಾನೆ. ತಾನೊಬ್ಬ ಸಂಶೋಧಕನಾಗಬೇಕೆಂಬ ಬಯಕೆ ತೀರ ವಿರಳ. ಸಂಶೋಧನೆ ಸಾಹಿತ್ಯದಿಂದ ಪೂರ್ತಿ ಬೇರೆಯಾದ, ಮೂಳೆ ಕಡಿಯುವ ನೀರಸ ಚಟುವಟಿಕೆಯೆಂದೇ ಅನೇಕರ ಕಲ್ಪನೆ. ಸಂಶೋಧನೆ ಉತ್ಕೃಷ್ಟವ್ಯಕ್ತಿಗಳನ್ನು ಹೆಚ್ಚು ಪ್ರಮಾಣದಲ್ಲಿ ತನ್ನೆಡೆಗೆ ಸೆಳೆಯಲು ಅಸಮರ್ಥವಾಗಿ ಬಹಳ ನಷ್ಟವನ್ನು ಅನುಭವಿಸಿದೆ. ಬೇರ ಶಿಸ್ತುಗಳಲ್ಲಿ ಅದ್ವಿತೀಯ ಅತ್ಯಾಧುನಿಕ ಚಟುವಟಿಕೆ ಎನ್ನಿಸಿಕೊಂಡ ಸಂಶೋಧನೆಗೆ ಸಾಹಿತ್ಯ ಕ್ಷೇತ್ರದಲ್ಲಿ ಈ ರೀತಿಯ ದುರ್ಗತಿ ಒದಗಬಾರದಿತ್ತೆಂದು ಯಾರಿಗಾದರೂ ಅನ್ನಿಸುತ್ತದೆ. ಸಮಗ್ರ ದೃಷ್ಟಿಗೆ ಎಲ್ಲವೂ ಸಮಾನ ಗೌರವಕ್ಕೆ ಅರ್ಹವಾದ ಚಟುವಟಿಕೆ ಎಂಬುದು ಒಂದು ಆದರ್ಶ; ಆದರೆ ಇಂದಿನ ವಾಸ್ತವ ಪರಿಸ್ಥಿತಿ ಬೇರೆ.

ಈಗ ವಿಚಾರ ಮಾಡೋಣ. ಸಂಶೋಧನೆ ಸಾಹಿತ್ಯದಿಂದ ಬಹುದೂರ ನಿಲ್ಲುವ ಕ್ರಿಯೆಯೇ? ಅದು ವಿಮರ್ಶೆಯಿಂದ ನಿಜವಾಗಿಯೂ ಬೇರೆಯೇ? ಅದನ್ನು ಕೈಗೊಳ್ಳುವವನು 'ಅ–ಸಾಹಿತಿ'ಯೇ ಆಗಿರಬೇಕೇ, ಅಥವಾ ಕೈಗೊಂಡ 'ಸಾಹಿತಿ'ಯನ್ನು 'ಅ ಸಾಹಿತಿ'ಯನ್ನಾಗಿ ಮಾಡುವಮಾಟಗಾತಿ ಗುಣದಲ್ಲಿಯೇ, ಅದರ ಸಾಹಿತ್ಯವಲಯದಲ್ಲಿ ಸಂಶೋಧನೆ ಸಾಹಿತ್ಯದ ಉದ್ದೇಶದಿಂದ ದೂರನಿಲ್ಲುತ್ತದೆಯೇ ಅಥವಾ ಆ ಉದ್ದೇಶವನ್ನು ಈಡೇರಿಸುವಲ್ಲಿ ಅದೂ ತನ್ನದೇ ಪಾತ್ರವನ್ನು ವಹಿಸುತ್ತದೆಯೇ. ಅಥವಾ, ಈ ಪ್ರಶ್ನೆಗಳೇ ಅನಗತ್ಯವಾಗಿದ್ದು ಸಂಶೋಧನೆಯ ಬಗ್ಗೆ ಒಂದು ಬಗೆಯ ತಪ್ಪು ಕಲ್ಪನೆ ಅಥವಾ ತಪ್ಪು ಅನ್ನಿಸಿಕೆ ಕಾರಣವಾಗಿದೆಯೇ ? ಈ ಪ್ರಶ್ನೆಗಳನ್ನು ಕೇಳಿದಾಗ, ಸಂಶೋಧನೆ ನಿಜವಾಗಿಯೂ ಅಗತ್ಯದ ಗೌರವಾರ್ಹ ಚಟುವಟಿಕೆಯೇ ಎಂದು ಪ್ರಾಮಾಣಿಕವಾಗಿ ಹೇಳುವವರ ಮನಸ್ಸಿನ ಅಂತರಾಳದಲ್ಲಿ ಸಂಶೋಧನೆಯೆಂಬುದು ಅ-ಸಾಹಿತ್ಯಕ ಚಟುವಟಿಕೆಯೆಂದು ಒಂದು ಬಗೆಯ ಸೂಕ್ಷ್ಮ ಅಸಡ್ಡೆಯಿದೆ. 'ಅಸಡ್ಡೆ' ಎಂಬುದಕ್ಕಿಂತ ನಯವಾದ ಇನ್ನೊಂದು ಪದವಿದ್ದಿದ್ದರೆ ಚೆನ್ನಾಗಿತ್ತು; ಸಾಹಿತ್ಯಜ್ಞರಾಗಲಿ, ವಿಮರ್ಶಕರಾಗಲಿ ಸಂಶೋಧಕರನ್ನು ಅಸಡ್ಡೆಯಿಂದ ಕಾಣುತ್ತಾರೆ ಎಂದು ಹೇಳಿದರೆ ತಪ್ಪಾಗುತ್ತದೆ, ಆದರೂ ಅವರಿಗೇ ಗೊತ್ತಿಲ್ಲದಂತೆ ಸಂಶೋಧನೆ ಸಂಶೋಧಕರ ಬಗ್ಗೆ ಒಂದು ಬಗೆಯ ವಿಮುಖತೆ ಇದೆಯೆಂಬುದು ನಿಜ. ನನಗೆ ಆ ಮನೋಭಾವವನ್ನು ಹೇಳಲು ಬೇರೆ ಪದ ಸಿಗುತ್ತಿಲ್ಲ ; ಮತ್ತು ಈ ಮಾತುಗಳನ್ನು ಬರೆಯುವಾಗ ನನಗೆ ಯಾವುದೇ ಅಸಮಾಧಾನವಿಲ್ಲ, ಒಂದು ಸಂಗತಿಯನ್ನು ಮಾತ್ರ ಇಲ್ಲಿ ನಿರೂಪಿಸುತ್ತಿದ್ದೇನೆಯೆಂದು ಭಾವಿಸಬೇಕು.

ಮುಂದಿನ ಮಾತುಗಳಲ್ಲಿ ನಾನು ಸಂಶೋಧನೆಯ ಪರವಾಗಿ ವಕಾಲತ್ತು ಮಾಡಿ ಅದನ್ನು ಉಳಿಸುವ ಯತ್ನವನ್ನು ಮಾಡುತ್ತಿದ್ದೇನೆಂದು ಯಾರೂ ಭಾವಿಸಬಾರದು. ಕೆಲವು ತಪ್ಪು ಕಲ್ಪನೆಗಳನ್ನು ಹೋಗಲಾಡಿಸಲು ಯತ್ನಿಸುತ್ತಿದ್ದೇನೆ ಮತ್ತು ನಾನು

ಹೇಳುವ ಮಾತುಗಳು ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮಾತ್ರ ಎಂಬುದನ್ನು ನೆನಪಿಟ್ಟುಕೊಳ್ಳಬೇಕು. ಏಕೆಂದರೆ, ಸಂಶೋಧನೆ ಎಲ್ಲ ಶಿಸ್ತುಗಳಿಗೂ ಸಂಬಂಧಿಸಿದಂತೆ ನಡೆಯುವ ಒಂದು ಚಟುವಟಿಕೆ. ಸಾಹಿತ್ಯವನ್ನೇ ಸಾಮಗ್ರಿಯಾಗಿಟ್ಟುಕೊಂಡು ಸಾಹಿತ್ಯದ ಉದ್ದೇಶಕ್ಕೆ ಹೊರತಾಗಿ ನಿಲ್ಲುವ ಸಂಶೋಧನೆಗಳೂ ಉಂಟು. ಉದಾಹರಣೆಗೆ, ಸಾಹಿತ್ಯವನ್ನು ಭಾಷಾವಿಜ್ಞಾನಿ, ಜಾನಪದ ಶಾಸ್ತ್ರಜ್ಞ, ಇತಿಹಾಸಕಾರ, ಮನೋವಿಜ್ಞಾನಿಗಳು ತಮ್ಮದೇ ರೀತಿಯಲ್ಲಿ ಆನ್ವಯಿಕವಾಗಿ ಬಳಸಿಕೊಳ್ಳಬಹುದು. ಇಂಥ ಅಧ್ಯಯನಗಳನ್ನು ಗಮನಿಸುವುದರಿಂದ ಸಾಹಿತ್ಯದ ವಿದ್ಯಾರ್ಥಿಗಳಿಗೆ ಲಾಭವುಂಟು. ಈಗಂತೂ ಯಾವುದೇ ಶಿಸ್ತು ತಾನೇ ಸರ್ವತಂತ್ರ ಸ್ವತಂತ್ರವಾಗಿ ಉಳಿಯುತ್ತಿಲ್ಲ. ಸಸ್ಯವಿಜ್ಞಾನಿಗಳೂ ಪಂಪ ಹರಿಹರರನ್ನು ಓದಿ ಲಾಭ ಪಡೆಯಬಲ್ಲರು ಮತ್ತು ಸಸ್ಯವಿಜ್ಞಾನಿಗಳ ಬರಹಗಳಿಂದ ಸಾಹಿತ್ಯದ ವಿದ್ಯಾರ್ಥಿಗಳಿಗೂ ಲಾಭವುಂಟು. ಆ ಎಲ್ಲ ಮಾತುಗಳು ಹಾಗಿರಲಿ: ನಾನು ಹೇಳಬೇಕಾಗಿರುವುದೆಂದರೆ ಸಂಶೋಧನೆ ಎಂಬುದು ಸಾಹಿತ್ಯವನ್ನೇ ವಸ್ತುವಾಗಿ ಮಾಡಿಕೊಂಡು ನಡೆಯಬಲ್ಲ ಒಂದು ಸ್ವತಂತ್ರ ಚಟುವಟಿಕೆ, ಆದರೆ ಸಾಹಿತ್ಯದ ಉದ್ದೇಶಕ್ಕೆ ಅನುಗುಣವಾಗಿಯೂ ಸಂಶೋಧನೆ ಹೇಗೆ ಪ್ರಸ್ತುತವಾಗಿದೆಯೆಂಬುದರ ಕಡೆ ನಾನು ಹೆಚ್ಚು ಗಮನಕೊಡಲು ಪ್ರಯತ್ನಿಸುತ್ತೇನೆ.

ಸಂಶೋಧನೆ ಮತ್ತು ವಿಮರ್ಶೆಗಳು ಮೂಲತಃ ಭಿನ್ನ ಚಟುವಟಿಕೆಗಳೇನೂ ಅಲ್ಲ. ಅವೆರಡೂ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಮತ್ತು ಅರ್ಥೈಸಲು ಪ್ರಯತ್ನಿಸುತ್ತವೆ. ಮತ್ತು ಬಹುತೇಕ ಸಂದರ್ಭಗಳಲ್ಲಿ ಅವುಗಳಲ್ಲಿ ಒಂದನ್ನು ಇನ್ನೊಂದರಿಂದ ಬೇರ್ಪಡಿಸಲಾಗದಷ್ಟು ಹೆಣೆದುಕೊಂಡಿರುತ್ತವೆ ; ಕೆಲವು ಸಾರಿ ಅವೆರಡೂ ಒಂದೇ ಆಗಿರುತ್ತವೆ. ಒಂದನ್ನೊಂದು ಛೇದಿಸಿಕೊಂಡು ಹೋಗುವ ಎರಡು ವೃತ್ತಗಳಲ್ಲಿ ಮಧ್ಯದ ಪ್ರದೇಶ ಎರಡೂ ವೃತ್ತಗಳಿಗೆ ಸೇರಿರುವಂತೆ, ಸಂಶೋಧನೆ ಮತ್ತು ವಿಮರ್ಶೆಗಳಿಗೆ ಸಮಾನವಾಗಿ ಸೇರುವ ಕ್ಷೇತ್ರಗಳಿವೆ. ಒಂದು ಸ್ಪಷ್ಟ ಉದಾಹರಣೆಯೆಂದರೆ ಸಾಹಿತ್ಯ ಚರಿತ್ರೆ. ಯಾವುದೇ ಸಾಹಿತ್ಯದ ಚರಿತ್ರೆ ಬರಿಯ ಸಂಶೋಧನೆಯೂ ಅಲ್ಲ, ಬರಿಯ ವಿಮರ್ಶೆಯೂ ಅಲ್ಲ ; ಅಥವಾ ಅದು ಸಂಶೋಧನೆಯೂ ಹೌದು, ವಿಮರ್ಶೆಯೂ ಹೌದು. ಅದು ಸಂಶೋಧನ ; ಏಕೆಂದರೆ, ಸಾಹಿತ್ಯಕ್ಕೆ ಹಿನ್ನೆಲೆಯಾದ ರಾಜಕೀಯ, ಸಾಮಾಜಿಕ, ಮತೀಯ ಶಕ್ತಿಗಳ ಪರಸ್ಪರ ಪ್ರತಿಕ್ರಿಯೆಗಳು, ಕವಿಕಾಲ ವಿಚಾರಗಳು, ಆಕರಗಳು ಇತ್ಯಾದಿಗಳ ವಿವೇಚನೆ ಅಲ್ಲುಂಟು. ಅದು ವಿಮರ್ಶೆ ; ಏಕೆಂದರೆ, ಕೃತಿಯ ವಿಶ್ಲೇಷಣೆ, ಮೌಲ್ಯನಿರ್ಣಯ ಅಲ್ಲುಂಟು. ಈ ಎಲ್ಲವನ್ನೂ ಒಟ್ಟು ಸಾಹಿತ್ಯದ ಅಖಂಡ ಬೆಳವಣಿಗೆಯ ಜೊತೆ ಸಾವಯವ ಸಂಬಂಧವನ್ನು ಹೊಂದಿರುವಂತೆ ಬಳಸಿಕೊಂಡಿರಲಾಗುತ್ತದೆ. ಮತ್ತು ಅಲ್ಲಿ, ಎಂದರೆ ಸಾಹಿತ್ಯ ಚರಿತ್ರೆಯಲ್ಲಿ ಇದು ಸಂಶೋಧನೆ, ಇದು ವಿಮರ್ಶೆ ಎಂದು ಬೇರ್ಪಡಿಸುವಷ್ಟು ಸಡಿಲವಾಗಿ ಚರ್ಚೆಗಳು ಬಂದಿರುವುದಿಲ್ಲ. ಕಾವ್ಯಮೀಮಾಂಸೆ ಸಂಶೋಧನೆಯೂ ಹೌದು,

ವಿಮರ್ಶೆಯೂ ಹೌದು. ಇಲ್ಲಿ ವಿಶಿಷ್ಟ ಕೃತಿ ಅಥವಾ ಕೃತಿಗಳ ವಿಚಾರಕ್ಕಿಂತ, ಸಾಹಿತ್ಯ ಮೂಡಿ ಬರುವ ರೀತಿ, ಸಾಹಿತ್ಯದ ಲಕ್ಷಣಗಳು, ಭಾಷಿಕ ವಿಶ್ಲೇಷಣೆ, ಅನುಭವದ ಮನೋವೈಜ್ಞಾನಿಕ ಚರ್ಚೆ ಇವೇ ಮೊದಲಾದ ಸಾಮಾನ್ಯ (general)ಸಂಗತಿಗಳ ವಿಚಾರ ನಡೆಯುತ್ತದೆ. ಆದ್ದರಿಂದ ಅದು ಸಂಶೋಧನೆಯೂ ಹೌದು. ಕಾವ್ಯಭಾಷೆಯ ವಿಶ್ಲೇಷಣೆ ವಿಮರ್ಶೆಯೂ ಹೌದು ಎಂಬುದನ್ನು ಗಮನಿಸಿದಾಗ, ಕಾವ್ಯಮೀಮಾಂಸೆ ಒಟ್ಟಾರೆ ಸಂಶೋಧನೆಯೇ ವಿಮರ್ಶೆಯೇ ಎಂಬ ಪ್ರಶ್ನೆಗೆ ತಟಕ್ಕನೆ ಉತ್ತರ ಕೊಡುವುದು ಕಷ್ಟ. ಎರಡೂ ಹೌದು ಅಥವಾ ಎರಡೂ ಅಲ್ಲ ಎಂಬ ಉತ್ತರಗಳಲ್ಲಿ ಒಂದನ್ನು ಅಥವಾ ಎರಡನ್ನೂ ಸಮರ್ಥಿಸಿಕೊಳ್ಳಬಹುದು. ಆದರೆ ಅದು ಸಂಶೋಧನೆಯೇ ಸರಿ ಅಥವಾ ವಿಮರ್ಶೆಯೇ ಸರಿ ಎಂಬ ವಾದಗಳ ವಿರುದ್ಧವಾಗಿ ಬೇಕಾದಷ್ಟು ಮಾತನಾಡಬಹುದು.

ಒಬ್ಬ ಕವಿಯ ಕಾಲ, ದೇಶಗಳ ಚರ್ಚೆ ಸ್ಪಷ್ಟವಾಗಿ ಸಂಶೋಧನೆ ; ಒಂದು ಕೃತಿಯ ವಿಶ್ಲೇಷಣೆ ಸ್ಪಷ್ಟವಾಗಿ ವಿಮರ್ಶೆ, ಸಂಶೋಧನೆ ಮತ್ತು ವಿಮರ್ಶೆಗಳನ್ನು ಹೀಗೆ ಬೇರ್ಪಡಿಸಿಕೊಳ್ಳುವುದು ಅಗತ್ಯ ಮತ್ತು ತರ್ಕಬದ್ಧ. ಆದರೆ ಅಂತಹ ಬೇರ್ಪಾಟನ್ನು ಬಹು ದೂರ ಕೊಂಡೊಯ್ಯುವುದು ಅಪಾಯಕಾರಿ. ಅವೆರಡೂ ಪರಸ್ಪರ ಸಂಧಿಸುವ, ಒಂದರ ಕ್ಷೇತ್ರವನ್ನೊಂದು ಭೇದಿಸಿಕೊಂಡು ಹೋಗುವ, ಎರಡೂ ಬಹಳ ಹತ್ತಿರಕ್ಕೆ ಬರುವ ಮತ್ತು ಎರಡೂ ಒಂದಾಗುವ ಸಂಗತಿಯನ್ನಾಗಲೇ ಹಿಂದೆ ಗುರುತಿಸಲಾಗಿದೆ. ಸಂಶೋಧನೆಯೆಂದರೆ ಕವಿ, ಕಾಲ, ದೇಶ, ಮತ, ಶಬ್ದಾರ್ಥ, ಗ್ರಂಥಸಂಪಾದನೆ ಇವುಗಳ ಚರ್ಚೆ ಮಾತ್ರ ಎಂಬ ತಪ್ಪು ಕಲ್ಪನೆ ಮಾಡಿರುವ ಹಾವಳಿ ಅನೂಹ್ಯ, ಸಂಶೋಧಕರೆಂದರೆ ಆಧುನಿಕತೆಯಿಂದ ದೂರವಾದ, ಒಣ ಸಂಗತಿಗಳನ್ನೇ ಮೆಲುಕುಹಾಕುವ ನೀರಸರು ಎಂಬ ಭಾವನೆ ಇದೆ. ಮೇಲಿನಂತಹ ತಪ್ಪು ಕಲ್ಪನೆಗಳಿಂದಾಗಿ ಸಂಶೋಧನ ಕ್ಷೇತ್ರಕ್ಕೆ ಉತ್ತಮ ಮನಸ್ಸುಗಳು ಪ್ರವೇಶ ಮಾಡಲು ಬಹಳವಾಗಿ ಹಿಂದೇಟುಹಾಕುತ್ತಿವೆ. ನಾನು ಈ ಬಗ್ಗೆ ವಿವರವಾದ ಚರ್ಚೆಗೆ ಹೋಗುವುದಿಲ್ಲ; ಏಕೆಂದರೆ, ಇಲ್ಲೆಲ್ಲ ಸುಲಭ ಕೀರ್ತ್ಯಪೇಕ್ಷೆ, ಕಡಮೆ ಶ್ರಮ ಇತ್ಯಾದಿ ಆಕರ್ಷಣೆಗಳೂ ಸಂಶೋಧನ ಕ್ಷೇತ್ರಕ್ಕೆ ಹಲವರು ಪ್ರವೇಶಿಸುವುದಕ್ಕೆ ಅಡ್ಡಿಯಾಗಿರುವಂತೆ ತೋರುತ್ತದೆ. ನನ್ನ ಮುಖ್ಯ ವಾದವೆಂದರೆ, ಕಾರಣಗಳು ಏನೇ ಇರಲಿ, ಅನೇಕ ಶ್ರೇಷ್ಠ ಮನಸ್ಸುಗಳನ್ನು ಕಳೆದುಕೊಂಡಿರುವ ಸಂಶೋಧನಕ್ಷೇತ್ರ ನಷ್ಟಗಳನ್ನು ಅನುಭವಿಸಿದೆ.

ಯಾವುದೇ ಪ್ರಾಚೀನ ಸಾಹಿತ್ಯದ ಸರಿಯಾದ ತಿಳಿವಳಿಕೆಗೆ ಕಾಲ, ದೇಶ, ಮತಗಳ ಚರ್ಚೆ ತೀರ ಅಗತ್ಯ. ಒಬ್ಬ ಕವಿಯ ಕಾಲ ಗೊತ್ತಿಲ್ಲದೆ ಅವನ ಬಗ್ಗೆ ಯಾವುದೇ ಸಾರ್ಥಕ ಚರ್ಚೆಯೂ, ಕೊನೆಗೆ ಸರಿಯಾದ ವಿಮರ್ಶೆಯೂ ಅಸಾಧ್ಯವಾಗುತ್ತದೆ. ಇದಕ್ಕೆ ಒಂದು ಸ್ಪಷ್ಟ ಉದಾಹರಣೆಯನ್ನು ತೆಗೆದುಕೊಳ್ಳುತ್ತೇನೆ, ಹಿಂದಿನ ಕವಿ

ಗಳಲ್ಲಿ ಪಂಪನನ್ನು ಕುರಿತು ನಾವು ಎಷ್ಟೋ ಚರ್ಚೆ ಮಾಡಬಹುದು: ಅವನ ಕಾಲ, ದೇಶ, ಮತ, ರಾಜಾಶ್ರಯ, ವಂಶ, ತಂದೆ ತಾಯಿ ಸೋದರ; ಹುಟ್ಟೂರು, ಸಾಮಾಜಿಕ ಹಿನ್ನೆಲೆ ಇತ್ಯಾದಿಗಳು ಗೊತ್ತಿವೆ. ಅವನ ಕಾವ್ಯಭಾಷೆಯಾದ ಬೆಳ್ವೊಲದ ಕನ್ನಡ ದೂರದ ಆಂಧ್ರದಲ್ಲಿದ್ದ ಪಂಪನಿಗೆ ಕರಗತವಾದ ಬಗೆ ಹೇಗೆ ಎಂಬುದನ್ನು ವಿವರಿಸುವ ಸ್ಥಿತಿಯಲ್ಲಿ ನಾವಿದ್ದೇವೆ. ಆ ಕವಿಯ ಬಗ್ಗೆ ತಿಳಿಯಬೇಕಾದ ಎಷ್ಟೋ ಸಂಗತಿಗಳು ಇನ್ನೂ ಇವೆ ಎಂಬುದು ನಿಜವಾದರೂ ಪಂಪಕವಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನಮ್ಮ ಅದೃಷ್ಟಕ್ಕೆ ಅನಾಥನಾಗಿ ನಿಂತಿಲ್ಲ. ಒಂದು ವೇಳೆ, ಅವನ ಎರಡೂ ಕೃತಿಗಳು ಲಭ್ಯವಾಗಿ, ಅವುಗಳಲ್ಲಿ ಪಂಪನ ಸ್ವಕೀಯ ವೃತ್ತಾಂತ ಒಂದು ಮಾತೂ ಇರಲಿಲ್ಲವೆಂದು ಇಟ್ಟುಕೊಳ್ಳೋಣ. ಪಂಪನ ಕೃತಿಗಳನ್ನು ಕುರಿತಂತೆ ಮಾತನಾಡುವಾಗ ಎಷ್ಟು ಕೈಕಟ್ಟುತ್ತದೆ ಎಂಬುದನ್ನು ಸುಲಭವಾಗಿ ಕಲ್ಪಿಸಿಕೊಳ್ಳಬಹುದು: ಕವಿಯ ಸ್ವಕೀಯ ಸಂಗತಿಗಳು, ಅವನ ಕಾಲದ ಹಿನ್ನೆಲೆ ಇವು ಕವಿಯನ್ನು ಒಂದು ನಿರ್ದಿಷ್ಟ ಪರಿಸರದಲ್ಲಿಟ್ಟು ನೋಡಲು ಅನುವು ಮಾಡಿಕೊಡುತ್ತವೆ. ಮೀನನ್ನೋ ಕಾಡುಪ್ರಾಣಿಯನ್ನೋ ಅವುಗಳ ವಾಸಸ್ಥಾನಗಳಾದ ನೀರಲ್ಲಿ ಕಾಡಲ್ಲಿ ನೋಡಿದಂತಾಗುತ್ತದೆ. ಬರಿಯ ಕೃತಿ ಸಿಕ್ಕು ಕವಿಯ ಬಗ್ಗೆ ಏನೂ ಗೊತ್ತಿರದಿದ್ದರೆ ಮೀನನ್ನೂ ಕಾಡುಪ್ರಾಣಿಯನ್ನೂ ಪ್ರತ್ಯೇಕಿಸಿ ಗಾಜಿನ ಪೆಟ್ಟಿಗೆಯಲ್ಲಿ ಅಥವಾ ಪಂಜರದಲ್ಲಿಟ್ಟು ನೋಡಿದಂತಹ ಅನುಭವವಾಗುತ್ತದೆ. ಇದಕ್ಕೆ ಬಹಳ ಒಳ್ಳೆಯ ಉದಾಹರಣೆ, ವಡ್ಡಾರಾಧನೆ. ಈ ಅತಿಶ್ರೇಷ್ಠ ಪ್ರಾಚೀನ ಗದ್ಯಕೃತಿಯ ಹೆಸರು, ಕವಿ, ಅವನ ಕಾಲ ದೇಶ ಸಮಾಜ ಇವು ಯಾವುವೂ ಸರಿಯಾಗಿ ನಮಗೆ ತಿಳಿದಿಲ್ಲ; ಎಲ್ಲವೂ ಸಂದೇಹಾಸ್ಪದ, ದೊರೆತಿರುವ ಹತ್ತೊಂಬತ್ತು ಕತೆಗಳೊಂದೇ ಖಚಿತ. ವಡ್ಡಾರಾಧನೆಯ ಕಥನ-ಶೈಲಿ, ಗದ್ಯದ ಸೊಗಸಿನ ಬಗ್ಗೆ ಮಾತನಾಡಬಹುದು. ಹೆಚ್ಚಿನ ಆಳ ವ್ಯಾಖ್ಯಾನಗಳಿಗೆ, ಆ ಕೃತಿಯನ್ನು ಅದು ಹುಟ್ಟಿದ ಕಾಲ, ಪರಿಸರದಲ್ಲಿ ಇಟ್ಟು ನೋಡಲು ಅವಕಾಶವಾಗದೆ, ದೊರಕಿದ್ದಷ್ಟಕ್ಕೇ ಸಮಾಧಾನ ಪಟ್ಟುಕೊಂಡು ಸುಮ್ಮನಾಗಬೇಕಾಗಿದೆ. ಪಂಪನ ಬಗ್ಗೆ ಅರ್ಥಪೂರ್ಣ ವಿಮರ್ಶೆ ಸಾಧ್ಯವಾಗಿರುವುದಕ್ಕೆ ವಡ್ಡಾರಾಧನೆಯ ಬಗ್ಗೆ ಅಷ್ಟು ಸಾಧ್ಯವಾಗಿದ್ದಕ್ಕೆ ಕಾರಣಗಳಲ್ಲಿ ವಡ್ಡಾರಾಧನೆಯ ಬಗ್ಗೆ ಹೆಚ್ಚಿನ ಅರಿವು ನಮಗಿಲ್ಲದೇ ಹೋಗಿರುವುದು. ಇತಿಹಾಸ, ಶಾಸನ ಸಂಶೋಧನೆಗಳು ಪಂಪನ ಹಿನ್ನೆಲೆಯನ್ನು ಕೊಟ್ಟಿದೆ; ಗ್ರಂಥಸಂಪಾದನೆ ಪಂಪನ ಕೃತಿಗಳ ತಕ್ಕಮಟ್ಟಿನ ಒಳ್ಳೆಯ ಪಾಠಗಳನ್ನು ಒದಗಿಸಿದೆ; ಜಿನಸೇನ ವ್ಯಾಸರೊಂದಿಗೆ ಮಾಡಿರುವ ತೌಲನ ಅವನ ವೈಶಿಷ್ಟವನ್ನು ಗುರುತಿಸಿದೆ. ವಡ್ಡಾರಾಧನೆಯ ಬಗ್ಗೆ ಹೆಚ್ಚಿನ ಸಾಮಗ್ರಿ ದೊರೆತು ಸಂಶೋಧನೆಗಳು ನಡೆದಲ್ಲಿ ಆ ಕೃತಿಯ ಬಗ್ಗೆಯೂ ಅರ್ಥಪೂರ್ಣ ಸಂವಾದ ಸಾಧ್ಯವಾಗುತ್ತದೆ. ವಡ್ಡಾರಾಧನೆಯ ಒಳ್ಳೆಯ ಪಾಠ ನಮಗೆ ದೊರೆತಿದೆಯೆಂಬ ಸಂಗತಿಯನ್ನು ಬಿಟ್ಟರೆ ಉಳಿದಂತೆ ಎಲ್ಲವೂ ಅತೃಪ್ತಿಕರ.

ಅಂಬಿಗರ ಚೌಡಯ್ಯನ ಯಾವುದೇ ವೈಯಕ್ತಿಕ ವಿವರಗಳು ನಮಗೆ ಲಭ್ಯವಾಗ ದಿರುವುದು, ಕೊನೆಗೆ ಅವನ ಬಗ್ಗೆ ದಂತಕತೆಗಳೂ ದೊರೆಯದಿರುವುದು ಆ ಗಣ್ಯ ವಚನಕಾರರನ್ನು ಓದುಗರಿಂದ ದೂರವಿಟ್ಟಿರಲು ಕಾರಣವಾಗಿದೆ. ಅವನ ಬಗ್ಗೆ ಏನಾದರೂ ಹೆಚ್ಚಿನ ಮಾಹಿತಿ ಸಂಶೋಧನೆಗಳಿಂದ ಲಭ್ಯವಾದುದಾದರೆ, ಅವನ ಅಧ್ಯಯನಕ್ಕೆ ಒಂದು ಹೊಸ ಚಾಲನೆ, ಒಂದು ಹೊಸ ಆಯಾಮ ಲಭ್ಯವಾಗುತ್ತವೆ.

ಸಂಶೋಧನೆ ಮತ್ತು ವಿಮರ್ಶೆಗಳು ಬೌದ್ಧಿಕ ಚಟುವಟಿಕೆಗಳು. ವಿಮರ್ಶೆ ಸಾಹಿತ್ಯವನ್ನು ಅನುಭವದ ರೂಪೀಕರಣವಾಗಿ ನೋಡುತ್ತದೆ, ಮತ್ತು ಸಾಹಿತ್ಯವನ್ನು ಒಂದು ಅನುಭವವಾಗಿ ಅರ್ಥೈಸುವ, ಅರ್ಥೈಸಿಕೊಳ್ಳಲು ಇತರರಿಗೆ ಸಹಾಯಮಾಡುವ ಮತ್ತು ಬೆಲೆಕಟ್ಟುವ ಉದ್ದೇಶಗಳನ್ನು ಹೊಂದಿರುತ್ತದೆ. ವಸ್ತುನಿಷ್ಠ ವಿಮರ್ಶೆ ಎಂಬುದು ಇನ್ನೂ ಸಾಧ್ಯವಾಗಿಲ್ಲ ; ಎಂದರೆ ಒಂದು ಕೃತಿಯ ಸ್ವರೂಪ, ಬೆಲೆ ಇದೇ ಎಂಬುದನ್ನು ಸರ್ವಸಮ್ಮತ ರೀತಿಯಲ್ಲಿ ಹೇಳುವಂತಹ ಸೂತ್ರಗಳು ಇನ್ನೂ ಹುಟ್ಟಿ ಕೊಂಡಿಲ್ಲ. ಅಂತಹ ಸೂತ್ರಗಳನ್ನು ರೂಪಿಸುವುದು ಒಂದು ರೀತಿಯಲ್ಲಿ ಅಸಾಧ್ಯವೂ ಹೌದು ಮತ್ತು ಅದಕ್ಕಿಂತ ಹೆಚ್ಚಾಗಿ ಅನಗತ್ಯವೂ ಹೌದೋ ಏನೋ ! ಒಂದು ಕಲಾ ಕೃತಿ ಒಬ್ಬ ಓದುಗ ಅಥವಾ ನೋಟಕನಿಗೇ ಕಾಲದಿಂದ ಕಾಲಕ್ಕೆ ತನ್ನ ಅರ್ಥಗಳನ್ನು ಬೇರೆ ಬೇರೆ ರೀತಿಗಳಲ್ಲಿ ಬಿಟ್ಟುಕೊಡಲು ಸಾಧ್ಯವಿರುವಾಗ, ಎಂದರೆ ಒಬ್ಬನೇ ವ್ಯಕ್ತಿ ಬೇರೆ ಬೇರೆ ಕಾಲಗಳಲ್ಲಿ ಒಂದೇ ಕೃತಿಯ ಬಗ್ಗೆ ಭಿನ್ನರೀತಿಗಳಲ್ಲಿ ಪ್ರತಿಕ್ರಯಿಸುವ ಸಾಧ್ಯತೆಗಳಿರುವಾಗ, ಭಿನ್ನ ಕಾಲದ ವ್ಯಕ್ತಿಗಳ ಅಥವಾ ಒಂದೇ ಕಾಲದ ಭಿನ್ನ ವ್ಯಕ್ತಿ ಗಳ ಪ್ರತಿಕ್ರಿಯೆಗಳೂ ಭಿನ್ನವಾಗಿರುವುದು ಸಾಧ್ಯ ; ಸಾಧ್ಯ ಮಾತ್ರವಲ್ಲ, ಅದೇ ವಾಸ್ತವ ಸಂಗತಿ. ಹೀಗೆ ಭಿನ್ನವಾಗುವುದು ಸಾಹಿತ್ಯದ ಉದ್ದೇಶದ ದೃಷ್ಟಿಯಿಂದ ಒಂದು ಕೊರತೆ ಎನ್ನಿಸುವುದಿಲ್ಲ.

ಸಂಶೋಧನೆ ಸಾಹಿತ್ಯ ಕೃತಿಯನ್ನು ಒಂದು ದಾಖಲೆಯಾಗಿ ನೋಡುತ್ತದೆ. ವಿಮರ್ಶೆಯಂತೆಯೇ ಸಂಶೋಧನೆಯ ಗುರಿಯೂ ಸಾಹಿತ್ಯವನ್ನು ಬೇರೆ ಬೇರೆ ನಿಲುವು ಗಳಿಂದ ದೀಪ್ತವಾಗುವಂತೆ ಮಾಡುವುದು. ಹೀಗೆ ಮಾಡುವಲ್ಲಿ, ಅದರ ರೀತಿ ವಸ್ತು ನಿಷ್ಠವಾಗಿರುತ್ತದೆ. ಅದು ನೀಡುವ ಹೇಳಿಕೆ ಸರ್ವಸಮ್ಮತವಾಗಿರಬೇಕು. ಹಾಗೆ ಸರ್ವಸಮ್ಮತವಾಗಿರದಿದ್ದರೆ ಅದನ್ನೂ ಅಲ್ಲೇ ಸೂಚಿಸಬೇಕು. ಎಂದರೆ, ಅದರ ಫಲಿತಾಂಶಗಳನ್ನು ಇತರರು ಪರೀಕ್ಷಿಸಿ ತಾಳೆ ನೋಡಲು (verify) ಬರುತ್ತದೆ. ತಾತ್ವಿಕವಾಗಿ (theoretically) ಹೇಳುವುದಾದರೆ, ಸಾಕ್ಷ್ಯಾಧಾರಗಳು ಒಬ್ಬನಿಗೆ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಲು ಅನುವು ಮಾಡಿಕೊಟ್ಟರೆ ಅದೇ ಸಾಕ್ಷ್ಯಾಧಾರ ಗಳು ಇನ್ನೊಬ್ಬ ಸಂಶೋಧಕನಿಗೂ ಅದೇ ತೀರ್ಮಾನಕ್ಕೆ ಬರಲು ಅನುವುಮಾಡಿ ಕೊಡುತ್ತವೆ. (ಸಾಕ್ಷ್ಯಾಧಾರಗಳು ವಿಶ್ವಾಸ ಪಾತ್ರವಾಗಿರಬೇಕು, ಅಷ್ಟೇ). ಎಂದರೆ, ಒಂದೇ ಬಗೆಯ ಸಾಕ್ಷ್ಯಾಧಾರಗಳನ್ನು ಇಟ್ಟುಕೊಂಡು ಇಬ್ಬರು ಸಂಶೋಧಕರು ಎರಡು ಬಗೆಯ ತೀರ್ಮಾನಗಳಿಗೆ ಬರಲು ಸಾಧ್ಯವಾಗದು. ಇದು, ಮೇಲೆ ಸೂಚಿಸಿದಂತೆ

ತತ್ವ (theory) , ಮತ್ತು ಬಹುತೇಕವಾಗಿ ಸಂಶೋಧನೆಯ ರೀತಿ ಎಂದರೆ ಅದೇ. ಆದರೆ ಇಲ್ಲೂ ಅಪವಾದಗಳುಂಟು, ಮತ್ತು ಒಂದೇ ಬಗೆಯ ಸಾಕ್ಷ್ಯಾಧಾರಗಳನ್ನು ಭಿನ್ನ ರೀತಿಯಲ್ಲಿ ನೋಡಿ ವ್ಯಾಖ್ಯಾನಿಸುವುದೂ ಸಾಧ್ಯ. ಆದರೆ ವಿಮರ್ಶೆಯಲ್ಲಿರುವಂತೆ ವೈಯಕ್ತಿಕವಾದ ಅನ್ನಿಸಿಕೆಗಳಿಗೆ ಇಲ್ಲಿ ಸ್ಥಾನವಿಲ್ಲ. ಇದು ಆದರ್ಶ ಮತ್ತು ಇದನ್ನು ಸಾಧಿಸಿದಷ್ಟು ಒಬ್ಬನು ಶ್ರೇಷ್ಠ ಸಂಶೋಧಕನೆನಿಸಿಕೊಳ್ಳುತ್ತಾನೆ.

ಸಂಶೋಧನ ಚಟುವಟಿಕೆ ವಿಮರ್ಶೆಯಿಂದ ಸ್ವತಂತ್ರವಾಗಿ ನಡೆಯುತ್ತದೆ. ಎಂದರೆ, ಸಂಶೋಧಕನಿಗೆ ವಿಮರ್ಶೆಯ ಪರಿಚಯ ಇರಬಹುದು, ಇಲ್ಲದಿರಬಹುದು. ಅವನಿಗೆ ವಿಮರ್ಶೆಯ ಪರಿಚಯವಿದ್ದರೆ ಅವನ ಸಂಶೋಧನೆಗೆ ಲಾಭವೇ ಸರಿ, ಏಕೆಂದರೆ ಸಂಶೋಧಕನಿಗೆ ಯಾವುದು ಬೇಕು ಬೇಡ ಎಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಆದರೆ ಅವನ ಚಟುವಟಿಕೆ ವಿಮರ್ಶೆಯ ಸಹಾಯವಿಲ್ಲದೆಯೇ ನಡೆಯಬಲ್ಲುದು. ಆದರೆ, ಸಂಶೋಧನೆಯ ಸಹಾಯವಿಲ್ಲದೆ ನಡೆಯುವ ವಿಮರ್ಶೆಯ ಚಟುವಟಿಕೆಯನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಒಂದು ಕೃತಿಯ ಶುದ್ಧ ಪಾಠದಿಂದ ಹಿಡಿದು ಆ ಕೃತಿಯ ಹಿನ್ನೆಲೆಯ ಸಮಸ್ತದವರೆಗೆ ಆ ಕೃತಿಯ ಅಭ್ಯಾಸಕ್ಕೆ ಬೇಕಾದ ಎಲ್ಲ ಸಾಮಗ್ರಿ ಸಂಶೋಧನೆ ಕಾರ್ಖಾನೆಯಿಂದ ಸರಬರಾಜಾಗಬೇಕಾಗುತ್ತದೆ. ಸಂಶೋಧನೆಯ ಒಂದು ಹೊಸ ಶೋಧ ವಿಮರ್ಶೆಯ ಒಂದು ಹೊಸ ನೋಟಕ್ಕೆ ಕಾರಣವಾಗಬಹುದು. ಇಲ್ಲಿ ಸಂಶೋಧನೆಯ ಮೇಲ್ಮೆಯನ್ನು ನಾನು ಸ್ಥಾಪಿಸಲು ಯತ್ನಿಸುತ್ತಿದ್ದೇನೆಂದು ಯಾರಾದರೂ ಭಾವಿಸಿದರೆ ಅದು ತೀರ ತಪ್ಪು. ಮೇಲು ಕೀಳುಗಳ ಪ್ರಶ್ನೆಗಿಂತ ಯಾವುದು ಮೊದಲು ಯಾವುದು ಅನಂತರ ಅಥವಾ ಯಾವು ಯಾವುದು ಏನೇನು ಎಂಬುದು ಮಾತ್ರ ಇಲ್ಲಿ ಮುಖ್ಯ ಪ್ರಶ್ನೆ. ವಿಮರ್ಶೆಯ ಹೊಸ ನಿಲುವುಗಳಿಂದ ಸಂಶೋಧನೆಯ ಚಟುವಟಿಕೆಯ ಮೇಲೆ ಯಾವುದೇ ಪರಿಣಾಮವೂ ಆಗುವುದಿಲ್ಲ ; ಏಕೆಂದರೆ ಸಂಶೋಧನೆ ವಿಮರ್ಶೆಯಿಂದ ಸ್ವತಂತ್ರವಾದ ಚಟುವಟಿಕೆ. ಆದರೆ, ಹೊಸ ಸಂಶೋಧನೆಗಳು ಒಂದು ಕೃತಿಯನ್ನು ನೋಡುವ ನಿಲುವನ್ನು ಬದಲಾಯಿಸಬಲ್ಲುವು. ಎಂದರೆ, ಯಾವುದೇ ವಿಮರ್ಶೆ ಕಾಲದಿಂದ ಕಾಲಕ್ಕೆ ನಡೆಯುವ ಶೋಧಗಳನ್ನು ಗುರುತಿಸುತ್ತ, ಅಲ್ಲಿಂದ ಲಾಭವನ್ನು ಪಡೆಯುತ್ತಲೇ ಬೆಳೆಯಬೇಕಾಗುತ್ತದೆ. ಒಂದು ಕೃತಿಯನ್ನು ಅಥವಾ ಕವಿಯನ್ನು ಹೆಚ್ಚು ವಿಶದವಾಗಿ ಗ್ರಹಿಸಲು ಸಂಶೋಧನೆ ಒದಗಿಸುವ ಸೂಚನೆಗಳನ್ನು ವಿಮರ್ಶೆ ತೆಗೆದುಕೊಳ್ಳುತ್ತ ಹೋಗುವುದು ಸಹಜವಾದುದೇ.

ಇದಕ್ಕೆ ಕೆಲವು ಉದಾಹರಣೆಗಳನ್ನು ತೆಗೆದುಕೊಳ್ಳುತ್ತೇನೆ. ಪಂಪನ ತಮ್ಮ ಜಿನವಲ್ಲಭನ ಶಾಸನ ದೊರೆತು, ಪಂಪನ ತಾಯಿ ಧಾರವಾಡ ಜಿಲ್ಲೆಯ ಅಣ್ಣಿಗೇರಿಯವಳು ಎಂಬ ಸಂಗತಿ ನೇರವಾಗಿ ಪಂಪನನ್ನು ಕರ್ನಾಟಕಕ್ಕೆ ಸಂಬಂಧಿಸುತ್ತದೆ, ಮತ್ತು ತನ್ನ ಕಾವ್ಯದ ಭಾಷೆ ಪುಲಿಗೆರೆಯ ಕನ್ನಡ ಎಂಬ ಅವನದೇ ಹೇಳಿಕೆ ಇದ್ದಕ್ಕಿದ್ದಂತೆ

ಅರ್ಥಪೂರ್ಣವಾಗುತ್ತದೆ. ಪಂಪನ ಭಾಷೆಯನ್ನು ಕುರಿತು ವಿಶ್ಲೇಷಿಸುವವರು ಮೇಲಿನ ಅಂಶವನ್ನು ಗಮನಿಸದಿರಲು ಸಾಧ್ಯವೇ ಇಲ್ಲ. ಹನ್ನೊಂದನೆಯ ಶತಮಾನ ದಲ್ಲಿ, ಅದರಲ್ಲೂ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಬ್ರಾಹ್ಮಣರಿಗೆ ಮತ್ತು ಅಗ್ರಹಾರಗಳಿಗೆ ಹಿಂದೆಂದೂ ಇಲ್ಲದಷ್ಟು ಹೆಚ್ಚಿನ ದತ್ತಿ, ಅಧಿಕಾರಗಳು, ರಾಜಕೀಯ ಹುದ್ದೆಗಳು ದೊರಕಿದುವು ಎನ್ನುವ ಶೋಧ ಮುಂದಿನ ಶತಮಾನದಲ್ಲಿ ನಡೆದ ವೀರ ಶೈವ ಚಳುವಳಿಯ ವ್ಯಾಖ್ಯಾನಕ್ಕೆ ಎಷ್ಟು ಒಳ್ಳೆಯ ಸೂಚನೆಗಳನ್ನು ಕೊಡುತ್ತದೆ! ಅಲ್ಲಮ ಸಾಮಾನ್ಯ ಮನೆತನವೊಂದರಲ್ಲಿ, ಬಹುಶಃ ಶೂದ್ರ ಜಾತಿಯಲ್ಲಿ ಹುಟ್ಟಿಬಂದ ಕಲಾವಿದನೆನ್ನುವ ಸಂಗತಿ ಅವನ ವಚನಗಳನ್ನು ಬೇರೊಂದು ಸ್ತರದಲ್ಲಿ ನಿಲ್ಲಿಸುತ್ತದೆ: 'ಎನಗೆಯೂ ಗೋಗೆಶ್ವರ ಲಿಂಗಕ್ಕೆಯೂ ಎತ್ತಣಿಂದೆತ್ತಣ ಸಂಬಂಧವಯ್ಯಾ' ಎಂಬ ಅವನ ಉದ್ಗಾರ ಸ್ವಾಭಾವಿಕವಾದುದೆನ್ನಿಸುತ್ತದೆ. (ಶೂದ್ರನಾದ ಅವನಿಗೆ ಅನಿಮಿಷ ನಿಂದ ಇಷ್ಟಲಿಂಗಪ್ರಾಪ್ತಿ ಒಂದು ನಂಬಲೂ ಸಾಧ್ಯವಿಲ್ಲದ ಘಟನೆ!). ದೇವರ ದಾಸಿಮಯ್ಯ ಬೇರೆ. ಜೇಡರ ದಾಸಿಮಯ್ಯ ಬೇರೆ. ಜೇಡರ ದಾಸಿಮಯ್ಯ ಬಸವನ ಹಿರಿಯ ಸಮಕಾಲೀನನಾದ ವಚನಕಾರ ಎಂಬ ಈಚಿನ ಶೋಧ ದಾಸಿಮಯ್ಯನನ್ನು ವಚನ ಚಳುವಳಿಯ ಕಕ್ಷೆಯೊಳಕ್ಕೆ ನಿಲ್ಲಿಸುತ್ತದೆ. 'ಉಳ್ಳವರು ಶಿವಾಲಯವ ಮಾಡು ವರು...' ಎಂಬ ಬಸವನ ವಚನಕ್ಕೆ ಆ ಶತಮಾನದ ಲಕುಲೀಶ-ಪಾಶುಪತ ಸಂಪ್ರ ದಾಯದ ಭದ್ರಕೋಟೆಯಂತಿದ್ದ ದೇವಾಲಯ ಸಂಪ್ರದಾಯದ ಸಹಾಯವಿಲ್ಲದೆ ಅರ್ಥೈಸಲು ಸಾಧ್ಯವೇ ಇಲ್ಲ. ಎಂದರೆ, ಸಂಶೋಧನೆ ಉದ್ದಕ್ಕೂ ಸಾಹಿತ್ಯದ ಮೇಲೆ ಬಿಡು ಬೆಳಕನ್ನು ಚೆಲ್ಲುತ್ತಾ ಹೋಗುವುದರಿಂದ ಸಾಹಿತ್ಯವು ಹೆಚ್ಚು ಅರ್ಥಪೂರ್ಣ ವಾಗುತ್ತಾ ಹೋಗುತ್ತದೆ.

ಆದರೆ, ಸಾಹಿತ್ಯ ಅರ್ಥಪೂರ್ಣವಾಗಲಿ ಎಂಬ ಉದ್ದೇಶವನ್ನಿಟ್ಟುಕೊಂಡು ಸಂಶೋಧನೆ ಹೊರಡುವುದಿಲ್ಲ. ಈ ಮಾತನ್ನು ನಾನು ಸ್ಪಷ್ಟಪಡಿಸದಿದ್ದರೆ ಅಪಾರ್ಥಕ್ಕೆ ಎಡೆಮಾಡಿಕೊಡಬಹುದು. ಸಂಶೋಧನೆಯ ಉದ್ದೇಶ ಹೊಸ ಜ್ಞಾನ, ಹೊಸ ನೋಟ. ವಾಸ್ತವವನ್ನು ಅದು ಎತ್ತಿ ತೋರಿಸುತ್ತದೆ ಮತ್ತು ಹಾಗೆ ತೋರಿಸುವುದರಿಂದ ಏನು ಪರಿಣಾಮ ಆಗುತ್ತದೆ, ಅಥವಾ ಪ್ರಯೋಜನವೇನು ಎಂಬ ಪ್ರಶ್ನೆ ಸಂಶೋಧಕನಿಗೆ ಅಪ್ರಸ್ತುತವಾಗುತ್ತದೆ. ತನ್ನ ಸಂಶೋಧನೆಯಿಂದ ಸಾಹಿತ್ಯ ವಿಮರ್ಶೆಗೆ, ಅಥವಾ ಸಾಹಿತ್ಯದ ಮೆಚ್ಚುಗೆಗೆ ಲಾಭವಾದರೆ ಅವನು ಸಂತೋಷಪಡದಷ್ಟು ದಡ್ಡನೇನೂ ಅವನಲ್ಲ. ಅವನ ಸಂತೋಷ ಅವನ ಸಂಶೋಧ ನೆಯ ಫಲಿತಾಂಶದ ಪರಿಣಾಮದ ಬಳಿಕದ್ದು. ಆದರೆ ಅವನು ಮೊದಲೇ ಅಂತಹ ನಿರ್ದಿಷ್ಟ ಉದ್ದೇಶವನ್ನಿಟ್ಟುಕೊಂಡು ಹೊರಡುವುದಿಲ್ಲ ಅಥವಾ ಹೊರಡಬೇಕಾಗಿಲ್ಲ ಎಂಬುದು ಮುಖ್ಯ. ಅವನ ಉದ್ದೇಶ ಸತ್ಯವನ್ನು, ಸತ್ಯವೊಂದನ್ನೇ ಕಾಣುವು ದಾಗಿದೆ.

ಸಂಶೋಧನೆಯ ಆರಾಧ್ಯ ದೈವ ಸತ್ಯದ ಸೌಂದರ್ಯ : ವಿಮರ್ಶೆಯ ಆರಾಧ್ಯ ದೈವ ಸೌಂದರ್ಯದ ಸತ್ಯ, ಸತ್ಯದ ಸೌಂದರ್ಯ, ಸೌಂದರ್ಯದ ಸತ್ಯಗಳು ಕೇವಲ ಮಾತಿನ ಸ್ತರದಲ್ಲಿಮಾತ್ರವಲ್ಲದೆ, ಒಳ ತಿರುಳಿನಲ್ಲೂ ಒಂದರ ಜೊತೆ ಒಂದು ಸೇರಿ ಹೋಗುತ್ತವೆ ಎಂಬುದನ್ನು ಗಮನಿಸಬೇಕು.

ವಿಮರ್ಶೆ ಮತ್ತು ಸಂಶೋಧನೆಗಳು ಮೂಲತಃ ಬೇರೆ ಬೇರೆಯೇ ಆದ ಚಟುವಟಿಕೆಗಳಾಗಿ ತೋರುವುದಿಲ್ಲ. ಅವೆರಡಕ್ಕೂ ಇರುವ ವ್ಯತ್ಯಾಸ ತೋರಿಕೆಯದು ಮತ್ತು ಅನುಕೂಲದ್ದು. ಎರಡರ ವಿಧಾನದಲ್ಲೂ ವಿಶ್ಲೇಷಣೆ, ತಾತ್ಕಾಲಿಕ ನಿಲುವು (Hypothesis) ಪುನರ್ ಪರಿಶೀಲನೆ, ಸಂಯೋಜನೆ (Synthesis) ಉಂಟು. ವಿಮರ್ಶೆ ಒಂದು ಕೃತಿ ಅಥವಾ ಕೃತಿಗಳಿಗೇ ಬದ್ಧವಾಗಿ ನಡೆಯುತ್ತದೆಯೆಂದರೂ ಅದೂ ಕೂಡ ಅವುಗಳಿಂದ ಹೊರತಾಗಿ ನಿಲ್ಲುವ ಎಷ್ಟೋ ಸಾಮಗ್ರಿಯ ಸಹಾಯವನ್ನು ಪಡೆಯುತ್ತದೆ. ಸಂಶೋಧನೆಯಂತೆಯೇ ವಿಮರ್ಶೆಯೂ ತನ್ನ ಹೇಳಿಕೆಗಳು ಸಾರ್ವಕಾಲಿಕ ಸತ್ಯವಾಗಿರಬೇಕೆಂಬ ಬಯಕೆಯನ್ನು, ಅದು ಈಡೇರಲಿ ಬಿಡಲಿ, ಹೊಂದಿರುತ್ತದೆ, ತನ್ನ ವಿಮರ್ಶೆ ತನಗೆ ಮಾತ್ರ ನಿಜ, ಅನ್ಯರಿಗೆ ಅಥವಾ ಅನ್ಯ ಕಾಲಕ್ಕೆ ಅಲ್ಲ ಎಂದು ಯಾವ ವಿಮರ್ಶಕನೂ ಭಾವಿಸುವುದಿಲ್ಲ. ಅತಿ ಶ್ರೇಷ್ಠ ವಿಮರ್ಶೆ ಸಂಶೋಧನೆಯಂತೆ ಎಲ್ಲ ಕಾಲಕ್ಕೂ ಉಳಿಯುವ ಹೇಳಿಕೆಗಳನ್ನೂ ಒಳಗೊಳ್ಳಬಲ್ಲುದು. ಆದರೆ ಎಲ್ಲ ಕಾಲಕ್ಕೂ ನಿಜವಾಗಿರಬೇಕೆಂಬುದೇ ವಿಮರ್ಶೆಯ ಮಾನದಂಡವಲ್ಲ.

ಈ ಮುಂದಿನ ಹೇಳಿಕೆಯನ್ನು ಹಲವರು ಒಪ್ಪುವುದಿಲ್ಲ, ಕೆಲವರು ಪ್ರತಿಭಟಿಸಲೂ ಬಹುದು–ಪ್ರಕ್ರಿಯೆಯನ್ನು (Process) ಗಮನಿಸಿ ಹೇಳುವುದಾದರೆ ಸಾಹಿತ್ಯ, ವಿಮರ್ಶೆ ಮತ್ತು ಸಂಶೋಧನೆಗಳು ತೀರ ಮೂಲದಲ್ಲಿ ಒಂದೇ ಬಗೆಯ ಚಟುವಟಿಕೆಗಳು, ವಿಮರ್ಶೆ ಮತ್ತು ಸಂಶೋಧನೆಗಳಲ್ಲಿ ಅನುಭವದ ಅಥವಾ ವಸ್ತುವಿನ ವಿಶ್ಲೇಷಣೆ (Analysis) ಒಂದು ಘಟ್ಟ; ಬಳಿಕ ಅವುಗಳ ಸಂಯೋಜನೆ (Synthesis) ಇನ್ನೊಂದು ಘಟ್ಟ. ಈ ವಿಶ್ಲೇಷಣೆ ಮತ್ತು ಸಮ್ಮಿಲನಗಳೆರಡೂ ಪ್ರಜ್ಞೆಯ ಸ್ತರದಲ್ಲಿ ನಡೆಯುತ್ತವೆ. ಭಿನ್ನ ಭಿನ್ನ ಮೂಲದಿಂದ ಬಂದ ಬಿಡಿ ಘಟಕಗಳು ಇಲ್ಲಿ ಒಂದು ಸಮಗ್ರವಾಗಿ ಸಂಯೋಜನೆಗೊಳ್ಳುತ್ತವೆ. 'ಸೃಜನಾತ್ಮಕ' ಸಾಹಿತ್ಯದಲ್ಲೂ ಈ ಕ್ರಿಯೆ ಬೇರೊಂದು ಸ್ತರದಲ್ಲಿ, ಪ್ರಜ್ಞೆಯ ಆಚೆಯ ವಲಯದಲ್ಲಿ ನಡೆಯುತ್ತದೆ. ಇಷ್ಟೇ ವ್ಯತ್ಯಾಸ : ಸಾಹಿತ್ಯದಲ್ಲಿ ನಮಗೆ ಸಂಯೋಜನೆಗೊಂಡು ಹೊರಬಂದ ಸಿದ್ಧ ವಸ್ತು ಮುಖ್ಯವಾಗುತ್ತದೆ; ವಿಮರ್ಶೆ, ಸಂಶೋಧನೆಗಳಲ್ಲಿ ಸಿದ್ಧ ವಸ್ತುವಿನಷ್ಟೇ ಅದು ಸಿದ್ಧವಾಗಬೇಕಾದರೆ ಬಳಕೆಗೊಂಡ ಸಾಮಗ್ರಿಗಳೂ ಗಮನಾರ್ಹವಾಗುತ್ತವೆ.

ಹಾಗಿದ್ದರೆ, ಸಾಹಿತ್ಯ, ವಿಮರ್ಶೆ, ಸಂಶೋಧನೆಗಳಿಗೆ ಮೂಲವ್ಯತ್ಯಾಸವಿರುವುದು ಬಾಹ್ಯದಲ್ಲಿ ಎನ್ನಬಹುದೇ ? 'ಸೃಜನಾತ್ಮಕ' ಎಂಬ ವಿಶೇಷಣ ಮೂರಕ್ಕೂ ಅನ್ವಯವಾಗುತ್ತದೆಯೇ ? ಉತ್ತರವೇನೋ 'ಹೌದು' ಎಂದು ಕಾಣುತ್ತದೆ.

ವಿಚಾರಮಾಡಬೇಕು.

# ಸೌಂದರ್ಯಾನುಭೂತಿ

ಡಾ. ಪು. ತಿ. ನರಸಿಂಹಾಚಾರ್

ನೋಡಿದಾಗಲೆಲ್ಲ, ಪರಿಭಾವಿಸಿದಾಗಲೆಲ್ಲ, ಹೊಸ ಹೊಸದಾಗಿ ಕಾಣುವುದು ಸೌಂದರ್ಯದ ಒಂದು ಲಕ್ಷಣವೆಂದು ಪ್ರಾಚೀನರು ಹೇಳಿದ್ದಾರೆ. ಈ ಗುಣ ಅದಕ್ಕೆ ಏತರಿಂದ ಪ್ರಾಪ್ತವಾಗುತ್ತದೆ ? ಅದರ ಸಂಕೀರ್ಣತೆಯಿಂದ, ಅದರ ಅಸಾಧಾರಣತೆಯಿಂದ, ಸರಳತೆಯಲ್ಲಿ ಅದು ಹುದುಗಿಸಿಕೊಂಡಿರುವ ಬಹುಗುಣಸಾಂದ್ರತೆಯಿಂದ. ಅದರ ನೀರೋಟ ಅಂಥದು, ರತ್ನದೊಳವೆಳಗಿನಂತೆ. ಅದಕ್ಕೆ ಬಹುಭಾವ ಮುಖಗಳಿವೆ, ಹೊಳವುಗಳಿವೆ. ಅದು ಕಣ್ಮನಗಳನ್ನು ಅನೇಕ ರೀತಿಗಳಲ್ಲಿ, ಅನೇಕ ಸಮಯಗಳಲ್ಲಿ ಕೋರೈಸಿ ವಿಸ್ಮಯಗೊಳಿಸಿ ತುಷ್ಟಿಗೊಳಿಸಲು ಬಲ್ಲುದು ; ಚಿತ್ತವನ್ನು ಆಲೋಚನೆಗಳತ್ತ ಬೀಸಿ ಒಗೆಯಲು ಬಲ್ಲುದು, ಹೃದಯವನ್ನು ತನ್ನ ಉದಾರವಾದ ಪ್ರಸನ್ನ ಸಂತೋಷದಿಂದ ಆರಾಧಿಸಬಲ್ಲುದು. ವಿಪುಲ ವ್ಯುತ್ಪನ್ನನೂ ಪ್ರೌಢನೂ ಆದ ಶ್ರೀಮಂತ ಚಿತ್ತನ ರಸಸ್ತರವಿಹಾರಿಯಾದ ಪ್ರಜ್ಞೆಯೇ ಸುವಿಲಾಸದಿಂದ ಒಡಲಾಂತಿದೆ ಇಲ್ಲಿ.

ಸೌಂದರ್ಯ ಆಧ್ಯಾತ್ಮಿಕ ಕ್ರಿಯಾಫಲ, ಆತ್ಮಬೋಧೆಯನ್ನು ತರುವಂಥ ವಸ್ತುಮೌಲ್ಯ. ಒಂದೇ ಒಂದು ಸಲದ ಸಮೀಕ್ಷೆಯಿಂದ ಅದರ ಸ್ವಾರಸ್ಯವನ್ನೆಲ್ಲ ತಿಳಿಯಲಾಗದುದರಿಂದ ಅದು ನೋಡಿದಾಗಲೆಲ್ಲ ಹೊಸದಾಗಿಯೇ ಕಾಣುತ್ತದೆ.

ಸೌಂದರ್ಯದ ಅಸಾಧಾರಣತೆಯನ್ನು ಕಾಪಾಡುವುದಕ್ಕಾಗಿ ಮಹಾಕವಿಗಳೂ ಕಲೆಗಾರರೂ ಶಿಲ್ಪಿಗಳೂ ಆಗಮಕಲ್ಪಾದಿ ಪ್ರವರ್ತಕರೂ ಆಶ್ಚರ್ಯಕರವಾದ ತಂತ್ರಗಳನ್ನು ಬಳಸಿಕೊಳ್ಳುತ್ತಾರೆ. ರಸಪ್ರತ್ಯಕ್ಷಗಳು ಭವಪ್ರತ್ಯಕ್ಷಗಳಿಗಿಂತ ಬೇರೆ ಎನಿಸುವ ವಿಶಿಷ್ಟ ತಂತ್ರಗಳವು. ಆತ್ಮಕಾಮನನ್ನು ಬೆಳೆಸಿ ಬಲಿಯಿಸಿ ತಣಿಸುವ ಭಾವಗಳ ಉತ್ಪಾದನೆ, ಆಸ್ವಾದ್ಯವಾಗುವಂತೆ ಅವುಗಳ ಮೂರ್ತೀಕರಣ–ಇವಲ್ಲವೆ ರಸಸ್ಥರಾದ ಕವಿ, ಗಾಯಕ, ಕಲೆಗಾರ, ಶಿಲ್ಪಿ, ಕಲ್ಪಕಾರರ ಗುರಿ ? ಈ ನಿರ್ಮಿತಿ ರಸಪ್ರಜ್ಞೆಯ ಅಸಾಧಾರಣ ಪ್ರತಿಭಾ ವ್ಯಾಪಾರವಾದುದರಿಂದ, ಆ ಪ್ರಜ್ಞೆ ತನ್ನ ಭಾವಗಳಿಗೆ ಕೊಡುವ ಒಡಲೂ ಅಸಾಧಾರಣವೇ ಆಗಿರುತ್ತದೆ. ಇಲ್ಲಿ ಬುದ್ಧಿಗೆ ಕುಶಲಪರಿಚಾರಕನ

ಕೆಲಸ ಎಷ್ಟೋ ಅಷ್ಟೆ, ಎಂದರೆ ರಸತಂತ್ರವಾಗಿ ಪ್ರವರ್ತಿಸುವ ಪ್ರತಿಭೆಗೆ ತನ್ನ ವ್ಯುತ್ಪತ್ತಿ ಭಂಡಾರದಿಂದ ಬೇಕಾದ ಸಾಮಗ್ರಿಗಳನ್ನು ಆಯಾ ಸಮಯಕ್ಕೆ ಸರಿಯಾಗಿ ಒದಗಿಸಿಕೊಡುವ ಕೆಲಸ. ನಿನ್ನ ಈ ನಿರ್ಮಾಣ ನಿಸರ್ಗ ಋತಕ್ಕೆ ಹೊಂದುವುದಿಲ್ಲವಲ್ಲ ಎಂದು ಆಕ್ಷೇಪವೆತ್ತಿದರೆ ವೈಜ್ಞಾನಿಕ ಋತಾನುಯಾಯಿಯ ಬುದ್ಧಿ, ಅದಕ್ಕೆ ಪ್ರತಿಯಾಗಿ ನನ್ನ ನಿರ್ಮಿತಿ ಹೊಂದಿಕೊಳ್ಳಬೇಕಾದ ನಿಯಮ ಬೇರೆ ಸ್ತರಕ್ಕೆ ಸೇರಿದುದು, ಇದು ನಿನಗೆ ಅಪರಿಚಿತ, ಈ ವಿಚಿತ್ರ ಸಂಘಟನೆಯನ್ನು ಬೇರೆಲ್ಲೂ ಕಾಣದ ರೂಪಿನಿಂದಲೇ ಬೇರೆ ಮಾತಿನಿಂದಲೇ ಬೇರೆ ಕ್ರಿಯೆಗಳಿಂದಲೇ ನಿರ್ದೇಶಿಸಬೇಕಾದ ಅನಿವಾರ್ಯ ಸಂದರ್ಭ ಬಂದುಬಿಟ್ಟಿದೆ. ನೀನು ಬೆರಗಾಗಿ ಕೈಕಟ್ಟಿ ನಿಲ್ಲುವುದು ಒಳ್ಳೆಯದು ಎನ್ನುತ್ತದೆ. ಆನಂದ ರಸಾನುಯಾಯಿ ಪ್ರತಿಭಾ ನಿರ್ಮಿತಿ ತನ್ನ ವಸ್ತು ಸೌಂದರ್ಯದ ಮುಖೇನ ಕಲಾವಸ್ತು ಋತನಿಯಮಗಳ ಮಾನದಂಡಕ್ಕೆ ಒಳಪಡುವಂಥದಲ್ಲ. ಅದೊಂದು ಹುಚ್ಚಿನ ಪ್ರತೀಕ, ಬುದ್ಧಿಯ ಮೇಲೆ ಆಡುವ ಚಿದ್ಗೋಲ, ಶಿವ-ಪಾರ್ವತೀ ತಾಂಡವ-ಲಾಸ್ಯ. ಎಷ್ಟು ಉನ್ಮಾದವಿದ್ದರೆ ಅಷ್ಟು ಲೇಸು. ಆದರೆ ಇದು ಭಾವ, ಸತ್ತ್ವನಿಯಂತ್ರಿತವಾದ ಉನ್ಮಾದ. ತನಗೆ ಆಧಾರವಾದ ವಸ್ತುವಿನ ವಿಕಸನಕ್ಕೆ ಅಂತರ್-ನಿಯಂತ್ರಕನಾಗಿ ಅಧೇಯ ಭಾವ ವರ್ತಿಸುತ್ತದೆ ಇಲ್ಲಿ. ನಿಸರ್ಗದಲ್ಲಿ ಜೀವ ತನ್ನ ವಿಕಸನಕ್ಕೂ ಇರುವಿಕೆಗೂ ತನ್ನ ಅಂಗಾಂಗ ವಿಶಿಷ್ಟವಾದ ರೂಪವನ್ನು ಹೇಗೆ ಪಡೆಯುತ್ತದೋ, ಹಾಗೆ ಭಾವವೂ ತನ್ನ ವಿಕಸನಕ್ಕೂ ಇರುವಿಕೆಗೂ ತಕ್ಕ ರೂಪವನ್ನು ಪ್ರತಿಭಾ ಸಹಾಯದಿಂದ ಪಡೆಯುಂತಾದರೆ, ಫಲಿತ ರೂಪ ಸುಂದರವೆನ್ನಿಸುತ್ತದೆ. ಅಲ್ಲಿ ನೈಸರ್ಗಿಕ-ನಿಗೂಢ-ಪ್ರಾಣಪ್ರಜ್ಞೆ ವರ್ತಿಸುತ್ತಿದ್ದರೆ, ಇಲ್ಲಿ ಔಚಿತ್ಯರೂಪದಲ್ಲಿ ರಸಪ್ರಜ್ಞೆ ಪ್ರವರ್ತಿಸುತ್ತದೆ. ಈ ಕಾರಕ ರಸಪ್ರಜ್ಞೆ ನಮ್ಮ ಪ್ರಾಚೀನ ಶಿಲ್ಪಿಗಳು ಕೆತ್ತಿದ, ಪ್ರತಿಮಾ ನಿರ್ಮಾಪಕರು ಎರಕಹೊಯ್ದು ನಿರ್ಮಿಸಿದ ಯೋಗಿ ಪ್ರತ್ಯಕ್ಷವೆನಿಸಿರುವ ವೀರಮಂಡಿಯ ಕೊಕ್ಕುಮೂಗಿನ ರೆಕ್ಕೆ ಮೂಡಿರುವ ವಿಹಗೇಶ್ವರ ಗರುಡನನ್ನು ಮೂಲೆಗೆ ಕೂರಿಸಿ ಒಂದು ಹದ್ದಿನ ಮೇಲೆ ಮೊದ್ದುಮೊಗದೊಬ್ಬನನ್ನು ಏರಿಸಿ 'ವಿಷ್ಣು' ಎನ್ನುವುದಿಲ್ಲ. ಒಂದು ವಸ್ತು ಇದು ಚೆಂದವೆನಿಸಿದರಷ್ಟೇ ಸಾಲದು. ನಮ್ಮ ಪ್ರಾಚೀನ ಶಿಲ್ಪಿಗಳಿಗೆ ಗ್ರೀಕರ ಸೌಂದರ್ಯ ಧ್ಯೇಯ ಸೋಂಕದಿದ್ದುದು ನಮ್ಮ ಪುಣ್ಯ ವಿಶೇಷ. ಅವರ ಧ್ಯೇಯ ನಿಸರ್ಗದ ಪರಾಮರ್ಶೆ, ವಿಮರ್ಶೆ, ಟೀಕೆ, ಅಲ್ಲಿ ಸಾಧಾರಣವಾಗಿ ಕಾಣದ, ಆದರ್ಶರೂಪವಾದ ವಸ್ತು ನಿರ್ಮಾಣ, ಇದು ಹೀಗಿದ್ದರೆ ಚೆನ್ನಲ್ಲವೇ ಎಂಬ ಮನೋಭಾವ–ಅವರದು ಲೌಕಿಕ ಧ್ಯೇಯ ಸಾಕ್ಷಾತ್ಕರಣ. ಭಾವಚಾಲಿತವಾದ ಪ್ರತಿಭಾಪ್ರವರ್ತನಕ್ಕೆ, ಸೃಜನ ಕರ್ಮಕ್ಕೆ ಅಲ್ಲಿ ಇಲ್ಲಿನಷ್ಟು ಅವಕಾಶವಿಲ್ಲ, ಸ್ವಾತಂತ್ರ್ಯವಿಲ್ಲ. ಮಾಧ್ಯಮದ ಮೇಲೆ ಪ್ರಭುತ್ವ ಮತ್ತು ಹಸ್ತಕೌಶಲ, ತನ್ಮೂಲವಾದ ಆದರ್ಶನಿರ್ಮಾಣಕ್ಕೆ ಬೇಕಾದ ವಿಮರ್ಶಾ ವೈಚಕ್ಷಣ್ಯ, ತಾರ್ಕಿಕ ಬುದ್ಧಿ—ಇಷ್ಟನ್ನು ಬೇಡುತ್ತದೆ ಆ ಕಲೆ. ಇವುಗಳ ಜತೆಗೆ ರಸಾನುವರ್ತಿಯಾದ ಪ್ರತಿಭಾಪ್ರಸೃತಿಯನ್ನೂ ಬೇಡುತ್ತದೆ ನಮ್ಮ

ಶಿಲ್ಪಕಲೆ. ನಮ್ಮ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ ಯಕ್ಷಗಾನದ ಪಾತ್ರಗಳ ವೇಷ-ಭೂಷಣ-ತಾಳಮೇಳ ನರ್ತನ ಭಾಷಣಗಳಲ್ಲಿ ನಾವು ಇದರ ವೈಭವವನ್ನು ಕಾಣುತ್ತೇವೆ. ನಮ್ಮ ದೇವಾಗಮಗಳಲ್ಲಿ ಕೂಡ ಈ ಭೂಮಿ ಸ್ವರ್ಗದತ್ತ ಉದ್‌ಬಾಹು ವಾಗಬೇಕು, ಸ್ವರ್ಗಭೂಮಿಯತ್ತ ಕೈಚಾಚಬೇಕು. ಈ ಸೀಮೋಲ್ಲಂಘನ, ಮೂರ್ತ ದಲ್ಲಿ ಅಮೂರ್ತ ಸ್ಫುರಿಸುವ ಹಾಗೂ ಅಮೂರ್ತ ಮೂರ್ತದಲ್ಲಿ ರಮಿಸುವ ಪವಾಡ ಸೌಂದರ್ಯ.

ಸಕಲರಿಗೂ ಆಹ್ಲಾದವನ್ನು ತರುವ ಗಣೇಶನಂಥ ಮೂರ್ತಿಯನ್ನು ಒಳಗಣ್ಣಿನಲ್ಲಿ ಕಾಣುವುದೂ ಬಾಹ್ಯದಲ್ಲಿ ಕಂಡರಿಸುವುದೂ ಕಷ್ಟ. ಅದು ಯೋಗಿ ಪ್ರತ್ಯಕ್ಷ ಮೂರ್ತಿ. ಹಾಗೆಯೇ ರಾಮೇಶ್ವರ ಅನಂತಶಯನಗಳಲ್ಲಿನ ದ್ವಾರಪಾಲ ವಿಗ್ರಹಗಳ ಅದ್ಭುತ ಶಿಲ್ಪ ಯೋಗಿಗಳ ಕನಸಿನಲ್ಲಿ ಹಾಯ್ದುಬಂದು ಶಿಲ್ಪಿಗಳ ಅಸಾಮಾನ್ಯ ಕಲಾಕೌಶಲದಲ್ಲಿ ಮೂರ್ತವಾದವು. ಹಾಗೆಯೇ ಸುಂದರೇಶ್ವರ ಎಂಬ ಹೆಸರಿಗೆ ನಟರಾಜ ಶಿಲಾ ಮೂರ್ತಿಯಾಗಿದೆ. ಆತನನ್ನು ಬಳಸಿರುವ ಭೂತಪ್ರೇತಾದಿ ಗಣ, ಅಪ್ಸರೋ ಗಂಧರ್ವವೃಂದ, ಋಷಿ ಮುನಿ ಯೋಗಿಗಳ ಸಮೂಹ, ದೇವ ದೇವತಾ ವ್ಯೂಹ, ಎಡಭಾಗದ ಉಮೆ, ಬಾಹುಗಳಲ್ಲಿ ನೇತ್ರತ್ರಯಗಳಲ್ಲಿ ಜಡೆಯಲ್ಲಿ ಮಾಲೆಗಳಲ್ಲಿ ರಂಜಿಸುವ ವಿವಿಧ ವಸ್ತು ಸಂಕೇತಗಳು, ಅಡಿಯಲ್ಲಿ ಮೆಟ್ಟಿರುವ ಅಂಧಕಾಸುರ, ಜಲತ್‌ಪಾದಗಳು, ಪ್ರಸನ್ನ ಮುಖ–ಒಟ್ಟಿನ ಭಾವ ಸಮುಚ್ಚಯದಿಂದ ಮಡುಗಟ್ಟುವ ಆಚಿಂತ್ಯಾದ್ಭುತ ಸುಸಂಹಿತ ಸತ್-ಚಿತ್-ಆನಂದ ವ್ಯೂಹ ಇದಕ್ಕೆ ಜಗತ್ತೇ ಮೋಹಿಸಿರು ವುದು ಏನಾಶ್ಚರ್ಯ ! ಅಲ್ಲಿ ಯಾವುದು ಅಸುಂದರ, ಯಾವುದು ಅಸಂಗತ, ಯಾವುದು ಮಿತಿ, ಯಾವುದು ಅತಿ ?

ಪರಸ್ಪರ ವಿರುದ್ಧಗಳೇ ಪರಸ್ಪರಾಕರ್ಷಕಗಳಾಗಿ ಪರಿಣಮಿಸಿ ಸುಸಂಘಟಿತವಾಗು ವಾಗ ಸೌಂದರ್ಯ ತನ್ನ ಅತ್ಯಂತ ವೈಭವಸ್ಥಿತಿಯನ್ನು ಮೆರೆಸುತ್ತದೆ. ಹೀಗೆ ಸಂಘಟಿಸುವ ಚೇತಶ್ಶಕ್ತಿ ಅತ್ಯಂತ ನಿರ್ಮಲವೂ ನಿಸ್ಸಂಗವೂ ಸಮರ್ಥವೂ ಆಗಿರ ಬೇಕು. “ನಿರ್ವೈರಸ್ಸರ್ವಭೂತೇಷು” ಎಂದು ಗೀತೆ ವರ್ಣಿಸುವ ಅಂತಶ್ಶಾಂತಿ ಯನ್ನು ಆ ಚೇತನ ಮುಟ್ಟಿರಬೇಕು. ಅದರಿಂದ ಸರ್ವಾದರಣೀಯವಾದ ಸೌಂದರ್ಯಸೃಷ್ಟಿ ಸಾಧ್ಯ.

ಸಮಾಧಾನವುಳ್ಳ ಪ್ರೌಢಮನಸ್ಸು ಮಾತ್ರ ಇಂಥ ಕೃತಿಗಳ ಸಂಪರ್ಕದಿಂದ ಸೌಂದರ್ಯಬೋಧೆಯನ್ನು ಪಡೆಯಬಲ್ಲದು. ಕಷ್ಮಲಯುಕ್ತವಾದ ಮನಸ್ಸಿಗೆ ಸೌಂದರ್ಯ ಗೋಚರಿಸದು. ಸೀತೆಯನ್ನು ಕಳೆದುಕೊಂಡು ಶೋಕವಿಹ್ವಲನಾದ ಶ್ರೀರಾಮನಿಗೆ ಲೋಕದ ಯಾವ ವಸ್ತುವೂ ರುಚಿಸಲಿಲ್ಲ. ಸೌಂದರ್ಯ ಬೋಧೆಯ ವಿಷಯದಲ್ಲಿ ಈ ಕೆಳಗಣ ಶ್ಲೋಕ ತುಂಬ ಮಾರ್ಮಿಕವಾಗಿದೆ :

ಯಾನಿಸ್ಮ ರಮಣೀಯಾನಿ ತಯಾ ಸಹ ಭವಂತಿ ಮೇ
ತಾನ್ಯೇವಾವ ರಮಣೀಯಾನಿ ಜಾಯಂತೇ ಮೇ ತಯಾ ವಿನಾ
(೪-೨-೭೦)

(ಆಕೆಯೊಡನಿದ್ದರೆ ಯಾವವು ರಮಣೀಯವಾಗಿ ಕಾಣುತ್ತಿದ್ದವೋ, ಆಕೆಯಿಲ್ಲದಿದ್ದಾಗ ಅವೇ ಅರಮಣೀಯಾಗಿ ಬಿಡುತ್ತವೆ ನನಗೆ) ಸೌಂದರ್ಯಾನುಭವಕ್ಕೆ ಉದ್ವೇಗರಹಿತ ವಾದ ನೆಮ್ಮದಿ ಮನಸ್ಸು ಅತ್ಯಾವಶ್ಯಕ. ಲೋಕಾನುಭವದಲ್ಲಿ ಕಲ್ಮಶರಹಿತವಾದ ಮನಸ್ಸು ನಮಗೆ ಅಪ್ಪಾಗಿ ಲಭಿಸದೆ, ಲೋಭ ಭಯ ಕಾರ್ಪಣ್ಯಗಳಿಂದ ಅದು ಸದಾ ಪೀಡಿತವಾಗಿರುವುದರಿಂದ, ಈ ಕಶ್ಮಲಗಳು ಕಳೆದಂತಿರುವ ಕೆಲವು ಅಲ್ಪ ಸಮಯಗಳಲ್ಲಿ ನಾವು ಆಗಾಗ ಸೌಂದರ್ಯಬೋಧೆಯನ್ನು ಪಡೆಯಬಲ್ಲವರಾಗಿದ್ದೇವೆ. ಆದರೆ ಜೀವ ಸೊಗಸುವುದಕ್ಕೆ ಇಷ್ಟು ಸಾಕು. ನಾವು ಅಲ್ಪತೃಪ್ತರು.

ಸೌಂದರ್ಯ ಪಾವಿತ್ರ್ಯದ ವೈಭವವನ್ನು ಹೆಚ್ಚಿಸುತ್ತದೆ; ಲೋಭದಲ್ಲಿ ಕಂಗೆಡು ತ್ತದೆ. ಇವೆರಡೂ ಅದರ ಲಯ ಕ್ಷೇತ್ರಗಳು. ಮೊದಲಿನ ಮೈಗರೆತದಲ್ಲಿ ಅದು ತನ್ನ ಉಚ್ಛ್ರಾಯದ ಸಿದ್ಧಿಯನ್ನೇ ಮೆರೆಯುತ್ತದೆ. ಅದರ ಮುಕ್ತಿ ದೆಸೆ ಅದು. ಉಪಾಸ್ಯ ದೈವವೋ ಸಿದ್ಧಾಂತವೋ ಮಹಾಭಾವವೋ ಅದರಲ್ಲಿ ಮೂರ್ತಸೌಂದರ್ಯ ಮೈಗರೆದಿರುವ ಅನುಭವ, ಇದು ರಸಾನುಭವ. ಅದು ಕಳೆಗೆಟ್ಟು ಮೈಗರೆಯುವ ಸ್ಥಿತಿ ಲೋಭದಲ್ಲಿ ಕಾಣುತ್ತೇವೆ, ವ್ಯಾಪಾರಿಗಳ ಹಾಗೂ ಪ್ರತಿಷ್ಠಾ ಕಾಮಿಗಳ ಅಥವಾ ವೃತ್ತಿವಂತರ ಸ್ವತ್ತಾಗುವಾಗ.

ಶುದ್ಧಾತ್ಮರ ಪ್ರೌಢ ಕೃತಿಗಳನ್ನೂ ಕಾರ್ಯಗಳನ್ನೂ ಪರಿಭಾವಿಸಿ ತಾದಾತ್ಮ್ಯ ಹೊಂದುವ ಭೋಗ, ಸೌಂದರ್ಯಾನುಭವ. ಶುದ್ಧಾತ್ಮರೂ ಪ್ರೌಢರೂ ಆಗಿರುವವರಿಗೆ ಮಾತ್ರ ಲಭ್ಯ.

# ಕಾವ್ಯಸೃಷ್ಟಿ: ಪ್ರತಿಭೆ ಮತ್ತು ಸ್ಫೂರ್ತಿ

**ಡಾ. ದೇವೇಂದ್ರಕುಮಾರ ಹಕಾರಿ**

ಪ್ರತಿಭೆ ಮತ್ತು ಸ್ಫೂರ್ತಿ ಸೃಜನಶೀಲತೆಯ ಮುಖ್ಯ ಲಕ್ಷಣಗಳು, ಸ್ವೋಪಜ್ಞತೆಯ ಮೂಲ ಕಾರಣಗಳು. ಸೃಜನಶೀಲತೆ ಮತ್ತು ಸ್ವೋಪಜ್ಞತೆಗಳು ಸಾರ್ಥಕಗೊಳ್ಳುವುದು ಸೌಂದರ್ಯಸೃಷ್ಟಿಯಲ್ಲಿ. ಆದುದರಿಂದ ಜೀವನದ ಎಲ್ಲ ಸೃಷ್ಟ್ಯಾತ್ಮಕ ಕ್ರಿಯೆಗಳಿಗೂ ಪ್ರತಿಭೆ ಮತ್ತು ಸ್ಫೂರ್ತಿಗಳಿಂದಲೇ ಅಪೂರ್ವ ಸಿದ್ಧಿ ಪ್ರಾಪ್ತವಾಗುತ್ತದೆ.

ಸೌಂದರ್ಯ ಎನ್ನುವುದು ಒಂದು ಅಮೂರ್ತ ಪರಿಕಲ್ಪನೆ. ಅನುಭವಗಮ್ಯವಾದ ಸೌಂದರ್ಯವನ್ನು ಮೂರ್ತೀಕರಣಗೊಳಿಸಲು ಮಾನವನು ಅನಾದಿಕಾಲದಿಂದ ಕೈಗೊಂಡ ಅಭಿವ್ಯಕ್ತಿ ಮಾಧ್ಯಮಗಳು, ವಿಧಾನಗಳು ಅಗಣಿತ. ಸೌಂದರ್ಯಾಭಿವ್ಯಕ್ತಿಯ ಅನೇಕ ಮಾಧ್ಯಮಗಳಲ್ಲಿ ಕಾವ್ಯ ಒಂದು ಪ್ರಮುಖ ಮಾಧ್ಯಮ. ಕಾವ್ಯ ಮತ್ತು ಕಾವ್ಯೇತರ ಕಲೆಗಳಿಗೆ ಇರುವ ಮಾಧ್ಯಮ ವಿಭಿನ್ನತೆಯನ್ನು ಗಮನಿಸಿದರೂ, ಈ ಎಲ್ಲ ಅಭಿವ್ಯಕ್ತಿ ಪ್ರಕಾರಗಳಲ್ಲಿ ಪಾಲುಗೊಳ್ಳುವ ಸೃಜನಶೀಲ ವ್ಯಕ್ತಿಗಳಿಗೆ ಅಗತ್ಯವಾಗುವ ಪ್ರತಿಭೆ ಮತ್ತು ಸ್ಫೂರ್ತಿಗಳು ಏಕರೂಪವಾಗಿವೆ. ಏಕೆಂದರೆ ಎಲ್ಲ ಸೃಜನಶೀಲ ವ್ಯಕ್ತಿಗಳಿಗೂ ಸೌಂದರ್ಯ ಸೃಷ್ಟಿಯ ಅಭೀಪ್ಸೆಯೇ ಸಮಾನಶೀಲ.

ಕಾವ್ಯಸೃಷ್ಟಿಯ ಕೆಲವು ಮಾರ್ಮಿಕ ವಿಲಕ್ಷಣಗಳ ದೃಷ್ಟಿಯನ್ನು ಗಮನಿಸಿ ಅವುಗಳ ಹಿನ್ನೆಲೆಯಲ್ಲಿ ಪ್ರತಿಭೆ ಮತ್ತು ಸ್ಫೂರ್ತಿಗಳನ್ನು ಕುರಿತು ವಿವೇಚಿಸುವುದು ಇಲ್ಲಿ ಪ್ರಸ್ತುತ. ಈ ದಿಸೆಯಲ್ಲಿ ಗಂಭೀರ ಚಿಂತನೆ ನಡೆಸಿದ ವಿದ್ವಾಂಸ ಕ್ರಿಸ್ಟೋಫರ್ ಕಾಡ್‌ವೆಲ್, ಕಾವ್ಯ, ಸಾಮಾನ್ಯ ಭಾಷೆಯ ಉನ್ನತೀಕರಣ ಎಂದು ಹೇಳುತ್ತ 'ಮಾನವ ಚಿತ್ತ ತೊಡಗಿದ ಅನೇಕ ಅತಿ ಪ್ರಾಚೀನ ಸೌಂದರ್ಯ ಚಟುವಟಿಕೆಗಳಲ್ಲಿ ಕಾವ್ಯ ಒಂದು.[1] ಎನ್ನುತ್ತಾನೆ.

---

1. 'Poetry is one of the earliest aesthetic activities of the human mind' —Christopher Caudwell. 'Illusion and Reality ; p. 11

ಭಾಮಹ ತನ್ನ ಕಾವ್ಯಾಲಂಕಾರದಲ್ಲಿ ಕಾವ್ಯ, ವಿಶಿಷ್ಟತೆ ಪಡೆಯುವುದು ಗ್ರಾಹ್ಯವಾಗುವುದು ಅಲಂಕಾರದಿಂದ; ಸೌಂದರ್ಯವೇ ಅಲಂಕಾರ ; ಮತ್ತು ಅದು ಕಾವ್ಯ ಸೃಷ್ಟಿಗೆ ಅಗತ್ಯ ಎನ್ನುತ್ತಾನೆ. 'ಅಲಂಕ್ರಿಯತೇ ಅನೇನ ಇತಿ ಅಲಂಕಾರಃ' ಸೌಂದರ್ಯಕ್ಕೆ ನಿಮಿತ್ತವಾದ ಕಾರಣ[2] ಸೌಂದರ್ಯದಿಂದಾಗಿ ಕಾವ್ಯಶರೀರ ಹೊಸತನ ಪಡೆಯುತ್ತದೆ ಎನ್ನುವುದು ಆತನ ಮತ.

'ಪಸರಿಸಿದಾ ಬಗೆ ಮನಮುಂ
ಪೊಸತಾಗೆ ನೆಗಟ್ಚಲರಿಯನಾ ರಚನೆಯೊಳೇಂ......'[3]

ಒಂದು ವಿಶಿಷ್ಟ ಭಾವ ಬಗೆಯಲ್ಲಿ ಹರಡಿಕೊಳ್ಳುತ್ತದೆ ; ಮನವೂ ಹೊಸ ಕಲ್ಪನೆಯಿಂದ ಸ್ಪಂದಿಸುತ್ತದೆ. ಇವು ಕಾವ್ಯರಚನೆಯಲ್ಲಿ ಒಡಮೂಡದಿದ್ದರೆ ಅದರಲ್ಲಿ ಇನ್ನೇನಿರುತ್ತದೆ ? ಕವಿರಾಜಮಾರ್ಗಕಾರನ ಪ್ರಶ್ನೆ.

ಕಾವ್ಯ ಕವಿಕೃತ. ಅದು 'ಸವಿಶೇಷ ಶಬ್ದ ರಚನ'. ವಿವಿಧ ಅರ್ಥಛಾಯೆಗಳನ್ನೊಳಗೊಂಡ ಸುಂದರ ಭಾವಗಳನ್ನು ಪ್ರಕಟಗೊಳಿಸುವ 'ವರ್ತಿತಾಲಂಕಾರ'; ಸೌಂದರ್ಯ ಸಂಚಲನೆ, ಇದನ್ನು ವಿಸ್ತರಿಸಿ ಹೇಳುವುದಾದರೆ : ಶಬ್ದ ಕಾವ್ಯದ ಮೂಲದ್ರವ್ಯ. ವಿಶಿಷ್ಟ ಅರ್ಥ ಧ್ವನಿಗಳನ್ನು ಗ್ರಹಿಸಿದ ಕವಿ ತನ್ನ ಅಭಿವ್ಯಕ್ತಿರೂಪದಲ್ಲಿ ವಿರಳತೆಯನ್ನು ಸಾಧಿಸುತ್ತಾನೆ. ತನ್ನ ಆಯ್ಕೆಯ ವಸ್ತು ಪ್ರತಿರೂಪವನ್ನು ಸೌಂದರ್ಯಸೃಷ್ಟಿಯಲ್ಲಿ ಎರಕಗೊಳಿಸುತ್ತಾನೆ. ಆದ್ದರಿಂದ ಕಾವ್ಯ ಶಬ್ದಾರ್ಥಗಳ ವ್ಯಾಪಾರದಲ್ಲಿ ಹುಟ್ಟಿ, ಧ್ವನಿ ಮೂಲಕ ರಸೋತ್ಪತ್ತಿಯಲ್ಲಿ ಜೀವ ತಳೆದು ಆನಂದಾನುಭೂತಿಯಲ್ಲಿ ಅರಳುತ್ತದೆ ; ಸಫಲಗೊಳ್ಳುತ್ತದೆ. ಹೀಗೆ ಕಾವ್ಯಸೃಷ್ಟಿಯಲ್ಲಿ ವಿರಳತೆ, ನೂತನತೆ ಮತ್ತು ಸೌಂದರ್ಯಗಳನ್ನು ಎರಕಹೊಯ್ಯುವ ಪ್ರತಿಭೆ ಸ್ಫೂರ್ತಿಗಳ ಸಂಬಂಧ ಸ್ವರೂಪಗಳನ್ನು ವಿವೇಚಿಸುವ ಪೂರ್ವದಲ್ಲಿ ಕಾವ್ಯವನ್ನು ಕುರಿತು ಇನ್ನೂ ಕೆಲವು ಅಂಶಗಳ ವಿವರಣೆ ಅಗತ್ಯವೆನಿಸುತ್ತದೆ.

**ವ್ಯಕ್ತಿನಿಷ್ಠ–ವಸ್ತುನಿಷ್ಠ :**

ಸಾಮಾನ್ಯವಾಗಿ ಕಾವ್ಯವನ್ನು ವ್ಯಕ್ತಿನಿಷ್ಠ–ಇದಕ್ಕೆ ಭಾವನಿಷ್ಠ ಎಂದೂ ಹೇಳಬಹುದು–ಮತ್ತು ವಸ್ತುನಿಷ್ಠ ಎಂದು ವಿಂಗಡಿಸಲಾಗುತ್ತದೆ. ಸಾಮೂಹಿಕ ಸೃಷ್ಟಿ ಮತ್ತು ಸಾಮೂಹಿಕ ಮನಃಸೃಷ್ಟಿಯಾದ ಜನಪದ ಕಾವ್ಯ ಶಿಷ್ಟಪದ ಸಾಹಿತ್ಯದ ಈ ವಿಂಗಡಣೆಗೆ ಹೊರತಾಗಿಯೇ ನಿಲ್ಲುತ್ತದೆ. ಶಿಷ್ಟಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಧರ್ಮಪ್ರೇರಣೆಯನ್ನು ತಮ್ಮ ಕಾವ್ಯದೃಷ್ಟಿ, ಧರ್ಮಪ್ರಸರಣವನ್ನು ತಮ್ಮ ಕಾವ್ಯವಸ್ತುವನ್ನಾಗಿ ಇಟ್ಟುಕೊಂಡ ನಮ್ಮ ಕವಿಗಳ ಕಾವ್ಯಗಳಲ್ಲಿ ವ್ಯಕ್ತಿನಿಷ್ಠ

---

2. ಕವಿರಾಜಮಾರ್ಗ : ಸಂ. ಎ. ಸೀತಾರಾಮಯ್ಯ ಪು. ೦೧೨
3. ಕವಿರಾಜಮಾರ್ಗ ಪು. ೧–೧೨

ಅಂಶಗಳು ವಿರಳವಾಗಿಯಾದರೂ ಕಾಣಬರುತ್ತವೆ. ಇವು ಭಾವಗೀತಾತ್ಮಕ ಸ್ವರೂಪದವು. ಪುರಾಣ, ಧರ್ಮಕಾವ್ಯಗಳ ಪ್ರಾಚೀನ ಕಾವ್ಯಯುಗದಲ್ಲಿ ಮೂಡಿ ಬಂದ ಬಹ್ವಂಶ ಕಾವ್ಯಕೃತಿಗಳು, ಪುರಾಣಪುರುಷರ, ಧರ್ಮವಿಭೂತಿಗಳ ಜೀವನ ವನ್ನೇ ವಿಸ್ತಾರಗೊಳಿಸುವಲ್ಲಿ ಸಫಲವಾಗುತ್ತವೆ. ಈ ಕಾವ್ಯಗಳ ಜೊತೆಗೆ ಹುಟ್ಟಿ ಕೊಂಡ ಇನ್ನೊಂದು ಬಗೆಯ ಕಾವ್ಯಗಳಿವೆ. ತಮಗೆ ತಿಳಿದ ಶಾಸ್ತ್ರ, ಸಿದ್ಧಾಂತಗಳ ವಿವರಣೆಗಳಿಗಾಗಿ ಕಾವ್ಯದ ಪ್ರಕಾರವನ್ನು ಬಳಸಿಕೊಂಡು ರಚಿತವಾದ ಕೃತಿಗಳು. ಈ ಬಗೆಯ ಕೃತಿಗಳು ಜೀವನದ ಸೀಮಿತ ಅನುಭವಗಳನ್ನು ಕಾವ್ಯಕ್ಕೆ ತಿರುಗಿಸುತ್ತವೆ. ವ್ಯಾವಹಾರಿಕ ಬುದ್ಧಿಕೌಶಲ, ಶಾಸ್ತ್ರ ವಿವರಗಳನ್ನು ವಿವರಿಸುವ ಮಟ್ಟಿಗೆ ಇವು ಪರಿಮಿತ. ಕಾವ್ಯಲಕ್ಷಣ, ಅಲಂಕಾರ, ವೈದ್ಯ, ಜ್ಯೋತಿಷ್ಯ, ಗಜ, ಹಯ, ಪಾಕ ಶಾಸ್ತ್ರಾದಿಗಳು ಮುಂತಾದವು ಆಯಾ ವಸ್ತುಸಂಗತಿಗಳನ್ನು ಕುರಿತ ಜ್ಞಾನ್ಮಯನ್ನು ವಿವರಿಸಲು ಪದ್ಯಪ್ರಕಾರವನ್ನು ಬಳಸಿಕೊಳ್ಳುತ್ತವೆ. ಅಷ್ಟರಮಟ್ಟಿಗೆ ಇವು ಕಾವ್ಯಗಳೇ. ಭಾಷೆಯ 'ವಾಚ್ಯ'ವೇ ಇದಕ್ಕೆ ಗಮ್ಯ. ಕಾವ್ಯರೂಪದ ಈ ಬಗೆಯ ಕೃತಿರಚನೆಗೆ ಪ್ರತಿಭೆ ಗಿಂತ ಭಾಷಾಪ್ರೌಢಿಮೆ, ವಸ್ತುಕೌಶಲ ಮತ್ತು ಬುದ್ಧಿವಂತಿಕೆಗಳೇ ಸಹಕಾರಿ. ಅಲಂ ಕಾರ, ಧ್ವನಿ, ಸೌಂದರ್ಯ ಇತ್ಯಾದಿಗಳು ಈ ರಚನೆಗಳಿಗೆ ದೂರವೇ. ಆದರೆ ಧರ್ಮ ಸಿದ್ಧಾಂತ, ಧರ್ಮದರ್ಶನದಿಂದ ಪ್ರೇರಿತವಾದ ಕೆಲವು–ಪೌರಾಣಿಕ, ಧಾರ್ಮಿಕ-ಕಾವ್ಯ ಗಳು ಮೂಲಸ್ತರದಲ್ಲಿ ಈ ವರ್ಗಕ್ಕೆ ಸೇರಿದರೂ, ಅವು ತಮ್ಮ ಬೃಹತ್‌ಸ್ವರೂಪ, ವ್ಯಾಪಕ ಕಲ್ಪಕತೆ, ಉನ್ನತ ಪ್ರಜ್ಞೆಗಳಿಂದಾಗಿ ಈ ವರ್ಗವನ್ನು ಮೀರಿ ನಿಲ್ಲುತ್ತವೆ. ಅವುಗಳಲ್ಲಿ ವಾಚ್ಯವನ್ನು ಮೀರಿ ಜೀವನ ಸತ್ಯಗಳನ್ನು ಅನ್ವೇಷಿಸುವ ಪ್ರಬಲಶಕ್ತಿ ಗೋಚರಿಸುತ್ತದೆ. ಧರ್ಮದ ಭೂಮಾನುಭೂತಿಯನ್ನು ಮಾನವ ಜೀವನ ಅನೇಕ ಬಗೆಯ ಸಂಘರ್ಷಗಳನ್ನು ತಮ್ಮ ಅಭಿವ್ಯಕ್ತಿಗೆ ಮೂಲದ್ರವ್ಯವನ್ನಾಗಿ ಬಳಸಿಕೊಳ್ಳುವ ಈ ಕಾವ್ಯಗಳು–ಗದ್ಯವಿರಲಿ ಪದ್ಯವಿರಲಿ–ಶುಷ್ಕ ನೀರಸವಾದ ಇತರ ಶಾಸ್ತ್ರ ಕಾವ್ಯಗಳಿ ಗಿಂತ ಭಿನ್ನವಾಗಿ-ಬೇರೆ ಮಾರ್ಗವನ್ನೇ ತುಳಿದು ಬದುಕಿನ ತಲಸ್ಪರ್ಶಿ ಸತ್ಯಗಳನ್ನು, ವಿವಕ್ಷಿತಗೊಳಿಸುವ ಹೊಂಚು ಹಾಕುತ್ತವೆ. ಈ ಪೌರಾಣಿಕ ಮತ್ತು ಧಾರ್ಮಿಕ ಕಾವ್ಯಕೃತಿಗಳಲ್ಲಿ–ಕವಿಯ ಅಂತರಂಗದಲ್ಲಿ ಅವಿಷ್ಕಾರಗೊಂಡ ಧಾರ್ಮಿಕ ಅಥವಾ ಆಧ್ಯಾತ್ಮಿಕ ಅನುಭಾವಕ್ಕೆ ಅಭಿವ್ಯಕ್ತಿ ರೂಪ ಕೊಡುವಾಗ–ಕೆಲವೊಮ್ಮೆ ಸಮಗ್ರ ಜೀವನ ದರ್ಶನಕ್ಕೆ ಪ್ರೇರಕವಾದ ಪ್ರತಿಭೆ ಮಿಂಚುವುದುಂಟು.[4] ಆದರೆ ಮಾನವ ಜೀವನದ ಅನೇಕ ಬಗೆಯ ಅಸಮಾನತೆ ಮತ್ತು ಸಂಘರ್ಷಗಳನ್ನು, ದೈವೀಶಕ್ತಿಗೆ ಅಧೀನಗೊಳಿಸಿ, ಎಲ್ಲವನ್ನೂ ಪರಮಾತ್ಮನಿಗೆ ಸಮರ್ಪಿಸುವ ಅಥವಾ ಮಾನವನು ಪರಮಾತ್ಮನಾಗುವ ಇತ್ಯಾದಿ ಭಕ್ತಿಮಾರ್ಗದಲ್ಲಿ ಪರಮೋನ್ನತಿಯನ್ನು ಕಂಡ ಈ ಮಾದರಿಯ ಕಾವ್ಯಗಳು ಧರ್ಮಪ್ರಸಾರದ ಸಮಕಾಲೀನ ಉದ್ದೇಶದ ಸಾಧನೆಯಲ್ಲಿಯೇ ಸಫಲತೆಯನ್ನು

---

4. ವಚನಸಾಹಿತ್ಯ, ದಾಸ ಸಾಹಿತ್ಯ ಮತ್ತು ಶತಕಗಳು ಈ ಮಾತಿಗೆ ನಿದರ್ಶನ.

ಪಡೆದವು.[5] ಭಾವೋದ್ದೀಪಕ ಭಾಷೆ ವೈಚಾರಿಕ ಮೂಲದ ಅನುಭಾವ ಸಂವೇದನೆ. ಲಯ ಅರ್ಥ, ಧ್ವನಿ ಅನುಭೂತಿಗಳನ್ನು ಬಳಸಿಕೊಂಡು ಈ ಮಾದರಿಯ ಕಾವ್ಯಗಳು ಯಶಸ್ವೀ ಕೃತಿಗಳಾಗಿವೆ. ರಾಮಚಂದ್ರಚರಿತ ಪುರಾಣ, ವಚನಗಳು ಬಸವರಾಜ ದೇವರ ರಗಳೆ. ಕುಮಾರವ್ಯಾಸ ಭಾರತ, ರಾಜಶೇಖರ ವಿಳಾಸ ಮುಂತಾದವುಗಳಲ್ಲಿ ಪ್ರತಿಭೆ ಮಿಂಚಿದ್ದರೂ ಅವು ವಿಶಿಷ್ಟ ಮತಗಳ ಪರಿಮಿತಿಯನ್ನು ಮೀರಿ ನಿಲ್ಲುವುದು ವಿರಳ. 'ಆದಿಪುರಾಣ', 'ಪ್ರಭುಲಿಂಗಲೀಲೆ ; 'ಭರತೇಶ ವೈಭವ'ದಂಥ ಕೃತಿಗಳು ಧಾರ್ಮಿಕ ಹಿನ್ನೆಲೆಯಲ್ಲಿ ರಚಿತವಾಗಿದ್ದರೂ ಅವು ಉನ್ನತ ಕಾವ್ಯ ಪ್ರಜ್ಞೆಯನ್ನು ಒಳಗೊಂಡ ಉದಾತ್ತ ಕಾವ್ಯಗಳಾಗಿವೆ. ಆದ್ದರಿಂದಲೇ 'ಶಾಸ್ತ್ರಕ್ಕೆ ತೆರೆಯದ ಬಾಗಿಲು ಕಾವ್ಯಕ್ಕೆ ತೆರೆದಿದೆ'[6] ಎಂದು ಹೇಳುವುದು. ಏಕೆಂದರೆ ಶಾಸ್ತ್ರ ಕೇವಲ ಬುದ್ಧಿ ಜಾಣ್ಮೆಗಳ ವ್ಯಾಪಾರವಾದರೆ, ಕಾವ್ಯ ರಸಾನುಭಾವಗಳ ಸೌಂದರ್ಯಸೃಷ್ಟಿ.

ಪಾಶ್ಚಾತ್ಯ ಮೀಮಾಂಸೆಯ ಹಿನ್ನೆಲೆಯಲ್ಲಿ ಕಾವ್ಯವನ್ನು ವ್ಯಕ್ತಿನಿಷ್ಠ ವಸ್ತುನಿಷ್ಠ ಎಂದು ವಿಂಗಡಿಸಲಾಗುತ್ತದೆ. ಆದರೆ ನಮ್ಮ ಪ್ರಾಚೀನ ಕಾವ್ಯಗಳಲ್ಲಿ ಕಾವ್ಯದ ಈ ಎರಡೂ ಲಕ್ಷಣಗಳು ಒಡವೆರೆದು ಬರುವುದನ್ನು ಕಾಣುತ್ತೇವೆ. 'ಮುಕ್ತಕ' 'ಶತಕ ಗಳು' ವ್ಯಕ್ತಿನಿಷ್ಠ ಕಾವ್ಯಗಳು. ಪಂಪನ ವಿಕ್ರಮಾರ್ಜುನವಿಜಯದಲ್ಲಿ ಬರುವ ಬನವಾಸಿಯ ವರ್ಣನೆ, ಮಹಾಕಾವ್ಯವೊಂದರ ಅಂಗವಾಗಿ–ವಸ್ತುನಿಷ್ಠ ಕಾವ್ಯದಲ್ಲಿ ಹುದುಗಿದ–ವ್ಯಕ್ತಿನಿಷ್ಠ ಅಂಶವಾಗಿದೆ. ಕವಿ ಮಹಾಕಾವ್ಯವೊಂದನ್ನು ಸೃಷ್ಟಿಸುವಾಗ ವಸ್ತುನಿಷ್ಠ ದೃಷ್ಟಿಯನ್ನು ಕಳೆದುಕೊಳ್ಳುವಂತಿಲ್ಲ. ಅದನ್ನು ಮರೆತರೆ ಕವಿಯ ವೈಯಕ್ತಿಕ ಮಟ್ಟದ ರೌದ್ರ, ಕ್ರೋಧ, ಮೋಹ, ಅಂಜುಕುಳಿತನ ಮುಂತಾದ ಸೀಮಿತ ಲಘು ಮನೋಭಾವನೆಗಳು ಅತಿಯಾಗಿ ನುಗ್ಗಿ, ಕಾವ್ಯದ ನಿಶ್ಚಿತ ಗುರಿಯನ್ನು ಕಾವ್ಯದ ಭವ್ಯತೆಯನ್ನು ಕುಗ್ಗಿಸುವ ಸಾಧ್ಯತೆ ಇದ್ದೇ ಇರುತ್ತದೆ. ಆದುದರಿಂದ ವಸ್ತು ನಿಷ್ಠ ಕವಿ, ಆಯ್ಕೆಯ ವಸ್ತು ಬೃಹತ್ತಾಗುವಂತೆ, ಅರ್ಥವ್ಯಾಪ್ತಿ ದೊರೆಕೊಳ್ಳುವಂತೆ ಕಾವ್ಯದುದ್ದಕ್ಕೂ ಧ್ವನಿ ನಿಕ್ಷೇಪಗಳನ್ನು ಹುದುಗಿಸಿ ಕಾವ್ಯ ರಚನೆಯನ್ನು ಮುಂದುವರೆಸ ಬೇಕಾಗುತ್ತದೆ. ವಸ್ತುವನ್ನು ನಿರ್ದಿಷ್ಟಗೊಳಿಸುತ್ತ ಕಾವ್ಯಕ್ಕೆ ಶಿಲ್ಪಸ್ವರೂಪ ನೀಡಿ, ಅದನ್ನೊಂದು ಪ್ರತಿಮಾಸೃಷ್ಟಿಯಾಗಿ ಕಂಡರಿಸುವಲ್ಲಿ ಕವಿ ವ್ಯಕ್ತಿನಿಷ್ಠ ಭಾವನೆಗಳ ಉದ್ವಿಗ್ನ ಸ್ಥಿತಿಯಿಂದ, ಭಾವೋದ್ವೇಗದಿಂದ ಮುಕ್ತನಾಗಿ ಸಂವಹನ ಕ್ರಿಯೆಯನ್ನು ಪೂರೈಸಬೇಕಾಗುತ್ತದೆ. ಆಗ ಕವಿಯಲ್ಲಿ ಪ್ರಪಂಚವನ್ನು ಇಡಿಯಾಗಿ ಸ್ವೀಕರಿಸುವ ದೃಷ್ಟಿ ಪ್ರಸ್ಫುರಿಸುತ್ತದೆ. ಅವನ ಚಿತ್ತದಲ್ಲಿ ಬುದ್ಧಿ ತರ್ಕಗಳನ್ನು, ಉದ್ವಿಗ್ನತೆ ಯನ್ನು ಮೀರಿದ, ಮಾತಿಗೆ ನಿಲುಕದ ವ್ಯಕ್ತಿನಿರಪೇಕ್ಷಭಾವ ಸ್ಪಂದಿಸುತ್ತದೆ. ಜೀವನ

---

5. 'ಕಾಯಕವೇ ಕೈಲಾಸ'. 'ಅರಿವೇ ಗುರು', 'ಶಿವನನೊಲಿಸಿ ಬಂದ ಕಾಯವ ಕೆಡಿಸ ಲಾಗದು,' 'ಆಚಾರವೇ ಸ್ವರ್ಗ ಅನಾಚಾರವೇ ನರಕ' ಮುಂತಾದುವು ಖಂಡಿತವಾಗಿ ಪರಿಮಿತಿಗಳನ್ನು ಮೀರಿದ ಕಾವ್ಯಸತ್ಯಗಳು ; ಅಂತೆಯೇ ಜೀವನ ಸತ್ಯಗಳೂ. ಇವು ವಸ್ತುನಿಷ್ಠ ಸ್ವರದ ಮೇಲೆ ರಚಿತವಾದರೂ ವಸ್ತುನಿಷ್ಠತೆ ಸಮಷ್ಟಿ ಜೀವನ ದರ್ಶನಗಳು ಇಂಥ ರಚನೆಗಳ ಉಸಿರು.

6. ಭಾರತೀಯ ಕಾವ್ಯಮೀಮಾಂಸೆ : ತೀ.ನಂ.ಶ್ರೀ. ಪು. ೧೫೭

ವನ್ನು ತಲಸ್ಪರ್ಶಿಯಾಗಿ ಸಮೀಕ್ಷಿಸುವ, ನಿರ್ದೇಶಿಸುವ, ಅಮೂರ್ತಶಕ್ತಿ ಸೌಂದರ್ಯ ಗಳ ಒಂದು ಸಮಷ್ಟಿ ದರ್ಶನ ಕವಿಯ ಸಂವೇದನಾಶೀಲತೆಗೆ ಒತ್ತಾಸೆಯಾಗುತ್ತದೆ. ಅಭಿವ್ಯಕ್ತಿ ಅನಿವಾರ್ಯವಾಗುತ್ತದೆ. ಇತರರಿಗೆ ಗೋಚರಿಸದ ಅನುಭೂತಿಯನ್ನು ಮೂರ್ತೀಕರಣಗೊಳಿಸುವಲ್ಲಿ ಕವಿ ಸಫಲನಾಗುತ್ತಾನೆ. ಈ ಬಗೆಯ ಕಾವ್ಯ 'ದರ್ಶನ ಕಾವ್ಯ'ವೂ ಆಗಬಹುದು. ವಾಸ್ತವ ಜೀವನ ಸಮಸ್ಯೆಗಳ ಸಂಘರ್ಷ, ಜೀವನ ಮೌಲ್ಯ ಗಳ 'ಮುಖಾಮುಖಿ' ಸಂಘಟ್ಟಣೆ ದರ್ಶನಕಾವ್ಯದ ಉಸಿರಾಗುತ್ತದೆ. 'ಆದಿಪುರಾಣ,' 'ಹರಿಶ್ಚಂದ್ರಕಾವ್ಯ', 'ಸಾವಿತ್ರಿ', 'ರಾಮಾಯಣದರ್ಶನಂ' ಮುಂತಾದ ಕಾವ್ಯಗಳಲ್ಲಿ ನಾವು ವಸ್ತುನಿಷ್ಠ ಕಾವ್ಯದ ಉಜ್ವಲ ರೂಪಗಳನ್ನು ಕಾಣಬಹುದಾಗಿದೆ.

**ಕವಿಸೃಷ್ಟಿ-ಬ್ರಹ್ಮಸೃಷ್ಟಿ :**

ಕವಿಸೃಷ್ಟಿ ಬ್ರಹ್ಮಸೃಷ್ಟಿಗಿಂತ ವಿಲಕ್ಷಣವಾದುದೆಂದು ಹೇಳಲಾಗುತ್ತದೆ. ಅದು 'ನಿಯತಿಕೃತ ನಿಯಮರಹಿತಾಂ'- ನಿಯತಿಯ ನಿಯಮಗಳಿಗಿಂತ ಭಿನ್ನ. ಆಕಾಶದಲ್ಲಿ ಚಂದ್ರನಿರುವುದು ನಿಯತಿ. ಯುವತಿಯ ಮುಖದಲ್ಲಿಯೇ 'ಚಂದ್ರ'ನಿದ್ದಾನೆ ಎನ್ನು ವುದು ಕವಿಸೃಷ್ಟಿ. ಒಲೆಯಲ್ಲೋ ಕಾಡಿನಲ್ಲೋ ಬೆಂಕಿ ಉರಿಯುವುದು ನಿಯತಿ; ಶೋಷಿತ ಗುಂಪಿನ ಕಣ್ಣಲ್ಲೇ ಬೆಂಕಿ ಸಿಡಿಯುತ್ತದೆ ಎನ್ನುವುದು ಕವಿಸೃಷ್ಟಿ. ಆದುದ ರಿಂದ ಕವಿಸೃಷ್ಟಿಯಲ್ಲಿ ಪಾರತಂತ್ರ್ಯವಿಲ್ಲ. ಅರಸನ ಮನರಂಜನೆಗೋ, ಮುಗ್ಧೆಯ ಹೃದಯಾಕರ್ಷಣೆಗೋ ಮುಗಿಲ ಚಂದ್ರನನ್ನು ಯುವತಿಯ ಮುಖಕ್ಕೆ ಎಳೆದುತಂದ ಕವಿಗೆ 'ಆಸ್ಥಾನ'ದ ಕಾಣಿಕೆಗಳ ಆಸೆಯಾದರೆ, ಕಾಡಿನ ಬೆಂಕಿಯನ್ನು ಶೋಷಿತ ಅಥವಾ ಬಡವರ ಗುಂಪಿನ ಕಣ್ಣಲ್ಲಿ ಕಾಣುವ ಕವಿಗೆ ಜೀವನ ಸಂಘರ್ಷಗಳ ಜ್ವಲಂತ ದರ್ಶನದ ಹಂಬಲ. ಒಬ್ಬೊಬ್ಬ ಕವಿಯ ಸೃಷ್ಟಿಯೂ ಒಂದೊಂದು ವಿಧ. ನೂರು ಪಕ್ಷಿ; ನೂರು ಸ್ವರ. ಒಂದೊಂದೂ ಒಂದೊಂದು ತೆರ; ಮಧುರ ಸ್ವರ. ಬ್ರಹ್ಮಸೃಷ್ಟಿಯು ಅಪರಿಮಿತ ರೂಪ ಪ್ರಕಾರಗಳನ್ನು ಹೊಂದಿರುವಂತೆ ಕವಿಸೃಷ್ಟಿಯೂ ಅಗಣಿತ ವೈವಿಧ್ಯ ದಿಂದ ಕೂಡಿದೆ. ಈ ವೈವಿಧ್ಯಕ್ಕೆ ಪ್ರೇರಣೆ ಪ್ರತಿಭೆಯೇ. ಕವಿಸೃಷ್ಟಿಯಲ್ಲಿ ಕಾಣುವ ವಸ್ತುವಿನ ಉತ್ಕರ್ಷಸ್ಥಿತಿ, ಜೀವನನಿಷ್ಠೆ, ದಾರ್ಶನಿಕ ದೃಷ್ಟಿ, ಕಲಾತ್ಮಕ ಪ್ರಜ್ಞೆಗಳು ಆಯಾ ಕವಿಯ ಭಾವಸಂಸ್ಕಾರ, ಜೀವನಾನುಭವಗಳನ್ನು ಆಧರಿಸಿದ ವಿಲಕ್ಷಣ ಗತಿಯ ಪ್ರತಿಭೆಯನ್ನೇ ಅವಲಂಬಿಸಿರುತ್ತದೆ. ಪ್ರತಿಯೊಬ್ಬ ಸೃಜನಶೀಲ ವ್ಯಕ್ತಿಯೂ ವಿಶಿಷ್ಟ; ಅನನ್ಯ ಪರತಂತ್ರ. 'ಪ್ರತಿಯೊಬ್ಬ ವ್ಯಕ್ತಿಯೂ ಯಾವುದೊ ಒಂದು ರೀತಿ ಯಲ್ಲಿ ಅನನ್ಯಸಾಧಾರಣ; ಒಬ್ಬೊಬ್ಬನು ಇನ್ನೊಬ್ಬನಲ್ಲವಾಗಿರುವಷ್ಟು ಮಟ್ಟಿಗೆ ವಿಶೇಷ ವ್ಯಕ್ತಿ. ಮನುಷ್ಯತ್ವದಿಂದ ಸರ್ವಸಾಧಾರಣನಾದರೂ ವ್ಯಕ್ತಿತ್ವದಿಂದ ವಿಶೇಷ ಸಾಧಾರಣತೆಯ ಪರತಂತ್ರತೆಯಲ್ಲಿ ವ್ಯಕ್ತಿತ್ವದ ವಿಶೇಷತೆಯನ್ನು ಪ್ರಕಟಿಸುವುದೆ ಅನನ್ಯ ಪರತಂತ್ರತೆ'[7]

---

7. ಕುವೆಂಪು : ೧೯೫೭. ಧಾರವಾಡ ೩೯ನೆಯ ಕ. ಸಾ. ಸಮ್ಮೇಳನದ ಅಧ್ಯಕ್ಷ ಭಾಷಣದಿಂದ

ಕವಿಯಲ್ಲಿರುವ ವ್ಯಕ್ತಿವೈಶಿಷ್ಟ್ಯಕ್ಕೆ ಆತನ ಪ್ರತಿಭಾಶಕ್ತಿಯೇ ಕಾರಣ.

## ಕಾವ್ಯ-ಪ್ರತಿಭೆ

ಪ್ರತಿಭೆ ನವನವೋನ್ಮೇಷಶಾಲಿನಿ ಎನ್ನುವುದು ಪ್ರಾಚೀನ ಲಾಕ್ಷಣಿಕರ ಮತ. ಕವಿ ಕಾಲ ಕಾಲಕ್ಕೆ ತನ್ನಲ್ಲಿರುವ ಪ್ರತಿಭೆಯನ್ನು ಉಜ್ವಲಗೊಳಿಸಬೇಕಾಗುತ್ತದೆ ; ಅಭಿವ್ಯಕ್ತಿಗೆ ಸಮಕಾಲೀನ ಸಂವೇದನೆಗಳ ಹೊಸ ಜೀವ ತುಂಬಬೇಕಾಗುತ್ತದೆ. ಕಾವ್ಯ ಎನ್ನುವುದು ಪ್ರಾಥಮಿಕ ಹಂತದಲ್ಲಿ 'ವಾಗ್ವಿದಗ್ಧತಾ ನಿಪುಣತೆ' – ಶಬ್ದಮಾಧ್ಯಮದ ಒಂದು ಪರಿಣತ ಕಲಾರೂಪ. ಕಾವ್ಯಕಲೆಯಲ್ಲಿ ಪರಿಣತಿಯನ್ನು ಹೊಂದಬೇಕಾದರೆ ಅಗತ್ಯವಾದ ಪರಿಕರಗಳು ನಾಲ್ಕು : ಒಂದು, 'ಪ್ರತಿಭಾವತ್ವ', ಪ್ರತಿಭೆ ; ರಡು: 'ಅಕೃತಕ ಚತುರತೆ', ಸಹಜ ಬುದ್ಧಿಕೌಶಲ ; ಮೂರು : 'ಪರಮಬುಧಜನೋಪಾಸನ', ಉನ್ನತ ಪಂಡಿತರಲ್ಲಿ ಶ್ರದ್ಧೆ– ಅವರ ನಿಕಟ ಸಂಪರ್ಕ ಮತ್ತು ಗಂಭೀರ ವಿಚಾರ ವಿನಿಮಯ ; ನಾಲ್ಕು : ಶ್ರುತಿ ಪರಿಚಯ, ಪ್ರಾಚೀನ ಕಾವ್ಯವ್ಯಾಸಂಗ, ಕಾವ್ಯಪರಂಪರೆಯ ಪ್ರಜ್ಞೆ.

'ನೈಸರ್ಗಿಕೀ ಚ ಪ್ರತಿಭಾ ಶ್ರುತಂ ಚ ಬಹು ನಿರ್ಮಲಮ್ !
ಅಮಂದಶ್ಚಾಭಿಯೋಗೋ ಸ್ಯಾಃ ಕಾರಣಂ ಕಾವ್ಯಸಂಪದಃ'[8]

ಲಾಕ್ಷಣಿಕ ದಂಡಿಯ ಪ್ರಕಾರ ಕಾವ್ಯಸಂಪತ್ತಿಗೆ ಕಾರಣಗಳು ಮೂರು : ಸ್ವಭಾವಸಿದ್ಧವಾದ ಪ್ರತಿಭೆ, ಇದು ದೈವದತ್ತ ಅಥವಾ ಹುಟ್ಟಿನಿಂದಲೇ ಬಂದ ಗುಣ. ಅಸ್ಖಲಿತವಾದ ವಿದ್ಯೆ– ಸಮೃದ್ಧ ಜ್ಞಾನ ; ನಿರಂತರವಾದ ಅಭ್ಯಾಸ–ಕಾವ್ಯಾಭ್ಯಾಸ–ಚಿಂತನೆ. ಕಾವ್ಯಸೃಷ್ಟಿಗೆ ಅಗತ್ಯವಾದ ಪರಿಕರಗಳು ಏನೇ ಇದ್ದರೂ ಅವುಗಳಲ್ಲಿ ಪ್ರಥಮ ಸ್ಥಾನ ಪ್ರತಿಭೆಯದು ಎನ್ನುವುದು ಮುಖ್ಯ. ಅಪೂರ್ವ ವಸ್ತು ನಿರ್ಮಾಣ ಪ್ರಜ್ಞೆಯೇ ಪ್ರತಿಭೆಯಾಗಿರುವುದರಿಂದ ಅದು ಕವಿಯ ಭಾಷೆಯಲ್ಲಿ ಮಧುರವಾದ ಅರ್ಥ ಸ್ರವಿಸಲು ರಸಾವೇಶ ಪ್ರಸಾದಗುಣಗಳು ಹೊಮ್ಮಲು ಪ್ರೇರಕವಾಗುತ್ತದೆ.

ಕವಿಯಲ್ಲದವನಿಗೆ ಭಾಷೆ ಸಂಪರ್ಕ ಮಾಧ್ಯಮದ, ವ್ಯವಹಾರ ನಿರ್ವಹಣೆಯ ಆಧಾರ. ಕವಿಯ ಸೃಷ್ಟಿಯಲ್ಲಿ ಭಾಷೆ ಉನ್ನತೀಕೃತವಾಗುತ್ತದೆ ; ವಿಶೇಷ ಕಾಂತಿಯನ್ನು ಹೊಂದುತ್ತದೆ. ಏಕೆಂದರೆ ಕವಿ ತನ್ನ ಅಭಿವ್ಯಕ್ತಿ ಕ್ರಿಯೆಯಲ್ಲಿ ಮೊದಲು ಎದುರಿಸುವುದು ಭಾಷೆಯ ಸಮಸ್ಯೆಯನ್ನು. ಭಾಷಾಪರಿಣತಿ ಮಾತ್ರ ಕವಿಗೆ ಸಾಲದು, ಜೊತೆಗೆ ಭಾಷಾಪ್ರಜ್ಞೆ ಅಗತ್ಯವಾಗುತ್ತದೆ. ಅವನು ತನ್ನ ಭಾವಾಭಿವ್ಯಕ್ತಿಗೆ ಅನುಗುಣವಾದ ಭಾಷೆಯನ್ನು – ಬಹು ಎಚ್ಚರದಿಂದ – ಬಳಸಬೇಕಾಗುತ್ತದೆ. ಯಾವ ಸನ್ನಿವೇಶಕ್ಕೆ ಯಾವ ಶಬ್ದ ; ಯಾವ ಭಾವನೆಗೆ, ವರ್ಣನೆಗೆ, ಯಾವ ಪದ ಎನ್ನುವುದರ ಪ್ರಜ್ಞೆ ಅವನಲ್ಲಿ ಸಹಜವಾಗಿ ಒಡಮೂಡಬೇಕಾಗುತ್ತದೆ. ಇದನ್ನು ಕಾವ್ಯದ

8. ಕನ್ನಡ ಕಾವ್ಯಾದರ್ಶ (ದಂಡಿ) : ಡಾ. ಕೆ. ಕೃಷ್ಣಮೂರ್ತಿ, ಪು. ೩೬

ರಾಚನಿಕ ಹಂತ ಎಂದು ಕರೆದರೆ ಈ ಹಂತದಿಂದಲೇ ಪ್ರತಿಭೆಯ ಕಾರ್ಯ ಮೊದಲಾಗುತ್ತದೆ– ಪ್ರಜ್ಞಾರೂಪದಲ್ಲಿ. ಏಕೆಂದರೆ ಈ ರಾಚನಿಕ ಹಂತದಲ್ಲಿ 'ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱಿದು...ಮೃದುಪದಮಂ' ಕವಿ ಆಯ್ದುಕೊಳ್ಳುತ್ತಾನೆ ; ಬಳಸುತ್ತಾನೆ. ಇದರಿಂದ ಕವಿ ಭಾಷೆಯ ಜೀವಂತ ಗತಿಯನ್ನು ಗುರುತಿಸಿ, ಶಬ್ದಗಳಿಗಿರುವ ಅರ್ಥದ ವಿವಿಧ ಛಾಯೆ, ಹೊಳಹು, ಧ್ವನಿಗಳನ್ನು ಸಂವಹನ ಕ್ರಿಯೆಯಲ್ಲಿ ತುಂಬಿ ಅಭಿವ್ಯಕ್ತಿಗೆ ರಸಪುಷ್ಟಿಯನ್ನೊದಗಿಸಲು ಸಾಧ್ಯವಾಗುತ್ತದೆ. ಇದು ಕಾವ್ಯಕ್ರಿಯೆಯ ಪ್ರಾಥಮಿಕ ಹಂತದ ಮಾತಾಯಿತು. ಪ್ರತಿಭೆ ವಿಶಿಷ್ಟವಾಗಿ ಪ್ರಕಟಗೊಳ್ಳುವುದು ಕಾವ್ಯದ ಸಂವಹನ ಕ್ರಿಯೆಯ ನಿರ್ವಹಣೆ ಮತ್ತು ಸೃಜನಶೀಲ ಕಾಂತಗುಣಗಳ ಸಂಯೋಜಿತ ರೂಪದಲ್ಲಿ. ಸೃಜನಶೀಲ, ಸಂವೇದನಾಶೀಲ ಬರಹಗಾರನ–ಕವಿಯ–ವ್ಯಕ್ತಿತ್ವ ವಿಕಾಸ ಭವ್ಯತೆಗಳಿಗೆ ಅನುಗುಣವಾಗಿ ಪ್ರತಿಭಾಶಕ್ತಿ ಹೊಮ್ಮುತ್ತದೆ. ಕೇವಲ ಸಕಲಶಾಸ್ತ್ರ ಪಾರಂಗತನಾದವನಲ್ಲಿ ಪ್ರತಿಭೆ ಹೊಮ್ಮುವುದೇ ? ಕವಿ ಷಡಕ್ಷರಿದೇವನ ಮಾತು ಗಮನಾರ್ಹ: "ಶಾಸ್ತ್ರಶ್ರೀರೋಹಣ ಗಿರಿಯನ್ನು ಯಾರಾದರೂ ಏರಬಹುದು. ಅವರೆಲ್ಲರಿಗೂ ಕವಿತಾಚಿಂತಾರತ್ನ ದೊರೆಕೊಳ್ಳುವುದೇ ? ಅದಕ್ಕೆ 'ಮಾರಾರಿಯಕೃಪೆ' ಬೇಕು." ಕಾವ್ಯಸೃಷ್ಟಿಗೆ ಪ್ರತಿಭೆ 'ಚಿಂತಾರತ್ನ' ಸ್ವರೂಪ. ಅದು ಕವಿಗೆ ದೊರೆಕೊಳ್ಳುವುದು ದೈವೀಕೃಪೆ ಹೌದೋ ಅಲ್ಲವೋ, ಆದರೆ ಪ್ರತಿಭಾಶಕ್ತಿ ಪ್ರತಿಯೊಬ್ಬರ ಸೊತ್ತಲ್ಲ ಎನ್ನುವುದು ಮಾತ್ರ ನಿಜ. ಅನೇಕರಲ್ಲಿರದ ಈ ಶಕ್ತಿ ಕೆಲವೇ ಕವಿಗಳಲ್ಲಿರುವುದು ದೈವೀಕೃಪೆಯೆಂದೋ, ನಿಸರ್ಗ ಸಹಜವೆಂದೋ ಭಾವಿಸಿರುವುದು ನಮ್ಮ ಪರಂಪರೆ. ಹಾಗಾದರೆ ಪ್ರತಿಭೆ ಎನ್ನುವುದು ಆಕಾಶದಿಂದ ಉದುರುವ ಶಕ್ತಿವಿಶೇಷವೇ ?

### ಪ್ರತಿಭೆ : ಅಂತಸ್ಥಶಕ್ತಿ

ಏನಾದರೂ ವಿರಳವಾದುದನ್ನು, ವಿಶಿಷ್ಟವಾದುದನ್ನು, ಹೊಸದನ್ನು ಸೃಷ್ಟಿಸಲು ಶಕ್ತನಾಗುವ ವ್ಯಕ್ತಿ ಸೃಜನಶೀಲ, ಪ್ರತಿಭಾಸಂಪನ್ನ ಎಂದು ಕರೆಯಿಸಿಕೊಳ್ಳುತ್ತಾನೆ. ಆದುದರಿಂದ ಪ್ರತಿಭೆ, ಸೃಜನಶೀಲ ವ್ಯಕ್ತಿಯ – ಕವಿಯ – ವ್ಯಕ್ತಿತ್ವದಲ್ಲಿ ಅಂತಸ್ಥವಾಗಿರುವ ಅಪೂರ್ವ ಶಕ್ತಿ. ಭಾವೋದ್ದೀಪಕವಾದ ಭಾಷೆಯ ಮೂಲಕ ಅನಿರ್ವಚನೀಯವಾದ ಚೆಲುವಿನ, ಆನಂದದ ರಸಾನುಭವವನ್ನು ಮೂರ್ತೀಕರಣಗೊಳಿಸುವಲ್ಲಿ ಸ್ಫಟಿಕಶಿಲೆಯಂತೆ ನಿರ್ಮಲವಾದ, ಸ್ವಯಂದೀಪ್ತ ಶಕ್ತಿಯಾದ ಪ್ರತಿಭೆ ಮಹತ್ತರ ಪಾತ್ರ ನಿರ್ವಹಿಸುತ್ತದೆ. ಕಾವ್ಯದಲ್ಲಿ ಲಯ, ಅರ್ಥ, ಧ್ವನಿ, ಆಶಯ ಅನುಭೂತಿಗಳು ರೂಪಗೊಳ್ಳುವುದು ಪ್ರತಿಭಾಶಕ್ತಿಯಿಂದಲೇ. ಆದರೆ ಇದು ಕವಿಯಲ್ಲಿ ಪ್ರಕಟಗೊಳ್ಳುವ ಬಗೆ ಮಾತ್ರ ವಿಲಕ್ಷಣವಾದುದು.

ಕವಿಯೂ ನಮ್ಮಂತೆ ಒಬ್ಬ – ಸಮಾಜಜೀವಿ–ವ್ಯಕ್ತಿ. ಬದುಕು ಒದಗಿಸುವ ಎಲ್ಲಂದದ ಅನುಭವಗಳಿಗೂ ಅವನ ಹೃದಯ ಸ್ವೀಕರಣ ಕೇಂದ್ರ. ನಿಸರ್ಗದ ಚೆಲುವು,

ವ್ಯಕ್ತಿ, ಮಾತು, ಗೀತಗಳನ್ನು ಕಂಡಾಗ ಕೇಳಿದಾಗ ರೂಪ ಕಣ್ಣಿಗೆ ಹೊಳೆದಾಗ, ಅರ್ಥ ಮನವನ್ನು ಸೆಳೆದಾಗ, ಅವನಲ್ಲಿ ಭಾವಪರವಶತೆ ಉಲ್ಲಾಸದ ನವುರು, ಪ್ರಣಯೋನ್ಮಾದಗಳ ಬೆಡಗು, ಮೆರಗು, ಪ್ರೀತಿ ವಾತ್ಸಲ್ಯಗಳ ಕಂಪನ, ವಿಸ್ಮಯ ಅದ್ಭುತಗಳ ವಿನ್ಯಾಸ ಮುಂತಾದವುಗಳ ಅನುಭವ ಸಾಂದ್ರಗೊಳ್ಳುತ್ತ ಹೋಗುತ್ತದೆ. ಅನುಭವ ಸಾಂದ್ರತೆ ಸ್ಥಿರೀಕೃತವಾದಂತೆಲ್ಲ ಅವನ ಅಂತರಿಕ ಅನಿಸಿಕೆ, ದೃಷ್ಟಿಧೋರಣೆಗಳು ಗಟ್ಟಿಗೊಳ್ಳುತ್ತವೆ. ಇಲ್ಲಿ ಗಮನಿಸಬೇಕಾದ ಒಂದು ಮುಖ್ಯ ಅಂಶವೆಂದರೆ ಅನುಭವಗಳನ್ನು ಕಾವ್ಯಾನುಭವಗಳನ್ನಾಗಿ ಮಾರ್ಪಡಿಸಿಕೊಳ್ಳುವುದು. ಕವಿಯ ವ್ಯಕ್ತಿತ್ವದಲ್ಲಿ ನಿಸರ್ಗದತ್ತವಾಗಿರುವ ಪ್ರತಿಭಾಶಕ್ತಿಯಿಂದಾಗಿ ಲೋಕಾನುಭವಗಳು ಅವನ ಅನಿಸಿಕೆಯ, ವೇದನೆಯ ಆಳಕ್ಕೆ ಎಟುಕಿ, ಇಳಿದು ಸಂವೇದನೆಗಳಾಗುತ್ತವೆ. ಆದ್ದರಿಂದ ಇಂಥ ಸಂವೇದನಾಶೀಲ ವ್ಯಕ್ತಿ ಮಾತ್ರ ತನ್ನ ಅನುಭವಗಳನ್ನು ಕಾವ್ಯಾನುಭವಗಳನ್ನಾಗಿ ಪರಿವರ್ತಿಸುವ ಶಕ್ತಿಯನ್ನು ಹೊಂದಿರುತ್ತಾನೆ. ತನ್ನ ಆಯ್ಕೆಯ ಒಂದು ವಸ್ತುವನ್ನು ಕುರಿತ ರೋಮಾಂಚಕ ಅನುಭವ ಚಿತ್ತದಾಳಕ್ಕೆ ಇಳಿದು, ಹೃದಯಾಂತಸ್ಥ ಪ್ರತಿಭೆಯಲ್ಲಿ ಒಡಮೆರೆಯುತ್ತದೆ ; ಈ ಸಂದರ್ಭದಲ್ಲಿ ವಸ್ತುವಿನ ಪ್ರತಿಕ್ರಿಯೆ ಮತ್ತು ಪ್ರಭಾವ ಪ್ರತಿಭೆಯ ದೀಪ್ತಶಕ್ತಿಯಾಗಿ–ನಿಗಿನಿಗಿ ಕೆಂಡದಂತೆ–ಹೃದಯದಲ್ಲಿ ಹೊಳೆಯುತ್ತಿರುತ್ತದೆ ;– ಬಹಶಃ ಭೂ ಪದರುಗಳಲ್ಲಿ ಪ್ರವಹಿಸುವ ಲಾವಾದಂತೆ. ಆದ್ದರಿಂದಲೇ ಕವಿಯ ಅಭಿವ್ಯಕ್ತಿಯಲ್ಲಿ ಲೋಕಾನುಭವಗಳ ಕೇವಲ ಪ್ರತಿಕೃತಿ ಮೂಡುವುದಿಲ್ಲ. ಕವಿ ತನಗೆ ಮಾತ್ರ ಗೋಚರಿಸಿದ ಅನುಭಾವ ಸತ್ಯವನ್ನು ಸೌಂದರ್ಯಶಿಲ್ಪದಲ್ಲಿ ರಸಾನುಭವದಲ್ಲಿ ವ್ಯಕ್ತಗೊಳಿಸುವುದು ಕಾವ್ಯಕ್ರಿಯೆಯ ಒಂದು ಗುಟ್ಟು ಅಥವಾ ರಹಸ್ಯವೆಂದು ಮಾತ್ರ ಹೇಳಬಹುದು. ಏಕೆಂದರೆ ಪ್ರತಿಭಾವಿಶೇಷವೇ ಈ ರಹಸ್ಯದ ಮೂಲ; ಅದೇ ಸೃಷ್ಟಿ,– ಹೂ, ಹಳ್ಳ, ಹೊಳೆ, ಮುಗಿಲು ಸೂರ್ಯ ಚಂದ್ರ– ಅದೇ ಬಣ್ಣ ; ಆದರೆ ರಚನಾ ವಿನ್ಯಾಸ ಬೇರೆ ; ಅಭಿವ್ಯಕ್ತಿಶಿಲ್ಪ ಬೇರೆ. ಒಂದರ ಬೆಡಗು ಬಿನ್ನಾಣ ಇನ್ನೊಂದಕ್ಕಿಲ್ಲ ; ಒಂದರ ಅಂದ ನವುರು ಮತ್ತೊಂದಕ್ಕಿಲ್ಲ. ಆದ್ದರಿಂದ ಪ್ರತಿಭೆ ಪ್ರಥಮತಃ ಅಂತಸ್ಫುರಣೆ ಅಥವಾ ಅಂತಃ ಸ್ಥಿತ ಶಕ್ತಿ ; ವಿಕಸಿತ ಹಂತದಲ್ಲಿ ಅದು 'ಒಳ ಅರಿವು'. ಈ ಒಳ ಅರಿವೇ ಅಂತಃಸ್ಥಿತ ಶಕ್ತಿಯ ಮೂಲಾಂಶವೆನ್ನಬಹುದು. ಇದು, ಕವಿಯ ರಾಚನಿಕ ಹಂತದಲ್ಲಿ ಸ್ವೋಪಜ್ಞತೆಯ ಕುರುಹು ; ಅವನ ಅಭಿವ್ಯಕ್ತಿಯ ಪೋಷಕದ್ರವ್ಯವಾಗುತ್ತ ಕಾವ್ಯಕ್ರಿಯೆಯ ಗುರಿಯನ್ನು ನಿಚ್ಚಳಗೊಳಿಸುತ್ತದೆ; ಉಚ್ಚಳಿಸುತ್ತದೆ. ವಿಚಿತ್ರವೆಂದರೆ ಕವಿ ಈ ಪ್ರತಿಭೆಯ ಹೊಮ್ಮುಗೆಗಾಗಿ ಪ್ರತೀಕಿಸಬೇಕಾಗುತ್ತದೆ.

'ಏನಮ್ಮ ಪ್ರತಿಭೆ ನೀನೀಸು ದಿನವೆಲ್ಲಿದ್ದಿ
ಮತ್ತೆ ಹೇಗಿಲ್ಲಿಗೇ ಮರಳಿ ಬಂದೆ !'

ಎಂದು ತನಗೆ ತಾನೇ ಬೆರಗುವಟ್ಟು,

'ಹಾಡಬೇಕೆಂದೇಸೊ ದಿನ ಬಯಸಿ ಬೇಡಿದರೆ
ಒಂದು ನುಡಿಯೂ ಕೂಡ ಮೂಡಲಿಲ್ಲ'

ಎಂದು ಹೃದಯದಳಲನ್ನು ತೋಡಿಕೊಳ್ಳುವ ಕವಿ ಮಧುರಚೆನ್ನರು ಪ್ರತಿಭೆಯನ್ನು 'ದಾನಮ್ಮ' ಕಣ್ಣಿಕಿಂಡಿಯ ಒಳಗೆ ಹಣಿಕಿಹಾಕುವ ಜಾಣೆ', 'ಒಳಗೆ ಜೇವದ ಬೆನ್ನ ಬಡಿವ ಜಾಣೆ' ಎಂದು ಮುಂತಾಗಿ ವರ್ಣಿಸಿದ್ದಾರೆ. ಪ್ರತಿಭೆ ಅಂತರಂಗದ ಅರಿವು ; ಜೀವನ ಸಂಘರ್ಷದ ಒಳಹೊಕ್ಕು, ಸಿಕ್ಕು, ಜೀವನದ ಉಜ್ವಲ ಸೌಂದರ್ಯವನ್ನು ದಕ್ಕಿಸಿಕೊಳ್ಳುವ ಕವಿಗೆ ಅಪೂರ್ವ ಬೆಂಬಲವಾಗಿರುವ ಚೈತನ್ಯ ಶಕ್ತಿ.

## ವ್ಯಕ್ತಿ–ಸೃಜನಶೀಲತೆ, ಸಂವೇದನೆ ಮತ್ತು ಪ್ರತಿಭೆ

'ನಾನು' ಅಥವಾ 'ತಾನು' ಎನ್ನುವುದು, ಅನುಭಾವಗಳ ಕೇಂದ್ರ. 'ನನ್ನ' ಮೇಲಾದ ಪರಿಣಾಮ ಪ್ರತಿಕ್ರಿಯೆಗಳನ್ನು ಅನಿಸಿಕೆಗಳ ಅವಿಭಾಜ್ಯ ರೂಪವಾಗಿಸಿ ಕೊಳ್ಳುವುದು ಅನುಭವ. ಒಂದು ಘಟನೆ ಪರಿಣಾಮ ಪ್ರತಿಕ್ರಿಯೆಗಳಿಂದ ಕವಿಚಿತ್ತ ದಲ್ಲಿ ವಿಶಿಷ್ಟ ಭಾವಕೋಶ ರೂಪಗೊಂಡು, ಸಂವೇದನೆಗಳ ಕಾತರ, ಅಭಿವ್ಯಕ್ತಿಯ ಚಡಪಡಿಕೆಗಳು ವಿಜೃಂಭಿಸುತ್ತವೆ. ಸೃಜನಶೀಲನಾದ ಕವಿಗೆ ಈ ಸಂವೇದನೆಗಳಿಗೆ ಧ್ವನಿಗೊಡುವ ಕ್ರಿಯೆ ಮಾತ್ರ ಪ್ರಮುಖ. ಯಾವುದೇ ಒಂದು ಅನುಭವ ತನ್ನಲ್ಲಿ ಮೂಡಿ ಹೊರಬರಲು ಕಾತರಿಸುವುದಕ್ಕೂ ಪೂರ್ವದಲ್ಲಿ, ತನಗೊಂದು ವಿಶಿಷ್ಟ ಆನಂದ ವನ್ನು ಆಹ್ಲಾದವನ್ನು ನೀಡಿರುತ್ತದೆ. ಅಂಥದೇ ಒಂದು ಆನಂದಾನುಭೂತಿಯನ್ನು ರಸಾನುಭವವನ್ನು ಅಭಿವ್ಯಕ್ತಿಯಲ್ಲಿ ನೀಡುವ ಕಾತರತೆ ಚಿತ್ತದಲ್ಲಿ ಸ್ಫುರಿಸುತ್ತದೆ. ಇದನ್ನು ಕಾವ್ಯಕ್ರಿಯೆಯ ರಾಚನಿಕ ಹಂತದ 'ವಿಶಿಷ್ಟ ಕಾಲ'ವೆಂದು ಕರೆಯಬಹುದು. ಈ 'ವಿಶಿಷ್ಟ ಕಾಲ', ಕವಿಯಲ್ಲಿ ವ್ಯಷ್ಟಿನಿರ್ದಿಷ್ಟತೆಯ ವಲಯವನ್ನು ಮೀರಿದ ಸಮಷ್ಟಿಸ್ವರೂಪದ– ದೇಶಕಾಲಾತೀತ–ಚಿರಂತನ ಅನುಭಾವಗಳನ್ನು ರೇಖಿಸುತ್ತದೆ. ಹೀಗಾಗಿ ಇತರರಿಗೆ ಸಾಮಾನ್ಯವೆನಿಸುವ ಲೋಕಾನುಭವಗಳು ಕವಿಸೃಷ್ಟಿಯಲ್ಲಿ ರಸಾನು ಭವಗಳಾಗುತ್ತವೆ. ಆದ್ದರಿಂದ ಕವಿ ತನಗೆ ಗೋಚರಿಸಿದ ವಿರಳ ಅನುಭೂತಿಗಳನ್ನು ಪುನಃ ಕಂಡರಿಸುವ ಸೃಷ್ಟಾರನಾಗುತ್ತಾನೆ ; ಅಖಂಡ ಮಾನವಸತ್ವದ ದೃಷ್ಟಾರನಾಗು ತ್ತಾನೆ. ಈ ದೃಷ್ಟಿಯಿಂದ ಕಾವ್ಯ ಕೇವಲ ರಸಕ್ರಿಯೆ ಅಲ್ಲ ; ಅದೊಂದು ಸೃಜನ ಶೀಲ ರಸಪ್ರಕ್ರಿಯೆ. ಕವಿಸೃಷ್ಟಿಯ ರಸಪ್ರಕ್ರಿಯೆಗಳಿಗೆ ಒತ್ತಾಸೆ ಸಂವೇದನೆಗಳು, ಮೊಗ್ಗು ಅರಳುವ ಮೊದಲು ಅದರಲ್ಲಿ ಸುಳಿದಿರುಗುತ್ತಿರುವ ಮತ್ತು ಹೊರಬರಲು ಕಾತರಿಸುತ್ತಿರುವ ಸುಗಂಧದಂತೆ ಕವಿ ಪ್ರತಿಭೆಯ ಅಂತರಿಕ ಸ್ತರದಲ್ಲಿ ತಮ್ಮ ಬಂಧ ಮುಕ್ತಿಗಾಗಿ–ಅನುಭಾವ–ಸಂವೇದನೆಗಳಿಗೆ ಕಾತರಿಸುತ್ತಿರುತ್ತವೆ.

## ಪ್ರಜ್ಞೆ–ಪ್ರತಿಭೆ

ಕವಿಯ ಸಂವೇದನೆಗಳಿಗೆ ವಿರಳ ಕಲಾತ್ಮಕ ಶಿಲ್ಪರೂಪ ನೀಡುವುದು ಪ್ರತಿಭೆ ಎನ್ನುವುದಾದರೆ, ತಮ್ಮ ಬಂಧಮುಕ್ತಿಗಾಗಿ ಅಥವಾ ಬಿಡುಗಡೆಗಾಗಿ ಚಡಪಡಿಸುವ,

ಹಂಬಲಿಸುವ ಸಂವೇದನೆಗಳಿಗೆ ಅಭಿವ್ಯಕ್ತಿ ರೂಪ ಕೊಡುವಾಗ ಕವಿಗೆ ಅದರ ಪ್ರಜ್ಞೆ ಇರಬೇಕೆ ? ಬೇಡವೇ ? ಎನ್ನುವುದು ಪ್ರಶ್ನೆ. ಅಂಥ ಪ್ರಜ್ಞೆಯೊಂದು ಕವಿಯಲ್ಲಿದ್ದರೆ ಅವನ ಪ್ರತಿಭೆ ನಿರ್ವಹಿಸುವ ವಸ್ತುವಿನ ಸಂಯೋಜಿತ ಕಲಾತ್ಮಕ ಸ್ವರೂಪಕ್ಕೆ ಮಾರಕವಾಗಲಿಕ್ಕಿಲ್ಲವೇ ? ಅದು ಕಾವ್ಯದ ಸಮಷ್ಟಿಸ್ವರೂಪವನ್ನು ಕುಗ್ಗಿಸಿ, ಗುಣಮಟ್ಟವನ್ನು ತಗ್ಗಿಸಲಿಕ್ಕಿಲ್ಲವೇ ?

ಕಲ್ಪಕತೆಯಿಂದ ಉದ್ದೀಪ್ತವಾದ ಪ್ರಜ್ಞೆ ಕಾವ್ಯಸೃಷ್ಟಿಗೆ ಅಗತ್ಯ ಎನ್ನುವುದು ಮಿಡ್ಲಟನ್‌ಮರ್ರೇ ಅಭಿಪ್ರಾಯ.[9]

ಈ ಹಂತದಲ್ಲಿ ಗಮನಾರ್ಹವಾದದ್ದು ಪ್ರಜ್ಞೆ ಪ್ರತಿಭೆಗಳ ನಿರವಯುವ ಸಂಬಂಧ. ಕವಿಗೆ ಪ್ರತಿಭೆಯೊಂದೇ ಸಾಲದು—ಅದಕ್ಕೆ ಪ್ರಜ್ಞೆಯೂ ಅಗತ್ಯ. ತನ್ನ ಆಯ್ಕೆಯ ವಸ್ತು ಯಾವುದು ? ಅದರ ವಿವಿಧ ಆಯಾಮುಗಳು ಯಾವುವು ? ಯಾವುದನ್ನು ಕುರಿತು ತನ್ನಲ್ಲಿ ಆಲೋಚನೆ ಮೂಡಿದೆ, ಹೃದಯ ಸ್ಪಂದಿಸಿದೆ ಅದೊಂದು ವಸ್ತು ರೂಪ. ಆ ವಸ್ತುರೂಪ ಅಭಿವ್ಯಕ್ತಿಯಲ್ಲಿ ವಸ್ತುಪ್ರತಿರೂಪವಾಗಬೇಕಾಗುತ್ತದೆ. ಕವಿಯ ಆಯ್ಕೆಯ ವಸ್ತುರೂಪ ಅಭಿವ್ಯಕ್ತಿಯ ವಸ್ತು ಪ್ರತಿರೂಪವಾಗಿ ಮೈದಾಳುವವರೆಗಿನ 'ಅಂತರ' ವನ್ನು, ವಸ್ತುವಿನ ವಿಕಾಸಕ್ಕೆ–ಧ್ವನಿಪೂರ್ಣತೆಗೆ ಸೌಂದರ್ಯದ ಸ್ವಯಂ ನಿರ್ಮಿತಿಗೆ—ಅಗತ್ಯವಾದ 'ರಸಾಂತರ' ಎನ್ನಬಹುದು. ರಸಾಂತರದ ಈ ಅವಧಿ ಕಾಲದ ಮಿತಿಗೆ ನಿಲುಕುವಂಥದಲ್ಲ. ಇಂಥ ಅತಿ ಮೊನಚಾದ ತೀಕ್ಷ್ಣ ಮತ್ತು ಅತ್ಯಂತ ಸಾಂದ್ರವಾದ ಈ ರಸಾಂತರದ ಸ್ಥಿತಿಯಲ್ಲಿ ಪ್ರತಿಭೆ ಸ್ವಯಂದೀಪ್ತವಾಗಿ ಸ್ಫುರಿಸುತ್ತಿರುತ್ತದೆ. ಈ ಸ್ಫುರಣ ಸಮಯದಲ್ಲಿ ಕವಿಗೆ ವಸ್ತುವಿನ ರೂಪ ಪ್ರಜ್ಞೆ ಮರೆಯಾದರೆ, ಅರೆಯಾದರೆ, ವಸ್ತುಪ್ರತಿರೂಪದ ಸಂವಹನ ಕ್ರಿಯೆಗೆ ಅಗತ್ಯವಾದ ಕಲಾಭಿಜ್ಞತೆ, ಪ್ರತಿಮಾಕೌಶಲ, ಸಾಂಕೇತಿಕ ಪರಿಣತಿಗಳು ಅಳವಡದೆ, ಅಭಿವ್ಯಕ್ತಿಯ ಪರಿಪೂರ್ಣತೆಗೆ ದೋಷ ಒದಗುವ ಸಂಭವ ಇದ್ದೇ ಇರುತ್ತದೆ. ಸಂವಹನ ಕ್ರಿಯೆಯ ವಿವಿಧ ಹಂತಗಳಲ್ಲಿ ಪ್ರಜ್ಞೆ, ಪ್ರತಿಭೆಯಿಂದ ಉದ್ದೀಪ್ತನಾದ ಕವಿಯನ್ನು ಸಂಯೋಜಿತ ಪಥದತ್ತ ಮುನ್ನಡೆಸಲು ಸಹಕಾರಿ. ಇದರಿಂದ ಕವಿ ಸದಾ ಎಚ್ಚರದಿಂದಿರಲು ಸಾಧ್ಯ. ಮಾನಸಿಕ ಪಾತಳಿಯ ಪ್ರಜ್ಞೆ, ಹೃದಯಸ್ಥಿತ ಪ್ರತಿಭೆಯಲ್ಲಿ ಸಂಗಮಿಸಿದಾಗ ಕವಿಯ ವಸ್ತುಪ್ರತಿರೂಪ ಅಥವಾ ಪ್ರತಿಮಾಸೃಷ್ಟಿ ಸಫಲವಾಗಬಹುದು. ಆದರೆ ಪ್ರತಿಭಾವಂತರೆಲ್ಲರೂ ಇಂಥ ವಸ್ತು ಪ್ರಜ್ಞೆಯನ್ನು ಹೊಂದಿರುತ್ತಾರೆ ಎಂದು ಹೇಳಲು ಬಾರದು. ಅಲ್ಲಿ ಪುನಃ, ಸಂಸ್ಕಾರಜನ್ಯವಾಗಿ, ದೈವದತ್ತವಾಗಿ ಬಂದ ಆಯಾ ವ್ಯಕ್ತಿಗಳ ಪ್ರತಿಭಾವಿಶೇಷವಾದ ಗುಣ ಅದಕ್ಕೆ ಕಾರಣವಾಗುತ್ತದೆ. ಈ ಪ್ರತಿಭೆಯ ವಿಶಿಷ್ಟತೆಯಿಂದಾಗಿ ಕವಿ ತನ್ನ ಆಯ್ಕೆಯ ವಸ್ತುವಿನ ವ್ಯಾಪ್ತಿ ಆಳಗಳನ್ನು ಅರಿಯುತ್ತಾನೆ ; ಜೀವನದ ಅಮೂರ್ತ ಪಾರ್ಶ್ವಗಳನ್ನು

9. 'Reason irradiated by imagination'

ಅಗೋಚರ ಕ್ಷಿತಿಜಗಳನ್ನು ಸ್ಪರ್ಶಿಸುತ್ತಾನೆ. ಆದುದರಿಂದ ಸೃಜನಶೀಲತೆಯ ಅಸ್ಥಿತ ಸ್ಥಿತಿಯಲ್ಲಿ, ಪ್ರಜ್ಞೆ, ಪ್ರತಿಭಾವಂತ ಕವಿಯ ಅನೂಹ್ಯಶಕ್ತಿ. ಇದರಿಂದಾಗಿ ಕವಿ ಮತ್ತೆ ಮತ್ತೆ ತನ್ನ ವಸ್ತುವನ್ನು ಕುರಿತು ಗಂಭೀರ ಚಿಂತನೆ ಮಾಡಬೇಕಾಗುತ್ತದೆ, ಅವನಲ್ಲಿ ಒಂದು ವಿಧವಾದ ಆತ್ಮದ ಅಸ್ವಸ್ಥತೆ ಉಂಟಾಗುತ್ತದೆ. ಪ್ರಜ್ಞೆಯ ಅನೂಹ್ಯಶಕ್ತಿ ಪ್ರತಿಭೆಯಲ್ಲಿ ಬೆರತಾಗ,

> 'ಯಾವ ಕಡೆಗೂ ಮಗ್ಗಲೂರಗೊಡದಮ್ಮಯ್ಯ
> ಈ ನೋವಾ ನಾ ತಾಳಲೆಂತೆ ತಾಯೀ'

ಎನ್ನುವ ತಳಮಳ ಭಾವನೆಗಳಲ್ಲಿ ಕಲ್ಪನೆಗಳು ಚಿಗುರುವುದು, ಶಬ್ದಗಳಿಗೆ ವಿಶೇಷ ಕಾಂತಿಯೊದಗುವುದು, ಕಾವ್ಯಕ್ರಿಯೆಗೇ ಲಯ ಧ್ವನಿ ವಿನ್ಯಾಸಗಳು ಚಾಲನೆ ಕೊಡುವುದು ಮುಂತಾದುವು ಕವಿಯ ಅಸ್ವಸ್ಥತೆಯನ್ನು ಅಧಿಕಗೊಳಿಸುತ್ತಲೇ ಹೋಗುತ್ತವೆ. ವಸ್ತುವನ್ನು ಕುರಿತ ಸಮಗ್ರ ಸ್ವರೂಪದ ಕಲ್ಪನೆ ಚಿಂತನೆಗಳು ಎರಕಗೊಂಡು ಕವಿ ಚಿತ್ತ ವಿರಳ ಶಕ್ತಿಯಿಂದ ದೀಪ್ತವಾಗಿ ಅಂತರ್ದರ್ಶನದ ಅಭಿವ್ಯಕ್ತಿಗೆ ಹೊಂಚು ಹಾಕುತ್ತದೆ. ಆದ್ದರಿಂದ ವಸ್ತರೂಪವನ್ನು ಕುರಿತ ಗಂಭೀರ ಚಿಂತನೆ. ಉದಾತ್ತ ಕಲ್ಪನೆಗಳ ಅವಿರಳ ಸಂಗಮವಾದ ಈ ಅಂತರ್ದರ್ಶನವೇ ಪ್ರತಿಭೆಯ ಜೀವಾಳವೆಂದು ಹೇಳಬಹುದು.

### ಕಾವ್ಯ—ರಸಾನುಭವ—ಆನಂದಾನುಭೂತಿ

ಕಾವ್ಯದ ಗುಣವನ್ನು ಕುರಿತು ಮಾತಾಡುವಾಗಲೆಲ್ಲ ರಸಾನುಭವ ಆನಂದಾನುಭೂತಿ ಇತ್ಯಾದಿ ಶಬ್ದಗಳನ್ನು ಬಳಸುತ್ತೇವೆ.

ಕಾವ್ಯವನ್ನು ಓದುವುದರಿಂದ ಉಂಟಾಗುವ ರಸಾನುಭವ, ಅಥವಾ ಆನಂದಾನುಭೂತಿ ಎಂದರೆ ಅದೊಂದು ರೀತಿಯ ಮತ್ತೇರಿಸುವ ಅಥವಾ ಮಂಪರು ಹರಿಸಿ ಮೂರ್ಛೆಗೆ ತಲುಪಿಸುವ ಸ್ಥಿತಿಯಂತೂ ಅಲ್ಲವಲ್ಲ ? ಒಂದು ಉನ್ನತ ಕಾವ್ಯವನ್ನು ಓದಿದಾಗ ಆ ಕಾವ್ಯದ ವಸ್ತುವನ್ನು ಕುರಿತು ನಮ್ಮಲ್ಲಿರಬಹುದಾದ ಪರಂಪರಾನುಗತ ಗ್ರಹಿಕೆಗಳು, ಕೆಲವು ಸಂಕೋಚ ಅಜ್ಞಾನಗಳು ಮಾಯವಾಗಿ, ನೂತನ ಕಲ್ಪನೆ ಉದ್ವೇಗಗಳ ನವೀನ ಭಾವಸ್ಫುರಣೆಗಳ ಅನುಭವ ಉಂಟಾಗುತ್ತದೆ. ಅದುವರೆಗೂ ನಮ್ಮ ಗಮನಕ್ಕೆ ಬಾರದ ಹೊಸ ಅನುಭಾವದ ಗವಾಕ್ಷಗಳು ನಮ್ಮಲ್ಲಿ ಸಂಚಲನೆಗೊಳ್ಳುತ್ತವೆ. ಈ ವಿಶೇಷ ಭಾವಗಳು, ಹೊಸ ಅನುಭವಗಳು ಸಂಚಲಿತಗೊಂಡಾಗ ಕವಿಯ ಅಭಿವ್ಯಕ್ತಿಯ ಜೊತೆ ಜೊತೆ ನಮ್ಮ ಹೃದಯ ಸ್ಪಂದಿಸುತ್ತದೆ. ನಮ್ಮ ಪ್ರತ್ಯೇಕತೆ ಕವಿ ಸೃಷ್ಟಿಯ ಭವ್ಯತೆಯಲ್ಲಿ ಬೆರೆತು, ನಮ್ಮ ವ್ಯಕ್ತಿತ್ವ ಪರಿವರ್ತನೆಗೊಂಡು ಮಾನಸಿಕ ಪಾತಳಿಯಲ್ಲಿ ಹೊಸ ಚೆಲುವಿನ, ಅನುರಾಗದ ಮಿದು ಸೋನೆ ಜಿನುಗಿದ ಅನುಭವ. ಇಂಥ ಸಂಯುಕ್ತ ಸ್ಥಿತಿಯಲ್ಲಿ ಓದುಗನಲ್ಲಿರಬಹುದಾದ ಶುಷ್ಕತೆ, ಅಂತರಂಗದ

ಆರ್ದ್ರತೆಯಿಂದ ತೊಯ್ದು, ಬತ್ತಿದಂತಿದ್ದ ಚಿತ್ತ ಚಿಲುಮೆಯಾಗಿ ಹೊಮ್ಮಿ, ಹೃದಯದ ಆರ್ದ್ರತೆಯಲ್ಲಿಯೇ ತನ್ನ ಇಡೀ ವ್ಯಕ್ತಿತ್ವವನ್ನು—ಆ ಕ್ಷಣಕ್ಕಾದರೂ—ಅದ್ದಿದಂಥ ಅಪೂರ್ವ ಅನುಭವ.

ಯಾವುದೇ ಕಾವ್ಯವನ್ನು ಓದಿದಾಗ ನಮಗೆ ಇಂಥ ವಿರಳ ಅನುಭವವಾದರೆ ಅದನ್ನು ರಸಾನುಭವ ಎಂದು ಕರೆಯಬಹುದು. ವಿಶೇಷ ಭಾವ ಹೊಳೆದು, ಅನಿಸಿಕೆಯಲ್ಲಿ ಸ್ಥಿರೀಕೃತ ಅನುಭವವಾಗಿ, ಸಂವಹನ ಕ್ರಿಯೆಯಲ್ಲಿ ಸಂಚಾರಿಯಾಗಿ, ಅಭಿವ್ಯಕ್ತಿ ಶಿಲ್ಪದಲ್ಲಿ ಸಂಯೋಗಗೊಂಡು ನಿಷ್ಪನ್ನವಾಗುವುದೇ ರಸಾನುಭವ. ಪ್ರಜ್ಞಾಸಂಗಮಿತ ಪ್ರತಿಭೆಯಿಂದ ಮಾತ್ರ ಇಂಥ ರಸಸೃಷ್ಟಿ ಸಾಧ್ಯ. ನಾವು ಕಂಡರಿಯದ, ಊಹಾತೀತ ಘೋರ ಸತ್ಯಗಳು ನಮ್ಮ ಹೊರನೋಟವನ್ನು ಭೇದಿಸಿ, ಕೃತ್ರಿಮ ಆವರಣಗಳನ್ನು ಛಿದ್ರೀಕರಿಸಿದಾಗ, ಚಿರಂತನ ಜೀವನ ಮೌಲ್ಯಗಳು ಅನಾವರಣಗೊಳ್ಳುತ್ತವೆ ; ಇಡಿಯಾಗಿ ನಮ್ಮ ಅರಿವಿಗೆ ದಕ್ಕುತ್ತವೆ. ಇದರಿಂದಾಗಿ ನಮ್ಮಲ್ಲಿ ಮೂಡಬಹುದಾದ ಹೊಸ ಜೀವನದೃಷ್ಟಿ, ಮೌಲ್ಯಪ್ರಜ್ಞೆ, ಸೌಂದರ್ಯದ ಆವಿಷ್ಕಾರಗಳು ಆನಂದಾನುಭೂತಿಯ ಕುರುಹುಗಳಾಗುತ್ತವೆ.

ಸತ್ಯ ಪರಿಪಾಲನೆಗೆ ಕಟ್ಟುಬಿದ್ದು ಅನಾವರಣಗೊಳ್ಳುವ ಹರಿಶ್ಚಂದ್ರನ ಯಾತನೆಯ ಅನುಭವವನ್ನು ಒಂದು ಕ್ಷಣ ಅಲಕ್ಷಿಸಿದರೂ ಅವನನ್ನೇ ನಂಬಿದ ಚಂದ್ರಮತಿ, ತನ್ನ ಮಗ ಲೋಹಿತಾಶ್ವ ಹಾವಿಗೆ ಬಲಿಯಾದಾಗ ಅವನ ಶವವನ್ನು ತೋಳಲ್ಲಿ ಎತ್ತಿ ತಂದು ಮಸಣದ ಕರಿಗೊಳ್ಳಿಗಳ ಮೇಲೆ ಪಟ್ಟಿರಿಸಿ ಗೋಳಿಡುವ ಹೃದಯವಿದ್ರಾವಕ ದೃಶ್ಯ, ಆದರ ಮೂಲಕ ಬರುವ 'ರಸಾನುಭವ'ವನ್ನು ಅಲಕ್ಷಿಸಲು ಸಾಧ್ಯವೇ ?

ಸಮಸ್ತ ಪ್ರಪಂಚದಲ್ಲಿ ವಿಜಯಸ್ತಂಭವನ್ನು ನೆಡುವ ಸಾಹಸ ಕೈಕೊಂಡ ಭರತ ಚಕ್ರವರ್ತಿ ತನ್ನನ್ನು ಸೆಣಸಿ ನಿಂತ ತನ್ನ ಸಹೋದರ ಬಾಹುಬಲಿಗೆ ಸೋಲುತ್ತಾನೆ. ವಿಜಯಿಯಾದ ಬಾಹುಬಲಿ, ಸೋದರರಲ್ಲಿ ವೈರದ್ವೇಷಗಳನ್ನು ಹುಟ್ಟಿಸುವ ಸಾಮ್ರಾಜ್ಯವನ್ನು ಕುರಿತು ಜುಗುಪ್ಸೆ ಹೊಂದುತ್ತಾನೆ. ಸಾಮ್ರಾಜ್ಯದ ಸಕಲ ವೈಭವಗಳನ್ನು ತೃಣೀಕರಿಸಿ, ವೈರಾಗ್ಯಮೂರ್ತಿಯಾಗಿ ತಪಸ್ಸು ಕೈಕೊಳ್ಳುತ್ತಾನೆ. ಬಾಹುಬಲಿಯ ಮಹಾತ್ಯಾಗ ಉನ್ನತ ಜೀವನ ದರ್ಶನಕ್ಕೆ ಮಹೋನ್ನತ ನಿದರ್ಶನವಲ್ಲವೆ ? ಇಂಥ ಉನ್ನತ ಜೀವನ ದರ್ಶನ ಕಾವ್ಯವಸ್ತು ಅಭಿವ್ಯಕ್ತಿಗಳಲ್ಲಿ ಮೂಡಿದರೆ ಅದೇ ಆನಂದಾನುಭೂತಿ. ವ್ಯಕ್ತಿತ್ವವನ್ನು ಬಿಗಿದ ಹಿಂಸೆ, ಕ್ರೌರ್ಯ, ಸಾಮ್ರಾಜ್ಯಪಿಪಾಸೆ—ಅಧಿಕಾರ ಲಾಲಸೆ—ಅಹಂಕಾರಾದಿಗಳಿಂದ ಮುಕ್ತಗೊಳಿಸಿ, ತಲಸ್ಪರ್ಶಿಯಾದ ಜೀವನ ಸತ್ಯವನ್ನು ಸಾಕ್ಷಾತ್ಕರಿಸುವ ಇಂಥ ಆನಂದಾನುಭೂತಿ ಕಾವ್ಯಸೌಂದರ್ಯದ ಜೀವಾಳ. ಪ್ರತಿಭೆ ಉಜ್ವಲರೂಪದಲ್ಲಿ ಪ್ರಕಟಗೊಳ್ಳುವುದು ಇಂಥ ಸಂದರ್ಭಗಳಲ್ಲಿಯೇ !

**ಸ್ಫೂರ್ತಿ**

ಪರಿಸರದ ಗಾಢ ಪ್ರಭಾವದಿಂದಾಗಿ ಕವಿಯಲ್ಲಿ ತತ್‌ಕ್ಷಣ ಉಂಟಾಗುವ ಭಾವಾವೇಶ ಸ್ಫೂರ್ತಿ. ಪ್ರತಿಭೆ ಅಂತಃಸ್ಥವಾಗಿರುವ ಸ್ವಯಂಸ್ಫುರಣವಾದರೆ, ಸ್ಫೂರ್ತಿ ಬಹಿರಂಗದ ವಸ್ತುವೊಂದರಿಂದ ಹೊಮ್ಮುವ ಪ್ರಚೋದನೆ. ಕಾವ್ಯದ ಅಂತಃ ಸೌಂದರ್ಯ ನಿರ್ಮಿತಿಗೆ ಪ್ರತಿಭೆ ಕಾರಣವಾದರೆ, ಅದರ ರಾಚನಿಕ, ಸಂವಾಹಕ ಹಂತಗಳುದ್ದಕ್ಕೂ ಕಾವ್ಯಶಿಲ್ಪವನ್ನು ರೂಪಿಸುವ, ನಿರ್ದೇಶಿಸುವ ಮತ್ತು ಸಂವಹನ ಕ್ರಿಯೆ ಸ್ಥಗಿತಗೊಳ್ಳದಂತೆ ಉದ್ದೇಶಿತ ಮಜಲಿನವರೆಗೆ ಮುನ್ನಡೆಸುವ ಚಲನಶೀಲ ಶಕ್ತಿಯೇ ಸ್ಫೂರ್ತಿ.

ಪರಿಸರದ ಒಂದು ಘಟನೆ, ವ್ಯಕ್ತಿಗೆ ನೇರವಾಗಿ ಸಂಬಂಧಿಸಿರಲಿ, ಇಲ್ಲದಿರಲಿ, ಅದು ಅವನಲ್ಲಿ ಕೆಲವು ಪ್ರತಿಕ್ರಿಯೆಗಳನ್ನು ಉಂಟುಮಾಡುತ್ತದೆ. ಇಂಥ ಪ್ರತಿಕ್ರಿಯೆಗಳು ಅವನ ಕುತೂಹಲವನ್ನು ಕೆರಳಿಸಬಹುದು. ಪ್ರತಿಕ್ರಿಯೆ ಕೇವಲ ಕುತೂಹಲದ ಮಟ್ಟಕ್ಕೆ ನಿಂತಾಗ ಅದು ಅಷ್ಟಕ್ಕೆ ಸ್ಥಗಿತಗೊಳ್ಳಬಹುದು. ಹಾಗಾಗದೆ ವ್ಯಕ್ತಿಯ ಅನಿಸಿಕೆಗಳಲ್ಲಿ ಕರಗಿ, ಧೋರಣೆಗಳಲ್ಲಿ ಹರಳುಗಟ್ಟಿ ನಿಂತಾಗ ಆ ಪ್ರತಿಕ್ರಿಯೆಗೆ ಮಹತ್ವ ಪ್ರಾಪ್ತವಾಗುತ್ತದೆ. ಆಗ ಅದು ಆಸಕ್ತಿಯಾಗಿ ವ್ಯಕ್ತಿಯ ಪ್ರವೃತ್ತಿಯಲ್ಲಿ ಬೆರೆತು ವೈಚಾರಿಕತೆಯ ಅವಿಭಾಜ್ಯ ಅಂಗವಾಗಿ ಪ್ರಚೋದಕ ರೂಪ ಧಾರಣ ಮಾಡುತ್ತದೆ. ಪರಿಸರದ ಘಟನೆಯ ಒಂದು ಪ್ರತಿಕ್ರಿಯೆ, ವೈಚಾರಿಕ ಪ್ರಕ್ರಿಯೆಯ ಅವಿಭಾಜ್ಯ ಅಂಗವಾಗಿ ಸ್ಥಾಪಿತಗೊಂಡು ವ್ಯಕ್ತಿಯ ಈ ಆಲೋಚನಾ ಪರಿಧಿ ವಿಸ್ತರಿಸಿಕೊಳ್ಳುತ್ತದೆ. ಸೂಕ್ತವಾಗಿ ಚಿತ್ತದ ಹಿಗ್ಗಿಗೆ ಕಾರಣವಾಗುತ್ತದೆ. ವ್ಯಕ್ತಿಯ ಆಂತರಿಕ ಸ್ಥಿತಿಸ್ಫೋಟಕ ಬಿಂದುವನ್ನು ತಲುಪುವುದು ವಿರಳ. ಬಹಿರಂಗದ ಒಂದು ವಸ್ತು ಅಥವಾ ಘಟನೆ ಅಂತರಂಗದಲ್ಲಿ ಪ್ರವಹಿಸುವ ಅನುಭಾವ, ಸಂವೇದನಗಳ ಸ್ತರವನ್ನು, ಅಂತಸ್ಥಿತ ಪ್ರತಿಭಾಶಕ್ತಿಯನ್ನು ತಟ್ಟಿದಾಗ ಚಿತ್ತದಲ್ಲಿ ಆವೇಗ, ಭಾವದಲ್ಲಿ ಆವೇಶಗಳು ಪ್ರಚೋದಿತವಾಗುತ್ತವೆ. ಈ ಭಾವಾವೇಶದ ಉದ್ವಿಗ್ನಕಾರಕ ಪ್ರಚೋದನೆಯೇ ಸ್ಫೂರ್ತಿ. ಅಂತರಂಗದ ಸಂವೇದನೆಗಳ ಸಂಸ್ಫುರಣ ಮತ್ತು ಬಹಿರಂಗದ ವಸ್ತುಘಟನೆಗಳ ಪ್ರಚೋದನೆಗಳು ಪರಸ್ಪರ ಸಂಧಿಸುವ ಒಂದು ಹಂತದಲ್ಲಿಯೇ ಪ್ರತಿಭೆ ಮತ್ತು ಸ್ಫೂರ್ತಿಗಳು ಎರಕಗೊಂಡು ಕಾವ್ಯಶಿಲ್ಪದ ಸೌಂದರ್ಯಸಿದ್ಧಿಗೆ ಚೈತನ್ಯ ಶಕ್ತಿಗಳಾಗುತ್ತವೆ. ಕೆಲವು ಸಲ, ಹೊಮ್ಮಿದ ಸ್ಫೂರ್ತಿ ಕವಿಯ ಜೀವನದುದ್ದಕ್ಕೂ ಜಾಗ್ರುತವಾಗಿರುವುದು ವಿರಳ. ಮತ್ತು ಎಲ್ಲ ಕವಿಗಳಿಗೂ, ಸದಾ ಸ್ಫೂರ್ತಿಯಿರುತ್ತದೆ ಎಂದು ಹೇಳಲೂಬಾರದು. ಕಾವ್ಯವೂ ಒಂದು ಉದ್ಯಮವಾಗಿ ಕೆಲವು ಸಲ, ರಾಜಕೀಯ ವಿಚಾರಧೋರಣೆಗಳ ಉದ್ಘೋಷ ಮಾತ್ರವಾಗಿ ಇನ್ನು ಕೆಲವು ಸಲ ಮೋಜಾಗಿ ಮತ್ತೆ ಕೆಲವು ಸಲ ಗುಂಪುಗಾರಿಕೆಯ ಧ್ವನಿಯಾಗಿ ಮೂಡಿಬರುವ ಕಾಲದಲ್ಲಿ ಸ್ಫೂರ್ತಿ ಎನ್ನುವುದು ಕೇವಲ ಕೈಚಳಕ ಅಥವಾ ಕವಿತೆ ಹೊಳೆಯುವ 'ವ್ಯವಹಾರ'ವಾಗಿರುವ ಸಂಭವವೇ ಅಧಿಕ. ಆದರೆ ಮೂಲತಃ ಸ್ಫೂರ್ತಿ ಮೋಜಿನ ವಸ್ತುವಲ್ಲ. ಬದುಕಿನ

ಬಣ್ಣ ಕಣ್ಣು ತುಂಬುವವರೆಗೆ-ನರ್ತನದ ಚಲನಶೀಲಗತಿಯಂತೆ ಕವಿ ಸೃಷ್ಟಿಗೆ ಪ್ರೇರಕವಾಗುವ ಸ್ಫೂರ್ತಿ, ಹೊರಗಿನ ಬಣ್ಣ ತನ್ನ ಆಕರ್ಷಣೆ ಕಳೆದುಕೊಂಡ ಮೇಲೂ ಕವಿಯ ಒಳಗಣ್ಣಿಗೆ 'ಒಳ ಅರಿವಿಗೆ, ಅಮೂರ್ತ ವಿನ್ಯಾಸಗಳ ತೋರುಬೆರಳಾಗಿ ಕಾರ್ಯ ಮಾಡುತ್ತಲೇ ಇರುತ್ತದೆ.

ಸ್ಫೂರ್ತಿ ಕೆಲವರಲ್ಲಿ ಕುಗ್ಗಿ ಹೋಗಲು ಕಾರಣಗಳು ಅನೇಕ. ಸಂವೇದನಾಶೀಲತೆಯ ಅಭಾವ, ಪ್ರವೃತ್ತಿ ಸಹಜವಾದ ಸೃಜನಶೀಲತೆಯ ಕೊರೆ—ಇವೆಲ್ಲಕ್ಕೂ ಮಹತ್ವವಾದದ್ದು ವ್ಯಕ್ತಿಜೀವನದಲ್ಲಿ ತೊಡಗಿ, ಸಮಾಜಕ್ಕೆ ಬದ್ಧನಾಗಿ ವ್ಯವಸ್ಥೆಯ ಸಿಕ್ಕುಗಳಲ್ಲಿ ಸಿಕ್ಕಂತೆಲ್ಲ ಅವನಿಂದ ಅವನಿಗೆ ಗೊತ್ತಿಲ್ಲದಂತೆ ಕಳಚಿಕೊಳ್ಳುವ ಮಾನವೀಯ ಸಂಬಂಧಗಳು, ವ್ಯಾವಹಾರಿಕ ನೆಲೆಯ ವಾಸ್ತವತೆಯ ಶೀತಲ ಅಲಗಿನಿಂದ ಕತ್ತರಿಸಿಹೋಗುವ ಭಾವುಕತೆಯ ಸೂಕ್ಷ್ಮ ತಂತುಗಳು-ಇದರಿಂದಾಗಿ ವ್ಯಕ್ತಿಯ ಒಳಗೊಳಗೇ ಒಂದು ಏಕಾಕಿತನ-ಅದನ್ನು ಭಾವನಾತ್ಮಕ ಒಂಟಿತನವೆನ್ನಬಹುದು-ಬೆಳೆಯುತ್ತ ಹೋಗಿ, ಅವನು ಬದುಕನ್ನು ಇಡಿಯಾಗಿ ನೋಡುವ, ಮತ್ತು ತಾನು ಆ ಇಡಿಯೊಂದರ ಭಾಗವೆನ್ನುವ ಚೇತನಶೀಲದೃಷ್ಟಿ, ಉತ್ಸಾಹದ ವೃಷ್ಟಿ ತುಗ್ಗುತ್ತದೆ. ಮನಸ್ಸು ನೀರಸ, ಚಿತ್ತ ನಿರಾರ್ದ್ರ. ನಿಶ್ಶಬ್ದ ರಾತ್ರಿಯ ಬ್ರಾಹ್ಮೀ ಮುಹೂರ್ತದಲ್ಲಿ ಅಲೆಅಲೆಯಾಗಿ ತೇಲಿಬರುವ ಹಂತಿಹಾಡಿನ ಹಿನ್ನೆಲೆಯ 'ಹುಕಿ'ಯಂತಿರುವ ಸ್ಫೂರ್ತಿ, ಯಾಂತ್ರೀಕೃತ ಏಕತಾನತೆಯ ಅರಣ್ಯದಲ್ಲಿ ಮುಳುಗಿ ಹೋಗುವ ಮಾನವೀಯತೆಯ ಕ್ಷೀಣಧ್ವನಿಯಂತೆ ಮುಳುಗಿಹೋದರೆ ಅಚ್ಚರಿಯಿಲ್ಲ. ಆಗ ವ್ಯಕ್ತಿಯಲ್ಲಿರುವ ರೋಮಾಂಚಕ ಗುಣ, ರಮ್ಯತೆಗೆ ಬೆರಗುಗೊಳ್ಳುವ ಮುಗ್ಧತೆ, ಅದ್ಭುತಕ್ಕೆ ಹಿಗ್ಗಿ ಸ್ಪಂದಿಸುವ ಸ್ಥಿತಿಸ್ಥಾಪಕತೆ, ಕಲ್ಪಕತೆಗೆ ಅರಳುವ ಹುಕಿ ಬಾಡಿ, ಯಾವುದೇ ಒಂದು ವಸ್ತು, ಘಟನೆಗೂ ಮನತೆರೆಯುವ, ಎದೆಮಿಡಿಯುವ ಸಹಜತೆ ಮಾಯವಾಗಬಹುದು. ಹಾಗೆಂದು ಇದು 'ಸ್ಥಿತಪ್ರಜ್ಞಸ್ಥಿತಿ'ಯಲ್ಲ. ಇದೊಂದು ಬಗೆಯ ಪ್ರಜ್ಞಾಸ್ಥಗಿತ ಸ್ಥಿತಿ. ದಡ್ಡು ಬಿದ್ದ, ಜಡ್ಡುಗಟ್ಟಿದ ಮನೋಗುಣ. ಬದುಕಿನ ಬೇಟೆಗೆ ಬಲಿಯಾಗಿ ತಮ್ಮ ಸೃಜನಶೀಲ ಶಕ್ತಿಯನ್ನು ಕಳೆದುಕೊಂಡ ವ್ಯಕ್ತಿಗಳಿಂದ ಸ್ಫೂರ್ತಿ ದೂರ ದೂರ.

ಆದ್ದರಿಂದ ಸ್ಫೂರ್ತಿ ಸಂವೇದನಶೀಲ ಹೃದಯದ ಸೃಜನಶೀಲ ಚಿತ್ತದ ಚೈತನ್ಯಗುಣ. ನೆಲದ ಒಡಲಿಂದ ಅನಿರೀಕ್ಷಿತವಾಗಿ ಪುಟಿಯುವ ಜಲಧಾರೆ. ಅದು ಕವಿಯಲ್ಲಿ ಹೊಮ್ಮಿದಾಗ ಸಂವಹನ ಕ್ರಿಯೆಯ ಮೂಲಕ ಆಂತರಿಕ ಸಂವೇದನೆಗಳನ್ನು, ಅನಿರ್ವಚನೀಯ ಅನುಭಾವಗಳನ್ನು ಮೂರ್ತಗೊಳಿಸಲು ಹವಣಿಸುವ, ನೆರವಾಗುವ ಶಕ್ತಿ. ಉದ್ರೇಕವಿರದಿದ್ದರೂ ಉತ್ಸಾಹ, ಉನ್ಮಾದವಿರದಿದ್ದರೂ ಉತ್ಕರ್ಷ. ಇದು ಸ್ಫೂರ್ತಿಯ ತಿರುಳು. ಸಪ್ಪೆ ವಿವರಣೆಗೆ ಜೋತು ಬೀಳದ ಸಂಸ್ಫುರಣ, ಅರ್ಥಸಾಹಿತ್ಯವನ್ನು ಮೀರಿ ಕಳಕಳಿಸುವ ಉದ್ದೀಪಕ ಶೈಲಿ ಮುಂತಾದುವು ಸ್ಫೂರ್ತಿಯಿಂದ

ಮೂರ್ತಗೊಳ್ಳುವ ಸಂವಹನರೂಪಗಳು. ವಸ್ತುವಿನ್ಯಾಸ, ವಸ್ತು ವೈಶಿಷ್ಟ್ಯಗಳು ಕಣ್ಣು ತೆರೆದುಕೊಳ್ಳುವ ಹಂತದಲ್ಲಿ ಸ್ಫೂರ್ತಿ ಹೊಮ್ಮಿದ ಕವಿಗೆ ವಸ್ತುವಿನ ಆಯ್ಕೆಯ ಸೌಲಭ್ಯವಿರುವುದಿಲ್ಲ. ಒಂದು ರೀತಿಯ ಭಾವಾವೇಶ, ರಸೋನ್ಮತ್ತತೆ, ಪರಿಸರ ಮುಳುಗುಗಳು ಕವಿಯನ್ನು ಆವರಿಸಿರುವುದರಿಂದ ಆಗ ಕವಿ ವಸ್ತುವಿನ ಕೈಗೊಂಬೆಯಾಗುವ ಅವಕಾಶವೂ ಇಲ್ಲದಿಲ್ಲ. ಆಗ ಕವಿಯ ಅಂತಸ್ಥ ಪ್ರತಿಭೆಯೇ ವಸ್ತುವಿನ್ಯಾಸವನ್ನು ರಸಪಥದಲ್ಲಿ ಮುನ್ನಡೆಸಿಕೊಂಡು ಹೋಗುತ್ತದೆ. ಪ್ರತಿಭಾವಂತ ಕವಿ ಮತ್ತೆ ಮತ್ತೆ ತನ್ನ ರಚನೆಯನ್ನು ಪ್ರಜ್ಞಾ ಪಾತಳಿಯಲ್ಲಿಟ್ಟು ಪರಿಶೀಲಿಸುತ್ತಾನೆ. ಸ್ಫೂರ್ತಿಯ ಸಾಂದ್ರ ಪ್ರಚೋದನೆಯಿಂದ, ರಭಸದ ಹೊಮ್ಮುಗೆಯಿಂದ ರಚನೆಯಲ್ಲಿ ಮೂಡಿಬಂದಿರಬಹುದಾದ ನ್ಯೂನತೆಗಳನ್ನು ಕುರುಹಿಟ್ಟು ಹುಡುಕುವ ಸಹೃದಯನಾಗುತ್ತಾನೆ. ಕವಿಗೆ ಇಂಥ ಪ್ರಯತ್ನದಲ್ಲಿ ಸಫಲತೆ ಪ್ರಾಪ್ತವಾಗುವುದು ನಿಶ್ಚಿತವಲ್ಲದಿದ್ದರೂ ಅಂಥ ಸಂದರ್ಭ ಸನ್ನಿವೇಶಗಳ ಪುನಃಸೃಷ್ಟಿ ಕೈಕೊಳ್ಳುತ್ತಾನೆ.

ಒಂದು ಹೂವಿನ ಸುಕುಮಾರತೆ, ಬಣ್ಣ, ಆಕಾರಗಳು ಇನ್ನುಳಿದ ಹೂಗಳಿಗಿಂತ ಚಿತ್ತಾಕರ್ಷಕವಾಗಿ ಕಾಣಬಹುದು; ಅದೇ ಹೂ ಮತ್ತೆ ಮತ್ತೆ ಕಂಡಾಗ ಅದರ ಗಾಢ ಪ್ರಭಾವ ನಮ್ಮ ಅಂತರಂಗದಲ್ಲಿ ಉಳಿದು ತನ್ನದೇ ಆದ ಭಾವಕೋಶವನ್ನು ರೂಪಿಸಿಕೊಳ್ಳಬಹುದು. ಅದೇ ಹೂ ಯಾವುದೋ ಒಂದು ವಿರಳ ಕ್ಷಣದಲ್ಲಿ ನಮ್ಮ ಭಾವಕೋಶವನ್ನು ತಟ್ಟಿ ಅಭಿವ್ಯಕ್ತಿಗೆ ಪ್ರಚೋದನೆ ನೀಡಬಹುದು.

ಸುರಹೊನ್ನೆ ಪಂಪಕವಿಯ ಮೇಲೆ ಗಾಢವಾದ ಪ್ರಭಾವ ಬೀರಿದ ಹೂ. ನಿಸರ್ಗಾರಾಧಕ ಕವಿ ಅದನ್ನು ಮತ್ತೆ ಮತ್ತೆ ತನ್ಮಯತೆಯಿಂದ ಪರಿಭಾವಿಸಿದ. ಅನುಭವದ ಆಳಕ್ಕಿಳಿದ ಹೂ, ಚೆಲುವಿನ ನೆಲೆಯಾಯಿತು. ಅದರ ಗಾಢವಾದ ಸೌಂದರ್ಯಾನುಭವದ ಅಭಿವ್ಯಕ್ತಿಗೆ ಸುರಹೊನ್ನೆ ಪ್ರಚೋದನೆ ನೀಡಿತು; ಕವಿಯಲ್ಲಿ ಸ್ಫೂರ್ತಿ ಚಿಮ್ಮಿತು ಪ್ರತಿಭೆ ಅದನ್ನು ಈ ರೀತಿ ಕಂಡರಿಸಿತು :

ಎಸಟ್ಗಿಳನೆಯ್ದೆ ಕಂಡರಿಸಿ ಮುತ್ತಿನೊಳಲ್ಲಿ ಸುವರ್ಣಚೂರ್ಣಮಂ
ಪಸರಿಸಿ ಕೇಸರಾಕೃತಿಯೊಳಲ್ಲಿಗೆ ಕರ್ಣಿಕೆಯಂದಮಾಗೆ ಕೀ
ಲಿಸಿ ಪೊಸತಪ್ಪ ಮಾಣಿಕದ ಸುಣ್ದರಲಂ ಮಧು ಮನ್ಮಥಂಗೆ ಬ
ಣ್ಣಿಸಿ ಸಮೆದಂತೆ ತೋಱುವುದು ಪೂಗಳೊಳೇಂ ಸುರಹೊನ್ನೆ ಚೆನ್ನನೋ [10]

ಪಂಪಕವಿ ತನ್ನ ವರ್ಣನೆಗಾಗಿ ಬಳಸುವ ಶೈಲಿ ಮತ್ತು ಹೂವಿನ ವಿವಿಧಾಂಗಗಳ ವಸ್ತು ಸಾದೃಶ್ಯ ಗುಣಗಳು ಇವುಗಳಿಂದಾಗಿ ಈ ಅಭಿವ್ಯಕ್ತಿಯಲ್ಲಿ ಇತರರಿಗೆ ಗೋಚರಿಸಿದ ಅಪೂರ್ವ ಚೆಲುವಿನ ಸೃಷ್ಟಿಯಾಗಿದೆ. ಹೂವಿನ ಎಸಳು, ಕೇಸರ, ಕರ್ಣಿಕೆ ವರ್ಣಿತ

---

10. ಪಂಪಕವಿಯ 'ಆದಿಪುರಾಣ. ೧೧, ೧೧೬.

ಅಂಗಗಳು. ಎಸಳು ಮುತ್ತಿನಿಂದ ರೂಪಿತ. ಎಸಳ ತುಂಬಾ ಪಸರಿಸಿದ ಚಿನ್ನದ ಹುಡಿ ಕೇಸರ, ಹೊಸ ಮಾಣಿಕದಿಂದ ಹೂವಿನ ದೇಟು, ಇವೆಲ್ಲವನ್ನು ಜೋಡಿಸಿ ಅಂದಗೊಳಿಸಿದ ಹೂವಿನ ವಿನ್ಯಾಸ, ಕಾಮದೇವನಿಗಾಗಿ ವಸಂತ ರಚಿಸಿದ ನಯವಾದ ಈ ಸುರಹೊನ್ನೆಯದು ಹೂಗಳಲ್ಲಿ ಏನೆಂಥ ಚೆಲುವು.

ಪರಿಸರದ ಸುರಹೊನ್ನೆ ಕವಿಯ ಭಾವಾವೇಶಕ್ಕೆ 'ಸ್ಫೂರ್ತಿ'ಯಾದರೆ, ಕವಿಚಿತ್ತದ ಗಾಢ ಪ್ರಭಾವ, ತೀವ್ರ ಸಂವೇದನೆಗಳ ಅಭಿವ್ಯಕ್ತಿ, 'ಪ್ರತಿಭಾ' ಸೃಷ್ಟಿಯಾಯಿತು. ಸ್ಫೂರ್ತಿ ಮತ್ತು ಪ್ರತಿಭೆಗಳು ಅಭಿವ್ಯಕ್ತಿಯ ಸಾಂದ್ರಸ್ಥಿತಿಯಲ್ಲಿ ಕಾವ್ಯದ ಸಂವಹನ ಕ್ರಿಯೆಯಲ್ಲಿ ಪರಸ್ಪರ ಒಡವೆರೆದು ಪಾಲ್ಗೊಳ್ಳುವುದನ್ನು ಮೇಲಿನ ಉದಾಹರಣೆ ಎತ್ತಿ ತೋರಿಸುತ್ತದೆ. 'ಈ ಹಂತದ ಚಿತ್ತಸ್ಥಿತಿ ಮಾನವ ಸಂತೋಷದ ಉನ್ನತ ಶಿಖರ. ಸೃಜನಶೀಲತೆ ಹುರಿಗೊಂಡ ಇಂಥ ವಿರಳ ಕ್ಷಣಗಳಲ್ಲಿ ಅನುಭಾವದ ಎಲ್ಲ ಸುಖ ಸಂತೋಷಗಳು ಸಾಮಾನ್ಯನಲ್ಲೂ ಅಸಾಮಾನ್ಯತೆಯನ್ನು ತುಂಬಿ ವ್ಯಕ್ತಿಯ ಎಲ್ಲ ಭಾವನೆಗಳೂ ರಸದ ನೆಲೆಯಿಂದ ಪ್ರವಹಿಸುತ್ತವೆ. ಚಳಿಗಾಲದ ಬಡತನದ ಗುಡಿಸಲು ದಿವ್ಯಾಗ್ನಿಯಿಂದ ದೀಪ್ತಗೊಳ್ಳುತ್ತದೆ; ಶುಷ್ಕ ಸೌಧವನ್ನು ಸಂತೃಪ್ತಿ ಸಂತೋಷಗಳಿಂದ ತುಂಬುತ್ತದೆ.[11] ಆದ್ದರಿಂದ ಕಾವ್ಯಸೃಷ್ಟಿಯಲ್ಲಿ ಸ್ಫೂರ್ತಿ ರಸದನೆಲೆಯಾದರೆ ಪ್ರತಿಭೆ ದಿವ್ಯಾಗ್ನಿ.

**ಪ್ರತಿಭೆ–ಅನ್ವೇಷಣೆ**

ಕಾಲಕಾಲಕ್ಕೆ ಕಾವ್ಯರೂಪ, ಕಾವ್ಯವಸ್ತುಗಳು ಬದಲಾಗುತ್ತ ಹೋಗುತ್ತಿರುವುದು, ಸಮಕಾಲೀನ ಜೀವನದ ಆಳವಾದ ವ್ಯಾಪಕ ಸಂವೇದನೆಗಳನ್ನು ಮೈಗೂಡಿಸಿಕೊಂಡು, ಕಾವ್ಯ ಶಿಲ್ಪಕ್ಕೆ ಹೊಸ ನೆತ್ತರು ನೀಡಿ, ಜೀವಂತ ಗತಿಯನ್ನು ತುಂಬುತ್ತ ಬಂದಿರುವುದೇ ಪ್ರತಿಭೆ. 'ನವನವೋನ್ಮೇಷಶಾಲಿನಿ' ಎನ್ನುವುದಕ್ಕೆ ಸಾಕ್ಷಿಯಾಗಿದೆ. ಇಲ್ಲವಾದರೆ ಕಾವ್ಯ ಕೇವಲ ಆಸ್ಥಾನದ ಗದ್ದುಗೆಯ ಮೇಲೆಯೋ, ಅಂತರ್ಮುಖತೆಯ ಆಧ್ಯಾತ್ಮದ ಅನೂಹ್ಯ ಆಕಾಶದಲ್ಲಿಯೋ ವಿಹರಿಸುವ ಆರಾಧನೆಯ, ಮೋಜಿನ ವಸ್ತುವಾಗಿ ಉಳಿಯಬಹುದಾಗಿತ್ತು. ಜೀವನದ ಚಿರಂತನ ಚಲನಶೀಲ ಗತಿಯೊಂದಿಗೆ ಜೀವಂತವಾಗಿ ಸ್ಪಂದಿಸುತ್ತ ಬಂದ ಪ್ರತಿಭೆ ಕಾವ್ಯಸೃಷ್ಟಿಯನ್ನು ಹೊಸಹೊಸದಾಗಿ ಮಿದ್ದುತ್ತ, ನಾದುತ್ತ ಬಂದಿದೆ. ಕವಿ, ಕೇವಲ ಅಂತರ್ಮುಖಿಯಾಗದಂತೆ, ವಸ್ತುವಿ

---

11. It is the Alpha and omera of human enjoyment, All the happiness of my humble campeers flow immediately and directly from the delicious source. It is the spark of celestial fire which lights up the wintry hut of poverty and makes the cheerless mansion warm comfortable and gay''. Rev. John C. Hill ; The Love Songs and Heroines of Rober Burns ; Preface, p. xiii.

ನಿಂದ ದೂರನಿಂತ ಸಾಕ್ಷೀಭಾವ ಅಥವಾ ಸಾಕ್ಷೀಪ್ರಜ್ಞೆಯನ್ನು ಅಳವಡಿಸಿಕೊಂಡು ಮತ್ತೆ ಅಲ್ಲಿಯೇ ಸ್ಥಗಿತಗೊಳ್ಳದಂತೆ-ಪರಕೀಯವಾಗಿ ವಾಸ್ತವತೆಯ ತಳಮಳಗಳಿಂದ ದೂರ ಉಳಿಯುವ ಸಂಭವತೆಯನ್ನು ತಪ್ಪಿಸಿ, ಅವನಲ್ಲಿ ಜೀವನಿಷ್ಠೆ, ಜೀವನ ನಿಷ್ಠೆಗಳನ್ನು ತುಂಬಿ ಎಚ್ಚರದಿಂದ ಮುನ್ನಡೆಸಿದ ಶಕ್ತಿ ಪ್ರತಿಭೆಯೇ.

ಸಮಕಾಲೀನ ಸಮಸ್ಯೆಗಳ ಬೆಂಕಿಯನ್ನು ಹೊತ್ತಿಸಿಕೊಂಡರೂ ಸುಟ್ಟು ಕರಕಾಗದಂಥ ಎಚ್ಚರ. ಕ್ರಾಂತಿಯ ಪಂಜು ಪ್ರಜ್ವಲಿಸಿದರೂ ಕಣ್ಣಿಗೆ ಕತ್ತಲು ಕವಿಸದಂಥ ಪ್ರಜ್ಞೆ, ಇಂದಿನ ಕವಿ ಪ್ರತಿಭೆ ಮೈಗೂಡಿಸಿಕೊಳ್ಳಬೇಕಾದ ಅಂಶಗಳಾಗಿವೆ. ಆಗ ಪ್ರತಿಭೆ ಮತ್ತೆ ಮತ್ತೆ ಅಭಿವ್ಯಕ್ತಿಯ ಹೊಸ ನೆಲೆಗಳನ್ನು ಗುರುತಿಸುವ ಸಾಧನವಾಗಬೇಕಾಗುತ್ತದೆ. ಶತಮಾನಗಳ ಪಟ್ಟಭದ್ರ ವ್ಯವಸ್ಥೆಯ ಆಳದಲ್ಲಿ ಸ್ಥಾಯಿಯಾಗಿರುವ ಕ್ರೌರ್ಯ ಶೋಷಣೆಗಳನ್ನು ಬಗ್ಗು ಬಡಿಯುವ, ಕತ್ತಲ ಸಾಮ್ರಾಜ್ಯದ ಸಿಂಹಾಸನವನ್ನು ಛಿದ್ರಗೊಳಿಸುವ, ಹೊಸ ಸಮಾಜ ಸೃಷ್ಟಿಗೆ ನಿರ್ದೇಶಕ ಧ್ವನಿಯಾಗುವ ಕಾವ್ಯವನ್ನು ಇಂದಿನ ಕವಿ ಪ್ರತಿಭೆ ರೂಪಿಸಿಕೊಳ್ಳುತ್ತ ಎದುರಾದ ಸವಾಲುಗಳನ್ನು ಎದುರಿಸುತ್ತ, ಅವುಗಳ ಮೂಲ ಛದ್ಮವನ್ನು ಅನಾವರಣಗೊಳಿಸುತ್ತ, ಜೀವನದ ಮೂಲಭೂತ ಚಿರಂತನ ಸತ್ಯಗಳನ್ನು ಅನ್ವೇಷಿಸಬೇಕಾಗುತ್ತದೆ. ಭಾವದ ಭೃಂಗಗಳ ಬೆನ್ನೇರಿ ಬರುವ ಕಲ್ಪನಾವಿಲಾಸಗಳನ್ನು ಕೊಡವಿ ಮೇಲೆದ್ದು ಮೈನಡುಗಿಸುವ ಭೀಕರ ವಾಸ್ತವತೆಯ ಉಸಿರುಗಟ್ಟಿಸುವ ಹಗೆಧಗೆ, ಒಡೆಯರ ಸೇವೆಯಿಂದ ಕಪ್ಪಿಟ್ಟ ಮೈ, ಬಗ್ಗಿದ ಬೆನ್ನು, ಹಪ್ಪಳಿಗಟ್ಟಿದ ಹೊಟ್ಟೆ, ಬಲೆಬಿಗಿದ ನೆತ್ತರು, ಬತ್ತಿದ ಚರ್ಮ ಕ್ಷಣಕ್ಷಣಕ್ಕೂ ನರಳುತ್ತಿರುವ ಉಸಿರಿನ ವ್ಯಥೆಗಳನ್ನು, ನೋವಿನ ಕಡಲನ್ನು ನುಂಗಿ, ಪ್ರಜ್ಞೆಯ ನಿರ್ಲಕ್ಷಿತ ನೆಲೆಯಲ್ಲಿ ಧುಮುಕಬೇಕಾಗುತ್ತದೆ. ಹಿಮಗಿರಿಯ ಕಂದರದಿಂದ ಮೇಲೆದ್ದು ಬರುವ ಸಾವಿರ ಸಾವಿರ ಅಸ್ಥಿಪಂಜರಗಳು, ಬರಡು ಬಂಜರಾದ ಮೈಲುಗಟ್ಟಲೆ ನೆಲೆ ಒಪ್ಪೊತ್ತಿನ ಹಿಟ್ಟಿಗೂ ಗತಿಯಿಲ್ಲದೆ ಬಿದಿರ ಮೆಳೆ ತಡಿಕೆಗಳಲ್ಲಿ ರೋದಿಸುವ ಸಾವಿನ ಉಸಿರು ಇವೆಲ್ಲವುಗಳನ್ನು ತಲಸ್ಪರ್ಶಿಯಾಗಿ ಸ್ವೀಕರಿಸುವ, ವೈಭವೀಕೃತ ಕಾವ್ಯ ವಿಗ್ರಹಗಳನ್ನು ಭಗ್ನಗೊಳಿಸುವ, ಜರ್ಜರಿತ ಮೌಲ್ಯಗಳನ್ನು ಉದ್ವಸ್ಥಗೊಳಿಸಿ ಮಾನವ ಜನಾಂಗವನ್ನು ಇಡಿಯಾಗಿ ಸ್ಪಂದಿಸಲು ಪ್ರೇರಿಸುವ 'ಅನ್ವೇಷಕ ಪ್ರತಿಭೆ' ಇಂದಿನ ಕವಿಗಳು ಎದುರಿಸಬೇಕಾದ ಸವಾಲು. ಎದುರಿಸಲು ಸಮರ್ಥರಾದರೆ 'ಕವಿ', 'ಕವಿ ಪ್ರತಿಭೆ' ಮುಂತಾದ ಶಬ್ದಗಳು ಕಾವ್ಯಸೃಷ್ಟಿಯ ಸಂದರ್ಭದಲ್ಲಿ ಸಾತತ್ಯ, ಸಾರ್ಥಕತೆಗಳನ್ನು ಪಡೆಯುತ್ತವೆ.

ಏನಾದರೂ ಇರಲಿ ಹಾಡ ನಿಲ್ಲಿಸಬೇಡ
ದೀಪ ಪಟ್ಟನೆ ಆರಿ ಹೋಗಬಹುದು
ಬದುಕು ಸೋಲಾದರೂ ಕಾಡುಪಾಲಾದರೂ
ಹಾಡು ಬಿಟ್ಟುಳಿದವನ ಪಾಡು ಬೇಡ[12]

---

12. ಚೆನ್ನವೀರ ಕಣವಿ : ಕವಿತೆ 'ಮತ್ತೊಂದು ಪುಟ್ಟ ಹಕ್ಕಿಗೆ'.

ಏನಾದರೂ ಪ್ರತಿಭೆಯ ಈ ಕಾವ್ಯಕೃಷಿ ನಿಲ್ಲುವಂತಿಲ್ಲ. 'ಸೆಣಸಿ ಸೋತಿತು ಕೊನೆಗೆ ಕಾಲಪ್ರಕೋಪ ಆರಿಲ್ಲ ಈವರೆಗು ಕಾವ್ಯಪ್ರದೀಪ;[13]

'ಯುಗಯುಗದ ವಿಸ್ಮೃತಿಯ ಬಾವಿ ತಳದಿಂದ ಕಪ್ಪಲಿ ಹೊಡೆದು
ಜೀವಕ್ಕೆ ನೀರು ಹಾಯಿಸುವ ಜುಳುಜುಳು ನಿನಾದ[14]ದ ಅಮೂರ್ತ

ಧ್ವನಿಯ ಜೊತೆಗೆ

'ಗುಡುಗು ಮಿಂಚಿನ ಘೋಷಣೆಯಲ್ಲಿ
ಭೂಕಂಪನಗಳ ಭಾಷೆಗಳಲ್ಲಿ
ಬಂತೋ ದಲಿತರ ಮೆರವಣಿಗೆ

ನೆಲಕ್ಕೆ ಕಾಲುಗಳ ಬರವಣಿಗೆ[15] ಯ ಮೂರ್ತ ಜ್ವಾಲೆಯನ್ನೂ ಗಮನಿಸ ಬೇಕಾಗುತ್ತದೆ. 'ಬಂಡಾಯ' 'ದಲಿತ' ಮುಂತಾದ ಹಣೆಪಟ್ಟಿ ಹಚ್ಚಿಕೊಂಡು ಬರುವ ಇತ್ತೀಚಿನ ಕವಿತೆಗಳಲ್ಲಿ ಬಹುತರವಾಗಿ ಕಾಣುವ, ಕೇಳುವ, ರೊಚ್ಚು, ಕ್ರೋಧ ಧಿಕ್ಕಾರಗಳು ಸ್ವಾಗತಾರ್ಹವೇ. ಆದರೆ ಇವು ಕಾವ್ಯರೂಪವನ್ನು ಪಡೆಯದೆ ಘೋಷಣೆಗಳಾಗಿ ದಂದಣ ದತ್ತಣಿಸಿದರೆ ಪ್ರಚಲಿತ ಒಂದಲ್ಲ ಒಂದು ರಾಜಕೀಯ ಪ್ರವಾಹ ಇಂಥ ಸ್ಪಂದನೆಗಳನ್ನು ತನ್ನ ವ್ಯವಸ್ಥೆಯ ರಭಸಕ್ಕೆ ಸೆಳೆದುಕೊಳ್ಳುವ ಅಪಾಯ ಇದ್ದೇ ಇದೆ. ಆದ್ದರಿಂದ ಈ ರೋಷ, ಕ್ರೌರ್ಯಗಳು ವ್ಯಕ್ತಿ ನಿರಪೇಕ್ಷ ಆಯಾಮವನ್ನು ಅಳವಡಿಸಿಕೊಂಡು, 'ಜಾತಿ' 'ಮತ' ವಂಚನೆಗಳ ತಲೆಚಚ್ಚಿ, ಮಾನವ ಸಮಾಜದ ಮೂಲಭೂತ ಪರಿವರ್ತನೆಗೆ, ಮಾನವೀಯ ಸಂಬಂಧಗಳ ನೇರಕ್ಕೆ ಒತ್ತುಕೊಡುವ ಸಾಹಸದತ್ತ ಇಂದಿನ ಪ್ರತಿಭಾವಂತರು ತಮ್ಮ ಸೃಜನಶೀಲ ಶಕ್ತಿಯನ್ನು ಮುನ್ನಡೆಸಬೇಕಾಗಿದೆ. ಕಾವ್ಯಸೃಷ್ಟಿಯ ಮೂಲಕ ಭಾಷೆಯನ್ನು ಉನ್ನತೀಕರಿಸಿ, ಭಾವನೆಗಳನ್ನು ಉದ್ದೀಪನಗೊಳಿಸಿದ ಪ್ರತಿಭೆ, ಕಾವ್ಯವನ್ನು ಶೋಷಣೆಯ ಅಪಾಯದಿಂದ ಪಾರು ಮಾಡುವುದೇ ? ಕಾದು ನೋಡೋಣ.

---

13. ಕಾವ್ಯಾನಂದ : ಕರುಣಾಶ್ರಾವಣ
14. ಚೆನ್ನವೀರ ಕಣವಿ : 'ಮಣ್ಣಿನ ಮೆರವಣಿಗೆ', ಪು. ೩೫.
15. ಸಿದ್ಧಲಿಂಗಯ್ಯ 'ಸಾವಿರಾರು ನದಿಗಳು' ಸಂಕಲನದಿಂದ.

# ಕಾವ್ಯಸ್ಫೂರ್ತಿ ಮತ್ತು ರಸಾವೇಶ

**ಕೆ. ಕುಶಾಲಪ್ಪಗೌಡ**

ಕಾವ್ಯ ಮತ್ತು ಕಲಾಕೃತಿಗಳೆಲ್ಲ ಮೂಲತಃ ಭಾವುಕನಾದ ವ್ಯಕ್ತಿ ತನ್ನ ಸುತ್ತಲಿನ ಪ್ರಪಂಚದ ಆಗು ಹೋಗುಗಳಿಗೆ ತೋರಿದ ಪ್ರತಿಕ್ರಿಯೆಯ ಫಲಿತಾಂಶ. ಹೀಗೆ ಪ್ರತಿಕ್ರಿಯೆ ತೋರಿಸಲೇಬೇಕೆಂದು ಪ್ರಪಂಚವೇನೂ ನಿರ್ಬಂಧಿಸುವುದಿಲ್ಲ, ಆದರೆ ಕವಿ–ಕಲಾವಿದರು ಯಾವುದೋ ಒಂದು ಕಾರಣದಿಂದ ಪ್ರಚೋದಿತರಾಗುತ್ತಾರೆ. ವ್ಯಕ್ತಿ ವ್ಯಕ್ತಿಯೂ ಭಿನ್ನ ಭಿನ್ನವಾಗಿ, ಪರಿಸರ, ಕಾಲ ಧರ್ಮಗಳೂ ಬೇರೆ ಬೇರಾಗಿರುವುದರಿಂದ ಕವಿ–ಕಲಾವಿದರು ತೋರುವ ಪ್ರತಿಕ್ರಿಯೆಯೂ ವಿವಿಧ ರೀತಿಯಿಂದ ಕೂಡಿದೆ. ಆದುದರಿಂದ ಅವರ ಕೃತಿಯಲ್ಲಿಯೂ ವೈವಿಧ್ಯವನ್ನು ಕಾಣುತ್ತೇವೆ.

ಶಬ್ದಗಳ ಮೂಲಕ ಪಚೇಂದ್ರಿಯಗೋಚರವಾದ ನಾನಾ ಅನುಭವಗಳು ಶ್ರವಣ ಗೋಚರವಾಗಿ, ಅದರ ಮೂಲಕ ಹೊಸ ಪ್ರಪಂಚವೊಂದು ನಮ್ಮ ಮನಃಪಟಲದಲ್ಲಿ ತೆರೆದುಕೊಳ್ಳುತ್ತದೆ ; ಇದು ಮಾತಿನ ಕಾರ್ಯ. ಇಂತಹ ಮಾತು ಒಂದು ವಿಶಿಷ್ಟ ರೀತಿಯಲ್ಲಿ ಪ್ರವಹಿಸಿ, ನಮ್ಮ ಹೃದಯವನ್ನು ಸಂತೃಪ್ತಿಯ ಸುಖದಲ್ಲಿ ತೇಲಿಸಿ, ದರ್ಶನಾತ್ಮಕವಾಗಿ ತಾದಾತ್ಮ್ಯ ಭಾವಕ್ಕೆ ಒಳಗಾಗಿಸುತ್ತದೆ ; ಇದು ಕಾವ್ಯ. ಹೀಗೆ ಮಾಡಲು ಶಕ್ತರಾಗುವವರು ಕೆಲವೇ ಕೆಲವು ಮಂದಿ. ಅಪೂರ್ವವಾದ ಇವರ ಈ ಶಕ್ತಿಯನ್ನು ದೈವೀಶಕ್ತಿಯೆಂದು ಹಿಂದಿನ ಕವಿಗಳೂ ಲಾಕ್ಷಣಿಕರೂ ಮನಗಂಡಿದ್ದಾರೆ. ಹೋಮರ್ ಕವಿಯೂ, ಕಾವ್ಯದೇವಿ ತನಗೆ ಸ್ಫೂರ್ತಿಯನ್ನು ಕೊಡಲಿ ಎಂದು ಪ್ರಾರ್ಥಿಸುತ್ತಾನೆ. ಭಾರತೀಯ ಕವಿಗಳೆಲ್ಲರೂ ತಮ್ಮ ಕಾವ್ಯಗಳಲ್ಲಿ ವಾಗ್ದೇವಿ, ಸರಸ್ವತಿ, ವಾಣಿ, ತಮಗೆ ಕವಿತಾಶಕ್ತಿಯನ್ನುಂಟು ಮಾಡಲೆಂದು ಪ್ರಾರ್ಥಿಸುವುದನ್ನು ಕಾಣುತ್ತೇವೆ. ಅಮೂರ್ತವಾದ ಭಾವಕ್ಕೆ ಮೂರ್ತರೂಪವನ್ನು ಕಲ್ಪಿಸುವುದು ಪಾಶ್ಚಾತ್ಯ, ಪೌರಾತ್ಯರೆಂಬ ಭೇದವಿಲ್ಲದೆ, ಬಹುಶಃ ಮಾನವ ವರ್ಗಕ್ಕೆ ಸರ್ವತ್ರವಾಗಿರುವ ಗುಣವೆಂದು ಕಾಣುತ್ತದೆ.

ಕಾವ್ಯಕ್ಕೆ ಪ್ರತಿಭೆ ಮತ್ತು ರಸಾವೇಶಗಳು ಕಾರಣವಾಗುತ್ತವೆಂದು ಭಾರತೀಯ ಕಾವ್ಯಮೀಮಾಂಸಕರ ಹೇಳಿಕೆ. ಕಾವ್ಯಲಾಕ್ಷಣಿಕರು, ಪ್ರತಿಭೆ, ಕಾವ್ಯವಿದ್ಯಾ ಪ್ರಚಯ

ಪರಿಚಯ, ವೃದ್ಧಸೇವಾನುರಾಗ, ಸತತಅಭ್ಯಾಸ ಪ್ರಯತ್ನ–ಇವುಗಳು ಕವಿತೆಗೆ ಕಾರಣವೆಂದು ಹೇಳಿದ್ದಾರೆ. ಗ್ರೀಕ್ ತತ್ವಜ್ಞಾನಿಗಳು ಕಾವ್ಯ ಮತ್ತು ಸ್ಫೂರ್ತಿಯ ಕುರಿತಾಡಿದ್ದಾರೆ. ಆದರೆ ಕೇವಲ ಸ್ಫೂರ್ತಿ ಮಾತ್ರ ಕಲೆ ಅಥವಾ ಕಾವ್ಯನಿರ್ಮಾಣಕ್ಕೆ ಸಾಲದು. ಸ್ಫೂರ್ತಿ ಇಲ್ಲದೆ ಕೇವಲ ಜ್ಞಾನದಿಂದ ಮಾತ್ರ ಕಾವ್ಯ ರಚಿಸಿದರೆ ಅದು ನೀರಸವಾಗುತ್ತದೆ. ಕೇವಲ ಸ್ಫೂರ್ತಿಯಿಂದ ಮಾತ್ರ ಕಾವ್ಯ ರಚಿಸಿದರೆ, ಅದು ಅರ್ಥರಹಿತ, ಅಸಮಂಜಸ ಕಾವ್ಯವಾದೀತೆಂದು ಅವರು ಅಭಿಪ್ರಾಯಪಡುತ್ತಾರೆ. ಪ್ಲೇಟೊನ ಪ್ರಕಾರ ಕವಿ ಹೇಳುವ ಮಾತುಗಳೆಲ್ಲವೂ ಆತ ಸ್ಫೂರ್ತಿಯ ಅಂಕಿತಕ್ಕೆ ಒಳಗಾದಾಗ ಹೊಮ್ಮಿದವು. ಈ ಸ್ಫೂರ್ತಿ ದೈವಾಯುತ್ತವಾದುದೆಂದು ಅವನು ಒಪ್ಪುತ್ತಾನೆ. ಆದರೆ ಈ ಸ್ಫೂರ್ತಿ ಬುದ್ಧಿಯ ಕ್ರಿಯೆಗೆ ಹೊರತಾದ ವಿವೇಚನೆಯ ಅಂಕಿತಕ್ಕೆ ಸಿಕ್ಕದ ಒಂದು ಮನೋವ್ಯಾಪಾರವಾದುದರಿಂದ, ಇದಕ್ಕೊಳಗಾದ ಮನಸ್ಸು ಒಂದು ಆವೇಶಕ್ಕೆ ಗುರಿಯಾಗುತ್ತದೆ ಮತ್ತು ಉನ್ಮಾದಕ್ಕೆ ವಶವಾಗುತ್ತದೆ. ಹೀಗಾದ ಕಾರಣ, ಕವಿಯು ಮಾತು ಮೈಮರೆತವರ ಮಾತಾಗುತ್ತದೆ. ಇಷ್ಟು ಹೇಳಿದ ಪ್ಲೆಟೊ, ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಕವಿಯ ವಾಣಿ ದೈವೀವಾಣಿಯೆಂದು ಒಪ್ಪಿದರೂ, ಅದು ಕೊಡಬಲ್ಲ ಜ್ಞಾನ ಬುದ್ಧಿಜನ್ಯವಾದ ತರ್ಕ ಶುದ್ಧವಾದ ಜ್ಞಾನಕ್ಕೆ ಪ್ರತಿಸ್ಪರ್ಧಿಯಾಗಲಾರದು. ಆದುದರಿಂದ ನೈತಿಕ ನಿಯಂತ್ರಣ ತಪ್ಪಿದ ಭಾವಾವೇಶಕ್ಕೆ ಒಳಗಾದ ಕವಿಯ ಮಾತು ಬುದ್ಧಿ ಇದ್ದವರಿಗೆ ಮಾರ್ಗದರ್ಶನ ನೀಡಲಾರದು–ಎಂದು ಘೋಷಿಸಿದ್ದಾನೆ. ಹಾಗಾದರೆ ನಮ್ಮ ಮಹಾಕಾವ್ಯಗಳೆಲ್ಲ ಅಸಂಬದ್ಧವಾದ, ಆವೇಶಕ್ಕೊಳಗಾದ ಪ್ರಲಾಪಗಳೇ ? ಆವೇಶಕ್ಕೊಳಗಾದವನು ಅಸಂಬದ್ಧ ಮಾತಾಡಬಹುದೇನೋ ಸರಿ. ಆದರೆ ಕವಿಯಾದವನು ಹಾಗೆ ಅಸಂಬದ್ಧ ಪ್ರಲಾಪ ಮಾಡಿದರೆ ಅದು ಕಾವ್ಯ ಹೇಗಾಗುತ್ತದೆ ? ಆದುದರಿಂದ ಸ್ಫೂರ್ತಿಯೊಡನೆಯೇ ಹೊಂದಿಕೊಂಡು ಕಾವ್ಯರಚನೆಗೆ ಕಾರಣವಾದ ಇತರ ಅಂಶಗಳಿವೆ. ಇವೇ ಕವಿಯಲ್ಲಿ ಸಹಜವಾಗಿರುವ ಪ್ರತಿಭೆ, ಅಲ್ಲದೆ ಕಲಾತ್ಮಕವಾಗಿ ತನ್ನ ಭಾವನೆಗಳನ್ನು ಹೊರ ಹೊಮ್ಮಲು ಇರುವ ಸಾಮರ್ಥ್ಯ ಮುಂತಾದುವುಗಳು. ಕೇವಲ ಸ್ಫೂರ್ತಿಯೆಂಬುದನ್ನು ಮಾತ್ರ ಗಮನದಲ್ಲಿರಿಸಿ ಹೇಳಿದ ಪ್ಲೆಟೋನ ಮೇಲಿನ ಮಾತುಗಳು ಪೂರ್ವಪಕ್ಷ ಸಿದ್ಧಾಂತದಿಂದ ಕೂಡಿರುವಂತೆ ಕಾಣುತ್ತದೆ.

ಪಾಶ್ಚಾತ್ಯ ಕಾವ್ಯಮೀಮಾಂಸಕರು ಸ್ಫೂರ್ತಿ ಎಂದು ಕರೆಯುವುದು ಭಾರತೀಯ ಕಾವ್ಯಮೀಮಾಂಸಕರು ಹೇಳುವ ರಸಾವೇಶಕ್ಕೆ ಸಾಮಾನ್ಯಮಟ್ಟಿಗೆ ಸಂವಾದಿಯಾಗಿದೆ. ಪಾಶ್ಚಾತ್ಯರು ಹೇಳುವ ಸ್ಫೂರ್ತಿ ದೈವಾಯುತ್ತವಾದುದೆಂಬುದಕ್ಕಿಂತ ಪ್ರತಿಭೆ ದೈವಾಯತ್ತವಾದುದೆಂದರೆ ಹೆಚ್ಚು ಸಮಂಜಸವಾಗುತ್ತದೆ. ಸ್ಫೂರ್ತಿ ಅಥವಾ, ಭಾರತೀಯ ಪದ್ಧತಿಯ ಪ್ರಕಾರ ರಸಾವೇಶ ಎಂಬುದು ನಮ್ಮ ಸುತ್ತುಮುತ್ತಲಿನ ಪ್ರಾಪಂಚಿಕಾನುಭವದಿಂದ ಪ್ರಚೋದನೆಯನ್ನು ಹೊಂದುವಂತಹದು. ನೋವು–ನಲಿವು, ಹರ್ಷ–ವಿಷಾದ ಮುಂತಾದುವನ್ನು ಎಲ್ಲರೂ ಅನುಭವಿಸಬಲ್ಲರು,

ಅಥವಾ ಪಾಶ್ಚಾತ್ಯರ ಹೇಳಿಕೆಯಂತೆ ಆವೇಶವನ್ನು ಹೊಂದಬಲ್ಲರು. ಆದರೆ ಅಷ್ಟರಿಂದಲೇ ಕಾವ್ಯರಚನೆಯನ್ನೇನೂ ಮಾಡಲಾರರು. ಪ್ರತಿಭಾಶಾಲಿಗೆ ಈ ರಸವ ಇಲ್ಲವೇ ಆವೇಶದ ಸೋಂಕು ಆದರೆ, ಅವನಿಗೆ ಕಲಾಮಾಧ್ಯಮದಲ್ಲಿ ತನ್ನ ಉದ್ರಿಕ್ತ ಭಾವನೆಗಳನ್ನು ಹೊರಹೊಮ್ಮಲು ತಕ್ಕ ವ್ಯುತ್ಪತ್ತಿಯಿದ್ದರೆ, ಅವನು ಕಾವ್ಯ ರಚಿಸಲು ಶಕ್ತನಾಗುತ್ತಾನೆ. ಹೀಗಿರುವುದರಿಂದಲೇ ನಮ್ಮ ಕವಿಗಳು, ಹಾಗೂ ಲಾಕ್ಷಣಿಕರು ಯಾವುದಾದರೂ ಒಂದನ್ನು ಮಾತ್ರ (ಉದಾ : ಪಾಶ್ಚಾತ್ಯರು ಹೇಳಿದ ಸ್ಫೂರ್ತಿ) ಕಾವ್ಯಕ್ಕೆ ಕಾರಣವೆನ್ನದೆ, ಹಲವು ಅಂಗಗಳನ್ನು ಅದರೊಟ್ಟಿಗೆ ಜತೆಮಾಡಿ, ಕಾವ್ಯ ವೆಂದರೆ ಒಂದು ಸಮುಷ್ಟಿಕಾರ್ಯವೆಂದಿದ್ದಾರೆ. ಅವರ ಪ್ರಕಾರ ಪ್ರತಿಭೆಯೇ ಕಾವ್ಯಕ್ಕೆ ಮೂಲ. ಆದರೆ ಅದಲ್ಲದೆ ಇತರ ಲೋಕದ ನಡವಳಿಕೆ, ಶಾಸ್ತ್ರ, ಕಾವ್ಯ ಮೊದ ಲಾದುವುಗಳ ಪರಿಶೀಲನೆಯಿಂದ, ಬರುವ ನಿಪುಣತೆ (ವ್ಯುತ್ಪತ್ತಿ) ಕಾವ್ಯಜ್ಞರ ಉಪದೇಶ ಪಡೆದು ಮತ್ತೆ ಮತ್ತೆ ಮಾಡಿದ ಅಭ್ಯಾಸ-ಇವು ಕಾವ್ಯನಿರ್ಮಾಣಕ್ಕೆ ಕಾರಣವಾಗು ತ್ತವೆ. ಕನ್ನಡದಲ್ಲಿ ಪ್ರಸಿದ್ಧನಾದ ಎರಡನೆಯ ನಾಗವರ್ಮನ ಪ್ರಕಾರ :

"ಪ್ರತಿಭಾನಂ ಕಾವ್ಯವಿದ್ಯಾಪ್ರಚಯ ಪರಿಚಯಂ ವೃದ್ಧಸೇವಾನುರಾಗಂ
ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ......"

ಆಶ್ಚರ್ಯವೆಂದರೆ ಪ್ರತಿಭೆಯೊಡನೆ ರಸದ ಸುದ್ದಿಯನ್ನು ಮೇಲಿನ ಮಾತಿನಲ್ಲಿ ಎತ್ತ ದಿರುವುದು. ಕಾವ್ಯವಿದ್ಯಾಪ್ರಚಯ ಪರಿಚಯವೆಂದಾಗ, ಒಂದು ವೇಳೆ ರಸದ ವಿಚಾರವೂ ಅದರಲ್ಲಿ ಅಡಕವಾಗಿದೆಯೆಂದು ಊಹಿಸಿಕೊಳ್ಳಬೇಕೇನೋ ? ಆದರೆ ಅದನ್ನು ಕುರಿತು ಇಲ್ಲಿ ಸ್ಪಷ್ಟವಾಗಿ ಆಡದಿರುವುದು ಒಂದು ಕೊರತೆಯೇ ಸರಿ. ಹೇಗಿದ್ದರೂ ರಸ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಪ್ರಧಾನ ಸ್ಥಾನವನ್ನು ಪಡೆಯುತ್ತ ಬೆಳೆದು ಬಂದಿತು. ಕವಿ–ಸಹೃದಯರ ನಡುವೆ ಸಾರ್ವತ್ರಿಕವಾದ, ಇಲ್ಲವೇ ಸಾಧಾರಣೀಕೃತವಾದ ರಸ ಆನಂದದಾಯಕವಾಗುತ್ತದೆ. ಇಂತಹ ರಸಗಳು ಶೃಂಗಾರ ವೀರ ಕರುಣ ಅದ್ಭುತ ಇತ್ಯಾದಿಗಳೆಂದು ನವವಿಧಸ್ತರಗಳಿಂದ ಕೂಡಿವೆ, ಆದರೆ ಕಾವ್ಯದಲ್ಲಿ ಈ ವಿವಿಧ ಸ್ತರಗಳಲ್ಲಿ ಮೈದಳೆದು, ಮತ್ತೆ ಇದು ಕವಿಯದು, ಇದು ಸಹೃದಯನದು ಎಂಬ ಭೇದ ಭಾವವಿಲ್ಲದಂತೆ ಸಾರ್ವತ್ರಿಕವಾಗಿ, ಕೊನೆಯಲ್ಲಿ ಇದು ಈ ರಸ, ಇದು ಮತ್ತೊಂದು–ಎಂಬ ಭಾವವೂ ಅಳಿಸಿ ಹೋಗಿ ಆನಂದ ವೊಂದರಲ್ಲೇ ಏಕೀಭಿಸುತ್ತವೆ.

ಒಂದು ನೆಲೆಯಲ್ಲಿ ಕವಿ ರಸವನ್ನು ತಾನೇ ಅನುಭವಿಸುತ್ತಾನೆ ; ಭಾವಾವೇಶಕ್ಕೆ ಒಳಗಾಗುತ್ತಾನೆ. ಹೊಸತೊಂದು ಪ್ರಪಂಚದ ದರ್ಶನಮಾಡುತ್ತಾನೆ. ಇದೆಲ್ಲದರ ಒಟ್ಟು ಒತ್ತಡ ಆತನಲ್ಲಿ ಹಿಡಿಸಲಾರದೆ ಹೊರಹೊಮ್ಮಿ ಕಾವ್ಯರೂಪು ತಳೆಯುತ್ತದೆ. ಪಾಶ್ಚಾತ್ಯ ಪದ್ಧತಿಯ ಸ್ಫೂರ್ತಿ ಅಥವಾ ಭಾರತೀಯ ಪದ್ಧತಿಯ ರಸಾವೇಶ ಸ್ಥಿತಿ ಎರಡೂ ಒಂದೇ ಸ್ವರೂಪದವೆಂದು ಹಿಂದೆಯೇ ಹೇಳಿದೆ. ಆದರೆ ಭಾರತೀಯರು

ಅದರ ಮೂಲ ನೆಲೆಯನ್ನೆಲ್ಲ ಎಳೆ ಎಳೆಯಾಗಿ ಬಿಡಿಸಿ ವಿವರಿಸಿದಂತಹ ವಿಶ್ಲೇಷಣೆಯನ್ನು, (ಉದಾ : ರಸಗಳು ಎಂಟು, ಇಲ್ಲ ಒಂಬತ್ತು ಎಂಬ ಚರ್ಚೆ, ಅವು ಹುಟ್ಟುವ ಕಾರಣಗಳು, ಇತ್ಯಾದಿ) ಪಾಶ್ಚಾತ್ಯರಲ್ಲಿ ಕಾಣಲಾರೆವು.

ಕಾವ್ಯಪ್ರಯೋಜನಾದಿಗಳನ್ನು ಹೇಳುವಲ್ಲಿ ಭಾರತೀಯರು ಪ್ರಾಪಂಚಿಕದೆಡೆಗೆ ಹೆಚ್ಚು ಒಲವನ್ನು ತೋರಿದ್ದಾರೆ. ಪಾಶ್ಚಾತ್ಯರು ಅಲೌಕಿಕತೆಯ ಕಡೆಗೆ ವಾಲಿದ್ದಾರೆ. ಕಾವ್ಯವೆಂದರೆ 'ಸಂತೋಷ, ನೋವನ್ನು ತೊಲಗಿಸುವುದು, ಆತ್ಮವನ್ನು ಪರಿವರ್ತಿಸಿ ಒಲಿಸುವುದು' (ಜಾರ್ಜಿಯಸ್ ಕವಿ) ; 'ಮನುಷ್ಯನನ್ನು ಸಾಮಾನ್ಯ ಸಮಯಾಚಾರಗಳ ಹಿಡಿತದಿಂದ ಬಿಡುಗಡೆಗೊಳಿಸುವ ದೈವೀ ಆವೇಶ' 'ಇಂದ್ರಿಯಗ್ರಾಹ್ಯ ಪ್ರಪಂಚದಿಂದ ಅದರಾಚೆಯ ನಿತ್ಯ ಸತ್ಯ ಪ್ರಪಂಚದತ್ತ ಸಾಗುವುದು' (ಪ್ಲೇಟೊ) ; 'ಉದಾತ್ತವಾದುದು, ಉಪಾದೇಯವಾದುದು, ಪವಿತ್ರವೂ ಅಮೂಲ್ಯವೂ ಆದುದು, ಮನುಷ್ಯನ ದೈವತಕ್ಕೆ ದ್ಯೋತಕವಾದುದು' (ಷೆಲ್ಲಿ). ಇಂತಹ ಕಾವ್ಯದ ಉದಾತ್ತತೆಯ ದೃಷ್ಟಿಯೂ ಭಾರತೀಯರಿಗಿಲ್ಲದಿಲ್ಲ. ಆದರೆ ಅದರೊಟ್ಟಿಗೆ ಅವರು ಲೌಕಿಕತೆಯನ್ನೂ ಸೇರಿಸಿದ್ದಾರೆಂಬುದು ಮೆಚ್ಚತಕ್ಕ ವಿಷಯ. ಒಂದು ಹಂತದಲ್ಲಿ ಕೀರ್ತಿ, ಪ್ರೀತಿ, ಆನಂದಗಳು ಕಾವ್ಯದಿಂದ ಲಭಿಸುತ್ತವೆಂದು ಹೇಳುತ್ತಾರೆ. ಇದರಲ್ಲಿ ಮೊದಲನೆಯದಾಗಿ ಕವಿಗೆ ಲಭ್ಯವಾಗಬಹುದಾದ ಕೀರ್ತಿಯನ್ನು ಸೇರಿಸಲಾಗಿದೆ. ಇನ್ನೊಂದು ಹಂತದಲ್ಲಿ ಯಶಸ್ಸು, ಧನ, ಲೋಕವ್ಯವಹಾರಜ್ಞಾನ, ಅಮಂಗಳ ಪರಿಹಾರ, ಪರಮಾನಂದ, ಕಾಂತಾಸಮ್ಮಿತದಿಂದ ಉಪದೇಶ ದೊರೆಯುತ್ತದೆಂದು ಹೇಳುವಲ್ಲಿಯೂ, ಮೊದಲಿನವೆರಡು ಕವಿಯ ಪಾಲಿಗೆ ದೊರಕಬಹುದಾದ ಅಂಶಗಳೇ ಆಗಿವೆ.

# ಸೃಜನಶೀಲತೆ ಮತ್ತು ವಿಮರ್ಶನ ಪ್ರಜ್ಞೆ–ಕೃತಿರಚನೆಯಲ್ಲಿ

ಡಾ. ಪಿ. ವಿ. ನಾರಾಯಣ

ಸಾಹಿತ್ಯ ಕೃತಿಯೊಂದರ ನಿರ್ಮಾಣಕ್ಕೆ ಕಾರಣವಾದ ಅಂಶಗಳಾವುವು, ಅವುಗಳ ಪಾತ್ರ ಎಷ್ಟು ಎಂಬ ಬಗ್ಗೆ ಹಿಂದಿನಿಂದಲೂ ವಿವೇಚನೆ ನಡದೇ ಇದೆ. ಕಾವ್ಯಹೇತುಗಳೆಂದು ಪ್ರತಿಭೆ, ವ್ಯುತ್ಪತ್ತಿ, ಅಭ್ಯಾಸಗಳನ್ನು ನಮ್ಮ ಪ್ರಾಚೀನ ಕಾವ್ಯಮೀಮಾಂಸಕರು ಗುರುತಿಸಿದರು. ಅದರಲ್ಲಿಯೂ ಸಾಹಿತ್ಯಕೃತಿಯ ನಿರ್ಮಾಣಕ್ಕೆ ಪ್ರತಿಭೆ ಮೂಲವೆಂದೂ, ಅದು ಶಿವನ ಮೂರನೆಯ ಕಣ್ಣಿನಂತೆ ಅನ್ಯರು ಕಾಣದ್ದನ್ನು ಕಾಣುವ ಶಕ್ತಿಯನ್ನು ಕವಿಗೆ ನೀಡುತ್ತದೆಂದೂ ಅವರು ಭಾವಿಸಿದ್ದರು.

ಸಾಹಿತ್ಯ ಕೃತಿರಚನೆ ಕೆಲವರಿಗೆ ಮಾತ್ರವೇ ಏಕೆ ಸಾಧ್ಯವಾಗುತ್ತದೆ, ಎಲ್ಲರಿಂದಲೂ ಏಕೆ ಸಾಧ್ಯವಾಗುವುದಿಲ್ಲ ; ಅಥವಾ ಹಲವರು ರಚನೆ ಮಾಡಿದ ಕೃತಿಗಳಲ್ಲಿನ ಗುಣಮೌಲ್ಯಗಳಲ್ಲಿ ವ್ಯತ್ಯಾಸವಿರುತ್ತದಲ್ಲ ಅದೇಕೆ ಎಂದು ನಮಗೆ ನಾವೇ ಪ್ರಶ್ನೆ ಹಾಕಿಕೊಂಡರೆ, ಗಂಭೀರವಾಗಿ ಆಲೋಚಿಸಿದರೆ ಒಂದೆರಡು ಸಂಗತಿಗಳು ಗೋಚರಿಸುತ್ತವೆ. ಕೆಲವರಿಗೆ ಬೇರೆಯವರಿಗಿಲ್ಲದ ಯಾವುದೋ 'ಶಕ್ತಿ'ಯಿರುತ್ತದೆ, ಅದರಿಂದಾಗಿ ಅವರು ರಚನೆ ಮಾಡಲು ಸಾಧ್ಯ ; ಹಾಗೆ ಕೃತಿರಚನೆ ಮಾಡಬಲ್ಲ ಶಕ್ತಿಯನ್ನು ಹೊಂದಿರುವವರಲ್ಲಿಯೂ, ಆ ಶಕ್ತಿಯ ಪ್ರಮಾಣ-ಗುಣಗಳಲ್ಲಿ ವ್ಯತ್ಯಾಸಗಳಿರುವುದರಿಂದ ವಿವಿಧ ಲೇಖಕರ ಕೃತಿಗಳಲ್ಲಿ ವೈವಿಧ್ಯವು ಗೋಚರಿಸುತ್ತದೆ ಎಂಬುದು ಎಂಥವರಿಗಾದರೂ ತಿಳಿಯುತ್ತದೆ. ಅನುಭವ, ಶ್ರಮ ಇವುಗಳು ಕೃತಿ ರಚಿಸಬಲ್ಲ ಶಕ್ತಿಗೆ ಪೂರಕವಾಗುವಂಥವೇ ಹೊರತು ಶಕ್ತಿಗೆ ಪರ್ಯಾಯವಲ್ಲ ಎಂಬುದೂ ತಿಳಿಯುತ್ತದೆ. ನಮ್ಮ ಪ್ರಾಚೀನ ಕಾವ್ಯಮೀಮಾಂಸಕರು ಕವಿಗಳಲ್ಲಿ ಇರುತ್ತದೆಂದು ನಂಬಿದ್ದ ಈ ಶಕ್ತಿ-ಪ್ರತಿಭೆ ಎಂಬುದರ ಪರಿಕಲ್ಪನೆಯನ್ನು ಆಧುನಿಕ ಮನಃಶಾಸ್ತ್ರಜ್ಞರೂ ಅನುಮೋದಿಸುತ್ತಾರೆ. Imagination –ಪ್ರತಿಭೆ–ಹೇಗೆ ಕೆಲಸಮಾಡುತ್ತದೆ ಎಂಬುದರ ವಿವೇಚನೆಯೂ ಸಾಕಷ್ಟು ನಡೆದಿದೆ.

'ಪ್ರತಿಭೆ' ಎಂದರೆ ಹೊಳಹು. ಬೇರಾರಿಗೂ ಗೋಚರವಾಗದ ವಸ್ತುವಿನ ಮೇಲೆ ಯಾವನಲ್ಲಿ ಈ ಶಕ್ತಿಯಿದೆಯೋ ಅವನಲ್ಲಿನ ಪ್ರಜ್ಞೆಯು ಮಿಂಚು ಬಿದ್ದು ಅವನಿಗೆ ಕಾಣಿಸುತ್ತದೆ. ಅದನ್ನು ಭಾಷಿಕ ಮಾಧ್ಯಮದ ಮೂಲಕ ಅಭಿವ್ಯಕ್ತಿಪಡಿಸುವಾತನೇ ಕವಿ ಎಂದು ಮೀಮಾಂಸಕರ ವಿಶ್ಲೇಷಣೆ. ಎಂದರೆ ಪ್ರತಿಭೆಯ ಕಾರ್ಯವಿಧಾನ ಇಮ್ಮುಖವಾದುದು : ಅನ್ಯರು ಕಾಣದ್ದನ್ನು ತಾನು ಕಾಣುವ ಹಾಗೆ ಮಾಡುವುದು ; ಕಂಡದ್ದನ್ನು ಅನ್ಯರಿಗೆ ತಲುಪಿಸಬಲ್ಲ ರೀತಿಯಲ್ಲಿ ಕಟ್ಟುವುದು. (ಭಾಷೆಯ ಮೂಲಕ).

'ಸೃಜನಶೀಲತೆ'ಯು ಕಾರ್ಯಪ್ರವೃತ್ತವಾಗುವುದು ಹೇಗೆ ? ಅದಕ್ಕೆ ಪ್ರೇರಕವಾಗಬಲ್ಲದ್ದು ಯಾವುದು ? ಈ ಪ್ರಶ್ನೆಗಳೂ ನಮಗೆದುರಾಗುತ್ತವೆ. ಪ್ರಪಂಚದಲ್ಲಿನ ಬೇರೆ ಬೇರೆ ಕಾಲ-ದೇಶ-ಭಾಷೆಗಳ ಸೃಜನಶೀಲ ಬರಹಗಾರರು ವಿವಿಧ ಪ್ರೇರಣೆಗಳಿಂದ ಬರೆಯಲು ತೊಡಗಿದವರು ; ಒಬ್ಬನೇ ಲೇಖಕನ ವಿವಿಧ ಕೃತಿಗಳೂ ವಿಭಿನ್ನ ಪ್ರೇರಣೆ ಪರಿಸರಗಳಿಂದ ಮೂಡಿಬಂದವು ಎಂಬುದು ಮೇಲುನೋಟಕ್ಕೆ ಕಾಣುವ ಅಂಶ. ಹೀಗಾಗಿ ಎಲ್ಲ ಸೃಜನಶೀಲ ಬರಹಗಾರರನ್ನೂ ಒಳಗೊಳ್ಳುವಂತೆ ಇದರ ಬಗ್ಗೆ ಏನನ್ನು ಹೇಳುವುದೂ ಅಸಾಧ್ಯವಾಗುತ್ತದೆ.

ಸೃಜನಶೀಲತೆ ಎಂದರೆ ಏನು ಎಂದಾದರೂ ನಿಖರವಾಗಿ ಹೇಳುವುದು ಸಾಧ್ಯವೇ ? ಸೃಜನಶೀಲ ಲೇಖಕ ಸೃಷ್ಟಿಸುವುದಾದರೂ ಏನನ್ನು ? ಅಥವಾ ಅವನು ಬರೆಯುವುದು ಯಾವ ರೀತಿಯಿಂದ 'ಸೃಷ್ಟಿ' ಎನ್ನಿಸಿಕೊಳ್ಳಬಲ್ಲುದು ? ವೈಜ್ಞಾನಿಕ ಪರಿಭಾಷೆಯಲ್ಲಿ ಹೇಳುವುದಾದರೆ, ಯಾವುದನ್ನೂ 'ಸೃಷ್ಟಿಸಲು' ಸಾಧ್ಯವಿಲ್ಲ ; ಯಾವುದನ್ನೂ ನಾಶಮಾಡಲು ಸಾಧ್ಯವಿಲ್ಲ. ಹೀಗಾಗಿ ವಿಜ್ಞಾನ ತಿಳಿಯುವ ಅರ್ಥದಲ್ಲಿ ಲೇಖಕ 'ಸೃಷ್ಟಿ' ಮಾಡಲಾರ. ಹಾಗಾದರೆ ಅವನ ಸೃಷ್ಟಿಕ್ರಿಯೆ ಯಾವ ರೀತಿಯದು ?

ಪ್ರಾಚೀನ ವಿಶ್ಲೇಷಕರು ಕವಿಯ ಸೃಷ್ಟಿಶಕ್ತಿಯನ್ನು ಬ್ರಹ್ಮನ ಸೃಷ್ಟಿಕ್ರಿಯೆಗೆ ಹೋಲಿಸಿದ್ದಾರೆ. 'ಅಪಾರೇ ಕಾವ್ಯ ಸಂಸಾರೇ ಕವಿರೇವ ಪ್ರಜಾಪತಿಃ' ಎನ್ನುವಂತಹ ಮಾತುಗಳನ್ನು ನೋಡಬಹುದು. ನಾವು ಕಾಣದ ಬ್ರಹ್ಮನ ಸೃಷ್ಟಿಕ್ರಿಯೆಯನ್ನು ಕವಿಯ ಸೃಷ್ಟಿಯ ರೀತಿಗೆ ಹೋಲಿಸಲಾಗಿದೆಯಿಲ್ಲಿ. ಕೆಲವರು ಇನ್ನೂ ಮುಂದೆ ಹೋಗಿ ಕವಿ ಕೃತಿರಚನೆಗೆ ಮುಂಚೆ ಮನಸ್ಸಿನಲ್ಲಿ ನಡೆಸುವ ಧ್ಯಾನದಂತೆ ಬ್ರಹ್ಮನೂ ತನ್ನ ಧ್ಯಾನದಿಂದ ಉಂಟಾದ ದರ್ಶನಕ್ಕೆ ಅನುಗುಣವಾಗಿ ಸೃಷ್ಟಿಯನ್ನು ಮಾಡುವನೆಂದು ಹೇಳುತ್ತಾರೆ. ಅಸ್ತಿತ್ವ ವಾದಿಗಳು ಕೃತಿಯ ಹಿಂದಿನ ಕಾಣ್ಕೆಯನ್ನು ಇಲ್ಲವೆನ್ನುತ್ತಾರೆ. ಹೀಗಾಗಿ ಈ ಬಗೆಯ ಬ್ರಹ್ಮಸೃಷ್ಟಿ-ಕವಿಸೃಷ್ಟಿಯ ಹೋಲಿಕೆಗಳು ಅಸ್ಪಷ್ಟವಾಗಿಯೇ ಉಳಿಯುತ್ತವೆ. ಆದ್ದರಿಂದ ನಾವು ನಮ್ಮ ಪಾತಳಿಯಲ್ಲೇ ಇದರ ಬಗ್ಗೆ ಚಿಂತಿಸಬೇಕಾಗುತ್ತದೆ.

ದೊಡ್ಡ ಲೇಖಕನಿಗೆ ಇತರರಿಗೆ ಇರುವುದಕ್ಕಿಂತ ಹೆಚ್ಚಿನದು ಯಾವುದೋ ಇದೆ ಎಂದು ಒಪ್ಪಲೇಬೇಕು. ಹೀಗೆ ಒಪ್ಪಿಕೊಳ್ಳದಿದ್ದರೆ ಕೆಲವರು ಮಾತ್ರ ಬರೆಯಬಲ್ಲ, ಬರೆಯುವವರಲ್ಲಿಯೂ ಕೆಲವರು ಮಾತ್ರ ಶ್ರೇಷ್ಠವಾಗಿ ಬರೆಯಬಲ್ಲ ಕಾರಣವನ್ನು ನಾವು ಹುಡುಕುವುದಾದರೂ ಹೇಗೆ? ಈ 'ಹೆಚ್ಚಿನದು' ಅವನಿಗೆ ಹೇಗೆ ಬಂತು? ಪ್ರಾಯಶಃ ಅವನ ಇಡೀ ಇರುವಿಕೆಯಲ್ಲಿಯೇ ಅದು ಇದೆ. ಇಲ್ಲದಿದ್ದರೆ ಒಂದೇ ಬಗೆಯ ವಾತಾವರಣದಲ್ಲಿ ಬೆಳೆದ ವಿವಿಧ ವ್ಯಕ್ತಿಗಳಲ್ಲಿ ಎಲ್ಲೋ ಕೆಲವರಿಗೆ ಮಾತ್ರ ಅದಿರಲು ಕಾರಣವೇನು ಎಂಬ ಪ್ರಶ್ನೆಯುಂಟಾಗುತ್ತದೆ.

ಇರುವಿಕೆಯ ಒಂದಂಶವಾಗಿಯೇ ಇರುವ ಈ 'ಶಕ್ತಿ' ಕಾಣಿಸುವುದು—ಅಂದರೆ ಅಭಿವ್ಯಕ್ತಿರೂಪದಲ್ಲಿ–ಯಾವಾಗ? ಪ್ರಾಯಶಃ ಇದಕ್ಕೂ ನಿರ್ದಿಷ್ಟ ಉತ್ತರ ಹೇಳಲು ಅಸಾಧ್ಯ. ಸೃಜನಶೀಲತೆ ಕೆಲವರನ್ನು ಬಹುಬೇಗ–ಎಂದರೆ ಚಿಕ್ಕಂದಿನಲ್ಲಿಯೇ–ಕಾರ್ಯ–ಪ್ರವೃತ್ತರನ್ನಾಗಿಸಬಹುದು. ಇನ್ನು ಕೆಲವರು ಸಾಕಷ್ಟು ವಯಸ್ಸಾದ ಮೇಲೂ ಬರೆಯಲು ತೊಡಗಬಹುದು. ಎಂದರೆ ಈ ಸೃಜನಶೀಲಶಕ್ತಿ ಕಾಣಿಸಿಕೊಳ್ಳಲು ಹದಗೊಂಡ ಹಿನ್ನೆಲೆಯೇನಾದರೂ ಇರಬೇಕೆ? ಇರಬಹುದು. ಯಾಕೆಂದರೆ ಸಾಹಿತ್ಯ ಕೃತಿಯೊಂದು ನಿರ್ಮಾಣಗೊಳುವುದು ಒಂದು ರೀತಿಯಲ್ಲಿ ಅಗೋಚರ–ದೃಗ್ಗೋಚರ ಇವುಗಳ ಮಿಲನದಲ್ಲಿ. ಎಂದರೆ ಲೇಖಕನಿಗೇ ವಿಶಿಷ್ಟವಾದ (ಬೇರಾರಿಗೂ ಆಗಿರದ) ಅನುಭವ; ಹಲವರಿಗೆ ಕಾಣುವ (ಅಥವಾ ಅರ್ಥವಾಗುವ) ಭಾಷೆಯಲ್ಲಿ ಮೂಡಿ ಬರುತ್ತದೆ ಎಂದು ಇದರ ಅರ್ಥ. ಪ್ರಾಯಶಃ ಈ ಎರಡೂ ಪರಸ್ಪರ ಮಿಳಿತಗೊಳ್ಳಬಹುದಾದ ಪರಿಸರವೇ ಹದವಾದ ಪರಿಸ್ಥಿತಿ. ಇಂಥ ಸ್ಥಿತಿಯಲ್ಲೇ ಕೃತಿ ನಿರ್ಮಾಣಗೊಳ್ಳುವುದು.

ಸೃಜನಶೀಲನಾದ ಲೇಖಕನಲ್ಲಿ ಈ ಶಕ್ತಿಯು ಕಾರ್ಯ ಪ್ರವೃತ್ತವಾಗಿರುವ ರೀತಿ ಯಾವುದು? ಅವನು ಬೇಕೆಂದಾಗ, ಬೇಕೆಂದ ರೀತಿಯಲ್ಲಿ ಕೃತಿ ರಚನೆಯಾಗುವುದಿಲ್ಲ ಎಂಬುದು ಎಲ್ಲರಿಗೂ ತಿಳಿದಿರುವ ಅಂಶ. ಲೇಖಕನ ಪ್ರಜ್ಞೆಯಲ್ಲಿ ಇಷ್ಟರಲ್ಲಿಯೇ ನಿರ್ಮಾಣಗೊಳ್ಳಲಿರುವ ಕೃತಿಯ ಬಗ್ಗೆ ಅಸ್ಪಷ್ಟ ಅನಿಸಿಕೆಗಳಿರುವುದು ನಿಜ. ಅದು ಪ್ರಾಯಶಃ ಕಲ್ಲಿನಲ್ಲಿ ಹುದುಗಿರುವ ಶಿಲ್ಪಕೃತಿಯ ರೀತಿ. ಆದರೆ ವಿವರಗಳು ಮೂಡಿ ಬರುವುದು ಕೃತಿರಚನೆಯ ಕಾಲದಲ್ಲಿಯೇ. ಸೃಜನಶೀಲ ಲೇಖಕ ಯಾವುದೋ ಲೋಕದಿಂದ ಇಳಿದು ಬಂದವನೆಂಬ ಭ್ರಮೆಯನ್ನುಂಟುಮಾಡಲೋಸುಗ ಹೀಗೆ ಹೇಳುತ್ತಿಲ್ಲ. ಇಲ್ಲದಿದ್ದರೆ ನೂರಾರು ಪುಟಗಳಷ್ಟು ದೀರ್ಘವಾದ ಕಾದಂಬರಿಯೊಂದರ ಎಲ್ಲ ಮಾತುಗಳನ್ನೂ ಅಂಶಗಳನ್ನೂ ಪೂರ್ವನಿರ್ಧಾರದಿಂದ ಬರೆಯುವುದು ಸಾಧ್ಯವೇ?

ಹಾಗಂದರೆ ಕೃತಿಯು, ಕುಮಾರವ್ಯಾಸನ ಬಗ್ಗೆ ಹೇಳುವ ಕತೆಯಲ್ಲಿರುವಂತೆ, ಅತಿಮಾನುಷ ಶಕ್ತಿಯೊಂದು ಮನುಷ್ಯನ ಮೂಲಕ ನೀಡುವಂಥದು ಎಂದೂ ನನ್ನ ಅಭಿಪ್ರಾಯವಲ್ಲ, ಕೃತಿಯ ವಿವರಗಳೆಲ್ಲ ಲೇಖಕನಲ್ಲಿಯೇ ಇವೆ; ಅವು ಬೇರೆಲ್ಲಿಂದಲೂ

ಕೃತಿರಚನೆಯ ಕಾಲದಲ್ಲಿ ಓಡಿಬರುವುದಿಲ್ಲ. ಇದರ ವಿವರಣೆಯಿಷ್ಟು : ಲೇಖಕ ತಾನು ರಚಿಸಬೇಕೆಂದು ನಿರ್ಧರಿಸಿದ ಕೃತಿಯನ್ನು ರಚಿಸುತ್ತಿರುವಾಗ, ಅವನ 'ಶಕ್ತಿ'ಗೆ ಅನುಗುಣವಾಗಿ, ಆದರ ವಿವರಗಳೆಲ್ಲ ಹೊರಬರಲು ಪ್ರಾಯಶಃ ತಯಾರಾಗಿ ನಿಂತಿರುತ್ತವೆ. ಅವನ ವಿಶಿಷ್ಟತೆಯಿರುವುದು ಹಾಗೆ ನಿಂತ ವಿವರಗಳನ್ನು 'ಅಂದಂದಿನುಚಿತಕ್ಕೆ' ತಕ್ಕಂತೆ ಹೊರತರುವುದರಲ್ಲಿ. ಈ ವಿವರಗಳೆಲ್ಲ ಬರುವುದಾದರೂ ಎಲ್ಲಿಂದ ? ಯಾವುದೋ ಕೃತಿಯ ನಿರ್ಮಾಣ ಮಾಡಬೇಕೆಂದು ಲೇಖಕ ಅಂದುಕೊಳ್ಳುತ್ತಾನೆ ಎಂದಿಟ್ಟುಕೊಳ್ಳಿ. ಅದಕ್ಕೆ ಬೇಕಾದ ಎಲ್ಲ ವಿವರಗಳನ್ನೂ ಅವನು ಕಲೆಹಾಕುತ್ತಾನೆಂದಲ್ಲ. ಕೆಲವು ವೇಳೆ ಪ್ರಜ್ಞಾಪೂರ್ವಕವಾಗಿಯೂ ಲೇಖಕ ಹಲವಾರು ಅಂಶಗಳನ್ನು ಕಲೆಹಾಕಬೇಕಾಗುತ್ತದೆ. ಉದಾಹರಣೆಗೆ : ಕಾದಂಬರಿಕಾರನೊಬ್ಬ ಒಬ್ಬ ರೋಗಿಯ ಬಗ್ಗೆ ಬರೆಯಬೇಕಾದ, ತಾನು ಅನುಭವಿಸಿರದ ರೋಗದ ಬಗ್ಗೆ ಹೇಳಬೇಕಾದ, ವಿವರಗಳನ್ನು ವೈದ್ಯರಿಂದಲೊ ರೋಗಿಯಿಂದಲೊ ಪಡೆಯಬಹುದು. ಆದರೆ ಅದು ವಾಸ್ತವತೆಯ ರೂಪು ಕೊಡಲು ಮಾತ್ರ. ಕೃತಿಕಾರ ಹೇಳುವುದು ಬಹುಜನರಿಗೆ, ಬಹುಕಾಲದಲ್ಲಿ ಅನ್ವಯಗೊಳ್ಳಬಹುದಾದ ಆಂತರಿಕ ಅನುಭವಗಳ ಬಗ್ಗೆ. ಹೀಗಾಗಿ ಇಂತಹ ಹೊರವಿವರಗಳಲ್ಲದೆ ; ಅನ್ಯತ್ರ ವಿವರಗಳು ಲೇಖಕನಲ್ಲಿ ಮೊದಲೇ ಗೂಡು ಕಟ್ಟಿರುತ್ತವೆ. ಇದು ಒಂದೆರಡು ದಿನಗಳಲ್ಲಿ ಆದುದಲ್ಲ ; ಲೇಖಕನ ಹುಟ್ಟಿನಿಂದ ಹಿಡಿದು ಕೃತಿರಚನೆಯ ಕಾಲದವರೆಗಿದ್ದ ಅನುಭವದಲ್ಲಿ ಹುದುಗಿರುವಂಥದು. ಎಂದರೆ ಕೃತಿರಚನೆಯ ಕಾಲದಲ್ಲಿ ಸೃಜನಶೀಲ ಲೇಖಕನಿಗೆ ನೆರವಾಗಿ ಒದಗಿ ಬರುವ ವಿವರಗಳು 'ಸಹ+ಜ'ವಾದವು. ಆದ್ದರಿಂದಲೇ ರಿಚರ್ಡ್ಸ್‌ನಂತಹ ಮೀಮಾಂಸಕರು 'ಪ್ರತಿಭಾ' ವ್ಯಾಪಾರವೂ ಒಂದು ರೀತಿಯ ಜ್ಞಾಪಕಕಾರ್ಯ ಎಂದು ವಿವರಿಸುವುದು.

ಮೇಲೆ ಹೇಳಿದ ವಿವರಣೆಯಿಂದ ನಾವು ಹೇಳಬಹುದಾದುದಿಷ್ಟು : ಲೇಖಕನಲ್ಲಿ ಆಂತರಿಕ ಶಕ್ತಿಯೊಂದು ಸದಾ ಕಾರ್ಯಶೀಲವಾಗಿರುತ್ತದೆ. ಅದು ಕೃತಿರಚನೆಯ ಕಾಲದಲ್ಲಿ ಲೇಖಕನ ವ್ಯಕ್ತಿತ್ವದಲ್ಲಿ ಹಾಸುಹೊಕ್ಕಾಗಿರುವ ಅನುಭವಗಳನ್ನು ಬೇಕಾದಂತೆ ರೂಪಿಸುತ್ತದೆ. ಆದ್ದರಿಂದಲೇ ಕವಿಯಂತಹ ಪ್ರತಿಭಾವಂತನ ಮನಸ್ಸನ್ನು ಟಿ. ಎಸ್ ಎಲಿಯಟ್ ಮೂಸೆಗೆ ಹೋಲಿಸುವುದು. ಅವನ ಎಲ್ಲ ಅನುಭವಗಳೂ ಕೃತಿರಚನೆಯ ಕಾಲದಲ್ಲಿ ಯಾವುದೋ ವಿಶಿಷ್ಟ ಸಂಸ್ಕಾರಕ್ಕೊಳಗಾಗಿ ತಮ್ಮ ಹಸಿತನವನ್ನು ಕಳೆದುಕೊಳ್ಳುತ್ತವೆ. ಎಂದರೆ ವೈಯಕ್ತಿಕತೆಯಿಂದ ಲೇಪಿತವಾದ ಅನುಭವಗಳು ಲೇಖಕನ ವಿಶಿಷ್ಟ ಸೃಜನಶೀಲ ಶಕ್ತಿಯಿಂದಾಗಿ ತಮ್ಮ ಹಸಿತನವನ್ನೂ ವೈಯಕ್ತಿಕತೆಯನ್ನೂ ಕಳೆದುಕೊಂಡು ಸಾರ್ವತ್ರಿಕವಾಗುತ್ತವೆ. ಈ ಕ್ರಿಯೆಯನ್ನು ಎಲಿಯಟ್ ರಾಸಾಯನಿಕ ಕ್ರಿಯೆಗೆ ಹೋಲಿಸುತ್ತಾನೆ. ಅನುಭಾವಗಳು ತಮ್ಮ ಹಳೆಯ ಲಕ್ಷಣಗಳನ್ನು ಕಳೆದುಕೊಂಡು ಕೃತಿಯ ಆವಶ್ಯಕತೆಗನುಗುಣವಾಗಿ ತೆಕ್ಕೆಗೊಳ್ಳುತ್ತವೆ. ಈ ಕ್ರಿಯೆ ಉದ್ದೇಶಪೂರ್ವಕವಾಗಿಯೇನೂ ನಡೆಯುವುದಿಲ್ಲ ; ಆದರೆ ಕೃತಿಚರನೆಯನಂತರ ರಚಯಿತನ ಜಾಗ್ರುತ ಪ್ರಜ್ಞೆಗೆ ತಕ್ಕಂತೆ ತಿದ್ದುಪಾಟುಗಳಿಗೆ ಒಳಗಾಗಬಹುದು.

ಮೇಲಿನ ವಿವರಣೆಯಿಂದಾಗಿ ಲೇಖನಕಲೆಯು ನಡೆಯುವುದು ಸಂಪೂರ್ಣ ಕತ್ತಲೆಯಲ್ಲಿ–ಎಂದರೆ ಲೇಖಕನ ಜಾಗ್ರತ ಪ್ರಜ್ಞೆಗೆ ಸ್ವಲ್ಪವೂ ತಿಳಿಯದಂತೆ ಹಾಗೂ ಅವನ ನಿಯಂತ್ರಣವನ್ನು ಮೀರಿದ, ಹಿಡಿತಕ್ಕೆ ಹೊರತಾದ ಕಾರಣದಿಂದ ಎಂದು ತಿಳಿಯಬಾರದು. ಹಾಗೆ ತಿಳಿದು ಬಿಟ್ಟರೆ ಸಾಹಿತ್ಯವು ದೈವೀಕೃತಿಯೆಂದೆನಿಸಿ ಬಿಡ ಬಹುದು. ಅದು ಸರಿಯಲ್ಲ. ಸಾಹಿತ್ಯವು ಸೃಷ್ಟಿಯಾಗಿರುವುದೇ ಮನುಷ್ಯನ ವಿಶಿಷ್ಟವಾದ ಜೀವನ ರೀತಿಯಿಂದ, ಅವನು ಸಮಾಜದಲ್ಲಿ ವಾಸಿಸುವುದರಿಂದ. ಪ್ರಾಣಿಗಳ ಹಾಗೆ ಮಾನವನಿಗೂ ವ್ಯವಸ್ಥಿತವಾದ ಸಮಾಜ ಜೀವನವಿರದೇ ಇದ್ದರೆ, ಅವನ ಇತರೆಲ್ಲ ಸಾಂಸ್ಕೃತಿಕ ಕಾರ್ಯಗಳಂತೆ ಸಾಹಿತ್ಯವೂ ಸೃಷ್ಟಿಗೊಳ್ಳುತ್ತಲಿರಲಿಲ್ಲ. ಸಾಹಿತ್ಯದ ವಸ್ತುವಾದ ಅನುಭವವು ಸಮಾಜ ಜೀವನದಿಂದಾಗಿ ಉಂಟಾದದ್ದೇ ; ಹಾಗೆಯೇ ಸಾಮಾಜಿಕ ಸೃಷ್ಟಿಯಾದ ಭಾಷೆಯ ಹೊರರೂಪವನ್ನು ಪಡೆದಿರುವಂಥದೇ. ಆದ್ದರಿಂದ ಸಾಹಿತ್ಯ ವಿಶಿಷ್ಟವಾಗಿ ಮಾನವಸೃಷ್ಟಿ. ಇದರ ರಚನೆಗೆ ದೈವಮೂಲ ವನ್ನು ಹುಡುಕುವುದು ತರವಲ್ಲ. ಕೃತಿಯ ರಚನೆಯ ಹಿನ್ನೆಲೆಯಲ್ಲಿ ಲೇಖಕ ಮಾಡಿರಬಹುದಾದ ಜಾಗ್ರತ ವಿವೇಚನೆಯಿರುವುದರಲ್ಲಿ ಸಂದೇಹವಿಲ್ಲ.

ಎಲ್ಲರಿಗಿರುವಂತೆಯೇ ಸೃಜನಶೀಲ ಲೇಖಕನಿಗೂ ಬೇಕು ಬೇಡಗಳಿವೆ ; ಪೂರ್ವಾಗ್ರಹಗಳಿವೆ. ನಾವೆಷ್ಟು ಬಗೆಯಿಂದ ಸಾಹಿತ್ಯವು ವೈಯಕ್ತಿಕ ವಿಮೋಚನೆ ಯೆಂದು ಸಾರಿದರೂ ಅದರಲ್ಲಿ ಕೃತಿಕಾರನ ಘಾಟು ಬಡಿದೇ ಬಡಿಯುತ್ತದೆ. ಸಂವಹನ ಕ್ರಮದಲ್ಲಿ ವೈಯಕ್ತಿಕತನವಿಲ್ಲದಿರುವುದು–ಎಂದರೆ ಕೃತಿಯನ್ನು ಓದುವವನಲ್ಲಿ ಇದೊಂದು ವ್ಯಕ್ತಿಚರಿತ್ರೆ, ನನಗೆ ಸಂಬಂಧಿಸಿದ್ದಲ್ಲ ಎಂಬ ಭಾವನೆಯನ್ನುಂಟು ಮಾಡದೆ ; ಇದು ಯಾರಿಗೂ ಆಗಬಹುದಾದ ಅನುಭವ ಎಂಬ ಭಾವನೆಯನ್ನುಂಟು ಮಾಡುವುದು—ಸಾಧ್ಯವೇ ಹೊರತು, ಎಲ್ಲ ಕೃತಿಗಳೂ ವ್ಯಕ್ತಿತನದಿಂದ ಪೂರ್ಣ ಹೊರತಾದುದಾಗಲು ಸಾಧ್ಯವಿಲ್ಲ. ಲೇಖಕನ ಇಡೀ ವ್ಯಕ್ತಿತ್ವದಲ್ಲಿ ಮೂಡಿಬರುವುದು ಕೃತಿಯಾದ್ದರಿಂದ ವ್ಯಕ್ತಿತ್ವದ ಅಂಶ ಕೃತಿಯಲ್ಲಿ ಕಾಣದಿರುವುದು ಹೇಗೆ ಸಾಧ್ಯ? ಹಾಗಾಗಿಬಿಟ್ಟಿದ್ದರೆ ಎಲ್ಲ ಲೇಖಕರ ಕೃತಿಗಳೂ ಒಂದೇ ಬಗೆಯವಾಗಿರಬೇಕಿತ್ತಲ್ಲ. ಹಾಗಿಲ್ಲವಲ್ಲ ? ಆದ್ದರಿಂದ ಕೃತಿಗಳಲ್ಲಿ ಕೃತಿಕಾರನ ಛಾಪು ಇದ್ದೇ ಇರುತ್ತದೆ. ಎಲ್ಲ ಕೃತಿಕಾರರೂ ಕೃತಿಗಳಲ್ಲಿ ಅನುಭವಗಳನ್ನು ಹಸಿಯಾಗಿರಿಸದೆ ಹದವಾಗಿಸುತ್ತಾರೆಂಬು ದಷ್ಟೇ ನಿಜ. ಎಂದರೆ ಸೃಜನಕ್ರಿಯೆಯ ರೀತಿಯಲ್ಲಿ ಸಾಮ್ಯವಿದೆಯೇ ಹೊರತು ಸಿದ್ಧವಸ್ತುವಿನಲ್ಲಿ ಸಾಧ್ಯತೆಯಿಲ್ಲ. ಹಾಗಾಗಿ ಕೃತಿಗಳಲ್ಲಿನ ವಿಭಿನ್ನತೆಗೆ ಕಾರಣ ಕೃತಿಕಾರರ ವ್ಯಕ್ತಿತ್ವದ ಭಿನ್ನತೆಗಳು.

ಕೃತಿಕಾರರ ಭಿನ್ನತೆಗಳು ಅಥವಾ ವೈಯಕ್ತಿಕ ಸೊಗಡು ಕೃತಿಗಳಲ್ಲಿಯೂ ಕಾಣುತ್ತವೆ ಎಂದು ಒಪ್ಪಿಕೊಂಡ ಮೇಲೆ, ಅವನ ಒಲವು-ನಿಲವುಗಳು ಕೃತಿಯಲ್ಲಿ ತೋರಿಕೊಳ್ಳುತ್ತವೆಂಬುದರಲ್ಲಿ ಸಂಶಯವಿಲ್ಲ. ಸಾಮಾಜಿಕವಾದ ಎಲ್ಲ ಅಂಶಗಳ

ಬಗ್ಗೆ ಕೃತಿಕಾರನಿಗೆ ತನ್ನದೇ ಆದ ನಿಲವುಗಳಿರಲು ಸಾಧ್ಯ. ದೀರ್ಘಕಾಲದಿಂದ ಅವನಲ್ಲಿ ನಡೆದಿರಬಹುದಾದ ವಿವೇಚನೆಯ ಸತ್ವವು ಕೃತಿಗಳಲ್ಲಿ ಕಾಣಿಸಿದರೆ ಆಶ್ಚರ್ಯ ವಿಲ್ಲ. ಕೆಲವರಲ್ಲಿ ಖಚಿತ ನಿಲವುಗಳು ಕಾಣಿಸಬಹುದು, ಮತ್ತೆ ಕೆಲವರಲ್ಲಿ ಸಂಘರ್ಷ ಸ್ಥಿತಿಯ ಚಿತ್ರಣಗಳಿರಬಹುದು.

ಕೃತಿಯ ಸ್ವರೂಪದ ಜೊತೆಗೆ ಅದರ ವಸ್ತುವೂ ಮುಖ್ಯವೆಂಬುದನ್ನು ಈಚೆಗೆ ನಾವು ಗುರತಿಸುತ್ತಿದ್ದೇವಲ್ಲ. ಎಂದರೆ ಕೃತಿಯು ಹೇಗೆ ರಚಿತವಾಗಿದೆ, ಅದರ ರಚನೆಯು ಎಷ್ಟರಮಟ್ಟಿಗೆ ಕನ್ವಿನ್ಸಿಂಗ್ ಆಗಿದೆ ಎಂಬುದಲ್ಲದೆ, ಕೃತಿಯ ಮೂಲಕ ಲೇಖಕ ಏನನ್ನು ಸಂವಹಿಸಲು ಹೊರಟಿದ್ದಾನೆ ಎಂಬುದನ್ನೂ ನಾವು ಗಮನಿಸಬೇಕಾಗು ತ್ತದೆ. 'ಬದ್ಧತೆ' 'ಅ–ಬದ್ಧತೆ'ಗಳ ಬಗ್ಗೆ ನಾನಿಲ್ಲಿ ಹೇಳುತ್ತಿಲ್ಲ. ಆದರೆ ಕೃತಿ ರಚನೆಯ ಹಿನ್ನೆಲೆಯಲ್ಲಿ ಲೇಖಕ ಹೇಳಬೇಕಾದ ಆಶಯವೊಂದಿದ್ದೇ ತೀರುತ್ತದೆಯಲ್ಲ, ಅದರ ಬಗ್ಗೆ ನಾನು ಮಾತಾಡುತ್ತಿರುವುದು. ಹಾಗೆ ಒಂದು ಆಶಯವೇ ಇರದಿದ್ದರೆ ಕೃತಿರಚನೆಯನ್ನಾದರೂ ಮಾಡಬೇಕೇಕೆ ? ತನ್ನ ಅಮೂರ್ತ ಅನುಭವಗಳನ್ನು ಒಂದು ನಿಶ್ಚಿತರೂಪದಲ್ಲಿ ಒಂದುಗೂಡಿಸುವುದರ ಮೂಲಕ ಲೇಖಕ ತನ್ನ ಆಶಯುವನ್ನೂ ಮೂರ್ತಗೊಳಿಸಿರುತ್ತಾನೆ. ಹೀಗೆ ಅವನು ರೂಪಿಸಿಕೊಂಡ ಆಶಯದ ಸ್ವರೂಪ ವೆಂತಹುದು ?

ಲೇಖಕನೂ ಸಾಮಾಜಿಕ ಜೀವಿಯಾದ್ದರಿಂದ ಅವನ ಜೀವನದ ವೈಯಕ್ತಿಕ ನೋವು ನಲಿವುಗಳೆಲ್ಲ ಸೇರಿ ಅವನಿಗೊಂದು ಜೀವನದೃಷ್ಟಿಯನ್ನು ಒದಗಿಸಿರುತ್ತವೆ. ಅಥವಾ ಬೆಳೆಯುತ್ತಿರುವ ಲೇಖಕನಲ್ಲಿ ಈ ದೃಷ್ಟಿಯ ಬೆಳವಣಿಗೆಯನ್ನೂ ನಾವು ಗುರುತಿಸಬಹುದು ಎಂದು ಹೇಳೋಣ. ಎಂದರೆ ಒಂದೊಂದು ಕೃತಿಯಲ್ಲೂ ಕಾಣುವ ಲೇಖಕನ ನಿಲವು ಆ ಕೃತಿಯ ಮಟ್ಟಿಗೆ ಸಂಗತವೆಂದು ನಾವು ಭಾವಿಸಬೇಕು. ಇಲ್ಲಿ ನಾನು ಹೇಳುತ್ತಿರುವ ಅಂಶವನ್ನು ಸ್ಪಷ್ಟಗೊಳಿಸಬೇಕೆನಿಸುತ್ತದೆ. ಯಾವುದೋ ಒಬ್ಬ ಲೇಖಕನ ಒಂದು ಕೃತಿಯು ತೋರ್ಪಡಿಸುವ ಅವನ ನಿಲವು ಅವನ ಇತರ ಕೃತಿಗಳಲ್ಲಿ ಕಾಣುವ ನಿಲುವಿಗಿಂತ ಭಿನ್ನವಾಗಿರಬಹುದು ಅಥವಾ ಒಂದೇ ಆಗಿರ ಬಹುದು. ಇದು ಲೇಖಕನ ಬೆಳವಣಿಗೆಗೆ ಸಂಬಂಧಿಸಿದ್ದು. ಆದರೆ ಕೃತಿರಚನೆಯಲ್ಲಿ ಕೃತಿಕಾರನ ಆಗಿನ ನಿಲುವು ರೂಪುಗಂಡಿರುತ್ತದೆ ಎಂದಿಷ್ಟೇ ನನ್ನ ಮಾತಿನ ಅರ್ಥ.

ಈ ರೀತಿ ಕೃತಿಯಲ್ಲಿ ಕಾಣಿಸಿಗೊಳ್ಳುವ ಕೃತಿಕಾರತನ ದಿಢೀರನೆ ಮೂಡಿ ಬಂದದ್ದಲ್ಲ ; ದೀರ್ಘಕಾಲದ ಪ್ರಜ್ಞಾಪೂರ್ವಕತೆಯಿಂದಾಗಿ ರೂಪುಗೊಂಡದ್ದು. ಬಾಹ್ಯನೆಲೆಯಲ್ಲಿ, ಎಂದರೆ ಜಾಗ್ರತಪ್ರಜ್ಞೆಯಲ್ಲಿ, ಕೃತಿಕಾರ ಎಷ್ಟರಮಟ್ಟಿಗೆ ಚರ್ಚೆ ವಿವೇಚನೆಗಳಲ್ಲಿ ಪಾಲುಗೊಂಡಿರುತ್ತಾನೆಯೋ ಹಾಗೆಯೇ ಅವನ ಅಂತಃಪ್ರಜ್ಞೆ ಎಲ್ಲ ಅನುಭವಗಳನ್ನೂ ಈ ರೀತಿಯೇ ತೂಗಿ ನೋಡುತ್ತಿರುತ್ತದೆ ಎನ್ನಿಸುತ್ತದೆ. ಜೀವನದ ವೈವಿಧ್ಯ, ದ್ವಂದ್ವ, ವೈಚಿತ್ರ್ಯ ಇವುಗಳನ್ನೆಲ್ಲ ತಾಕಿಕೊಂಡು ಬೆಳೆಯುವ

ಅವನ ಪ್ರಜ್ಞೆ ಮತ್ತು ಅವನ ವೈಚಾರಿಕತೆಗಳು ಪ್ರಾಯಶಃ ಕೃತಿಯೊಂದರಲ್ಲಿ ಮೇಳೈಸುತ್ತವೆ. ಎಂದರೆ ಲೇಖನ ಪ್ರಜ್ಞೆ ಸದಾ ವಿಮರ್ಶಬುದ್ಧಿಯಿಂದ ಕೂಡಿರುವಂಥದೆಂದು ಕಾಣುತ್ತದೆ ; ಒಂದೆಡೆ ಆಂತರಿಕ, ಇನ್ನೊಂದೆಡೆ ಬಾಹ್ಯ. ಅವನ ಅನುಭವಿಕ ವಿಮರ್ಶೆಯಿಂದ ರೂಪುಗೊಳ್ಳುವ ನಿಲುವು ಮತ್ತು ಅವನ ವೈಚಾರಿಕತೆಯಿಂದ ರೂಪುಗೊಂಡ ನಿಲುವು ಕೃತಿಗಳಲ್ಲಿ ಕಾಣಿಸಿಕೊಳ್ಳುತ್ತವೆ. ಯಾವಾಗ ಇವೆರಡೂ ತಾದಾತ್ಮ್ಯಗೊಂಡಿರುತ್ತವೋ ಅಂತಹ ಕೃತಿಯಲ್ಲಿ ವೈರುಧ್ಯಗಳು ಕಾಣುವುದಿಲ್ಲ. ಹಾಗಾಗದೆ, ಅವನ ಅನುಭವದ ನಿಲುವು ಒಂದು ತೆರನಾಗಿದ್ದು, ವೈಚಾರಿಕ ನಿಲುವು ಭಿನ್ನರೀತಿಯದಾಗಿದ್ದರೆ ಅಂತಹ ಕೃತಿಯಲ್ಲಿ ಮೌಲ್ಯಗಳ ಅಸಾಂಗತ್ಯವುಂಟಾಗಿ ಕೃತಿ ಪರಿಪೂರ್ಣ ರೂಪವನ್ನು ಪಡೆದಂತಹದ್ದಾಗಿರುವುದಿಲ್ಲ, ಹಾಗಾಗಿ ಕೃತಿ ಕೃತಕವೆನ್ನಿಸಬಹುದು.

ಎಂದರೆ ಲೇಖಕ ವೈಯಕ್ತಿಕ ನಂಬಿಕೆಯನ್ನು ಹೊಂದಿರಬಹುದು. ಆದರೆ ಅದೇ ಮೇಲುಗೈಯಾಗಿ ಕೃತಿಯೊಂದರಲ್ಲಿ ಕಾಣಿಸಿದಾಗ ಆ ನಂಬಿಕೆ ಅಥವಾ ವಿಚಾರ ಕೃತಿಗೆ ಭಾರವೆನಿಸುತ್ತದೆ ; ಹಾಗೆಯೇ ಆನುಭವಿಕ ಆರ್ದ್ರತೆಯಿದ್ದೂ ನಿಲವಿನ ಅಸ್ಪಷ್ಟತೆಯಿಂದಾಗಿ ಕೃತಿಯಲ್ಲಿ ಕಾಣುವ ಕೃತಿಕಾರನ ಆಶಯ ಮಸಕಾಗಬಹುದು. ಈ ವಿಚಾರದಿಂದಾಗಿ ಇಲ್ಲಿ ಹೇಳಬೇಕಾದುದಿಷ್ಟು: ಕೃತಿರಚನೆಯಲ್ಲಿ ವೈಚಾರಿಕ ನಿಲುವು ಕೂಡ, ಅನುಭವದ ಮೂಲದ್ರವ್ಯದಂತೆಯೇ ಮುಖ್ಯ ; ಅಲ್ಲದೆ, ಇವುಗಳ ಸಾಂಗತ್ಯವೇ ಕೃತಿಯೊಂದು ಶ್ರೇಷ್ಠವಾಗಲು ಕಾಣವಾಗುತ್ತದೆ.

ಈ ನಿಲುವುಗಳು ಇರುವುದು ಲೇಖನಪ್ರಜ್ಞೆ ವಿಮರ್ಶಪ್ರಜ್ಞೆಯೊಡನೆ ಕೂಡಿ ಕೆಲಸ ಮಾಡಿದಾಗಲೇ. ಆದರೆ ಇವೆರಡೂ ಬೇರೆ ಬೇರೆಯೆಂದಾಗಲೀ ಒಂದು ಕಾಳಿನ ಎರಡು ಬೇಳೆಗಳಂತಾಗಲೀ ಇರುವುದೆಂದು ನಾವು ಭಾವಿಸಬಹುದು. ಪ್ರಾಯಶಃ ಸೃಜನಶೀಲತೆಯಲ್ಲಿಯೇ ಇವೆರಡೂ ಮಿಳಿತಗೊಂಡಿವೆಯೆನ್ನಬಹುದು : ವಿಶ್ಲೇಷಣೆಯ ಸೌಲಭ್ಯಕ್ಕಾಗಿ ಮಾತ್ರ ಇವುಗಳನ್ನು ಬೇರೆ ಬೇರೆಯೆಂದು ಪರಿಶೀಲಿಸಬೇಕು ಅಷ್ಟೆ.

ಇಷ್ಟರವರೆಗೂ ನಾನು ಚರ್ಚಿಸಿದ ವಿಮರ್ಶಪ್ರಜ್ಞೆಯು ಕೃತಿಯ ಆಂತರ್ಯದ ವಿಷಯಕ್ಕೆ ಸಂಬಂಧಪಟ್ಟುದು. ಆದರೆ ಈ ಪ್ರಜ್ಞೆಯು ಇನ್ನೊಂದು ರೀತಿಯಲ್ಲೇನಾದರೂ ಕಾರ್ಯನಿರ್ವಹಿಸಬಲ್ಲುದೇ ಎಂದೂ ಆಲೋಚಿಸಬೇಕಾಗುತ್ತವೆ. ಅದೆಂದರೆ, ತನ್ನ ಕೃತಿಯ ಬಗೆಗೇ ಲೇಖಕನ ಲೇಖನ ಪ್ರಜ್ಞೆ ವಿಮರ್ಶಕ ನೋಟದಿಂದ ಪರಿಶೀಲನೆ ನಡೆಸಬಹುದೇ ಎಂಬುದು. ಅಂದರೆ, ಲೇಖಕನೊಬ್ಬ ಕೃತಿಯೊಂದನ್ನು ರಚಿಸುತ್ತಿರುವಾಗ ಅವನ ವಿಮರ್ಶಪ್ರಜ್ಞೆ ಎಚ್ಚರಾಗಿದ್ದು ತನ್ನ ರಚನೆ ಎಷ್ಟರಮಟ್ಟಿಗೆ ಸಮಂಜಸವಾಗಿದೆ ಅಥವಾ ಆಗಿಲ್ಲ ಎಂದು ಚಿಂತಿಸುತ್ತಿರಲು ಸಾಧ್ಯವೇ ? ಎಂಬುದು ಪ್ರಶ್ನೆ. ಇದು ತುಂಬ ಗೋಜಿನ ಪ್ರಶ್ನೆಯೆಂದು ತೋರುತ್ತದೆ. ಒಮ್ಮೆಗೇ ಲೇಖಕನ

ಸೃಜನಶಕ್ತಿಯು ಸೃಷ್ಟಿಮಾಡುವುದೂ ಅದನ್ನು ಪರಿಶೀಲಿಸುವುದೂ ನಡೆಸಲು ಸಾಧ್ಯವಾಗಲಾರದು. ಏಕೆಂದರೆ ರಚನೆಯು ಚಿತ್ತೈಕಾಗ್ರತೆಯಿಂದ ನಡೆಯಬೇಕಾದ ಕೆಲಸ. ಹಾಗಾಗಿ ಲೇಖಕನ ಪ್ರಜ್ಞೆ ಸೃಷ್ಟಿಯಲ್ಲಿ ತೊಡಗಿರುವಾಗ ಸ್ವವಿಮರ್ಶೆಯಲ್ಲಿಯೂ ಅದು ತೊಡಗುವುದು ಅಸಾಧ್ಯ. ಅಂತಹ ಸಂದರ್ಭದಲ್ಲಿ ಏಕಾಗ್ರತೆಯುಂಟಾಗದು, ಹಾಗಾಗಿ ಕೃತಿಯ ಬಂಧದಲ್ಲಿ ಬಿರುಕುಗಳಾಗಬಹುದು.

ಲೇಖಕ ಕೃತಿಯೊಂದನ್ನು ರಚಿಸಿ ಪೂರ್ತಿಗೊಳಿಸಿದ ಮೇಲೆ ಅದನ್ನು ತಿದ್ದುವುದಂತೂ ನಡೆದೇ ನಡೆಯುತ್ತದೆ. ಆದರೆ ಹಾಗೆ ತಿದ್ದುವಾಗ ಜಾಗ್ರತವಾಗಿರುವುದು ಲೇಖಕನ ವಿಮರ್ಶನಪ್ರಜ್ಞೆಯೇ ಹೊರತು ಅವನ ಸೃಜನಶಕ್ತಿಯಲ್ಲ. ಅವನು ತನ್ನ ಕೃತಿಯನ್ನೇ ಆಗ ನೋಡುವುದು ವಿಮರ್ಶಕನಂತೆ. ಆದರೆ ಲೇಖಕನೂ ತಾನೇ ಆಗಿರುವುದರಿಂದ, ಕೃತಿಯನ್ನು ಪರಿಶೀಲಿಸುವಾಗ, ಯಾವುದಾದರೂ ಸಂದರ್ಭದಲ್ಲಿ ಅಸಮರ್ಪಕತೆಯಿದೆ ಎನಿಸಿದರೆ, ಅದರ ರಚನೆಯ ಕಾಲವನ್ನು ನೆನಪಿಸಿಕೊಂಡು, ಆಗಿನ ತನ್ನ ಆಶಯಕ್ಕೂ ಈಗ ಮೂಡಿಬಂದಿರುವ ಬರೆಹಕ್ಕೂ ಯಾವ ವ್ಯತ್ಯಾಸವಿದೆಯೆಂದು ಯೋಚಿಸಿ ತಿದ್ದುವಿಕೆಯನ್ನು ಮಾಡಬಹುದು. ಆದರೆ ಎಂತಹ ಲೇಖಕನಿಗೇ ಆಗಲಿ, ತನ್ನ ಕೃತಿಯ ಬಗ್ಗೆ ಸಂಪೂರ್ಣ ಅಂತರವನ್ನು ಕಲ್ಪಿಸಿಕೊಂಡು ವಸ್ತುನಿಷ್ಠವಾಗಿ ಕಾಣುವುದು ಸಾಧ್ಯವಾಗಲಾರದು. ತನ್ನ ತೃಪ್ತಿಯನ್ನು ಅವಲಂಬಿಸಿ ಅವನು ತಿದ್ದುಪಾಟು ಮಾಡಬಹುದೇ ಹೊರತು, ಆ ತಿದ್ದುಪಾಟು ಮೊದಲಿಗಿಂತ ಉತ್ತಮವಾದುದೇ ಆಗಿರುತ್ತದೆ ಎಂದೇನೂ ಹೇಳಲು ಸಾಧ್ಯವಾಗುವುದಿಲ್ಲ.

# ಕಲಾನುಭವದಲ್ಲಿ 'ಸಾಹಸ'

ಪ್ರೊ. ಎಸ್. ಕೆ. ರಾಮಚಂದ್ರರಾವ್

ಉತ್ತರದೇಶದ ಶೈವಾಗಮಗಳ ಗುಂಪಿನಲ್ಲಿ 'ವಿಜ್ಞಾನಭೈರವ' ವೆನ್ನುವುದು ತುಂಬ ಹೆಸರಾದುದು. ಅಭಿನವಗುಪ್ತಾಚಾರ್ಯರು ಇದನ್ನು ಆಗಮವೆಂದೂ ಉಪ ನಿಷತ್ತೆಂದೂ ಕರೆದಿದ್ದಾರೆ. ರುದ್ರಯಾಮಳದ ಸಾರ ಇದೆಂದು ಪ್ರತೀತಿಯೂ ಇದೆ. ನಾಥಸಿದ್ಧ ಸಂಪ್ರದಾಯದ ಯೋಗಮಾರ್ಗವನ್ನೂ ಕಾಶ್ಮೀರಶೈವ ಸಿದ್ಧಾಂತವನ್ನೂ ಒಂದುಗೂಡಿಸಿ ಸಾಧಕರಿಗೆ ದಾರಿ ತೋರಿಸುವ ಈ ಗ್ರಂಥ ಮುಖ್ಯವೆನಿಸಿರುವುದು ಸಹಜವೇ. ಕ್ರಿಸ್ತಾಬ್ದ ಏಳನೆಯ ಶತಮಾನದ ಸುಮಾರಿಗೆ ಸಿದ್ಧವಾದ ಈ ಗ್ರಂಥದಲ್ಲಿ ಪ್ರಾಸಂಗಿಕವಾಗಿ ಕಲಾನುಭವದ ಪ್ರಸ್ತಾಪ ಬಂದಿದೆ. ಪ್ರಸ್ತಾಪವೇನೋ ಪ್ರಾಸಂ ಗಿಕವಾದರೂ ಅದರ ತಾತ್ಪರ್ಯ ಮೂಲಭೂತವಾದುದೇ. ಲೌಕಿಕ ಜೀವನದಲ್ಲಿ ಒದಗುವ ವಿಷಯಾನಂದಕ್ಕೂ ಪಾರಮಾರ್ಥಿಕವಾಗಿ ಒದಗುವ ಬ್ರಹ್ಮಾನಂದಕ್ಕೂ ಸಾಮಾನಾಧಿಕರಣ್ಯವಿದೆಯೆನ್ನುವುದು ನಾಥಸಿದ್ಧ, ಮಹಾಯಾನ-ಬೌದ್ಧ, ಶಾಕ್ತ, ತಾಂತ್ರಿಕ, ಶೈವ ಪರಂಪರೆಗಳಲ್ಲಿ ಬಳಕೆಯಲ್ಲಿರುವ ಕಲ್ಪನೆ. ಸಂಸಾರ ಮತ್ತು ಮೋಕ್ಷ ಇವೆರಡೂ ವಾಸ್ತವವಾಗಿ ಒಂದೇ ತತ್ತ್ವ; ನೆಲೆಗಳು ಬೇರೆ ಬೇರೆ. ನೆಲೆಗಳ ಅಂತರ ವನ್ನು ಇಂಗಿಸಿದರೆ ಅದು ಯೋಗವಾಯಿತು. ಈ ಚೌಕಟ್ಟಿನಲ್ಲಿ ಕಲಾನುಭವದಿಂದ ಬ್ರಹ್ಮಾನುಭವಕ್ಕೆ ಮುಟ್ಟುವ ಮಾರ್ಗವನ್ನು ಸೂಚಿಸುವುದು ಮೇಲೆ ಹೇಳಿದ ಪ್ರಸ್ತಾ ಪದ ಉದ್ದೇಶ.

'ವಿಜ್ಞಾನಭೈರವ'ವು ಯೋಗದ ದಾರಿಯನ್ನು ಧಾರಣೆಯೆಂದು ಕರೆದು ಅಂಥ ನೂರು ಹನ್ನೆರಡು ಬಗೆಗಳನ್ನು ಒಕ್ಕಣಿಸಿದೆ. ಇವುಗಳಲ್ಲಿ ಐವತ್ತೊಂದನೆಯದು ಶಾಂಭವವೆಂಬ ಸ್ಥಿತಿಯನ್ನು ಮುಟ್ಟಿಸಬಲ್ಲ ಶಾಕ್ತೋಪಾಯ. ಪ್ರಸ್ತಾಪದ ನುಡಿ ಕಟ್ಟು ಇದು–

'ಗೀತಾದಿವಿಷಯಾಸ್ವಾದಾಸಮಸೌಖ್ಯೈಕತಾತ್ಮನಃ ।
ಯೋಗಿನಸ್ತನ್ಮಯತ್ವೇನ ಮನೋರೂಢೇಸ್ತದಾತ್ಮತಾ ॥'

(ಶ್ಲೋಕ–೭೩)

ಯೋಗಿಯಾದವನು ಇಂಪಾದ ಹಾಡನ್ನು ಕೇಳಿ (ಅಥವಾ ಹಿತವಾದ ರೂಪವನ್ನು ನೋಡಿ, ಇತ್ಯಾದಿ) ಅದರಿಂದ ಅವನಿಗೆ ಎಣೆಯಿಲ್ಲದ ಸುಖ ಒದಗಿ, ಆ ಹಾಡಿನಲ್ಲೇ ಅವನು ಒಂದುಗೂಡಿಹೋದರೆ ಆಗ ಅವನ ಮನಸ್ಸು ಕಟ್ಟುಗಳನ್ನು ಕಳಚಿ ಎಲ್ಲೆಡೆಯೂ ಹರಡಿಕೊಂಡು, ಸುಖದಲ್ಲಿಯೇ ಬೆರೆತು ಹೋಗುತ್ತದೆ. ಇದು ಶ್ಲೋಕದ ಸ್ಥೂಲವಾದ ಅರ್ಥ. ವ್ಯಾಖ್ಯಾನಕಾರನಾದ ಕ್ಷೇಮರಾಜನು ಇಂದ್ರಿಯಗಳ ಮೂಲಕ ಒದಗುವ ಸುಖವನ್ನು ಚಮತ್ಕಾರವೆಂದು ನಿರ್ದೇಶಿಸಿ, ಅದರಲ್ಲಿ ಬೆರೆಯುವುದನ್ನು (ತದಾತ್ಮತಾ) 'ಪರಬ್ರಹ್ಮಮಯತ್ವಾಪತ್ತಿ' ಯೆಂದು ಕರೆದಿದ್ದಾನೆ. ಇಲ್ಲಿ ಪ್ರಸಕ್ತವಾಗಿರುವ ಅನುಭವ ಅವನ ಪ್ರಕಾರ 'ಶಾಕ್ತಸ್ಪರ್ಶಾವೇಶ'.

ಇದರ ಹಿನ್ನೆಲೆಯ ಕಲ್ಪನೆಯಲ್ಲಿ ಮನಸ್ಸಿಗೆ ಎರಡು ಮುಖಗಳು, ಪ್ರಕಾಶ ಮತ್ತು ವಿಮರ್ಶೆ ಎಂದು. ಪ್ರಕಾಶವೆಂದರೆ ಮನಸ್ಸು ಎದುರಿಗಿರುವ (ಎಂದರೆ ಇಂದ್ರಿಯಗೋಚರವಾದ) ವಸ್ತುವಿನ ಮೇಲೆರಗುವುದು ; ಇದರಲ್ಲಿ ವಸ್ತುವಿನ ವಿಶೇಷ ಗುಣಗಳು ಎದ್ದು ಕಾಣಸಿಗವು. ವಸ್ತುವನ್ನು ಕುರಿತು ಶಬ್ದೋಲ್ಲೇಖವೂ ಇರದು. ವಸ್ತುವಿದೆಯೆಂಬ ಅರಿವಷ್ಟೇ ಇಲ್ಲಿನ ವ್ಯಾಪಾರ. ಇದು ಮೊದಲ ನೆಲೆಯಾದರೆ, ಆ ವಸ್ತುವಿನ ಸಂಪರ್ಕದಿಂದ ಮನಸ್ಸು ತಳಮಳಗೊಂಡು ಅದನ್ನು ವಿಚಾರಮಾಡಿ ಅದರ ಸ್ವರೂಪ-ಗುಣ-ಮೌಲ್ಯಗಳನ್ನು ನಿಶ್ಚಯಿಸಿಕೊಂಡು ಆ ವಸ್ತುವನ್ನು ತನ್ನ ಅನುಭವದ ಚೌಕಟ್ಟಿನಲ್ಲಿ ತೂರಿಸಿಕೊಳ್ಳುತ್ತದೆ. ಇದು ವಿಮರ್ಶೆ. ಈ ನೆಲೆಯಲ್ಲಿ ನೇರವಾದ ಇಂದ್ರಿಯ ವ್ಯಾಪಾರವಿದ್ದು ವಸ್ತುವಿನ ಅರಿವು ಅದರ ಇರವನ್ನೇ ಅವಲಂಬಿಸಿದರೆ ಅದು ಅನುಭವ ; ಇಂದ್ರಿಯ ವ್ಯಾಪಾರವಿರದೆ, ವಸ್ತುವಿನ ಇರವು ಮನಸ್ಸಿನೊಳಗೇ ಇದ್ದು ಅದರ ಹಿಂದಿನ ನೆನಪಷ್ಟೇ ಮರುಕಳಿಸಿ ನಿಂತರೆ ಅದು ಸ್ಮೃತಿ. ವಸ್ತುವನ್ನಾಗಲೀ ಅದರ ನೆನಪನ್ನಾಗಲೀ ಮೀರಿ ಮನಸ್ಸು ತನ್ನ ವ್ಯಾಪಾರದಲ್ಲೇ ನಿಲ್ಲುವುದಾದರೆ ಅದು ಅನುಸಂಧಾನ. ಇವು ಮೂರೂ ವಿಮರ್ಶೆಗಳೇ.

ನಾವು ಎಚ್ಚರವಾಗಿರುವಾಗ ಬಹುಮಟ್ಟಿಗೆ ಇರುವುದು ವಿಮರ್ಶೆಯ ಸ್ಥಿತಿಯೇ. ಈ ವಿಮರ್ಶೆಯ ಸಂಪರ್ಕ ಕಡಿದರೆ 'ಮೂಢದಶೆ', ನಿದ್ರೆಯದು. ಇದು ಪ್ರಕಾಶದ ಸ್ಥಿತಿಯೆಂದು ಹೇಳಬಹುದಾದರೂ ಯೋಗದ ಪ್ರಕಾಶಕ್ಕೂ, ನಿದ್ರೆಯ ಪ್ರಕಾಶಕ್ಕೂ ಭೇದವಿದೆ. ನಿದ್ರೆಯಲ್ಲಿ ಮನಸಿನ ವೃತ್ತಿಗಳೆಲ್ಲ ಮರೆಯಾಗಿ, ಮನಸ್ಸು ಮರೆಯಾಗದೆ ಆಗ ಬಯಲೆಂಬಂತೆ ತೋರಿಕೊಳ್ಳುತ್ತದೆ ; ದಿಟವಾಗಿ ಇದು ಅಭಾವದ ಅವ್ಯಕ್ತದ ನೆಲೆಯೇ. ಯೋಗದಲ್ಲಿ ಮನಸ್ಸಿನ ವೃತ್ತಿಗಳು ಮರೆಯಾಗಿ ಮನಸ್ಸು ಸಮಾಧಿಯ ನೆಲೆಯನ್ನು ಮುಟ್ಟುತ್ತದೆ ; ಆಗ ಮನಸ್ಸೇ ಮರೆಯಾಗುವುದು ಇಲ್ಲಿನ ಸ್ವಾರಸ್ಯ. ಆಗಲೇ ಅರಿವಿನ ಬರಿಯ ಇರುವು ಗರಿಗೆದರಿ ಹರಡಿಕೊಳ್ಳುವುದು, ಎಂದರೆ ಪ್ರಕಾಶ. ಎಚ್ಚರದಲ್ಲೇ ವಿಮರ್ಶೆಯ ಹಿಡಿತ ಸಡಿಲವಾಗಿ ಪ್ರಕಾಶವಿರುವುದು ಸೌಖ್ಯವೆನಿಸಿಕೊಳ್ಳುತ್ತದೆ. ವಿಮರ್ಶೆಯೊಳಗೇ ಪ್ರಕಾಶ ಅಡಗಿದರೆ ಅದು 'ಗಂಜು', ಪ್ರಕಾಶ

ದೊಳಗೆ ವಿಮರ್ಶೆ ಕೂಡಿಕೊಂಡರೆ ಅದು 'ಹೆಣ್ಣು', ಎರಡೂ ಬೆರೆತರೆ ಅದು 'ಕಾಮ' ಬೆರೆಯುವಾಗ ಎರಡರ ನಡುವೆ ಇರುವುದು 'ಆನಂದ', ಇದನ್ನೇ 'ಹಾರ್ದಕಲೆ' ಯೆಂದು ನಿರ್ದೇಶಿಸುತ್ತಾರೆ. ಇದರ ಅಲೆಗಳೇ ಕಲೆಯ ಪ್ರಕಾರಗಳು. ಸೃಷ್ಟಿಯೂ ಇದೇ, ಕಲಾಕೃತಿಯೂ ಇದೇ.

ಇಂಪಾದ ಹಾಡನ್ನು ಕೇಳಿ, ಅಥವಾ ಮೋಹಕವಾದ ರೂಪವನ್ನು ನೋಡಿ ಮನಸ್ಸು ವಿಚಾರ ಮಾಡದೆ ಅದರಲ್ಲಿ ಒಂದುಗೂಡಿದರೆ ವಿಮರ್ಶೆಯ ನೆಲೆಯನ್ನು ದಾಟಿದಂತೆ. ಸಾಮಾನ್ಯವಾಗಿ ಮಾತನ್ನು ಕೇಳಿದರೆ, ರೂಪವನ್ನು ನೋಡಿದರೆ ಮನಸ್ಸಿನಲ್ಲಿ ಆಲೋಚನೆ ಅಲೆ ಅಲೆಯಾಗಿ ಏಳುತ್ತದೆ; ಹೊರಗೆ ನುಗ್ಗಿ ಹರಡಿ, ಹರಿದು, ಒದ್ದಾಡುತ್ತದೆ. ಕಲೆಯ ಚೌಕಟ್ಟಿನಲ್ಲಿ ಮಾತಾಗಲೀ (ಸಂಗೀತ) ರೂಪ ವಾಗಲೀ (ಚಿತ್ರ, ಶಿಲ್ಪ) ಮನಸ್ಸನ್ನು ಹೀಗೆ ತಳಮಳಗೊಳಿಸುವುದಿಲ್ಲ. ವಿಚಾರವನ್ನು ಮರೆಮಾಡಿ, ವಿಮರ್ಶೆಯ ಒತ್ತಡವನ್ನು ಇಳಿಸಿಕೊಳ್ಳುತ್ತದೆ. ಆಗ 'ವಿಷಯಾ ಸ್ವಾದದ ಅಸಮಸೌಖ್ಯ', ಅದರಿಂದ 'ಏಕತಾತ್ಮತಾ'. ಎಂದರೆ, ಕಲಾಸಾಮಾಗ್ರಿ ಯಲ್ಲಿ ರಸಿಕನು ಬೆರೆತು ಹೋಗುತ್ತಾನೆ. "ನಾನು' 'ಇದು' ಎಂಬ ಭೇದವಾಗಲೀ, 'ಇದರಲ್ಲಿನ ವಿವರ', 'ಇದರ ಪ್ರಯೋಜನ' ಎಂದು ಮೊದಲಾದ ವ್ಯಾಪಾರವಾಗಲೀ ಇರುವುದಿಲ್ಲ. ಮನಸ್ಸು ಇಂಥ ಕಟ್ಟುಪಾಡುಗಳನ್ನು ಬದಿಗೊತ್ತಿ ವಿಸ್ತಾರಗೊಳ್ಳು ತ್ತದೆ. ಹೀಗೆ ಚಿತ್ತವಿಸ್ತಾರವಾಗುವುದೇ ಸುಖಕ್ಕೆ ಕಾರಣ. ಕಟ್ಟು-ಕಟ್ಟಳೆಗಳಿದ್ದು ಮನಸ್ಸು ಅವುಗಳೊಳಗೆ ಮುದುರಿಕೊಂಡು ಒದ್ದಾಡುವಾಗ 'ಕ್ಷೋಭೆ'. ಹಾಗಲ್ಲದೆ ನಿರಾಳವಾಗಿ ಹರಡಿಕೊಳ್ಳುವುದೆಂದರೆ ಸುಖ.

ಕ್ಷೇಮರಾಜನು ಇದನ್ನೇ 'ಚಮತ್ಕಾರ'ವೆಂದು ಕರೆದಿರುವುದು. ಇನ್ನೊಬ್ಬ ವ್ಯಾಖ್ಯಾನಕಾರನಾದ ಶಿವೋಪಾಧ್ಯಾಯನು ಇದನ್ನು 'ಪರಮಾನಂದೋದಯ'ವೆಂದು ನಿರ್ದೇಶಿಸಿದ್ದಾನೆ. ಮತ್ತು ಆ ಕಾಲದಲ್ಲಿ ಸ್ಮೃತಿ ಮತ್ತು ಅನುಸಂಧಾನ ಎರಡೂ ಇರುವುದಿಲ್ಲವೆಂದು ಸ್ಪಷ್ಟಪಡಿಸಿದ್ದಾರೆ. ಇದರಿಂದಾಗಿ ಬರಿಯ ಅನುಭವವೇ ಇದ್ದು ಕೊಂಡು ವಿಮರ್ಶೆಯು ಸಾಧ್ಯವಿಲ್ಲದಂತೆ ಮಾಡಿಬಿಡುತ್ತದೆ. ಅನುಭವಕ್ಕೆ ಗೋಚರ ವಾಗಿರುವ ಪದಾರ್ಥವು ಆಲೋಚನೆಯ ಹಂದರದಿಂದ ದೂರವಾಗಿ ಅನುಭವಿಸುವವ ನೊಂದಿಗೆ ಸಮರಸವಾಗಿ ಬೆರೆತುಕೊಳ್ಳುವುದು ಸಾಧ್ಯವಾಗುತ್ತದೆ. ಶಿವೋಪಾ ಧ್ಯಾಯನ ಒಕ್ಕಣೆ ಹೀಗಿದೆ– "...ತತ್ಕಾಲೇ ಶುಭಾಶುಭ ಚಿಂತಾದಿ ವಿಸ್ಮರಣಾತ್ ಇತ್ಯಲಂ। ಅನೇನ ಚ ವೇದ್ಯರಾಶೇಃ ವಿಸ್ಮರಣಾತ್ ವೇದಕಸತ್ತಾಮಾತ್ರಸ್ಥಿತೌ ಶಾಂತಮೇಯಮಾನಾದಿವ್ಯಾಪೃತೌ ಮಹಾನಂದೋದಯ ಇತಿ ನಿಶ್ಚಿತಂ॥" ವ್ಯಕ್ತಿಗೂ ವಸ್ತುವಿಗೂ ಅಂತರವು ಮರೆಯಾಗಿ, ವ್ಯಕ್ತಿಯೊಬ್ಬನೇ ವಸ್ತುವನ್ನೂ ಅಡಗಿಸಿಕೊಂಡು ಇರುವಾಗ 'ಮಹಾನಂದೋದಯ' ವೆಂಬ ಸ್ಥಿತಿ ತೋರಿಕೊಳ್ಳುವುದೆಂದು ಇದರ ತಾತ್ಪರ್ಯ. ಈ ಸ್ಥಿತಿಯೇ ಕ್ಷೇಮರಾಜನ ಮಾತಿನಲ್ಲಿ 'ಪರಬ್ರಹ್ಮಮಯತ್ವಾಪತ್ತಿ'.

ಅಂತೂ, ಕಲಾನುಭವದಲ್ಲಿ rapport (ತನ್ಮಯತೆ) ಮತ್ತು rapture(ಸೌಖ್ಯ) ಇವುಗಳ ನಡುವೆ ಇರುವ ನೆಂಟನ್ನು 'ವಿಜ್ಞಾನಭೈರವ'ವು ಸ್ವಾರಸ್ಯವಾಗಿ ಚಿತ್ರಿಸುತ್ತದೆ. ಸೌಖ್ಯಕ್ಕೆ ಪೂರ್ವರೂಪವಾದ ತನ್ಮಯತೆಯನ್ನು ನಾಥಸಿದ್ಧ ಸಂಪ್ರದಾಯದವರು ಸಹಜಾವಸ್ಥೆಯೆಂದು ಬಣ್ಣಿಸುತ್ತಾರೆ. ಇದು ಪಾಮರರಿಗೆ ದುರ್ಲಭವೆಂದೂ ಯೋಗಿಗಳಿಗೆ ಮಾತ್ರ ಸಾಧ್ಯವೆಂದೂ ಅವರ ಎಣಿಕೆ. ಕೇವಲ ಪ್ರಕಾಶವಿರುವ 'ಖಸಮಭಾವ' (ಎಂದರೆ ಬಯಲಿನಂತೆ ನಿರಾಳವಾಗಿರುವುದು) ಸಾಮಾನ್ಯ ಜನರ ಹಿಡಿತಕ್ಕೆ ಸಿಗದಾದರೂ, ನಿತ್ಯಜೀವನದಲ್ಲಿ ರಸಿಕರ ಕಲಾನುಭೂತಿಯು ಇದರ ಹತ್ತಿರ ಬರುತ್ತದೆ. ಆ ಸಂಪ್ರದಾಯದ ಮಾತಿನಲ್ಲೇ ಹೇಳುವುದಾದರೆ, ಪ್ರಾಣವು ಗಗನ ಚಕ್ರಕ್ಕೆ (ಎಂದರೆ ಶೂನ್ಯಕ್ಕೆ) ಕೊಂಚ ಹೊತ್ತು ಹೋಗಿದ್ದು ಕಳೇವರಕ್ಕೆ ಮರಳುತ್ತದೆ. ಸಾಮಾನ್ಯ ಮನುಷ್ಯನಿಗೂ ಪರಮಾರ್ಥಸತ್ಯದ ಪರಮಾನಂದದ ಅರಿವಾಗುವುದು ಹೀಗೆಯೇ. ಭೋಗ-ಯೋಗಗಳು ಒಂದೇ ತತ್ತ್ವದ ಎರಡು ಪ್ರಕಾರಗಳೆಂದೂ, ಯೋಗದ ದಾರಿಗೆ ಅಡರುವವರು ಭೋಗದ ಪ್ರಕಾರಗಳನ್ನೇ ಬಳಸಿಕೊಳ್ಳಬೇಕೆಂದೂ ಪ್ರಸಿದ್ಧವಾಗಿರುವ ತಾಂತ್ರಿಕ ಸಿದ್ಧಾಂತಕ್ಕೆ ಇದೇ ಬುನಾದಿ. ಅರಸಿಕರು ಅನುಭವಿಸುವ ವಿಷಯ ಸುಖ ಬರಿಯ ಆನಂದೋದಯವಾದರೆ, ರಸಿಕರು ಅನುಭವಿಸುವ ಕಲಾನುಭವ 'ಪರಮಾನಂದೋದಯ', ಯೋಗಿಗಳು ಅನುಭವಿಸುವ ಬ್ರಹ್ಮಾನುಭವ 'ಮಹಾನಂದೋದಯ'. ಇವು ಮೂರರಲ್ಲೂ ಸೂತ್ರವಾಗಿದ್ದುಕೊಂಡಿರುವುದು ಶಿವನ ಶಕ್ತಿಯಾದ ಪ್ರಕಾಶದ ಹೊಳಹು. ಇದನ್ನೇ ಕ್ಷೇಮರಾಜನು 'ಶಾಕ್ತಸ್ಪರ್ಶಾವೇಶ' ವೆಂದು ಕರೆದಿರುವುದು.

ಶಂಕರಾಚಾರ್ಯರದ್ದೆಂದು ಪ್ರಸಿದ್ಧವಾಗಿರುವ 'ಭಜಗೋವಿಂದಸ್ತೋತ್ರ'ದಲ್ಲಿ ಬರುವ ಈ ಶ್ಲೋಕವನ್ನು ಈ ಚೌಕಟ್ಟಿನಲ್ಲಲ್ಲದೆ ಅರ್ಥಮಾಡುವಹಾಗಿಲ್ಲ–

'ಯೋಗರತೋ ವಾ ಭೋಗರತೋ ವಾ
ಸಂಗರತೋ ವಾ ಸಂಗವಿಹೀನಃ ।
ಯಸ್ಯ ಬ್ರಹ್ಮಣಿರಮತೇ ಚಿತ್ತಂ
ನಂದತಿ ನಂದತಿ ನಂದತ್ಯೇವ ।'

ದಿಟವಾಗಿ ಈ ಶ್ಲೋಕವಾಗಲೀ, ಈ ಶ್ಲೋಕವನ್ನೊಳಗೊಂಡಿರುವ 'ಸ್ತೋತ್ರ' ವಾಗಲೀ ಶಂಕರಾಚಾರ್ಯರದ್ದಲ್ಲ. ನವನಾಥಸಿದ್ಧರಲ್ಲಿ ಒಬ್ಬನಾದ ಚರ್ಪಟಿನಾಥನ ಶತಕದಲ್ಲಿ ಈ ಸ್ತೋತ್ರದ ಎಲ್ಲ ಶ್ಲೋಕಗಳೂ ಸೇರಿವೆ ('ಭಜಗೋವಿಂದಂ' ಎಂಬುದೊಂದನ್ನು ಬಿಟ್ಟು). ಶಂಕರಾಚಾರ್ಯರ ತಾತ್ತ್ವಿಕ ನಿಲುವು ಈ ಶ್ಲೋಕಗಳಿಗೆ ಅಷ್ಟಾಗಿ ಹೊಂದಿಕೊಳ್ಳುವುದಿಲ್ಲವೆಂಬುದನ್ನೂ ಗಮನಿಸಬಹುದು. ಯಾವುದೋ ಕಾಲದಲ್ಲಿ ಹಲವಾರು ಬೇರೆ ಬೇರೆ ಸ್ತೋತ್ರಗಳನ್ನೂ ಪ್ರಕರಣಗಳನ್ನೂ ಶಂಕರಾಚಾರ್ಯರ ಹೆಸರಿಗೆ ಉದಾರವಾಗಿ ತೆಕ್ಕೆ ಹಾಕಿದಾಗ ಈ ಶ್ಲೋಕಗಳೂ ಸೇರಿಕೊಂಡಿರ

ಬೇಕು. ಅನಂತರ ಈ ಸೇರ್ಪಡೆಯ ಔಚಿತ್ಯವನ್ನು ಶ್ರದ್ಧಾಳುಗಳಾಗಲೀ ವಿದ್ವಾಂಸರಾಗಲೀ ವಿವೇಚನೆ ಮಾಡುವ ಗೋಜಿಗೇ ಹೋಗಿಲ್ಲ! ಅದು ಹಾಗಿರಲಿ, ಮೇಲಿನ ಶ್ಲೋಕದಲ್ಲಿ ಕಾಣಬರುವ ಕಾಣ್ಕೆ ನಾಥಸಿದ್ಧ ಸಂಪ್ರದಾಯದ ಸಹಜಮಾರ್ಗಕ್ಕೆ ಸಹಜವಾದುದು. ಯೋಗದಲ್ಲಾಗಲೀ ಭೋಗದಲ್ಲಾಗಲೀ ಆನಂದದ ಅಂಶವಿರುವುದನ್ನು ಇಲ್ಲಿ ಹೇಳಿದೆ. ಎರಡರಲ್ಲೂ ಸಮನಾಗಿರುವುದು 'ಶಾಕ್ತಸ್ಪರ್ಶಾವೇಶ'. ಇದಿಲ್ಲದೆ 'ನಂದತಿ' ಎಂದು ಹೇಳುವುದಾಗದು. ಸಂಸಾರ ಮತ್ತು ಮೋಕ್ಷ ಎರಡರ ನೆಲೆಯೂ ಆನಂದದವೇ. 'ಆಕಾಶದಲ್ಲಿ ಆನಂದವಿರದಿದ್ದರೆ ನಾವು ಉಸಿರಾಡುವುದಾದರೂ ಹೇಗೆ ? ಬದುಕುವುದಾದರೂ ಹೇಗೆ ?' ಎಂದು ಉಪನಿಷತ್ತು ಕೇಳಿದುದನ್ನು ನೆನಪಿಗೆ ತಂದುಕೊಳ್ಳಬೇಕು.

ಈ ಸಂದರ್ಭದಲ್ಲಿ ಇದೇ ನಾಥಸಿದ್ಧ-ಶೈವ-ತಾಂತ್ರಿಕ ಚೌಕಟ್ಟಿನಲ್ಲಿಯೇ 'ಸಾಹಸ'ವೆಂಬ ಪ್ರಕ್ರಿಯೆಯನ್ನು ಬಳಸುತ್ತಾರೆ. 'ಸಹಸಾ' ಎಂದರೆ "ಹಠಾತ್ತಾಗಿ", "ಇದ್ದಕ್ಕಿದ್ದಂತೆ" ಎನ್ನುವ ಮೂಲದಿಂದ ಬಂದ ಪದ ಇದು. ಇದರಲ್ಲಿ ಬಲಾತ್ಕಾರದ ಅರ್ಥವೂ ಸೇರುತ್ತದೆ ('ಸಹಸಾ ಬಲೇನ ನಿರ್ವೃತಂ'); ಮುಂದಿನ ಆಲೋಚನೆಯಿಲ್ಲದೆ ವಿವೇಚನೆ ಇಲ್ಲದೆ ಮಾಡುವ ಕೆಲಸವೆಂಬ ಅರ್ಥವೂ ಇದೆ ('ಅವಿಮೃಶ್ಯ ಕೃತಿಃ'). ಪಾರಿಭಾಷಿಕ ಪದವಾಗಿ, ಇದ್ದಕ್ಕಿದ್ದಂತೆ ಜಗತ್ತಿನ (ಅಥವಾ ಮನಸ್ಸಿನ) ಕಟ್ಟುಗಳನ್ನೆಲ್ಲ ದಾಟಿ ಪರಮಾನಂದವನ್ನು ಅನುಭವಿಸುವುದು ಸಾಹಸವೆನಿಸಿಕೊಳ್ಳುತ್ತದೆ. ಆತ್ಮವು ಹಠಾತ್ತಾಗಿ ತನ್ನ ಸಹಜ ಸ್ವರೂಪಕ್ಕೆ ಹಿಂದಿರುಗುವ ಸ್ಥಿತಿಯನ್ನು ಸೂಚಿಸುವ ಈ ಪದದಲ್ಲಿ ಬಲಾತ್ಕಾರವೆಂಬುದು ಸಾಮಾನ್ಯವಾದ ನಿಯಮಗಳನ್ನು ಮೀರಿ, ಸಾಧಾರಣ ಪ್ರವಾಹದಲ್ಲಿ ತೇಲಿ ಹೋಗದೆ, ಎದುರುಬಿದ್ದು ನಿಲ್ಲುವುದನ್ನು ಹೇಳುತ್ತದೆ. 'ಕ್ರಮಪರಿಪಾಟ್ಯುಲ್ಲಂಘನೇನ ಅಕ್ರಮಪ್ರವೃತ್ತಿಃ' ಎಂದು ಸಾಹಸವೆಂಬ ಮಾತಿಗೆ ನಿರ್ವಚನವಿದೆ. ಯೋಗಮಾರ್ಗವೆನ್ನುವುದು ಹೀಗೆ ಉನ್ಮಾರ್ಗವೇ. ಯೋಗದಲ್ಲಿ ಭೋಗವನ್ನು, ಭೋಗದಲ್ಲಿ ಯೋಗವನ್ನು ಕಂಡುಕೊಳ್ಳುವುದು ನಿತ್ಯದ, ಯುಕ್ತಿಯುಕ್ತವಾದ ಮನಸ್ಸಿಗೆ ಸಲ್ಲುವುದಲ್ಲ ; ದಿನ ದಿನದ ವಾಡಿಕೆಯ ನೆಲೆಯನ್ನು ಮೀರಿ ಹೋದಾಗ ಮಾತ್ರ ಇದು ಸಾಧ್ಯವಾಗುತ್ತದೆ. ಸಾಮಾಜಿಕ ಸಂದರ್ಭದಲ್ಲಿ ಉಪಯುಕ್ತವಾದ ನೀತಿಯ ನೆಲೆ ಇಲ್ಲಿ ಕೆಲಸಕ್ಕೆ ಬರುವುದಿಲ್ಲ. ಕಟ್ಟುಗಳೆಲ್ಲ ಇದ್ದಕ್ಕಿದ್ದಂತೆ ಕಳಚಿಬಿದ್ದು, ವಿಮರ್ಶೆಯ ಜಾಲ ಹರಿದು ಹೋಗಿ ಪ್ರಕಾಶವೊಂದೇ ಅಡರಿಕೊಂಡು ಬಂದಾಗ ಸಾಹಸದ ಅನುಭವ. ಇದನ್ನು adventure ಮತ್ತು ecstasy ಎಂಬ ಎರಡೂ ಮಾತುಗಳಿಂದ ಬಣ್ಣಿಸಬಹುದು.

ದಿನನಿತ್ಯದ ಬದುಕಿನಲ್ಲಿ ಬಳಕೆಯಲ್ಲಿರುವ ಮನೋವೃತ್ತಿಯನ್ನು ಬದಲಿಸಿಕೊಂಡು ಪರಿಚಿತ ಪದಾರ್ಥಗಳನ್ನೂ ಸಾಮಾನ್ಯ ಪ್ರಸಂಗಗಳನ್ನೂ ಹೊಸನೋಟದಿಂದ ನೋಡುವುದು ಸಾಹಸದ ಒಂದು ಪ್ರಕಾರ. ಪದಾರ್ಥಗಳ, ಪ್ರಸಂಗಗಳ ಹೊರ

ಪದರವನ್ನು ಹರಿದು ಅವುಗಳೊಳಗೆ ಇಣುಕಿ ನೋಡಿದಾಗ ನಮ್ಮೊಳಗಿರುವ ಸತ್ತ್ವವೇ ಅಲ್ಲಿಯೂ ಕಾಣತೊಡಗುತ್ತದೆ. ತನ್ನ ಮೈಯೊಳಗೆ ಬಂದಿಯಾಗಿರುವ ಸತ್ತ್ವವನ್ನು ಬಿಡುಗಡೆ ಮಾಡುವುದೂ ಹೀಗೆಯೇ. ಇದೇ ಕಲಾನುಭವದ ಸ್ವಾರಸ್ಯವಲ್ಲವೆ ? ಕವಿಕರ್ಮದಲ್ಲಿ ಅಡಗಿರುವ ಕಾಣ್ಕೆ ಇದೇ, ಕಲಾವಿದನ ಪ್ರವೃತ್ತಿಗೆ ಸ್ಫೂರ್ತಿಯನ್ನೊದಗಿಸುವುದು ಇದೇ, ಲೋಕವನ್ನೂ ಜನರನ್ನೂ ಹೊಸದೊಂದು ನೆಲೆಯಲ್ಲಿ ನೋಡಿದಾಗ ಹರ್ಷ ಹೊರಹೊಮ್ಮುವುದು ಸಹಜ.

'ಇಂದ್ರಜಾಲಮಯಂ ವಿಶ್ವಂ ವ್ಯಸ್ತಂ ವಾ ಚಿತ್ರಕರ್ಮವತ್
ಭ್ರಮದ್ವಾ ಧ್ಯಾಯತಃ ಸರ್ವಂ ಪಶ್ಯತಶ್ಚ ಸುಖೋದ್ಗಮಃ' ॥

ಹೊರಗಿನ ಗಟ್ಟಿ ಪ್ರಪಂಚವನ್ನು ಟೊಳ್ಳಾಗಿಯೋ, ತಳಕೆಳಗಾಗಿಯೋ, ಗೆರೆಗಳಿಂದ ಕೊರೆದಂತೆಯೋ ಗಿರಿ ಗಿರಿ ತಿರುಗುವಂತೆಯೋ ಕಂಡರೆ ಅದರಿಂದ ಸುಖವೊದಗುವುದನ್ನು ಈ ಶ್ಲೋಕ ಹೇಳುತ್ತದೆ. ಕಲಾನುಭವದಲ್ಲಿ ಈ ಬಗೆಯ ನೋಟ ಇರುವುದು ಸಹಜವೇ. ಕವಿಯ ಮಾತಿನಲ್ಲಾಗಲೀ ಚಿತ್ರಕಾರನ ಕೃತಿಯಲ್ಲಾಗಲೀ ವಿಪರೀತ ವೃತ್ತಿಯಿರಬೇಕು ; ವಕ್ರತೆಯಿದ್ದರೇ ಮಾತಿಗೆ ಚೆಲುವಲ್ಲವೇ ? ಡೊಂಕಾಗಿರುವ ಗೆರೆ ಸುಂದರವಾಗಿರುವಂತೆ ನೇರವಾದ ಗೆರೆ ಇರದಲ್ಲವೆ ? 'ವಕ್ರೋಕ್ತಿ' ('ವೈದಗ್ಧ್ಯ ಭಂಗಿಭಣಿತಿ')ಯನ್ನು 'ವಿಜ್ಞಾನಭೈರವ'ವು 'ಸಾಹಸ'ದ ನೆಲೆಗೇರಿಸಿರುವುದನ್ನು ಕ್ಷೇಮರಾಜನು ಗಮನಿಸಿದ್ದಾನೆ. ಸುಖದ ಉದ್ಗಮಕ್ಕೆ ಅಗತ್ಯವಾದ ಸಾಮಗ್ರಿ ಚಮತ್ಕೃತಿಯೆಂದು ಅವನು ಕಾಣಿಸಿದ್ದಾನೆ.

'ಸಾಹಸ'ವು ತಲೆದೋರಿದಾಗ ಮನಸ್ಸಿನ ಆಯಕಟ್ಟು ಬಯಲಾಗುತ್ತದೆ. ನಾಲ್ಕೂ ಕಡೆಗಳಿಂದ ಬರುವ ಒತ್ತಡ ಮರೆಯಾಗುತ್ತದೆ. ಮನಸ್ಸಿನ ಶಕ್ತಿಗೆ ಆಸರೆ ಇರದೆ ತನ್ನಲ್ಲಿ ತಾನು ನಿಲ್ಲುವಂತಾಗುತ್ತದೆ. ಇದನ್ನೇ 'ವಿಜ್ಞಾನ ಭೈರವ'ವು

'ವ್ಯೋಮಾಕಾರಂ ಸ್ವಮಾತ್ಮಾನಂ ಧ್ಯಾಯೇದ್ದಿಗ್ಭಿರನಾವೃತಂ ।
ನಿರಾಶ್ರಯಾ ಚಿತಿಃಶಕ್ತಿಂ ಸ್ವರೂಪಂ ದರ್ಶಯೇತ್ತದಾ' ॥

ಎಂದು ನಿರೂಪಿಸಿದೆ. ಎಂದರೆ ಸೌಂದರ್ಯಾನುಭವದಲ್ಲಿ ಹೊರಗಣ ವಿವರವೊಂದರ ಅನುಭವ ಇರದೆ, ತನ್ನ ಸಾಮರ್ಥ್ಯದ ಅರಿವೇ ಆಗುವುದು ಮುಖ್ಯ. ಯಾವ ಕಲಾಕೃತಿಯಲ್ಲಾಗಲೀ ಕಲಾವಿದನಿಗೆ ಒದಗುವುದು ಆತ್ಮದರ್ಶನವೇ. ಹಾಗಾಗದಿದ್ದರೆ ಕಲಾಕೃತಿಯಲ್ಲಿ ಸಾರ್ಥಕ್ಯವಿರದು. ಕಲಾಸೃಷ್ಟಿಯ ಸಾಮಗ್ರಿಗಳನ್ನೂ ಶೈಲಿಯನ್ನೂ ಮೀರಿಯೇ ಕಲೆಯ ತಾತ್ಪರ್ಯ ನಿಲ್ಲಬೇಕು ; ಅದು 'ನಿರಾಶ್ರಯ'ವಾಗಿರಬೇಕು. ಭಾವನೆಯ, ಭಾವದ ಅಥವಾ ವಾಸನೆಗಳ ಯಾವ ಕಟ್ಟೂ ಇರದೆ ಬಯಲಂತೆ ನಿರಾಳವಾಗಿರುವುದು 'ವ್ಯೋಮಾಕಾರ'. ಹೀಗಿದ್ದರೇ 'ಸುಖ'—

'ವಿಹಾಯ ನಿಜದೇಹಾಸ್ಥಾಂ ಸರ್ವತ್ರಾಸ್ಮೀತಿ ಭಾವಯನ್ ।
ದೃಢೇನ ಮನಸಾ ದೃಷ್ಟ್ಯಾ ನಾನ್ಯೇಕ್ಷಿಣ್ಯಾ ಸುಖೀಭವೇತ್' ॥
(ಶ್ಲೋಕ ೧೦೪)

ತನ್ನ ಮೈಯೊಳಗೆ ನೋಟವಿದೆಯೆಂಬ ಬುದ್ಧಿಯನ್ನು (ಸ್ವದೇಹೇ 'ಆಸ್ಥಾಂ'-ಪ್ರಮಾತೃತಾಂ) ಬಿಟ್ಟು, ಕ್ಷೋಭವಿರದ ಮನಸ್ಸಿನಿಂದ ಮತ್ತು ತನ್ನ ಅರಿವಿನಿಂದ ('ದೃಷ್ಟ್ಯಾ'—ಸ್ವಸಂವಿದಾ), ವಸ್ತುವಿನ ವಿಚಾರವಾಗಿ ಯಾವ ವಿಮರ್ಶೆಗೂ ಅವಕಾಶಕೊಡದೆ ('ಪ್ರೋಕ್ತ ವಸ್ತುವಿಮರ್ಶೈಕಾಗ್ರತಯಾ) ಇರುವುದು ಸುಖಕ್ಕೆ ಕಾರಣವಾಗುತ್ತದೆ. ವ್ಯಾಖ್ಯಾನಕಾರನಾದ ಕ್ಷೇಮರಾಜನು ಈ ಶ್ಲೋಕದ ತಾತ್ಪರ್ಯವನ್ನು 'ಪರಿಮಿತಾಹಂಭಾವಸ್ತು ಪರಿಹರಣೀಯಃ' ಎಂದು ಹೇಳಿ ಸೂಚಿಸಿದ್ದಾನೆ. 'ನಾನು' ಎನ್ನುವಾಗ 'ಇದು' ಎನ್ನುವುದೂ ಸೇರಿಕೊಂಡರೆ ಅದು ನಾನೆಂಬ ಅರಿವಿಗೆ ಅಡ್ಡಿ ; ಇದೇ 'ಪರಿಮಿತವಾದ ಅಹಂಭಾವ'. ನಾನು–ಇದು, ನಾನು–ನೀನು, ನಾನು–ನನ್ನದು ಎಂದು ಮೊದಲಾದ ಜೋಡಿಗಳು ನಾನೆಂಬ ಅರಿವಿನ ಹರವನ್ನು ಮೊಟಕು ಮಾಡುತ್ತವೆ ; ಆಗ ನನ್ನ 'ನನ್ನತನ' ಕುಂಟುತ್ತದೆ.

ಸಂಗೀತವನ್ನು ಅಥವಾ ಕಾವ್ಯವನ್ನು ಅನುಭವಿಸಿ ಆನಂದ ಪಡುವಾಗ ಕಡೆಯ ನಾದದ ಅಥವಾ ವರ್ಣದ ಕಡೆಗೇ ಅವಧಾನವನ್ನೆಲ್ಲ ಹರಿಸಿ, ಅಲ್ಲಿಯೇ ಅನುಸಂಧಾನ ಮಾಡಿದಾಗ ವಿಮರ್ಶೆಯ ಹಿಡಿತ ಸಡಿಲವಾಗಿ, ಚಿತ್ತವು ನಿರಾಧಾರವಾಗುವುದೆಂದು 'ವಿಜ್ಞಾನ ಭೈರವ'ದ ಒಕ್ಕಣೆ. ಇಂದ್ರಿಯಗೋಚರವಾದ, ಸಾಕಾರವಾದ ಹೊರಗಣ ಪದಾರ್ಥವನ್ನು ಮನಸ್ಸು ಕೈಬಿಡುವುದು ಒಂದು ಹಂತ; ಇಂದ್ರಿಯಗಳ ಕೆಲಸ ನಿಂತು, ಮನಸ್ಸು ಆಲೋಚನೆಯ ವಿವರಗಳಲ್ಲೇ ಮುಳುಗಿದಾಗ ಒಳಗಣ ಚಿಂತೆ (ಎಂದರೆ ಭಾವನೆ) ಮನಸ್ಸನ್ನು ಕಲಕುತ್ತದೆ. 'ಅಮೂರ್ತಾದಪಿ ಚಿನ್ಮಾತ್ರಾತ್ ಮಾಯಾ ಕೃತ ಕ್ಷೋಭವಶಾತ್' ಎಂದು ಮೊದಲಾಗಿ ಕ್ಷೇಮರಾಜನು ವಿವರಿಸತೊಡಗುವಾಗ (ಶ್ಲೋಕ ೯೬ ರ ಮೇಲೆ ವ್ಯಾಖ್ಯಾನ) ಮನಸ್ಸಿನಲ್ಲೇ ಮೂಡಿಕೊಂಡು ಬರುವ, ಅಷ್ಟಾಗಿ ಅಭಿವ್ಯಕ್ತಿಯನ್ನು ಕಳೆದ ಬಯಕೆಗಳನ್ನು ಪ್ರಸ್ತಾಪಿಸುತ್ತಾನೆ. ಇಂಥ ಬಯಕೆಗಳು 'ನನ್ನತನ' ಕುಂಟುವಾಗ ತೋರಿಕೊಳ್ಳುವ ಅಂತರ್ಮುಖ ಅಲೆಗಳು. ಇದನ್ನು ಸೂಕ್ಷ್ಮವಾದ ವಿಮರ್ಶೆಯಿಂದ ಇಳಿಸಿದಾಗ ಒದಗಿಬರುವ 'ಶಮೆ' ಪ್ರಕಾಶದ ಹರವನ್ನು ಹೆಚ್ಚಿಸುತ್ತದೆ. ಹೀಗೆ ಕಲಾನುಭವದಿಂದ ಬ್ರಹ್ಮಾನಂದಕ್ಕೆ ಸಾಗಿ ಹೋಗುವ ದಾರಿಯನ್ನು 'ಉನ್ಮೇಷಧಾರಣಾಭ್ಯಾಸ'ವೆಂದು ನಿರ್ದೇಶಿಸುತ್ತಾರೆ. ನನ್ನಿಂದ ಹೊರ ಹೊಮ್ಮಿದ ನನ್ನತನ ಅದಕ್ಕೆ ಎದುರಾಗಿ ಅಡ್ಡಿಯಾಗಿ ಬರುವ ವಿಮರ್ಶೆಗಳನ್ನೆಲ್ಲ ಅಡಗಿಸಿ ನನ್ನಲ್ಲೇ ನಿಲ್ಲುವುದು ಈ ಆನಂದದ ವಿವರ—

'ಯತ ಏವ ಸುಮುದ್ಭೂತಾ ತತಸ್ತತ್ರೈವ ಲೀಯತೇ' ।

ಎಲ್ಲಿಂದ ಹೊರಮುಖನಾಗಿ ಅರಿವು ಉಕ್ಕಿ ಹರಿಯುವುದೋ ಅಲ್ಲಿಯೇ ಮರಳಿ ಮರೆ

ಯಾಗುವುದು ಆನಂದಾನುಭವದ ಸ್ವಾರಸ್ಯ. 'ಮರಗಳಿಲ್ಲದ ಬೆಟ್ಟದ ತಪ್ಪಲು' ('ನಿವೃಕ್ಷಗಿರಿಭಿತ್ತಿ') ನಮ್ಮ ಗಮನವನ್ನು ಸೆಳೆಯಲಾರದೆಂದೂ, ಅದನ್ನು ನೋಡು ವಾಗ ಮನಸ್ಸಿನ ಭಾವಗಳನ್ನು ಮರೆಯಾಗುವುವೆಂದೂ 'ವಿಜ್ಞಾನಭೈರವ' ಬಣ್ಣಿಸು ತ್ತದೆ (ಶ್ಲೋಕ ೬೦). ಹಾಗೆ ಭಾವಗಳು ಮರೆಯಾಗುವಾಗ ಬಯಕೆಗಳೂ ಬಯ ಲಲ್ಲಿ ಮಾಯವಾಗುತ್ತವೆ. ಮನಸ್ಸನ್ನು ಕಟ್ಟಿಹಾಕುವ ಪದಾರ್ಥವಿರದಾಗ ಆನಂದಕ್ಕೆ ಅಡ್ಡಿಯಾಗುವ ವಿವರವೂ ಇರುವುದಿಲ್ಲ. ಭಾವಗಳೂ ಬಯಕೆಗಳೂ ಅರಿವಿನ ಹರವನ್ನು ಅಡ್ಡಗಿಸಿ ಸಹಜವಾದ ಆನಂದವನ್ನು ಬಹುಮಟ್ಟಿಗೆ ಇಳಿಸುತ್ತವೆ. ಭಾವಗಳ ಬುಗ್ಗೆ ಯನ್ನೇ ಕುರಿತು ಅವಧಾನವನ್ನು ಮಾಡಿದಾಗ, ಬಯಕೆಗಳ ಮೂಲವನ್ನು ಕುರಿತು ವಿಮರ್ಶೆಮಾಡಿದಾಗ ಭಾವಗಳೂ ಬಯಕೆಗಳೂ ತಮ್ಮ ಕಾವನ್ನೂ ಬಲವನ್ನೂ ಕಳೆದುಕೊಳುತ್ತವೆ. ಇದು 'ಸಾಹಸ'ದ ಸಾಧನೆಯಲ್ಲಿ ಒಂದು ಕ್ರಮವೆಂದು ಪ್ರತೀತಿಯಿದೆ.

ಎಂದರೆ ಕಲಾನುಭವದಲ್ಲಿ ಭಾವದ, ಬಯಕೆಯ ವಿವರಗಳು ಹೆಚ್ಚಿದರೆ ಕಲಾಕೃತಿಯು ಒದಗಿಸಬಹುದಾದ ಸುಖ ಕಡಮೆಯೇ. ಕಲಾಕೃತಿಗೆ ಸ್ಫೂರ್ತಿ ಏನೇ ಇರಲಿ, ಕಲಾವಿದನ ಬಾಳ ಅಳಲು ಎಷ್ಟೇ ಇರಲಿ ಅವನಿಂದ ಹೊರಹೊಮ್ಮುವ ಕೃತಿ 'ನಿರಾಲಂಬ'ವಾಗಿರಬೇಕು. ಹಾಗಿದ್ದರೇ ರಸಿಕ ಅದನ್ನು ಅನುಭವಿಸಿಯಾನು, ಕೃತಿಗೆ ಆನಂದದ ಮೌಲ್ಯ ಒದಗಿಬಂದೀತು. ಕಲಾಕೃತಿಗೆ ಮೂಲಾಕೃತಿಯಾಗಿ ಕೆಲವು ದೃಷ್ಟಾಂತಗಳನ್ನು ಕೊಡಲಾಗಿದೆ—ಕಂಚಿನ ಪಾತ್ರೆಯ ಅಂಚನ್ನು ಕೋಲಿನಿಂದ ಬಡಿದಾಗ ಎಲ್ಲೆಡೆಯೂ ಹರಡಿಕೊಂಡು ಬರುವ 'ಅಭಗ್ನ ಶಬ್ದ'; ವೇಗವಾಗಿ ಹರಿಯುತ್ತಿರುವ ನದಿಯು ಎಡೆಬಿಡದೆ ಮಾಡುವ ಮೊರೆತ ಮೊದಲಾದುವು. ಇಂಥ ಶಬ್ದಗಳನ್ನು ಕಿವಿಯಿಂದ ಕೇಳುವಾಗ ಭಾವಗಳಾಗಲೀ ಬಯಕೆಗಳಾಗಲೀ ಏಳಲಾರವು. 'ಶಬ್ದಬ್ರಹ್ಮಣಿ ನಿಷ್ಣಾತಃ ಶಬ್ದಬ್ರಹ್ಮಾಧಿಗಚ್ಛತಿ'. ಇದು 'ನಿರಾಲಂಬ–ನಾದಾನು ಭವ'. ಮನಸ್ಸನ್ನು ಸೆಳೆದುಕೊಂಡು, ಅದರ ಸಡಗರವನ್ನು ಅಡಗಿಸಿ ತನ್ನಲ್ಲಿಯೇ ಅದನ್ನು ಮುಳುಗಿಸಿಕೊಳ್ಳುವ ಶಕ್ತಿ ಈ ಅನುಭವದಲ್ಲಿದೆ. 'ತಲ್ಲಯ'ದಿಂದ 'ತನ್ಮಯ' ಎಂಬ ವರ್ಣನೆ 'ವಿಜ್ಞಾನಭೈರವ'ದ್ದು. ಈ ಮಾತು ಯಾವ ಉತ್ತಮ ಕಲಾಕೃತಿಗೂ ಸಲ್ಲುತ್ತದೆ.

ಭಾವಗಳೂ ಬಯಕೆಗಳೂ ಮುಳುಗುವುದು ಇದ್ದಕ್ಕಿದ್ದಂತೆ, ಹಠಾತ್ತಾಗಿ ಆದರೆ ಅದು 'ಸಾಹಸ'; ಸುಖಾನುಭವಕ್ಕೆ ಅಗತ್ಯವಾದ ವಿವರ. ಈ ರೀತಿಯಾಗಿ ಭಾವ ಗಳನ್ನೂ ಬಯಕೆಗಳನ್ನೂ ಒಡನೆಯೇ ಬಿಗಿಹಿಡಿದು ಬಡಿದೋಡಿಸುವುದು ಕಲೆಯ ಕೆಲಸ. ಕಾವ್ಯದಲ್ಲಿ ಇದು ನಡೆದರೇನೇ ಅದು ಮಹಾಕಾವ್ಯ; ಚಿತ್ರವು ಇದನ್ನು ಮಾಡುವುದಾದರೇ ಅದು ನಾಲ್ಕು ಕಾಲ ನಿಂತೀತು ; ಸಾವಿರಾರು ವರ್ಷಗಳಾದರೂ ನಮ್ಮ ಗಮನದಿಂದ ಜಾರಿಹೋಗದಿರುವ ಶಿಲ್ಪಗಳಲ್ಲಿ ಈ ಗುಣವಿದೆ ; ಸಂಗೀತಕ್ಕಂತೂ

ಇದು ಸಹಜವಾದ ಸಾಮರ್ಥ್ಯವೇ. ಕಾವ್ಯದಲ್ಲಿ ಪಾಲು ಹೆಚ್ಚಾಗಿರುವುದರಿಂದ, ಸಾಹಿತ್ಯದ ಪ್ರಯೋಜನವೇ ಭಾವಗಳನ್ನೂ ಬಯಕೆಗಳನ್ನೂ ಒದಗಿಸುವುದಾದುದ ರಿಂದ, ಅದರಲ್ಲಿ ಸಂಗೀತದ ಚೌಕಟ್ಟನ್ನು ಅಷ್ಟಿಷ್ಟಾದರೂ ಸೇರಿಸುತ್ತಾರೆ. ನಾದಾನು ಭವವು ಕಾವ್ಯಾನುಭವದಲ್ಲಿ ಬರುವಂತಾದರೆ ಸುಖಕ್ಕೆ ದಾರಿಯಾಗುತ್ತದೆ; ಇಲ್ಲವಾದರೆ ಕಾವ್ಯದಿಂದ ಸಾಮಾಜಿಕ, ರಾಜಕೀಯ, ಧಾರ್ಮಿಕ ಮೊದಲಾದ ಹಲವು ಪ್ರಯೋಜನಗಳು ಪೂರೈಸಬಹುದು; ಸುಖ ಒದಗಲಾರದು. ನಾದಾನುಭವದಲ್ಲಿ 'ಸಾಹಸ' ಸೇರುತ್ತದೆ.

'ಸಾಹಸ'ದ ಸ್ವರೂಪವನ್ನು ತಿಳಿಯಪಡಿಸಲು ದ್ವೈ ಶಾರೀರ ಸಾಧನೆಯೊಂದರ ನಿದರ್ಶನವನ್ನು ಬಳಸಿಕೊಂಡಿದ್ದಾರೆ. ಮಧ್ಯಪ್ರಾಚ್ಯದ 'ದರ್ವಿಶ್' ಎಂಬ ಬೈರಾಗಿ ಗಳಲ್ಲಿ ಬಳಕೆಯಲ್ಲಿದ್ದ ಮಂಡಲಪೂಜೆಯಲ್ಲಿ ಈ ಬಗೆಯ ಶಾರೀರಸಾಧನೆ ಪ್ರಧಾನ ವಾಗಿದ್ದಿತು. ಮನಸ್ಸನ್ನು ಮರೆಮಾಡಲೆಂದು ದೇಹವನ್ನು ಬಳಲಿಸುವ ಉಪಾಯ ವಾಗಿ ನೃತ್ಯಪದ್ಧತಿಯೊಂದನ್ನು ಅವರು ಏರ್ಪಡಿಸಿಕೊಂಡಿದ್ದರು. ಅದರ ವರ್ಣನೆ ಯನ್ನು 'ವಿಜ್ಞಾನಭೈರವ'ದಲ್ಲಿ ಕಾಣಬಹುದು.

'ಭ್ರಾಂತ್ವಾ ಭ್ರಾಂತ್ವಾ ಶರೀರೇಣ ತ್ವರಿತಂ ಭುವಿ ಪಾತನಾತ್ ।
ಕ್ಷೋಭಶಕ್ತಿವಿರಾಮೇಣ ಪರಾ ಸಂಜಾಯತೇ ದಶಾ ॥'

(ಶ್ಲೋಕ ೧೧೧)

ಎಡೆಬಿಡದೆ ಗಿರ್ರನೆ ಮೈಯನ್ನು ಸುತ್ತಿಸಿ ಸುತ್ತಿಸಿ ಎಚ್ಚರ ತಪ್ಪಿ ನೆಲಕ್ಕೆ ಬೀಳುವಾಗ ಮನಸ್ಸುಮರೆಯಾಗುವುದೆಂದು ಇಲ್ಲಿನ ಸಂದರ್ಭ. ಹೀಗೆ ಮಾಡುವಾಗ ಮನಸ್ಸಿನ 'ಕ್ಷೋಭಶಕ್ತಿ' (ಎಂದರೆ ಭಾವಗಳನ್ನೂ ಬಯಕೆಗಳನ್ನೂ ಉಂಟುಮಾಡುವ ಶಕ್ತಿ) ಅಡಗುವುದೇ ಈ ಸಾಧನೆಯ ಸ್ವಾರಸ್ಯ. ಕಲೆ ಮಾಡಬೇಕಾದುದೂ ಇದನ್ನೇ. ಕಾವ್ಯ ದಲ್ಲಿ,ಸಂಗೀತದಲ್ಲಿ ಭಾವಗಳು ಗಿರ್ರನೆ ತಿರುಗಬೇಕು, ನಾದದಲ್ಲಿ ಮೈಮರೆಯಬೇಕು, ಮನಸ್ಸು ಆಯತಪ್ಪಿ ಕೆಳಗೆ ಬೀಳಬೇಕು. ಆಗ ಒದಗುವುದೇ 'ಪರಾ ದಶಾ'.

# ಸಾಹಿತ್ಯಾಭ್ಯಾಸದ ಸಾಧನಚತುಷ್ಟಯ

**ಎಸ್. ಬಾಲಸುಬ್ರಹ್ಮಣ್ಯ**

ಯಾವುದೇ ವಿಷಯವನ್ನಾಗಲಿ ನಾವು ಎರಡು ದೃಷ್ಟಿಗಳಿಂದ ನೋಡಬಹುದು– ಸಾಮಾನ್ಯದೃಷ್ಟಿ ಮತ್ತು ಶಾಸ್ತ್ರದೃಷ್ಟಿ. ವಿಷಯವನ್ನು ಸ್ಥೂಲವಾಗಿ ನಮ್ಮ ಕಣ್ಣಿಗೆ ಕಾಣುವಷ್ಟು, ಕೈಗೆ ಎಟುಕುವಷ್ಟು, ಮನಸ್ಸಿಗೆ ಹೊಳೆಯುವಷ್ಟು ಗ್ರಹಿಸುವುದು ಸಾಮಾನ್ಯದೃಷ್ಟಿ. ಅದನ್ನು ಸೂಕ್ಷ್ಮವಾಗಿ, ವಿಧಿವತ್ತಾಗಿ, ಅದರ ಅಧ್ಯಯನಕ್ಕೆ ಬೇಕಾದ ಸಾಧನ ಸಾಮಗ್ರಿಯನ್ನು ಸಂಪಾದಿಸಿ, ವಿವೇಚನಾಪೂರ್ವಕವಾಗಿ ಪರೀಕ್ಷಿಸಿ ತಿಳಿದುಕೊಳ್ಳುವುದು ಶಾಸ್ತ್ರದೃಷ್ಟಿ. ಇವು ಪರಸ್ಪರ ವಿರೋಧಿಗಳಲ್ಲ; ಪೂರಕವಾಗಿರುತ್ತವೆ. ಆದರೆ ನಾವು ಎಲ್ಲ ವಿಷಯಗಳನ್ನು ಎರಡು ದೃಷ್ಟಿಗಳಿಂದಲೂ ನೋಡಲು ಸಾಧ್ಯವಿಲ್ಲ. ಬಹಳಷ್ಟನ್ನು ಸಾಮಾನ್ಯದೃಷ್ಟಿಯಿಂದ ನೋಡಿ, ಕೆಲವನ್ನು ಮಾತ್ರವೇ ಶಾಸ್ತ್ರದೃಷ್ಟಿಯಿಂದ ನೋಡಲು ಆರಿಸಿಕೊಳ್ಳುತ್ತೇವೆ. ಇದಕ್ಕೆ ಕಾರಣ ನಮಗೆ ಸಾಕಷ್ಟು ಕಾಲಾವಕಾಶ ಇಲ್ಲದಿರುವುದು ಮತ್ತು ಎಲ್ಲ ವಿಷಯಗಳಲ್ಲೂ ನಮ್ಮ ಆಸಕ್ತಿ ಏಕರೂಪವಾಗಿ ಇಲ್ಲದಿರುವುದು. ಆದರೆ ಈ ಎರಡು ದೃಷ್ಟಿಗಳ ನಡುವೆ ಇರುವ ವ್ಯತ್ಯಾಸವನ್ನು ಮರೆಯಬಾರದು. ಸಾಮಾನ್ಯದೃಷ್ಟಿಯು ಸ್ಥೂಲ, ಅಪೂರ್ಣ ಎನ್ನುವುದನ್ನು ಗಮನದಲ್ಲಿಡಬೇಕು. ಇದು ಸಾಹಿತ್ಯಕ್ಕೂ ಅನ್ವಯವಾಗುವ ತತ್ವ. ಆದರೆ ಸಾಹಿತ್ಯದ ಮಾಧ್ಯಮ ದಿನಬಳಕೆಯ ಮಾತು, ಅದರ ವಸ್ತು ದಿನನಿತ್ಯದ ಜೀವನ, ಅದರ ಭಾವ ಭಾವನೆಗಳು ನಮ್ಮ ಅನುದಿನದ ಅನುಭವದ ವಿಷಯಗಳಾಗಿರುವುದರಿಂದ ಅದರ ಅರ್ಥಗ್ರಹಣೆಗೆ, ರಸದ ಆಸ್ವಾದಕ್ಕೆ ಬೇರೆ ಯಾವುದೇ ಬಗೆಯ ಅಧ್ಯಯನದ ಅವಶ್ಯಕತೆ ಇಲ್ಲ ಎಂಬ ಭಾವನೆ ಸಾಮಾನ್ಯವಾಗಿದೆ. ಗಿಡವೊಂದನ್ನು ನಾವು ಬರಿ ಕಣ್ಣಿನಿಂದ ನೋಡುವುದಕ್ಕೂ ಸಸ್ಯಸಾಸ್ತ್ರೀಯ ವಿಧಾನದ ಮೂಲಕ ನೋಡುವುದಕ್ಕೂ ಮೌಲಿಕವಾದ ವ್ಯತ್ಯಾಸವಿದೆ ಎಂದು ನಾವು ಒಪ್ಪಿದಲ್ಲಿ, ಸಾಹಿತ್ಯಕೃತಿಯನ್ನು ಸುಮ್ಮನೆ ಓದುವುದಕ್ಕೂ ಶಾಸ್ತ್ರೀಯವಾಗಿ ಓದುವುವಕ್ಕೂ ವ್ಯತ್ಯಾಸವಿದೆ ಎಂಬುದನ್ನು ಅವಶ್ಯವಾಗಿ ಒಪ್ಪಬೇಕಾಗುತ್ತದೆ. ಶಾಸ್ತ್ರೀಯವಾದ ಈ ಅಧ್ಯಯನವಿಲ್ಲದೆ ಸಾಹಿತ್ಯಕೃತಿಯ ಅರ್ಥ ಆಗುವುದೇ ಇಲ್ಲ, ಅದರ ಆಸ್ವಾದ ಸಿಗು

ವುದೇ ಇಲ್ಲ ಎಂದು ಹೇಳಲಾಗದಿದ್ದರೂ, ಅದಿಲ್ಲದೆ ಕೃತಿಯ ಸಮಗ್ರ ಅರ್ಥ, ಪೂರ್ಣ ಆಸ್ವಾದ ಸಾಧ್ಯವಿಲ್ಲ ಎಂದು ಮಾತ್ರ ಖಂಡಿತವಾಗಿ ಹೇಳಬಹುದು.

ಸಾಹಿತ್ಯಾಭ್ಯಾಸ ಎಂದರೆ ಸಾಹಿತ್ಯದ ಶಾಸ್ತ್ರೀಯ ಅಧ್ಯಯನ ಮತ್ತು ಮೌಲ್ಯಮಾಪನ. ಬೇರೆ ಮಾತುಗಳಲ್ಲಿ, ಸಾಹಿತ್ಯವಿಮರ್ಶೆ. ಪ್ರತಿಯೊಂದು ಶಾಸ್ತ್ರಕ್ಕೂ ಅದರ ವಿಷಯ ಮತ್ತು ಗುರಿಗಳಿಗೆ ಅನುಗುಣವಾದ ಕೆಲವು ಪೂರ್ವಸಿದ್ಧತೆಗಳು ಇರುತ್ತವೆ. ಅವನ್ನು ಆ ಶಾಸ್ತ್ರದ ಸಾಧನ ಸಂಪತ್ತು ಎಂದು ಕರೆಯುತ್ತಾರೆ. ಸದ್ಯದಲ್ಲಿ ಸಾಹಿತ್ಯದ ಅಭ್ಯಾಸಕ್ಕೆ ಭಾಷಾಜ್ಞಾನ, ಸಹೃದಯತೆ, ಪಾಂಡಿತ್ಯ ಮತ್ತು ಮೌಲ್ಯಸಂಹಿತೆ ಈ ನಾಲ್ಕನ್ನು ಸಾಧನಸಂಪತ್ತೆಂದು ಪರಿಗಣಿಸಬಹುದು. ಇವನ್ನು ಸಾಹಿತ್ಯಾಭ್ಯಾಸದ ಸಾಧನಚತುಷ್ಟಯ ಎಂದು ಕರೆಯಬಹುದು.

## 1. ಭಾಷಾಜ್ಞಾನ:

ಸಾಹಿತ್ಯವು ಪ್ರಥಮವಾಗಿ ಆವಿರ್ಭವಿಸುವುದು ಮತ್ತು ಅಂತಿಮವಾಗಿ ಉಳಿಯುವುದು ಒಂದು ಭಾಷಿಕಕೃತಿಯಾಗಿ. ಸಾಹಿತ್ಯ ಎಂದರೆ ಶಬ್ದಾರ್ಥಗಳ ಸಹಿತತೆ, ರಸಾತ್ಮಕವಾದ ವಾಕ್ಯ, ಚಮತ್ಕೃತಿಯನ್ನು ಉಂಟುಮಾಡುವ ಶಬ್ದ, ಭಾಷೆಯ ಮೂಲಕ ಅನುಕರಿಸುವ ಕಲೆ, ಉತ್ಕೃಷ್ಟ ಕ್ರಮದಲ್ಲಿ ನಿಬದ್ಧವಾಗಿರುವ ಉತ್ಕೃಷ್ಟ ಪದಗಳು, ಅರ್ಥಪೂರ್ತಿಯಾಗಿ ಇಡಿಕಿರುವ ಭಾಷೆ—ಇವು ಸಾಹಿತ್ಯದ ಕೆಲವು ಪ್ರಾಚೀನ ಮತ್ತು ಅರ್ವಾಚೀನ ಲಕ್ಷಣಗಳು. ಭಾಷೆ ಸಾಹಿತ್ಯದ ಮಾಧ್ಯಮವಷ್ಟೇ ಅಲ್ಲ. ಭಾಷೆಯ ಎಲ್ಲ ಅಂಶಗಳನ್ನೂ ಎಲ್ಲ ಶಕ್ತಿಗಳನ್ನೂ ಬಳಸಿಕೊಳ್ಳುವ ಏಕೈಕ ಕಲೆ ಸಾಹಿತ್ಯ. ಆದ್ದರಿಂದ ಚಿತ್ರಕಲೆ ಮತ್ತು ಸಂಗೀತಗಳ ಅಧ್ಯಯನಕ್ಕೆ ಬಣ್ಣ ಮತ್ತು ನಾದಗಳ ಜ್ಞಾನ ಅವಶ್ಯಕವಾಗಿರುವಂತೆ, ಸಾಹಿತ್ಯದ ಅಧ್ಯಯನಕ್ಕೆ ಭಾಷೆಯ ಜ್ಞಾನ ಪ್ರಥಮ ಅವಶ್ಯಕ. ಭಾಷೆ ಎಂದರೆ ವಾಗಿಂದ್ರಿಯಗಳಿಂದ ಹುಟ್ಟಿ, ಅರ್ಥವನ್ನು ನೀಡುವ ನಾದಗಳ ವ್ಯವಸ್ಥಿತವಾದ ಸರಣಿ. ಆದ್ದರಿಂದ ಭಾಷೆಯ ಜ್ಞಾನ ಎಂದರೆ ಅದರ ನಾದರೂಪದ, ಪದವಾಕ್ಯರೂಪದ ಮತ್ತು ಅರ್ಥರೂಪದ ಪರಿಜ್ಞಾನ.

ಸಾಹಿತ್ಯ ಕೃತಿಯೊಂದರ ಮೊದಲ ಆಕರ್ಷಣೆ ಅದರ ನಾದಮಾಧುರ್ಯ, ಶ್ರುತಿರಂಜನೆ. ಇದು ಸ್ವರ ಮತ್ತು ವ್ಯಂಜನಗಳ ಮೈತ್ರಿ ಅಥವಾ ವಿರೋಧ, ಮತ್ತು ಅವುಗಳ ಸಂಯೋಗದ ಸ್ವರೂಪವನ್ನು ಅವಲಂಬಿಸಿದೆ. ಜೊತೆಗೆ ಈ ನಾದಗಳಿಗೆ ಸ್ವತಂತ್ರವಾದ ಕೆಲವು ಗುಣಗಳೂ, ವಿಶಿಷ್ಟವಾದ ಪ್ರಭಾವಗಳೂ ಇವೆಯಂತೆ. ಹ್ರಸ್ವಸ್ವರಗಳು ಕ್ಷಿಪ್ರಗತಿಯನ್ನೂ, ದೀರ್ಘಸ್ವರಗಳು ನಿಧಾನ ಅಥವಾ ಮಂದಗತಿಯನ್ನೂ ಸೂಚಿಸುತ್ತವೆಯಂತೆ. ಕೆಲವು ವ್ಯಂಜನಗಳು ಕೋಮಲ ಮತ್ತು ಮೃದು; ಕೆಲವು ಕರ್ಕಶ ಹಾಗೂ ಪರುಷ ಎಂದು ಭಾವಿತವಾಗಿವೆ. ಭಾಷೆಯ ನಾದರೂಪದ ಪರಿಚಯವಿಲ್ಲದಿದ್ದರೆ ಕಾವ್ಯದ ಛಂದೋವೈಚಿತ್ರ್ಯ, ಗದ್ಯದ ಲಯವೈವಿಧ್ಯ, ಶೈಲಿಯ

ಲಾಲಿತ್ಯ ಅಥವಾ ಪೌರುಷ್ಯ ಅನುಭೂತವಾದರೂ ಅರ್ಥವಾಗವು. ಇವು ಅರ್ಥವಾಗದಿದ್ದಲ್ಲಿ ಸಾಹಿತ್ಯದ ಸೌಂದರ್ಯದ ಅರ್ಧಭಾಗ ಅರ್ಥವಾಗದೆ ಇದ್ದಂತೆಯೇ.

ಭಾಷೆ ಕೇವಲ ನಾದಸರಣಿಯಲ್ಲ, ನಾದಗಳ ಒಂದು ವ್ಯವಸ್ಥಿತ ರಚನೆ. ಈ ವ್ಯವಸ್ಥೆ ಭಾಷೆಯ ಪದಗಳ ಮತ್ತು ವಾಕ್ಯಗಳ ರಚನೆಯಲ್ಲಿ ಕಂಡುಬರುತ್ತದೆ. ಪದಗಳು, ಪ್ರತ್ಯಯಗಳು, ಅವು ಸಂಯೋಗವಾಗುವ ಬಗೆ, ಮತ್ತು ಅವು ಸೇರಿ ವಾಕ್ಯವಾಗುವ ರೀತಿ ಇವುಗಳನ್ನು ಅರಿಯುವುದೂ ಅಷ್ಟೇ ಮುಖ್ಯ. ಪದಗಳ ಔಚಿತ್ಯ-ಪೂರ್ಣ ಆಯ್ಕೆ, ಪ್ರತ್ಯಯಗಳು ಸೂಚಿಸುವ ಸಂಬಂಧಗಳು, ಶಬ್ದಗಳ ಲಿಂಗ ಮತ್ತು ವಚನಗಳು ನೀಡಬಹುದಾದ ಅರ್ಥವೈಶಿಷ್ಟ್ಯ, ವಾಕ್ಯಗಳ ರಚನೆಯ ವೈಚಿತ್ರ್ಯ-ಇವು ಶೈಲಿಯ ವಿಶ್ಲೇಷಣೆಗೆ ಅಗತ್ಯವಾದ ಅಂಶಗಳು.

ಭಾಷೆಯ ಸ್ವರೂಪ ನಾದಸಂತಾನವಾದರೂ ಅದರ ಉದ್ದೇಶ ಅರ್ಥಾಭಿವ್ಯಕ್ತಿ. ಸಾಹಿತ್ಯವು ಸಂಗೀತದಂತೆ ಅರ್ಥರಹಿತ ವಸ್ತುವೂ ಅಲ್ಲ. ಅದು ಶಬ್ದ ಮತ್ತು ಅರ್ಥಗಳ ಅವಿಭಾಜ್ಯ ಸಂಯೋಗ, ಶಬ್ದದ ಮೂಲಕ ಅರ್ಥದ ಅಭಿವ್ಯಕ್ತಿ. ಈ ಅಭಿವ್ಯಕ್ತಿ ಹೇಗೆ ಆಗುತ್ತದೆ ಎನ್ನುವುದನ್ನು ತಿಳಿಯಲು ಭಾಷಾಶಾಸ್ತ್ರದ ಪರಿಚಯ ಇರಬೇಕು. ಪದಗಳಿಂದ ಅರ್ಥ ಹೇಗೆ ಸ್ಫುರಿಸುತ್ತದೆ; ಇತರ ಪದಗಳ ಸಂಸರ್ಗದಿಂದ ಪದಗಳಿಗೆ ಹೇಗೆ ಹೊಸ ಅರ್ಥಗಳು ಒದಗುತ್ತವೆ; ಕಾಲಾನುಕಾಲಕ್ಕೆ ಪದಗಳ ಅರ್ಥಗಳು ಹೇಗೆ ಸಂಕುಚಿತವಾಗಿ, ವಿಕಸಿತವಾಗಿ ಅಥವಾ ಪರಿವರ್ತಿತವಾಗಿ ವ್ಯತ್ಯಾಸ ಹೊಂದುತ್ತವೆ; ಗ್ರಾಂಥಿಕ ಶಬ್ದಗಳಿಂದ, ಪ್ರಾದೇಶಿಕ ಶಬ್ದಗಳಿಂದ, ಆಡುನುಡಿಗಳಿಂದ ಯಾವ ವಿಶೇಷಾರ್ಥಗಳು ಹೊಳೆಯುತ್ತವೆ; ಹೊಸ ವಸ್ತುಗಳು ಸೃಷ್ಟವಾದಂತೆ, ಹೊಸ ಅಗತ್ಯಗಳು ಉದಿಸಿದಂತೆ ಹೇಗೆ ಹೊಸ ಪದಗಳು ಹುಟ್ಟಿಕೊಳ್ಳುತ್ತವೆ ಅಥವಾ ಹಳೆಯ ಪದಗಳೇ ಹೊಸ ಅರ್ಥಗಳನ್ನು ಪಡೆಯುತ್ತವೆ, ಹೊಸ ಪದಸಂಯೋಜನೆ, ವಾಕ್ಯರಚನಾಕ್ರಮ, ಮತ್ತು ಅಭಿವ್ಯಕ್ತಿ ರೀತಿಗಳು ಕಲ್ಪಿತವಾಗುತ್ತವೆ ಅಥವಾ ಹೊಸ ಅಗತ್ಯಗಳನ್ನು ಪೂರೈಸಲು ಹೇಗೆ ಹಳೆಯ ರೀತಿಕ್ರಮಗಳೇ ಸಮರ್ಥವಾಗುತ್ತವೆ ಎಂಬುದನ್ನು ಅರಿತಿರಬೇಕು. ಭಾಷೆಯ ಈ ಬೆಳವಣಿಗೆಯಲ್ಲಿ ಸಾಹಿತ್ಯವು ಪ್ರಮುಖ ಪಾತ್ರವನ್ನು ವಹಿಸಿದರೂ ಅದು ಬಹಳ ಮಟ್ಟಿಗೆ ಭಾಷೆಯ ಪ್ರಚಲಿತ ಸೂತ್ರಗಳಿಗೆ ಅನುಗುಣವಾಗಿಯೇ ತನ್ನ ಕಾರ್ಯವನ್ನು ನಿರ್ವಹಿಸುತ್ತದೆ. ಒಂದು ವೇಳೆ ಅವುಗಳಿಗೆ ವಿರುದ್ಧವಾಗಿ ನಿರ್ವಹಿಸಿದ್ದರೆ, ಅಂಥ ಪ್ರಯೋಗಗಳು ಸ್ವಲ್ಪ ಕಾಲದೊಳಗೆ ಎಲ್ಲರಿಗೂ ಗ್ರಾಹ್ಯವಾಗಿ ಹೊಸ ಸೂತ್ರಗಳು ಕಲ್ಪಿತವಾಗುತ್ತವೆ ಅಥವಾ ಕವಿಪ್ರಯೋಗವೆಂದು ಸಮ್ಮತವಾದರೂ ಅಪವಾದಗಳಾಗಿ ಉಳಿಯುತ್ತವೆ.

ಪ್ರತಿಭೆ ಎಂತಹದೇ ಆದರೂ, ಎಷ್ಟೇ ಇದ್ದರೂ ಸಾಹಿತ್ಯದ ಒಂದು ಕೃತಿ ರಚಿತವಾಗುವುದು ಅದು ಅಭಿವ್ಯಕ್ತವಾಗುವ ಭಾಷೆಯ ಸ್ವರೂಪ, ಸಂಪತ್ತು, ಸಾಮರ್ಥ್ಯ ಮತ್ತು ಇತಿಮಿತಿಗಳಿಗೆ ಒಳಪಟ್ಟೇ. ಈ ಭಾಷೆಯೂ ಏಕಪ್ರಕಾರ

ವಾಗಿರುವುದಿಲ್ಲ. ಅನೇಕ ಕಾರಣಗಳಿಂದಾಗಿ ಅದು ಕಾಲಕಾಲಕ್ಕೆ ಬದಲಾಗುತ್ತಾ ಇರುತ್ತದೆ. ಈ ಬದಲಾವಣೆ ಆಯಾ ಯುಗದ ಸಾಹಿತ್ಯದ ಮೇಲೆ ಪ್ರಭಾವ ಬೀರಿರುತ್ತದೆ. ಆದ್ದರಿಂದಲೇ ನಾವು ಕೃತಿಯೊಂದನ್ನು ಓದಿದ ಮಾತ್ರದಿಂದ ಅದು ಇಂತಹ ಶತಮಾನಕ್ಕೆ ಸೇರಿದ್ದೆಂದು ಊಹಿಸಲು ಸಾಧ್ಯವಾಗುತ್ತದೆ. ಪ್ರತಿಭೆ ಒಂದೇ ಮಟ್ಟದ್ದಾದರೂ, ಭಾಷೆ ಒಂದೇ ಆಗಿದ್ದರೂ ಕವಿಗಳು ಒಂದೇ ಗುಣಮಟ್ಟದ ಕಾವ್ಯವನ್ನು ರಚಿಸದೆ ಇರಲು ಅವರಿಗೆ ಲಭ್ಯವಿದ್ದ ಭಾಷೆಯ ಸ್ವರೂಪವೂ ಒಂದು ಕಾರಣ. ಆದ್ದರಿಂದ ಸಾಹಿತ್ಯದ ಅಭ್ಯಾಸಿಯು ಭಾಷೆಯ ಸ್ವರೂಪದ ಜೊತೆಗೆ ಅದರ ಇತಿಹಾಸವನ್ನೂ ಅರಿತಿರಬೇಕು.

ಕೊನೆಯದಾಗಿ, ಸಾಹಿತ್ಯ ಕೃತಿಗಳ ಶಾಸ್ತ್ರೀಯ ಅಧ್ಯಯನ ಪ್ರಾಯಶಃ ಭಾಷಾಶಾಸ್ತ್ರಜ್ಞರಿಂದಲೇ ಆಗಿರಬೇಕು. ಪಾಶ್ಚಾತ್ಯ ಸಾಹಿತ್ಯ ವಿಮರ್ಶೆ ಜನಿಸಿದುದು ವ್ಯಾಕರಣದಿಂದ. ವಿದ್ವಾಂಸರಲ್ಲಿ ಮೊದಲನೆಯವರು ವೈಯಾಕರಣಿಗಳು ಎನ್ನುವುದು ಭಾರತೀಯ ಆಲಂಕಾರಿಕರ ಅಭಿಪ್ರಾಯ.

ಆದ್ದರಿಂದ ಸಾಹಿತ್ಯಾಭ್ಯಾಸದ ಪ್ರಥಮ ಸಾಧನ ಭಾಷೆಯ, ಅಂದರೆ ಅದರ ನಾದ, ಅರ್ಥ, ರಚನಾರೂಪಗಳ, ಅದರ ಕಾರ್ಯವಿಧಾನದ ಮತ್ತು ಅವುಗಳ ಇತಿಹಾಸದ ಪರಿಜ್ಞಾನ.

## 2. ಸಹೃದಯತೆ :

ನಾವು ಭಾಷೆಯನ್ನು ದೈನಂದಿನ ವ್ಯವಹಾರ, ಶಾಸ್ತ್ರಗ್ರಂಥ ಮತ್ತು ಸಾಹಿತ್ಯ ಕೃತಿಗಳ ರಚನೆಗೆ ಬಳಸುತ್ತೇವೆ. ಈ ಮೂರು ತೆರನ ಬಳಕೆಗಳ ಉದ್ದೇಶ ಮತ್ತು ಪರಿಣಾಮ ಬೇರೆ ಬೇರೆಯಾಗಿದ್ದರೂ, ಅವುಗಳ ಭಾಷೆಯ ರೂಪವಂತೂ ಒಂದೇ ಆಗಿರುತ್ತದೆ. ಸಾಹಿತ್ಯಕ್ಕೆ ಮೀಸಲಾದುದು ಎಂದು ಭಾವಿಸಿರುವ ಛಂದೋಬಂಧವೂ ಕೂಡ ಅನೇಕ ಶತಮಾನಗಳ ಕಾಲ ಶಾಸ್ತ್ರಗಳ ಮಾಧ್ಯಮವಾಗಿತ್ತು. ಭಾಷಾಜ್ಞಾನದಿಂದ ನಮಗೆ ಈ ಬಳಕೆಗಳ ಅರ್ಥ ತಿಳಿದರೂ, ಅವುಗಳಲ್ಲಿ ಯಾವ ಬಳಕೆ ಸಾಹಿತ್ಯಕ, ಯಾವುದು ಅಲ್ಲ ಎನ್ನುವ ವ್ಯತ್ಯಾಸ ಗೊತ್ತಾಗುವುದಿಲ್ಲ. ಅದಕ್ಕೆ ಬೇಕಾದುದು ಸಹೃದಯತೆ, ರಸಿಕ ಸಂವೇದನೆ.

ಸಹೃದಯತೆ ಎಂದರೆ ಸಾಹಿತಿಯ ಅಥವಾ ಕವಿಯ ಹೃದಯಕ್ಕೆ ಸಮಾನವಾದ, ಸದೃಶವಾದ ಹೃದಯವನ್ನು, ಸಂವೇದನೆಯನ್ನು ಹೊಂದಿರುವುದು, ಇದಿಲ್ಲದಿದ್ದರೆ ನಮಗೆ ಸಾಹಿತ್ಯದ ಬಾಹ್ಯ ರೂಪ ಮತ್ತು ಅರ್ಥಗಳ ಜ್ಞಾನ ಉಂಟಾಗಬಹುದೇ ವಿನಾ, ಅದರ ಅಂತಸ್ಸತ್ವದ ಅನುಭವ ಆಗುವುದಿಲ್ಲ, ಅದರ ಆಸ್ವಾದ ಸಿಗುವುದಿಲ್ಲ. ಸಂವೇದನೆಯಿಲ್ಲದ ಸಾಹಿತ್ಯಾಭ್ಯಾಸ ಶುಷ್ಕಪಾಂಡಿತ್ಯದಲ್ಲಿ ಪರ್ಯವಸಾನವಾಗುತ್ತದೆ. ಈ ಸಂವೇದನಾ ಶಕ್ತಿ ಸಾಹಿತ್ಯರಚಕರಿಗೆ ಮಾತ್ರ ಮೀಸಲಾದುದೇನೂ ಅಲ್ಲ. ಅದು

ಕವಿ–ವಿಮರ್ಶಕರಿಬ್ಬರಿಗೂ ಸಮಾನ. ಪ್ರತಿಭೆಯ ಈ ತತ್ವವನ್ನು ಕವಿ–ಸಹೃದಯ ಎಂಬ ಹೆಸರಿನಿಂದ ಎಂದು ಪ್ರಾಚೀನ ವಿಮರ್ಶಕರೊಬ್ಬರು ಕರೆದಿದ್ದಾರೆ. ಈ ಇಬ್ಬರಲ್ಲಿರುವ ಒಂದೇ ವ್ಯತ್ಯಾಸ ಕವಿಯಲ್ಲಿ ಪ್ರತಿಭೆ ಕ್ರಿಯಾಶಾಲಿಯಾಗಿರುತ್ತದೆ, ಸಹೃದಯನಲ್ಲಿ ಕೇವಲ ಭಾವನಾತ್ಮಕವಾಗಿರುತ್ತದೆ. ಇದನ್ನು ಒಂದೇ ಹದಕ್ಕೆ ಶ್ರುತಿಮಾಡಿರುವ ಎರಡು ವೀಣೆಗಳಿಗೆ ಹೋಲಿಸಬಹುದು. ಅವನ್ನು ಅಕ್ಕಪಕ್ಕದಲ್ಲಿಟ್ಟು ಒಂದನ್ನು ನುಡಿಸಿದಾಗ ಅದರ ಪಕ್ಕದಲ್ಲಿ ತಟಸ್ಥವಾಗಿರುವ ಇನ್ನೊಂದೂ ಅದಕ್ಕೆ ಸಮನಾಗಿ ನುಡಿಗೊಡುವಂತೆ, ಸಹೃದಯನೂ ಸಾಹಿತ್ಯಕೃತಿಗೆ ಪ್ರತಿಸ್ಪಂದಿಸುತ್ತಾನೆ, ಈ ಪ್ರತಿಸ್ಪಂದನ ಶಕ್ತಿ ಇಲ್ಲದ ಸಾಹಿತ್ಯಾಭ್ಯಾಸ ನಿರರ್ಥಕ ಶ್ರಮ.

ಸಾಹಿತ್ಯಾಭ್ಯಾಸಕ್ಕೆ ಸೂಕ್ಷ್ಮ ಸಂವೇದನೆಯಷ್ಟೇ ಸಾಹಿತ್ಯ ರಚನೆಯೂ ಅವಶ್ಯಕವಲ್ಲವೇ ಎಂಬ ಒಂದು ಪ್ರಶ್ನೆ ಇದೆ. ಯಂತ್ರವೊಂದನ್ನು ತಯಾರಿಸುವವನು ಅಥವಾ ಜೋಡಿಸುವವನು ನಿಜವಾದ ಯಂತ್ರಜ್ಞನಾಗಿರುವಂತೆ, ಸಾಹಿತ್ಯವನ್ನು ರಚಿಸುವವನು ಮಾತ್ರವೇ ನಿಜವಾದ ಸಾಹಿತ್ಯಜ್ಞ. ಅವನಿಗೆ ಸಾಹಿತ್ಯಕ ಕ್ರಿಯೆಯ ಸ್ವಂತ ಅನುಭವವಿರುವುದರಿಂದ , ಅವನು ಸಾಹಿತ್ಯಕೃತಿಯನ್ನು ಒಳಗಿನಿಂದ ಅರ್ಥಮಾಡಿಕೊಳ್ಳಲು ಸಮರ್ಥನಾಗುತ್ತಾನೆ. ಉಳಿದವರು ಅದನ್ನು ಪರೋಕ್ಷವಾಗಿ ಮಾತ್ರ ವೀಕ್ಷಿಸಬಲ್ಲರು. ಆದ್ದರಿಂದ ಸಾಹಿತ್ಯಾಭ್ಯಾಸಕ್ಕೆ ಸಾಹಿತ್ಯರಚನೆ ಅವಶ್ಯಕ ಎಂದು ವಾದಿಸುವವರು ಇದ್ದಾರೆ. ಅಷ್ಟೇ ಅಲ್ಲ, ಕಾವ್ಯವನ್ನು ವಿಮರ್ಶಿಸುವ ಅಧಿಕಾರ ಇರುವುದು ಕವಿಗಳಿಗೆ ಮಾತ್ರವೇ ಎಂಬ ಉಗ್ರಪಂಥಗಳವರೂ ಇದ್ದಾರೆ. ಸೈದ್ಧಾಂತಿಕವಾಗಿ ಈ ವಾದಕ್ಕೆ ಆಧಾರ ಸಾಲದು. ಇತಿಹಾಸದಲ್ಲಿ ಇದಕ್ಕೆ ಅಪವಾದಗಳೂ ಇವೆ. ಅನೇಕ ಶ್ರೇಷ್ಠ ವಿಮರ್ಶಕರು ಶ್ರೇಷ್ಠ ಸಾಹಿತಿಗಳೂ ಆಗಿರುವುದು ದಿಟ. ಆಂಗ್ಲ ಸಾಹಿತ್ಯದಲ್ಲಿ ಕೊಲೆರಿಡ್ಜ್ ಮತ್ತು ಎಲಿಯಟ್ ಇದಕ್ಕೆ ನಿದರ್ಶನ. ಆದರೆ ಸೃಜನಾತ್ಮಕ ಸಾಹಿತ್ಯ ರಚಿಸಿದ ಸಾಂತ್ ಬೋ ಮತ್ತು ಲೀವಿಸ್ ಇದಕ್ಕೆ ಪ್ರಬಲ ಅಪವಾದ. ಜೊತೆಗೆ ಸೃಜನಾತ್ಮಕ ಸಾಹಿತಿಯು ವಿಮರ್ಶಕನಾಗುವುದರಲ್ಲಿ ಕೆಲವು ತೊಂದರೆಗಳಿವೆ. ಅವನು ಇತರ ಸಾಹಿತಿಗಳ ಬಗ್ಗೆ ಅಸೂಯೆಯಿಂದ ಕೂಡಿರಬಹುದು. ಎರಡನೆಯದಾಗಿ ಅವನ ಸಾಹಿತ್ಯಸೃಷ್ಟಿಗೆ ಅನುಗುಣವಾದ ಅಥವಾ ಪೋಷಕವಾದ ಗುಣಗಳಿವೆ ಮತ್ತು ಅಂಶಗಳಿಗೆ ಅವನ ದೃಷ್ಟಿ ಸೀಮಿತವಾಗಬಹುದು. ಅವನ ಅಭಿರುಚಿಯು ಅವನ ರಚನೆಯ ಗುಣದೋಷಗಳಿಂದ ಪ್ರಭಾವಿತವಾಗಬಹುದು. ಕೊನೆಯದಾಗಿ ತನ್ನದೇ ಮಾರ್ಗದ ಅಥವಾ ಪಂಥದ ಪೋಷಣೆ ಮತ್ತು ಸಮರ್ಥನೆಗಳಲ್ಲಿ ಅವನು ಭಿನ್ನರೀತಿಗಳ, ಭಿನ್ನ ಪಂಥಗಳ ಕೃತಿಗಳನ್ನು ಅರ್ಥಮಾಡಿಕೊಳ್ಳದೇ ಹೋಗಬಹುದು ಅಥವಾ ಜ್ಞಾನಪೂರ್ವಕವಾಗಿಯೇ ಅವನ್ನು ತೆಗಳಬಹುದು. ಇವು ಸಾಹಿತ್ಯವನ್ನು ಸೃಜಿಸದ ವಿಮರ್ಶಕರಿಗೆ ಅನ್ವಯಿಸುವುದಿಲ್ಲ ಎಂದು ಹೇಳಲಾಗದಿದ್ದರೂ, ಅವರು ಈ ದೋಷಗಳಿಗೆ ಈಡಾಗದಿರುವ ಸಂಭವ ಹೆಚ್ಚು ಎಂದು ಹೇಳಬಹುದು. ಆದ್ದರಿಂದ ಸಾಹಿತ್ಯಾಭ್ಯಾಸಿಯು ಸಾಹಿತ್ಯವನ್ನು ರಚಿಸಲೇಬೇಕೆಂದು ವಿಧಿಸಲಾಗುವುದಿಲ್ಲ. ಆದರೆ ಸಾಹಿತ್ಯ

ವನ್ನು ಕುರಿತು ಅವನು ಬರೆಯುವ ಬರವಣಿಗೆ ಸಾಹಿತ್ಯಕವಾಗಿರಬೇಕೆಂದು ಅಪೇಕ್ಷಿಸಬಹುದು.

**3. ಪಾಂಡಿತ್ಯ :**

ಸಾಹಿತ್ಯಕೃತಿ ಒಂದು ಸ್ವತಂತ್ರ, ಸಾರ್ವತ್ರಿಕ, ಸಾರ್ವಕಾಲಿಕ, ಸ್ವಪ್ರಧಾನ ಕೃತಿ. ಸಾಹಿತ್ಯಾಭ್ಯಾಸಿಗಳ ಆಸಕ್ತಿ ಇರುವುದು ಆ ಕೃತಿ ಮಾತ್ರದಲ್ಲೇ. ಅದರ ಮಾಧ್ಯಮ ನಮಗೆ ಪರಿಚಿತವಾಗಿರುವ ಭಾಷೆ. ಅದರ ಸೂಕ್ಷ್ಮಗಳನ್ನು ಭಾಷಾಶಾಸ್ತ್ರದ ಅಧ್ಯಯನದಿಂದ ಅರಿಯಬಹುದು. ಕೃತಿಯ ಭಾಷೆ, ಬಂಧ, ಅಲಂಕಾರ, ಶೈಲಿ, ಅರ್ಥಗಳನ್ನು, ವಿಜ್ಞಾನಿಯೊಬ್ಬನು ಸೂಕ್ಷ್ಮದರ್ಶಕದ ಮೂಲಕ ವಸ್ತುವೊಂದನ್ನು ಪರೀಕ್ಷಿಸುವಂತೆ, ಕೇವಲ ವಸ್ತುನಿಷ್ಠವಾಗಿ ನೋಡಿದರೆ ಸಾಕು. ಅದರ ರಾಗ ಭಾವಗಳನ್ನು ನಮ್ಮ ಸಹಜ ಸಿದ್ಧವಾದ ಸಂವೇದನೆಯ ಮೂಲಕ ಗ್ರಹಿಸಬಹುದು. ಆದ್ದರಿಂದ ಸಾಹಿತ್ಯ ಕೃತಿಯೊಂದನ್ನು ಅರ್ಥಮಾಡಿಕೊಳ್ಳಲು, ಆಸ್ವಾದಿಸಲು ಆ ಕೃತಿಯ ಅಧ್ಯಯನವಷ್ಟೇ ಸಾಕು. ಅದಕ್ಕೆ ಸಂಬಂಧಿಸಿದ ಇತರ ವಿಷಯಗಳನ್ನು ತಿಳಿಯಲು ಹೊರಡುವುದು ಸಾಹಿತ್ಯೇತರ ಆಸಕ್ತಿ. ಅದು ಸಾಹಿತ್ಯಕ ವಿವೇಚನೆಗೆ ಅಪ್ರಸ್ತುತ ಮತ್ತು ಅನಪೇಕ್ಷಿತ. ಇದು ಈ ಶತಮಾನದ ಪ್ರಸಿದ್ಧ ವಿಮರ್ಶಕ ಪಂಥವೊಂದರ ವಾದ.

ನಮ್ಮ ಆಸಕ್ತಿ ಪೂರ್ಣವಾಗಿ ಸಾಹಿತ್ಯಕೃತಿಗೇ ಮೀಸಲು, ಅದರ ಇತರ ಅಂಶಗಳಿಗಲ್ಲ ಎನ್ನುವುದು ಸರಿ. ಆದರೆ ಕೇವಲ ಕೃತಿಯ ಪರಿಶೀಲನೆಯಿಂದ ಅದರ ಅರ್ಥ ಪೂರ್ಣವಾಗಿ ಸ್ಫುರಿಸುವುದೇ ಎನ್ನುವುದು ಚಿಂತನೀಯ. ಅರ್ಥ ಎಲ್ಲರಿಗೂ ಸ್ಫುಟವಾಗಿ, ನಿಸ್ಸಂದಿಗ್ಧವಾಗಿ ಹೊಳೆಯುವಂತಿದ್ದರೆ ಕೃತಿಯ ಅಧ್ಯಯನದ, ವಿಮರ್ಶೆಯ ಅವಶ್ಯಕತೆಯೇ ಇಲ್ಲದಾಗುತ್ತಿತ್ತು. ಅದರ ಬಗ್ಗೆ ವಿವಿಧ ವ್ಯಾಖ್ಯಾನಗಳಾಗಲಿ, ಭಿನ್ನಾಭಿಪ್ರಾಯಗಳಾಗಲಿ ಇರಬಾರದಾಗಿತ್ತು. ವಸ್ತುಸ್ಥಿತಿ ಹೀಗಿಲ್ಲದಿರುವುದರಿಂದ, ಕೃತಿಯ ಅರ್ಥವಂತಿಕೆಗೆ ಇತರ ಕೆಲವು ವಿಷಯಗಳೂ ಅವಶ್ಯಕ ಎಂದಾಗುತ್ತದೆ. ಸಾಹಿತ್ಯದ ಸೃಷ್ಟಿಗೆ ಕಾರಣಗಳು, ಅದರ ಸ್ವರೂಪವನ್ನು ಮತ್ತು ಉದ್ದೇಶವನ್ನು ನಿರ್ಧರಿಸುವ ಅಂಶಗಳು ಅನೇಕವಾಗಿವೆ. ಅವುಗಳ ಅನ್ವೇಷಣೆಯೇ ಪಾಂಡಿತ್ಯದ ಗುರಿ : ಅವುಗಳ ಪರಿಜ್ಞಾನವೇ ಪಾಂಡಿತ್ಯ.

ಪಾಂಡಿತ್ಯದಲ್ಲಿ ಮೂರು ಪ್ರಮುಖ ವಿಭಾಗಗಳಿವೆ-ಗ್ರಾಂಥಿಕ, ಚಾರಿತ್ರಕ ಮತ್ತು ಸಾಹಿತ್ಯಕ. ಮೊದಲನೆಯದರ ಗುರಿ ಕೃತಿಯ ಭಾಷಿಕರೂಪದ ನಿಷ್ಕರ್ಷೆ. ಕೃತಿಯೊಂದರ ಗ್ರಾಂಥಿಕರೂಪ ನಿರ್ಧಾರವಾಗದೆ ಸಾಹಿತ್ಯಾಧ್ಯಯನ ಪ್ರಾರಂಭವಾಗುವಂತೆಯೇ ಇಲ್ಲ. ಪ್ರಾಚೀನ ಕೃತಿಗಳ ವಿಷಯದಲ್ಲಂತೂ ಈ ರೂಪ ಸಿದ್ಧಿಸುವುದು ಉಪಲಬ್ಧವಾಗಿರುವ ಹಸ್ತಪ್ರತಿಗಳ, ಪಾಠಾಂತರಗಳ ತುಲನಾತ್ಮಕ ಅಧ್ಯಯನದ

ಮೂಲಕ. ಗ್ರಂಥಗಳು ಅಚ್ಚು ಕಾಣುತ್ತಿರುವ ಇಂದಿಗೂ ಇದು ಅವಶ್ಯಕವೆಂಬುದನ್ನು ಫ್ರೆಡೆರಿಕ್ ಬವರ್ಸ್ ಎಂಬ ವಿದ್ವಾಂಸರು ಸಾಧಾರವಾಗಿ ತೋರಿಸಿದ್ದಾರೆ. ಟಿ.ಎಸ್. ಎಲಿಯಟ್‌ನ ಆಷ್ ವೆಡ್‌ನಸ್ ಡೇ ಎಂಬ ಕವನದ ಐದನೆಯ ವಿಭಾಗದಲ್ಲಿ word ಎಂದು ಪ್ರಥಮ ಮುದ್ರಣದಲ್ಲಿ ಅಚ್ಚಾಗಿದ್ದ ಪದ ಎರಡನೆ ಮುದ್ರಣದಿಂದೀಚೆಗೆ world ಎಂದು ತಪ್ಪಾಗಿಯೇ ಅಚ್ಚಾಗಿ ಬರುತ್ತಿರುವುದನ್ನು ಉದಾಹರಿಸಿದ್ದಾರೆ. ಜೊತೆಗೆ ಕೆಲವು ಕವಿಗಳು ತಮ್ಮ ಕವನಗಳಲ್ಲಿ ಮುದ್ರಣದಿಂದ ಮುದ್ರಣಕ್ಕೆ ವ್ಯತ್ಯಾಸ ಮಾಡಿದ್ದಾರೆ. ಅಷ್ಟೇ ಅಲ್ಲದೆ, ಅಂತಿಮ ಪ್ರಕಟಿತ ಪಾಠದ ಎಷ್ಟೋ ಸಂದೇಹಗಳು ಮತ್ತು ಸಮಸ್ಯೆಗಳು ಹಸ್ತಪ್ರತಿಗಳ ಪರಿಶೀಲನೆಯಿಂದ ಬಗೆಹರಿಯುವುದನ್ನು ಕೀಟ್ಸ್, ಯೇಟ್ಸ್ ಮುಂತಾದವರ ಪ್ರಸಿದ್ಧ ಕವನಗಳ ಹಸ್ತಪ್ರತಿಗಳ ಅಧ್ಯಯನದಿಂದ ವಿಮರ್ಶಕರು ತೋರಿಸಿದ್ದಾರೆ. ಪಾಠಾಂತರಗಳೊಡನೆ ಕೃತಿಗಳನ್ನು ಪ್ರಕಟಿಸುವ ಪದ್ಧತಿ ಇದರ ಪ್ರಾಮುಖ್ಯವನ್ನು ಸೂಚಿಸುತ್ತದೆ. ಈ ಪಾಠಾಂತರಗಳ ಯುಕ್ತಾಯುಕ್ತ ವಿವೇಚನೆಗೆ ಗ್ರಾಂಥಿಕಪಾಂಡಿತ್ಯ ಬೇಕಾಗುತ್ತದೆ.

ಇತರ ಕಲಾಕೃತಿಗಳಂತೆಯೇ, ಸಾಹಿತ್ಯ ಕೃತಿಯೂ ಅನನ್ಯ ಪರತಂತ್ರವಾದರೂ ನಿರುಪಾಧಿಕವಲ್ಲ. ಅದು ಒಬ್ಬ ವಿಶಿಷ್ಟ ವ್ಯಕ್ತಿಯ, ಒಂದು ವಿಶಿಷ್ಟ ಯುಗದ, ಒಂದು ವಿಶಿಷ್ಟ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಪರಿಸರದ ಫಲ. ಅನುಭವವನ್ನು ಎಷ್ಟೇ ಸಾಧಾರಣೀಕರಿಸಿರಲಿ, ಅಭಿವ್ಯಕ್ತಿಯನ್ನು ಎಷ್ಟೇ ಸಾರ್ವತ್ರಿಕವಾಗಿಸಲಿ, ಕೃತಿ ತನ್ನ ವೈಯಕ್ತಿಕ ಗುಣಗಳನ್ನು ನಿಶ್ಶೇಷವಾಗಿ ಕಳೆದುಕೊಂಡಿರುವುದಿಲ್ಲ. ತನ್ನ ಕವಿಯ ಕಾಲದ ಸಮಾಜದ ಅಂಕಿತವನ್ನು ಧರಿಸಿರುತ್ತದೆ. ಆದ್ದರಿಂದ ಕೃತಿಯೊಂದನ್ನು ಓದಿದಾಗ ಇದು ಇಂಥ ಕವಿಯದು, ಇಂಥ ಕಾಲದ್ದು ಎಂದು ಸ್ಥೂಲವಾಗಿ ಗುರುತಿಸಬಹುದು. ಹೀಗೆ ಸಾಹಿತ್ಯದ ಮೇಲೆ ಪ್ರಭಾವ ಬೀರಿರುವ ಅಂಶಗಳ ಮತ್ತು ಐತಿಹಾಸಿಕ ಪರಿಸರದ ಜ್ಞಾನವೇ ಚಾರಿತ್ರಿಕ ಪಾಂಡಿತ್ಯದ ಗುರಿ.

ಚಾರಿತ್ರಿಕ ಪಾಂಡಿತ್ಯ ಎರಡು ಬಗೆಯಾಗಿದೆ—ಜೀವನ ಚಾರಿತ್ರಿಕ ಮತ್ತು ಸಾಮಾನ್ಯ ಚಾರಿತ್ರಿಕ. ಸಾಹಿತ್ಯ ಕೃತಿಯು, ನಿಸರ್ಗದ ವಸ್ತುವಿನಂತೆ, ತಾನಾಗಿ ಆವಿರ್ಭವಿಸುವ ವಸ್ತುವಲ್ಲ. ಅದು ಜೀವಂತ ವ್ಯಕ್ತಿಯೊಬ್ಬನ ಪ್ರಜ್ಞಾಪೂರ್ವಕವಾದ ಸೃಷ್ಟಿ, ಪ್ರಬುದ್ಧ ಚೇತನವೊಂದರ ವಿಶಿಷ್ಟ ಅನುಭವಗಳ, ವೈಯಕ್ತಿಕ ಪ್ರತಿಕ್ರಿಯೆಗಳ ಅಭಿವ್ಯಕ್ತಿ. ಕೆಲವು ಕವಿಗಳ ಕೃತಿಗಳಲ್ಲಿ—ವರ್ಡ್ಸ್‌ವರ್ತ್, ಶೆಲ್ಲಿ, ಲಾರೆನ್ಸ್ ಮತ್ತು ಯೇಟ್ಸ್—ಅವರ ಜೀವನ ಸಂಗತಿಗಳು ಮತ್ತು ಧ್ಯೇಯಧೋರಣೆಗಳು ಹಾಸುಹೊಕ್ಕಾಗಿ ಸೇರಿರುತ್ತವೆ. ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಆ ಕವಿಗಳ ಜೀವನ ವೃತ್ತಾಂತವನ್ನು ಅರಿತಿರಬೇಕು. ಹೀಗಿರದ ಸಂದರ್ಭಗಳಲ್ಲಿ ಕೂಡ, ಸಾಹಿತಿಯ ಜೀವನ ಚರಿತ್ರೆ ಅವನ ಕೃತಿಗಳ ಅಭ್ಯಾಸಕ್ಕೆ ಅವಶ್ಯವಾದ ಹಿನ್ನೆಲೆಯನ್ನು ಒದಗಿಸುತ್ತದೆ.

ಸಾಹಿತ್ಯಕೃತಿ ಒಬ್ಬ ವ್ಯಕ್ತಿಯ ಸೃಷ್ಟಿಯಾಗಿರುವಷ್ಟೇ ಒಂದು ಯುಗದ ಸೃಷ್ಟಿಯೂ ಆಗಿರುತ್ತದೆ. ಕವಿ ಒಬ್ಬ ವ್ಯಕ್ತಿಯಾಗಿರುವಷ್ಟೇ ಒಂದು ಕಾಲದ, ಸಮಾಜದ ಅಂಗವೂ ಆಗಿರುತ್ತಾನೆ. ಅವನ ಚಿಂತೆ ಚಿಂತನೆಗಳು ಅವನ ಕಾಲದ ಚಿಂತೆ ಚಿಂತನೆಗಳಿಂದ ಪ್ರಭಾವಿತವಾಗಿರುತ್ತವೆ. ಅವನ ವೈಯಕ್ತಿಕ ಸಮಸ್ಯೆಗಳಲ್ಲಿ ಎಷ್ಟೋ ಅವನ ಸಮಾಜದ, ಅವನಿಗೂ ಅವನ ಕಾಲದ ಸಮಾಜಕ್ಕೂ ಸಂಬಂಧಿಸಿದ ಸಮಸ್ಯೆಗಳಾಗಿರುತ್ತವೆ. ಅವನು ಶ್ರೇಷ್ಠ ಕವಿಯಾಗಿದ್ದರಂತೂ ಅವನು ತನ್ನ ಯುಗದ ಪ್ರತಿನಿಧಿ, ವಕ್ತಾರ ಆಗಿರುತ್ತಾನೆ. ಅವನ ಕೃತಿ ಆ ಯುಗಧರ್ಮದ ಪ್ರತೀಕ ಅಥವಾ ಪ್ರತಿಮೆ ಆಗಿರುತ್ತದೆ. ಆದ್ದರಿಂದ ಕೃತಿಯೊಂದರ ಅರ್ಥ ಗ್ರಹಿಸಲು ಅದರ ಕವಿಯ ಜೀವನ ಚರಿತ್ರೆಯ ಅರಿವಷ್ಟೇ ಸಾಲದು. ಅವನ ಕಾಲದ ಸಾಮಾಜಿಕ ವ್ಯವಸ್ಥೆ, ರಾಜಕೀಯ ಹಾಗೂ ಆರ್ಥಿಕ ಪರಿಸ್ಥಿತಿ, ತಾತ್ವಿಕ ಚಿಂತನೆ, ಸಂಸ್ಕೃತಿಯ ರೂಪರೇಖೆ ಇವುಗಳ ಪರಿಚಯವೂ ಬೇಕು. ಇವು ಎಷ್ಟು ಬೇಕು ಎನ್ನುವುದು ಪ್ರಸಕ್ತ ಕೃತಿಯನ್ನು ಅವಲಂಬಿಸಿರುತ್ತದೆ. ಭಾವಗೀತದ ಅಧ್ಯಯನದಲ್ಲಿ ಈ ಐತಿಹಾಸಿಕ ಅಂಶಗಳು ಹೆಚ್ಚು ಬೇಕಾಗುವುದಿಲ್ಲ. ಆದರೆ ಮಹಾಕಾವ್ಯ, ನಾಟಕ ಮತ್ತು ಕಾದಂಬರಿಗಳ ಅಧ್ಯಯನದಲ್ಲಿ ವ್ಯಾಪಕವಾಗಿ ಬೇಕಾಗುತ್ತವೆ. ದಾಂತೆ ಮತ್ತು ಮಿಲ್ಟನರ ಮಹಾಕಾವ್ಯಗಳನ್ನು ಓದುವಾಗ ಅವರ ಕಾಲದ ರಾಜಕೀಯ ಧಾರ್ಮಿಕ ವ್ಯವಸ್ಥೆ ಮತ್ತು ಚಿಂತನೆಗಳ ಜ್ಞಾನ ಅವಶ್ಯವಾಗುತ್ತದೆ. ಡಿಕನ್ಸನ ಕಾದಂಬರಿಗಳಿಗೆ ವಿಕ್ಟೋರಿಯ ರಾಣಿಯ ಕಾಲದ ಇಂಗ್ಲೆಂಡಿನ ಸಾಮಾಜಿಕ ಮತ್ತು ಶೈಕ್ಷಣಿಕ ವಾತಾವರಣದ ಅರಿವು ಬೇಕು. ಪ್ರೌಸ್ತ್ ಮತ್ತು ಜಾಯ್ಸರ ಕಾದಂಬರಿಗಳಿಗೆ ಮನೋವಿಜ್ಞಾನದ ಪ್ರಜ್ಞಾಪ್ರವಾಹ ಸಿದ್ಧಾಂತ, ಲಾರೆನ್ಸನ ಕಾದಂಬರಿಗಳಿಗೆ ಫ್ರಾಯ್ಡನ ಕಾಮವಿಶ್ಲೇಷಣೆ, ಎಲಿಯಟ್ಟನ ಕಾವ್ಯಗಳಿಗೆ ಕ್ರೈಸ್ತ ಧರ್ಮಶಾಸ್ತ್ರ ಮತ್ತು ಪುರಾಣಕಥಾಶಾಸ್ತ್ರ; ಬೇಂದ್ರೆಯವರ ಕವನಗಳಿಗೆ ಅನುಭಾವ ಸಾಹಿತ್ಯ; ಕುವೆಂಪುರವರ ಮಹಾಕಾವ್ಯಕ್ಕೆ ಅರವಿಂದರ ದರ್ಶನ ಇವುಗಳ ಪರಿಚಯ ಅಗತ್ಯ. ಅಂತೆಯೇ ಸಾಹಿತ್ಯಪ್ರಕಾರಗಳ ಸ್ವರೂಪ, ಉದಯ ಮತ್ತು ಅವುಗಳಲ್ಲಾಗುವ ಬದಲಾವಣೆಗಳಿಗೆ ಅವುಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರ ಎಷ್ಟು ಕಾರಣ ಎನ್ನುವುದನ್ನು ಗಮನಿಸಬೇಕು. ಹದಿನೆಂಟನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಕಾದಂಬರಿ ಮತ್ತು ಆಧುನಿಕ ಗದ್ಯ ಉದಯಿಸಲು ಅಂದು ಸಮಾಜದಲ್ಲಿ ಪ್ರಾಬಲ್ಯಕ್ಕೆ ಬರುತ್ತಿದ್ದ ಮಧ್ಯಮವರ್ಗದವರ, ಅದರಲ್ಲೂ ಸಾಕಷ್ಟು ವಿರಾಮವಿದ್ದ ವಿದ್ಯಾವಂತ ಮಹಿಳೆಯರ, ಪ್ರಭಾವ ಒಂದು ಮುಖ್ಯ ಕಾರಣ. ಇಂದು ಪ್ರಚಲಿತವಾಗಿರುವ ಕೆಲವು ವಿಲಕ್ಷಣ ಪ್ರಕಾರಗಳಿಗೆ ಎರಡು ಮಹಾಯುದ್ಧಗಳು, ಸಮಾಜವಾದ, ಮನೋವಿಜ್ಞಾನದ ಸಂಶೋಧನೆಗಳು, ವಿಜ್ಞಾನದ ಅದ್ಭುತ ಸಾಧನೆಗಳು ಮತ್ತು ತಾಂತ್ರಿಕ ವಿಧಾನಗಳಿಗೆ ಹೆಚ್ಚು ಹೆಚ್ಚು ಒಳಗಾಗುತ್ತಿರುವ ವೈಯಕ್ತಿಕ ಜೀವನ ಮತ್ತು ಸಮಾಜ ವ್ಯವಸ್ಥೆ ಬಹುಮಟ್ಟಿಗೆ ಕಾರಣ. ಈ ಅಂಶಗಳ ಪರಿಶೀಲನೆಯೇ ಸಾಮಾನ್ಯ ಚಾರಿತ್ರಿಕ ಪಾಂಡಿತ್ಯದ ವಿಷಯ.

ಸಾಹಿತ್ಯ ಸಾಮಾನ್ಯಕ್ಕೆ ಸಂಬಂಧಿಸಿದ ಕೆಲವು ಅಂಶಗಳ ಜ್ಞಾನವನ್ನು ಸಾಹಿತ್ಯಕ ಪಾಂಡಿತ್ಯ ಎನ್ನಬಹುದು. ಇದರಲ್ಲೂ ಎರಡು ವಿಭಾಗಗಳಿವೆ—ಸೈದ್ಧಾಂತಿಕ ಮತ್ತು ಚಾರಿತ್ರಕ. ಸಾಹಿತ್ಯ ಎಂದರೇನು ; ಅದರ ಪ್ರಕಾರಗಳು ಯಾವುವು ; ಅವುಗಳ ಲಕ್ಷಣಗಳೇನು ; ಸತ್ಯ, ನೀತಿ ಮತ್ತು ಜೀವನ ಇವುಗಳಿಗೂ ಸಾಹಿತ್ಯಕ್ಕೂ ಇರುವ ಸಂಬಂಧ ಎಂತಹದು ; ಸಾಹಿತ್ಯದ ಪ್ರಯೋಜನ ಏನು ; ವಿಮರ್ಶೆ ಎಂದರೇನು ; ಅದರ ಬಗೆಗಳು ಎಷ್ಟು; ಅವುಗಳ ಸ್ವರೂಪ ಏನು ; ಅವುಗಳ ಇತಿಮಿತಿಗಳು ಯಾವುವು : ವಿಮರ್ಶೆಯ ಅಗತ್ಯ ಮತ್ತು ಪ್ರಯೋಜನ ಏನು—ಮುಂತಾದ ವಿಷಯ ಗಳ ತಾರ್ಕಿಕ ವಿವೇಚನೆ ಸೈದ್ಧಾಂತಿಕ ಪಾಂಡಿತ್ಯದ ಗುರಿ.

ಇತರ ವಸ್ತುಗಳಿಗಿರುವಂತೆ, ಸಾಹಿತ್ಯಕ್ಕೂ ಒಂದು ಇತಿಹಾಸವಿದೆ. ಅದು ಸಾಹಿತ್ಯದ ಬಾಹ್ಯರೂಪಕ್ಕೆ ಮತ್ತು ಆಂತರ ಅರ್ಥಕ್ಕೆ ಸಂಬಂಧಿಸಿರುತ್ತದೆ. ನಾಟಕ, ಕಾವ್ಯ, ಕಾದಂಬರಿ, ಗದ್ಯ ಮೊದಲಾದ ಪ್ರಕಾರಗಳ ಉದಯ, ಬೆಳವಣಿಗೆ, ಅವನತಿ ಮತ್ತು ಕೆಲವದರ ವಿನಾಶವನ್ನು ಗುರುತಿಸಬಹುದು. ನಾಟಕ ಎಂಬ ಹೆಸರನ್ನು ಸಮಾನವಾಗಿ ಬಳಸಿದರೂ ಪ್ರಾಚೀನ ಗ್ರೀಕ್ ನಾಟಕಗಳಿಗೂ ಇಂದಿನ ನಾಟಕಗಳಿಗೂ ಇರುವ ವ್ಯತ್ಯಾಸ ಸ್ಪಷ್ಟವಾಗಿ ಕಾಣುತ್ತದೆ. ಕಾದಂಬರಿ ಎಂದರೆ ಒಂದು ಕಾಲಕ್ಕೆ ಕಥೆ ಎಂದಾಗಿತ್ತು. ಇಂದು ಯಾವ ಘಟನೆಯೂ ನಡೆಯದ ನಿರೂಪಣೆಯನ್ನು ಕಾದಂಬರಿ ಎಂದು ಕರೆಯಲಾಗುತ್ತಿದೆ. ವಿಷಮ ವೃತ್ತವೆಂದು ತ್ಯಾಜ್ಯವಾಗಿದ್ದ ಪ್ರಯೋಗಗಳು ಇಂದು ಮುಕ್ತಛಂದಸ್ಸೆಂದು ಪರಿಗೃಹೀತವಾಗಿವೆ. ರುದ್ರನಾಟಕದ ಲಕ್ಷಣ ದಲ್ಲೇ ಬಹಳ ಮಾರ್ಪಾಡುಗಳಾಗಿವೆ. ಇವೆಲ್ಲವೂ ಸಾಹಿತ್ಯದ ರೂಪಕ್ಕೆ ಸಂಬಂಧಿಸಿದವು.

ಸಾಹಿತ್ಯ ಕೃತಿಯ ಅರ್ಥದಲ್ಲೂ ಇಂತಹ ವ್ಯತ್ಯಾಸಗಳಾಗಿವೆ. ಪಂಡಿತರ ಸಂಶೋಧನೆ, ವಿವಿಧ ದೃಷ್ಟಿಕೋನಗಳಿಂದ ಪರಿಶೀಲನೆ, ಹೊಸ ಹೊಸ ವಿಶ್ಲೇಷಣಾ ವಿಧಾನಗಳ ಅನ್ವಯ, ಬೆಳೆದು ಬಂದ ಮತ್ತು ಬೆಳೆಯುತ್ತಿರುವ ವಿಭಿನ್ನ ವ್ಯಾಖ್ಯಾನ ಗಳ ಪರಂಪರೆ, ಇವುಗಳಿಂದ ಕೃತಿಯ ಅರ್ಥ ಕಾಲದಿಂದ ಕಾಲಕ್ಕೆ, ವಿಮರ್ಶಕನಿಂದ ವಿಮರ್ಶಕನಿಗೆ ಬದಲಾಯಿಸುತ್ತಾ ಹೋಗುತ್ತದೆ. ಅಭಿರುಚಿ ಮತ್ತು ಮೌಲ್ಯ ಮಾಪನಗಳಲ್ಲಿಯೂ ಈ ಬದಲಾವಣೆಗಳು ಕಂಡುಬರುತ್ತವೆ. ಒಮ್ಮೆ ಸರ್ವಶ್ರೇಷ್ಠ ವೆಂದು ಪುರಸ್ಕೃತವಾಗಿದ್ದ ಕೃತಿ ಕೆಲವೇ ವರ್ಷಗಳಲ್ಲಿ ಜನಗಳ ಮನಸ್ಸಿನಿಂದ ಜಾರಿ ಹೋಗಿರುತ್ತದೆ. ಅನೇಕ ದಶಕಗಳ ಕಾಲ ಉಪೇಕ್ಷಿತನಾಗಿದ್ದ ಕವಿ ಹಟಾತ್ತನೆ ಜನ ಪ್ರಿಯತೆ ಗಳಿಸುತ್ತಾನೆ. ಸಾಹಿತ್ಯ ಪ್ರಕಾರಗಳ ವಿಷಯದಲ್ಲೂ ಹೀಗಾಗುವುದುಂಟು. ವಿಮರ್ಶೆಯ ಸೂತ್ರಗಳ, ವಿಧಾನಗಳ ಮತ್ತು ಮಾನದಂಡಗಳ ಸ್ಥಿತಿಯೂ ಇಂತೆಯೇ ಇರುತ್ತದೆ. ಸಾಹಿತ್ಯದ ಪ್ರಕಾರಗಳ, ಕೃತಿಗಳ, ವಿಮರ್ಶೆಯ ಇತಿಹಾಸದ ಅಧ್ಯ ಯನವೇ ಸಾಹಿತ್ಯ ಚರಿತ್ರೆ.

ಈ ಪಾಂಡಿತ್ಯದ ಗುರಿ ಸಾಹಿತ್ಯಕೃತಿಯ ಅರ್ಥನಿಷ್ಕರ್ಷೆ, ಅದರ ಆಸ್ವಾದವಾಗಲಿ, ಮೌಲ್ಯವಿವೇಚನೆಯಾಗಲಿ ಅಲ್ಲ. ಆದರೆ ಈ ಪಾಂಡಿತ್ಯದ ಸಂಪಾದನೆಯಲ್ಲಿ ಆಸ್ವಾದ ಮತ್ತು ಮೌಲ್ಯವಿವೇಚನೆ ಜಾಗ್ರತವಾಗಿ ಕೆಲಸ ಮಾಡುತ್ತಿರುತ್ತವೆ. ಅದೆಂತೇ ಇರಲಿ, ಸಾಹಿತ್ಯಾಭ್ಯಾಸದ ಮುಖ್ಯ ಗುರಿಯಾದ ಆಸ್ವಾದ ಮತ್ತು ಮೌಲ್ಯವಿವೇಚನೆಗಳಿಗೆ ಆಧಾರ ಈ ನಿಷ್ಕರ್ಷೆಯೇ ಎನ್ನುವುದನ್ನು ಮರೆಯಬಾರದು.

**4. ಮೌಲ್ಯಸಂಹಿತೆ :**

ಸಾಹಿತ್ಯಾಭ್ಯಾಸದ ಗುರಿ ಕೃತಿಯೊಂದರ ಅರ್ಥಗ್ರಹಣ, ಆಸ್ವಾದ ಅಷ್ಟೇ ಅಲ್ಲ. ಅದು ಆ ಕೃತಿಯ ಮೌಲ್ಯ ನಿರ್ಧಾರ ಕೂಡ. ಇದನ್ನು ಮಾಡಲು ಅಭ್ಯಾಸಿಗೆ ಒಂದು ಮೌಲ್ಯಮಾಪಕ ಮಾನದಂಡ ಬೇಕು. ಇದೇ ಅವನು ಹೊಂದಿರಬೇಕಾದ ಮೌಲ್ಯಸಂಹಿತೆ. ಈ ಸಂಹಿತೆಯಲ್ಲಿ ಎರಡು ವಿಭಾಗಗಳಿವೆ. ಒಂದು ಸಾಹಿತ್ಯಕ ಮೌಲ್ಯಗಳದ್ದು – ಶಬ್ದಾರ್ಥಗಳ, ಶೈಲಿಯ, ಔಚಿತ್ಯದ, ರಸಭಾವಗಳ ದೃಷ್ಟಿಯಿಂದ ಯಾವ ಕೃತಿ ಸಾಹಿತ್ಯಕ ಎಂದು ನಿರ್ಧರಿಸುವುದು. ಕೃತಿಯನ್ನು ವಿವೇಚನಾಪೂರ್ವಕವಾಗಿ ಸಹೃದಯತೆಯಿಂದ ವಿಶ್ಲೇಷಿಸಿ, ಇತರ ಕೃತಿಗಳೊಂದಿಗೆ ಹೋಲಿಸಿ ಇದನ್ನು ಮಾಡಬಹುದು. ಇದರಿಂದ ಸಿದ್ಧಿಸುವುದು ಯಾವ ಕೃತಿ ಸಾಹಿತ್ಯಕ ಎನ್ನುವುದಷ್ಟೇ.

ಆದರೆ ಸಾಹಿತ್ಯಕೃತಿ ಕೇವಲ ರಸಸಾಗರವಷ್ಟೇ ಆಗಿರದೆ, ಜೀವನ ಮೌಲ್ಯಗಳ ಆಕರವೂ ಆಗಿರುತ್ತದೆ. ತನ್ನ ಕಾಲದ ಬುದ್ಧಿಸಂವೇದನೆಗಳ ಅಂಗ್ರಪಂಕ್ತಿಯಲ್ಲಿರುವ ಚೇತನವೊಂದರ ಜೀವನದರ್ಶನ ಅದರಲ್ಲಿ ಅಭಿವ್ಯಕ್ತವಾಗಿರುತ್ತದೆ. ಅದನ್ನು ಅಳೆಯಲು ದಾರ್ಶನಿಕ ಮಾನದಂಡವೇ ಬೇಕಾಗುತ್ತದೆ. ಈ ಮಾನದಂಡದ ಮೌಲ್ಯಗಳನ್ನು ಸಾಹಿತ್ಯಕ ಮೌಲ್ಯಗಳಷ್ಟು ಖಚಿತವಾಗಿ ನಿರೂಪಿಸಲಾಗುವುದಿಲ್ಲ. ಅವನ್ನು ಸಾಹಿತ್ಯಾಭ್ಯಾಸಿಯು ತನ್ನ ಸ್ವಂತ ಅಧ್ಯಯನ, ಅನುಭವ, ಸಂಸ್ಕಾರ ಮತ್ತು ಜೀವನಗಳಿಂದ ರೂಪಿಸಿಕೊಳ್ಳಬೇಕು. ಈ ಮೌಲ್ಯಗಳ ಮಾನದಂಡದಿಂದ ಕೃತಿಯ ಜೀವನ ಮೌಲ್ಯಗಳನ್ನು ಅಳೆಯಬೇಕು. ಸಾಹಿತ್ಯಕ ಮೌಲ್ಯಗಳ ಮಾನದಂಡದಿಂದ ಯಾವುದು ಸಾಹಿತ್ಯಕ ಕೃತಿ ಎಂದು ನಿರ್ಧಾರವಾದರೆ, ಜೀವನ ಮೌಲ್ಯಗಳ ಮಾನದಂಡದಿಂದ ಯಾವುದು ಶ್ರೇಷ್ಠ ಕೃತಿ ಎನ್ನುವುದು ನಿರ್ಧಾರವಾಗುತ್ತದೆ. ಅಲ್ಲಿಗೆ ಸಾಹಿತ್ಯಾಭ್ಯಾಸದ ಕರ್ತವ್ಯ ಸಮಾಪ್ತವಾಗುತ್ತದೆ.

ಭಾಷಾಜ್ಞಾನ, ಸಹೃದಯತೆ, ಪಾಂಡಿತ್ಯ ಮತ್ತು ಮೌಲ್ಯಸಂಹಿತೆ ಈ ಸಾಧನ ಚತುಷ್ಟಯ ಇರದಿದ್ದಲ್ಲಿ ಸಾಹಿತ್ಯಕೃತಿಯು ಅರ್ಥವೇ ಆಗದು, ಅದರ ಆಸ್ವಾದ ಸಿಗದು ಎಂದು ಹೇಳಲಾಗುವುದಿಲ್ಲ. ಆದರೆ ಹಾಗೆ ಸಿಗುವ ಅರ್ಥ ಸ್ಥೂಲ, ಆಸ್ವಾದ ಅಪೂರ್ಣ. ಜ್ಞಾನಪೂರ್ವಕವಾದ ಅನುಭವಕ್ಕೂ ಮೂಕಸಂವೇದನೆಗೂ ಇರುವ ವ್ಯತ್ಯಾಸವೇ ಸಾಹಿತ್ಯಾಭ್ಯಾಸಕ್ಕೂ ಕೇವಲ ರಸಾಭಿಜ್ಞತೆಗೂ ಇರುವ ವ್ಯತ್ಯಾಸ. ರಸಾಭಿಜ್ಞತೆ ರಸಿಕನೊಬ್ಬನಿಗೆ ಕೇವಲ ವೈಯಕ್ತಿಕ ತೃಪ್ತಿ ನೀಡಿದರೆ, ಸಾಹಿತ್ಯಾಭ್ಯಾಸ

ಸಾಹಿತಿಗೂ, ಸಾಹಿತ್ಯಾಭಿಮಾನಿಗೂ ತೃಪ್ತಿ ಮತ್ತು ಸಹಾಯ ನೀಡುತ್ತದೆ. ಸಾಹಿತ್ಯಾಭ್ಯಾಸದ ಸಾರ್ಥಕ್ಯ ಸಿದ್ಧಿಸುವುದು ಸಾಹಿತ್ಯ ಕೃತಿಯೊಂದರ ನಿಜವಾದ ಅರ್ಥ ಗ್ರಹಿಸಿ, ಪೂರ್ಣವಾದ ಆಸ್ವಾದ ಮಾಡಿ, ಸರಿಯಾದ ಮೌಲ್ಯಮಾಪನೆ ಮಾಡಿದಾಗಲೇ ಎಂದರೆ, ಸಾಹಿತ್ಯಕೃತಿಯೊಂದಕ್ಕೆ ಕೃತಕೃತ್ಯತೆ ಒದಗುವುದು ಸಾಧನಚತುಷ್ಟಯ ಸಂಪತ್ತಿನಿಂದ ಕೂಡಿದ ಸಾಹಿತ್ಯಾಭ್ಯಾಸಿಯೊಬ್ಬನು ಅದರ ಅಧ್ಯಯನ ಮಾಡಿದಾಗಲೇ ಎನ್ನಬಹುದು.

# ಆಯ್. ಎ. ರಿಚರ್ಡ್ಸನ ಮೌಲ್ಯ ನಿರ್ಣಯ ಸಿದ್ಧಾಂತ

**ಡಾ. ಶಾಂತಿನಾಥ ದೇಸಾಯಿ**

ಆಯ್.ಎ. ರಿಚರ್ಡ್ಸ್ ಈ ಶತಮಾನದ ಒಬ್ಬ ಮಹತ್ವದ ಸೈದ್ಧಾಂತಿಕ ವಿಮರ್ಶಕ; ಕಾವ್ಯಮೀಮಾಂಸೆಯನ್ನು ಹೆಚ್ಚು ಆಧುನಿಕವಾಗಿ, ಅಂದರೆ ಹೆಚ್ಚು ಶಾಸ್ತ್ರೀಯವಾಗಿ ಮಾಡಲು ಹೆಣಗಿದ ಕೇಂಬ್ರಿಜ್ ತತ್ವಜ್ಞಾನಿ ; ಈ ಶತಮಾನದ ವೈಶಿಷ್ಟ್ಯಪೂರ್ಣ ಕೂಸಾದ ಮಾನಸ ಶಾಸ್ತ್ರವು ಒದಗಿಸಿದಂಥ ಜ್ಞಾನದ ಬೆಳಕಿನಲ್ಲಿ ಸಾಹಿತ್ಯದ ಬಗ್ಗೆ, ಸಾಹಿತ್ಯದ ಮೌಲ್ಯಗಳ ಬಗ್ಗೆ ಆಮೂಲಾಗ್ರವಾಗಿ ಪುನರ್ವಿಚಾರ ಮಾಡಲು ಯತ್ನಿಸಿದ ಕುಶಾಗ್ರಮತಿ; ಹಳೆಯ ಸಿದ್ಧಾಂತಗಳೆಲ್ಲ ಅರ್ಧಸತ್ಯದಿಂದ ಕೂಡಿದ, ಕೆಲಸಕ್ಕೆ ಬಾರದ, ತತ್ವಗಳೆಂದು ಖಡಾಖಂಡಿತವಾಗಿ ಹೇಳಿ, ಒಂದು ಹೊಸ ಸಿದ್ಧಾಂತವನ್ನು ನಿರ್ಮಿಸಲು ಪ್ರಯತ್ನಿಸಿದ ಧೀರೋದಾತ್ತ ವಿಚಾರವಂತ ; ಇಂಗ್ಲಂಡ್–ಅಮೇರಿಕಗಳಲ್ಲಿ 'ನವ್ಯ ವಿಮರ್ಶೆ' ('ನ್ಯೂ ಕ್ರಿಟಿಸಿಜಮ್')ಯ ಒಂದು ಹೊಸ ಪರಂಪರೆಯನ್ನು ನಿರ್ಮಿಸಿದ ವರಲ್ಲಿ ಅಗ್ರಗಣ್ಯನಾದ ಮಹಾನುಭಾವ. ರಿಚರ್ಡ್ಸನ ಮೂಲ ಸಮಸ್ಯೆಯೆಂದರೆ : ಈ ವಿಜ್ಞಾನಯುಗದಲ್ಲಿ ಸಾಹಿತ್ಯಕ್ಕೆ ಅಥವಾ ಕಲೆಗೆ ಏನಾದರೂ ಮಹತ್ವವಿದೆಯೇ, ಇದ್ದರೆ ಅದರ ಮೌಲಿಕತೆಯ ಸ್ವರೂಪವೇನು ? ಅವನ ಇನ್ನೊಂದು ಸಮಸ್ಯೆಯೆಂದರೆ: ಮೇಲಿನ ಪ್ರಶ್ನೆಗಳಿಗೆ ವಿಜ್ಞಾನದ ಕ್ಷೇತ್ರದಲ್ಲಿಯೇ, ವಿಜ್ಞಾನದ ರೀತಿಯಲ್ಲಿಯೇ, ಉತ್ತರ ಶೋಧಿಸುವದು. ಉತ್ತರ ಸಿಕ್ಕವೇ ಎಂದು ಯಾರಾದರೂ ಕೇಳಿದರೆ ಅದಕ್ಕೆ ಉತ್ತರ : ಕೊನೆಯ ಉತ್ತರಕ್ಕಿಂತ ಉತ್ತರದ ಶೋಧನೆ ಮುಖ್ಯ, ಅದೇ ಹೆಚ್ಚು ಅರ್ಥಪೂರ್ಣ, ಯಾಕೆಂದರೆ ಇಂಥ ಆಮೂಲಾಗ್ರ ಶೋಧನೆಯ ಪ್ರಕ್ರಿಯೆಯಲ್ಲಿ ಹಲ ವಾರು ಹಳೆಯ ಸಮಸ್ಯೆಗಳು ಕರಗಿ ಮಾಯವಾಗಬಹುದು, ಕೆಲವು ಸಮಸ್ಯೆಗಳ ಸ್ವರೂಪ ಹೆಚ್ಚು ಸ್ಪಷ್ಟವಾಗಬಹುದು, ಇಲ್ಲಿಯ ತನಕ ಕಂಡರಿಯದ ಕೆಲವು ಮಹತ್ವದ ಹೊಸ ಸಮಸ್ಯೆಗಳೂ ಉದ್ಭವಿಸಬಹುದು....

ರಿಚರ್ಡ್ಸ್ ಮೊದಲನೆ ಬಾಂಬು ಎಸೆದದ್ದು 'ಕಲಾನುಭವ'ವೆಂದರೆ ವಿಶಿಷ್ಟವಾದ "ರಸಾನುಭವ" ಎಂಬ ಪಾರಂಪಾರಿಕ ಕಲ್ಪನೆಯ ಮೇಲೆ. ಮಾನಸಶಾಸ್ತ್ರಕ್ಕೆ ಈ ವಿಶಿಷ್ಟವಾದ ಸೌಂದರ್ಯಾನಂದದ ವಿಚಾರವೇ ಸಮ್ಮತವಿಲ್ಲ. ಉಳಿದ ಅನುಭವ

ಗಳಂತೆಯೇ ಕಲಾಕೃತಿಯಿಂದ ಸಿಗುವ ಅನುಭವದ ಸ್ವರೂಪವಿರುತ್ತದೆ. ಎಲ್ಲ ಅನುಭವಗಳ ಸಾಮಗ್ರಿ ಹೆಚ್ಚು ಕಡಿಮೆ ಒಂದೇ. ಕಲಾಕೃತಿಯಿಂದ ದೊರೆಯುವ ಅನುಭವ ಉಳಿದ ಹಲವಾರು ದೈನಂದಿನ ಅನುಭವಗಳಿಗಿಂತ ಹೆಚ್ಚು ಸುಸಂಘಟಿತವಾಗಿರುತ್ತದೆ ಅಷ್ಟೇ. ಎಲ್ಲ ಅನುಭವಗಳ ಜಾತಿ ಒಂದೇ—ಕಲಾಕೃತಿಯಿಂದ ದೊರಕುವ ಅನುಭವ. (ರಿಚರ್ಡ್ಸ್ 'ಆನಂದ' ಶಬ್ದವನ್ನುಪಯೋಗಿಸುವದಿಲ್ಲ) ಉಳಿದ ಅನುಭವಗಳಿಗಿಂತ ಹೆಚ್ಚು ಸಂಕೀರ್ಣವೂ ಹೆಚ್ಚು ಸಮೃದ್ಧವೂ ಆಗಿರುವ ಸಂಭವ ಹೆಚ್ಚು, ಅಷ್ಟೇ. ಕಲಾನುಭವದ ಈ ವಿವರಣೆಯ ಮೂಲಕ ರಿಚರ್ಡ್ಸ್ 'ಕಲೆಗಾಗಿ ಕಲೆ' ಎಂಬ ತತ್ವ ಪ್ರಣಾಲಿಗೇ ಕೊಡಲಿ ಏಟು ಹಾಕಿದ. (ರಿಚರ್ಡ್ಸನ ಸಿದ್ಧಾಂತ ಒಪ್ಪಿಕೊಂಡರೆ ಭಾರತೀಯ ಕಾವ್ಯಮೀಮಾಂಸೆಯಲ್ಲಿಯ ಅತ್ಯಂತ ವೈಶಿಷ್ಟ್ಯಪೂರ್ಣವಾದ ಕಾವ್ಯಾನಂದಕ್ಕೆ 'ಬ್ರಹ್ಮಾನಂದ ಸಹೋದರ' ಎಂದು ಹೇಳುವ, ರಸಸಿದ್ಧಾಂತಕ್ಕೆ ತಿಲಾಂಜಲಿ ಕೊಡಬೇಕಾಗುವುದು.)

ಇನ್ನು, ಅನುಭವವೆಂದರೇನು ? ಮಾನಸ ಶಾಸ್ತ್ರದ ಪ್ರಕಾರ ಅನುಭವದೆಂದರೆ ಉದ್ದೀಪನ-ಪ್ರತಿಕ್ರಿಯೆ (stimulus-response)ಗಳನ್ನೊಳಗೊಂಡ, ಪ್ರೇರಣೆ-ಸಮಾಧಾನ (impulse-satisfaction) ಗಳನ್ನೊಳಗೊಂಡ ಮಾನಸಿಕ ಘಟನಾವಲಿ. ಜೀವನವೆಂದರೆ ವೈಯಕ್ತಿಕ ಅನುಭವಗಳ ಪರಸ್ಪರ ಸಂವಹನೆ. ಸಾಹಿತ್ಯವೆಂದರೆ ಅನುಭವದ ಸಂವಹನೆಯನ್ನು ಹೆಚ್ಚು ಸುಸಂಘಟಿತವಾಗಿ ಮಾಡುವಂಥ ಒಂದು ಪ್ರಕ್ರಿಯೆ. ಲೇಖಕನಾದವನು ತನಗೆ ಅರ್ಥಪೂರ್ಣವೆಂದೆನಿಸುವ ಅನುಭವಕ್ಕೆ ಒಂದು ವ್ಯವಸ್ಥಿತವಾದ, ಸುಸಂಘಟಿತವಾದ ರೂಪಕೊಡುತ್ತಾನೆ. ಆ ರೂಪಕ್ಕೆ ನಾವು ಸಾಹಿತ್ಯಕೃತಿ ಎನ್ನುತ್ತೇವೆ. ಈ ಸಾಹಿತ್ಯಕೃತಿಯನ್ನು ಓದುಗರು ಓದಿ, ಅದಕ್ಕೆ ಪ್ರತಿಸ್ಪಂದಿಸಿ, ಲೇಖಕನ ಅನುಭವಕ್ಕೆ ಸಮೀಪವಾದ ಅನುಭವ ಪಡೆಯುತ್ತಾರೆ. (ಪ್ರತಿ ಓದುಗನ ಅನುಭವ ಉಳಿದವರ ಅನುಭವಕ್ಕಿಂತ ಕೊಂಚ ಭಿನ್ನವಾಗಿರುವುದು ಸಹಜ.) ರಿಚರ್ಡ್ಸನ ಈ ಸಾಹಿತ್ಯ-ಸಂವಹನೆಯ ಪ್ರಕ್ರಿಯೆಯನ್ನು ಕೆಳಗಿನ ರೇಖಾಕೃತಿಯ ಮೂಲಕ ಹೆಚ್ಚು ಸ್ಪಷ್ಟಪಡಿಸಬಹುದು.




ಅನುಭವ, ಅನುಭವ-ಸಂವಹನೆ, ಪ್ರತಿಸ್ಪಂದನೆ ಇತ್ಯಾದಿ ಕ್ರಿಯೆಗಳಲ್ಲಿ ಭಾಗ ವಹಿಸುವ ಮಾನವೀ ಅಂಗವೆಂದರೆ ಅನಂಗವಾದ ಮನಸ್ಸು. ರಿಚರ್ಡ್ಸ್ ಈ 'ಮನಸ್ಸ'ನ್ನು

ಮಾನಸಶಾಸ್ತ್ರೀಯವಾಗಿಯೇ ನೋಡುತ್ತಾನೆ : ಮನಸ್ಸೆಂದರೆ ಅತೀಂದ್ರಿಯವಾದ, ದೇವದತ್ತ ಇತ್ಯಾದಿಯಾದ ಸಂಗತಿಯಲ್ಲ. ಮನಸ್ಸೆಂದರೆ ಮನುಷ್ಯನ ನರವ್ಯೂಹದ ಒಂದು ಸ್ವಾಭಾವಿಕವಾದ ವ್ಯಾಪಾರ. ಈ ವ್ಯಾಪಾರ ಅತ್ಯಂತ ಸಂಕೀರ್ಣವಾಗಿದ್ದು, ಅದರಲ್ಲಿ ಜಾಗೃತ (conscious) ಹಾಗೂ ಸುಪ್ತ (unconscious) ಅವಸ್ಥೆಗಳು ಅಡಕಗೊಂಡಿವೆ. ಇಂದ್ರಿಯ ಜನ್ಯವಾದ ಮನಸ್ಸಿನ ಪ್ರಕ್ರಿಯೆಯಲ್ಲಿ ಎಷ್ಟೋ ಮಾನವೀ ಪ್ರವೃತ್ತಿಗಳು (impulses) ಕೆಲಸ ಮಾಡುತ್ತವೆ. ಈ ಪ್ರವೃತ್ತಿಗಳ ಅರ್ಥ ಪೂರ್ಣವಾದ ಸಂಘಟನೆಗಳೆಂದರೇ ದೃಷ್ಟಿಕೋಣಗಳು (attitudes). ಜೀವನಾನು ಭವಕ್ಕೆ ಅರ್ಥಪೂರ್ಣತೆ ಅಥವಾ ಮೌಲಿಕತೆ ಒದಗುವದು ಈ ದೃಷ್ಟಿಕೋಣಗಳ ಮೂಲಕವೇ. ಉಳಿದವರಿಗಿಂತ ಹೆಚ್ಚು ಸಂವೇದನಾಶೀಲನಾದ ಲೇಖಕನು ಸಂಪಾದಿ ಸುವ ಅನುಭವದಲ್ಲೇ ಮೌಲಿಕತೆ ಅಡಕಗೊಂಡಿದೆ. ಆ ಅನುಭವದ ಸಂಯೋಜನೆ ಯಲ್ಲಿಯೂ, ಅದರ ಸುಸಂಘಟಿತ ರೂಪವಾದ ಕಲಾಕೃತಿಯಲ್ಲಿಯೂ, ಕಲಾಕೃತಿಯು ಪ್ರಚೋದಿಸುವ ಪ್ರವೃತ್ತಿ–ದೃಷ್ಟಿಕೋಣಗಳನ್ನೊಳಗೊಂಡ ಅನುಭವದಲ್ಲಿಯೂ ಮೌಲಿಕತೆ ಅಡಕಗೊಂಡಿದೆ.

ಮೌಲಿಕತೆ ಎಂದರೇನು ? ಇದಕ್ಕಿಂತ ಅದು ಶ್ರೇಷ್ಠ, ಅದಕ್ಕಿಂತ ಇನ್ನೊಂದು ಶ್ರೇಷ್ಠ ಎಂಬ ತರ-ತಮಭಾವವೇ ಮೌಲಿಕತೆಯ ಮೂಲ. ಸಾಹಿತ್ಯಾನುಭವ ಉಳಿದ ಎಷ್ಟೋ ಜೀವನಾನುಭವಗಳಿಗಿಂತ ಶ್ರೇಷ್ಠವಾದುದು ಎಂದು ರಿಚರ್ಡ್ಸ್‌ನ ಮತ. ತನ್ನ ಮತದ ಸಮರ್ಥನೆಗೆ ಆತ ಕೊಡುವ ಕಾರಣಗಳೆಂದರೆ : ಲೇಖಕರು ಸಾಮಾನ್ಯರಿಗಿಂತ ಹೆಚ್ಚು ಸಂವೇದನಾಶೀಲರು, ಹೆಚ್ಚು ಬುದ್ಧಿವಂತರು, ಜೀವನದ ಸಂಭಾವ್ಯತೆಗಳನ್ನು ಹೆಚ್ಚು ಸ್ಪಷ್ಟವಾಗಿ ನೋಡಬಲ್ಲವರು, ತಮ್ಮ ಶ್ರೇಷ್ಠ ಅನುಭವ ಗಳನ್ನು ಹತೋಟಿಯಿಂದ, ಚಾಣಾಕ್ಷತೆಯಿಂದ, ಶಬ್ದಗಳಲ್ಲಿ ಹಿಡಿದಿಡುವ ಅನನ್ಯಸಾಧಾ ರಣವಾಧ ಶಕ್ತಿಯಿದ್ದವರು. ಇಂಥವರು ನಿರ್ಮಿಸುವ ಕಲಾಕೃತಿಗಳೆಂದರೆ ಜೀವನ ಮೌಲ್ಯಗಳ ಭಂಡಾರವೇ ಸೈ. ಒಂದು ಅನುಭವಕ್ಕಿಂತ ಇನ್ನೊಂದು ಶ್ರೇಷ್ಠ ಎಂದು ಅತ್ಯಂತ ಮೂರ್ತವಾಗಿ ನಮಗೆ ತೋರಿಸುವ ಶಕ್ತಿ ಕಲೆಗಳಿಗೆ ಮಾತ್ರ ಸಾಧ್ಯ. ಅಂತೇ ನೀತಿಶಾಸ್ತ್ರಕ್ಕೆ ಮೂಲ ಸಾಮಗ್ರಿ ನಮಗೆ ದೊರಕಿಸಬೇಕಾದರೆ ನಾವು ಕಲಾಕೃತಿಗಳಿಗೇ ಶರಣುಹೋಗಬೇಕು ಎಂಬುದು ರಿಚರ್ಡ್ಸ್‌ನ ವಾದ.

ಕಲಾಕೃತಿಗಳು ಸಂಸ್ಕೃತಿಯ ದೃಷ್ಟಿಯಿಂದ ಅತ್ಯಂತ ಮಹತ್ವದ ಸಂಗತಿಗಳೆಂದು ಸಮರ್ಥಿಸುವಲ್ಲಿ ರಿಚರ್ಡ್ಸ್, ಮಾಥ್ಯೂ ಆರ್ನಲ್ಡನ ಸಂಪೂರ್ಣ ಶಿಷ್ಯತ್ವವಹಿಸಿ ಕೊಂಡಂತಿದೆ. ವಿಜ್ಞಾನಯುಗದಲ್ಲಿ ಸಂಸ್ಕೃತಿಯನ್ನು, ಮೌಲ್ಯಗಳ ವ್ಯವಸ್ಥೆಯನ್ನು ನಾಶಗೊಳಿಸುವ ಬಲವಾದ ಶಕ್ತಿಗಳಿರುತ್ತವೆ; ಆ ಶಕ್ತಿಗಳಿಂದ ಮೌಲ್ಯಗಳನ್ನು, ಮೌಲ್ಯಗಳ ಭಂಡಾರವಾದ ಕಲೆಗಳನ್ನು ಕಾಪಾಡುವ ಕೆಲಸವನ್ನು ರಿಚರ್ಡ್ಸ್ ಅತ್ಯಂತ ಶ್ರದ್ಧೆಯಿಂದ ಮಾಡುತ್ತಾನೆ. ಮೂಲತಃ ರೊಮ್ಯಾಂಟಿಕ್ಕಾದ ಈ ಶ್ರದ್ಧೆಗೆ ವೈಜ್ಞಾ

ನಿಕವಾದಂಥ, ಶಾಸ್ತ್ರೀಯವಾದಂಥ ಒಂದು ಮುಖವಾಡ ತೊಡಿಸುವಲ್ಲಿ ರಿಚರ್ಡ್ಸ್ ಸಾಕಷ್ಟು ಯಶಸ್ವಿಯಾಗಿದ್ದಾನೆಂದೇ ಹೇಳಬೇಕು. ಅವನ ಯಶಸ್ಸಿನ ಒಂದು ಪ್ರಮುಖವಾದ ಲಕ್ಷಣವೆಂದರೆ ಸಾಹಿತ್ಯವಿಮರ್ಶೆಯನ್ನು ಹೆಚ್ಚು ಶಾಸ್ತ್ರೀಯವಾಗಿ ಪರಿವರ್ತಿಸಿದ್ದು ; ಹಾಗೂ ಸಾಹಿತ್ಯವಿಮರ್ಶೆಗೂ ಜೀವನಾನುಭವಕ್ಕೂ ತಪ್ಪಿಹೋಗುತ್ತಿದ್ದ ಸಂಬಂಧವನ್ನು ಮರಳಿ ಅತ್ಯಂತ ದೃಢಗೊಳಿಸಿದ್ದು.

೨

ಸಾಹಿತ್ಯ ಅಥವಾ ಕಲೆಯ ಮೌಲಿಕತೆಯ ಚರ್ಚೆಯನಂತರ ರಿಚರ್ಡ್ಸ್‌ನಿಗೆ ಮಹತ್ವವೆನಿಸುವ ಸಮಸ್ಯೆಯೆಂದರೆ ವಿಮರ್ಶಕನ ಸಮಸ್ಯೆ : ಒಂದು ಕಲಾಕೃತಿಗೆ ನಾವು ಪ್ರತಿಸ್ಪಂದಿಸುವಾಗ ನಮಗಾಗುವ ಅನುಭವದ ಸ್ವರೂಪವೇನು ? ಆ ಅನುಭವದ ಮೌಲ್ಯಮಾಪನವನ್ನು ಹೇಗೆ ಮಾಡುವರು ? ಒಂದು ಸಾಹಿತ್ಯಾನುಭವ ಮತ್ತೊಂದು ಸಾಹಿತ್ಯಾನುಭವಕ್ಕಿಂತ ಹೇಗೆ ಭಿನ್ನವಾಗಿದೆ ? ಈ ಕವಿತೆ ಆ ಕವಿತೆಗಿಂತ ಹೆಚ್ಚು ಶ್ರೇಷ್ಠ ಯಾಕೆ ? ಈ ಕವಿತೆಯ ಬಗ್ಗೆ ಇವರು ಹೇಳಿದ ಮಾತು ಅವರು ಹೇಳಿದ ಮಾತಿಗಿಂತ ಯಾಕೆ ಹೆಚ್ಚು ಗ್ರಾಹ್ಯ ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಕೊಡಲು ಸಹಾಯ ಮಾಡುವಂಥ ವಿಧಾನವನ್ನು ವಿಮರ್ಶಕನಾದವನು ನಿರ್ಮಿಸಿಕೊಳ್ಳಬೇಕಾಗುತ್ತದೆ. ರಿಚರ್ಡ್ಸ್‌ನ ಈ ವಿಧಾನಕ್ಕೇ ಮೌಲ್ಯನಿರ್ಣಯ ಸಿದ್ಧಾಂತವೆಂಬ ಹೆಸರು.

ಮೌಲ್ಯನಿರ್ಣಯಕ್ಕೆ ಬೇಕಾಗುವ ನಿಕಷವನ್ನು ರಿಚರ್ಡ್ಸ್ ಮಾನಸಶಾಸ್ತ್ರದಲ್ಲಿಯೇ ಶೋಧಿಸುತ್ತಾನೆ. ಯಾವುದರಿಂದ ಒಂದು ಪ್ರೇರಣೆ Impulse ಸಮಾಧಾನಗೊಳ್ಳುತ್ತದೆಯೋ ಅದು ಮೌಲಿಕವಾಗಿರುತ್ತದೆ. ಆದರೆ ಪ್ರೇರಣೆ-ಪ್ರೇರಣೆಗಳ, ಪ್ರವೃತ್ತಿ ಪ್ರವೃತ್ತಿಗಳ ಘರ್ಷಣೆಯುಂಟಾದರೆ ? ಒಂದು ಪ್ರವೃತ್ತಿಯ ತೃಪ್ತಿಗಾಗಿ ಅದರಷ್ಟೇ ಮಹತ್ವದ ಅಥವಾ ಅದಕ್ಕಿಂತ ಹೆಚ್ಚಿನ ಮಹತ್ವದ ಪ್ರವೃತ್ತಿಗಳ ತೃಪ್ತಿಗೆ ಅಡ್ಡಿಯಾಗದಂತೆ ನೋಡಿಕೊಳ್ಳುವದರಲ್ಲಿ ಮೂಲ್ಯವಿದೆ. 'ಮಹತ್ವದ', 'ಹೆಚ್ಚಿನ ಮಹತ್ವದ' ಎಂದರೇನು ? ದೈಹಿಕ ಇಚ್ಛೆಗಳು ಪ್ರಾಥಮಿಕ ; ಸಾಮಾಜಿಕ ಪ್ರವೃತ್ತಿಗಳು ದೈಹಿಕ ಇಚ್ಛೆಗಳಿಗಿಂತ ಹೆಚ್ಚು ಮಹತ್ವದವು ಎಂದು ನಾವು ಮಾನಸಶಾಸ್ತ್ರೀಯವಾಗಿ ನಮ್ಮ ಪ್ರವೃತ್ತಿಗಳಲ್ಲಿ-ಒಂದು ಕ್ರಮಬದ್ಧಶ್ರೇಣಿಯನ್ನು ನಿರ್ಮಿಸುವುದು ಸಾಧ್ಯ ಎಂದು ರಿಚರ್ಡ್ಸ್‌ನ ವಾದ. ಇದಕ್ಕೂ ಮುಂದೆ ಹೋಗಿ ಆತ ಹೇಳುವದೆಂದರೆ ಪ್ರವೃತ್ತಿಗಳ ಒಂದು ವ್ಯವಸ್ಥೆಗಿಂತ ಮತ್ತೊಂದು ವ್ಯವಸ್ಥೆ ಹೆಚ್ಚು ಹಿತಕರವಾಗಿರಲು ಸಾಧ್ಯ. ಆದರೆ ಅದನ್ನು ನಿರ್ಣಯಿಸುವ ನಿಕಷ ಯಾವುದು ? ಈ ಪ್ರಶ್ನೆಗೆ ಉತ್ತರ ಕೊಡುವಾಗ ರಿಚರ್ಡ್ಸ್‌ನು ತನ್ನ ಒಟ್ಟಂದಿನ ತಾತ್ವಿಕ ಭೂಮಿಕೆಯ, ತನ್ನ 'ಜೀವನ ದೃಷ್ಟಿ'ಯ ಚೌಕಟ್ಟಿಗೇ ಮೊರೆಹೋಗುತ್ತಾನೆ. ರಿಚರ್ಡ್ಸ್‌ನ ಕೇಂದ್ರ ಜೀವನ ದೃಷ್ಟಿಯೆಂದರೆ ವ್ಯಕ್ತಿನಿಷ್ಠವಾದ ಮಾನವತಾವಾದ. ವ್ಯಕ್ತಿ ಮುಖ್ಯ ; ಅವನ ಸ್ವಾತಂತ್ರ್ಯ ಮುಖ್ಯ; ಅವನ ಸರ್ವಾಂಗೀಣ ಬೆಳವಣಿಗೆ ಮುಖ್ಯ; ಅವನ ಎಲ್ಲ ಶಕ್ತಿಗಳಿಗೆ ಆದಷ್ಟು

ಹೆಚ್ಚು ಅವಕಾಶ ಕೊಡುವ ವ್ಯವಸ್ಥೆ ಶ್ರೇಷ್ಠ. ಈ ಮಾನವತಾವಾದದ ದೃಷ್ಟಿಯಿಂದಲೇ ರಿಚರ್ಡ್ಸ್ ಸಾಹಿತ್ಯದ ಮೌಲಿಕತೆಯನ್ನು ಅಳೆಯುತ್ತಾನೆ. ಸಾಹಿತ್ಯ ಅಥವಾ ಕಲೆಯೆಂದರೆ ಮನುಷ್ಯನ ಪ್ರವೃತ್ತಿಗಳನ್ನು, ಅವನ ಪ್ರೇರಣೆಗಳನ್ನು ಅವಿರತವಾಗಿ ಹೊಂದಿಸುವ, ಸಂಯೋಜಿಸುವ, ಅವುಗಳಲ್ಲಿ ಒಂದು ವ್ಯವಸ್ಥೆಯನ್ನು ನಿರ್ಮಿಸುವ ಕಾರ್ಯ ಮಾಡುತ್ತವೆ ಎಂದೇ ಅವುಗಳಿಗೆ ಅಷ್ಟೊಂದು ಮಹತ್ವವಿದೆ. ಒಂದು ವ್ಯವಸ್ಥೆಗಿಂತ ಇನ್ನೊಂದು ವ್ಯವಸ್ಥೆ ಯಾಕೆ ಶ್ರೇಷ್ಠ, ಹೇಗೆ ಶ್ರೇಷ್ಠ ಎಂದು ನಿರ್ಣಯಿಸುವ ಕಾರ್ಯವನ್ನು ವಿಮರ್ಶಕ ಸದೈವ ಮಾಡುತ್ತಿರುತ್ತಾನೆ. ಅಂತೇ ವಿಮರ್ಶಕನೆಂದರೆ, ರಿಚರ್ಡ್ಸನ ಪ್ರಕಾರ, ಮನಸ್ಸಿನ ಆರೋಗ್ಯವನ್ನು ಕಾಪಾಡುವ ವೈದ್ಯ ; ವಿಮರ್ಶಾಕಾರ್ಯವೆಂದರೆ ಜೀವನಮೂಲ್ಯಗಳ ತರ–ತಮ ಶ್ರೇಣಿಯನ್ನು ನಿರ್ಣಯಿಸುವ ನ್ಯಾಯಾಧೀಶನ ಕಾರ್ಯ.

ಒಂದು ಕಲಾಕೃತಿಯ ಮೌಲಿಕತೆ ಅದರ ಎಲ್ಲ ಅಂಗಾಂಗಳಲ್ಲಿ ಅಡಕಗೊಂಡಿರುತ್ತದೆ ಎಂದು ರಿಚರ್ಡ್ಸನ ವಾದ. ಆದ್ದರಿಂದ ಕಲಾಕೃತಿಯ ಎಲ್ಲ ಅಂಗಾಂಗಳಿಗೆ ಪ್ರತಿಸ್ಪಂದಿಸಿದಾಗಲೇ ಅದರಿಂದುಂಟಾಗುವ ಅನುಭವದಲ್ಲಿ ಮೂಲ್ಯಗಳಿರುತ್ತವೆ. ಈ ಅನುಭವದ ಸ್ವರೂಪವೇನು ? ಹಲವಾರು ಪ್ರವೃತ್ತಿಗಳ ಪ್ರಚೋದನೆ ಹಾಗೂ ಅವುಗಳಲ್ಲಿ ಒಂದು ರೀತಿಯ ಸಮತೋಲತೆ (equilibrium) ಯ ಸಾಧನೆ, ಒಟ್ಟಿನ ಮೇಲೆ ಹಲವಾರು ಪ್ರವೃತ್ತಿಗಳ ಅರ್ಥಪೂರ್ಣ ಸಂಯೋಜನೆ—ಇವು ಆ ಅನುಭವದ ಪ್ರಮುಖ ಘಟ್ಟಗಳು. ಮಾನಸಶಾಸ್ತ್ರೀಯವಾಗಿ ಈ ಘಟ್ಟಗಳನ್ನು ಸಂಖ್ಯಾತ್ಮಕವಾಗಿ ನಿರ್ಣಯಿಸುವುದು ಸಾಧ್ಯ ಎಂದು ರಿಚರ್ಡ್ಸನ ಮತ. ರಿಚರ್ಡ್ಸ್ ಹಲವಾರು ಕವಿತೆಗಳನ್ನು ವಿಶ್ಲೇಷಿಸಿ ತೋರಿಸುವಾಗ ಅನುಭವದ ಘಟಕಗಳನ್ನು ಸಂಖ್ಯಾತ್ಮಕವಾಗಿ ವಿಶ್ಲೇಷಿಸಿ ಅವುಗಳ ಸಮತೋಲದಲ್ಲಿ ಮೌಲಿಕತೆಯನ್ನು ಶೋಧಿಸುತ್ತಾನೆ. ಈ ದೃಷ್ಟಿಯಿಂದ. ದುಃಖಾಂತ ನಾಟಕದ ಶ್ರೇಷ್ಠತ್ವದ ಬಗ್ಗೆ ಚರ್ಚಿಸುವಾಗ ಆತ ಹೇಳುವದೆಂದರೆ, ದುಃಖಾಂತ ನಾಟಕ ನಿರ್ಮಿಸುವ ಅನುಭವ ಕ್ಷೇತ್ರದಲ್ಲಿ ಜೀವನದ 'ಅವಸ್ಥೆ'ಯ ಬಗ್ಗೆ, ಅದರ ಸಮಸ್ಯೆಗಳ ಬಗ್ಗೆ, ಅತ್ಯಂತ ಸ್ಪಷ್ಟವಾಗಿ, ಅತ್ಯಂತ ಸ್ವತಂತ್ರವಾಗಿ, ಅತ್ಯಂತ ಸಮತೋಲಬುದ್ಧಿಯಿಂದ ವಿಚಾರ ಮಾಡುವದು ಸಾಧ್ಯ–ಅಂತೇ ದುಃಖಾಂತ ನಾಟಕದ ಪ್ರಕಾರ ಶ್ರೇಷ್ಠ.

ವಿಜ್ಞಾನ ಕೊಡುವ ಸತ್ಯ ಬೇರೆ, ಕಲೆ ಕೊಡುವ ಮೌಲಿಕತೆ ಬೇರೆ. ಈ ತತ್ವದ ಮೇಲೇ ರಿಚರ್ಡ್ಸನ ಭಾಷಾಸಿದ್ಧಾಂತ ನಿಂತಿದೆ. ಭಾಷೆ ಎರಡು ರೀತಿಯಲ್ಲಿ ಕೆಲಸ ಮಾಡುತ್ತದೆ ಎಂದು ಆತನ ವಾದ—ಒಂದು: ಮಾಹಿತಿ ಒದಗಿಸುವ ಕೆಲಸ ; ಎರಡು; ಭಾವನೆಯನ್ನು ಜಾಗೃತಿಗೊಳಿಸುವ ಕಾರ್ಯ. ಮಾಹಿತಿ ಒದಗಿಸುವ ಕೆಲಸದ ಮೂಲಕ ಭಾಷೆಗೆ ವೈಜ್ಞಾನಿಕ ಉಪಯೋಗ ಪ್ರಾಪ್ತವಾಗುತ್ತದೆ; ಹಾಗೂ ಭಾವನಾನಿರ್ಮಾಣದ ಕೆಲಸದ ಮೂಲಕ ಭಾಷೆಗೆ ಭಾವನಾತ್ಮಕ ಉಪಯೋಗ ಪ್ರಾಪ್ತವಾಗುತ್ತದೆ. ಸಾಹಿತ್ಯ

ದಲ್ಲಿ ಭಾಷೆ ಹೆಚ್ಚಾಗಿ ಭಾವನಾತ್ಮಕವಾಗಿಯೇ ಉಪಯೋಗಿಸಲ್ಪಡುತ್ತದೆ — ಹಾಗೂ ಈ ಉಪಯೋಗದ ಮೂಲಕವೇ ಸಾಹಿತ್ಯ ಅನುಭವಕ್ಕೆ ಮೌಲಿಕತೆಯನ್ನೊದಗಿಸುತ್ತದೆ. ಆದ್ದರಿಂದ, ರಿಚರ್ಡ್ಸ್‌ನ ಪ್ರಕಾರ, ಭಾಷೆಯ ಭಾವನಾತ್ಮಕ ಧ್ವನ್ಯಾರ್ಥಕ್ಕೆ ಸ್ಪಂದಿಸಿದಾಗಲೇ ಸಾಹಿತ್ಯಕೃತಿಯ ಮೌಲಿಕತೆಯ ಸರ್ವಾಂಗೀಣ ಅನುಭವ ಉಂಟಾಗುತ್ತದೆ. ಅಂತೇ, ಸಾಹಿತ್ಯಕೃತಿಯನ್ನು ಅತ್ಯಂತ ಲಕ್ಷ್ಯಗೊಟ್ಟು ಸಂವೇದನಾಶೀಲ ಮನಸ್ಸಿನಿಂದ ಓದುವದನ್ನು ಕಲಿಯಬೇಕಾಗುತ್ತದೆ ; ಹಾಗೆ ಓದಿ ಕೂಲಂಕಷವಾಗಿ ವಿಶ್ಲೇಷಿಸಿ ನೋಡಿದಾಗಲೇ ಅದರ ಮೌಲಿಕತೆಯ ಬಗ್ಗೆ ವಿಶದವಾಗಿ, ವಿಮರ್ಶಕವಾಗಿ ಮಾತನಾಡಲು ಸಾಧ್ಯ. ಈ ವಿಚಾರವೇ ಮುಂದೆ ನವ್ಯ ವಿಮರ್ಶೆಯ ತಳಹದಿಯಾಯಿತೆಂದು ಹೇಳಲಡ್ಡಿಯಿಲ್ಲ.

೩

## ರಿಚರ್ಡ್ಸ್‌ನ ಮೌಲ್ಯನಿರ್ಣಯ ಸಿದ್ಧಾಂತದ ಲಾಭಗಳು :

೧. ಕಲೆ ಜೀವನದ ಸಂಸ್ಕೃತಿಯ ಅವಿಭಾಜ್ಯ ಅಂಗವೆಂದು ಪುನಃ ನಿಶ್ಚಿತಗೊಳಿಸಿದಂತಾಯಿತು.

೨. ಕಲಾನುಭವಕ್ಕೂ ಜೀವನಾನುಭವಕ್ಕೂ ಭೇದವಿಲ್ಲ ; ಕಲಾನುಭವ ಹೆಚ್ಚು ಸುಸಂಘಟಿತವಾದ ಜೀವನಾನುಭವ—ಎಂದು ಖಚಿತಗೊಳಿಸಿದಂತಾಯಿತು.

೩. ಕಲಾವಿಮರ್ಶೆಯಲ್ಲಿ ಜೀವನ ಮೂಲ್ಯಗಳೇ ಅಂತಿಮ ನಿಕಷಗಳೆಂದು ಒತ್ತಿ ಹೇಳಿದಂತಾಯಿತು.

೪. ಕಲಾಕೃತಿಯೆಂದರೆ ಒಂದು ಪ್ರತ್ಯಕ್ಷ ಅನುಭವ ಎಂದು ಹೇಳಿ ಈ ಅನುಭವದ ಮೌಲಿಕತೆಯನ್ನು ದೃಢಪಡಿಸಿದಂತಾಯಿತು.

೫. ಜೀವನ ಮೂಲ್ಯಗಳ ಅನ್ವೇಷಣೆಗೆ ಕಲೆಗಳೇ ಅತ್ಯಂತ ಮಹತ್ವದ ಮಾಧ್ಯಮ ಎಂದೂ ಸೂಚಿಸಿದಂತಾಯಿತು.

## ರಿಚರ್ಡ್ಸ್‌ನ ಮೌಲ್ಯನಿರ್ಣಯ ಸಿದ್ಧಾಂತದ ದೌರ್ಬಲ್ಯಗಳು :

೧. ಕಲಾಕೃತಿಗಳಿಗೂ ಪರಂಪರೆಗೂ, ಸಾಮಾಜಿಕ–ಐತಿಹಾಸಿಕ ಪ್ರಕ್ರಿಯೆಗೂ ನಿಕಟವಾದ ಸಂಬಂಧವಿರುತ್ತದೆ ಎಂಬ ಸತ್ಯಕ್ಕೆ ರಿಚರ್ಡ್ಸ್‌ನ ಸಿದ್ಧಾಂತದಲ್ಲಿ ಸ್ಥಾನವಿಲ್ಲ.

೨. ಜೀವನ ಮೂಲ್ಯಗಳ ಹಾಗೂ ನೈತಿಕ ಮೂಲ್ಯಗಳ ಮಾತು ಸಾಹಿತ್ಯಕಷ್ಟೇ ಅನ್ವಯಿಸುವದು. ಉಳಿದ, ಸಂಗೀತ, ನೃತ್ಯದಂಥ ಕಲೆಗಳಿಗೆ ಅಷ್ಟು ಅನ್ವಯಿಸುವದಿಲ್ಲ.

೩. ಕಲಾಕೃತಿಗಳ ಸಾಂಕೇತಿಕತೆಯ ವಿಷಯವನ್ನಾಗಲಿ, ಅವುಗಳಲ್ಲಿ ಅಡಕಗೊಂಡ ಅಭಿವ್ಯಕ್ತಿಯಲ್ಲಿಯ ವೈಯಕ್ತಿಕ ಗೂಢತೆ ಅಥವಾ ಪೌರಾಣಿಕ ಗಹನತೆಯ ವಿಷಯವನ್ನಾಗಲಿ ರಿಚರ್ಡ್ಸ್ ಮುಟ್ಟುವದಿಲ್ಲ.

೪. ರಿಚರ್ಡ್ಸ್‌ನು ಕೊಡುವಂಥ ಸಾಹಿತ್ಯಾನುಭವದ ಮಾನಸಶಾಸ್ತ್ರೀಯ ವಿಶ್ಲೇಷಣೆ ಈಗ ಯಾವ ಮಾನಸ ಶಾಸ್ತ್ರಜ್ಞನಿಗೂ ಸಮ್ಮತವಿಲ್ಲ. ಪ್ರೇರಣೆ-ತೃಪ್ತಿ-ಸಮತೋಲಭಾವ ಇತ್ಯಾದಿಗಳ ಕಲ್ಪನೆ ಊಹಾಪೋಹದ ಮಾತೇ ಸರಿ.

೫. ಕಲೆಗೆ ಬರೇ ಭಾವನಾತ್ಮಕ ಮೂಲ್ಯವನ್ನು ಕೊಟ್ಟು, ಸತ್ಯ ಹಾಗೂ ಜ್ಞಾನದ ಕ್ಷೇತ್ರದಿಂದ ಅದನ್ನು ಹೊರಗಿಟ್ಟು, ಅದಕ್ಕೆ ತೀರ ಸೀಮಿತವಾದ ಅರ್ಥಪೂರ್ಣತೆ ಕೊಟ್ಟು ರಿಚರ್ಡ್ಸ್ ಕಲೆಯ ಮಹತ್ವವನ್ನು ಒಂದು ರೀತಿಯಿಂದ ಕಡಿಮೆಮಾಡಿದ್ದಾನೆಂದು ಹೇಳಬಹುದು.

ಒಟ್ಟಿನ ಮೇಲೆ, ಈ ಶತಮಾನದಲ್ಲಿ ಅತ್ಯಂತ ಸೂಕ್ಷ್ಮವಾಗಿ, ಆದಷ್ಟು ಶಾಸ್ತ್ರೀಯವಾಗಿ ಬೆಳೆಯುತ್ತ ನಡೆದ ಸೌಂದರ್ಯಮೀಮಾಂಸೆಯ ಚರಿತ್ರೆಯಲ್ಲಿ ಆಯ್. ಎ. ರಿಚರ್ಡ್ಸ್‌ನ ಸ್ಥಾನ ಅತ್ಯಂತ ಮಹತ್ವದ್ದಾಗಿದೆಯೆಂದು ನಿಸ್ಸಂಶಯವಾಗಿ ಹೇಳಬಹುದು.

# ಕಲೆ ಮತ್ತು ಅನುಕರಣೆ

ಪಿ. ವ್ಹಿ. ಮಲ್ಲಾಪುರ

ಪ್ರತಿಭಾವಂತನ ಅನುಭವ, ಆನಂದಗಳು ಒಂದು ಮಾಧ್ಯಮದ ಮೂಲಕ ಸುಂದರವಾಗಿ ಅಭಿವ್ಯಕ್ತಗೊಂಡಾಗ ಅದು ಕಲೆ ಎನ್ನಿಸಿಕೊಳ್ಳುತ್ತದೆ. ಭಾವ ತುಂಬಿ ಬಂದು ಆನಂದಾನುಭದ ಬಿಡುಗಡೆಗೆ ಹಾತೊರೆದಾಗ ಶಿಲ್ಪಿ ಕಲ್ಲಿನ ಮೂಲಕ, ಸಂಗೀತಕಾರ ಸ್ವರ ತಾನಗಳ ಮೂಲಕ, ಚಿತ್ರಕಾರ ಬಣ್ಣ ಕುಂಚ. ಕಾಗದಗಳ ಮೂಲಕ, ಕವಿ ಶಬ್ದಗಳ ಮೂಲಕ ಆನಂದವನ್ನು ಬಿಡುಗಡೆ ಮಾಡುತ್ತಾರೆ. ಹೀಗೆ ವಿವಿಧ ಮಾಧ್ಯಮಗಳ ಮೂಲಕ ವ್ಯಕ್ತವಾಗಿ, ಕಲೆ, ಸಾಹಿತ್ಯ ಇವು ಬೆಳೆಯುತ್ತ ಬಂದು ಮಾನವ ಜನಾಂಗದ ಒಂದು ಅವಿಭಾಜ್ಯ ಅಂಗವಾಗಿ, ಅತ್ಯಮೂಲ ಸಂಪತ್ತಾಗಿ, ರಸಾನಂದದ ಖಣಿಯಾಗಿ ನಿಂತಿರುವುದರ ಇತಿಹಾಸ ರೋಮಾಂಚಕಾರಿಯಾದುದಾಗಿದೆ. ಕಲಾಸೃಷ್ಟಿಯ ತರುವಾಯದಲ್ಲಿ ಅದನ್ನು ಕುರಿತಾದ ತತ್ತ್ವ ಸಿದ್ಧಾಂತ, ಕಾವ್ಯಮೀಮಾಂಸೆಗಳೂ ರೂಪುಗೊಂಡು ಬೆಳೆಯುತ್ತ ಬಂದಿವೆ. ಒಂದರ್ಥದಲ್ಲಿ ಇವೆರಡೂ ಜೊತೆ ಜೊತೆಯಲ್ಲಿಯೆ ಹುಟ್ಟಿ ಬೆಳೆಯುತ್ತ ಬಂದಿರುವ ಶಕ್ತಿವಿಶೇಷಗಳು ಎಂದೂ ಹೇಳಬಹುದು. ಏಕೆಂದರೆ ಕಾವ್ಯವು ಜೀವನದ ವಿಮರ್ಶೆಯಾಗಿಯೇ ರೂಪ ತಾಳುತ್ತದೆ ಎಂದು ಹೇಳಿದವರಿದ್ದಾರೆ. ಎಂದಾಗ ಕಾವ್ಯದ ಹುಟ್ಟಿನೊಡನೆ ಅದರ ಒಡಲಲ್ಲಿಯೇ ವಿಮರ್ಶೆ ಇದ್ದೇ ಇದೆ ಎಂದು ಹೇಳಬೇಕಾಗುತ್ತದೆ. "ಇವು ಮನಸ್ಸಿನ ಎರಡು ಶಕ್ತಿಗಳು ; ಒಂದು ಗ್ರಹಿಕೆ, ಸಂವೇದನೆ, ಸಂಸ್ಮರಣೆ, ಅಂತಃಸ್ಫುರಣೆ—ಈ ದಿಕ್ಕಿನಲ್ಲಿ ಬೆಳೆಯುತ್ತದೆ. ಇನ್ನೊಂದು, ವಿಭಜನೆ, ವಿಶ್ಲೇಷಣೆ, ಪರಿಶೀಲನೆ, ಸಂಯೋಜನೆ—ಈ ಮಾರ್ಗದಲ್ಲಿ ಮುನ್ನಡೆಯುತ್ತದೆ. ಇದರಲ್ಲಿ ಒಂದು ಭಾವನಾ ಪ್ರಧಾನ, ಇನ್ನೊಂದು ಬುದ್ಧಿಪ್ರಧಾನ. ಆದರೆ ಇವೆರಡೂ ಬೇರೆ ಬೇರೆಯಲ್ಲ ಪರಸ್ಪರ ಅವಲಂಬಿಗಳು"[1]

ಕಲೆಯ ಹುಟ್ಟು, ಸ್ವರೂಪ, ವೈವಿಧ್ಯ, ಪ್ರಯೋಜನ ಇತ್ಯಾದಿಗಳನ್ನು ಕುರಿತು ಚಿಂತನೆ ಮಾಡಿದವರಲ್ಲಿ ಅತ್ಯಂತ ಪ್ರಾಚೀನರೆಂದರೆ ಗ್ರೀಕರು. ಮಹಾಕವಿ

---

1. ಡಾ॥ ಎಚ್. ತಿಪ್ಪೇರುದ್ರಸ್ವಾಮಿ—ಸಾಹಿತ್ಯ ವಿಮರ್ಶೆಯ ಮೂಲ ತತ್ವಗಳು

ಹೋಮರ್ (ಕ್ರಿ. ಪೂ. ಸು. ೯೦೦) ಹಾಗೂ ಹೆಸಿಯೊಡ್ ಇವರ ಕೃತಿಗಳಲ್ಲಿಯೆ ಕಾವ್ಯವು ಸ್ಫೂರ್ತಿಯಿಂದ ಜನಿಸುತ್ತದೆ. ಕವಿಗೆ ಈ ಸ್ಫೂರ್ತಿಯನ್ನು ನೀಡುವವಳು ಕಾವ್ಯದೇವತೆ. ಅವಳ ಅನುಗ್ರಹ ಕಾವ್ಯನಿರ್ಮಾಣಕ್ಕೆ ಹಾದಿ. ಒಂದು ಬಗೆಯ ಮಾಯೆಯೋ ಎಂಬಂತೆ ಕಾವ್ಯ ಸಂತೋಷವನ್ನು ನೀಡುತ್ತದೆ, ಎಂಬರ್ಥದ ಮಾತುಗಳು ಸಿಕ್ಕುತ್ತವೆ. ಆದರೂ ಕ್ರಿ. ಪೂ. ಐದು ಹಾಗೂ ನಾಲ್ಕನೆಯ ಶತಮಾನಗಳಲ್ಲಿ ಬಾಳಿದ, ಸುಪ್ರಸಿದ್ಧ ದಾರ್ಶನಿಕರಾದ ಪ್ಲೇಟೋ, ಅರಿಸ್ಟಾಟಲ್ ಇವರ ಬರವಣಿಗೆಗಳಲ್ಲಿ ಕಲೆ, ಕಾವ್ಯಗಳನ್ನು ಕುರಿತಾದ ಮೀಮಾಂಸೆ ಒಂದು ನಿರ್ದಿಷ್ಟ ರೂಪ ತಾಳಿರುವುದನ್ನು ಕಾಣುತ್ತೇವೆ. ಕಲೆ. ಕಾವ್ಯಗಳ ಪರಿಶೀಲನೆ, ವಿಮರ್ಶೆ ಮಾಡುವಾಗ 'ಸತ್ಯ' 'ಸತ್ಯಲೋಕ' ಪ್ರಕೃತಿ, ಕಲಾಕೃತಿ, ಅನುಕರಣೆ (Imitation), ನಕಲು (copy), ಕಲ್ಪನೆ (Imagination), ಅಂತರ್ ದೃಷ್ಟಿ (Intuition), ಪ್ರತಿಭೆ, ಸೌಂದರ್ಯ ಮುಂತಾದ ಶಬ್ದಗಳ ಬಳಕೆ, ಅವುಗಳಿಗೆ ಕೊಟ್ಟಿರುವ ಅರ್ಥವ್ಯಾಪ್ತಿ ಮಹತ್ವದ ಪಾತ್ರವಹಿಸುತ್ತವೆ. ಇಂಥ ಶಬ್ದಗಳ ವಿವೇಚನೆ, ವಿವರಣೆಗಳ ಪರಿಧಿಯಲ್ಲಿಯೆ ಕಲಾವಿಮರ್ಶೆ, ಕಾವ್ಯಮೀಮಾಂಸೆ ರೂಪುಗೊಂಡಿರುವುದನ್ನೂ ನಾವು ಕಾಣುತ್ತೇವೆ.

"ಅನುಕರಣೆ ಎಲ್ಲ ಕಲಾಕ್ರಿಯೆಯ ಮುಖ್ಯ ಲಕ್ಷಣ ಎಂಬ ಕಲ್ಪನೆಯನ್ನು ಮೊತ್ತ ಮೊದಲ ಬಾರಿಗೆ ಹೇಳಿದವ ಪ್ಲೇಟೋ[2]". ಈ ಜಗತ್ತು 'ಸತ್ಯದ'ದ ತೋರಿಕೆಯಾಗಿದೆ ಈ ತೋರಿಕೆಯನ್ನು ಅನುಕರಣೆಮಾಡಿ ಕಲಾಕಾರನು ತನ್ನ ಕಲೆಯನ್ನು ನಿರ್ಮಿಸುತ್ತಾನೆ ಎಂಬುದು ಪ್ಲೇಟೋನ ಸ್ಪಷ್ಟ ಅಭಿಪ್ರಾಯ. "The artist, he finds, is concerned with appearance only or rather the appearance of appearance"[3] ಎನ್ನುವಲ್ಲಿ ಕಲಾಕೃತಿ ಹಾಗೂ ಹೊರ ಜಗತ್ತಿನ ವಸ್ತುವಿಚಾರಗಳ ನಡುವೆ ಸಂಬಂಧವಿರುವುದನ್ನು ಪ್ಲೇಟೋ ಸೂಚಿಸುವುದನ್ನು ನಾವು ಗಮನಿಸಬೇಕು. ಇಲ್ಲಿಯೇ ಅವನು ಈ ತೋರಿಕೆಯ ಪ್ರಪಂಚದ ಆಚೆಗೆ ದೇವನ ಸತ್ಯ, ನಿತ್ಯ ಲೋಕವೊಂದಿದೆ ಎಂಬುದನ್ನೂ ಹೇಳುತ್ತಾನೆ. 'ಈ ಸಂಬಂಧದ ಮೂಲ ಲಕ್ಷಣದತ್ತ ಗಮನಸೆಳೆದದ್ದು ಪ್ಲೇಟೋನ ಹೆಚ್ಚಳ'[4].

ಕಲೆಯ ಸ್ವರೂಪ ಹಾಗೂ ಅದರ ಪರಿಣಾಮಗಳನ್ನು ಕುರಿತು ಹೇಳಿರುವ ಪ್ಲೇಟೋನ ವಿಚಾರಗಳನ್ನು ಪರಿಶೀಲಿಸುವುದು ಈಗ ಮುಖ್ಯವಾದದ್ದು. ಪರಿಪೂರ್ಣವಾದ, ಆದರ್ಶಮಯವಾದ ಸೌಂದರ್ಯವೇ ಕಲೆ. ಅದು ಪಂಚೇಂದ್ರಿಯಗಳಿಂದ ಗ್ರಹಿಸುವ ಈ ಪ್ರಪಂಚದಾಚೆಗಿನ 'ಸತ್ಯಲೋಕ'ದಲ್ಲಿಯ ದೈವಿಕ ಮಾತೃಕೆ ಅಥವಾ 'ಪೂರ್ಣಮಾದರಿ'. ಈ ಜಗತ್ತು ಆ 'ಸತ್ಯಲೋಕ'ದ ತೋರಿಕೆ, ಪ್ರತಿಛಾಯೆ.

---

2. ವಿ. ಎಂ. ಇನಾಮದಾರ—ಪಾಶ್ಚಾತ್ಯ ವಿಮರ್ಶೆಯ ಪ್ರಾಚೀನ ಪರಂಪರೆ,
3. R. A. Scott James–The making of Literature. Page 40
4. ವಿ. ಎಂ. ಇನಾಮದಾರ—ಪಾ. ವಿ. ಪ್ರಾ ಪರಂಪರೆ,

ಇಲ್ಲಿಯ ಸೌಂದರ್ಯವೆಲ್ಲ ಅಪೂರ್ಣ. ಈ ಅಪೂರ್ಣ ತೋರಿಕೆಯನ್ನು ಅನುಕರಣ ಮಾಡಿ ಕಲಾಕಾರನು ತನ್ನ ಕಲೆಯನ್ನು ನಿರ್ಮಿಸುತ್ತಾನೆ. ಬಡಗಿ ಮಾಡುವ ಕುರ್ಚಿ ಒಂದು ಅನುಕರಣೆ ಅಥವಾ ತೋರಿಕೆ. ಅದು ಸತ್ಯವಲ್ಲ. ಏಕೆಂದರೆ 'ಸತ್ಯ' ಇರುವುದೊಂದೇ. ಬಡಗಿಯು 'ಸತ್ಯ'ದ ಅನುಕರಣೆಗಿಂತ ಹೆಚ್ಚಿನದೇನನ್ನೂ ಮಾಡಲಾರ. ಈ ಕುರ್ಚಿಯನ್ನು ಅನುಕರಿಸಿ ಚಿತ್ರಕಾರನು ಇನ್ನೊಂದು 'ಅನುಕರಣೆ'ಯನ್ನು ತಯಾರಿಸುತ್ತಾನೆ. ಕವಿಯೂ ಮಾಡುವುದು ಇದನ್ನೆ. "He too creates only a copy of copy. His subject and method are false."[5] ಕಲೆ, ಸಾಹಿತ್ಯ ಇವು ಏನಿದ್ದರೂ 'ಮೂಲಸತ್ಯ'ದ ಅನುಕರಣೆಗಳು. ಅದರಿಂದ ಎರಡು ಬಾರಿ ಹಿಂದೆಗೆದು ಬಂದವುಗಳು. ಕಾರಣ ಕಾವ್ಯದ ಮೂಲಕ ಸತ್ಯವನ್ನು ತಿಳಿಯಲಾಗುವುದಿಲ್ಲ. ಮಾತ್ರವಲ್ಲದೆ ಕಲೆ, ಸಾಹಿತ್ಯಗಳು ಮಾನಸಿಕವಾಗಿ ದುಷ್ಪರಿಣಾಮವನ್ನುಂಟುಮಾಡುತ್ತವೆ; ಕವಿಯು, ವ್ಯಕ್ತಿಯ ವಿವೇಚನಾಶಕ್ತಿ (Reason) ಗೆ ಹಿತವನ್ನುಂಟುಮಾಡದ ಭಾವನೆಗಳನ್ನು ಕೆರಳಿಸುವುದಕ್ಕೆ ಕಾರಣನಾಗುತ್ತಾನೆ; ಇದರಿಂದ ವ್ಯಕ್ತಿಯ ಶೀಲಕ್ಕೆ ರಾಷ್ಟ್ರದ ಕ್ಷೇಮ, ಘನತೆಗಳಿಗೆ ಆಘಾತವೊದಗುವುದು; ಕಾರಣ ಕವಿಗಳನ್ನು, ಕಾವ್ಯವನ್ನು ಆದರ್ಶರಾಜ್ಯದಿಂದ ಹೊರದೂಡಬೇಕು. ಹೀಗೆ ಹೇಳಿದ ಪ್ಲೇಟೋ ತನ್ನ ಸಮರ್ಥನೆಗಾಗಿ ನಿಡಿದಾದ ವಿವರಣೆಯನ್ನೇ ನೀಡುತ್ತಾನೆ. ತತ್ವಜ್ಞಾನಿಯು ನಿಜವಾದ 'ಸತ್ಯ'ದರ್ಶನವನ್ನು ನಮಗೆ ನೀಡುತ್ತಾನೆ. ಅವನು ದಿವ್ಯಸತ್ಯದ ಕಡೆಗೆ ನಮ್ಮನ್ನು ಕರೆದೊಯ್ದರೆ ಕವಿಯು ಆ 'ದಿವ್ಯಸತ್ಯ'ದಿಂದ ಎರಡು ಬಾರಿ ದೂರಸರಿದು ಬಂದ ಪ್ರಪಂಚವನ್ನು ನಮಗೆ ನೀಡುತ್ತಾನೆ. ಇದು ತ್ಯಾಜ್ಯ ಎಂದು ಹೇಳಿ ತತ್ವಜ್ಞಾನಕ್ಕೆ ಅಡಿಯಾಳಾಗಿ ಕಾವ್ಯ, ಕಲೆಗಳು ಬರಲಿ ಎಂದು ಆಶಿಸುತ್ತಾನೆ. ಈ ಪ್ರಪಂಚದಾಚೆಗೆ "ನಿತ್ಯ ಸತ್ಯಗಳ ಆದರ್ಶಪ್ರಪಂಚವೊಂದಿದೆ, ಎಂಬ ಕಲ್ಪನೆಯೂ ಪ್ಲೇಟೋನಿಗಿಂತ ಮೊದಲು ಪ್ರಚಾರವಲ್ಲಿರಲಿಲ್ಲ. ಇದನ್ನು ಮೊತ್ತಮೊದಲು ಪ್ರತಿಪಾದಿಸಿದವನು ಪ್ಲೇಟೋ"[6]. ಈ ಬಗ್ಗೆ ಪ್ಲೇಟೋನನ್ನು ನಾವು ಅಭಿನಂದಿಸಬೇಕು. ಅವನ ತತ್ವಮತಿಯನ್ನು ಕೊಂಡಾಡಬೇಕು. ಆದರೆ ತನ್ನ ಸತ್ಯಾರಾಧನೆ, ಶೀಲಸಂವರ್ಧನೆ, ಆದರ್ಶರಾಜ್ಯ ನಿರ್ಮಾಣದ ಭರದಲ್ಲಿ ಕಲಾಸೌಂದರ್ಯವನ್ನು ಬಲಿಗೊಟ್ಟನಿಂತ ಅವನ ಮನೋಧರ್ಮವನ್ನು ಮಾತ್ರ ಒಪ್ಪಲಾಗುವುದಿಲ್ಲ. ಶ್ರೀಮಂತ ಕಾವ್ಯಾನುಭೂತಿ, ಹೋಮರನ ಬಗ್ಗೆ ಅಪಾರ ಗೌರವ ಹಾಗೂ ತನ್ನ ಬರೆವಣಿಗೆಯಲ್ಲಿ ಕವಿಗಳ ಶಕ್ತಿವಂತ ಭಾಷೆಯನ್ನು ಬಳಸುವ ತೀವ್ರಾಸಕ್ತಿ ಹೊಂದಿರುವ ಪ್ಲೇಟೋ ಹೀಗೆ ಕವಿ, ಕಾವ್ಯಗಳನ್ನು ಧಿಕ್ಕರಿಸಿರುವುದು ಮಹದಾಶ್ಚರ್ಯ. ಪ್ಲೇಟೋ

---

5. R. A. Scott–James–The Making of Literature P. 41
6. ಸೌಂದರ್ಯ ಮತ್ತು ಕಲೆ—ಡಾ॥ ಕೆ. ಬಿ. ರಾಮಕೃಷ್ಣರಾವ್

ನಂತಹ ತತ್ವಜ್ಞಾನಿಗಳು ತಮ್ಮ ತತ್ವಜಿಜ್ಞಾಸೆಯ ಕ್ಷೇತ್ರದಲ್ಲಿ, ಕಲೆ, ಕಾವ್ಯಗಳಿಗೆ ಗೌಣಸ್ಥಾನವನ್ನೇ ಒದಗಿಸಿದ್ದಾರೆ : ತತ್ವಶಾಸ್ತ್ರದ ಅಡಿಯಾಳಾಗಿಯೆ ಅವನ್ನು ಕಂಡು ಸ್ವತಂತ್ರಸ್ಥಾನವನ್ನೇ ಇದಕ್ಕೆ ನೀಡದವರಾಗಿದ್ದಾರೆ. "ಪ್ಲೇಟೋನಿಂದ ಪ್ರಾರಂಭವಾಗಿ ಇಂದಿನವರೆಗೆ ನೋಡಿದರೂ ಈ ವೈಪರೀತ್ಯ ನಮಗೆ ಕಂಡುಬರುತ್ತದೆ. ತತ್ವ ಶಾಸ್ತ್ರಜ್ಞರ ಕನಸುಗಳ ತಿನಿಸಾಗಿ ಸೌಂದರ್ಯಶಾಸ್ತ್ರವು ಸಿಕ್ಕಿಬಿದ್ದಷ್ಟು ಮತ್ತಾವ ಶಾಸ್ತ್ರವೂ ಸಿಕ್ಕಿಬೀಳಲಿಲ್ಲ"[7] ಎಂದು ಟಾಲ್‌ಸ್ಟಾಯ್ ಹೇಳಿದ್ದಾನೆ. "ಮಾನವ ವಿಚಾರಗಳ ಚರಿತ್ರೆಯಲ್ಲಿ ಕಲೆಯ ಇಂಥ ಘನವಾದ ನಿರಾಕರಣೆ ಇನ್ನೊಂದಿಲ್ಲ." ಇದು ಗಂಭೀರ ಆಪಾದನೆ ಎಂದು ಹಿರಿಯ ವಿಮರ್ಶಕ ಕ್ರೋಚೆ ಅಭಿಪ್ರಾಯ ಪಡುತ್ತಾನೆ. ಹೀಗೆ ಕಲೆಯನ್ನು ಕುರಿತು ಪ್ಲೇಟೋ ಹೇಳಿರುವ ಅಭಿಪ್ರಾಯಗಳು ಶತಮಾನಗಳುರುಳಿದಂತೆ ಅತ್ಯಂತ ತೀಕ್ಷ್ಣ ವಿಶ್ಲೇಷಣೆಗೆ ಒಳಗಾಗಿವೆ : ಇದಕ್ಕೆ ಪರ ಮತ್ತು ವಿರುದ್ಧ ವಿಚಾರ ಪಂಥಗಳೂ ಹುಟ್ಟಿಕೊಂಡಿವೆ : ಸಮನ್ವಯ ಸ್ವರೂಪವನ್ನೂ ಅವನ ಪ್ರತಿಪಾದನೆ ಯಲ್ಲಿ ಕಂಡವರೂ ಇದ್ದಾರೆ.

ಕಲೆ ಹುಟ್ಟುವುದು ಅನುಕರಣೆಯ ಮೂಲಕ ಎಂಬುದನ್ನು ಒಂದು ಹಂತದ ವರೆಗೆ ಒಪ್ಪಿಕೊಳ್ಳಬಹುದು. ಆದರೆ ಅನುಕರಣೆ ಯಾವ ನಿಟ್ಟಿನಲ್ಲಿ ಮುಂದುವರಿದು ಕಲೆಯನ್ನು ಸೃಷ್ಟಿಸುತ್ತದೆ. ಪ್ರಪಂಚಕ್ಕೂ ಪ್ರತಿಕೃತಿಗೂ ಇರುವ ಅಂತರವೇನು ? ಮೂಲಸತ್ಯಕ್ಕೂ ಪ್ರಪಂಚಕ್ಕೂ, ಮತ್ತು ಪ್ರತಿಕೃತಿ ಅಥವಾ ಕಲಾಕೃತಿಗೂ ಇರುವ ಸಂಬಂಧ ಯಾವ ಮಾದರಿಯದು ? ಈ ಅಂಶಗಳನ್ನು ಗಮನವಿಟ್ಟು ವಿಶ್ಲೇಷಿಸದೆ ಕಲೆ ಅನುಕರಣೆ, ಅದು ಸತ್ಯವಲ್ಲ, ಅದು ವ್ಯಕ್ತಿಯ ಶೀಲವನ್ನು ಹಾಳುಗೆಡಹಿ ಬಿಡುತ್ತದೆ ಎಂದು ಆಪಾದಿಸುವುದು ತಪ್ಪಾಗುತ್ತದೆ. ಅರಿಸ್ಟಾಟಲ್‌ನಿಂದ ಮೊದಲು ಮಾಡಿಕೊಂಡು ಬಹುತೇಕ ಸಾಹಿತ್ಯ ವಿಮರ್ಶಕರು ಕಾವ್ಯವನ್ನು (Imitation) ಅನುಕರಣೆ ಎಂದು ಭಾವಿಸುತ್ತಾರೆ. "ಪಾಶ್ಚಾತ್ಯ ವಿಮರ್ಶೆಯ ಇತಿಹಾಸವನ್ನು ಗಮನಿಸಿದರೆ ಯಾವುದನ್ನು Imagination ಎಂದು ಕರೆಯುತ್ತೇವೆಯೋ ಅಂಥ ಒಂದು ಸೃಷ್ಟಿಶೀಲ ವಾದ ಶಕ್ತಿ ಕವಿಗೆ ಉಂಟೆನ್ನುವ ವಿಚಾರವೇ ಹದಿನೇಳನೆಯ ಶತಮಾನದ ತನಕ ಖಚಿತ ವಾಗಿರಲಿಲ್ಲ...ಹದಿನೆಂಟನೆಯ ಶತಮಾನದ ಹೊತ್ತಿಗೆ, ಕಾವ್ಯ ಕೇವಲ ಭಾಷೆಯಲ್ಲಿ ನಡೆದ ಅನುಕರಣವಲ್ಲ, ಅದೊಂದು ಕಲ್ಪನಾಸೃಷ್ಟಿ ಎನ್ನುವ ಸಿದ್ಧಾಂತ ರೂಪಿತ ವಾಯಿತು"[8]. ಪ್ಲೇಟೋನ ಅನುಕರಣೆಯ ಸಿದ್ಧಾಂತವನ್ನು ಒಪ್ಪುವುದಾದರೆ 'ಅನುಕರಣೆ' ಮಾಡುವ ಕವಿಗಳಾಗಲಿ, ಕಲಾಕೃತಿಯನ್ನು ಕಂಡು, ಓದಿ ಆನಂದಿಸುವ ವಾಚಕರಾಗಲಿ ಸ್ವರ್ಗೀಯ ಸೌಂದರ್ಯವನ್ನು ಅನುಭವಿಸಲಾರರೆಂದೇ ಹೇಳಬೇಕಾಗು

---

7. ಸೌಂದರ್ಯ ಮತ್ತು ಕಲೆ—ಡಾ॥ ಕೆ. ಬಿ. ರಾಮಕೃಷ್ಣ ರಾವ್
8. ವಿಮರ್ಶೆಯ ಪೂರ್ವ-ಪಶ್ಚಿಮ—ಡಾ॥ ಜಿ. ಎಸ್. ಶಿವರುದ್ರಪ್ಪ

ತ್ತದೆ ಮತ್ತು ಈ ಪ್ರಕೃತಿ ಅಥವಾ ಪ್ರಪಂಚದ ನಿರ್ಮಾಣ ದೇವಶಕ್ತಿಯಿಂದಲ್ಲ ಎಂದು ತಿಳಿಯಬೇಕಾಗುತ್ತದೆ. ಕೋಲ್‌ರಿಜ್‌ನಂಥವರಿಗೆ ಈ ನಿಸರ್ಗವು ದೇವನ ಕಲೆಯಾಗಿ ಕಂಡಿದೆ. ಈ ಪ್ರಪಂಚದ ಪ್ರತಿಯೊಂದು ವಸ್ತುವಿನಲ್ಲಿ ದೈವೀ ಕಲ್ಪನೆಯೊಂದು ಕ್ರಿಯಾಶೀಲವಾಗಿದೆ ಎಂದು ಅವನು ನಂಬುತ್ತಾನೆ. ಭಾರತೀಯ ಕವಿಗಳು, ಕಾವ್ಯ ಮೀಮಾಂಸಕರು ಈ ವಿಶ್ವವನ್ನು ಪರಮಾತ್ಮನ ಅದ್ಭುತ ಸೃಷ್ಟಿ ಎಂದೇ ನಂಬಿದ್ದಾರೆ.

> "ನಮಿಸುವೆನು ಮೂಲೋಕವನು ನಿ । ರ್ಮಿಸಿದ ಕವಿ ಶಂಕರನಿಗೆ
> ನಿಮಿಷ ನಿಮಿಷಕು ವಿಶ್ವರಂಗದ । ನಾಟಕದ ನೋಟದಲಿ ಜನರಿಗೆ
> ರಸವನುಕ್ಕಿಸುತಿಹನಿಗೆ ।"[9]

ಎಂದು ಭಟ್ಟನಾಯಕನು ಈಶ್ವರನ ನಿರ್ಮಾಣಕಲೆಯನ್ನು, ನಿಮಿಷ ನಿಮಿಷಕ್ಕೆ ಆ ವಿಶ್ವರಂಗದಲ್ಲಿ ನಡೆಯುವ ಚೆಲುವಿನ ಆಟವನ್ನು, ರಸದ ಉಕ್ಕಂದವನ್ನು ಹೃದಯ ತುಂಬಿ ಹಾಡುತ್ತಾನೆ. ಕವಿಯ ನಿರ್ಮಾಣದಲ್ಲಿಯೂ ಇಂಥದೇ ದಿವ್ಯ ಸೊಗಸಿನ ಅನುಭವ ಸಹೃದಯನಿಗಾಗುತ್ತದೆ. ಕಲಾನಿರ್ಮಾಣ ಕೇವಲ ಪ್ರಕೃತಿಯ ನಿರ್ಜೀವ ಅನುಕರಣೆಯಾಗಿದ್ದರೆ, ಜೀವನದ ನಕಲಾಗಿದ್ದರೆ ಕೋಟಿ ಕೋಟಿ ಜನಗಳ ಹೃದಯ ವನ್ನು ಸೂರೆಗೊಳ್ಳುವುದು, ಅವರ ಬಾಳನ್ನು ಹಸನುಗೊಳಿಸುವುದು ಅದಕ್ಕೆ ಸಾಧ್ಯ ವಾಗುತ್ತಿತ್ತೇ ?

ಡಾ. ಆಯ್. ಎ. ರಿಚರ್ಡ್ಸ್ ಹೇಳುವ ಸೌಂದರ್ಯದ ವಿವಿಧ ಲಕ್ಷಣಗಳಲ್ಲಿ "ಪ್ರಕೃತಿಯ ಅನುಕರಣೆಯಾಗಿದ್ದರೆ, ಒಂದು ಮಾಧ್ಯಮದ ಮೂಲಕ ನಿರ್ಮಾಣ ವಾಗಿದ್ದರೆ" ಎಂಬ ಅಂಶಗಳೂ ಸೇರಿಕೊಂಡಿರುವುದನ್ನು ನಾವು ಕಾಣಬಹುದು. ಆದರೆ ಒಂದು ಕಲಾಕೃತಿ ಸಹೃದಯ ಹೃದಯಾಹ್ಲಾದಕರವಾಗುವುದು ಬರಿ ಇವೆರಡರಿಂದಲೇ ಅಲ್ಲ. ಇನ್ನೂ ಹಲವಾರು ಅಂಶಗಳು ಅಲ್ಲಿವೆ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ನಮ್ಮ ಪ್ರಾಚೀನ ಆಲಂಕಾರಿಕರು ಕೆಲವರು 'ಚಿತ್ರವನ್ನು ಕುರಿತು ಪ್ರಾಸಂಗಿಕವಾಗಿ ಎರಡು ಮಾತುಗಳನ್ನಾಡಿದ್ದರೂ ಅದು ಮುಖ್ಯವಸ್ತುವಿನ ಪ್ರತಿಕೃತಿ ಅಥವಾ ಅನುಕರಣ ಮಾತ್ರ ಎಂದು ಅವರ ಭಾವನೆ. ಅದರಲ್ಲಿ ಜೀವಭೂತವಾದ ರಸ ವುಂಟೆಂದು ಅವರು ಒಪ್ಪುವಂತೆ ತೋರುವುದಿಲ್ಲ'[10] ಎಂದು ಪ್ರೊ. ತೀ. ನಂ. ಶ್ರೀಕಂಠಯ್ಯನವರು ಹೇಳುತ್ತ ರಸಾಭಿವ್ಯಕ್ತಿಯನ್ನೇ ಗುರಿಯಾಗಿ ಉಳ್ಳ ಚಿತ್ರಗಳೂ ಉಂಟೆಂದು ಪ್ರಾಚೀನ ಶಾಸ್ತ್ರಕಾರರ ಮಾತುಗಳನ್ನೇ ಉದ್ಧರಿಸುತ್ತ ತಿಳಿಸುತ್ತಾರೆ. (ಲಲಿತಕಲೆಗಳ ವಿಚಾರವಾಗಿ ಹೇಳುವಾಗ ಆಲಂಕಾರಿಕರು ಕಾವ್ಯ, ನೃತ್ಯ, ಗಾನ,

---

9. ಭಾರತೀಯ ಕಾವ್ಯಮೀಮಾಂಸೆ :—ತೀ.ನಂ.ಶ್ರೀ.
10. ಅದೇ

ನಾಟ್ಯ ಇವುಗಳನ್ನು ಕುರಿತಂತೆ ಹೇಳುತ್ತಾರೆ. ಚಿತ್ರ, ಶಿಲ್ಪ, ವಾಸ್ತು ಈ ಮೊದಲಾದವೂ ಲಲಿತಕಲೆಯಲ್ಲಿಯೇ ಸೇರುತ್ತವೆ. ಪ್ರಾಚೀನ ಆಲಂಕಾರಿಕರು ವಾಸ್ತುಶಿಲ್ಪಾದಿಗಳ ಹೆಸರನ್ನೇ ಎತ್ತುವುದಿಲ್ಲ). ಇದೇನೇ ಇದ್ದರೂ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಕಲೆ ಹಾಗೂ ಸಾಹಿತ್ಯ, ಪ್ರಪಂಚದ ನಿರ್ಜೀವ ಅನುಕರಣೆ ಎಂದು ಖಂಡಿಸಿರುವುದು ಕಂಡುಬರುವುದಿಲ್ಲವೆಂದು ಹೇಳಬಹುದು. 'ಕಣ್ಣಿಗೆ ಬಿದ್ದ ಆಕೃತಿಯನ್ನೋ ವಸ್ತುವನ್ನೋ ಇದ್ದಕ್ಕಿದ್ದಂತೆ ಬರೆಯುವ ಪ್ರಯತ್ನವೇ ಅವನದ್ದು ?' ಎಂದು ಚಿತ್ರಕಾರನ ನಿರ್ಮಾಣವನ್ನು ಕುರಿತು ಪ್ರಶ್ನೆಹಾಕುತ್ತ ಡಾ. ಶಿವರಾಮ ಕಾರಂತರು ಅದನ್ನು ಹೀಗೆ ವಿವರಿಸುತ್ತಾರೆ: "ಅವನನ್ನು ಪ್ರೇರೇಪಿಸಿದ್ದು ಒಂದು ನೈಸರ್ಗಿಕ ದೃಶ್ಯವಾದರೂ ಅದರ ತಾದ್ರೂಪಿಕ ಅನುಕರಣೆಯಿಂದ ಅವನು ತೃಪ್ತನಲ್ಲ. ಅವನನ್ನು ಮೆಚ್ಚಿಸಿದ ಅಂಶಗಳು ಯಾವುವೆಂದು ಗುರುತಿಸಿ ಅವುಗಳಲ್ಲಿ ಮುಖ್ಯವಾದ ಷ್ಟನ್ನೇ ಅಂಕಿಸಿ ಉಳಿದುವನ್ನು ಮರೆತು ಚಿತ್ರಸೃಷ್ಟಿ ಮಾಡುತ್ತಾನೆ. ಅಂಥ ಕಾರಣ ದಿಂದಾಗಿ ಅದು ಒಂದು ಕಲೆ ಅನಿಸುತ್ತದೆ. 'ಅನುಕರಣೆ' ಎಂದೂ ಕಲೆ ಎನಿಸುವುದಿಲ್ಲ"[11].

ಅರಿಸ್ಟಾಟಲ್ ವಿಶ್ವ ವಿಖ್ಯಾತ ದಾರ್ಶನಿಕ, ತಾರ್ಕಿಕ ಮತ್ತು ಸಾಹಿತ್ಯ ವಿಮರ್ಶಕ. ಪ್ಲೇಟೋನ ಶಿಷ್ಯನಾದ ಇವನು ಸಹ ಗುರುವಿನಂತೆ ಕಾವ್ಯವು ಅನುಕರಣ ಮೂಲವೆಂದು ಒಪ್ಪಿದರೂ ಇಬ್ಬರೂ ಅದನ್ನು ಅರ್ಥೈಸುವಲ್ಲಿ ಅಜಗಜಾಂತರವಿದೆ. ಪ್ರಪಂಚದ ಅನುಕರಣೆ ಎಂಬುದು ಮೂಲವಸ್ತುವಿನ ಕೇವಲ ಪ್ರತಿಬಿಂಬವಲ್ಲ. ಅನುಕರಣೆಯು ಕವಿಯ ಕಲ್ಪನಾ (Imagination) ರಂಗವನ್ನು ಸೇರಿ ಪುನರ್ನಿರ್ಮಾಣ ಗೊಂಡು ಹೊರಬರುವ ಕಲಾತ್ಮಕ ಪ್ರತಿಸೃಷ್ಟಿ. ಅವನು ಅನುಕರಿಸಬೇಕಾದ ವಿಷಯ ಗಳೆಂದರೆ: 'ಕ್ರಿಯಾತ್ಮಕ ವ್ಯಕ್ತಿಗಳು.' ಅಂದರೆ ಗತಿಶೀಲವಾದ ಜೀವನದ ಚಲನೆ ಯನ್ನು. ಕವಿಯ ಅನುಕರಣೆಗೆ ಸಿಕ್ಕುವುದು ಮನುಷ್ಯಜೀವನ, ಅದರ ವೈವಿಧ್ಯ, ಅಲ್ಲಿಯ ಸತ್ವಮೌಲ್ಯಗಳೆಂದು ಹೇಳಬಹುದು. ಒಂದು ಬಗೆಯಲ್ಲಿ ಅವನು ಸೃಷ್ಟಿಸು ವುದು ಪ್ರಕೃತಿಯನ್ನಲ್ಲ, ಪ್ರಕೃತಿಯ ಸೃಷ್ಟಿಕಾರ್ಯದ ಕ್ರಮವನ್ನು. ಕಾವ್ಯಕ್ಕಿರುವ ಈ ವಿಶೇಷ ಶಕ್ತಿಯನ್ನು ಗಮನಿಸಿಯೇ ಅರಿಸ್ಟಾಟಲ್‌ನು ಕಾವ್ಯವನ್ನು ತತ್ವಶಾಸ್ತ್ರ, ನೀತಿಶಾಸ್ತ್ರ, ರಾಜ್ಯಶಾಸ್ತ್ರಗಳ ಅಂಗವಾಗಿ ಪರಿಗಣಿಸದೆ ಸ್ವತಂತ್ರವೆಂದು ಗಣಿಸಿದನು. ಇತಿಹಾಸಕಾರನು ಸಂಭವಿಸಿದ ಘಟನೆಗಳನ್ನು ವರದಿಮಾಡಿದರೆ ಕವಿಯು ಜೀವನವನ್ನು ಆಳವಾಗಿ ಅನುಭವಿಸುತ್ತ ಮುಂದೆ ಏನು ಸಂಭವಿಸಬಹುದು, ಸಂಭವಿಸಲಿಕ್ಕೆ ಸಾಧ್ಯ ವಿದೆ ಎಂಬುದನ್ನು ಪ್ರತಿಪಾದಿಸುತ್ತಾನೆ. "ಕಾವ್ಯದಲ್ಲಿ ಇತಿಹಾಸಕ್ಕಿಂತ ವ್ಯಾಪಕವಾದ ಸತ್ಯವೂ, ಉನ್ನತವಾದ ಉದ್ದೇಶವೂ ಇರುತ್ತದೆ, ಏಕೆಂದರೆ ಇತಿಹಾಸವು ವಿಶಿಷ್ಟ

11. ಚಿತ್ರಶಿಲ್ಪ ಮತ್ತು ವಾಸ್ತುಕಲೆಗಳು—ಡಾ॥ ಕಾರಂತ

ಸಂಗತಿಗಳನ್ನು ಪ್ರತಿಪಾದಿಸಿದರೆ ಕಾವ್ಯವು ಸಾಮಾನ್ಯ ಅಥವಾ ವಿಶ್ವವ್ಯಾಪಕ ಸಂಗತಿಗಳನ್ನು ಪ್ರತಿಪಾದಿಸುತ್ತದೆ,"[12] ಎಂಬುದು ಅರಿಸ್ಟಾಟಲ್‌ನ ಮತ. 'ಅನುಕರಣೆ' ಎಂದರೆ ಜೀವನದ ಅಥವಾ ಪ್ರಕೃತಿಯ ತದ್ವತ್ತಾದುದು, ತದ್ರೂಪವಾದುದು ಅಲ್ಲ. "ಸಾಹಿತ್ಯ ಹೀಗೆ ತದ್ರೂಪವಷ್ಟೇ ಎಂಬುದನ್ನು ಪಂಡಿತರ ಮಾತಿರಲಿ ಬಾಲನಾದವನು ಕೂಡ ಒಪ್ಪುವುದಿಲ್ಲ. ಸಾಹಿತ್ಯ ಅಂದಂದಿನ ಜನ ಜೀವನ ಯಾವ ಯಾವ ದಿಕ್ಕಿನಲ್ಲಿ ಸಾಗುತ್ತಿದೆ. ಅದರ ಚಲನೆ ಹೇಗಿದೆ. ಕೇವಲ ಸಾಂಪ್ರದಾಯಿಕವೊ ಅಥವಾ ಪ್ರಗತಿಪರವೊ ಎಂಬ ಮನೋವ್ಯಾಪಾರಗಳ ವಿವರವನ್ನು, ಅಂದಂದಿನ ಜನಜೀವನದ ದಿಕ್ಕು, ಗುರಿ, ಉದ್ದೇಶಗಳೇನು, ಅದರ ಮೌಲ್ಯಗಳೇನು ಎಂಬುದನ್ನೂ ಬಿಂಬಿಸುತ್ತದೆ"[13]. ಡಾ. ಜಿ. ಎಸ್. ಶಿವರುದ್ರಪ್ಪನವರು 'ಪ್ರತಿಬಿಂಬ' ಎಂಬ ಪದವನ್ನು ಚರ್ಚಿಸುತ್ತ "'ಬಿಂಬನ' ಎಂದರೆ ಇದ್ದುದನ್ನು ಇದ್ದಹಾಗೆ ಪಡಿಮೂಡಿಸುವುದು ಎಂದು ಅರ್ಥವಲ್ಲ ; ಇರುವುದನ್ನು ತನ್ನ ಮಾಧ್ಯಮದ ಮೂಲಕ ಅದು ಬೇರೊಂದೆಂಬಂತೆ ಪರಿವರ್ತಿಸಿ ಅಭಿವ್ಯಕ್ತಗೊಳಿಸುವುದು ಎಂದು ಅರ್ಥ, ಚಂದ್ರಬಿಂಬ ಎನ್ನುವ ಮಾತನ್ನು ಗಮನಿಸಿರಿ. ಚಂದ್ರನಲ್ಲಿ ಬಿಂಬಿತವಾಗಿರುವುದು ಸೂರ್ಯನ ಬೆಳಕೇ ಆದರೂ ಅದು ಚಂದ್ರಮಂಡಲದ ಮಾಧ್ಯಮದ ಮೂಲಕ ಪರಿವರ್ತಿತವಾಗಿ ಚಂದ್ರಕಾಂತಿಯಾಗಿ, ಬೆಳುದಿಂಗಳಾಗಿ ಬರುತ್ತದೆ...ಕವಿಯಂಥ ವಿಶಿಷ್ಟ ವ್ಯಕ್ತಿತ್ವ ಲೋಕಾನುಭವಗಳನ್ನು ಬಿಂಬಿಸುವಲ್ಲಿ ಅಲ್ಲಿ ಬೇರೊಂದು ಪರಿವರ್ತನ ಕ್ರಿಯೆ ನಡೆದೇ ನಡೆಯುತ್ತದೆ"[14] ಎಂದು ಸಮರ್ಪಕವಾಗಿ ಹೇಳುತ್ತಾರೆ.

ಪ್ಲೇಟೋ ತಪ್ಪಾಗಿ ತಿಳಿದುಕೊಂಡಿದ್ದ ಕಾವ್ಯದ ಪರಿಣಾಮದ ಬಗ್ಗೆಯೂ ಅರಿಸ್ಟಾಟಲ್ ಸಮರ್ಥ ಹಾಗೂ ಸಾಧಾರಪೂರ್ಣ ಉತ್ತರ ನೀಡಿ ಕಾವ್ಯದ ಹಿರಿಮೆಯನ್ನು ಎತ್ತಿಹಿಡಿಯುತ್ತಾನೆ. ಕಾವ್ಯ ಅಸತ್ಯ ಹಾಗೂ ಅಸಭ್ಯ ಅಂಶಗಳನ್ನು ಒಳಗೊಂಡು ಓದುಗರ ಮನವನ್ನು ಕೆರಳಿಸುತ್ತದೆ, ನೀತಿಯನ್ನು ಕೆಡಿಸುತ್ತದೆ, ಎಂದು ಪ್ಲೇಟೋ ಅಭಿಪ್ರಾಯಪಟ್ಟು ನೀತಿಬೋಧೆ ಮಾಡುವಂಥ ದೇವಸ್ತುತಿ ಪದ್ಯಗಳನ್ನು, ಮಹಾತ್ಮರ ಚರಿತ್ರೆಗಳನ್ನು ಹೇಳಬಹುದೆಂದು ರಿಯಾಯಿತಿ ತೋರಿಸುತ್ತಾನೆ. ನೀತಿಬೋಧೆಯೇ ಕಾವ್ಯದ ಗುರಿ ಎಂಬುದನ್ನು ಪ್ಲೇಟೋನ ಹಿಂದಿನವರು ನಂಬಿದ್ದರು. ಉತ್ತಮ ಕವಿ, ಉತ್ತಮ ಶಿಕ್ಷಕ ಎಂಬುದು ಅವರ ತಿಳಿವಳಿಕೆಯಾಗಿತ್ತು. ಪ್ಲೇಟೋ ಸಹ ಇದನ್ನೇ ಬಲವಾಗಿ ನಂಬಿದ. ಸ್ಫೂರ್ತಿ, ಆವೇಶಗಳಿಗೆ ಒಳಗಾದ ಗಳಿಗೆಯಲ್ಲಿ ಕವಿ ಕಾವ್ಯರಚನೆ ಮಾಡುತ್ತಾನೆ. ಈ ಸ್ಥಿತಿಯಲ್ಲಿ ಅವನ

---

12. ಪಾಶ್ಚಾತ್ಯ ಕಾವ್ಯಮೀಮಾಂಸೆ—ಡಾ॥ ಬಿ. ಬಿ. ಹೆಂಡಿ
13. ಗತಿಬಿಂಬ—ಡಾ॥ ಜಿ. ಎಸ್. ಶಿವರುದ್ರಪ್ಪ
14. ಅದೇ

ಬುದ್ಧಿ ಅವನ ಹಿಡಿತದಲ್ಲಿರುವುದಿಲ್ಲ. ಆಗ ಸೃಷ್ಟಿಗೊಂಡು ಬರುವ ಸಾಹಿತ್ಯ ಅಪಾಯಕಾರಿಯಾಗಿರುತ್ತದೆ, ಅಪ್ರಬುದ್ಧ ಆಲಾಪವಾಗಿರುತ್ತದೆ ಎಂದು ಆರೋಪಿಸಿದ. ಪ್ಲೇಟೋ ಎಲ್ಲಿಯವರೆಗೆ ಸರಿ, ಎಲ್ಲಿಂದ ತಪ್ಪಿದ್ದಾನೆ ಎಂಬುದನ್ನು ಅರಿಸ್ಟಾಟಲ್ ಸರಿಯಾಗಿ ಗುರುತಿಸುತ್ತಾನೆ. ಕವಿಯ ಬರವಣಿಗೆ ಸ್ಫೂರ್ತಿ, ಆವೇಶಗಳ ಪರಿಣಾಮ ಅಹುದು. ಆದರೆ ಇದರಲ್ಲಿ ಕೆರಳಿಕೆಯ ಗುಣವೇ ಅಡಕವಾಗಿರುವುದಿಲ್ಲ. ಕಲಾಕೃತಿ ಸಹೃದಯನ ಅಂತರಂಗವನ್ನು ಕಲಕಿ, ಕೆರಳಿಸಿ ಮನುಷ್ಯಜೀವನದ ಒಳಿತು, ಕೆಡಕುಗಳನ್ನು ಕಾಣುವ, ಒಳ್ಳೆಯದನ್ನು ಸ್ವೀಕರಿಸುವ, ಆನಂದಹೊಂದುವ ಮಟ್ಟಕ್ಕೆ ಒಯ್ಯುತ್ತದೆ. ಕಲಾಪ್ರಪಂಚದಲ್ಲಿ ಕಣ್ತೆರೆದ ವ್ಯಕ್ತಿಯು ಒಳಿತು-ಕೆಡಕುಗಳನ್ನು ಸರಿಯಾಗಿ ಗುರುತಿಸಿ ತನ್ನ ಮನದ ಮಾಲಿನ್ಯವನ್ನು ಕಳೆದುಕೊಂಡು ಅಲೌಕಿಕ ಆನಂದವನ್ನು ಅನುಭವಿಸುತ್ತಾನೆ. ಇದರಿಂದ ಜೀವನ ಮೌಲ್ಯಗಳ ಬಗ್ಗೆ ಅವನಿಗೆ ಗೌರವ ಮೂಡುತ್ತದೆ. ಮನ ಬರಿ ಕೆರಳುವುದಿಲ್ಲ, ಅರಳುತ್ತದೆ, ಎಂಬುದನ್ನು ಪ್ಲೇಟೋ ತನ್ನ ಭಾವವಿರೇಚನ (Katharsis) ಸಿದ್ಧಾಂತದಿಂದ ಸ್ಪಷ್ಟಪಡಿಸುತ್ತಾನೆ. "ನಿಜವಾದ ಕಲಾವಿದನ ಮಾರ್ಗವೇ ಬೇರೆ. ವಸ್ತುವಿನ ಶಕ್ತಿಯನ್ನೇ ತನ್ನ ಶಕ್ತಿಯನ್ನಾಗಿ ಮಾರ್ಪಡಿಸಿಕೊಂಡು ತನ್ನ ನೇರಕ್ಕೆ ವಸ್ತುವಿನಿಂದ ಕೆಲಸಮಾಡಿಸಿಕೊಳ್ಳುವವನು ಕಲಾವಿದ...ಒಂದು ಹುಲಿಯ ಮೊಲೆಯ ಹಾಲನ್ನು ಆಡು ಸವಿಯುವಂತೆ ಮಾಡುವುದು ಕಲಾವಿದನ ಇಂದ್ರಜಾಲ. ಮೊಲೆ ಉಣ್ಣುವ ಸಹಜಗುಣವನ್ನು ಬಯಲಿಗೆಳೆದು ಹುಲಿಯ ಮೊಲೆಯನ್ನು ಆಡು ಸೇವಿಸುವಂತೆ ಮಾಡುವುದು ಹೆಚ್ಚುಗಾರಿಕೆಯಲ್ಲವೆ ? ಹೀಗೆ ಸೃಷ್ಟಿಯಲ್ಲಿಯ ನೈಜಗುಣಗಳಿಂದಲೇ ಎಂತಹ ವಿರುದ್ಧ ಸನ್ನಿವೇಶಗಳಲ್ಲೂ ಅವು ಸಹಜ ಮಿತ್ರವೃತ್ತಿಗಳೋ ಎಂಬಂತೆ ಯಾರು ಕೆಲಸ ಮಾಡಿಸುತ್ತಾನೋ ಅವನೇ ನಿಜವಾದ ಕಲೆಗಾರ...ಈ ತತ್ವದ ಮೇರೆಗೆ ಬಹು ಶ್ರೇಷ್ಠವಾದ ಕಲೆ ಎಂದರೆ, ಎಲ್ಲ ವಸ್ತುಗಳಲ್ಲೂ (ವಿರುದ್ಧವಾದುದರಲ್ಲಿಯೂ) ಒಂದು ಒಕ್ಕಟ್ಟನ್ನುಂಟುಮಾಡುವುದು ಕಲಾವಿದನ ಪ್ರತಿಭೆ ಇಂತಹ ವಿಶ್ವ ಬಾಂಧವ್ಯವನ್ನು ಏರ್ಪಡಿಸುವ ಒಂದು ದೈವಿಕ ಚೈತನ್ಯ"[15] ಎನ್ನುವ ವಿಶ್ಲೇಷಣೆಯನ್ನು ನೀಡುತ್ತ ಅರಿಸ್ಟಾಟಲ್‌ನು "ಅಲೌಕಿಕ ಸತ್ಯ ಸೌಂದರ್ಯವನ್ನು–ಈ ಲೋಕದಲ್ಲಿಯೇ ಸಾಧಿಸಬಹುದು. ಈ ಜಗತ್ತು ಸ್ವಯಂಪೂರ್ಣ ವಸ್ತುಗಳಿಂದ ತುಂಬಿದೆ" ಎಂದು ಹೇಳುತ್ತಾನೆ. ಉತ್ತಮ ಕಾವ್ಯ ಸುಸಂಸ್ಕೃತ ಮನಸ್ಸಿನ ವ್ಯಕ್ತಿಗೆ ಸಂತೋಷವನ್ನು ಕೊಟ್ಟೇ ಕೊಡುತ್ತದೆ. ಅಷ್ಟೇ ಅಲ್ಲ ಆದರ ಪರಿಣಾಮ ಓದುಗನ ಅಂತರಾಳದಲ್ಲಿ ಕಳಕಳಿಸುತ್ತಿರುತ್ತದೆ. ನೀತಿಯ ವಿಚಾರವೂ ಆದರಲ್ಲಿ ಅವ್ಯಕ್ತವಾಗಿ ಸೇರಿಕೊಂಡೇ ಇರುತ್ತದೆ. ಆದರೆ ನೈತಿಕ

---

15. ಸೌಂದರ್ಯ ಮತ್ತು ಕಲೆ—ಡಾ॥ ಕೆ. ಬಿ. ರಾಮಕೃಷ್ಣರಾವ್.

ಉತ್ಕರ್ಷವೇ ಕಾವ್ಯದ ಗುರಿಯಾಗಿರಬೇಕೆಂದು ವಾದಿಸುವುದು ಶುದ್ಧ ಅನ್ಯಾಯ ವಾಗುತ್ತದೆ.

ಭಾರತೀಯ ಕಾವ್ಯಮೀಮಾಂಸಕರೂ ಕಾವ್ಯಾನಂದವನ್ನು ಕುರಿತು ವ್ಯಾಪಕ ವಾಗಿ, ಆಕರ್ಷಕವಾಗಿ ಚರ್ಚಿಸಿದ್ದಾರೆ. ಕಾವ್ಯವುಂಟು ಮಾಡುವ ಪರಿಣಾಮಗಳಲ್ಲಿ ರಸಾನಂದವೇ ಪರಮ ಹಾಗೂ ಏಕೈಕ ಲಾಭವೆನ್ನುವಂತೆ ಅಭಿಪ್ರಾಯ ಪಟ್ಟಿದ್ದಾರೆ. ಈ ವಿಸ್ತಾರ ಚರ್ಚೆಯಲ್ಲಿ ಕವಿಸೃಷ್ಟಿಯ ಅನಾಹುತವನ್ನು ಬೆರಳಿಟ್ಟು ತೋರಿಸಿದವರೂ ಇದ್ದಾರೆ. ಇಂಥವರು ಕಾವ್ಯಾನಂದವನ್ನು ಹಾನಿಕಾರಕವೆಂದು ಖಂಡಿಸಿ 'ಕಾವ್ಯಾಲಾಂ ಪಾಶ್ಚವರ್ಜಯೇತ್' ಎಂದು ಹೇಳುತ್ತ ಒಂದು ಬಗೆಯಲ್ಲಿ ಪ್ಲೇಟೋನ ಗೆಳೆಯರಂತೆ ಗೋಚರಿಸುತ್ತಾರೆ. "ಕಾವ್ಯವನ್ನು ಏಕೆ ಹೇಳಬಾರದು, ಕೇಳಬಾರದು ಎಂಬುದಕ್ಕೆ ಕೊಡತಕ್ಕ ಮೂರು ಕಾರಣಗಳನ್ನು ರಾಜಶೇಖರನು ಸಂಗ್ರಹಿಸಿದ್ದಾನೆ: ಕಾವ್ಯ ಸುಳ್ಳು ಹೇಳುತ್ತದೆ. ಕೆಟ್ಟದ್ದನ್ನು ಬೋಧಿಸುತ್ತದೆ, ಅಶ್ಲೀಲವನ್ನು ವರ್ಣಿಸುತ್ತದೆ."[16] ಹೀಗೆ ಮಾಡಿರುವ ರಾಜಶೇಖರನು ಅಶ್ಲೀಲ, ಶ್ಲೀಲಗಳು ಕಾವ್ಯದಲ್ಲಿ ಏಕೆ ಬರುತ್ತವೆ, ಸಹೃದಯನು ಅವುಗಳನ್ನು ಹೇಗೆ ಸ್ವೀಕರಿಸಬೇಕು, ಅದರಿಂದ ಓದುಗನ ಚಿತ್ತಕ್ಕೆ ಸಿಗುವ ಉಪಶಮನವೆಂಥದು ಎಂಬುದಕ್ಕೆ ವಿವರಣೆ ನೀಡುತ್ತಾನೆ. ಒಂದು ಪದಾರ್ಥದ ಅತಿಶಯವನ್ನು ತೋರಿಸಬೇಕೆಂದೋ ಒಂದು ಭಾವವನ್ನು ಮನ ಮುಟ್ಟಿಸಬೇಕೆಂದೊ, ಉದ್ದೇಶಪೂರ್ವಕವಾಗಿ ವಸ್ತುಸ್ಥಿತಿಯ ಗೆರೆಯನ್ನು ಮೀರಿ ವರ್ಣಿಸುವುದು ಕವಿಗಳ ಪದ್ಧತಿ, ಈ ಬಗೆಯ 'ಅರ್ಥವಾದ'ವು ವೇದಶಾಸ್ತ್ರಾದಿ ಗಳಲ್ಲಿ ಕೂಡ ಉಂಟು... ಅತಿಶಯವನ್ನು ಆರೋಪಿಸಿದ್ದರಿಂದ ಒಳತಿರುಳು ವಾಚಕನ ಮನಸ್ಸಿಗೆ ಬೇಗ ಮುಟ್ಟಿದರೆ ಕವಿಯ ಉದ್ದೇಶ ಫಲಿಸಿತು ; ಅವನು ಹಿಡಿದದಾರಿಯೂ ನಿರ್ದೋಷವಾಯಿತು. ಜಾರೆಯರ ನಡೆವಳಿಕೆ, ಧೂರ್ತರ ವಂಚನೆ – ಈ ಮೊದ ಲಾದವುಗಳು ಕಾವ್ಯದಲ್ಲಿ ಬರುವುದುಂಟು ; ಇದನ್ನು ಓದಿ, ಕೇಳಿ, ಒಮ್ಮೊಮ್ಮೆ ವಾಚಕರ ಮನಸ್ಸೂ ಕೆಡಬಹುದು." ಆದರೆ "ಈ ಬಗೆಯ ವರ್ತನೆಗಳೂ ಲೋಕದಲ್ಲಿ ಉಂಟು ; ಅವನ್ನು ತಿಳಿದುಕೊಳ್ಳಿ ; ಅದರ ಹಾಗೆ ನಡೆಯದಿರಿ' ಎಂದು ನಿಷೇಧಿಸು ವುದಕ್ಕಾಗಿ ಕವಿ ಇದನ್ನು ನಿರೂಪಿಸುವನೇ ಹೊರತು ಅವನ್ನು ಅನುಸರಿಸಿರೆಂದು ವಿಧಿಸುವುದಕ್ಕಾಗಿ ಅಲ್ಲ"[17] ಇಲ್ಲಿ ರಾಜಶೇಖರನು ಕವಿಯ ಉದ್ದೇಶ ಹಾಗೂ ಸಹೃದಯನ ಜವಾಬ್ದಾರಿ ಎರಡನ್ನೂ ಸ್ಪಷ್ಟಪಡಿಸಿದ್ದಾನೆ. ಹಲವಾರು ಆಲಂಕಾರಿಕರ ವಿಚಾರಗಳನ್ನು ವ್ಯಾಪಕವಾಗಿ ತಿಳಿದುಕೊಂಡ ಪ್ರೊ. ತೀ. ನಂ. ಶ್ರೀಕಂಠಯ್ಯನವರು ಈ ಬಗ್ಗೆ ಬಹು ಸಮಂಜಸ ಹಾಗೂ ಅರ್ಥಪೂರ್ಣ ಮಾತುಗಳನ್ನು ವ್ಯಕ್ತಪಡಿಸಿದ್ದಾರೆ:

---

16. ಭಾರತೀಯ ಕಾವ್ಯಮೀಮಾಂಸೆ—ತೀ. ನಂ, ಶ್ರೀಕಂಠಯ್ಯ:
17. ಅದೇ

"ಈ ವಿಷಯಗಳಲ್ಲೆಲ್ಲಾ ಕವಿ ಔಚಿತ್ಯವರಿತು, ತನ್ನ ಚಪಲತೆಯನ್ನು ಅದುಮಿ, ಕಾವ್ಯ ರಚನೆ ಮಾಡಬೇಕು ; ವಾಚಕನು ಶುದ್ಧ ಹೃದಯದಿಂದ ಓದಬೇಕು ; ಟೀಕಾಕಾರನು ಉದಾರ ಮನಸ್ಸಿನಿಂದ ವಿಮರ್ಶೆ ಮಾಡಬೇಕು"[18]

ಪ್ಲೇಟೋನ 'ಅನುಕರಣೆ'ಯ ಸಿದ್ಧಾಂತವನ್ನು ಹದಿನಾರನೆಯ ಶತಮಾನದ ಪ್ರಸಿದ್ಧ ವಿಮರ್ಶಕ ಸರ್ ಫಿಲಿಪ್‌ಸಿಡ್ನೆ ಗಂಭೀರವಾಗಿ ಗಣಿಸಿ ವಿಮರ್ಶಿಸುತ್ತಾನೆ. ಕವಿಯು ಆಕಸ್ಮಿಕ ವಿದ್ಯಮಾನಗಳಿಗಿಂತ, ಮೂಲಭೂತವಾದ ಸಂಭಾವ್ಯಗಳಿಗೆ ಹೆಚ್ಚು ಗಮನಕೊಟ್ಟು, ಇತಿಹಾಸಕಾರನಿಗಿಂತ ಆಳಕ್ಕೆ ಹೋಗಿ ಸತ್ಯವನ್ನು ದರ್ಶಿಸುತ್ತಾನೆ. ಸಾಹಿತ್ಯವು ಸತ್ಯವನ್ನು ತಿಳಿಯಲು ಒಳನೋಟವನ್ನೊದಗಿಸುವುದಿಲ್ಲ, ಆದರೆ ಸತ್ಯಕ್ಕೆ ಪರ್ಯಾಯವೊಂದನ್ನು ನೀಡುತ್ತದೆ. ಈ ಪರ್ಯಾಯ 'ಸತ್ಯ'ದ ಹಿರಿಮೆಯೆಂದರೆ ಕಲೆಗಳಲ್ಲಿ ಇದೊಂದೇ ಅನುಕರಣೆ ಮಾಡಲಾರದ್ದು. ಕವಿಯು ನಡೆಯುವ ವಿದ್ಯಮಾನಗಳ ತೋರಿಕೆಯನ್ನು ಮಾತ್ರ ನಕಲು ಮಾಡುವುದಿಲ್ಲ. ಅದರಾಚೆಗೆ ಹುದುಗಿರುವ ಅಂತರಾಳದ ಸತ್ಯವನ್ನು ಅನುಕರಣೆಮಾಡುತ್ತಾನೆ. ಇದು ಸತ್ಯ ಪ್ರಪಂಚಕ್ಕಿಂತ ಉತ್ತಮವಾದದ್ದು ಮತ್ತು ಇದು ಓದುಗನಿಗೆ, ಕವಿಯ ಆದರ್ಶಪ್ರಪಂಚವನ್ನು ಅನುಕರಿಸಲು, ಪ್ರೇರೇಪಣೆ ನೀಡುತ್ತದೆ. ಹೀಗಾಗಿ ಅನುಕರಣೆ ಕವಿಯಿಂದ ವಾಚಕನಿಗೆ ವರ್ಗಾಯಿಸಿದಂತಾಯಿತು. ಕವಿ ಅನುಕರಣೆ ಮಾಡುವುದಿಲ್ಲ ಸೃಷ್ಟಿಸುತ್ತಾನೆ.

ಸುಪ್ರಸಿದ್ಧ ವಿಮರ್ಶಕ ಹಾಗೂ ಕವಿ ಎಂದು ಹೆಸರು ಪಡೆದಿರುವ ಡ್ರೈಡನ್‌ನು ಅನುಕರಣೆ, ಕಲ್ಪನೆ (Imagination) ಹಾಗೂ Fancy (ಭಾವನೆ) ಇವುಗಳ ಹಿನ್ನೆಲೆಯಲ್ಲಿ ಕಾವ್ಯವಿಮರ್ಶೆ ಮಾಡಿರುವುದು ಗಮನಾರ್ಹವಾಗಿದೆ ; ಕಾವ್ಯ ಜೀವನದ ಅವಲೋಕನೆಯಿಂದ ರೂಪ ತಾಳುವುದಿಲ್ಲ ; ಕಲ್ಪನಾಶಕ್ತಿಯ ಬೆಳಕಿನಲ್ಲಿ, ಅವಲೋಕಿಸಿದ ಬದುಕಿನ ವಸ್ತುಗಳು ಹೊಸ ರೂಪ ಪಡೆದು ಕಾವ್ಯ ಜನಿಸುತ್ತದೆ. Fancy ಮತ್ತು imagination ಇವೆರಡರಲ್ಲಿ ಹೆಚ್ಚು ಅಂತರವನ್ನೇನೂ ಡ್ರೈಡನ್ ಕಾಣದಿದ್ದರೂ ಕಲ್ಪನಾಶಕ್ತಿ (Imagination)ಯ ನಿಯಮರಾಹಿತ್ಯ, ನಿರ್ಲಕ್ಷ್ಯ (wild) ಗುಣವನ್ನು ಪ್ರತಿಬಂಧಿಸುವ ಒಂದು ಅಂಶವಿರಲೇಬೇಕು, ಅದು 'Fancy' ಎಂದು ವಿಶ್ಲೇಷಿಸುತ್ತಾನೆ. ಎಲ್ಲೆಲ್ಲಿಗೊ ಓಡುತ್ತಿರುವ ಕಲ್ಪನಾಶಕ್ತಿ Fancy ಯ ಸಹಾಯದಿಂದ ಕವಿಗೆ ಒಂದು ನಿರ್ಧಾರಕ್ಕೆ ಬರಲು ಅನುವು ಮಾಡಿಕೊಡುತ್ತದೆ. ಕವಿಗೆ "Fancy is the principal quality required" ಎಂದು ಹೇಳುವಾಗ ಡ್ರೈಡನ್‌ನು ನಾವು Imagination ಕುರಿತು ಏನೆಂದು ಅರ್ಥ ಮಾಡಿಕೊಂಡಿರುವೆವೋ ಅದೇ ಅರ್ಥದಲ್ಲಿ ಅವನೂ ತಿಳಿದುಕೊಂಡಿದ್ದಾನೆಂಬುದು ಕಂಡುಬರುತ್ತದೆ. ಆದರೂ

18. ಅದೇ

ಅವನು ಮುಂದುವರಿದು "But it is fancy that gives the life touches and the secret graces to it" ಎಂದು 'Fancy'ಯನ್ನು ವಿವರಿಸುತ್ತಾನೆ.

ಕಾವ್ಯದಲ್ಲಿ ಕಲ್ಪನೆಯ ಪಾತ್ರವನ್ನು ಒತ್ತುಕೊಟ್ಟು ವಿವರಿಸುತ್ತಾನೆ, ಸುಪ್ರಸಿದ್ಧ ವಿಮರ್ಶಕ ಕೋಲ್‌ರಿಜ್. ಕಲ್ಪನಾಶಕ್ತಿಯನ್ನು ಅವನು ಎರಡಾಗಿ ವಿಂಗಡಿಸುತ್ತಾನೆ. ತನ್ನ ಕಲ್ಪನಾಶಕ್ತಿಯ ಬಲದಿಂದಲೇ ಕವಿಯು, ಈ ಪ್ರಕೃತಿ, ಸೃಷ್ಟಿಕರ್ತನ ಬಹಿರಂಗ ಭಾವನೆ ಎಂದು ತಿಳಿಯುತ್ತಾನೆ. ಇದು, Primary Imagination (ಪ್ರಾಥಮಿಕ ಕಲ್ಪನೆ) ಬಲದಿಂದ ಆಗುತ್ತದೆ. ಇನ್ನು Secondary imagination ಕಾರಣವಾಗಿ, ಈ ಈಶ್ವರ ಸೃಷ್ಟಿಯನ್ನು ಕವಿ ತನ್ನದೇ ಎಂಬ ರೀತಿಯಲ್ಲಿ ಪುನರ್‌ಸೃಷ್ಟಿಸುತ್ತಾನೆ. ಈ ನಿಸರ್ಗವು ದೇವನ ಕಲೆ, ಏಕೆಂದರೆ ಇದರಲ್ಲಿ ದೈವೀಕಲ್ಪನೆಯೊಂದು ಕ್ರಿಯಾಶೀಲ ವಾಗಿರುತ್ತದೆ ಎಂದು ಕೋಲ್‌ರಿಜ್ ಭಾವಿಸುತ್ತಾನೆ. ಕಲಾಕಾರನು ಎಂದಿಗೂ ನಿಸರ್ಗವನ್ನು ನಕಲು ಮಾಡುವುದರ ತೃಪ್ತಿ ಹೊಂದುವುದಿಲ್ಲ, ಅವನ ಕಲ್ಪನಾ ಶಕ್ತಿಯು, ಮನ, ತಿಳಿವಳಿಕೆ, ತರ್ಕಗಳು ಸ್ವೀಕರಿಸಿದ್ದ ಸಾಮಗ್ರಿಯನ್ನು ವಿಸ್ತರಿಸಿ, ಪೃಥಃಕರಿಸಿ, ಪುನರ್‌ನಿರ್ಮಾಣ ಮಾಡುತ್ತದೆ ಮತ್ತು ಇದು 'ದಿವ್ಯಕಲ್ಪನೆ' (Divine imagination) ಯ ಕೆಲಸದಂತೆಯೆ ಇರುತ್ತದೆ. ಇದು ಕೋಲ್‌ರಿಜ್‌ನ ಅಭಿಪ್ರಾಯ.

ಕಲ್ಪನಾಶಕ್ತಿಯ ಬಲದಿಂದ ಕಲಾಕಾರನು ಜೀವನದ ನೈಜತೆಯನ್ನೇ ಮರೆತು ಕಲಾಸೃಷ್ಟಿ ಮಾಡಲಾಗದು, ಹಾಗೆ ಮಾಡಿದ್ದಾದರೆ ಕಾವ್ಯದ ಸೊಗಸು, ಹಗಲಗನ ಸಂಬಂತಾಗುವುದು ಮತ್ತು ನೈಜತೆಯನ್ನು ನಕಲು ಎನ್ನುವ ಮಟ್ಟಕ್ಕೂ ಇಳಿಸಲಾಗದು. ಇದರಿಂದ ಕಾವ್ಯಾನಂದದ ಆಶೆಯನ್ನು ತುಳಿದು ಹಾಕಿದಂತಾಗುತ್ತದೆ. "ಕಾವ್ಯವು ಲೋಕಸ್ಥಿತಿಯ ನಕಲಾಗಬೇಕಿಲ್ಲ. ಆದರೆ ಲೋಕಸ್ಥಿತಿಯ ಎಲ್ಲೆಯನ್ನೂ ಬಹುದೂರ ಮೀರಿ ಹೋಗಬಾರದು".[19] ಪ್ರತಿಭಾವಂತ ಕಲಾಕಾರನು ಔಚಿತ್ಯ ಪ್ರಜ್ಞೆಯಿಂದ, ನೈಜತೆಯನ್ನು ಜೀವಂತಶಕ್ತಿಯೆಂಬಂತೆ ಕಾವ್ಯದಲ್ಲಿ ಬಳಸಿಕೊಂಡು ರಸವತ್ತಾದ ಕೃತಿ ರಚನೆ ಮಾಡಬಲ್ಲ. ದಂಡಿ, ಮಹಿಮ ಭಟ್ಟರಂಥ ಭಾರತೀಯ ಕಾವ್ಯಮೀಮಾಂಸಕರು ಕಾವ್ಯದಲ್ಲಿ 'ಸ್ವಭಾವೋಕ್ತಿ'ಗೆ ಮಹತ್ವ ಕೊಟ್ಟಿರುವುದು ಇದೇ ಕಾರಣದಿಂದ. "ಕವಿದೃಷ್ಟಿ ವಸ್ತುವಿನ ವಿಶೇಷಾಂಶಗಳನ್ನು ಕಾಣುತ್ತದೆ. ಹಾಗೆ ಪ್ರತ್ಯಕ್ಷವಾದ ವಸ್ತು ಸ್ವಭಾವದ ಯಥಾವತ್ತಾದ ನಿರೂಪಣತೆಯೇ ಸ್ವಭಾವೋಕ್ತಿ".[20] ಈ ಸೂಕ್ಷ್ಮ ಅಂಶವನ್ನು ಗಮನಿಸಿಯೇ ಭಾರತೀಯ ಕಾವ್ಯಮೀಮಾಂಸಕರು ವಕ್ರೋಕ್ತಿ ಮತ್ತು ಸ್ವಭಾವೋಕ್ತಿ ಎರಡನ್ನೂ ಕಾವ್ಯದಲ್ಲಿ ಒಪ್ಪಿದ್ದಾರೆ. ಅನುಕರಣೆ ಕಲಾನಿರ್ಮಾಣದ

---

19. ಭಾರತೀಯ ಕಾವ್ಯಮೀಮಾಂಸೆ—ತೀ.ನಂ.ಶ್ರೀ.
20. ಅದೇ

ಪ್ರಾರಂಭದ ಹಂತದಲ್ಲಿ ಕಾಣಿಸಿಕೊಳ್ಳಬಹುದು. ಇದು ಅತ್ಯುತ್ತಮ ಮಟ್ಟವನ್ನು ಮುಟ್ಟಿದಾಗ ಸ್ವತಂತ್ರ ನಿರ್ಮಾಣವಾಗಿ ಆನಂದದಾಯಕವಾಗುತ್ತದೆ, ಬರಿಯ ಚಮತ್ಕಾರವಾಗದೆ, ಸಾಕ್ಷಾತ್ಕಾರಕ್ಕೆ ದಾರಿಮಾಡಿಕೊಡುತ್ತದೆ. ಪ್ಲೇಟೋ ಹೇಳುವಂತೆ ಕಲೆ, ಕಾವ್ಯಗಳೆಲ್ಲ ಪ್ರಕೃತಿಯ ಪ್ರತಿಕೃತಿಗಳು, ನಕಲು ಎನ್ನುವುದಾದರೆ ಹತ್ತಾರು ಜನರ (ಕವಿ) ನಿರ್ಮಾಣವೆಲ್ಲ ಒಂದೇ ಬಗೆಯದಾಗಿರಬೇಕಾಗಿತ್ತು. ಆದರೆ ಉತ್ತಮ ಕಾವ್ಯಕ್ಷೇತ್ರದಲ್ಲಿ ಹೀಗಾಗಿರುವುದನ್ನು ನಾವು ಕಾಣಲಾರೆವು. ಪಂಪ, ರನ್ನ, ಕುಮಾರವ್ಯಾಸ, ಕುವೆಂಪು ಇವರಲ್ಲಿ ನಾವು ಭಿನ್ನ ಭಿನ್ನ ನಿರ್ಮಾಣ ಶಕ್ತಿಯನ್ನು ಕಾಣುತ್ತೇವೆ. ಮೂಲವನ್ನು ಅನುಕರಿಸಿಯೂ ಈ ಮಹಾಕವಿಗಳು ತಮ್ಮ ಕಲಾತ್ಮಕ ಗುಣವನ್ನು, ಪ್ರತಿಭೆಯನ್ನು ಮೆರೆದಿದ್ದಾರೆ. ವ್ಯಾಸ, ವಾಲ್ಮೀಕಿಗಳಂತೆ ಇವರೂ ಪೂಜ್ಯರಾಗಿದ್ದಾರೆ.

# ಸಾಹಿತ್ಯದಲ್ಲಿ ಧರ್ಮ – ಅಧರ್ಮ ಇತ್ಯಾದಿ....

ಬನ್ನಂಜೆ ಗೋವಿಂದಾಚಾರ್ಯ

ಸಾಹಿತ್ಯ ಧಾರ್ಮಿಕವೂ ಅಲ್ಲ ; ಸಾಹಿತ್ಯ ಅಧಾರ್ಮಿಕವೂ ಅಲ್ಲ. ಮೂಲತಃ ಅದು 'ಸೆಕ್ಯುಲರ್'. ಅದನ್ನು ಧರ್ಮಕ್ಕೆ ಎಳೆದವರುಂಟು ; ಅಧರ್ಮಕ್ಕೆ ಎಳೆದವರುಂಟು. ಎಳೆದತ್ತ ಅದು ಒಲೆದದ್ದೂ ಉಂಟು.

ಕನ್ನಡದಲ್ಲಿ ಎರಡನ್ನೂ ಕಾಣುತ್ತೇವೆ ; ನಮ್ಮ ಜನರ ಕೈಯಲ್ಲಿ ಸಾಹಿತ್ಯ ಜೈನವಾಯಿತು ; ಶೈವವಾಯಿತು ; ವೈಷ್ಣವವಾಯಿತು. ಇದು ಮುಗಿದ ಕಥೆ, ಮತ್ತೆ ಸಾಹಿತ್ಯ ರಾಜಕೀಯವಾಯಿತು. ಸಾಹಿತ್ಯದಲ್ಲಿ ರಾಜಕೀಯ ಬಂತು. ಇಸಮ್ಮುಗಳು ಬಂದವು. ಪ್ರಗತಿ ವಿರೋಧಿಗಳಿಗೆ ಎದುರಾಗಿ ಪ್ರಗತಿವಾದ ಬಂತು. ಜಾತೀಯತೆ ಅಳಿಸಲು ಜಾತಿವಾದ ಬಂತು. ಬಂಡಾಯಿಗಳು ಬಂದರು. ಬಡಾಯಿಗಳು ಬಂದರು. 'ಧರ್ಮಧ್ವಜ'ರ ಕೈಯಲ್ಲಿದ್ದ ಸಾಹಿತ್ಯ 'ಅಧರ್ಮಧ್ವಜ'ರ ಕೈಗೂ ಬಂತು. ಇಬ್ಬರೂ ಸಾಹಿತ್ಯದ ಹೂದೋಟಕ್ಕೆ ತಮ್ಮ ಆಡನ್ನು ಛೂ ಬಿಟ್ಟರು.

ಸಾಹಿತ್ಯದ ಮಟ್ಟಿಗೆ ಇಬ್ಬರೂ 'ರಿಯಾಕ್ಷನರಿ'ಗಳೆ. ಒಬ್ಬರು ಧರ್ಮದ ಉದ್ಧಾರಕ್ಕೆ ಹೊರಟು ಪ್ರಗತಿಗೆ ಅಡ್ಡಿಯಾದರು ; ಇನ್ನೊಬ್ಬರು ಧರ್ಮದ ನಿರಾಸಕ್ಕೆ ಹೊರಟು ಪ್ರಗತಿಗೆ ಅಡ್ಡಿಯಾದರು. ಇಬ್ಬರಿಗೂ ತಮ್ಮ ಬಾವಿಗಿಂತ ಹೊರಗೆ ಜಗತ್ತಿಲ್ಲ. ಇಬ್ಬರೂ ಬಾವಿಯೊಳಗೆ ಎದೆಯುಬ್ಬಿಸಿ ಡುರುಕು ಹಾಕುತ್ತಾರೆ. ಬಾವಿಯ ಹೊರಗೆ ನಿಂತವರನ್ನು ಕಂಡು ನಗೆಯಾಡುತ್ತಾರೆ.

ಧರ್ಮದಲ್ಲಿ ಮುಳುಗಿದವನಿಗೆ ಧರ್ಮ ಕಾಣುವುದಿಲ್ಲ. ಅಧರ್ಮದಲ್ಲಿ ಮುಳುಗಿದವನಿಗೆ ಅಧರ್ಮ ಕಾಣುವುದಿಲ್ಲ. ಹೊರಗೆ ನಿಂತವನಿಗೆ ಎರಡೂ ಕಾಣುತ್ತದೆ. ಈ ತಟಸ್ಥತೆ ಸಾಹಿತ್ಯದ ಮೂಲಧರ್ಮವಾಗಬೇಕು.

ಮೌನದಿಂದ ಮಾತು ಹುಟ್ಟಿದರೆ ಸಾಹಿತ್ಯ, ಮಾತಿನಿಂದ ಮಾತು ಹುಟ್ಟಿದರೆ ಪಾಂಡಿತ್ಯ ಅಥವಾ ಜಗಳ, ಒಮ್ಮೊಮ್ಮೆ ಪಾಂಡಿತ್ಯದ ಭ್ರಮೆಯೇ ಜಗಳವನ್ನು ಹೆರುತ್ತದೆ. ಆದರೆ ಜಗಳಗಂಟರಿಗೆ ಜಗಳದಿಂದ ಸಮಾಜವನ್ನು ತಿದ್ದುವುದು ಸಾಧ್ಯವಿಲ್ಲ ಎನ್ನುವುದೂ ಗೊತ್ತಿರುವುದಿಲ್ಲ, ಇದು ತಟಸ್ಥತೆಯ ಮೌನದ ಕೊರತೆಯ ಫಲ.

ಯಾವುದೂ ಪೂರ್ತಿ ಕೆಟ್ಟದ್ದಲ್ಲ. ಯಾವುದೂ ಪೂರ್ತಿ ಒಳ್ಳೆಯದಲ್ಲ. ಅರಸೊತ್ತಿಗೆ ಕೆಟ್ಟದು ಎಂದೆವು, ಜನತಂತ್ರ ಬಂತು. ಪೂರ್ತಿ ಒಳ್ಳೆಯದಾಯಿತೆ ? ಒಳ್ಳೆಯ ಅರಸರಾದರೆ ಅರಸೊತ್ತಿಗೆಯೂ ಒಳ್ಳೆಯದಾಗಬಹುದು. ಕೆಟ್ಟ ಅಧಿಕಾರಿಗಳಿದ್ದಾಗ ಜನತಂತ್ರವೂ ಕೆಟ್ಟದಾಗಬಹುದು. ಒಬ್ಬ ಕೆಟ್ಟರಾಜನನ್ನು ಉರುಳಿಸಿ ನೂರು ಜನ ಕೆಟ್ಟ ಮಂತ್ರಿಗಳನ್ನು ಆ ಸಿಂಹಾಸನದಲ್ಲಿ ಕೂಡಿಸಿದರೆ ಏನು ಬಂತು ?

ರಾಜಕಾರಣದಲ್ಲೆ ಮುಳುಗಿದವನಿಗೆ ಇದು ಅರ್ಥವಾಗಲಾರದು. ಅರ್ಥವಾದರೆ ಅವನು ಮಂತ್ರಿಯಾಗಿ ಜನಸೇವೆ ಮಾಡುವುದು ಹೇಗೆ ? 'ನಿಮ್ಮ ಉದ್ಧಾರಕ್ಕಾಗಿಯೆ ನಾನು ಚುನಾಯಿತನಾಗಬೇಕಾಗಿದೆ' ಎಂದು ಚುನಾವಣೆಯ ಭಾಷಣಗಳನ್ನು ಬಿಗಿಯುವುದು ಹೇಗೆ ? ಮತ್ತೆ ಅದನ್ನು ಸಾರಾಸಗಟು ಮರೆಯುವುದು ಹೇಗೆ ? ಆದರೆ ತಟಸ್ಥನಾಗಿ ನಿಂತವನಿಗೆ ಈ ಮಾತು ಅರ್ಥವಾಗುತ್ತದೆ.

ಹಾಗಾದರೆ ಸಾಹಿತ್ಯದ ಉದ್ದೇಶವೇನು ? ಆನಂದ ಎಂದರು ಕೆಲವರು. ಬುದ್ಧಿ ಸಾಣೆ ಹಿಡಿಯಲಿಕ್ಕೆ ಎಂದರು ಕೆಲವರು. ಸಮಾಜವನ್ನು ತಿದ್ದಲಿಕ್ಕೆ ಎಂದರು ಕೆಲವರು. ಯಾವುದೂ ಪೂರ್ಣ ಉತ್ತರವಾಗಲಿಲ್ಲ. ಎಲ್ಲವೂ ಅಂಶತಃ ಸರಿಯಿರಬಹುದೇನೋ, ಅಂಶತಃ ತಪ್ಪು, ಕಾಫಿ ಕುಡಿದಾಗ, ಸಿಗರೇಟು ಸೇದಿದಾಗ, ಬೀದಿಯಲ್ಲಿ ಹೋಗುವ ಹೆಣ್ಣು ಅಚಾನಕ್ಕಾಗಿ ಕಣ್ಣು ಹೊರಳಿಸಿದಾಗ ಖುಶಿಯಾಗಬಹುದು. ಸಾಹಿತ್ಯದ ಖುಶಿ ಇಷ್ಟೆ ಅಲ್ಲ. ಅದಕ್ಕಿಂತ ಆಳವಾದ ಒಂದು ನೆಲೆ ಅದಕ್ಕಿದೆ.

ಬೌದ್ಧಿಕವಾಗಿ ಅದು ನಮ್ಮನ್ನು ಕೆದುಕುತ್ತದೆ ಎನ್ನುವುದು ಇದಕ್ಕಿಂತ ಹೆಚ್ಚು ಸತ್ಯಕ್ಕೆ ಹತ್ತಿರವಾದದ್ದು. ಇದನ್ನು ಬೇಕಿದ್ದರೆ ಒಂದು ಬಗೆಯ 'ಬೌದ್ಧಿಕ ಖುಶಿ' ಎನ್ನೋಣ. ನಮಗೆ ಒಂದು ಹೊಸಗುಂಗು ಹಿಡಿಸುತ್ತದೆ. "ಏನು ಏನು ಜೇನು ಜೇನು ಬರಿಯ ಗುಂಗುಂಗಾನ."

ಆದರೆ ಇಲ್ಲಿಗೂ ಮುಗಿಯಲಿಲ್ಲ. ಅದು ನಮ್ಮ ವಿಚಾರಶಕ್ತಿಯ ಮೇಲೆ ಸ್ಪಷ್ಟವಾದ ಪ್ರಭಾವ ಬೀರುವುದೂ ಹೌದು. ಹೀಗಾಗಿ–ಬೇಕಾಗಲಿ ಬೇಡವಾಗಲಿ–ಒಂದಲ್ಲ ಒಂದು ಬಗೆಯಿಂದ ಅದು ತಿದ್ದುವ ಕೆಲಸವನ್ನು ನಮಗರಿಯದಂತೆಯೆ ಮಾಡುತ್ತಿರುತ್ತದೆ.

ಇದು ಅದರ ಗುಣವೂ ಹೌದು ; ದೋಷವೂ ಹೌದು. ಒಬ್ಬ ಬುದ್ಧಿವಂತ ಲೇಖಕ ತನ್ನ ಮಾತಿನ ಮೋಡಿಯಿಂದ ಓದುಗನನ್ನು ಸೆರೆಹಿಡಿಯಬಲ್ಲ. ಓದುಗನು ಅವನನ್ನು ಆರಾಧಿಸುವಂತೆ ಮಾಡಬಲ್ಲ. ಇದು ಸಾಹಿತ್ಯದ ಅಪಾಯದ ಮುಖ. ಓದುಗನ ಬುದ್ಧಿ–ಪ್ರಜ್ಞೆ ಲೇಖಕನ ಪ್ರಜ್ಞೆಗೆ ಶರಣಾಗುವ ದುರಂತ.

ಬುದ್ಧಿಜೀವಿಗಳು ಇದನ್ನು ವಿರೋಧಿಸುತ್ತಲೇ ಬಂದಿದ್ದಾರೆ. ಅವರು ಹೇಳುತ್ತಾರೆ : "ಸ್ವಂತಿಕೆ ಬೆಳೆಸಿಕೊಳ್ಳಿ. ಇನ್ನೊಬ್ಬರ ಮಾತಿಗೆ ತಲೆದೂಗುವ ಬಸವಣ್ಣಗಳಾಗಬೇಡಿ." ಇಲ್ಲಿಯ ದೊಡ್ಡ ವಿರೋಧಾಭಾಸವೆಂದರೆ – ಇಂಥ ಮಾತನ್ನಾಡು

ವವರೂ ತನ್ನ ಈ ಮಾತಿಗೆ ಮಾತ್ರ ಇನ್ನೊಬ್ಬರು ತಲೆದೂಗಬೇಕು ಎಂದು ಬಯಸು ತ್ತಾರೆ.

ಪ್ರಾಯಃ ಪ್ರತಿಯೊಬ್ಬ ಲೇಖಕನಿಗೂ ಈ ಸ್ವಾರ್ಥ ಉಂಟು. ಇಲ್ಲವಾದರೆ ಅವನು ಬರೆಯುವುದೇ ಅಸಾಧ್ಯವಾಗುತ್ತಿತ್ತು. ಯಾರೂ ತಲೆದೂಗದಂತೆ ನಾನು ಬರೆಯಬೇಕು ಎಂದು ಯಾರೂ ಬಯಸಲಿಕ್ಕಿಲ್ಲ. ಇದರಿಂದ ತನ್ನ ನಂಬಿಕೆಯನ್ನು ಜನದ ಮೇಲೆ ಹೇರುವುದು ಲೇಖಕನಿಗೆ ಅನಿವಾರ್ಯವಾದ ಚಟವಾಗುತ್ತದೆ. ನಾನು ಧಾರ್ಮಿಕ ಲೇಖಕನಾದರೆ ನಿಮ್ಮ ತಲೆಯ ಮೇಲೆ ಧರ್ಮದ ಹೊರೆ ಹೊರಿಸುತ್ತೇನೆ. ಧರ್ಮವನ್ನು ನಂಬದವನಾದರೆ 'ಪ್ರಗತಿ ವಿರೋಧಿಯಾದ ಧರ್ಮವನ್ನು ಭಾರತದ ನೆಲದಿಂದ ಅಳಿಸಿಹಾಕಿ' ಎಂದು ಕರೆ ಕೊಡುತ್ತೇನೆ. ನನ್ನ ನಂಬಿಕೆ ನನಗೆ ಮುಖ್ಯ. ಯಾವುದು ಸತ್ಯ ಎನ್ನುವುದು ನನಗೆ ಮುಖ್ಯವಲ್ಲ. ಏಕೆಂದರೆ ಯಾವುದು ಸತ್ಯ ಎನ್ನು ವುದು ಖಚಿತವಾಗಿ ಮನುಷ್ಯನಿಗೆ ಎಂದೂ ಗೊತ್ತಾಗಿಲ್ಲ.

ಈ ಎಲ್ಲ ಅಪಾಯಗಳನ್ನು ಗುರುತಿಸಿದಾಗ ಸಾಹಿತಿ ತಟಸ್ಥನಾಗಿರುವುದು ಒಂದು ಅನಿವಾರ್ಯತೆಯಾಗುತ್ತದೆ. ನನ್ನ ನಂಬಿಕೆಯಿಂದ ನಾನು ಹಾಳಾದರೆ ಯಾರಿಗೂ ನಷ್ಟವಿಲ್ಲ. ಆದರೆ ಊರನ್ನೆಲ್ಲ ನಂಬಿಸಿ ಹಾಳುಮಾಡುವ ಹಕ್ಕು ನನಗಿಲ್ಲ.

ಅದರಿಂದಲೆ ಸಾಹಿತಿ ಧರ್ಮದ ಬಗ್ಗೆಯೂ ಬರೆಯಬಲ್ಲ; ಅಧರ್ಮದ ಬಗ್ಗೆಯೂ ಬರೆಯಬಲ್ಲ. ಆದರೆ 'ಉಪದೇಶಕ' ಆಗಲಾರ. 'ಪ್ರೊಫೆಟ್' ಆಗಲಾರ, ಶಂಕರಾಚಾರ್ಯರೆ ಆದರೂ ಪ್ರೊಫೆಟ್ ಆಗಿ ಕಾವ್ಯ ಬರೆಯಲಾರರು. ಬರೆದರೆ ಅದು ಒಳ್ಳೆಯ ಕಾವ್ಯ ಆಗಲಾರದು.

ಸಾಹಿತ್ಯದ ಗೊತ್ತು–ಗುರಿಗಳನ್ನು ಗುರುತಿಸಿಕೊಂಡರೆ ಇಲ್ಲಿ ಧರ್ಮದ ಪಾತ್ರ ವೇನು ಎನ್ನುವ ಮಾತು ಸ್ಪಷ್ಟವಾಗುತ್ತದೆ. ಸಾಹಿತ್ಯ 'ಇಮ್ಮಾರಲ್' ಅಲ್ಲ; ಆದರೆ 'ನಾನ್‌ಮಾರಲ್' ಹೌದು. ಸಾಹಿತ್ಯ ಧರ್ಮವನ್ನಾಡಿಸಬಾರದು – ಏಕೆಂದರೆ ಧರ್ಮ ಸಾಹಿತ್ಯವನ್ನಾಡಿಸಬಾರದು.

ಈ ಧರ್ಮನಿರಪೇಕ್ಷತೆ– ಧರ್ಮನಿರಾಕರಣೆ ಅಲ್ಲ– ಎಲ್ಲ ಕಾಲದಲ್ಲು ಸಾಹಿತ್ಯದ ಮಾನದಂಡವಾಗಿ ಉಳಿಯಬಲ್ಲುದು. ಉಳಿದವುಗಳೆಲ್ಲ – ಅದು ಧರ್ಮ ಪ್ರಚಾರ ಕ್ಕಾಗಿ ನಿರ್ಮಾಣವಾಗಿರಲಿ, ಧರ್ಮನಿರಾಕರಣೆಗಾಗಿರಲಿ ಶಾಶ್ವತ ಮೌಲ್ಯವನ್ನು ಪಡೆಯಲಾರವು. ತಾತ್ಕಾಲಿಕ ಒಲವು ನಿಲುವುಗಳನ್ನು ಪ್ರತಿಬಿಂಬಿಸುವ ಅವುಗಳ ಮೆರೆದಾಟವೂ ತಾತ್ಕಾಲಿಕವಾಗಿಯೇ ಇರುತ್ತದೆ.

# ಸಾಹಿತ್ಯ ಮತ್ತು ಚಿತ್ರಕಲೆ

ಡಾ. ಶಿವರಾಮ ಕಾರಂತ

ಸಾಹಿತ್ಯ ಮತ್ತು ವಿವಿಧ ರೀತಿಯ ಲಲಿತ ಕಲೆಗಳನ್ನು ನಾವು ಒಂದೇ ಬುಟ್ಟಿಯಲ್ಲಿ ತುಂಬಿಸಿ, ಅವನ್ನು ಕುರಿತು ಸಮಾನ ಅಭಿಪ್ರಾಯಗಳನ್ನು ಪ್ರಕಟಿಸುವುದು ನಮ್ಮ ನಾಡಿನ ವಾಡಿಕೆ. ಇದು ಎಷ್ಟರ ಮಟ್ಟಿಗೆ ಸಾಧುವಾಗುತ್ತದೆ ಎಂದು ನಾವು ಯೋಚಿಸುವುದಿಲ್ಲ. ಮನುಷ್ಯ ಇವನ್ನು ತನ್ನ ಮನಸ್ಸಿನ ಅನಿಸಿಕೆಗಳ ಮತ್ತು ಭಾವನೆಗಳ ಅಭಿವ್ಯಕ್ತಿಯ ಸಾಧನಗಳನ್ನಾಗಿ ಬಳಸುತ್ತ ಬಂದಿದ್ದಾನೆ. ಹಾಗೆಂದ ಮಾತ್ರಕ್ಕೆ ಇವೆಲ್ಲವೂ ಸಮಾನ ರೀತಿಯಲ್ಲಿ ಕೆಲಸಮಾಡುತ್ತವೆ, ಅಥವಾ ಒಂದು ಮಾಧ್ಯಮ ಮಾಡಿದ ಕೆಲಸವನ್ನು ಇನ್ನೊಂದು ಮಾಡಬಲ್ಲದು–ಎಂದು ತಿಳಿಯುವ ಕಾರಣವೇ ಇಲ್ಲ. ಸಾಹಿತ್ಯದ ಸೀಮೆ ಅದು ಮಾಡಬಲ್ಲ ಕೆಲಸಗಳ ದೃಷ್ಟಿಯಿಂದ ಬಲು ದೊಡ್ಡದು ; ಭಾಷೆ ಅದರ ಮಾಧ್ಯಮ. ಆ ಮಾಧ್ಯಮದ ದೆಸೆಯಿಂದ ಜಗತ್ತನ್ನು ಕುರಿತ ಜ್ಞಾನ ಮತ್ತು ಊಹಾಪೋಹಗಳೆಲ್ಲವೂ ಅದರ ಮೂಲಕ ಪ್ರಕಟಗೊಳ್ಳುತ್ತವೆ. ಮನುಷ್ಯನ ಭಾವಾತಿರೇಕದಿಂದ, ತೀಕ್ಷ್ಣ ವಿಚಾರ ಸರಣಿಯಿಂದ ಹೊರಟ ಕಲ್ಪನೆಗಳು, ತರ್ಕಗಳು ಭಾಷೆಯ ಮೂಲಕ ಪ್ರಕಟಗೊಳ್ಳುತ್ತವೆ. ಮಾನವನ ನಿತ್ಯ ಜೀವನದ ವ್ಯವಹಾರಗಳು, ಎಂದರೆ ವಿಚಾರ, ಭಾವನೆ ಮೊದಲಾದವುಗಳ ವಿನಿಮಯ ಭಾಷಾ ಮಾಧ್ಯಮದಿಂದಲೇ ಆಗುತ್ತದೆ. ಅಷ್ಟೊಂದು ವ್ಯಾಪಕವಾಗಿ ನಿತ್ಯಜೀವನದ ಕ್ರಿಯೆಗಳಿಗಾಗಿ ನಾವು ಸಂಗೀತ, ನೃತ್ಯ, ಚಿತ್ರ, ಶಿಲ್ಪಗಳನ್ನು ಬಳಸುವುದಿಲ್ಲ.

ಅದೇ ರೀತಿಯಲ್ಲಿ ಬಣ್ಣ ರೇಖೆ ಮೊದಲಾದವುಗಳಿಂದ ನಾವು ಇತರರೊಡನೆ ನಮ್ಮ ತಿಳಿವಳಿಕೆಯನ್ನು, ಆವಶ್ಯಕತೆಗಳನ್ನು ತಿಳಿಸುವ ಗೋಜಿಗೆ ಹೋಗಲಾರೆವು. ಸಾಹಿತ್ಯರೂಪದಲ್ಲಿ ಪ್ರಕಟಗೊಂಡ ಒಂದು ಕತೆಯೋ, ಕಾದಂಬರಿಯೋ, ಕವನವೋ ನಮಗೆ ಒದಗಿಸುವ ಭಾವಾನುಭವಗಳ ಬಿಂಬಗಳಲ್ಲಿ ವಿಷಯಗಳ ವಿಸ್ತಾರವಿದೆ. ಅನುಭವ ಮತ್ತು ಕ್ರಿಯೆಗಳ ಬಾಹುಳ್ಯವಿದೆ. ಅವಕ್ಕೆ ಸಂಬಂಧಪಟ್ಟಂತೆ ಯಾರ್ಯಾರ ಮನಸ್ಸು ಹೇಗೆ ಹೇಗೆ ತೋಡಿಕೊಂಡಿತು–ಎಂಬ ಚಿತ್ರವೂ ಬರುತ್ತದೆ. ಸಾಹಿತ್ಯದಲ್ಲಿ

ಬರುವ ವಾಕ್ಯ ಸಮುದಾಯಗಳ ದೆಸೆಯಿಂದ ಅಲ್ಲಿಲ್ಲದ ಅನೇಕ ನೆನಪುಗಳು ಮರುಕಳಿಸಿ ಕಣ್ಮುಂದೆ ನಲಿಯತೊಡಗುತ್ತವೆ. ಆಗ ಶಬ್ದಗಳ ಮೂಲಕ ಸೂಚನೆಗೊಂಡ ವ್ಯಕ್ತಿಗಳು, ವಸ್ತುಗಳು, ಸನ್ನಿವೇಶಗಳು ಮನಸ್ಸಿನ ಮುಂದೆ ಚಿತ್ರಪಟಲದಂತೆ ಹಾಯಬಲ್ಲವು. ನಾವು ಬಳಸುವ ಶಬ್ದಗಳು ನಮ್ಮಲ್ಲಿ ಸುಖ, ದುಃಖವನ್ನು ಪ್ರೇರಿಸಬಲ್ಲವು. ನಮ್ಮ ವಿಚಾರಗಳನ್ನು ಕೆರಳಿಸಬಲ್ಲವು. ಒಂದು ಸಾಹಿತ್ಯ ಬಿಂಬಿಸುವ ಕಾಲ ಮತ್ತು ದೇಶಗಳು ಎಷ್ಟೂ ದೊಡ್ಡದಾಗಿರಬಲ್ಲವು, ಎಷ್ಟೂ ಸಣ್ಣದಾಗಿರಬಲ್ಲವು.

ಚಿತ್ರಕಲೆ ಅಥವಾ ಶಿಲ್ಪ ತನ್ನ ಪರಿಮಿತಿಯಲ್ಲಿ ದೇಶದ ಒಂದು ತೀರ ಸಣ್ಣ ತುಣುಕನ್ನು ಎಂದರೆ ಸಣ್ಣ ಒಂದು ಸ್ಥಳವನ್ನೂ ಅಲ್ಲಿರುವ ವಸ್ತುಗಳ ಸಹಾಯದಿಂದ ನಮ್ಮ ಕಣ್ಮುಂದೆ ನಿಲ್ಲಿಸಬಲ್ಲುದು. ದೇಶ ಮತ್ತು ಸ್ಥಳಗಳು ಕಣ್ಣುಗಳಿಗೆ ಕಾಣಿಸಬಲ್ಲ ವಸ್ತುಗಳು. ಕಣ್ಣಿನ ವಿಸ್ತಾರಕ್ಕೆ ಹರಡಿಕೊಂಡಂತಹ ಅಂಶವನ್ನು ಒಂದು ಚಿತ್ರದ ಮೂಲಕ ಬಿಂಬಿಸಿ ನಮ್ಮ ನೆನಪನ್ನು ಜಾಗೃತಗೊಳಿಸಬಹುದು. ಕಣ್ಮುಂದಿನ ಎಲ್ಲ ದೃಶ್ಯ ಬಿಂಬಗಳಿಗೂ ಈ ಸಾಧ್ಯತೆ ಇದೆ. ಆ ಮಾಧ್ಯಮದ ವಸ್ತುವೇ ಉದ್ದ ಅಗಲ ಮತ್ತು ಎತ್ತರಗಳ ಪರಿಮಿತಿಯುಳ್ಳದ್ದು. ಅದು ಬಣ್ಣಗಳಿಂದ, ಬೆಳಕುಗಳಿಂದ ಸೂಚಿಸಬಹುದಾದದ್ದು. ಅವುಗಳಲ್ಲಿ ಅಡಕವಾದ ಇನ್ನೊಂದು ಲಕ್ಷಣವಾದ ರೇಖೆ ಎಂಬುದರಿಂದಲೂ ಸೂಚಿಸಬಹುದಾದದ್ದು. ಇದು 'ಸ್ಥಳ'ಕ್ಕಿರುವ ಮಿತಿ.

ಇನ್ನು ಕಾಲವನ್ನು ಎಣಿಸಿಕೊಂಡಲ್ಲಿ ಸಾಹಿತ್ಯ ಹೇಳುವಂತೆ ನೂರು, ಸಾವಿರ ವರ್ಷಗಳ ಕತೆಯನ್ನು ಒಂದು ಚಿತ್ರ ಹೇಳಲಾರದು. ಕಾಲವನ್ನು ಒಂದು ಕ್ಷಣಕ್ಕೆ ನಿಂತಲ್ಲೇ ನಿಲ್ಲಿಸಿ, ಆ ಹೊತ್ತಿಗೆ ಒಂದು ನಿಶ್ಚಿತ ಸ್ಥಳದಲ್ಲಿ, ಆವರಣದಲ್ಲಿ, ಏನು ನಡೆಯುತ್ತದೋ ಅಥವಾ ನಡೆಯಿತೋ ಅದನ್ನಷ್ಟೆ ಒಂದು ಚಿತ್ರ ತೋರಿಸಬಲ್ಲದು. ಮನಸ್ಸಿನೊಳಗೆ ನಡೆಯತಕ್ಕಂತಹ ವಿಚಾರಗಳನ್ನು, ವಿಪ್ಲವಗಳನ್ನು, ವ್ಯಾಪಾರಗಳನ್ನು ಭಾಷೆ ತಿಳಿಸಬಹುದಾದ ರೀತಿಯಲ್ಲಿ ಒಂದು ಚಿತ್ರ ಎಂದೂ ತಿಳಿಸಲಾರದು. ಸೆರೆ ಹಿಡಿದ ಒಂದು ನಿಶ್ಚಿತ ಸ್ಥಳದಲ್ಲಿ, ನಿಶ್ಚಿತ ಸಮಯದಲ್ಲಿ ಪ್ರಕಟಗೊಳ್ಳಬಹುದಾದ ಸುಖ, ದುಃಖ, ಭಾವನೆಗಳನ್ನು ಆ ಚಿತ್ರದಲ್ಲಿ ಬರೆದಿರಬಹುದಾದ ಮನುಷ್ಯ, ಇಲ್ಲವೆ ಮನುಷ್ಯೇತರ ಆಕೃತಿಗಳ ಮೂಲಕ ಚಿತ್ರ ಬಿಂಬಿಸಬಲ್ಲದು.

ಉದಾಹರಣೆಗೆ ರಾಮಾಯಣದ ಒಂದು ಸನ್ನಿವೇಶವನ್ನು ನೆನೆಯುವ. ರಾವಣನಿಂದ ಅಪಹೃತಳಾದ ಸೀತೆ ಜಟಾಯುವಿಗೆ ಕೊಟ್ಟ ಚೂಡಾಮಣಿಯನ್ನು, ಆತ ರಾಮನಿಗೆ ಕೊಡುವ ದೃಶ್ಯ–ಎಂದು ಊಹಿಸಿ. ಗಾಯಗೊಂಡ ಜಟಾಯು ರಾಮ ಲಕ್ಷ್ಮಣರ ಮುಂದೆ ಒರಗಿದ್ದಾನೆ. ಏನೋ ಒಂದು ಪುಟ್ಟ ವಸ್ತುವನ್ನು ಆತ ರಾಮನ ಕೈಯ ಮೇಲೆ ಇರಿಸುತ್ತಾನೆ. ಅತಿ ಸೂಕ್ಷ್ಮವಾದ ವಿವರಣೆ ಕೊಟ್ಟರೆ–ಅಲ್ಲಿ ಆತ ಕೊಡುತ್ತಿರುವ ಚೂಡಾಮಣಿಯ ಆಕೃತಿಯೂ ಬರಬಹುದು. ಇಲ್ಲಿ ನೀವು

ರಾಮಾಯಣದ ಕತೆಯನ್ನು ಓದಿಕೊಂಡಿದ್ದರೆ ಮಾತ್ರವೇ ರಾಮ, ಲಕ್ಷ್ಮಣ, ಜಟಾಯು–ಇವರುಗಳ ಆಕೃತಿಗಳನ್ನು ಚಿತ್ರದಲ್ಲಿ ಕಂಡು, ಇಂಥವರು ಇಂಥವರು ಎಂದು ನೆನಪಿಗೆ ಪೆಚ್ಚಿನ ಸಹಾಯವನ್ನು ಒದಗಿಸಬಹುದು, ಚಿತ್ರದಲ್ಲಿ. ಚೂಡಾಮಣಿಯನ್ನು ಕಂಡು, ರಾಮನ ಮುಖದಲ್ಲಿ ಚಿತ್ರದಲ್ಲಿ ಕುತೂಹಲ ಮೂಡಿರಬಹುದು. ಲಕ್ಷ್ಮಣನ ಕಣ್ಣಲ್ಲಿ ಹನಿ ಉದುರುತ್ತಿರಬಹುದು. ಜಟಾಯು ಈ ಗಳಿಗೆಗೆ ಪ್ರಾಣ ಬಿಡುವವನಂತೆ ಅಲ್ಲಿ ಚಿತ್ರಿತವಾಗಿರಬಹುದು. ಇವೆಲ್ಲ ಚಿತ್ರಕಾರನ ಬರೆವಣಿಗೆ ನಿಮಗೆ ತೋರಿಸಿಕೊಡಬಹುದಾದ ವಿಷಯಗಳ ವ್ಯಾಪ್ತಿ. ಈ ಚಿತ್ರವನ್ನೆಣಿಸಿಕೊಂಡಾಗ, ಯಾವತ್ತು ರಾಮಾಯಣದ ಕಥಾನಕವನ್ನು ಆ ಚಿತ್ರ ನಿಮ್ಮ ಮುಂದೆ ತಂದು ನಿಲ್ಲಿಸಲಾರದಾದರೂ, ಅದರ ಒಂದು ದೃಶ್ಯದ ಕ್ಷಣ ಹೊತ್ತಿನ ಘಟನೆಯನ್ನು ಇಲ್ಲಿ ತೋರಿಸಬಹುದು.

ಆದರೆ ನಾವೂ ನೀವೂ ಓದಿಕೊಂಡಿರದ ಸಾಹಿತ್ಯವನ್ನು ಅವಲಂಬಿಸದೆಯೂ ಚಿತ್ರಕಲೆ ಕೆಲಸ ಮಾಡಬಲ್ಲದು. ಪರಿಚಿತ ಕಥಾನಕದ ವಿವರಣೆ ಕವಿಯ ಬಾಯಿಯಿಂದ ಬಂದಂತೆ, ಚಿತ್ರಕಾರನ ಕುಂಚದಿಂದಲೂ ಬರಬೇಕೆಂದಿಲ್ಲ. ಚಿತ್ರಕಾರನ ಸಾಧನಗಳು ಶಬ್ದಗಳಲ್ಲ; ಅವು ಶಬ್ದಗಳು ನೆನಪಿಗೆ ತಂದುಕೊಡುವ ವಸ್ತುಗಳಿರಬಹುದು: ಅವೆಲ್ಲವೂ ನಾವು ನಿತ್ಯಜೀವನದಲ್ಲಿ ಕಾಣುವ ವಿವಿಧ ಆಕೃತಿಗಳು, ರೇಖೆಗಳು ಮತ್ತು ಬಣ್ಣಗಳಿಂದ ಕೂಡಿದುವು. ಕಣ್ಣೆದುರಿಗೆ ಕಾಣಿಸುವ ಬಿಂಬಗಳೆಲ್ಲವೂ ಬೆಳಕಿನ ಪ್ರಭಾವದಿಂದ, ಬಣ್ಣ ರೇಖೆಗಳ ಸಮುದಾಯಗಳಾಗಿ ನಮಗೆ ಕಾಣಿಸಿ, ನಮ್ಮ ಮುಂದಕ್ಕಿರುವ ಯಾವತ್ತು ವಸ್ತುಗಳ ಪರಿಚಯವನ್ನು ನಮಗೆ ಮಾಡಿಕೊಡುತ್ತವೆ. ಆ ವಸ್ತುಗಳಿಂದ ನಮಗೇನು ಪ್ರಯೋಜನ–ಎಂಬುದರಿಂದ ಅವನ್ನು ಕಂಡು ನಮ್ಮಲ್ಲಿ ಸಂತೋಷ ಉಂಟಾಗಬೇಕಿಲ್ಲ. ಒಂದು ತಾವಿನಲ್ಲಿ 'ಇಂಥದು ಮಾವಿನಮರ', 'ಇಂಥದು ಮಲ್ಲಿಗೆ ಹೂ' ಎಂದು ನಾವು ಗುರುತಿಸುತ್ತೇವೆ. ಮಾವಿನ ಹಣ್ಣು ನಾಲಿಗೆಗೆ ರುಚಿ: ಮಲ್ಲಿಗೆ ಹೂ ಮೂಗಿಗೆ ಪರಿಮಳ–ಎಂಬ ಪ್ರಯೋಜನಗಳ ಲೆಕ್ಕಾಚಾರವೇ ಬೇರೆ: ಅವುಗಳ ಆಕೃತಿ ಬಣ್ಣಗಳು ಕೊಡುವ ಸಂತೋಷವೇ ಬೇರೆ. ಸಂತೋಷ ಕೊಡಲಾರದಂಥ ಆಕೃತಿಗಳ ಬಿಂಬ ಕೊಡಬಹುದಾದ ದುಃಖವೇ ಬೇರೆ; ಬೇಸರವೇ ಬೇರೆ. ಒಂದು ಚಿತ್ರದಲ್ಲಿ ಯಾವೆಲ್ಲ ಬಣ್ಣಗಳು ಹೇಗೆ ಹೇಗೆ ಹಂಚಿ ಬಿದ್ದಿವೆ. ಅವು ಹೊಮ್ಮುತ್ತಿರುವ ಪ್ರಕಾಶ ಯಾವ ರೀತಿಯ ಬಿಂಬವನ್ನು ರೂಪಿಸಿದೆ. ಒಂದರ ಮಗ್ಗುಲಿಗೊಂದು ಕಾಣಿಸುವ ಬಣ್ಣದ ರಾಶಿಗಳು ಎಂಥ ರೇಖೆಗಳನ್ನು ಕಣ್ಣಿನ ಮುಂದೆ ಹಾಯಿಸುತ್ತವೆ–ಅವುಗಳ ಮೇಳ ಲಲಿತವಾಗಿದೆಯೇ, ತರಂಗಿತವಾಗಿದೆಯೇ, ಒಡೆದ ಬಂಡೆಯ ಹರಕು ಮುರುಕು ಅಂಚುಗಳಂತಿದೆಯೇ? ಅವು ನೆಟ್ಟಗೆ ದಿಟ್ಟತನದಿಂದ ನಿಂತಿವೆಯೇ? ಅಥವಾ ಅಡ್ಡಕ್ಕೆ ಮಲಗಿವೆಯೇ—ಎಂಬ ಅಂಶಗಳಿವೆ. ಇಂಥ ರೇಖೆ ಮತ್ತು ಬಣ್ಣಗಳ ಪ್ರದರ್ಶನ ನಮ್ಮಲ್ಲಿ ಯಾವೆಲ್ಲ ಭಾವನೆಗಳನ್ನು ತಾನಾಗಿ ತಂದುಕೊಡುತ್ತದೆ? ಎಂದರೆ, ತಮ್ಮ ಸ್ವಂತ ಲಕ್ಷಣಗಳಿಂದ ಅವು ನಮ್ಮ ಮನಸ್ಸಿನ

ಮೇಲೆ ಯಾವ ಪ್ರಭಾವ ಬೀರುತ್ತವೆ ? ಕಾರಣ ತಿಳಿಯದೆಯೇ ಒಂದು ಚಿತ್ರ ಬಿಂಬ ನಮ್ಮಲ್ಲಿ ಉಕ್ಕನ್ನು ಮೂಡಿಸಬಹುದು ; ಸಂತೋಷವನ್ನು ಕೊಡಬಹುದು. ನಮ್ಮ ಮನಸ್ಸಿನಲ್ಲಿ ತಳಮಳವನ್ನೂ ಎಬ್ಬಿಸಬಹುದು. ಆ ಚಿತ್ರದ ಬೆಳಕಿನ ಯೋಜನೆಯ ಆಸ್ಪಷ್ಟತೆಯಿಂದ, ಯಾವುದೋ ಒಂದು ರಹಸ್ಯ ಅಡಗಿದ್ದಂತೆ ವಿಸ್ಮಯ ಬರಿಸ ಬಹುದು. ಇದು ಚಿತ್ರ ಮಾಧ್ಯಮದ ಭಾಷೆ. ಚಿತ್ರಕಾರ ಹೊರಗಿನ ಜಗತ್ತಿನೊಡನೆ ವ್ಯವಹರಿಸುತ್ತ ಬಾಳುತ್ತಿರುವ ದೀರ್ಘ ಜೀವನದಲ್ಲಿ ತನ್ನ ಕಣ್ಣುಗಳ ಮುಂದೆ ಹಾಯುವ ಅಸಂಖ್ಯ ದೃಶ್ಯಗಳನ್ನು ಕಾಣುತ್ತಾನೆ. ಆ ದೃಶ್ಯಗಳಲ್ಲಿ ಗೋಚರಿಸುವ ರೇಖೆಗಳನ್ನೂ, ಹೊಮ್ಮುವ ಬಣ್ಣಗಳನ್ನೂ ಕಂಡು ಪ್ರಭಾವಿತನಾಗುತ್ತಾನೆ. ಇಂಥ ದೃಶ್ಯ ಬಿಂಬಗಳು ವಿವರಗಳು ಅವನಲ್ಲಿ ಹಿಗ್ಗನ್ನುಂಟುಮಾಡಿಯೋ ಅಥವಾ ದುಃಖ ವನ್ನುಂಟುಮಾಡಿಯೋ ಕೆಣಕಬಹುದು. ಆತ ತನ್ನಲ್ಲಿ ಉಂಟಾದ ಅನಿಸಿಕೆಗಳನ್ನು ತನ್ನ ಚಿತ್ರದಲ್ಲಿ ಬರೆಯಬಹುದು.

ಇಂಥ ಚಿತ್ರಗಳು ಯಾವ ಕತೆಯನ್ನೂ ಹೇಳದಿರಬಹುದು, ಯಾವ ತತ್ತ್ವೋಪ ದೇಶವನ್ನೂ ಮಾಡದಿರಬಹುದು. ನಮಗಾಗುವ ಪ್ರಯೋಜನ ಅಪ್ರಯೋಜನ ಗಳನ್ನು ಕುರಿತು ಸಾರದಿರಬಹುದು. ಒಂದು ದೃಶ್ಯ ಇಲ್ಲವೆ ಸನ್ನಿವೇಶವನ್ನು ನೋಡಿದ ಚಿತ್ರಕಾರ, ತನ್ನ ಕಣ್ಣು ಮನಸ್ಸುಗಳನ್ನು, ಆ ದೃಶ್ಯದ ಇಲ್ಲವೆ ಸನ್ನಿವೇಶದ ಯಾವೆಲ್ಲ ವಸ್ತುಗಳು ಲಕ್ಷಣಗಳು ಚಿತ್ರವನ್ನು ಬರೆಯಲು ಪ್ರಚೋದಿಸಿದುವು, ಎಂಬುದಷ್ಟೇ ಮುಖ್ಯವಾಗುತ್ತದೆ.

ಚಿತ್ರಕಾರ ಬರೆಯುವ ವಸ್ತುಗಳಲ್ಲಿ ಮನುಷ್ಯರ ಸುಳಿವೇ ಇರಬೇಕಾಗಿಲ್ಲ. ಆತ ತನ್ನನ್ನು ಸಂಧಿಸಿದ ವ್ಯಕ್ತಿಗಳನ್ನು ಕುರಿತು ಬರೆಯುವಲ್ಲಿ, ಒಬ್ಬನ ದೇಹ ರಚನೆ, ಬಣ್ಣ, ಉಡುಗೆ, ತೊಡುಗೆ ಇಂಥದೇ ರೀತಿಯಲ್ಲಿತ್ತು–ಎಂದು ತಿಳಿಸುವ ತಂಟೆಗೂ ಹೋಗಬೇಕಾಗಿಲ್ಲ. ಕೇವಲ ನಾಲ್ಕು ಗೆರೆಗಳಿಂದ ತಾನು ಕಂಡ ವ್ಯಕ್ತಿಯ ನೆನಪು, ತನ್ನ ಮನಸ್ಸಿನಲ್ಲಿ ಹೇಗೆ ಬೇರೂರಿತೋ, ಅದನ್ನಷ್ಟೆ ಬರೆದುಬಿಟ್ಟು ಉಳಿದೆಲ್ಲವನ್ನೂ ಬಿಡಬಹುದು. ಅವನು ಬಳಿದ ನಾಲ್ಕು ಕುಂಚದ ಬಳಿತಗಳು, ಅಥವಾ ಬರೆದ ನಾಲ್ಕಾರು ಗೆರೆಗಳು ಆ ವ್ಯಕ್ತಿಯನ್ನು ನಮ್ಮ ಮುಂದೆ ಜೀವಂತವಾಗಿ ತಂದು ನಿಲ್ಲಿಸ ಬಹುದು. ಆದಷ್ಟು ಸರಳವಾದ ಮತ್ತು ಕಡಿಮೆ ಮಾತುಗಳಿಂದ ಮನಸ್ಸಿನ ಮೇಲೆ ಆದಷ್ಟು ಗಾಢವಾದ ಪ್ರತಿಕ್ರಿಯೆಯನ್ನು ಮೂಡಿಸಬಲ್ಲ ಸಾಹಿತ್ಯದ ಸಾಮರ್ಥ್ಯ ದಂತೆಯೇ, ಚಿತ್ರಕಾರನ ಪ್ರತಿಭೆ ಅವನು ಬಳಸುವ ಬಣ್ಣ, ಬೆಳಕು, ರೇಖೆಗಳ ಮೂಲಕ ಪ್ರಕಟಗೊಳ್ಳಬಹುದು.

ಇಲ್ಲಿ ಸಾಹಿತ್ಯ ಮತ್ತು ಚಿತ್ರಕಲೆಗಳೆರಡೂ ತುಳಿಯುವ ಸಮಾನ ನೆಲವನ್ನು ನಾವು ಗುರುತಿಸಬಹುದು. ಒಂದು ಕಾವ್ಯದಲ್ಲಿ ಬರುವ ನೂರು ಪಾತ್ರಗಳಲ್ಲಿ ತೊಂಬತ್ತೊಂಬತ್ತನ್ನು ನಾವು ಕಂಡಿರುವುದಿಲ್ಲ. ಅಲ್ಲಿನ ವ್ಯಕ್ತಿ, ವಸ್ತುಗಳು

ಇನ್ನೊಂದೇ ದೇಶದವು. ಇನ್ನೊಂದೇ ಕಾಲದವು. ಅದನ್ನು ಬರೆದ ಸಾಹಿತಿಯೂ ಅವನ್ನು ಕಾಣದೆ ಇರಬಹುದು. ಆತ ತಾನು ಕಂಡ ಜನಗಳ ಅನುಭವ ಮತ್ತು ಲಕ್ಷಣ ಗಳ ಮೇಲಿಂದ, ತನ್ನ ಸಾಹಿತ್ಯದಲ್ಲಿ ವ್ಯಕ್ತಿಗಳ ಲಕ್ಷಣಗಳನ್ನು ಬಣ್ಣಿಸುತ್ತಾನೆ. ಆ ವರ್ಣನೆಯನ್ನು ಓದುವ ಪ್ರತಿಯೊಬ್ಬ ಮನುಷ್ಯನಲ್ಲೂ ಹುಟ್ಟಿಕೊಳ್ಳುವ ಕಥಾ ವ್ಯಕ್ತಿಯ ಬಿಂಬ ಬೇರೆ ಬೇರೆ ತೆರನದು. ಪುಸ್ತಕದಲ್ಲಿ ಬರೆದಿರುವ ಸಾಂಕೇತಿಕ ಲಿಪಿಗಳಿಂದ ಸೂಚಿತವಾದ ಭಾಷೆಯ ಶಬ್ದಗಳಿಂದ ಪ್ರೇರಿತವಾದ ಅಂಥ ಬಿಂಬ ಒಬ್ಬೊಬ್ಬನಲ್ಲೂ ಒಂದೊಂದು ತೆರನಲ್ಲಿ ಕಾಣಿಸುತ್ತದೆ. ಈ ಹೊತ್ತು ಓದಿದ ಕತೆ ಯನ್ನೇ ಇನ್ನು ಹತ್ತು ವರ್ಷಗಳ ಮೇಲೆ ನಾವೇ ಓದಿದಾಗ, ಹಿಂದೆ ಓದಿದಾಗ ಕಾಣಿಸಿದ ವ್ಯಕ್ತಿ ಬಿಂಬಗಳು, ಮುಂದೆಯೂ ಉಳಿಯಲಾರವು. ಬರೆದ ಭಾಷೆ ಯೇನೋ ಒಂದೇ ; ವಾಕ್ಯಗಳು ಕೂಡ ಅವೇನೆ ; ಓದುವಾತ ಬೇರೆ ; ಅಥವಾ ಓದುವ ಕಾಲವೂ ಬೇರೆ. ಅದೇ ರೀತಿಯಲ್ಲಿ ಒಬ್ಬ ಕಲಾವಿದನ ಸೃಷ್ಟಿ–ಪ್ರೇಕ್ಷಕರ ಮನಸ್ಸನ್ನು ಕಲುಕಿ ಚಿತ್ರಕಾರನಲ್ಲಿ ಉಂಟಾದ ಉಕ್ಕು, ಸೊಕ್ಕು, ದುಃಖ ಮೊದಲಾದ ವನ್ನು ಪ್ರೇರಿಸಬೇಕಾದರೆ, ಚಿತ್ರ ನೋಡುವ ವ್ಯಕ್ತಿ ಕೂಡ ತನ್ನ ಜನಗಳು ರೂಢಿಸಿ ಕೊಂಡು ಬಂದ ಚಿತ್ರಗಾರಿಕೆಯ ಸಂಪ್ರದಾಯಗಳನ್ನು, ಶೈಲಿಯನ್ನು, ಸಾಕಷ್ಟು ನೋಡಿ ಅದನ್ನು ಅರ್ಥಮಾಡಿಕೊಳ್ಳುವ ರೀತಿಯನ್ನು ಕಲಿಯಬೇಕಾಗುತ್ತದೆ.

ಹಿಂದಿನ ಸಾಹಿತ್ಯ ಇಂದಿನವರಿಗೆ ಹಿಡಿಸಬೇಕಿಲ್ಲ ; ಇಂದಿನವರದ್ದು ನಾಳಿನವರಿಗೆ ಹಿಡಿಸಬೇಕಾಗಿಲ್ಲ. ಇನ್ನೊಂದು ದೇಶದ್ದು ನಮಗೆ ಒಪ್ಪಬೇಕಾದ್ದಿಲ್ಲ. ನಮ್ಮದು ಅವರಿಗೆ ಒಪ್ಪಬೇಕಾಗಿಲ್ಲ. ಇವುಗಳಲ್ಲಿ ಎಷ್ಟರಮಟ್ಟಿಗೆ ಬರೆದವರ ಮತ್ತು ಓದು ವವರ ಅನುಭವಗಳಲ್ಲಿ ಸಾಮ್ಯತೆ ಕಾಣಿಸುತ್ತದೆಯೋ, ಅಷ್ಟರಮಟ್ಟಿಗೆ ಕಾಲ, ದೇಶ ಗಳ ಬಾಧೆಯಿಲ್ಲದೆಯೇ ಸಾಹಿತ್ಯ ನಮಗೆ ಪಥ್ಯವಾಗುತ್ತದೆ.

ಚಿತ್ರಕಲೆಗೂ ಇಂಥ ಒಂದು ಮಿತಿಯೂ ಇದೆ. ಒಂದೊಂದು ದೇಶದವರು, ಒಂದೊಂದು ಕಾಲದ ಜನಗಳು ತಮ್ಮ ತಮ್ಮ ಶೈಲಿಗಳನ್ನು ಬೆಳೆಯಿಸಿಕೊಂಡು ಬಂದಿದ್ದಾರೆ. ಚಿಂತನಶೀಲ ಅಥವಾ ಕ್ರಾಂತಿಕಾರ ವ್ಯಕ್ತಿಗಳು ಸಾಂಪ್ರದಾಯಿಕ ಅನುಕರಣೆಯಿಂದ, ಚಿತ್ರದ ವಿಷಯಗಳೂ, ಬರೆಯುವ ರೀತಿಗಳೂ ಮರುಕಳಿಸಿ ಪ್ರೇಕ್ಷಕರ ಭಾವನೆಗಳನ್ನು ಜಿಡ್ಡುಗಟ್ಟಿಸಬಹುದು ಎಂಬುದರಿಂದ, ತಮ್ಮ ಮಾಧ್ಯಮ ವನ್ನು ಉಪಯೋಗಿಸುವ ರೀತಿಯಲ್ಲಿ, ಸಂಶೋಧನೆ ನಡೆಸುತ್ತ ಬಂದಿದ್ದಾರೆ. ಆಗಾಗ ಹೊಸತನ ತಂದು ತೋರಿಸಿದ್ದಾರೆ. ಸಾಹಿತ್ಯವನ್ನು ಕುರಿತ ರಸಿಕತೆ ಪ್ರಾಪ್ತಿಸುವುದಕ್ಕೆ ಹೇಗೆ ವಿಶಾಲ ಓದುಗಾರಿಕೆ ಮತ್ತು ಚಿಂತನೆ ಬೇಕೋ, ಅದೇ ರೀತಿ ನಿತ್ಯಜೀವನದಲ್ಲಿ ಸಂಭಾಷಣೆಯ ಮಾಧ್ಯಮವಲ್ಲದ ಬಣ್ಣ, ರೇಖೆಗಳನ್ನು ಬಳಸುವ ಚಿತ್ರಕಲೆಯ ಪರಿಚಯಕ್ಕೆ ಸಾಕಷ್ಟು ರೂಢಿಯೂ ಬೇಕು ; ಅಭ್ಯಾಸವೂ ಬೇಕು. ಅದಕ್ಕಿಂತ ಹೆಚ್ಚಾಗಿ ನಿತ್ಯ ಜೀವನದ ನೋಟಗಳನ್ನು ತಂತಮ್ಮ ಕಣ್ಣಿಂದ ಹೀರಿ, ಸ್ಪಂದಿಸಬಲ್ಲ ಸಂವೇದನಾ ಶೀಲತೆ ನಮ್ಮಲ್ಲಿ ಧಾರಾಳವಾಗಿ ಬೆಳೆದು ಬಂದಿರಬೇಕು.

# ಛಂದಸ್ಸಿನಲ್ಲಿ ಕವಿ ಉಕ್ತಿಯ ವಿನ್ಯಾಸ : ಕುವೆಂಪು ಛಂದೋವಿಚಾರಲಹರಿ*

**ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ**

## ೧

ಛಂದಸ್ಸು ಲಯದ ಒಂದು ವಿಶೇಷರೂಪ. ಆವೃತ್ತಿ ಮತ್ತು ನಿರೀಕ್ಷೆಯ ಆಧಾರದ ಮೇಲೆ ಅದು ನಿಲ್ಲುತ್ತದೆ. ನಿರೀಕ್ಷೆ ನಿಷ್ಕೃಷ್ಟತೆಯಿಂದಿರುವುದು. ಲಯ ಛಂದಸ್ಸುಗಳಲ್ಲಿ ವೈವಿಧ್ಯವಿರುವೆಡೆ, ಲಯ ಛಂದಸ್ಸಿಲ್ಲದಂತೆ ಕಂಡರೂ, ಹೊಕ್ಕು ನೋಡಿದರೆ ವೈಚಿತ್ರ್ಯ ಕಾಣುತ್ತದೆ, ಲಯ ಛಂದಸ್ಸಿರುತ್ತವೆ. ಏಸು ವೈವಿಧ್ಯ ವಿದ್ದರೂ ಛಂದಸ್ಸು ಯಾವುದೋ ಒಂದು ಲಯವನ್ನು ಅನುಸರಿಸುತ್ತದೆ. ಒಂದೇ ಕವನದಲ್ಲಿ ಯಾವುದೋ ಒಂದು ಲಯವನ್ನು ಚೌಕಟ್ಟಾಗಿಟ್ಟುಕೊಂಡು ವಿವಿಧ ರೂಪಗಳನ್ನು ಪಡೆಯಬಹುದು, ಕೊಡಬಹುದು, ಆದರೆ ಛಂದಸ್ಸು ಮೀರು ವುದಿಲ್ಲ. ಲಯವನ್ನೇ ಮೀರಿ ಪಾದ ಪಾದದಲ್ಲಿ ಹೊಸಲಯ ತಂದರೆ ಆಗ ಛಂದಸ್ಸು ಕೆಡುತ್ತದೆ. ಐದು ಮಾತ್ರೆಗಳ ಗಣದ ಲಯ ತಂದರೆ, ಮುಂದೆ ಆ ಲಯದ

---

* ೧೯೫೧–೫೪ರ ನಡುವೆ ಶ್ರೀ ಕುವೆಂಪು ಅವರು ಬಿ. ಎ. ಆನರ್ಸ್ ಮತ್ತು ಎಂ. ಎ. ವಿದ್ಯಾರ್ಥಿಗಳಾಗಿದ್ದ ನಮಗೆ ಕಾವ್ಯಮೀಮಾಂಸೆಯ ಪಾಠವನ್ನು ಬೋಧಿಸುತ್ತಿದ್ದರು. ಈ ಬೋಧನೆ ಯಲ್ಲಿ, ಛಂದಸ್ಸಿನ ಕೆಲವು ವಿಷಯಗಳೂ ಪ್ರಾಸ್ತಾವಿಕವಾಗಿ ಸೇರಿದ್ದುವು. ಈ ವಿಷಯಗಳನ್ನು ಅಂದಿನ ನನ್ನ ಟಿಪ್ಪಣಿ ಪುಸ್ತಕಗಳಿಂದ ಎತ್ತಿ, ಒಂದು ಕ್ರಮದಲ್ಲಿ, ಇಲ್ಲಿ ಬರೆದಿದ್ದೇನೆ. ನಿರೂಪಣೆ ಅವರ ಮಾತುಗಳಲ್ಲಿಯೇ ಇರುವಂತೆ ಬಲುಮಟ್ಟಿಗೆ ನೋಡಿಕೊಂಡಿದ್ದೇನೆ. ಛಂದಸ್ಸಿನ ವಿಚಾರವಾದ ಅವರ ಈ ಕೆಲವು ಚಿಂತನೆಗಳಾದರೂ, ಅವರ ಕಾವ್ಯ ಮೀಮಾಂಸೆಯ ಚಿಂತನೆ ವಿವೇಚನೆಗಳ ವೈಶಿಷ್ಟ್ಯಗಳನ್ನೇ ಪಡೆದಿರುವುದರಿಂದ ಇವುಗಳ ಪ್ರಕಟನೆ ಉಪಯುಕ್ತವಾದುದೆಂದು ನಾನು ತಿಳಿದಿದ್ದೇನೆ.

ಟಿಪ್ಪಣಿಗಳನ್ನು ಬರೆದುಕೊಳ್ಳುವಾಗ ಕೆಲವು ಶಬ್ದಗಳೂ ವಾಕ್ಯಗಳೂ ಬಿಟ್ಟು ಹೋಗಿರುವಂತೆ ತೋರುವುದರಿಂದ ಕೆಲವರಿಗಾದರೂ ಅಲ್ಲಲ್ಲಿ ಅಭಿಪ್ರಾಯ ಸ್ಪಷ್ಟವಾಗಿಲ್ಲವೆಂದೋ ವಿವರಣೆಯ ಅಗತ್ಯ ವಿದೆಯೆಂದೋ ತೋರಬಹುದು. ಇದಕ್ಕಾಗಿ ವೈಯಕ್ತಿಕವಾಗಿ ನನಗೆ ವಿಷಾದವಿದೆ.

ಈ ಛಂದೋವಿಚಾರ ಲಹರಿಯನ್ನು ಪ್ರಕಟಿಸಲು ಕೃಪೆಮಾಡಿ ಅನುಮತಿಯಿತ್ತ ಶ್ರೀ ಕುವೆಂಪು ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಎಷ್ಟು ಗಣಗಳು ಬಂದರೂ ಆ ಲಯ ಒಂದೇ ಬಗೆಯದು. ಉದಾಹರಣೆಗೆ, ಬಿ. ಎಂ. ಶ್ರೀ ಅವರ ' ರಜತ ಮಹೋತ್ಸವ ಪ್ರಗಾಥ ' ವನ್ನು ನೋಡಿ. ಮಾತ್ರಾ ವೈವಿಧ್ಯವನ್ನೂ ಇಲ್ಲಿ ಗಮನಿಸಿ.

ಛಂದಸ್ಸನ್ನು ನಿರ್ಣಯಿಸುವ ಪ್ರಜ್ಞೆ ಅರ್ಥದ ಅಖಂಡತೆ. ಪದದ ಅಖಂಡತೆಯ ದೃಷ್ಟಿಯಿಂದ ೩.೪, ೩.೪.ರ ಭಾಮಿನಿ ೫.೫ ಆಗಿಬಿಡಬಹುದು. ನೋಡಿ :

ಆ ಮಹಾ । ಕ್ರತುವರದೊ । ಳು

ದ್ದಾಮ ।...

ಹೀಗೆಯೇ ೫.೫.೪ಕ್ಕೆ ತಿರುಗಬಹುದು, ೩.೪.೩ಕ್ಕೆ ತಿರುಗಬಹುದು. ೪ ಮಾತ್ರೆಗಳ ಗಣಗಳನ್ನು ತೆಗೆದುಕೊಂಡರೆ ; ೪.೪, ೩.೫, ೫.೩ಕ್ಕೆ ತಿರುಗಿಸಿಕೊಳ್ಳಬಹುದು. ಎಲ್ಲಿ ಈ ಏಕರೂಪತೆಯಲ್ಲಿ ವಿವಿಧ ರೂಪತೆ ಸಾಧಿತವಾಗುತ್ತದೆಯೋ ಅಲ್ಲಿಯೇ ಉತ್ತಮ ಛಂದಸ್ಸಿನ ಸಿದ್ಧಿ; ಇಲ್ಲದಿದ್ದರೆ ಬೇಜಾರಿನ ರಗಳೆ.

ನಿರೀಕ್ಷೆಯ ಸಫಲತೆಗೆ ಆವೃತ್ತಿ. ನಿರೀಕ್ಷೆ ಸಫಲವಾಗದಿದ್ದರೆ ಆವೃತ್ತಿ ಇಲ್ಲ. ಛಂದಸ್ಸಿನ ವಿಷಯ ಏನೂ ತಿಳಿಯದಿದ್ದವನಿಗೆ

ತಿರುಕ । ನೊರ್ವ । ನೂರ । ಮುಂದೆ

ಎಂದು ಹೇಳಿ, ಅನಂತರ

ಮುರುಕು । ಧರ್ಮದ । ಶಾಲೆ । ಯೊಳಗೆ

ಎಂದು ಬಿಟ್ಟರೆ, ಅವನಿಗೂ ಮುಗ್ಗರಿಸಿ ಬಂದಂತೆ ಅನುಭವವಾಗುತ್ತದೆ. ಬರಿಯ ನಾದಾಂಶದ ನಿರೀಕ್ಷೆ ಇಲ್ಲಿ ಸುಳ್ಳು. ಸಂಗೀತದಲ್ಲಿ ಇದು ನಿಜವಿರಬಹುದು. ಆದರೆ ಸಾಹಿತ್ಯದಲ್ಲಿ ಅದು ಅರ್ಥಭಾವ ಸಮನ್ವಿತ. ಅಕ್ಷರ, ಗುರು ಲಘುಗಳ ಸಮನ್ವಿತತೆ, ದ್ವಿತೀಯಾಕ್ಷರ ಪ್ರಾಸ ಇಷ್ಟೂ ಇದ್ದಾಗ್ಯೂ, ವೈವಿಧ್ಯತೆಯಿಂದ ಪದದ ಅಖಂಡತೆ ಅರ್ಥದ ದೃಷ್ಟಿಯಿಂದ ರಗಳೆಯಾಗುವುದು ತಪ್ಪುತ್ತದೆ. ಇದರಿಂದಲೇ ವೃತ್ತವೂ ಹೃದ್ಯವಾಗುತ್ತದೆ.

ಪಾದದಲ್ಲಿ ಅಲ್ಪಯತಿ, ಅರ್ಧಯತಿ, ಭಾವಯತಿ, ಪೂರ್ಣಯತಿ ಎಂಬುದು ಇರುತ್ತದೆ. ಯಾವ ಪಂಕ್ತಿಯೂ ತನಗೆ ತಾನೇ ಪ್ರತ್ಯೇಕ ಮೂಲಮಾನವಲ್ಲ; **No line is a unit.** ಪೂರ್ವಭಾವಿಯಾದ ನಿರೀಕ್ಷೆಯಿಂದ ಹರ್ಷ-ದುಃಖ. ಪದಾರ್ಥಗಳ ಗುಣವನ್ನು ಹೀಗೇ ನಿರ್ಣಯಿಸುತ್ತೇವೆನ್ನುವಂತಿಲ್ಲ. ಹೊಸ ಛಂದಸ್ಸು ಹೊಸ ನಿರೀಕ್ಷಣೆಗಳು ಹಳೆಯ ಛಂದಸ್ಸಿನ ಆವರಣದಲ್ಲಿ ಬೆಳೆದವನಿಗೆ ಹಿಡಿಸದೇ ಇರಬಹುದು. ಈಗಿನ ನವ್ಯ ಛಂದಸ್ಸನ್ನು ಜೀರ್ಣಿಸಿಕೊಂಡ ಜನತೆ ಮುಂದೆ ಬೇರೆ ಬೇರೆ ಛಂದಸ್ಸಿಗೆ [ಮುನ್ನಡೆಯಬಹುದು.]

ಛಂದಸ್ಸು, ನಮ್ಮ ಶಾಸ್ತ್ರಕಾರರ ದೃಷ್ಟಿಯಿಂದ **Objective.** ಆದರೆ ಸರಿಯಾಗಿ ಚಿಂತಿಸಿದರೆ, **Subjective.** ಆದರೆ ಎರಡರಲ್ಲೂ ಒಂದೇ ಪಕ್ಷ ಹಿಡಿಯಲಾಗದು ; ಸಂಪೂರ್ಣವಾಗಿ ಪ್ರಜ್ಞಾನಿಷ್ಠ, ಶಾಸ್ತ್ರನಿಷ್ಠ ಎಂದು ಭಾವಿಸಲಾಗದು. ಎರಡರ ಸಮನ್ವಯವನ್ನೂ ಮಾಡಿ ನೋಡಬೇಕು. ಕಾವ್ಯದ ಚರ್ವಣ ಸುಲಿದು ಹದಹಾಕಿ ಗೆರೆಹಾಕಿ ಒಣಗಿಸಿದ್ದಾರೆ ನಮ್ಮ ನಾಗವರ್ಮಾದಿ ಛಂದಶಾಸ್ತ್ರಕಾರರು. ಹಾಗೆಂದು We cannot be completely subjective. ಏಕೆಂದರೆ, ಆಗ ಯಾರು ಏನು ಬೇಕಾದರೂ ಹೇಗೆ ಬೇಕಾದರೂ ಮಾಡಿಬಿಡಬಹುದು, ತಮಗೆ ತೋಚಿದಂತೆ. ಎರಡರ ನಡುವೆ ಚಲಿಸಬೇಕು. Expectancy ಆವಶ್ಯಕವಾದರೂ ಅದೇ ಇವನ ರುಚಿಯನ್ನು ನಿರ್ಣಯಿಸಲು ಸಾಧ್ಯವಿಲ್ಲ. ವಸ್ತುನಿಷ್ಠತೆ ಅವನ ನಿರೀಕ್ಷೆಗೆ ಮೊದಲು 'ಉಪ್ಪು' ಆಗಿರಲೇಬೇಕು–ಎಂದರೆ ಅವನು ಮೂಲತತ್ತ್ವಗಳನ್ನು ತಿಳಿದಿರಲೂ ಬೇಕು. ಬಹು ಜನರ ಪ್ರಜ್ಞೆಗೆ ಸಂಬಂಧಿಸಿದ್ದು ವರ್ಣ, ಲಯ, ಛಂದಸ್ಸು; ಆದ್ದರಿಂದಲೇ Objectivity ಯುಂಟು. ಚರ್ಚೆಯಿಂದ ರುಚಿಯನ್ನು ನಿರ್ಣಯಿಸುವುದಿಲ್ಲ, ರುಚಿಗೋಸ್ಕರ ರುಚಿಯನ್ನು ನಿರ್ಣಯಿಸುತ್ತಾರೆ. ಲಯದ ಮಾಧುರ್ಯವನ್ನು ನಾವು ಅನುಭವಿಸುವಾಗ, ಭಾವದ ಕಡೆ ದೃಷ್ಟಿಯೇ ಹೋಗುವುದಿಲ್ಲ ; ಆದರೆ ಎರಡನ್ನೂ ಸಮನ್ವಯಿಸಿಕೊಂಡು ಪದ್ಯವನ್ನು ಓದಬೇಕು. ಇದಕ್ಕೆ ಅನುಪ್ರಾಸ, ಯಮಕ, ವರ್ಣಾವೃತ್ತಿಗಳು ಸಹಕಾರಿಯಾಗಿರುತ್ತವೆ.

ಗದ್ಯದ ಲಯ (Ordinary prose) ದಲ್ಲಿ ಅರ್ಥ ಭಾವನಿಷ್ಠೆ ಇರಬಹುದು. ಲಯ ಛಂದಸ್ಸುಗಳ ನಿರೀಕ್ಷೆಯು ದೃಷ್ಟಿಯಿಂದ ವಿಫಲತೆಯಿದ್ದರೆ ಅಲ್ಲಿ ನಿರೀಕ್ಷೆ ಮಾಡುವುದು ಬಿಟ್ಟು, ಮನಸ್ಸು ಪೂರ್ತಿ Conscious ಆಗಿರಬೇಕಾಗುತ್ತದೆ. ಉತ್ತಮವಾದ ಗದ್ಯದಲ್ಲಿ 'ಲಯ'ದ ಗತಿ ಸಿಕ್ಕುತ್ತದೆ : ಕಾವ್ಯದ ಮಟ್ಟಕ್ಕೆ ಗದ್ಯವನ್ನೇರಿಸುತ್ತದೆ.

ಒಂದು ಗಾತ್ರದ ಅಕ್ಷರವನ್ನು ನಿರೀಕ್ಷಿಸುತ್ತ ಹೋಗುವಲ್ಲಿ, ಅಕ್ಷರದ ಗಾತ್ರಗಳು Vary ಆಗುತ್ತ ಹೋದರೆ ಓದುವುದು ಕಷ್ಟವಾಗುತ್ತದೆ. ಆದರೆ ಅದೂ ಸಾರ್ವಜನಿಕತೆಯಿಂದ, ಕಾಲಕ್ರಮದಲ್ಲಿ ಮನಸ್ಸು ಗ್ರಹಿಸುವಂತಾಗಬಹುದು. ಸಂಸ್ಕೃತ ಕನ್ನಡಗಳನ್ನು ಬೆರಕೆಮಾಡುವಲ್ಲಿ, ಮಲಯಾಳಂ ಭಾಷೆಯಲ್ಲಿ ಸಂಸ್ಕೃತ + ಮಲಯಾಳಂ, ಮಲಯಾಳಂ + ಸಂಸ್ಕೃತ ಅವರಿಗೆ ಒಗ್ಗಿರುವಂತೆ, ನಮಗೆ ಸಂಸ್ಕೃತ + ಕನ್ನಡ, ಕನ್ನಡ + ಸಂಸ್ಕೃತ ಇನ್ನೂ ಒಗ್ಗಿಲ್ಲ. ಬೇಕು ಬೇಡೆಂಬ ವಾದವಿರುವುದರಿಂದ ಅದು ನಮಗೆ ಒಗ್ಗಿಲ್ಲ. It is in the terms of the Variations, in the twists that the rhythm [exists]

ಪಂಪ ಒಂದು ತರಹದ ಭಾಷೆ ಬಳಸುತ್ತಾನೆ. ಆ ತರಹದ ಭಾಷೆಯ ನಿರೀಕ್ಷೆಯಿಂದಲೇ ಇದು ಅವನದು, ಅವನದಲ್ಲ ಎಂದು ಹೇಳುವುದು ಸಾಧ್ಯವಾಗುತ್ತದೆ. Determinate expectancy– ನಿರ್ದಿಷ್ಟ ನಿರೀಕ್ಷೆ, indeterminate expec-

tancy ಅನಿರ್ದಿಷ್ಟ ನಿರೀಕ್ಷೆ ಎರಡೂ ಉಂಟು. ನಾದಾಂಶದಿಂದಲೇ ಒಂದು ಭಾವಾಂಶ ಸಿದ್ಧವಾಗುತ್ತದೆಯೆಂದಲ್ಲ ; ಅದು ಶಾಸ್ತ್ರಗ್ರಂಥದಲ್ಲಿ ಸಾಧ್ಯವಿಲ್ಲ. ನಾದಾಂಶ ಅರ್ಥ ಭಾವಗಳ ಮೇಲೆ ಪ್ರಭಾವ ಬೀರುತ್ತದೆ. ಕಾವ್ಯದ ಹತ್ತಿರ ಹತ್ತಿರಕ್ಕೆ ಗದ್ಯ ಬಂದರೆ, ಶಾಸ್ತ್ರೀಯವಾಗುವುದಕ್ಕೆ ಬದಲಾಗಿ, ರೂಪಾಂಶವೆಂದು ಕರೆಯುವ ಸ್ಥಿತಿಗೆ ಬರುತ್ತೇವೆ, ನಾವು.

ಅರ್ಥದಲ್ಲಿ ಹೇಗೆ ಒಂದು ನಿಷ್ಕೃಷ್ಟತೆಯನ್ನು ಒಪ್ಪುವುದಿಲ್ಲವೋ ಹಾಗೆಯೇ ಭಾವದಲ್ಲಿಯೂ ಒಂದು ನಿಷ್ಕೃಷ್ಟತೆಯನ್ನು ಒಪ್ಪುವುದು ಸಾಧ್ಯವಿಲ್ಲ. ಅದು ಧ್ವನಿ ಸಿದ್ಧಾಂತಕ್ಕೆ ಕೊಡಲಿಪೆಟ್ಟು ಬಿದ್ದಂತೆ. ಒಂದೊಂದು ಪ್ರತ್ಯೇಕ ಪದಕ್ಕೆ ಇದು ಇಂಥ ರಸ ಸಂಬಂಧಿ ಎಂದು ಮೊದ ಮೊದಲು ಹೇಳಲು ಸಾಧ್ಯವಿಲ್ಲದಿದ್ದರೂ, ಕಾವ್ಯಗಳನ್ನು ಓದುತ್ತ ಮುಂದುವರಿಯುತ್ತ, ಸಂಸ್ಕಾರ ಪಡೆದಂತೆ ಆಯಾ ಪದಕ್ಕೆ ಆಯಾ ರಸ ಸಂಬಂಧಗಳು ಅಂಟಿಕೊಂಡು ಬರುತ್ತವೆ. ನಾದದ ಅಂಶದಿಂದ ಕೂಡ ಇದು ಅಂಟಿಬರಬಹುದು. ಪೂರ್ವಕವಿಪ್ರಯೋಗ, ಸಂಸ್ಕಾರಗಳ ತಿಳಿವಳಿಕೆ ಸಂಬಂಧಗಳನ್ನು ಅನುಸರಿಸಿಯೂ ಇದು ಇರುತ್ತದೆ. ವಾಸ್ತವವಾಗಿ ಉತ್ತಮ ಲೇಖಕನಾದವನು ಪದಗಳಿಗೆ ರಸವನ್ನು ಆರೋಪಿಸುತ್ತಾನೆ, ಆಮೇಲೆ ಅದು ಸ್ವಭಾವವಾಗುತ್ತದೆ. ಧ್ವಜದ ಬಟ್ಟೆಗೆ, ಧ್ವಜವೆಂಬ ನಮ್ಮ ಆರೋಪಣೆಯ ಮೂಲಕ, ಅದು ನಮ್ಮನ್ನೇ ತನ್ನ ಕಡೆಗೆ ಗೌರವವನ್ನು ಸಲ್ಲಿಸುವಂತೆ ಎಳೆದುಕೊಳ್ಳುತ್ತದೆ.

ಕೆಲವು ಪದಗಳು ಬಾಚಿದ ತಲೆಯಂಥವು ; ಇನ್ನು ಕೆಲವು ತಲೆಕೆದರಿಕೊಂಡಂಥವು, ಕೈಗೆ ಸಿಗದಂಥವು. ಬಳಕೆಯಲ್ಲಿ ಉಪಯೋಗಿಸುತ್ತ, ಆಯಾ ರಸದ, ಅರ್ಥದ ಗುಣಗಳು ಅವುಗಳಿಗೆ ಪ್ರಾಪ್ತವಾಗುತ್ತವೆ. ಆ ಪದಗಳನ್ನು ಎಲ್ಲಿಯೇ ಕಾಣಲಿ, ನಮಗೆ ಆ ರಸದ ಅನುಭವ ಕೊಂಚ ಗೋಚರವಾದರೂ ಆದೀತು. ಕರಣೇಂದ್ರಿಯ ಗ್ರಾಹ್ಯವಾದ ಅಂಶ [ಅಂತರಿಂದ್ರಿಯದ ವಿಷಯವಾಗಿ ಪರಿಣಮಿಸುತ್ತದೆ, ಇಲ್ಲಿ].

ಅರ್ಥ ಭಾವಸಮನ್ವಿತವಾದ್ದು. ಅರ್ಥ, ಭಾವ, ನಾದದ ಶರೀರಗಳು ಪದ ಗಳಿಗೆ ಇರುತ್ತವೆ, ನಮಗೆ ಅನ್ನ, ಪ್ರಾಣ, ಆನಂದಾದಿ ಕೋಶಗಳಿರುವಂತೆ. 'ತಳಿರು' ಪದ ಇಂಗ್ಲಿಷ್‌ನವನ, ಕನ್ನಡಿಗನ ಕಿವಿಗೆ ಕೇಳುವುದು ಸಮಾನವಾದ ಅಂಶ. ಆದರೆ ಅರ್ಥ ಭಾವಗಳ ದೃಷ್ಟಿಯಿಂದ ಇಬ್ಬರಿಗೂ ಆಗುವ ಅನುಭವ ಬೇರೆ. 'ತಳಿರು' ಎಂಬ ಪದದ ಪಾತ್ರೆಯಲ್ಲಿ ಕೈ ಹಾಕಿದರೆ, ಕನ್ನಡಿಗನಿಗೆ ಅರ್ಥ ಭಾವ ಸ್ವಾರಸ್ಯಗಳ ಅಕ್ಷಯನಿಧಿ ಸಿಕ್ಕುತ್ತದೆ; ಇಂಗ್ಲಿಷ್‌ನವನಿಗೆ ಯಾವ ಅಗಳೂ ಕಾಣಸಿಗುವುದಿಲ್ಲ. 'ತಳಿರು' ಪದ ನಮಗೆ ಅದರ ಅರ್ಥ ಭಾವ ನಾದಗಳ ಅಪ್ರತ್ಯೇಕವಾದ ಆನಂದಸ್ಥಿತಿ. ಇಂಗ್ಲಿಷ್‌ನವನಿಗೆ ಅದರಲ್ಲಿ ಏನೂ ಕಾಣುವುದಿಲ್ಲ. ಒಂದು ಪಾದದ ಎಲ್ಲ ಪದಗಳ ಅರ್ಥವೂ ನಾದವೂ ಭಾವವೂ, ಈ 'ತಳಿರು' ಅದರಲ್ಲಿ ಬರುವಾಗ, ಅದನ್ನು ಆಳು ತ್ತವೆ ; ಅದರ ಅರ್ಥವನ್ನು ನಿರ್ಣಯಿಸುತ್ತವೆ. For the effect of a word

as sound cannot be seperated from its contemporaneous other effects, they become in-extricably mingle at once.

ಸಮಾಜದ ಒಬ್ಬ ವ್ಯಕ್ತಿ ಜನಗಣತಿಯ ಲೆಕ್ಕಕ್ಕೆ ಒಬ್ಬನೇ ; ಆದರೆ ಎಷ್ಟೋ ಸಂಬಂಧಗಳಿಂದ ಸಮಾಜದಲ್ಲಿ ಕೂಡಿರುತ್ತಾನೆ. ರಾಜಕೀಯವಾಗಿ, ಸಾಮಾಜಿಕವಾಗಿ. ಸಾಹಿತ್ಯದಲ್ಲಿ, ಒಂದು ಪದಕ್ಕೆ ನಾದಾಂಶವಷ್ಟಲ್ಲದೆ, ಅದು ಅಲ್ಲಿ ಬೇರೆ ಅಂಶಗಳಿಂದಲೂ ಕೂಡಿರುತ್ತದೆ. ಈ ನಾದಾಂಶವನ್ನು ಇತರ ಅಂಶಗಳಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ; ಅದು ಅವುಗಳೊಂದಿಗೆ ಅವಿಭಾಜ್ಯವೆಂಬಂತೆ ಅಪ್ರತ್ಯೇಕ.

ಇದಱೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ
ಪುದಿದಟ್ಟಾಡಿತ್ತು...

ಕಾವ್ಯದಲ್ಲಿ ಪದ ಅನನ್ಯ ಪರತಂತ್ರವಾದ್ದು. ಇದರ ಸ್ವಾತಂತ್ರ್ಯವೆಲ್ಲ ಇತರ ಅನೇಕ ಸ್ವಾತಂತ್ರ್ಯಗಳಿಂದ ಬಂಧಿತವಾದ್ದು. ಛಂದಶ್ಶಾಸ್ತ್ರ ಎಲ್ಲವನ್ನೂ ಬಿಟ್ಟು ಪ್ರತ್ಯೇಕವಾದ ನಾದಾಂಶವನ್ನು [ವಿವರಿಸಲಾರದು]. ಶಬ್ದದ ಅಂಶವನ್ನು ಅರ್ಥದಿಂದ ಬೇರ್ಪಡಿಸಲು ಮನಶ್ಶಾಸ್ತ್ರಿಗೂ ಕಷ್ಟ. ಪದದ ಅಖಂಡತೆ ಅರ್ಥದಿಂದ, ಭಾವದಿಂದ, ಅವುಗಳ ಸಂಬಂಧದಿಂದ ನಿರ್ಣಯವಾಗುತ್ತದೆ ; ಪ್ರತ್ಯೇಕವಾಗಿ ಎಂದೂ ವರ್ತಿಸಲು ಸಾಧ್ಯವಿಲ್ಲ. ಕಾವ್ಯ ಶರೀರವಿದ್ದಂತೆ, ಅಲ್ಲಿಯ ಪದಗಳೆಲ್ಲ ಅಂಗೋಪಾಂಗಗಳಿದ್ದಂತೆ. ಸಾವಯವ ಸಂಬಂಧ ಅವುಗಳದು. ಚರ್ಮ ಹದ ಹಾಕುವವನು ಪ್ರಾಣಿಯ ಯೋಗ ಕ್ಷೇಮ ಹೇಗೆ ನೋಡುತ್ತಾನೆ ? ಛಂದಶ್ಶಾಸ್ತ್ರಕಾರರ ಶಾಸ್ತ್ರದೃಷ್ಟಿ ಹಾಗೆ. ಆದರೆ ಚರ್ಮಕ್ಕೆ ಹದ ಹಾಕಲೆಂದೇನೂ ಹುಲಿಗೆ ಮಂಡೆ ಬಂದಿಲ್ಲ ! ಹಾಗೆಯೇ ಕವಿಗಳು ತಮತಮಗೆ ಇಷ್ಟವಾದಂತೆ ವೈವಿಧ್ಯವನ್ನು ತೋರಿಸಿದ್ದಾರೆ.

ಕುಲ ಶೈಲಂಗಳ್ ಪದಾಘಾತದೊಳಲುಗುವಿನಂ ತಾರಕಾ ಸಂಕುಳಂ ತೋ
ಳ್ಗಳದೊಂದಳ್ಳೇಱಿನೊಳ್ ಪೂವಲಿವೊಲುದಿರ್ವಿನಂ ವಾರ್ಧಿಗಳ್
ರೇಚಕೋತ್ಥಾ
ನಿಲ ತೀವ್ರಾಘಾತದಿಂದುಚ್ಚಳಿಪಿನಮಖಿಳಾಶಾಂತರಂ ದೇವತೂರ್ಯಾ
ವಳಿ ಗೀತಧ್ಯಾನದಿಂದಂ ಪುದಿವಿನಮೆಸೆದಿತ್ತಿಂದ್ರನಾನಂದ ನೃತ್ಯಂ ॥

ಇಲ್ಲಿ "ಕುಲಶೈ।ಲಂಗಳ್ ಪ।..." ಸಂಪ್ರದಾಯದ ವಿಭಜನೆ. "ಕುಲ ಶೈಲಂಗಳ್" ಅಲ್ಪಯತಿ ; "ಪದಾಘಾತದೊಳಲುಗುವಿನಂ" ಎಂಬವರೆಗೆ ಬಂದಾಗ ಅರ್ಧಯತಿ, "ತೋಳ್ಗಳೊಂದಳ್ಳೇಱಿನೊಳ್" ಇಲ್ಲಿಗೆ ಅಲ್ಪಯತಿ. ಮುಂದೆಯೂ ಹೀಗೆಯೇ ವಿಭಜನೆಗಳು. "ತೀವ್ರಾಘಾತದಿಂದುಚ್ಚಳಿಪ" ಇಲ್ಲಿ ದಿಂದ್ + ಉಚ್ಚಳಿಪ (ದ್+ಉ= ದು) ಸಂಧಿ ಸೇರುತ್ತದೆ. ರೋಮನ್ ಲಿಪಿಯಲ್ಲಿ ಸಂಧಿ ಬಿಡಿಸಿ ಬರೆಯುವುದೇ ಸ್ವಭಾವ. ನಾವು ಸಂಧಿ ಬಿಡಿಸಿ, ಸಂಧಿಯ ಹೆಸರು ಹೇಳುತ್ತೇವೆ.

ಪ್ರಸ್ತಾರದಲ್ಲಿ ಅರ್ಧಯತಿ, ಪೂರ್ಣಯತಿ, ಅಲ್ಪಯತಿ ಹೀಗೆ ಗುರುತಿಸಿ ಗ್ರ್ಯಾಫ್ ಹಾಕಬೇಕು.

ಮಾತ್ರಾಛಂದಸ್ಸುಗಳಲ್ಲಿ ಯಾವುದನ್ನು ಆವೃತ್ತಿ ಛಂದಸ್ಸೆನ್ನುತ್ತೇವೆಯೋ ಅದರಿಂದ ಪಾರಾಗುವುದೇ ಮಹಿಮೆ. ವೃತ್ತಗಳಲ್ಲಿ, ನ್ಯಾಯವಾಗಿ, ಬರುವ monotony ತಪ್ಪುವುದನ್ನು ಕಾಣಬಹುದು. Recognisable regularity is horrible in prosedy. ರಗಳೆಗೂ ಮಹಾ ಛಂದಸ್ಸಿಗೂ ಇರುವ ವ್ಯತ್ಯಾಸ ವನ್ನು ನೋಡಿ. ಅಕ್ಷರ ಸಮ, ಗುರುಲಘುವಿನ್ಯಾಸ ಸಮ : ಆದರೆ ಯತಿ ನಿಯಮ ದಲ್ಲಿ ವ್ಯತ್ಯಾಸವಾಗುತ್ತ ಹೋಗುತ್ತದೆ. ವೈವಿಧ್ಯದ ಯತಿಪಾಲನೆಯಾಗುತ್ತದೆ, ಇಂಗ್ಲಿಷ್ ಬ್ಲ್ಯಾಂಕ್‌ವರ್ಸಿನಲ್ಲಿ. ಕನ್ನಡ ರಗಳೆಯಲ್ಲಿ ಪದ, ಯತಿ, ಗಣ ಸರ್ವಸಮ; ಆದ್ದರಿಂದ ಏಕತಾನತೆ. ಕುಮಾರವ್ಯಾಸನ ಮಾತ್ರಾ ಛಂದಸ್ಸು, ಪಂಪನ ಅಕ್ಷರ ಛಂದಸ್ಸು, ಮಿಲ್ಟನ್ನನ ಬ್ಲ್ಯಾಂಕ್‌ವರ್ಸ್ [ಇಲ್ಲೆಲ್ಲ ಆ ಏಕತಾನತೆಯನ್ನು ಯಶಸ್ವಿ ಯಾಗಿ ಗೆದ್ದಿದೆ].

ಈ ಸಾಧನೆ ಸೈಕಲ್ ಸವಾರಿಯಿದ್ದಂತೆ. It is a continuous one movement. ಐವತ್ತು ಕೋಟಿ ಉಪಚಲನೆ, ವಿನ್ಯಾಸ, ಅಡಿತಡೆಯ ನಿವಾರಣೆ-ಪ್ರತ್ಯೇಕವಾಗಿ ಇವನ್ನು ಆಚರಿಸುವಾಗ ಬುದ್ಧಿ ಮೂಲವಾಗಿದ್ದರೂ ಬುದ್ಧಿ ಪೂರ್ವಕ ವಾಗಿ ಅಲ್ಲ, ಹಾಗೆ ಮಾಡುವುದು. ಸರ್ಕಸ್ಸಿನವರು ಎಷ್ಟೋ ಗುಂಡುಗಳನ್ನು ಸುಲಭ ವಾಗಿ ವಿನ್ಯಾಸದಲ್ಲಿ ಹಾರಿಸುವಂತೆ, ಅದು ಮೊದಮೊದಲು ಎಷ್ಟೋ ಸಾಧನೆಗಳಿಂದ ಸಾಧ್ಯವಾಗಿರುವಂತೆ, ಕಾವ್ಯರಚನೆಯೂ ಹಾಗೆಯೇ spontaneous : ಮೊದ ಮೊದಲು ಸಾಧನೆ ಆವಶ್ಯಕವೆಂಬುದನ್ನು ಒಪ್ಪಬೇಕು. ಈ ಮೊದಲು ನೋಡಿದ ಆದಿಪುರಾಣ ಪದ್ಯದಲ್ಲಿ-ಗಳ್, ತೋಳ್ಗಳ ಎಂಬಲ್ಲಿಯ ನಿಲುಗಡೆಗಳಲ್ಲಿ ನಾದವ್ಯತ್ಯಾಸ ವನ್ನು ಗುರುತಿಸಬೇಕು. ಚಿತ್ತಸ್ಪಂದನ (agitation of mind)ದ ಗುಣದಿಂದ ಸಂಭಾವ್ಯವಾದ ಅರ್ಥದ ಸಿದ್ಧಿ. ಔಚಿತ್ಯಾನುಸಾರಿಯಾಗಿ, ಅರ್ಥೌಚಿತ್ಯಕ್ಕೆ ಅನುಗುಣ ವಾಗಿ, ನಮ್ಮ ಮನಸ್ಸು-ಸಹೃದಯನ ಹೃದಯ–ಯಾವ ಧ್ವನಿಯನ್ನೂ ಅರ್ಥವನ್ನೂ ಪದದ ಆಗಮನವನ್ನೂ ನಿರೀಕ್ಷಿಸುತ್ತದೆ ; ನಿರ್ಣಯಿಸುತ್ತದೆ. ತೂಕದಲ್ಲಿ ಎರಡು ರುಚಿಯ ಹಣ್ಣು ಒಂದೇ ಆಗಿದ್ದರೂ, ರುಚಿಯಲ್ಲಿ ಅನುಭವಕ್ಕೆ ಬಂದಾಗ ಅದರ ಸತ್ಯಾಸತ್ಯತೆ ಗೋಚರಿಸುತ್ತದೆ. ಹಾಗೆಯೇ ಪದಕ್ಕೆ gloomy ಅಥವಾ gay ಅರ್ಥ ಅನುಭವ ಗೋಚರವಾದ್ದು. ಪದ ತನಗೆ ತಾನೇ gloomy ಅಲ್ಲ, gay ಅಲ್ಲ. "ಸುಡುಗಾಡು... ಥೂ ಬಾಯಿ ಮುಚ್ಚಲಿ" ಎನ್ನುತ್ತೇವೆ. ಕೆಲವು ಪದಗಳು ಜ್ವಾಲಾ ಮಯ ಪ್ರತಿಮೆಗಳು, ಪ್ರವಾಹೋಪಮವಾದ ಲಹರಿ ಪ್ರತಿಮೆಗಳು. ಗಿಳಿ ಪದ, ಕೋಗಿಲೆ ಪದ, ರಾಜ ಪದ, ಗುಲಾಮ ಪದ—ಹೀಗೆ ಹಲವು ರೀತಿಯ ಪದಗಳಿರ ಬಹುದು. ಬೆಳೆದ ಸಾಹಿತ್ಯದಲ್ಲಿ ಒಂದು ಭಾವಕೋಶ ಬೆಳೆದು ಬೆಳೆದು, ಬೆಳೆಯುತ್ತ,

ಸಂಸ್ಕಾರ ಪಡೆದು ಬಂದಿರುತ್ತದೆ. ಯುಗಯುಗಕ್ಕೆ ಇದು ಬೇರೆಬೇರೆಯಾಗಿ Ripe ಆಗಬಹುದು, ಜೀವ ತನ್ನ ಭವಾವಳಿ ಜನ್ಮದಿಂದ ಈ ಜನ್ಮಕ್ಕೆ ಕರ್ಮಾನುಸಾರವಾಗಿ ಬರುವಂತೆ. ತಿನ್ನುವ ನಾಲಗೆಯನ್ನು ಬಿಟ್ಟು, ಕಣ್ಣು ಸಿಹಿ, ಕಹಿ ಎನ್ನುವುದು ಸಾಧ್ಯವೇ ? ಕಾವ್ಯದಲ್ಲಿ ಆಲಿಸುವ, ಕಿವಿ, ಹೃದಯವನ್ನು ಬಿಟ್ಟರೆ, ಅದಕ್ಕದೇ ಹೇಗೂ ನಮಗೆ ತೋಚುವುದಿಲ್ಲ.

ಸಿಡಿಲ್-ಡಡಡ್ ಎಂಬಂತೆ ಸದ್ದು ಕೊಡುವ ಮಾತು ಇದು. ಅಶನಿಗಿಂತ ಸಿಡಿಲ್ ಕನ್ನಡದವನಿಗೆ ಹತ್ತಿರ. ಕೋಗಿಲೆ, ಕಾಗೆ ಎಂಬ ಮಾತುಗಳಿಂದಲೇ ಅವುಗಳ ಕೂಗು, ಸಹ್ಯತೆ ಅಸಹ್ಯತೆ ನಮಗೆ ತೋಚುತ್ತದೆ. ಹುಲಿ (ವ್ಯಾಘ್ರ), ಇಲಿ ನಾದಾಂಶದಲ್ಲಿ ಒಂದೇ ಆದರೂ ಭಾವಾಂಶದಲ್ಲಿ ಬೇರೆ ಬೇರೆಯೇ ಪದ ಅದಕ್ಕದೇ ವಿಷಾದವೂ ಹರ್ಷ ಸೂಚಕವೂ ಅಲ್ಲ.

Every word has a consciousness. 'ಮರದಲ್ಲಿ'–ಇದರಲ್ಲಿ ಎಷ್ಟು ಅರ್ಥವಾಗುತ್ತದೋ, ಅದರ $\frac{1}{4}$ ಭಾಗ ಅರ್ಥವಾಗುತ್ತದೆಯೋ, 'ದ' ಎಂದು ಒಂದೇ ಅಕ್ಷರ ಹೇಳಿದರೆ ?

'ತಳಿರು' : Can there be a word without intellectual and emotional association ? ಆಗ ಮಾತ್ರ ಪದಗಳು ನಿರ್ಗುಣ ಎಂದು ಒಪ್ಪಿಕೊಳ್ಳಬಹುದು ? ನಾದಾಂಶ ಭಾವಾಂಶಕ್ಕೆ ಅಧೀನವಾಗಿರುತ್ತದೆ. 'ಬೆಳ್ದಿಂಗಳ್' ಎಂದರೆ ತಂಪು ಅನುಭವ, ಭಾವಗಳು ಸೇರಿವೆ. ಹಾಗೆಯೇ ಪ್ರತಿಯಾಗಿ ಸುಡು ಬಿಸಿಲು. ಆಲಂಕಾರಿಕವಾಗಿ ಬಿಸಿಲೇ ಬೆಳುದಿಂಗಳು, ಬೆಳುದಿಂಗಳೇ ಬಿಸಿಲಾಗಬಹುದು. ಹೀಗೆ ಹಿತವೋ ಅಹಿತವೋ ಆದ ಭಾವ ಅರ್ಥಗಳನ್ನು ಕೊಡುತ್ತವೆ. ಎಲ್ಲಿಯವರೆಗೂ ಒಂದು ಪದ ಹಿತವೋ ಅಹಿತವೋ ಆದ ಭಾವ ಅರ್ಥಗಳನ್ನು ಕೊಡುತ್ತದೆಯೋ ಅಲ್ಲಿಯವರೆಗೆ ಅದು ಗುಣ ನಿಭೃತವಾದುದು. ದಂಡಿಯ ಗುಣ ಸಿದ್ಧಾಂತ ನೋಡಿ, ಪ್ರಸಾದ, ಓಜಸ್ಸು, ಮಾಧುರ್ಯ ಮೊದಲಾದ ಗುಣಗಳ ವಿವರಣೆಯನ್ನು ಗಮನಿಸಿ. ಹೂ...ವು : ಪದವೂ ನಿರೀಕ್ಷೆಯನ್ನು ಸೃಷ್ಟಿ ಮಾಡುವುದು, ನಾವು ನಿರೀಕ್ಷೆಯಿಂದ ಪದವನ್ನು ಸೃಷ್ಟಿ ಮಾಡುವಂತೆ ; ವಾಚ್ಯಾರ್ಥ ಎನ್ನುವುದು general expectancy.

೨

ಮಹಾಕವಿಯಿಂದ ಬಂದ ಪದಗಳು ಅವು ಉಪಯೋಗವಾದ ಸಂದರ್ಭಗಳ ಧ್ವನಿಯಿಂದ ನಿಭೃತವಾಗಿರುತ್ತವೆ. ಪದಗಳಿಗೆ ತಮಗೆ ತಾವೇ ಹರ್ಷತ್ವ, ವಿಷಾದತ್ವ ಇರುವುದಿಲ್ಲ. ಆದರೆ ವಾಸ್ತವವಾಗಿ ನಮಗೆ ತಿಳಿದ ಪದಗಳು, ಆ ಭಾಷೆಯನ್ನು ತಿಳಿದಿರುವುದರಿಂದಾಗಿ ನಿರ್ಗುಣವಾದುದಲ್ಲ. ತಮಗೆ ಒಂದು ಭಾವಕೋಶ, ಅರ್ಥಕೋಶ ಅವಕ್ಕೆ ಉಂಟು ; ಆ ಅರ್ಥದಲ್ಲಿ ಅವೆಲ್ಲ ಸಗುಣಗಳು. ಪದಕ್ಕೆ ಭಾವಾಂಶ

ವಿಷಾದವೋ ಹರ್ಷವೋ ಎಂದು ಹೇಳಲಾಗದೇ ಇದ್ದರೂ, ಅದಕ್ಕೆ ಭಾವಾಂಶವೆನ್ನು ವುದು ಇದ್ದೇ ಇರುತ್ತದೆ. ಇದೇ ಅನೇಕ ಪ್ರಮಾಣಗಳಲ್ಲಿ ವಿಸ್ತಾರವಾದ, ಅಲ್ಪವಾದ ಭಾವಗಳನ್ನು ಉಂಟುಮಾಡಿರುತ್ತದೆ ಕೆಲಕೆಲವರಿಗೆ. ಅರ್ಥ-ಭಾವಾಂಶ ಸಮನ್ವಿತ ನಾದಾಂಶ, ಕಠಿನತೆ, ಕರ್ಕಶತೆ, ಪ್ರಸಾದ ಇತ್ಯಾದಿ ಗುಣಗಳನ್ನು ಸೂಚಿಸುತ್ತದೆ. ಪದಗಳಿಗೆ ಕೇವಲವಾಗಿ ಯಾವ ಹರ್ಷ ವಿಷಾದವೂ ಇಲ್ಲ. ಪದಗಳಿಗಿರುವ ಒಂದು ಭಾವಾಂಶವಿರುವುದರಿಂದಲೇ ಅವುಗಳ ಸಮೀಕ್ಷಣೆ ಮಾಡುತ್ತೇವೆ. ಪದದ ನಿರೀಕ್ಷೆಯಲ್ಲಿ ಅರ್ಥದ ಆಗಮನವಿರುತ್ತದೆ; ಕ್ರಿಯಾಪದವಿಲ್ಲದ ವಾಕ್ಯದಲ್ಲಿ ಅದರ ಅಪೂರ್ಣತೆ ಗೋಚರವಾಗುತ್ತದೆ.

ನಾದವನ್ನು ಗ್ರಹಿಸುವುದು, ನಾದಮಾತ್ರದಿಂದಲೇ ನಿರ್ಣಯವಾಗುವುದಿಲ್ಲ; ಅಲ್ಲಿಗೆ, ಅದು ಪ್ರವೇಶಿಸುವ ಸನ್ನಿವೇಶದಿಂದ ಎಂದಾಗುವುದು. ಆ ನಾದಾಂಶ ಯಾವ ಸನ್ನಿವೇಶಕ್ಕೆ ಪ್ರವೇಶಿಸುತ್ತದೋ, ಆ ಸನ್ನಿವೇಶ ಸಮಸ್ತದಿಂದಲೂ ಅದರ ವ್ಯಕ್ತಿತ್ವ ನಿರ್ಣಯವಾಗುತ್ತದೆ. All the anticipations– ಪ್ರತೀಕ್ಷೆಗಳು– form a closely woven net work. ಇಂಥ ಅನೇಕ ಪ್ರತೀಕ್ಷೆಗಳನ್ನು ಸಫಲಗೊಳಿಸತಕ್ಕಂತಹ ನಾದದ ಪದವೇ ಅಲ್ಲಿಗೆ ಅತ್ಯಂತ ಸಮರ್ಪಕವಾದ ಪದ, ನಾವು ನಾದ ಮಾತ್ರಕ್ಕಾಗಿಯೇ ಗುಣವಿದೆಯೆಂದು ಭಾವಿಸಲಾಗದು. ಅರ್ಥ ಭಾವಗಳ ದೆಸೆಯಿಂದಲೇ ನಾದಕ್ಕೆ ಗುಣ ಪ್ರಾಪ್ತವಾಗುತ್ತದೆ. ಆದರೆ ನಾದಕ್ಕೆ ತನಗೆ ತಾನೇ ಗುಣವಿಲ್ಲವೆನ್ನುವುದೂ ಸುಳ್ಳು. ನಾದಕ್ಕೆ ಒಂದು ಭಾವಪ್ರಚೋದಕ ಶಕ್ತಿಯಿದೆ. ವೀರಶೃಂಗಾರಾದಿ ರಸಗಳಿಗೆ, ಭಿನ್ನ ಭಿನ್ನ ರಸಗಳಿಗೆ ಬಗೆಬಗೆಯ ರಾಗಗಳನ್ನು ಹಾಕಲಾಗುವುದು. ನಾದದ ಗುಣಲಕ್ಷಣ ಇಲ್ಲಿ ಕೊಂಚ ಪ್ರತ್ಯೇಕವಾಗಿ ಕಾಣುತ್ತದೆ. Richards ಹೇಳುವಷ್ಟು ಸುಳ್ಳೇನಲ್ಲ, ನಾದಾಂಶವೇ ಅದರ ಹೃದಯಸ್ಥಾನ. ಕಾವ್ಯದಲ್ಲಿ ನಾದಾಂಶ, ಆದರ ಪರಿಣಾಮಕ್ಕೆ ಬೀಗದ ಕೈ. ಕಾವ್ಯದ ಹೃದಯ ಬಹುಪಾಲು ನಾದಾಂಶದಿಂದಲೇ ನಿರ್ಣಯವಾಗುತ್ತದೆ. ಪದ್ಯದ ನಾದಾಂಶಕ್ಕಿಂತ ಸ್ಪಷ್ಟವಾಗಿ ಗದ್ಯದಲ್ಲಿ ಹೇಳಿದರೇನೂ ಭಾವಸಂಜನಿತವಾಗುವುದು ಸಾಧ್ಯವಿಲ್ಲ ಇಲ್ಲಿ. ಕೀರ್ತನೆಯನ್ನು ನಾದಾಂಶ ಸಮೇತ ಹಾಡದಿದ್ದರೆ ಅದಕ್ಕೆ ನಿರ್ಭಾವವೊದಗುತ್ತದೆ, ಪ್ರಪಂಚಾಂತರವಿರುತ್ತದೆ.

The texture of expectations, satisfactions, disappiontments, postponements and surprises which the sequence of syllables bring about is Rhythm. ಪದದ ನಡೆಯ ಪರಂಪರೆಯಿಂದ ಒದಗುವ ಅನುಭವವನ್ನು ಲಯವೆಂದು ಕರೆಯುತ್ತೇವೆ. ಯಾವುದೋ ನಿರೀಕ್ಷೆ, ಅದು ಸಫಲವೋ ವಿಫಲವೋ ಆಗುತ್ತದೆಯೇ, ನಿರೀಕ್ಷೆಗಿಂತ ಅನ್ಯಫಲವಾಗುತ್ತದೆಯೇ– ಇವೆಲ್ಲದರಿಂದ ಲಯ ಪ್ರಜ್ಞೆ ನಮಗೆ ಗೋಚರವಾಗುತ್ತದೆ.

ಒಂದು ಪದ್ಯಭಾಗ–ಪಾದದ ನಿರೀಕ್ಷೆ–ಅದರ ಪೂರ್ಣತೃಪ್ತಿ :

ತಿರುಕ । ನೊಬ್ಬ । ನೂರ । ಮುಂದೆ....

ಒಂದು ಪದ್ಯಭಾಗ–ಅದೇ ಲಯ- ಆದರೆ ಅರ್ಥ ಭಾವಾನುಸಾರಿಯಾಗಿ ನಾದ ವ್ಯತ್ಯಾಸವಾಗುತ್ತದೆ : ೨–೩–೩, ೩–೩–೨. ೫–೩, ೩–೫, ೪–೪. ಹೀಗೆ ಲಯ ವಿನ್ಯಾಸವನ್ನು ತೆಗೆದುಕೊಂಡು ನೋಡಿದರೆ ಲಯಜ್ಞಾನ ನಿರೀಕ್ಷೆಯ ಸಫಲತೆ, ವಿಫಲತೆ ಅನ್ಯಫಲತೆಯಿಂದುಂಟಾಗುತ್ತದೆ. ಅಲ್ಲದೆ the sound of word comes to its full power only through the Rhythm. 'ಕವಿಶೈಲ'ದಲ್ಲಿ—

ದೂರಕೆ ದೂರಕೆ ಸುದೂೂರ । ದೂರಕೆ
ಹಬ್ಬಿದೆ ಪರ್ವತ ದಿಗಂತ ಶೈಲಿ
ಮೈಲಿ ಮೈಲಿ

ಲೆಕ್ಕಾಚಾರಕ್ಕೆ ಗಣ, ಮಾತ್ರೆ ನಾವು ಹಾಕುತ್ತೇವೆಯೇ ಹೊರತು ಇವಿಷ್ಟ ರಿಂದಲೇ ಪರ್ಯವಸಾನವಾಗುವುದಿಲ್ಲ ಛಂದಸ್ಸು. ಛಂದಸ್ಸಿಗೆ ಗಣ ಮಾತ್ರೆಗಳು ಮೂಲಮರ್ಯಾದೆ. ಈ ಮೂಲಮರ್ಯಾದೆಯ ಮೇಲೆ ಅನೇಕ ವ್ಯತ್ಯಾಸಗಳನ್ನು ಮಾಡಿಕೊಳ್ಳುತ್ತಾರೆ ಕವಿಗಳು. ಮನೆಗೆ ಬಂದ ಅತಿಥಿಯನ್ನು ಸತ್ಕರಿಸಬೇಕು. ಇದು ಮೂಲಮರ್ಯಾದೆ. ಈ ಸತ್ಕಾರದಲ್ಲಿ ವೈವಿಧ್ಯವಿರುವುದಿಲ್ಲವೇ ? ನಿರೀಕ್ಷೆಯಿರುವುದ ರಿಂದಲೇ ಸಫಲತೆ, ವಿಫಲತೆ ಒದಗುತ್ತದೆ. ಬಾಲಿಶ ಕಾವ್ಯ 'ಸಫಲತೆ' ಯನ್ನು ಪೂರ್ಣಗೊಳಿಸುತ್ತದೆ. ಆಲೋಚನೆ, ಭಾವಶಕ್ತಿ ಮುಂದುವರಿದಂತೆ ಇದು ಎಂದರೆ ನಿರೀಕ್ಷೆಯಿಂದಲೇ ಗಣರಚನೆಯನ್ನು ಪೂರೈಸುವ ಪ್ರಯತ್ನ ವಿಘ್ನವಾಗುತ್ತದೆ ; ಕಾವ್ಯದ ಉನ್ನತಿ ಸಾಧಿತವಾಗುತ್ತದೆ. ಲಲಿತ ರಗಳೆಯಲ್ಲಿ, ನಮ್ಮ ಕವಿಯಲ್ಲಿ ಮೊದ ಲನೆಯ ಪಂಕ್ತಿಯ ಪ್ರಾಸದ ರುಚಿ ಆರಿರುವುದಿಲ್ಲ. ಎರಡನೆಯ ಪಂಕ್ತಿಯ ಪ್ರಾಸದ ರುಚಿ ಬಂದು ಕೂಡುತ್ತದೆ : ತುಂಗ...ಶೃಂಗ. ಒಂದನೆಯ ಪಂಕ್ತಿಯ ಕೊನೆಯ ಪ್ರಾಸ, ೪ನೆಯ ಪಂಕ್ತಿಯ ಕೊನೆಯ ಪ್ರಾಸ ಸದೃಶವಾಗಿರಬಹುದು a b b a, a–a ಸಾದೃಶ್ಯ, b–b ಸಾದೃಶ್ಯ, abba abba ಸಾದೃಶ್ಯ [ಹೀಗೆ ಹೆಣೆದುಕೊಳ್ಳುವುದ ರಿಂದ ವೈವಿಧ್ಯ]. ಸಂಗೀತದ ಅಭ್ಯಾಸವಿರುವವರಿಗೆ ಆಲಾಪದ ಸರಿಗಮ ಗಂಟೆ ಗಟ್ಟಲೆ ಮುಂದುವರಿಯುತ್ತದೆ ; ಇದು ಸ್ಮರಣೆಯ ದೈತ್ಯಶಕ್ತಿ. The structure is so complex ; ಸಂಸ್ಕಾರ ರೂಪದಲ್ಲಿ ಇದು ಬರಬೇಕು, ಹೊರ ನೆನಪು ಒಳ ನೆನಪಾಗಿ ಪರಿಣಮಿಸುತ್ತದೆ ಇಲ್ಲಿ.

೧–೪ ನೆಯ ಪಂಕ್ತಿಯ ಪ್ರಾಸ ಸರಿ ; ೨ ನೆಯ ಅಕ್ಷರದ ಪ್ರಾಸ, ಬಹುಶಃ ಒತ್ತಕ್ಷರ, ದೀರ್ಘಾಕ್ಷರ ರಚನೆ

ಕೆತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ
ಪೊತ್ತುವೆಳಗಂ ಬೇರೆ...

ಸೀರಿನ ಮೇಲೆ ಹೆಜ್ಜೆ ಇಟ್ಟ ಹಾಗೆ ಅಲ್ಲ, ಕೆಸರಿನಲ್ಲಿ ಇಟ್ಟ ಹಾಗೆ.

ನಮ್ಮವರು "ಯತಿಯಂ ಮಿಕ್ಕರ್", "ದುರ್ಗತಿಯಂ ಪೊಕ್ಕರ್". ಪ್ರಾಸವನ್ನು ಅವರು ಬಿಡಲಿಲ್ಲ. ಒಳಪ್ರಾಸವಿರುವಾಗ ದ್ವಿತೀಯಾಕ್ಷರ ಪ್ರಾಸವಿರಲೇಬೇಕು ? ದ್ವಿತೀಯಾಕ್ಷರ ಪ್ರಾಸ ಬರುವೆಡೆ ಒಂದು ಪಾದದ ಕೊನೆಯೂ ಎರಡನೆಯ ಪಾದದ ಮೊದಲನೆಯಕ್ಷರವೂ ಕೂಡಿ ನಿಂತು, ಇಲ್ಲ ಅಲ್ಪಯತಿ ಬಂದು ಅಥವಾ ಪೂರ್ಣಯತಿ ಬಂದು ನಿಂತು, ಬೇರೆ ಪದ ಪ್ರಾರಂಭಿಸುತ್ತಾರೆ. ನಮ್ಮ ಕಿವಿ ಅದನ್ನು ಗಮನಿಸುವುದಿಲ್ಲ ; ಕೆಲವು ಕಡೆ ಗಮನಿಸುತ್ತದೆ. ನಮ್ಮ ಕಿವಿ ಈ ಪ್ರಾಸವನ್ನು ಗಮನಿಸದಿದ್ದರೆ, ವೃತ್ತಗಳಿಗೆ ಈ ದ್ವಿತೀಯಾಕ್ಷರ ಪ್ರಾಸವನ್ನು ಬಿಡಬಹುದಾಗಿತ್ತು. ಒಳ್ಳೆಯ ಪ್ರಾಸ ಅಪರೂಪಕ್ಕೆ ಚೆನ್ನಾಗಿ ಬರುತ್ತದೆ, ಗಮನಕ್ಕೆ ಬರುತ್ತದೆ. ಷಟ್ಪದಿಯಲ್ಲಿಯೂ ಇದೇ ಗೋಳು. ಅರ್ಧರ್ಧ ಒಂದೊಂದು ಬೇರೆ. ಪ್ರಾಸದ ಗಮನ ಷಟ್ಪದಿಯಲ್ಲಿ ಗೋಜು. ಕಾವ್ಯಮೀಮಾಂಸೆ ಈ ಬಗೆಯ ಛಂದಸ್ಸಿನ ವಿಚಾರಕ್ಕೆ ಕೈಹಾಕಲಿಲ್ಲ. ರಸ, ಶೈಲಿ, ರೀತಿ, ಧ್ವನಿ ಇವುಗಳಲ್ಲಿ ಚರ್ಚೆಮಾಡಿದವರು, ರೀತಿಯ ಅಂಗವಾಗಿ ಛಂದಸ್ಸನ್ನು ಕುರಿತು ಚರ್ಚೆಗೆ ತೊಡಗಲಿಲ್ಲ. ಷಟ್ಪದಿಗಳು ಕಡಿಮೆ ಅಕ್ಷರಗಳು ಇರುವಂಥವು ; ವೃತ್ತಗಳಾದರೆ ದೀರ್ಘಪಾದಗಳನ್ನುಳ್ಳವು. ಆದ್ದರಿಂದ ಷಟ್ಪದಿಯಲ್ಲಿ ಇಲ್ಲಿಯ ದ್ವಿತೀಯಾಕ್ಷರ ಪ್ರಾಸದ ಆವಶ್ಯಕತೆಯಿರಲಿಲ್ಲ.

ಮಾತ್ರೆ ಅಕ್ಷರಗಳ ನಿಯತ ಪ್ರಮಾಣ ಹೋಗಿ, ಒಂದೇ ಅಕ್ಷರ ೫ ಮಾತ್ರೆಗಳ ಕೆಲಸವನ್ನು, ಎರಡಕ್ಷರ ೩ ಮಾತ್ರೆಗಳ ಕೆಲಸವನ್ನು ಮಾಡುತ್ತವೆ ಮುಂತಾಗಿ ನಾವು ಹೇಳುತ್ತೇವೆ. ಇದನ್ನು ಹಿಂದಿನ ಅಂಶಗಣದಲ್ಲಿ ಗುರುತಿಸುತ್ತೇವೆ, ಷಟ್ಪದಿ ವೃತ್ತಗಳಲ್ಲಿ ಈ ಸಾಹಸ ಮಾಡಲಿಲ್ಲ. ಇಲ್ಲೆಲ್ಲ ಕಠಿನ ನಿಯಮಗಳನ್ನು ಪಾಲನೆ ಮಾಡಿದರು.

ಓ । ಎಂದೊರಲಿದಳ್...

'ಓ' ಎಂಬುದಕ್ಕೆ ೫ ಮಾತ್ರೆಗಳ ಬೆಲೆ ಕೊಡಲು ಅವರು ಇಷ್ಟಪಟ್ಟಿಲ್ಲ. ಗಣ ಮಾತ್ರೆ ಲಯ ಛಂದಸ್ಸಿಗೆ ನಿಕಟಸಂಬಂಧವಿದೆ. ಲಯವೇ ಕವಿತೆಯ ಮೂಲಮರ್ಯಾದೆ ; ಇದಕ್ಕೆ ಅನುಸಾರವಾಗಿ ಗಣ ಮಾತ್ರೆ ಛಂದಸ್ಸುಗಳನ್ನು ಹೊಂದಿಸಿಕೊಳ್ಳುವ ಕೆಲಸ. ಒಂದನೆಯ ಪಂಕ್ತಿಯ ಕೊನೆಗೆ ಪ್ರಾಸ, ಎರಡನೆಯ ಪಂಕ್ತಿಯ ಕೊನೆಗೆ ಪ್ರಾಸ, ಮೂರನೆಯ ಪಂಕ್ತಿಯ ಕೊನೆಗೆ ಅದು ಬರಲಿಲ್ಲ; ಆಗ ಮನಸ್ಸು ಆ ಮುಂದೆ ಅದನ್ನು ನಿರೀಕ್ಷಿಸುತ್ತದೆ. ಅಲ್ಲಿಯೂ ಬರಲಿಲ್ಲವೆಂದರೆ, ನಮ್ಮ ನಿರೀಕ್ಷೆಯು ಬ್ಲ್ಯಾಂಕ್‌ವರ್ಸ್, ಮತ್ತೆ ಬೇರೆ ಛಂದಸ್ಸು ಇವನ್ನು ಗುರುತಿಸಬೇಕಾಗುತ್ತದೆ. ಲಾವಣಿಗಳಲ್ಲಿ ಮಧ್ಯೆ ಮಧ್ಯೆ ನಿರ್ದಿಷ್ಟ ಛಂದಸ್ಸುಗಳ ನಡುನಡುವೆ 'ರಗಳೆ'ಯನ್ನು ಕಳೆಯಲು ಬೇರೆ ಛಂದಸ್ಸನ್ನು ತರುತ್ತಾರೆ, ಮನಸ್ಸಿನ ಬೇರೆ ಬೇರೆ ಪರಿಣಾಮಗಳನ್ನು ಉಂಟುಮಾಡುವಂಥದು. ಆಗ ನಾದದ ದೃಷ್ಟಿಯಿಂದ 'ರಗಳೆ' ಪರಿಹಾರವಾಗುತ್ತದೆ. ಲಯದ ವಿಶೇಷ ಅಂಗವೇ ಛಂದಸ್ಸು.

ಪದಗಳೇ ಒಂದರ ಮೇಲೆ ಒಂದು ಪರಿಣಾಮಕಾರಿಯಾಗುವ ಹಾಗೆ ಛಂದಸ್ಸು ಸಹಾಯಮಾಡುತ್ತದೆ. ಇಲ್ಲಿ ಛಂದಸ್ಸು ನದೀ ಪ್ರವಾಹದಂತೆ, ಕಲ್ಲು ಕಟ್ಟಡದಂತೆ ಅಲ್ಲ. ಕಲ್ಲು ನಿರ್ಜೀವ, ಸ್ಥಿತಿಗತ್ಯಂತರವಾಗುವುದಿಲ್ಲ. ಪ್ರವಾಹ, ನೀರು, ನೆಲ, ವೇಗ, ದಡ, ನಡುವಿನ ಮರ, ಕಲ್ಲು, ಜಲಚರಗಳ ಚಲನೆ ಎಲ್ಲವುಗಳಿಂದಲೂ ಪ್ರವಾಹದ ಲಯ ವ್ಯತ್ಯಾಸವಾಗುತ್ತದೆ. ಉತ್ತಮ ಛಂದಸ್ಸಿನ ಲಯವನ್ನು ಹೀಗೆ ಭಾವಿಸಿಕೊಳ್ಳಬೇಕು. ಕಾವ್ಯದ ಒಳಗಿನ ಭಾವ ಕ್ರಮವನ್ನು ಅನುಸರಿಸಿ, ಭಾವ ಮತ್ಸ್ಯ ಭಾವಜಲಚರಗಳ ಚಲನೆಯನ್ನು ಅನುಸರಿಸಿ, ಮೇಲಿನ ಪ್ರವಾಹದ ಗತಿ ವ್ಯತ್ಯಾಸವಾಗುತ್ತದೆ. ಕಾವ್ಯದಲ್ಲಿ ಶೈಲಿ, ರೀತಿ, ಮಾರ್ಗ ಎಲ್ಲಕ್ಕೂ ಇದು ಸಂಬಂಧಿಸಿದೆ. ಪ್ರವಾಹದ ಪ್ರತಿಯೊಂದು ಚಲನೆಯೂ ನೀರಿನ ಭೌತತೆಯಿಂದ ಮಾತ್ರ ನಿರ್ಧರವಾಗದೆ, ನೀರಿನ ಜಲಚರ, ಏರುತಗ್ಗು, ಮಣ್ಣಿನ ಗುಣ ಪಕ್ಷಿ ಮೃಗಗಳನ್ನು ಅನುಸರಿಸಿ ವ್ಯತ್ಯಾಸವಾಗುತ್ತದೆ. ಹಾಗೆಯೇ ಛಂದಸ್ಸು.

ಹಿಡಿದು ಮಂಜು ಬೀಳುತಿತ್ತು, ಚುಕ್ಕಿ ಕಣ್ಣು ಮಿಟುಕುತಿತ್ತು
"ಕುಡಿಯೊ, ಕಂದ, ಕುಡಿಯೊ" ಎಂದು ನುಡಿವ ಮಾತು ಕಿವಿಗೆ ಬಿತ್ತು.

ಅಡಿಯ ಗೆಜ್ಜೆ ನಡುಗೆ ಹೆಜ್ಜೆ ಇಡುತ ಸುಗ್ಗಿ ಬರುತಿದೆ
ಸುಗ್ಗಿ ಬರೆ ಹಿಗ್ಗಿ ತಿರೆ ಸಗ್ಗಸೊಗವ ತರುತಿದೆ.

ನಿರೀಕ್ಷೆ ಸಫಲತೆಗಳನ್ನು ಈ ಸಣ್ಣ ಛಂದಸ್ಸಿನಲ್ಲಿ ತಿಳಿಯಬಹುದು. we are deeply conscious of this. ನಾವು ಛಂದಶಾಸ್ತ್ರಕ್ಕೆ ಸಂಬಂಧಿಸಿ ಮಾತನಾಡುವಾಗ ಅದರಲ್ಲಿ ಕಾಣುವ ಛಂದಸ್ಸನ್ನು ಕುರಿತೇ ಜಾಡುಹಿಡಿಯುತ್ತೇವೆ. ಇದು non - revolutionist. ಗ್ರಹಣ ಹಿಡಿಯುವ ಕಾಲವನ್ನು ನಿಶ್ಚಯಿಸುವಂತೆ ಪ್ರಾಸ, ಯತಿಗಳ ನಿಲವನ್ನು ಸ್ಪಷ್ಟವಾಗಿ ಇಲ್ಲಿ ಗುರುತಿಸಬಹುದು, ಹೇಳಬಹುದು.

The whole conception of metre is uniformity in variety, ಮನುಷ್ಯ, ಮಂಗ, ಕರಡಿ ಎಲ್ಲವನ್ನೂ ಸೇರಿಸಿ ಕವಾಯತ್ತು ಮಾಡಿಸುವಂತೆ. ನಿಘಂಟು ಒಂದು ಭಯಂಕರವಾದ ಮೃಗಶಾಲೆ. ಇಲ್ಲಿಯ ಪದಗಳಲ್ಲಿ ಆನೆಗಾತ್ರದ ಪ್ರಾಣಿಗಳಿವೆ. ಸಿಳ್ಳುಹಾಕುವ ಪಕ್ಷಿಗಳಿವೆ. ಛಂದಸ್ಸಿನ ಚಾಟಿಗೆ ಸಿಕ್ಕಾಗ ಈ ಪದಗಳೆಲ್ಲ ಡ್ರಿಲ್ ಮಾಡುವುದಕ್ಕೆ ಬೇಗ ಸಿದ್ಧವಾಗಬೇಕು. ಷೇಕ್ಸ್‌ಪಿಯರ್ ಕಾಳಿದಾಸ ನಂಥವರು ಎಂಥ ಚೌಕಟ್ಟಿನಲ್ಲೂ ಬಂಧನದಲ್ಲೂ ತಮ್ಮ ಕೌಶಲ, ಸ್ವಾತಂತ್ರ್ಯ ತೋರಿಸುತ್ತಿದ್ದರು. ಇತರರಿಗೆ ಅದು ಸಾಧ್ಯವಿಲ್ಲ.

We have thought Metre as if once for all settled and there is nothing to work more in the field. ಛಂದಸ್ಸಿನ ಈ ಕೃತಕ ಪದ್ಧತಿಯ ಗಣರಚನೆ L. S. ತರಗತಿಯದು ; M. A. ತರಗತಿಯವರಿಗೆ ಕೇವಲ ಅದೇ ಸಂಪ್ರದಾಯದ ರೀತಿಯಲ್ಲಿ ಮುಂದುವರಿದರೆ, ಅದು ಮುಟ್ಠಾಳತನ.

(i) ಎಲೆ ತಾರಾಗಂ ಹರಂ ಕಣ್ಣಿಡೆ ಕರಗಿದುದಂತಲ್ತು ರುದ್ರಾಟ್ಟಹಾಂಸ
ಜಲಮಾದತ್ತಲ್ತು ಚಂದ್ರಾತಪಮಮೃತರಸಾಕಾರವಾಯ್ತಲ್ತು...

(ii) ಇದಜಿಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ
ಪುದಿದಟ್ಟಾಡಿತ್ತಡಂಗಿತ್ತಿದಜಿಳೆ ಕುರುರಾಜಾನ್ವಯಂ...

ಈ ರೀತಿಯ ವೃತ್ತಗಳನ್ನಾಯ್ದು, ಅಲ್ಲಿ ಇಲ್ಲಿ ಅಲ್ಪಯತಿ ಎಲ್ಲೆಲ್ಲಿ ಬರುವು ದೆಂದು ಗುರುತಿಸಬೇಕು.

ಪದಗಳು ತಮ್ಮ ವ್ಯಕ್ತಿತ್ವದ ಪ್ರಭಾವವನ್ನು ಪರಸ್ಪರವಾಗಿ ಸಾಧಿಸುವ ಒಂದು ಉಪಾಯ. ವಿಧಾನ, ಛಂದಸ್ಸು. ನಿರೀಕ್ಷೆ ಯಾವುದೋ ಒಂದು ನಿಷ್ಕೃಷ್ಟವಾದ ಮಿತವಾದ ಹಾದಿಯಲ್ಲಿ ಹರಿಯುತ್ತದೆ. ೩ ಮಾತ್ರೆಗಳ ಗಣದ ಛಂದಸ್ಸಿನ ೩ ಪಂಕ್ತಿಗಳೂ ಪ್ರಾಸಬದ್ಧವಾಗಿದ್ದರೂ ಗಣಿತದ ನಿರೀಕ್ಷೆಯನ್ನು ತರುತ್ತದೆ. ೪ ಮಾತ್ರೆಗಳ ಗಣದ ಸಾದ ಸಾದೃಶ್ಯವೂ ಹೀಗೆಯೇ. ಸಕ್ರಮ ಛಂದಸ್ಸು ನಮ್ಮ ನಿರೀಕ್ಷೆಯನ್ನು ಮಿತವಾದ ಹಾದಿಯಲ್ಲಿರಿಸುತ್ತದೆ. ಸ್ವತಂತ್ರಕ್ರಮ ಬೇಕು ; ಯಾವುವಾದರೂ ತಂತ್ರವಿರಬೇಕು, ಅತಂತ್ರವಾಗಬಾರದು. ಇಷ್ಟು ಮಿತಪ್ರಯಾಣದಲ್ಲಿ ಇರಬಾರದು.

**ಪ್ರಾಸದ ಪ್ರಯೋಜನ** : ೨-೩ ಪಂಕ್ತಿಗಳೊಳಗೆ ಇದ್ದರೆ, ನೆನಪಿಟ್ಟು ಹೊಂದಿಸಿಕೊಳ್ಳಲು ಸಾಧ್ಯ; ಹೆಚ್ಚು ದೂರವಾಗಿ ಬಂದರೆ ಮರೆಯುತ್ತೇವೆಯಲ್ಲಾ ಎಂದರೆ, ಇದು ಸ್ಮರಣಪೂರ್ವಕವಾಗಿ, ಪ್ರಜ್ಞಾಪೂರ್ವಕವಾಗಿ ಮಾಡುವ ಕೆಲಸವಲ್ಲ. ಸಂಸ್ಕಾರಪೂರ್ವಕವಾಗಿ ನಡೆಯುವ ಕೆಲಸ ಎಂಬುದನ್ನು ತಿಳಿದಿರಬೇಕು. ಅನುಪ್ರಾಸ ವನ್ನು ತಂದರೆ, ಅದರ ಸೊಗಸು ಸೌಂದರ್ಯಗಳು ಬುದ್ಧಿಗೆ ಅರಿವಾಗುವುದಕ್ಕಿಂತ ಮುಂಚೆ ಪ್ರಜ್ಞೆಗೆ ವೇದ್ಯವಾಗಬೇಕು. ಈ ಅನುಪ್ರಾಸ ಡಂಗುರಹೊಯ್ದು `ನಾನು ಇದ್ದೇನೆ' ಎಂದು ತೋರಿಸಿಕೊಂಡರೆ, ಶಬ್ದಾಲಂಕಾರದ ದೋಷವಾಗಿ, ವಿಪರೀತ ವಾಗಿ ಪರಿಣಮಿಸುತ್ತದೆ. ಯಾವುದು ವಿರಳವಾಗಿ ಬಂದರೆ ಗುಣವಾಗುತ್ತಿತ್ತೋ, ವಿಶೇಷವಾಗಿ ಬಂದು ದೋಷವಾಗಿ ಪರಿಣಮಿಸುತ್ತದೆ. ಷಟ್ಪದಿಯ ಆರು ಪಂಕ್ತಿ ಗಳನ್ನೂ ತುಂಬಿ 'ಳ' ಕಾರ ಕಾಣಿಸಿಕೊಂಡಿದ್ದರೆ, ಕೊಳದ ತಂಪು ಸೌಂದರ್ಯಗಳು ಗೋಚರವಾದೀತೇ ? ಈ ಮಿತಿಯನ್ನರಿಯುವುದು ದೊಡ್ಡ ಕಲೆಯ ಜಾಣ್ಮೆ. ಪೂರ್ವಭಾವಿಯಾಗಿ ಯಾವುದನ್ನೂ ನಿರೀಕ್ಷಿಸುತ್ತಿರದೆಯೇ, ಮುಂದಿನ ಪ್ರಾಸ ಎಲ್ಲಿ ಬರಬೇಕೆಂಬುದನ್ನು ನಮ್ಮ ಪ್ರಜ್ಞೆ ನಿಶ್ಚಯಿಸಿರುತ್ತದೆ. ಸ್ವತಂತ್ರಕ್ರಮದ ಛಂದಸ್ಸಿ ನಲ್ಲಿ ಇಂಥ ಕಡೆಯೇ ಪ್ರಾಸ ಬರುತ್ತದೆಂದು ಹೇಳಲಾಗದು. ಪಂಕ್ತಿಗಳ ಪ್ರಮಾಣ, ಪ್ರಾಸಗಳ ದೂರ, ಅಂತರ, ಸಾಮೀಪ್ಯ ವೈವಿಧ್ಯಗಳನ್ನು 'ಗಗನಗುರು'ವಿನಲ್ಲಿ ಗುರುತಿಸಬಹುದು,

ಕವಿಯ ಕಲೆಯ ಕೌಶಲವೆಲ್ಲಾ ಕಲೆಯನ್ನು `ಅಡಗಿಸುವುದರಲ್ಲಿ' ಕಾಣುತ್ತದೆ. ಅದು ಕುಸಂಸ್ಕೃತರ ಆಭರಣಗಳಂತೆ ಸ್ಥೂಲವಾಗಿ ಇರುವುದಿಲ್ಲ. ಕಾವ್ಯದಲ್ಲಿ ನಾದಾಂಶ,

ಭಾವಾಂಶಗಳು ಅರ್ಥಾಂಶದೊಡನೆ ಸರ್ವದಾ ಸಮನ್ವಿತವಾಗಿರುತ್ತದೆ. ಕಾವ್ಯಶರೀರ ಸರ್ವದಾ ಆತ್ಮ ಸಮನ್ವಿತವಾದುದು. ಹೆಣವು ನಮಗೆ ಪರಿಚಿತವಿರುವ ನಮ್ಮ ಸ್ನೇಹಿತನ ಶರೀರ ಕೂಡ ಅಲ್ಲ ; ಪ್ರಾಣಶಕ್ತಿ ಆವಿರ್ಭವಿಸುವುದಕ್ಕೆ ಪೂರ್ವಭಾವಿಯಾಗಿ Biological matter ಇರಲಿಲ್ಲ. ನಮ್ಮ ದೇಹಗಳು ಪವಾಡಗಳು. ರಕ್ತ ಮಾಂಸಗಳ ಪ್ರತ್ಯೇಕತೆಯುಂಟು ; ಮೆದುಳು, ರಕ್ತಮಾಂಸಗಳ ತರಹೆಯಲ್ಲಿ ಮನಸ್ಸು. ಪ್ರಾಣ ಪ್ರಾಣಮಯವಾದ ಪದಾರ್ಥವನ್ನು ಸೃಷ್ಟಿಸುತ್ತದೆ. ಮನಸ್ಸು ಮನೋಮಯವಾದ ಶರೀರವನ್ನು ಸೃಷ್ಟಿಸುತ್ತದೆ. ಪ್ರಾಣಾದಿಶಕ್ತಿ ಸಮನ್ವಿತವೇ ಮಾನವ ಶರೀರ. ಅದು ಬಿಟ್ಟದ್ದು ಹೆಣ ; ಶರೀರ ಕೂಡ ಅಲ್ಲ. ಅದು ಪಂಚಭೂತಗಳಲ್ಲಿ ಐಕ್ಯವಾಗುತ್ತದೆ ; ಮಣ್ಣಾಗಿ ತೂಕಕ್ಕೆ ಸಿಗುತ್ತದೆ, ಅಷ್ಟೆ.

It is not in the Stimulation, but it is in our response. ಪ್ರಚೋದನೆಯಲ್ಲಿಯೇ ಅದು ಇಲ್ಲ ; ನಮ್ಮ ಹೃದಯ ಸಂವಾದದಲ್ಲಿದೆ (Emotional response). ಛಂದಸ್ಸನ್ನು, ಲಯದಂತೆಯೇ ನಮ್ಮ ಹೃದಯ ಸಂವಾದದಲ್ಲಿಯೇ ಗುರುತಿಸಬೇಕು. ಕಾರಣ, ಲಯದ ಅಂಗವೇ ಛಂದಸ್ಸು. ಚಿತ್ತಸಂವಾದ ಹೃದಯ ಸಂವಾದಗಳಿಲ್ಲದವರನ್ನು ಓದಲು ಹೇಳಿದರೆ, ಅವರು 'ಸ್ವಾಮಿದೇವನೆ ಲೋಕಪಾವನೆ' ಎಂಬಂತೆ ಉದ್ದಕ್ಕೆ ಹಾಗೆಯೇ ಓದುತ್ತಾರೆ. ನಿರೀಕ್ಷೆಯೂ ಎಚ್ಚೆತ್ತ ನಿರೀಕ್ಷೆಯಾಗಿರಬೇಕು ; ಕೃತಕ ತೃಪ್ತಿಯಾಗಿರಬಾರದು. ಆಗ ನಾವೇ ಆ ಲಯವಿನ್ಯಾಸ ಆಗುತ್ತೇವೆ. ಬ್ಯಾಂಡ್ ಬಜಾವಣೆಗೆ ತಾಳಹಾಕುವ ಜನದಂತೆ, ಪ್ರಾಸ, ಛಂದಸ್ಸು, ಲಯದ ನಿರೀಕ್ಷೆಯಲ್ಲಿ ನಾವು ಏಕವಾಗುತ್ತೇವೆ.

ಪ್ರಸ್ತಾರಕ್ರಮ "ನಿಖಿಲ ಭು । ವನ ಮನ..." ಎಂದಿದ್ದರೆ, ಲಯಕ್ರಮ "ನಿಖಿಲ । ಭುವನ..." ಎಂಬಂತಿರುತ್ತದೆ. ನಾವು ವಿನ್ಯಾಸವನ್ನು ಎಲ್ಲಿಯೋ ದೂರನಿಂತು ಕಾಣುತ್ತೇವೆ ಎಂದು ಅಲ್ಲ. ನಾವೇ ಆ ವ್ಯಾಪಾರವಾಗಿ, ಆ ಲಯವನ್ನು ಅನುಭವಿಸುತ್ತೇವೆ, 'ಲಯ'ವಾಗುತ್ತೇವೆ. ನಾವು ಪ್ರತ್ಯೇಕ, ಆ ವಿನ್ಯಾಸ ಅಲ್ಲಿ ಇದೆ ಎನ್ನುವುದಿಲ್ಲ ; ನಮಗೆ ಸಂತೋಷವನ್ನುಂಟುಮಾಡುವಿಕೆಯೂ ಆ ವಿನ್ಯಾಸವೂ ಅಪ್ರತ್ಯೇಕ. ರಂಕಲ್‌ರಾಟೆಯಲ್ಲಿ ಕುಳಿತು, ಆ ಚಕ್ರವೂ ತಾನೂ ಇಬ್ಬರೂ ಒಟ್ಟಿಗೆ ತಿರುಗುತ್ತಾರೆ, ಅಪ್ರತ್ಯೇಕವಾಗಿ ಅವನಿಗೆ ಸಂತೋಷವಾಗುತ್ತದೆ. ಕಾಲನಿಷ್ಠವಾದ ಈ ಲಯವಿನ್ಯಾಸ ನಮಗೆ ಏಕೆ ಸಂತೋಷವನ್ನು ತರುತ್ತದೆ ಎನ್ನುವುದು ಅರ್ಥಹೀನವಾದ ಪ್ರಶ್ನೆ. ಯಾವುದನ್ನು ವಿನ್ಯಾಸ ಎಂದು ಕರೆಯುತ್ತೇವೆಯೋ ಅದು ನಮ್ಮಲ್ಲಿಯೇ ಇರುವ ಸ್ಥಿತಿ. ರನ್ನ ಪಂಪರ ಪದ್ಯಗಳನ್ನು ೫೦ ಸಾರಿ ಓದಿ ; ೫೧ ನೆಯ ಸಾರಿ ಓದಿದಾಗ ಆ ಪದ್ಯಗಳ ಭಾವ ರಸ ನಮ್ಮ ನರ ನರಗಳಲ್ಲಿ ಭೌತವಾಗಿಯೇ–ಮಾನಸಿಕವಾಗಿ ಇರಲಿ – ಸಂಚಾರವಾಗುತ್ತವೆ. A tide of excitement pouring like a tide ಇದು. ಲಯ, ಛಂದಸ್ಸು, ಯತಿ,

ಪ್ರಾಸ ಎಲ್ಲವೂ ಭಾವಮಯವಾಗುತ್ತದೆ. ಇದು ನಾವು ತೊಡಿಸುವ ಹೊರಗಣ ಅಂಗಿ ಅಲ್ಲ. ಹೇಗೆ ರಕ್ತ ಮಾಂಸ, ನರಗಳ ಕ್ರಿಯೆ, ಜೀವಕ್ರಿಯೆಯ ಪರಿಣಾಮವೋ ಹಾಗೇ ಇದು. ಸತ್ತ ಪ್ರಾಣಿಯ ಚರ್ಮವೆಂದರೆ, ಪ್ರಾಣಿಯ ಮೈ ಮೇಲಿನ ಚರ್ಮವೇ ಅಲ್ಲ: ಅದರ ಜೀವಕ್ರಿಯೆ ಅದನ್ನು ನಿರ್ಮಿಸಿದೆ. ಈ ಕ್ರಿಯೆಗೆ, ಆ ಅಂಗಕ್ಕೆ ಅಪ್ರತ್ಯೇಕವಾದ ಪ್ರಾಣಮಯವಾದ ಸಂಬಂಧವಿದೆ. ಹೀಗೆ ಅರ್ಥವಿಸಿದರೇ ಛಂದಸ್ಸಿಗೆ ಬೆಲೆ. ಅರ್ಥಸಹಿತ ವರ್ಣ, ಛಂದಸ್ಸು ಸರಸ್ವತಿಯ ಆಗುವಿಕೆ. ಸೃಷ್ಟಿ. ರಸ ಛಂದಸ್ಸು ಎರಡೂ ಒಟ್ಟಿಗೆ ಸೇರಿಕೊಂಡಿವೆ, [ಕೃತಿಯ ಯಶಸ್ಸಿನಲ್ಲಿ].

ನಮ್ಮ ಶಾಸ್ತ್ರಕಾರರಿಗೆ ಏನು ದಿಗಿಲೆಂದರೆ, ಇದರ ಸ್ವಾತಂತ್ರ್ಯ ಇಷ್ಟು ಎಂದು ಹೇಳದೆ ನಿಯಮಗಳಿಂದ ಬಂಧಿಸಿಬಿಟ್ಟರು ; ಎಲ್ಲಿ ಸ್ವಾಚ್ಛಂದ್ಯವಾಗುತ್ತದೆಯೋ ಎಂಬ ಹೆದರಿಕೆಯಿಂದ ಕಟ್ಟುಕಟ್ಟಳೆಗಳಿಂದ ಶಾಸ್ತ್ರ ರಚಿಸಿದರು.

The spirit must take the new form to break the existing old form. ವರಾಹದ ಅವತಾರವೆತ್ತಿದ ವಿಷ್ಣು ಪುನಃ ವರಾಹದ ಅವತಾರವೆತ್ತದೆ, ಬೇರೆ ಅವತಾರವೆತ್ತಿದ. ನಾದ ತರಂಗಗಳು ಭಾವಮಯವಾಗಿ ದೇಹವನ್ನೆಲ್ಲ ವ್ಯಾಪಿಸುವಾಗ, ಅವ್ವಳಿಸುವಾಗ ಅರ್ಥಭಾವಗಳಿಗೆ ತೊಂದರೆಯಾಗಿದ್ದರೂ, ಆ ತರಂಗಗಳ ಅಡಿತಡೆಗೆ, ಅಕ್ರಮತೆಗೆ ಪ್ರಜ್ಞೆ ಎಚ್ಚೆತ್ತು ಸಿಟ್ಟಾಗುತ್ತದೆ. ಕ್ರಮಬದ್ಧವಾದ ಆವೃತ್ತಿ, ಕ್ರಮಬದ್ಧವಲ್ಲದ ವಿನ್ಯಾಸ ಇವನ್ನರಿಯಲು ನಮ್ಮ ಪ್ರಜ್ಞೆಯೇ ನಿಕಷ. ನಮ್ಮ ಮೇಲೆ ಉಂಟಾಗುವ ಪರಿಣಾಮವಲ್ಲದೆ. ತನಗೆ ತಾನೇ ಬೇರೆ ತತ್ತ್ವವಿದೆಯೆಂದರೆ ತಪ್ಪಾಗುತ್ತದೆ. ನಿಷ್ಪತ್ತಿ. ಆವಿರ್ಭೂತಿ ಸ್ವಸ್ವರೂಪವಾದ್ದು. ನಮ್ಮ ನಿರೀಕ್ಷೆ. ಅಲ್ಲಿರುವ ವಿನ್ಯಾಸ. ನಿರೀಕ್ಷೆ ಇಲ್ಲದಿದ್ದರೆ ವಿನ್ಯಾಸ ಎಲ್ಲಿ ಬಂತು ? ನಾವೇ ಆ ವಿನ್ಯಾಸವಾಗುತ್ತೇವೆ. ಆದ್ದರಿಂದಲೇ ಅದನ್ನು ಅನುಭವಿಸುತ್ತೇವೆ. ಈ ಅನುಭವವನ್ನು ತಂದುಕೊಡಲು ಅಲ್ಲಿ ಒಂದು ಕ್ರಮ ಇರಬೇಕು. ನಾಲಗೆ–ಕಿತ್ತಲೆ ಹಣ್ಣಿನ ರುಚಿಯ ಸಂಬಂಧ : ಕಿತ್ತಲೆ ಹಣ್ಣಿನಲ್ಲಿಯೂ ರಸದಲ್ಲಿಯೂ ಒಂದು ಸೋದ್ದೇಶ ಪೂರ್ವಕತೆ ಇರಬೇಕು. ನಾಲಗೆಗೆ ಸೋಂಕುವ ಮುಂಚೆ, ರಸ ಕೊಡುವ ಶಕ್ತಿ ಕಿತ್ತಲೆಯಲ್ಲಿರಬೇಕು.

ಸ್ವತಂತ್ರಕ್ರಮ ಛಂದಸ್ಸಿನಲ್ಲಿ ನಿರೀಕ್ಷೆಯ ಭಂಗವಿದ್ದರೆ ಸ್ವಾರಸ್ಯವಿರುತ್ತದೆ. ವೈವಿಧ್ಯವಿರುತ್ತದೆ. ಹೊಳೆ ಮುಳುಗು ಪಕ್ಕಿಗಳ ಮುಳುಗು ಏಳುಗಳಲ್ಲಿ regular metre rhythm ಇರುತ್ತದೆ : ತನ್ನ ಆವಶ್ಯಕತೆಗೆ ತಕ್ಕಂತೆ ಅವು ಎಲ್ಲೆಲ್ಲಿಯೋ ಏಳುತ್ತವೆ. ಹಾಗೆ ನಿರೀಕ್ಷೆಯ ತೃಪ್ತಿ ಭಂಗಗಳೆರಡೂ ಸಹಾಯಕಗಳು. ಉತ್ತಮವಾದ ಛಂದಸ್ಸು ತೃಪ್ತಿ ಭಂಗಗಳ ಸಾಮರಸ್ಯದ ಫಲ. ಇದು ಎಲ್ಲಿ ಸಾಧಿಸುವುದೋ ಅಲ್ಲಿ ಉತ್ತಮ ಕಾವ್ಯವನ್ನು ಕಾಣುತ್ತೇವೆ. ನಮ್ಮ ನಿರೀಕ್ಷೆ ಸಕ್ರಮವಾಗಿದ್ದರೆ, ವಿಸ್ಮಯ ಹೋಗುತ್ತದೆ. Lucky dip, where we know everything. ಆದರೆ ಸ್ವಾರಸ್ಯವಿರುವುದು ವಿಸ್ಮಯದಲ್ಲಿ.

ಗದ್ಯದಲ್ಲಿ ಹಿಂದಿನ ಪದಗಳ ಪ್ರಭಾವ ಸ್ವಲ್ಪ ದೂರದವರೆಗಿರುತ್ತದೆ ; ಕಾವ್ಯದಲ್ಲಿ ಆ ಹಿಂದಿನ ಪದಗಳ ಪ್ರಭಾವ ಹೆಚ್ಚು ದೂರದವರೆಗಿರುತ್ತದೆ. ೪ ಪಂಕ್ತಿ, ೬ ಪಂಕ್ತಿ, ೮ ಪಂಕ್ತಿ, ೧೪ ಪಂಕ್ತಿಗಳ ದ್ವಿಪದಿ ಚೌಪದಿ ಷಟ್ಪದಿ (ಮುಂತಾದವನ್ನು ನೋಡಬಹುದು.

ಮರಳು । ಮಾಧವ । ಮಹಿಯು । ರಾಜ್ಯದ
ಸಿರಿಗೆ ಸೋಲುವನಲ್ಲ...

ಇಲ್ಲಿ ನಿಲುಗಡೆ 'ಮಾಧವ' ಎಂಬುದರ ಕೊನೆಗೆ ; ಆದ್ದರಿಂದ ಆ ಕೊನೆಯಲ್ಲಿ ಗುರು : ಮರಳು । ಮಾಧವ.

ಛಂದಸ್ಸು ನಮ್ಮ ಕುಣಿತಕ್ಕೆ ಒಂದು ವೇದಿಕೆ ; ಕಾಲ್ದಾರಿಯಲ್ಲ, ಹಗ್ಗದ ನಡೆ ಅಲ್ಲ. ಸೂಕ್ಷ್ಮತರವಾದ ನಾದ ಸೌಂದರ್ಯವನ್ನು ಅಪೇಕ್ಷಿಸುತ್ತದೆ. ನಮ್ಮ ಅನುಭವ, ಸಾಂಪ್ರದಾಯಿಕವಾದ ಪ್ರಸ್ತಾರ ಕ್ರಮವನ್ನಲ್ಲ.

ರಸೆಯಿಂ ಕಾಲಾಗ್ನಿ ರುದ್ರಂ ಪೊಱಮಡುವವೊಲ್ ಅಂತಾ ಸರೋಮಧ್ಯದಿಂ ಸಾ
ಹಸ ಗರ್ವಾಲಂಕೃತಂ ತೊಟ್ಟನೆ ಕೊಳೆ...

'ಪೊಱಮಡುವವೊಲ್' ಎನ್ನುವಲ್ಲಿ, ಒಂದು ಗುರುವಿನ ಕಾಲಕ್ಕಿಂತ ಹೆಚ್ಚಾದ ಒತ್ತು ಆಯೆಡೆ ಕಾಣುತ್ತದೆ.

ಮರಳು । ಮಾಧವ । ಮಹಿಯು । ರಾಜ್ಯದ
ಸಿರಿಗೆ । ಸೋಲುವ । ನಲ್ಲ...

ನಮ್ಮ ಓದಿನ ಸರಿಗತಿಗೆ ಈ ಲಘುಗುರುವಿನ ಪ್ರಮಾಣ ಯುಕ್ತವಾದ ಮಿತಿ ಅಲ್ಲ. ಲಘುಗುರುಗಳು ತಮತಮಗೆ ತಕ್ಕ ಬಲಗಳನ್ನು ಪಡೆದುಕೊಳ್ಳಬೇಕಾಗುತ್ತದೆ. ಲಯ ಛಂದಸ್ಸು, ಪ್ರಾಸ ಎಲ್ಲ ಸೇರಿ ಪ್ರಸ್ತಾರ.

ಓದುವ ಗತಿ, ರೀತಿ, ಅರ್ಥ, ಭಾವ, ಯತಿಗೆ ಅನುಸಾರವಾಗಿ ಗುರುಲಘುವಿನ ಮಾತ್ರಾಪ್ರಮಾಣ ಹೆಚ್ಚು ಕಡಮೆಯಾಗುತ್ತದೆ. ಮಾತ್ರೆ, ಗಣ, ಚರಣಗಳಲ್ಲಿ ಪದಗಳಿಗೆ ಪೂರ್ಣವಾಗಿ, ಶಿಥಿಲವಾಗಿ ರಸಾನುಸಾರಿಯಾದ ಒತ್ತು ಇರುತ್ತದೆ. ರಸಾನುಭವಕ್ಕೆ ಅನುಸಾರವಾಗಿ ಮನಸ್ಸು ಇದಕ್ಕಿಂತಲೂ ಸೂಕ್ಷ್ಮತರವಾದ ವಿವಿಧ ವ್ಯತ್ಯಾಸಗಳನ್ನುಳ್ಳ ಕೆಲವು ಪರಿಣಾಮಗಳಿಗೆ ನಮಗೆ ಚಿತ್ತಸಂವಾದ ಉಂಟಾಗುತ್ತದೆ. ಓದುತ್ತ ರಸಾನುಭವ ಮಾಡುವ ದೃಷ್ಟಿ ಬೇರೆ ; ವಿಭಜನಾದೃಷ್ಟಿಯಿಂದ, ಪ್ರಸ್ತಾರ ಹಾಕುವ ದೃಷ್ಟಿಯಿಂದ ನೋಡುವಾಗ ಗುರು ಲಘುಗಳು ಸಾಕು, ಪ್ರಸ್ತಾರ ಕ್ರಮ ಸಾಕು. ನಾದದ ಒಂದು ಮಂದ್ರ, ದ್ರುತ, ದನಿಯ ಏರು ಇಳಿತಗಳಿಗೆ ಸಂಬಂಧಿಸಿದಂತೆ, ಅವುಗಳಿಗೆ ಪರಸ್ಪರ ಸಂಬಂಧವಿರುವಂತೆ 'ಓ' ಗುರು, ಓದುವಾಗ, [ಹಾಡುವಾಗ, ಹಿಗ್ಗುತ್ತದೆ]. ನಾದಗಳ ಏರಿಳಿತಗಳ ಪರಸ್ಪರ ಸಂಬಂಧವನ್ನು, ಗುರು ಲಘುಗಳ

ಸಂಪ್ರದಾಯ ಪ್ರಮಾಣಕ್ಕಿಂತ ಬೇರೆಯಾಗಿ, ಮಿಗಿಲಾಗಿ ಗಣಿಸಬೇಕು. ಮಾತ್ರೆಗಳನ್ನು ಗಣಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಓದಬಾರದು. ಬರಿಯ ಮಾತ್ರಾಗಣಗಳು ಇಲ್ಲ, ಹೇಗೆ ಅರ್ಥರಹಿತವಾದ ಪದ ಎಂಬುದು ಇಲ್ಲವೋ ಹಾಗೆ. ಜೀವಂತ ಹುಲಿಯನ್ನು ಎದುರುಗೊಂಡಾಗ, ಅದರ ಚರ್ಮ ಎಂಬುದು ಪ್ರತ್ಯೇಕವಾಗಿ ಇಲ್ಲ. ಪದ ಅರ್ಥಗಳ ಅಖಂಡತೆಯಂತೆ, ರಸಾನುಭವದ ದೃಷ್ಟಿಯಿಂದ ಮಾತ್ರಾಗಣಗಳೆಂಬುವು ಬೇರೆ ಎನ್ನುವುದಿಲ್ಲ. ಶ್ರೀ (—/——/———/————) ಎಂಬಂತೆ ಓದಿದಲ್ಲಿ ಏರು ಕಾಣುತ್ತದೆ; ಆ ಓದು ಭಾವಕ್ಕೆ ಅನುಸಾರಿಯಾಗಿರುತ್ತದೆ.

ಗುರುಲಘುಗಳನ್ನು ಗುರುತು ಹಾಕುವಂತೆ, ನಾದದ ಏರಿಳಿತಗಳನ್ನು ಗುರುತು ಹಾಕುವುದಕ್ಕೆ ಆಗುವುದಿಲ್ಲ: ಎಂದರೆ ಒಂದು ಪ್ರಮಾಣದಿಂದ ಗುರುತಿಸಲು ಸಾಧ್ಯವಿಲ್ಲ.

**Dark — Dark — Dark**
**Amid the blazing noon**

ಮೊದಲ ಚರಣದಲ್ಲಿ ಪದದಿಂದ ಪದಕ್ಕೆ ದನಿಯ ಏರು ಉಂಟು. ಯಾವ 'ಛಂದೋಂಬುಧಿ'ಯಲ್ಲೂ ಇದರ ನಿರ್ಣಯ ಮಾಡಲಾಗದು. ಪ್ರತಿ ಕವಿಯಿಂದ ತನಗೆ ತಾನೇ, ಅವನಿಂದಲೇ, ಛಂದಸ್ಸಿನ ಗುಣದೋಷಗಳೆಲ್ಲ ನಿರ್ಣಯವಾಗುತ್ತವೆ.

ಮಿಲ್ಟನ್ನನ ಬ್ಲ್ಯಾಂಕ್‌ವರ್ಸ್ ಇದೆ. ಬೇರೆಯವರು ಬರೆದಿದ್ದರೂ ಅವನವನ ಬ್ಲ್ಯಾಂಕ್‌ವರ್ಸ್ ಯೋಗ್ಯತೆ, ದೋಷ ಅವನವನಿಗೆ ಸೇರಿದ್ದು. ನಾದದ ಏರಿಳಿತವನ್ನು ಸಹೃದಯನು ಗಮನಿಸಬೇಕು. ನಾವು ಗಮಕದ ವೈಶಿಷ್ಟ್ಯವನ್ನು ಇಲ್ಲಿ ಗುರುತಿಸುತ್ತೇವೆ. ಕವಿ ಕಾವ್ಯದಲ್ಲಿ ತನ್ನ ಧ್ವನಿ ಸೌಂದರ್ಯವನ್ನು ಮರೆದಿದ್ದರೆ, ಅದು ಗಮಕಿ ಹೇಳಿ ತೋರಿಸುತ್ತಾನೆ. ೩–೪ ರ ಸಂಪ್ರದಾಯ ಗಣವಿಭಜನೆಯನ್ನು ಪಟ್ಟಾಗಿ ಹಿಡಿದು ಅದರಲ್ಲಿ ಸಾಧನೆ ನಡೆಸುವುದು ಮೂರ್ಖತನ. **ode to simplicity, ode on the christ's Nativity** ಒಂದೇ ಛಂದಸ್ಸಿನಲ್ಲಿ ಬರೆದಿದ್ದರೂ, ಸಾಧಿಸಿರುವ ವೈವಿಧ್ಯದಲ್ಲಿ ವ್ಯತ್ಯಾಸಗಳಿವೆ. ಛಂದಸ್ಸು, ನಾದ ಅರ್ಥ ಸಮನ್ವಿತವೇ, ಜೀವಂತ ಹುಲಿ ಚರ್ಮಯುಕ್ತ ಎನ್ನುವಂತೆ. ನಾದದ ಏರಿಳಿತ ಪ್ರತ್ಯೇಕವಾಗಿ ಏನಿಲ್ಲ, ಅರ್ಥಭಾವ ಸಮನ್ವಿತವೇ. ಬೇರೆ ಸ್ವರವ್ಯಂಜನಗಳನ್ನು ಮೂಲದಲ್ಲಿರುವಂತೆ ಜೋಡಿಸಿ ಹಾಕಿ ಓದಿದರೆ (ಇ–ದ–ಜೌಲ್–ಶ್ವೇ–ತಾ–ತ–ಪ–ತ್ರ–ಸ್ಥ–ಗಿ–ತ), ಅದರಲ್ಲಿ ಅರ್ಥವೇನಿದೆ ? ತಿಳಿದವರು ಇದು ಇಂಥ ಛಂದಸ್ಸಿನಲ್ಲಿದೆಯೆಂದು ಗುರುತಿಸಬಹುದು ; ಇನ್ನಾರಿಗಾದರೂ ಇದನ್ನು ಕೊಟ್ಟರೆ, ಅದು ಅರ್ಥವಿಹೀನವಾಗಿ ತೋರುತ್ತದೆ. ಯಾವುದಾದರೂ ಶಬ್ದದ ಕ್ರಮಬದ್ಧವಾದ ಉಚ್ಚಾರಣೆಯಿಂದ, ಜೋಗುಳದಿಂದ ತಾಯಿ ಮಗುವನ್ನು ಮಲಗಿಸುವಂತೆ, ಜಾಗ್ರನಿದ್ರಾಸ್ಥಿತಿ ಸಂಭವಿಸುತ್ತದೆ ; ನಮ್ಮ ಮನಸ್ಸನ್ನು, ಪ್ರಜ್ಞೆಯನ್ನು ಒಂದು ಅಪೂರ್ವಸ್ಥಿತಿಗೆ ಎತ್ತು

ತ್ತದೆ. ಬುಡುಬುಡಿಕೆಯವನೂ ಭಟ್ಟಂಗಿಯವನೂ ಸ್ವಾಭಾವಿಕವಾಗಿ ಮಾಡುವ ಶಬ್ದ, ಹೇಳುವ ರೀತಿ, ನಮ್ಮ ಬುದ್ಧಿಯನ್ನು ಮರುಳುಗೊಳಿಸುತ್ತದೆ. ಅದು ನಿರರ್ಥಕವೂ ಏಕತಾನತೆಯುಳ್ಳದ್ದೂ ನಿಜ ; ಆದರೆ, ಮನಸ್ಸಿಗೆ ಮಾಯೆ ಕವಿಯು ವಂತೆ ಆ ನಾದದ ಶಕ್ತಿ ; ಬೇಸರದಿಂದ ತಂದ್ರಾವಸ್ಥೆ, monotony ಯಿಂದ hypnoticism ; ವಿಸ್ಮಯದಿಂದ ಅಲ್ಲ. ಆದರೆ ವಿಸ್ಮಯದಿಂದ ಕುತೂಹಲ ಕೆರಳಿ ಸಂತೋಷವಾಗುತ್ತದೆ, ಎಚ್ಚರ ಬರುತ್ತದೆ. ಬೇಸರದಿಂದ ಮಾಟ ಮಾಡುವಂತೆ ಅಲ್ಲ ಇದು ; ನಮ್ಮನ್ನು ಅಪೂರ್ವ ಪ್ರಜ್ಞಾಸ್ಥಿತಿಗೆ ಕೊಂಡೊಯ್ಯುತ್ತದೆ. ಸಂಗೀತದ ಅನುಭವವುಳ್ಳ ಚಿತ್ತ, ಹೃದಯ ಸಂವಾದವುಳ್ಳವರ ಮನಃಸ್ಥಿತಿ ಲೋಕೋತ್ತರ, ಲೋಕದಿಂದ ದೂರ ಆಗುತ್ತದೆ.

ನರ್ತನದ ಲಯ ಕೆಲವು ಛಂದಸ್ಸಿನಲ್ಲಿ ಕಾಣುತ್ತದೆ. ಜೋಗುಳ, ಉತ್ಸಾಹ, ಗಂಭೀರ, ಚಿಂತಾಕ್ರಾಂತ, ಹರ್ಷಚಿತ್ತ ಆಗಿ ಮಾಡುತ್ತದೆ ಒಂದೊಂದು ಬಗೆಯ ಛಂದಸ್ಸು. ನಮ್ಮ ಭಾವವನ್ನು ಯಾವ ರಸಕ್ಕೆ ತಿರುಗಿಸಬೇಕು ಎಂಬ ಉದ್ದೇಶ ಕವಿಗಿದ್ದರೆ, ಆ ಛಂದಸ್ಸಿನಲ್ಲಿ ಅದು ಒಡಮೂಡುತ್ತದೆ. ಲಲಿತ ಶೃಂಗಾರವು ಮತ್ತೇಭ ಸ್ರಗ್ಧರೆಗಳಲ್ಲಿ ಕಾಣುವುದು ಸಾಮಾನ್ಯವಾಗಿ ಇಲ್ಲ. ಇಂಥ ರಸಕ್ಕೆ ಇಂಥ ರಾಗ ಎಂದು ಸಂಗೀತದಲ್ಲಿರುವಂತೆ, ಇಂಥ ರಸಕ್ಕೆ ಇಂಥ ಛಂದಸ್ಸು ಎಂದು ತನಗೆ ತಾನೇ ಮೂಡಿ ಬರುತ್ತದೆ. ಉದಾಹರಣೆಗೆ ಮತ್ತೇಭ ಸ್ರಗ್ಧರೆಗಳಲ್ಲಿ ವೀರ ಪ್ರಯತ್ನಸಾಧ್ಯ ಛಂದಸ್ಸಿನಲ್ಲಿ ಒಂದು ರೀತಿಯ ಕೃತಕತೆಯುಂಟು.

Through its very appearence of artificiality, metre produces in highest degree the 'frame' effect, isolating the poetic experience from the accidents and irrelovancies of every day life. ದೈನಂದಿನ ಲೋಕದ ಚೌಕಟ್ಟಿನಿಂದ, ನಮ್ಮ ಪ್ರಜ್ಞೆಯಿಂದ, ಇನ್ನಾವುದೋ ಒಂದು ಚೌಕಟ್ಟಿಗೆ, ಭೂಮಿಕೆಗೆ ಎತ್ತುತ್ತದೆ, ರಾತ್ರಿ ಸಿನಿಮಾ ನೋಡುವುದಕ್ಕೆ ಹೋದ ಹಾಗೆ. ಟಿಕೇಟು ಕೊಂಡು ಒಳಗೆ ಹೋಗುವವರಿಗೆ, ಅದುವರೆಗೂ ಒಂದು ಲೋಕ, [ಆಮೇಲೆ ಇನ್ನೊಂದು]. ರಸಾನುಭವದ ಉದ್ದೇಶಕ್ಕೆ ಹೋಗುವವರಿಗೆ, ಯಥಾರ್ಥತೆಗೆ ಪೂರ್ಣ ವಿರಾಮ ಕೊಟ್ಟಂತೆ ಅಲ್ಲಿ ಬೇರೆ ಒಂದು ಪ್ರಜ್ಞಾಲೋಕ ಆರಂಭಿಸುತ್ತದೆ.

**ಲೋಕನೈಜ-ಅಲೌಕ.** ಕಲೆ ಇದು ಎಂದು ಹೇಳುವುದು ಲೋಕನೈಜದಿಂದ ಅಲೌಕಕ್ಕೆ ನೇರವಾಗಿ ಕೊಂಡೊಯ್ಯುತ್ತದೆ. ಈ ಲೋಕಾಂತರ ನೂತನ ಭೂಮಿಕೆಗೆ ಕೊಂಡೊಯ್ಯುವುದು ಕಾವ್ಯಕ್ಕೆ ಅತ್ಯಂತ ಆವಶ್ಯಕ. ತನ್ನ ಭಾವಗಳನ್ನು ಭಿನ್ನಭೂಮಿಕೆ ಯಲ್ಲಿ, ಭಿನ್ನ ರೂಪದಲ್ಲಿ ಅನುಭವಿಸಿರುವುದೇ ಅದರ ಅಭಿವ್ಯಕ್ತಿಯು ಹೀಗಾಗಲು ಕಾರಣ. ಭಾವದಿಂದಲೇ ಪ್ರತ್ಯೇಕವಾದ ಅನುಭವವಲ್ಲದಿದ್ದರೂ, ಭಿನ್ನವಾದ್ದು. ಲೋಕಸ್ಥಿತಿ ಪರಿವರ್ತಿತವಾದ್ದು ಅಷ್ಟೆ, ಈ ರಸಾನುಭವ. ಅದರ ರೂಪವ್ಯತ್ಯಾಸ

ಸ್ವರೂಪ ವ್ಯತ್ಯಾಸವೇನಲ್ಲ. ಯಾವುದು ಗದ್ಯದಲ್ಲಿ ಅಹಂಕಾರ ರೂಪಕ್ಕೆ ತಿರುಗ ಬಲ್ಲದೋ ಅದು ಪದ್ಯದಲ್ಲಿ ಅಹಂಕಾರ ರಹಿತವಾಗಿ ಆನಂದದಾಯಕವಾಗಬಹುದು. Metre for the most difficult and delicate utterances : ವಿಷಯ ಮತ್ತು ವಸ್ತು ಸೂಕ್ಷ್ಮತೆಯನ್ನು ಹೇಳುವುದಕ್ಕೆ ಅನಿವಾರ್ಯವಾದ, ಆವಶ್ಯಕವಾದ ದಾರಿ ಛಂದಸ್ಸು. ಅನುಭವ ವಿಶೇಷಗಳನ್ನು, ಸೂಕ್ಷ್ಮಾನುಭವಗಳನ್ನು ಸಹೃದಯ ಸಂವೇದ್ಯವಾಗುವಂತೆ ಮಾಡುವುದಕ್ಕೆ ಛಂದಸ್ಸು ಅತ್ಯಂತ ಅನಿವಾರ್ಯ.

೩

ನ್ಯಾಯವಾಗಿ ಇರುವುದು ಮೂರು ವೃತ್ತಗಳು. ಖ್ಯಾತಕರ್ಣಾಟಕಗಳೆಂದು ಆರು ವೃತ್ತಗಳನ್ನು ಹೇಳಿರುವುದು ತಿಳಿಯುತ್ತದೆ. ಮೊದಲನೆಯ ಗುರುವನ್ನು ಒಡೆದರೆ ಉಳಿದವು ಸಿದ್ಧಿಸುತ್ತವೆ: ಉತ್ಪಲಮಾಲೆ–: ಚಂಪಕಮಾಲೆ ᴗᴗ ; ಸ್ರಗ್ಧರೆ–: ಮಹಾಸ್ರಗ್ಧರೆ ᴗᴗ ; ಶಾರ್ದೂಲ ವಿಕ್ರೀಡಿತ–: ಮತ್ತೇಭ ವಿಕ್ರೀಡಿತ ᴗᴗ ನಮ್ಮವರು ಈ ವೃತ್ತಗಳನ್ನೇ ಹೆಚ್ಚು ಉಪಯೋಗಿಸಿಕೊಂಡರು. ನಮಗೆ ಮಾತ್ರಾ ಛಂದಸ್ಸು ಹೆಚ್ಚು ಒಗ್ಗುತ್ತದೆ. ೩, ೪, ೫ ಮಾತ್ರೆಗಳ ಗಣಗಳವರೆಗೆ ತೆಗೆದು ಕೊಂಡರು. ಎಷ್ಟೋ ಪದ್ಯಗಳು ೩, ೪, ೫ ರ ಇಟ್ಟಿಗೆಗಳ ಮೇಲೆ ಕಟ್ಟಿದವು. ಇಂಗ್ಲಿಷಿನಲ್ಲಿಯೂ ಹೀಗೆಯೇ.

ಸೊಗಸಾದ ಮಾತ್ರಾಗಣ ವಿನ್ಯಾಸವಿರುತ್ತದೆ. ೫–೫ರ ಮಾತ್ರಾಗಣಗಳಿವೆ. ಆದ್ದರಿಂದ ಇದನ್ನೇ ಉಪಯೋಗಿಸಿಕೊಂಡರು. ಮೊದಲಲ್ಲಿ ೧।೨।೩ ಅಕ್ಷರಗಳ ವರೆಗೆ ಹಿಂದೆ ಬಿಟ್ಟುಬಿಡಬೇಕು. ಮೂರು ಅಕ್ಷರಗಳ ಗಣಗಳನ್ನು ಮಾಡುವುದರಿಂದ ಪ್ರಯೋಜನವೇನೋ ತಿಳಿಯದು.

ಕಣ್ಣಲ್ಲಿ ಕಾಣುವುದು ಛಂದಸ್ಸಲ್ಲ, ಕಿವಿಯಲ್ಲಿ ಕೇಳುವುದೇ ಛಂದಸ್ಸು. ಅದ ರಲ್ಲಿಯೂ ಮಾಧುರ್ಯದ ಅಂಶಗಣಗಳು ಕನ್ನಡದಲ್ಲಿ ರೂಢವಾದದ್ದು. ಪ್ರತಿ ಯೊಂದಕ್ಕೂ ಮಾತ್ರಾವಿನ್ಯಾಸವಿದ್ದರೆ ಮೊದಲ ಮೂರಕ್ಷರ ಅದಕ್ಕೆ ಪೀಠವಿದ್ದಂತೆ. ಕಾವ್ಯದಲ್ಲಿ ಒಂದು ಪಂಕ್ತಿ, ಎರಡು ಪಂಕ್ತಿ ಹೇಳುವುದು ಸರಿಯೇ. ಆದರೆ ಭಾವದ ದೃಷ್ಟಿಯಿಂದ ಎಲ್ಲಿಯೂ ನಿಲ್ಲಿಸುವುದಿಲ್ಲ. ಷಟ್ಪದಿಗಳಲ್ಲಿ ಗಮನಿಸಿ.

ಒಂದು ಅಕ್ಷರಕ್ಕೆ ಒಂದು ಗಣ, ಎರಡಕ್ಷರಕ್ಕೆ ಒಂದು ಗಣ, ಮೂರಕ್ಕೆ ನಾಲ್ಕಕ್ಕೆ ಒಂದೊಂದು ಗಣ ಮಾಡುವುದು ಸರಿ ; ಅದು ಪ್ರಯೋಜನೋದ್ದೇಶಗಳಿಗೆ ಅನು ಸಾರವಾಗಿ ಸಾಧ್ಯ. ಮೂರು ಅಕ್ಷರಕ್ಕೆ ಕತ್ತರಿಸಿ ಹಾಕು ಎಂದರೆ, ಕಾವ್ಯದಲ್ಲಿ ಪದದ ಅಖಂಡತೆಯನ್ನು ಗಮನಿಸಬೇಕು. ಹಾಗಲ್ಲದೆ ಛಂದಸ್ಸನ್ನು ಗಮನಿಸಿದರೆ, ಅದು ವಿಕಾರವೂ ಅನ್ಯಾಯವೂ ಆಗುತ್ತದೆ. ಸಿಕ್ಕಲ್ಲಿ ವಿಭಾಗಿಸು ಎನ್ನಲಾಗದು, ಹಿಂದು ಮುಂದಿನ ಅಕ್ಷರಗಳನ್ನೆಲ್ಲಾ ಲಕ್ಷಿಸಬೇಕು.

ಛಂದಸ್ಸಿನ ಸೆರೆಮನೆಯಲ್ಲಿ ಕವಿಯೇ ಸೆರೆಯಾಳುವೂ ಸೆರೆಮನೆಯ ಅಧಿಕಾರಿಯೂ ಆಗಿದ್ದಾನೆ. ಕೈಕಟ್ಟಿದ ನಾಟ್ಯವಿದ ನಾಟ್ಯವಾಡಿದರೆ ಏನು ವಿನ್ಯಾಸವನ್ನು ತೋರಿಸಿಯಾನು ? ಏನು ಸಂತೋಷವನ್ನು ಕೊಡಬಹುದು ? ಪೋಪ್ ಕವಿಯು ಇಂಗ್ಲಿಷ್ ಕವಿತೆ, ಹರಿಹರನ ರಗಳೆಗಳು ಆದಿಪ್ರಾಸ, ಅಂತ್ಯಪ್ರಾಸ. ಸರಳ ರೀತಿಯ ೫-೫ ಮಾತ್ರೆಗಳ ಗಣಗಳಿಂದ monotonus ಆಗಿಬಿಡುತ್ತವೆ. To repeat patterns ಪ್ರಯೋಜನವಿಲ್ಲ, to create patterns ಆಗಬೇಕು. ಇದಕ್ಕೆ there must be varieties. ೨-೩ ಮಾತ್ರೆಗಳ ವಿನ್ಯಾಸವನ್ನೇ ಹೆಚ್ಚು ಗಮನಿಸಬೇಕು. ೫ ಮಾತ್ರೆಗಳ ಗಣವೂ ೨-೩ ಆಗಿ ಒಡೆಯುತ್ತದೆ : ಸಹಸ್ರಾರು ವೈವಿಧ್ಯ ಏರ್ಪಡುತ್ತದೆ. ಇಲ್ಲಿ ಒಂದು ಪಂಕ್ತಿ ಮೂಲವಾನವಲ್ಲ.

**ಮಹಾಛಂದಸ್ಸು:** ಇದು ಸರ್ವಛಂದಸ್ಸಮುಷ್ಟಿ. ಇಲ್ಲಿ ಶಾರ್ದೂಲ, ಮತ್ತೇಭ, ಚಂಪಕ ಆದಿಯಾದೆಲ್ಲ ವೃತ್ತಗಳ ವಿನ್ಯಾಸಗಳೂ ಬರುತ್ತವೆ. It is so various, ನಾವೆಲ್ಲ ಭಾರತೀಯರು ಎಂದಂತೆ. ಒಬ್ಬೊಬ್ಬನ ರೀತಿ ನೀತಿ, ಆಚಾರ ವ್ಯವಹಾರ, ಊಟೋಪಚಾರ ಬೇರೆ ಬೇರೆ ಆಗುತ್ತದೆ. ನಾದದ ದೃಷ್ಟಿಯಿಂದ ಕಿವಿಬೇಸರವನ್ನು ಕಳೆಯುವುದೇ ಇಲ್ಲಿ ನಡೆಸಿರುವ ಪ್ರಯತ್ನ. ಹೊರದೃಷ್ಟಿಗೆ ೫-೫ ಮಾತ್ರೆಗಳ ೪ ಗಣಗಳಾಗಿ ತೋರಬಹುದು ; ಆದರೆ ಅನಂತ ವಿನ್ಯಾಸಗಳು ರೂಪುಗೊಳ್ಳುತ್ತವೆ, ಇಲ್ಲಿ.

ಕಿವಿಯ ಶಬ್ದಶಕ್ತಿ ಯಾವುದೋ ಒಂದು ತರಂಗಮಾಲೆಯಿಂದ ಇನ್ನೊಂದು ತರಂಗ ಮಾಲೆಯನ್ನು ಗ್ರಹಿಸುವುದರಲ್ಲಿ, ವರ್ಣವೃತ್ತಗಳಲ್ಲಿ ೨೬ ಅಕ್ಷರಗಳ ವಿನ್ಯಾಸವನ್ನು ಗ್ರಹಿಸುವುದೇ ಕಡೆಯಾಯಿತು. ಹಾಗೆಯೇ ಕಣ್ಣಿನದು ಕೂಡ. ಒಂದೇ ಸಾರಿಗೆ ಈ ಬೀಸನ್ನು ಗ್ರಹಿಸುವುದು ಸಾಧ್ಯವಿಲ್ಲ. ೨೬ ಅಕ್ಷರಗಳ ಮಿತಿ ಮೀರಿ, ಅಧಿಕ ಮಾತ್ರೆಗಳ ೫೦-೬೦ ಮಾತ್ರೆಗಳದನ್ನು ಗ್ರಹಿಸುವುದು ಸಾಧ್ಯವಿಲ್ಲ. ಆದ್ದರಿಂದಲೇ ಆ ಕೂಡಲೇ ನಾವು ಮಾನಸಿಕವಾಗಿ ೫ ಮಾತ್ರೆಗಳ ೪ ಗಣಗಳನ್ನು ಇಟ್ಟುಕೊಂಡು ಪಾದಗಳನ್ನು ಒಡೆಯುತ್ತೇವೆ. Any rule can break out, and yet good poetry lives.

೪

**ಛಂದಸ್ಸಿನ ಔಚಿತ್ಯ:** ಮತ್ತೇಭ ಅಥವಾ ಸ್ರಗ್ಧರೆ, ಮಹಾಸ್ರಗ್ಧರೆಗಳಿಗೆ, ಆ ವೃತ್ತದ ಬೀಸಿಗೆ ಎಂತೋ ಅಂತು ಉದಾತ್ತವಾದ, ಉಚಿತವಾದ ಭಾವ ಬೇಕು. ಉತ್ತಮವಾದ ಕಾವ್ಯದಲ್ಲಿ ರೀತಿ ಆತ್ಮ ಅಭೇದ್ಯವಾದುದು. ಯಾವೊಂದು ಔಚಿತ್ಯದ ಪೂರ್ಣತೆಯೂ ಎಲ್ಲ ಅನೌಚಿತ್ಯಗಳನ್ನೂ ಗೆದ್ದಿರಬೇಕು. ಕಾವ್ಯ ಸಕಲೌಚಿತ್ಯಗಳನ್ನೂ ಒಳಗೊಂಡಿರಬೇಕು, ವಿಚಾರಮಾತ್ರಕ್ಕೆ ನಾವು ಬೇರೆ ಬೇರೆ ಮಾಡುತ್ತೇವೆ.

ಒಂದೇ ವೃತ್ತಜಾತಿಯಲ್ಲಿ ಎಷ್ಟು ವಿಧವಾದ ರಸ ಹೇಗೆ ಉಚಿತವಾಗಿ ವ್ಯಕ್ತ ಬಲ್ಲುದು ? ಪರಿಶೀಲನಾರ್ಹ. ವಸ್ತು ಉದಾತ್ತ, ಛಂದಸ್ಸು ಅಲ್ಪ – ಒಂದು

ದೋಷವೇ. ಮಾಸ್ತಿಯವರ ಪದ್ಯ 'ಗೋಮಟೇಶ್ವರ'ದ ಛಂದಸ್ಸನ್ನು ಗಮನಿಸಿ, ಬೊಪ್ಪಣ ಪಂಡಿತನ 'ಗೊಮ್ಮಟಸ್ತುತಿ'ಯನ್ನೂ, 'ಶ್ರೀ ಗೋಮಟ ಮಹಾಮಸ್ತಕಾ ಭಿಷೇಕ ಪ್ರಗಾಥ'ವನ್ನೂ ಗಮನಿಸಿ. ಚಿಂತನಾಂಶವಿರಲಿ, ಛಂದಸ್ಸಿನ ಕಾರಣವಾಗಿಯೇ ಆ ವಸ್ತುವಿನ ಘನಭಾವ ಹೇಗೆ ವ್ಯಕ್ತವಾಗುತ್ತದೆ, ನೋಡಿ. ವಸ್ತು, ಚಿಂತನೆ, ಆಲೋಚನೆ ಉದಾತ್ತವಾಗಿದ್ದು, ಛಂದಸ್ಸು ಅಲ್ಪವಾಗಿದ್ದರೆ ಅದು ಅನೌಚಿತ್ಯದ ದೋಷ. ಇದು ಭೀಮನಿಗೆ ವಾಮನನ ಅಥವಾ ವಾಮನನಿಗೆ ಭೀಮನ ಅಂಗಿತೊಡಿಸಿ ದಂತೆ.

ಘನಿಸಿತು ಸತ್ವ
ಘನಿಸಿತು ಚಿತ್ತ
ಘನಿಸಿತು ಆನಂದ

ಇದು ಚಿಂತನಾಂಶದಲ್ಲಿ ನಿಜವಾಗಿಯೂ ಉನ್ನತವಾಗಿದೆ : ಆದರೆ ಛಂದಸ್ಸಿನ ಅಲ್ಪತೆ ಇಲ್ಲಿಯ ದೋಷ.

ಯಾವುದು ಉಚಿತವಾದ ಶಬ್ದಾಲಂಕಾರದಿಂದ ರಸಕ್ಕೆ ಪೋಷಕವಾಗಬೇಕಾ ಗಿತ್ತೋ ಅದು ತನ್ನ ಔಚಿತ್ಯ ಮೀರಿ ರಸಭಂಗವಾಗುತ್ತದೆ. ಔಚಿತ್ಯ, ಸಹೃದಯ ಮತ್ತು ಕವಿ ಇವರ ಅನುಭವ ಪ್ರಜ್ಞತೆಗೆ ಅನುಸಾರಿಯಾದುದು. ಒಬ್ಬನಿಗೆ ಉಚಿತ ವಾದುದು ಇನ್ನೊಬ್ಬನಿಗೆ ಉಚಿತವೆನಿಸದಿರಬಹುದು. ಛಂದಶ್ಶಾಸ್ತ್ರಜ್ಞರು ತತ್ತ್ವ ಸೂತ್ರ ಗಳನ್ನು ರಚಿಸಿದರೆ, ಮಹಾಕವಿಗಳಾರೂ ಆ ಸಂಪ್ರದಾಯದ ಖೆಡ್ಡಾಕ್ಕೆ ಬಿದ್ದಿಲ್ಲ. ಉತ್ತಮ ಕವಿಗೆ ಛಂದಸ್ಸು ಎನ್ನುವುದು ಚರ್ಮ ಮೈಗೆ ಹುಟ್ಟಿಬಂದಂತೆ ; ಚರ್ಮದ ಚೀಲಕ್ಕೆ ರಕ್ತಮಾಂಸಗಳನ್ನು ತುಂಬಿದಂತೆ ಅಲ್ಲ.

೫

ರೂಪಾಂಶದಲ್ಲಿ ನಾದಾಂಶವೂ ಅಂಗವಾಗಿ ಸೇರುತ್ತದೆ. ರೂಪಾಂಶ ನಾದಾಂಶ ಗಳಿಗಿರುವ ಸಂಬಂಧ ರೀತಿ ಸಿದ್ಧಾಂತದ ಆಶ್ರಯದಿಂದ ತಿಳಿಯಬಹುದು ರೀತಿ ಪದ ಸಂಘಟನೆಯೆಂಬ ಸ್ಥೂಲಾರ್ಥಕ್ಕೂ 'ನಾದ' ಅಂಶ. ವರ್ಣಧ್ವನಿ-ನಾದಧ್ವನಿ : ವರ್ಣ, ನಾದದ ವಿಶಿಷ್ಟರೂಪಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಕೊಟ್ಟು ಹೇಳಿದೆ ; ನಾದ ಸಾಮಾನ್ಯ ವಸ್ತುವನ್ನು ಕುರಿತು ಹೇಳುವ ಮಾತು. ರಸ ಮತ್ತು ನಾದಕ್ಕಿರುವ ಸಂಬಂಧ ? ನಾದಾಂಶ ಇಲ್ಲದ ಪಕ್ಷದಲ್ಲಿ ರಸಾನುಭವ ಆಗುತ್ತಿರಲಿಲ್ಲ. ಎಷ್ಟರ ಮಟ್ಟಿಗೆ ಛಂದಸ್ಸು, ರೀತಿ, ನಾದಾಂಶ, ವರ್ಣಧ್ವನಿ ಇವು ಕಾವ್ಯದ ಅಪೃಥಗ್‌ಭಾಗ ಎಂಬುದನ್ನು ಸಿದ್ಧಾಂತಪಡಿಸಬೇಕು. ಅನೇಕ ವೇಳೆ ನಾದಾಂಶವನ್ನು ರಾಗಾಂಶದಿಂದ ತುಂಬಿಕೊಳ್ಳುತ್ತೇವೆ. ನಾಂದಾಶಕ್ಕೆ ರಾಗಗಳನ್ನು ಹಾಕಿ, ಇರುವ ನ್ಯೂನತೆ ಅಪೂರ್ಣತೆಗಳನ್ನು ತುಂಬಿಕೊಡುತ್ತೇವೆ. ಭಾವಗೀತೆಗಳನ್ನೂ ಹಾಡುಗಳನ್ನೂ

ಗಮನಿಸಿ. ಗಾನಾಂಶ ಎಂದು ಯಾವುದನ್ನು ಕರೆಯುತ್ತೇವೆಯೋ ಅದೂ ನಾದಾಂಶವೂ ರೂಪಾಂಶದಲ್ಲಿ ಸೇರುತ್ತದೆ.

೬

ಛಂದಸ್ಸಿನ ಒಂದು ಸಾಮಾನ್ಯ ರೂಪ 'ಲಯ'. ಲಯ ಎಲ್ಲ ಸೃಷ್ಟಿಗೂ ಅತ್ಯಂತ ಆವಶ್ಯಕ. ಆದರೆ ನಾವು ಕಾವ್ಯತ್ವವನ್ನು ನಿರ್ಣಯಿಸುವುದು ಮೂಲ ಸತ್ತ್ವವಾಗಿರುವ ವಸ್ತು, ರಸವಸ್ತು, ರಸಾನುಭವದಿಂದ. ಇದರ ಪ್ರಕಾಶನದಲ್ಲಿ ಈ ಲಯ ಛಂದಸ್ಸುಗಳು ಅತ್ಯಂತ ಸಹಕಾರಿಯಾದ ಅಂಶಗಳು. ಕಾವ್ಯಕ್ಕೆ ಛಂದಸ್ಸು ಆವಶ್ಯಕ; ಆವಶ್ಯಕವಿಲ್ಲ ! ಮೂರಕ್ಷರಗಳ ಗಣವಿಭಜನೆಯಿಲ್ಲದೆ ಕಾವ್ಯವಿರಬಹುದು. ಛಂದಸ್ಸಿಲ್ಲವೇ ಇಲ್ಲ ಎಂದರೆ, ನಾದಕ್ರಮ ಯಾವವಿಧದ್ದೂ ಇಲ್ಲವೆಂದರ್ಥವಲ್ಲ. ಹಾಗಾದರೆ ಅದು ಕಾವ್ಯವಾಗಲಾರದು. ನಾದಕ್ರಮ, ಲಯ ಇರಲೇಬೇಕು. ಹೌದು, ಅಲ್ಲ ಎರಡಕ್ಕೂ ಹೊಂದಿಕೊಳ್ಳುವ ಪ್ರಶ್ನೆಯಿದು.

ಛಂದಸ್ಸಿನ ಸ್ವರೂಪ ಎಲ್ಲ ಸೃಷ್ಟಿಗೂ ಆವಶ್ಯಕ; ಲಯ ಎಲ್ಲಕ್ಕೂ ಆವಶ್ಯಕ. ಭೌತ ಪ್ರಕೃತಿಯಲ್ಲಿ ಎಷ್ಟು ನಿಯತಿ ನಿಯಮ ಪ್ರಕಾರಗಳನ್ನು ಎದುರುಗೊಳ್ಳುತ್ತೇವೆಯೋ ಹಾಗೆಯೇ ಕಾವ್ಯದಲ್ಲೂ ಪರಮಾಣುವಿನಲ್ಲೂ ಈ ಲಯವಿನ್ಯಾಸ ಇದ್ದೇ ಇರುತ್ತದೆ. ಸಿದ್ಧಾಂತ ಏನೇ ಇರಲಿ, ವಾಸ್ತವವಾಗಿ ಪ್ರಪಂಚದಲ್ಲಿ ಸೃಷ್ಟಿಯಾಗಿರುವ ಕಾವ್ಯವನ್ನು ಗಮನಕ್ಕೆ ತೆಗೆದುಕೊಂಡರೆ, ಅಂಕಿ ಅಂಶಗಳ ನಿರ್ಣಯದಿಂದ ತೆಗೆದುಕೊಂಡರೆ, ಕಾವ್ಯ ಛಂದೋಬದ್ಧವಾದುದು. ಸ್ವಾಭಾವಿಕವಾಗಿ ತಾಳಲಯಗಳನ್ನು ಇಟ್ಟರೆ ಅದನ್ನು ಜನಪದ ಸಾಹಿತ್ಯದಲ್ಲಿ ಕಾಣಬಹುದು. ಬರಿಯ ಅಕ್ಷರಗಳಿದ್ದರೆ ಅದರಿಂದ ತಿಳಿಯಲಾಗದಿದ್ದರೂ, ಅದನ್ನು ಎಳೆಯುವ ನಾದಕ್ರಮದಲ್ಲಿ ಲಯ ಛಂದಸ್ಸು ಇರುತ್ತವೆ.

ಉತ್ತಮ ಕಾವ್ಯಗಳಲ್ಲಿ ಛಂದಸ್ಸು ಇಲ್ಲದುದು ಅತ್ಯಂತ ವಿರಳ. ಛಂದಸ್ಸು ಕೃತಕ ಅಸ್ವಾಭಾವಿಕ ಎನ್ನುವುದಕ್ಕಿಂತ ಬದಲಾಗಿ ಸ್ವಾಭಾವಿಕ, ಆವಶ್ಯಕ ಎನ್ನಬೇಕು. ನಮ್ಮಲ್ಲಿ ಗದ್ಯಕಾವ್ಯಕ್ಕಿಂತ ಮೊದಲು ಸೃಷ್ಟಿಯಾದದ್ದು ಪದ್ಯಕಾವ್ಯ, ಆದಿಮಾನವ ಮೊದಲು ಗದ್ಯದಲ್ಲಿ ಸೃಷ್ಟಿಮಾಡಲು ಲಕ್ಷಿಸಿಲ್ಲವೇ, ಪದ್ಯವೇ ಅವನಿಗೆ ಸ್ವಾಭಾವಿಕವಾಗಿ ಕಂಡಿತೇ ಇದು ಹೇಗಿದ್ದರೂ, ಪದ್ಯರಚನೆಯೇ ಆದಿಯಲ್ಲಿ ಕಂಡು ಬರುತ್ತದೆ. ಅತ್ಯಂತ ಪ್ರಾಚೀನ ಶಿಲ್ಪಕೃತಿಗಳಲ್ಲಿ ಮನುಷ್ಯನ ವಿವಿಧ ವ್ಯಾಪಾರಗಳನ್ನು ಚಿತ್ರಿಸುವಾಗ ಕಂಡುಬಂದ ಶಿಲ್ಪ ವಿಧಾನವನ್ನು ಗಮನಿಸಬಹುದು. ವೈಚಿತ್ರ್ಯವನ್ನು, ವಿಶಿಷ್ಟವಾದ್ದನ್ನು ಗಮನಿಸಿ ಅಭಿವ್ಯಕ್ತಗೊಳಿಸಲು ರೀತಿ ಕೂಡ ವಕ್ರವಾದ್ದು, ವಿಚಿತ್ರವಾದ್ದೇ ಆಗಬೇಕು. ನಡೆಯುವುದರಲ್ಲಿ ವಿಶೇಷವಿಲ್ಲ, ನೃತ್ಯದಲ್ಲಿ ವಿಶೇಷವಿದೆ. ಛಂದಸ್ಸಿಲ್ಲದೆ ಕಾವ್ಯ ಬರೆಯುತ್ತೇನೆಂದರೆ, ಇರುವ ಛಂದಸ್ಸನ್ನು ಬಿಟ್ಟು ಬೇರೆ ಛಂದಸ್ಸನ್ನು ತಂದು ಹಾಕುವ ವಿಧಾನ, ಅಷ್ಟೇ.

ಗದ್ಯಶೈಲಿಯಲ್ಲಿ ಲಯವನ್ನು ಗುರುತಿಸುವುದು ಕಷ್ಟ : ಪದ್ಯದಲ್ಲಿ ಪಂಕ್ತಿ ಭೇದ ದಿಂದ ತಿಳಿದು ಹೋಗುತ್ತದೆ. ಒಳ್ಳೆಯ ಇಂಗ್ಲಿಷ್, ಕನ್ನಡ ಗದ್ಯ ತೆಗೆದುಕೊಳ್ಳಿ. ವಿಚಿತ್ರವಾರ್ಗದ, ವಕ್ರವೈಭವದ ಗದ್ಯವನ್ನು ತೆಗೆದುಕೊಂಡರೆ, ಇಲ್ಲಿ ಕೂಡ ಛಂದಸ್ಸು ವಸ್ತುನಿಷ್ಠವಲ್ಲ, ಪ್ರಜ್ಞಾನಿಷ್ಠವಾದ್ದು–ನಾದವಿನ್ಯಾಸವನ್ನು ಗುರುತಿಸುವ ಪ್ರಜ್ಞೆಯಲ್ಲ. ಕಾರ್ಲೈಲ್, ಮಿಲ್ಟನ್, ಕನ್ನಡದಲ್ಲಿ ಮುದ್ದಣ ಇವರ ಗದ್ಯರಚನೆ ಗಳಿಗೆ ಪ್ರಸ್ತಾರ ಹಾಕಿ ನೋಡಿ. ವಾಕ್ಯ ಓದಿ. ಒಟ್ಟು ಬೀಸು, ಯತಿಸ್ಥಾನಗಳನ್ನು ಗಮನಿಸಿ. ಅಂಗಾಂಗಗಳಲ್ಲಿ ದೀರ್ಘಸಂಧಿ ಅಲ್ಪಸಂಧಿಗಳಿರುವಂತೆಯೇ ಗದ್ಯದಲ್ಲಿಯೂ 'ಗೀತಾಂಜಲಿ'ಯೂ ಪದ್ಯವೇ. ಶಾಸ್ತ್ರಗದ್ಯವನ್ನು ನೋಡಿದರೂ ಇದು ಹೀಗೆಯೇ. The permanance of some art–has often been–an excuse-of fantastic Hypothesis.

ಸರ್ಪಪಂಕ್ತಿಗಳು ಸಾಗುತ್ತವೆ, ಭಾಷಣಗಳಲ್ಲಿಯ ವಾಗ್ಮಿತೆಯಲ್ಲಿ. ವಿಶೇಷಣ ಗಳು ಜೋಡಿಗೊಂಡು ಬರುತ್ತವೆ. ವಿಶೇಷಣಗಳಲ್ಲಿ ಒಂದು ಹೆಚ್ಚು ಕಡಿಮೆಯಾದರೆ ತೂಕ ತಪ್ಪುತ್ತದೆ. ಅಂಥ ವಾಕ್ಯಗಳನ್ನು ನೋಡಬೇಕು. ಉತ್ತಮವಾದ ಗದ್ಯವೂ ಒಂದು ಉತ್ತಮವಾದ ಪದ್ಯರಚನೆಯಷ್ಟೇ ಘನವಾದದ್ದು, ಕಷ್ಟವೂ ಸುಲಭವೂ ಆದದ್ದು.

ತಿರುಕನೊಬ್ಬನೂರ ಮುಂದೆ
ಮುರುಕು ಧರ್ಮಶಾಲೆಯಲ್ಲಿ...

–ಕ್ರಮ ಪುನರಾವೃತವಾಗಿ ಗೋಚರವಾಗುವುದು. ಮಾತ್ರಾವ್ಯತ್ಯಾಸ ಗೊತ್ತಿಲ್ಲ ದಿದ್ದರೂ ತಾಳದ ಜೀಳು ಗೊತ್ತಾಗುತ್ತದೆ. ಹಾಗೆಯೇ

ಸ್ವಾಮಿ ದೇವನೆ ಲೋಕ ಪಾಲನೆ...

ಗೊತ್ತಾಗುತ್ತದೆ, ಆದರೆ,

ಎಲೆ ಸಮೀರ ಕುಮಾರ ಸಂಪ್ರತಿ
ಗೆಳಸಿದ್ಯೆ...

ಇಲ್ಲಿಯ ೩–೪ರ ಮಾತ್ರಾಗಣ ವಿನ್ಯಾಸದಲ್ಲಿಯ ವೈವಿಧ್ಯವೇ ಬೇರೆ. ಕಾನೂನು ಒಳ ಗಡೆಯೇ ಕದಿಯಬಹುದು. ಭಾಮಿನಿಯಲ್ಲಿಯೇ ವೈವಿಧ್ಯ ಸಾಧಿಸುವುದು ಕುಮಾರ ವ್ಯಾಸನಲ್ಲಿ ಕಾಣುತ್ತದೆ. ಕನ್ನಡ ತಿಳಿಯದವನಿ ಗೆ ಇದು ೩–೪ರ ಮಾತ್ರಾಗಣಗಳೇ. ಅರ್ಥ ಭಾವ ಅಲ್ಲಿ ಬರೆದಿರುವ ಅಕ್ಷರಗಳಿಗಾಗಿ ಅಲ್ಲ, ರಸಕ್ಕಾಗಿ. ಅದು ಪ್ರಜ್ಞೆಗೆ ಸಾಧ್ಯ. ಪ್ರಜ್ಞೆಗೆ ಇಲ್ಲಿಯೂ ವೈವಿಧ್ಯ ಗೋಚರವಾಗುತ್ತದೆ. ಪ್ರಜ್ಞಾನಿಷ್ಠತೆಯಿಂದ ಛಂದಸ್ಸನ್ನು ತಿಳಿದುಕೊಂಡು ನಾದಲಯಗಳನ್ನು ಹಿಡಿದು ಹೇಳುತ್ತಾನೆ ಸಮರ್ಥಕವಿ. ವಾಸ್ತವವಾಗಿ ಛಂದಸ್ಸು ಕಾಲಮಾನದಿಂದ ಗುರುತಿಸಬೇಕಾದ್ದು. ಅಂಶಗಣನೋಡಿ. ಮೂರಕ್ಷರವನ್ನು ೪–೫, ೪–೬ ಮಾಡುವುದು ಸಾಧ್ಯ.

ಗದ್ಯದ ಶೈಲಿಯ ಮನೋಹರತೆ ಪದ್ಯಶೈಲಿಯ ಮನೋಹರತೆಯಂತೆಯೇ. ಇದನ್ನು ಓದಿಸಿ ಕವಿ ಗುರುತಿಸುವಂತೆ ಮಾಡಬೇಕು.

ಕಾವ್ಯವನ್ನು ಯಮಾತಾರಾಜಭಾನಸಲಗಂ [ಎಂಬಷ್ಟರಿಂದ ತಿಳಿಯುವುದು ಸಾಧ್ಯವಿಲ್ಲ.] ಕಾವ್ಯ ಶಾಸ್ತ್ರದಿಂದ ಮುಕ್ತವಾದ ಹೊರತು ಅದಕ್ಕೆ ಬದುಕಿಲ್ಲ. ಆದರೆ ಮುಕ್ತವಾದ ಮೇಲೆ ಶಾಸ್ತ್ರವನ್ನೇನೂ ಬಿಡಲಾಗದು, ಅಭ್ಯಾಸಾರ್ಹವೇ ಆಗಿರುತ್ತದೆ. Have first body and life, and then study of philosophy.

೭

ಗುಣಾಲಂಕಾರಗಳಿಂದಲೇ ರೀತಿ ಸಿದ್ಧ. ರಸಾನುಭವ ರೀತಿಯಾಗುವಾಗ ಗುಣಾಲಂಕಾರಗಳು ಅಲ್ಲಿ ಸೇರುವ ಮುಖ್ಯಾಂಶಗಳು. ರಸ ಪ್ರಯೋಜನಕ್ಕೆ ಈ ಅಂಶಗಳು ಬಹು ಆವಶ್ಯಕ. ಜಯ ಸಂಭವಿಸುವ ಒಂದು ಯುದ್ಧದಲ್ಲಿ ಸೇನಾಪತಿ ಯಷ್ಟೇ ವಾರ್ತಾವಾಹಕನೂ ಮುಖ್ಯವೇ ಆದಾನು. ಆದ್ದರಿಂದ ರಸಪ್ರಯೋಜನಕ್ಕೆ ಪ್ರತ್ಯಂಶವೂ ಅತ್ಯಂತ ಆವಶ್ಯಕ, ಸಹಾಯಕ. ಛಂದಸ್ಸನ್ನು ಈ ಕಾವ್ಯಾಂಶಗಳು ಆಳಿದರೆ ಅದಕ್ಕೊಂದು ಬೆಲೆ, ಸ್ಥಾನ. ರೀತಿಯ ಒಂದು ಅಂಗ ಛಂದಸ್ಸು. ರೀತಿ ಸಿದ್ಧವಾಗುವುದು ಗುಣ ಅಲಂಕಾರಗಳಿಂದ ; ವಕ್ರೋಕ್ತಿ ಸಿದ್ಧವಾಗುವುದು ರಸದಿಂದ; ರಸ ಅನುಭವಕ್ಕೆ ಬರುವುದು ಧ್ವನಿಯಿಂದ. ಇವೆಲ್ಲವನ್ನೂ ನೋಡಿ ಒಪ್ಪಿಕೊಳ್ಳು ವುದು ಔಚಿತ್ಯದೃಷ್ಟಿ.

೮

ರೀತಿಗಿಂತಲೂ ವಸ್ತುವೇ ಮುಖ್ಯ ಎಂದು ರೊಮ್ಯಾಂಟಿಕ್ ಕವಿಗಳು ಹೇಳಿದರು ಎಂದರೆ, ರೀತಿಯ ಪರಿಪೂರ್ಣತೆಯೇ ರಸದ ಪರಿಪೂರ್ಣತೆಯೆಂದು ಭ್ರಮೆ ಬರು ತ್ತದೆ. ಭಾಷೆ ಬೆಳೆದಂತೆಲ್ಲ ಈ ಭ್ರಮೆ ಬೆಳೆದು ಚಿತ್ರಕವಿತ್ವ ಚಕ್ರಬಂದಕವಿತ್ವ ಬೆಳೆಯು ವಂತಾಯಿತು. ಮೆಷಿನ್ ಹೇಗಿದ್ದರೂ, ಹಳೆಯದಿದ್ದರೂ, ರೂಪವ್ಯತ್ಯಾಸ (model) ಕ್ಕೆ ಲ್ಯಾಬೋರೇಟರಿಯಲ್ಲಿ ಲಕ್ಷಾಂತರ ಖರ್ಚುಮಾಡುವುದಿಲ್ಲವೇ ? ಕಾವ್ಯ ದಲ್ಲಿ, ರೂಪಾಂಶದಲ್ಲಿ ಹೊಸ model ತರಲು ಪ್ರಯತ್ನಿಸುತ್ತಾರೆ.

# ಸಾಹಿತ್ಯ ಮತ್ತು ಮನಶ್ಶಾಸ್ತ್ರ

ಡಾ. ಎಂ. ಬಸವಣ್ಣ

ಮಾನವನ ಸುಂದರ ಕಲಾಭಿವ್ಯಕ್ತಿಗಳಲ್ಲಿ ಸಾಹಿತ್ಯ ಪ್ರಮುಖವಾದುದು. ಸಾಹಿತ್ಯರಚನೆ ಒಂದು ಸಂಕೀರ್ಣ ಸೃಜನಾತ್ಮಕ ಮಾನಸಿಕ ಪ್ರಕ್ರಿಯೆ. ಮಾನವನ ಬೌದ್ಧಿಕ, ಭಾವಾತ್ಮಕ, ಧಾರ್ಮಿಕ ಹಾಗೂ ದಾರ್ಶನಿಕ ಚಿಂತನೆಗಳ ಸುಂದರ ಶಾಬ್ದಿಕ ಅಭಿವ್ಯಕ್ತಿ ಸಾಹಿತ್ಯದಲ್ಲಿ ಜರುಗುತ್ತದೆ. ಒಬ್ಬ ಜೀವಿ ತನ್ನ ಆಂತರಿಕ ಅನುಭವಗಳನ್ನು, ನೋವು-ನಲಿವುಗಳನ್ನು, ತನ್ನ ಸಹಜೀವಿಗಳಿಗೆ ನಿವೇದಿಸುವ, ಅವರೊಡನೆ ಹಂಚಿಕೊಳ್ಳುವ ಒಂದು ಲಲಿತ ಕಲಾ ಪ್ರಕಾರ ಸಾಹಿತ್ಯ. ಅದು ಎಷ್ಟೇ ರಮ್ಯವಾಗಿದ್ದರೂ, ಸಂಕೀರ್ಣವಾಗಿದ್ದರೂ, ಸಾಹಿತ್ಯ ಒಂದು ಮಾನಸಿಕ ವ್ಯಾಪಾರ ವೆಂಬುದಂತೂ ನಿಜ. ಅದರಿಂದಾಗಿ ಸಾಹಿತ್ಯಕ್ಕೂ, ಮನಶ್ಶಾಸ್ತ್ರಕ್ಕೂ ನಡುವೆ ನಿಕಟ ಸಂಬಂಧ.

ಮನಶ್ಶಾಸ್ತ್ರ ಮನುಷ್ಯನ ವರ್ತನೆಯನ್ನು, ಅನುಭವಗಳನ್ನು ಅಧ್ಯಯನ ವಸ್ತುವಾಗುಳ್ಳ ಒಂದು ಆಧುನಿಕ ವಿಜ್ಞಾನ ಪ್ರಕಾರ. ಮಾನವನ ಬಾಹ್ಯವರ್ತನೆಗಳ ಜತೆಗೆ ಅವನ ಆಂತರಿಕ ಅನಿಸಿಕೆಗಳು, ಸಂವೇದನೆಗಳು, ಭಾವನೆಗಳು, ಚಿಂತನೆಗಳು, ವ್ಯಕ್ತಿತ್ವದ ಗುಣಲಕ್ಷಣಗಳನ್ನು ನಿಖರವಾಗಿ ಅಭ್ಯಸಿಸಿ, ಅರಿತು, ವಿವರಿಸಿ, ಅವನು ಏನು ಮಾಡುತ್ತಾನೆ, ಹೇಗೆ ಮಾಡುತ್ತಾನೆ, ಮತ್ತು ಏಕೆ ಮಾಡುತ್ತಾನೆ, ಎಂಬ ಪ್ರಶ್ನೆಗಳಿಗೆ ಸ್ಪಷ್ಟವಾದ ಉತ್ತರಗಳನ್ನು ಕಂಡುಹಿಡಿಯುವುದು ಮನಶ್ಶಾಸ್ತ್ರದ ಗುರಿ. ಮನೋವಿಜ್ಞಾನ ದೃಷ್ಟಿಯಲ್ಲಿ ಸಾಹಿತ್ಯ ರಚನೆ ಕೂಡ ಒಂದು ಮಾನಸಿಕ ಕ್ರಿಯೆ. ಆದುದರಿಂದ ಸಾಹಿತ್ಯಾಭಿವ್ಯಕ್ತಿಯನ್ನು ವೈಜ್ಞಾನಿಕವಾಗಿ ಅಭ್ಯಾಸ ಮಾಡುವುದು ಅದರ ವ್ಯಾಪ್ತಿಗೆ ಒಳಪಟ್ಟಿದೆ. ಈ ದಿಶೆಯಲ್ಲಿ ನಡೆದಿರುವ ಕೃಷಿಯ ಒಂದು ಸಂಕ್ಷಿಪ್ತ ವಿವರಣೆ ಈ ಲೇಖನ.

ಸಾಹಿತ್ಯವನ್ನು ಕುರಿತು ಸಂಶೋಧನೆ ಮಾಡುವಾಗ ಮನೋವಿಜ್ಞಾನಿ ಪರಸ್ಪರ ಸಂಬಂಧಿಸಿದ ಎರಡು ಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಒಂದು, ಸಾಹಿತ್ಯದ ವಸ್ತುವನ್ನು ಕುರಿತು ಆಲೋಚಿಸುವುದು : ಎರಡನೆಯದು. ಸಾಹಿತ್ಯಾಭಿವ್ಯಕ್ತಿ

ಹೇಗೆ ನಡೆಯುತ್ತದೆ, ಯಾವಾವ, ಘಟಕಗಳು ಸಾಹಿತಿಯಲ್ಲಿ ಈ ಸೃಜನಾತ್ಮಕ ಕ್ರಿಯೆಯನ್ನು ಪ್ರೇರಿಸುತ್ತವೆ ಎಂದು ವಿವರಿಸುವುದು. ಮೊದಲನೆಯದು ಕೃತಿ ವಿಶ್ಲೇಷಣೆ ; ಎರಡನೆಯದು ಒಂದು ಜೀವಂತಕ್ರಿಯೆಯ ಅನುಸಂಧಾನ. ಇವೆರಡರ ನಡುವೆ ನಿಕಟ ಸಂಬಂಧವಿದ್ದರೂ, ಯಾವುದೊಂದೂ ಇನ್ನೊಂದನ್ನು ಪೂರ್ಣವಾಗಿ ವಿವರಿಸಲಾರದು. ಒಂದೊಂದು ವೇಳೆ ಕಲಾವಿದನ ಮೂಲಕ ಕಲೆಯನ್ನೂ, ಕಲಾ ಕೃತಿಯಿಂದ ಕಲಾವಿದನನ್ನೂ ಕುರಿತು ಕೊಂಚ ಊಹಿಸಬಹುದು. ಆದರೆ ಊಹೆ ಊಹೆಯೇ ; ಖಚಿತವಾದ ತೀರ್ಮಾನವಾಗಲಾರದು. ಉದಾಹರಣೆಗೆ ಕುವೆಂಪು ಮಲೆನಾಡಿನವರು. ಅವರು ಪ್ರಕೃತಿಕವಿ ಕೂಡ. ಇವೆರಡರ ನಡುವೆ ಸಂಬಂಧವಿದೆ, ನಿಜ. ಆದರೆ ಅವರ ಕೃತಿಗಳನ್ನು ವಿವರಿಸಲು ಈ ಕಾರಣವಷ್ಟೇ ಸಾಕೆ ? ಕುವೆಂಪು ಕೃತಿಗಳಲ್ಲಿ ಪ್ರಕೃತಿಯಷ್ಟೇ ಪ್ರಧಾನವಾದ ಬೇರೆ ವಿಷಯಗಳೂ ಇವೆ. ಅವುಗಳನ್ನು ವಿವರಿಸುವುದು ಹೇಗೆ ? ಒಂದು ವೇಳೆ ಕುವೆಂಪು ನಗರ ಒಂದರಲ್ಲಿ ಹುಟ್ಟಿಬೆಳೆದಿದ್ದರೆ, ಅವರು "ಮಲೆಗಳಲ್ಲಿ ಮದುಮಗಳು" ಕಾದಂಬರಿಯನ್ನು ರಚಿಸುತ್ತಿರಲಿಲ್ಲವೆ ? ಹೇಳುವುದು ಕಷ್ಟ.

ಮನೋವಿಜ್ಞಾನದ ಇಂದಿನ ಸ್ಥಿತಿಯಲ್ಲಿ ಸಾಹಿತ್ಯಸೃಷ್ಟಿಗೆ ಖಚಿತವಾದ ಕಾರ್ಯ ಕಾರಣಗಳನ್ನು ಕೊಡುವುದು ಸಾಧ್ಯವಿಲ್ಲ. ಹಾಗೆ ಮಾಡಲು ಸಾಧ್ಯವಾಗಿದ್ದರೆ ಸಾಹಿತ್ಯ ಮನಶ್ಶಾಸ್ತ್ರದ ಒಂದು ಪ್ರಕಾರವಾಗಿಬಿಡುತ್ತಿತ್ತು. ಶಾಸ್ತ್ರ ಶಾಸ್ತ್ರವೇ, ಸಾಹಿತ್ಯ ಸಾಹಿತ್ಯವೇ. ಸಾಹಿತ್ಯವನ್ನು ಸಂಪೂರ್ಣವಾಗಿ ವೈಜ್ಞಾನಿಕ ವಿವರಣೆಗೆ ಒಳಪಡಿಸುವುದು ಸಾಧ್ಯವಿಲ್ಲ. ಮನೋವಿಜ್ಞಾನಿಗಳಿಗಷ್ಟೇ ಅಲ್ಲ, ಬರಹಗಾರರಿಗೂ ಸಾಹಿತ್ಯವನ್ನು ಕುರಿತು ಇದಮಿತ್ಥಂ ಎಂದು ಹೇಳುವುದು ಸಾಧ್ಯವಾಗಿಲ್ಲ. ಆದರೂ ಮನೋವಿಜ್ಞಾನಿ ಸಾಹಿತ್ಯದ ಅನುಸಂಧಾನವನ್ನು ಬಿಟ್ಟುಕೊಡಲಾರ. ಹಾಗೆ ಮಾಡುವುದು ಮನಶ್ಶಾಸ್ತ್ರದ ಅಸ್ತಿತ್ವವನ್ನೆ ನಿರಾಕರಿಸಿದಂತಾಗುತ್ತದೆ. ಮೇಲಾಗಿ ಮನಶ್ಶಾಸ್ತ್ರ ಮತ್ತು ಸಾಹಿತ್ಯದ ಅನುಸಂಧಾನ ಒಂದಕ್ಕೊಂದು ಪೂರಕವಾಗುವ ಸಾಧ್ಯತೆಗಳಿರುವುದರಿಂದ ಹಾಗೆ ಮಾಡುವುದು ಉಚಿತವಾದುದಲ್ಲ. ಆದುದರಿಂದಲೇ ಸಾಹಿತ್ಯದ ಮನೋವೈಜ್ಞಾನಿಕ ವಿಶ್ಲೇಷಣೆ ಮೊದಲಿಂದಲೂ ನಡೆದುಬಂದಿದೆ.

**ಸಾಹಿತ್ಯಕ್ಕೆ ಪ್ರೇರಣೆ :**

ಸಾಹಿತಿ ಮತ್ತು ಸಾಹಿತ್ಯವನ್ನು ಪರಿಶೀಲಿಸುವ ಮನೋವಿಜ್ಞಾನಿಯ ದೃಷ್ಟಿ ಕೋನ ಸಾಹಿತ್ಯವಿಮರ್ಶಕನದಕ್ಕಿಂತ ಭಿನ್ನವಾದುದು. ವಿಮರ್ಶಕನಿಗೆ ಮುಖ್ಯವೆನಿಸುವ ಸಾಹಿತ್ಯಾಂಶಗಳು ಮನೋವಿಜ್ಞಾನಿಗೆ ಅನುಪಯುಕ್ತವಾಗುತ್ತವೆ. ಆದರೆ ಸಂದೇಹಾಸ್ಪದ ಅರ್ಹತೆಯನ್ನು ಪಡೆದ ಕೃತಿಯೊಂದು ಅವನಲ್ಲಿ ಆಸಕ್ತಿಯನ್ನುಂಟು ಮಾಡಬಹುದು. ಉದಾಹರಣೆಗೆ "ಮನೋವಿಶ್ಲೇಷಣಾತ್ಮಕ" ಕಾದಂಬರಿಗಳೆಂದು ಪ್ರಸಿದ್ಧಿ ಪಡೆದು ವಿಮರ್ಶಕನ ಮೆಚ್ಚುಗೆಗೆ ಪಾತ್ರವಾಗುವ ಸಾಹಿತ್ಯಪ್ರಕಾರಗಳಲ್ಲಿ

ಮನೋವಿಜ್ಞಾನಿಗೆ ಏನೇನೂ ಆಸ್ಥೆ ಇಲ್ಲ. ಕಾರಣವಿಷ್ಟೆ; ಈ ಮನೋವಿಶ್ಲೇಷಣಾತ್ಮಕ ಕೃತಿಗಳು ತಮ್ಮನ್ನು ತಾವೇ ವಿವರಿಸಿಕೊಂಡುಬಿಟ್ಟಿರುತ್ತವೆ. ಇಲ್ಲಿ ಮನೋವಿಜ್ಞಾನಿಗೆ ಹೇಳುವುದಕ್ಕೆ ಏನೂ ಉಳಿದಿರುವುದಿಲ್ಲ. ಸಾಮಾನ್ಯವಾಗಿ ಈ ಕೃತಿಗಳು ಮನಶ್ಶಾಸ್ತ್ರದ ಪರಿಚಯವಿರುವ ಸಾಹಿತಿಯ ರಚನೆಗಳಾಗಿರುತ್ತವೆ. ಇಲ್ಲಿ ಮನಶ್ಶಾಸ್ತ್ರದ ಸೂತ್ರಗಳ ಅನ್ವಯ ನಡೆದಿರುತ್ತದೆ. ಆದುದರಿಂದ ಇಂಥ ಕೃತಿಗಳಲ್ಲಿ ಈ ಸೂತ್ರಗಳು ಎಷ್ಟರ ಮಟ್ಟಿಗೆ ಕರಾರುವಾಕ್ಕಾಗಿ ಅನ್ವಯವಾಗಿವೆ ಎಂಬುದನ್ನು ಮನೋವಿಜ್ಞಾನಿ ವಿಮರ್ಶಿಸುವುದರ ಹೊರತಾಗಿ ಹೆಚ್ಚಿಗೆ ಏನೂ ಮಾಡಲಾರ. ಯಾವ ಕೃತಿಗಳು ಮನಶ್ಶಾಸ್ತ್ರದ ನಿಯಮಗಳಿಗನುಸಾರವಾಗಿ ರಚಿತವಾಗಿಲ್ಲವೋ ಅವು ಅವನಿಗೆ ಪ್ರಿಯವಾಗುತ್ತವೆ. ಉದಾಹರಣೆಗೆ, ರೈಡರ್ ಹೆಗ್ಗಾರ್ಡ್‌ನ "ಷಿ" (Rider Haggard's ''She''), ಮೆಲ್‌ವಿಲ್‌ನ ಮಾಬಿಡಿಕ್ (Melville's ''MobyDick''), ಕಾನನ್ ಡಾಯ್ಲನ (Conon Doyle) ಪತ್ತೇದಾರಿ ಕೃತಿಗಳು, ಹಾಗೆಯೇ ಕಾರಂತರ "ಮೂಕಜ್ಜಿಯ ಕನಸುಗಳು" ಮನೋವಿಜ್ಞಾನಿಗೆ ಹಿತವಾದಷ್ಟು ಕಾಫ್ಕನ "ಟ್ರಯಲ್" (Kafka's ''The Trial'') ಅಥವಾ ತ್ರಿವೇಣಿಯವರ "ಬೆಕ್ಕಿನ ಕಣ್ಣು"ಗಳು ಇಷ್ಟವಾಗುವುದಿಲ್ಲ. ಈ ಎರಡನೇ ಗುಂಪಿನ ಕೃತಿಗಳು ಕಳಪೆಯೆಂದಲ್ಲ. ಅವುಗಳಲ್ಲಿ ಮನೋವಿಜ್ಞಾನಿ ಹೇಳಬೇಕಾದ್ದು ಏನೂ ಇಲ್ಲವೆಂದು ಅರ್ಥ.

ಮೇಲೆ ಹೇಳಿರುವುದನ್ನು ದೃಷ್ಟಿಯಲ್ಲಿಟ್ಟುಕೊಂಡು ಕಾರ್ಲ್‌ಯೂಂಗ್ (Carl Jung) ಸಾಹಿತ್ಯಕೃತಿಗಳನ್ನು ಮನೋವೈಜ್ಞಾನಿಕ (Psychological) ಮತ್ತು ದಾರ್ಶನಿಕ (Visionary) ವೆಂದು ಎರಡು ಬಗೆಯಾಗಿ ವಿಂಗಡಿಸಿದ್ದಾನೆ. ಮನೋವೈಜ್ಞಾನಿಕ ಕೃತಿಗಳು ಸಾಹಿತಿಯ ಜಾಗೃತ ಮನಸ್ಸಿನಿಂದ (Conscious) ಹುಟ್ಟಿಬಂದವು. ಇವು ಬಹಳ ಮಟ್ಟಿಗೆ ಜೀವನದ ಪ್ರತಿಬಿಂಬಗಳು. ಇಲ್ಲಿ ಜೀವನದ ಕಾಮ ಕ್ರೋಧಗಳು, ಕಷ್ಟ ಕಾರ್ಪಣ್ಯಗಳು, ನೋವು ನಲಿವುಗಳು ರಸವತ್ತಾಗಿ ನಿರ್ಮಿಸಲ್ಪಟ್ಟಿರುತ್ತವೆ. ಇವುಗಳ ರಚನೆ ತರ್ಕಬದ್ಧವಾಗಿ ನಡೆದಿರುತ್ತದೆ. ಒಂದು ಗಂಡು ಒಂದು ಹೆಣ್ಣು ಒಬ್ಬರನ್ನೊಬ್ಬರು ಸಂಧಿಸುತ್ತಾರೆ ; ಆಕರ್ಷಿಸುತ್ತಾರೆ ; ಪ್ರೀತಿಸುತ್ತಾರೆ ; ಅವರ ಪ್ರೀತಿಗೆ ಅಡೆತಡೆಗಳುಂಟಾಗುತ್ತವೆ ; ಅವರು ಹೋರಾಡುತ್ತಾರೆ ; ಗೆದ್ದರೆ ಮದುವೆಯಾಗುತ್ತಾರೆ ; ಸೋತರೆ ಇನ್ನೇನೋ ಆಗುತ್ತಾರೆ. ಇಂಥ ಜನಜನಿತವಾದ ವಸ್ತು ಸಾಹಿತಿಯ ಶಬ್ದಸೌಂದರ್ಯದ ಉಡುಗೆಯುಟ್ಟು, ಲಲಿತ ಕೃತಿಯಾಗಿ ಅಥವಾ ದುರಂತ ಕಥೆಯಾಗಿ ಅಭಿವ್ಯಕ್ತಿಗೊಂಡರೆ ಅದು ಮನೋವೈಜ್ಞಾನಿಕ ಕೃತಿಗಳ ಗುಂಪಿಗೆ ಸೇರುತ್ತದೆ. ಸಾಮಾನ್ಯ ಓದುಗರು ಈ ಕೃತಿಗಳಲ್ಲಿ "ಮನಶ್ಶಾಸ್ತ್ರ"ವನ್ನು ಹುಡುಕಿಕೊಂಡು ಹೋಗುತ್ತಾರೆ ; ಮನೋವಿಜ್ಞಾನಿ ದಾರ್ಶನಿಕ ಕೃತಿಗಳಲ್ಲಿರುವ ಗೂಢಾರ್ಥವನ್ನು ಹುಡುಕಿಕೊಂಡು ಹೋಗುತ್ತಾನೆ.

ದಾರ್ಶನಿಕ ಕೃತಿಗಳು ಉದಿಸುವುದು ಮನಸ್ಸಿನ ಕತ್ತಲೆಯ ಆಳದಲ್ಲಿ. ಅಲ್ಲಿನ ವಸ್ತು ಓದುಗನಿಗೆ ಅಪರಿಚಿತ, ಅನಿರೀಕ್ಷಿತ, ಅನಪೇಕ್ಷಿತ, ಭಯಂಕರ ; ಜುಗುಪ್ಸೆ

ಯನ್ನುಂಟುಮಾಡಬಹುದು. ಈ ಕೃತಿ ಹೇಗೆ ಹುಟ್ಟಿತು, ಏಕೆ ಹುಟ್ಟಿತು ಎನ್ನುವುದು ಓದುಗನಿಗಿರಲಿ, ರಚಿಸಿದವನಿಗೂ ತಿಳಿಯುವುದಿಲ್ಲ. ಇವು ಹುಟ್ಟಿಬರುವುದು ಸುಪ್ತಚೇತನದಿಂದ. ಈ ಲೇಖನದ ವಸ್ತು ಈ ಎರಡನೇ ಬಗೆಯ ಕೃತಿಗಳನ್ನು ಕುರಿತದ್ದು.

ದಾರ್ಶನಿಕ ಸಾಹಿತ್ಯ ಸುಪ್ತಮನಸ್ಸಿನ ಗರ್ಭದಿಂದ ಮಾತ್ರ ಉದಯಿಸುತ್ತ ದೆಂಬುದನ್ನು ವಿಜ್ಞಾನಿಗಳಷ್ಟೇ ಅಲ್ಲ, ಸಾಹಿತಿಗಳೂ ನಂಬುತ್ತಾರೆ. ಜರ್ಮನ್ ಮಹಾಕವಿ ಗಯ (Goethe) ಮಹಾಕಾವ್ಯಗಳಿಗೆಲ್ಲಾ ದೈವಿಕಶಕ್ತಿಯೇ ಪ್ರೇರಣೆ ಎನ್ನುತ್ತಾನೆ. ಅದು ದೇವರ ವರ[1]. ಉನ್ನತ ಕೃತಿರಚನೆಗಳಿಗೆ ಪ್ರೇರಣೆ ಅನಿರೀಕ್ಷಿತ, ಅನೈಚ್ಛಿಕ, ಅಪೌರುಷೇಯ ಎಂಬುದು ದಾರ್ಶನಿಕ ನೀಶೆ (Nietzsche) ಯ ನಂಬಿಕೆ[2]. ಫ್ರೆಂಚ್ ಸಾಹಿತಿ ಸ್ಟಂಡಾಲ್ (Stendhal) ಕೂಡ ಸಾಹಿತ್ಯರಚನೆ ಮಾನವನ ಯತ್ನಕ್ಕೆ ಮೀರಿದ್ದೆಂದು ಭಾವಿಸುತ್ತಾನೆ.[3] ನಮ್ಮ ಗದಗಿನ ನಾರಣಪ್ಪ "ವೀರ ನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ" ಎಂದಿರುವುದು ಎಲ್ಲರಿಗೂ ಸುಪರಿಚಿತ. ವರಕವಿ ಬೇಂದ್ರೆಯವರ ಪ್ರಕಾರ ಕಲ್ಪನಾವಿಲಾಸ "ಭೃಂಗದ ಬೆನ್ನೇರಿ" ಬರುತ್ತದೆ. ಮಾತುಗಳು ಬೇರೆ ಬೇರೆಯಾದರೂ ಇವರೆಲ್ಲರ ಅಭಿಪ್ರಾಯ ಒಂದೇ– ದಾರ್ಶನಿಕ ಕಾವ್ಯಕ್ಕೆ, ಸಾಹಿತ್ಯಕ್ಕೆ ಪ್ರೇರಣೆ ಮಾನವನ ಅರಿವಿಗೆ ಮೀರಿದ್ದು. ಕಾವ್ಯದ ಸ್ಫೂರ್ತಿಯ ನೆಲೆ ಕವಿಗೂ ತಿಳಿಯದು. ಅವನ ಲೇಖನಿಯನ್ನು ಅದೃಶ್ಯ ಶಕ್ತಿಯೊಂದು ನಿರ್ದೇಶಿಸುತ್ತದೆ. ಕಾಣದ ಕೈಯೊಂದು ಅವನನ್ನು ಮುನ್ನಡೆಸುತ್ತದೆ. ಕವಿಗಳ ಪ್ರಕಾರ ಕಾವ್ಯರಚನೆಯಲ್ಲಿ ಎರಡು ಸ್ತರಗಳಿರುತ್ತವೆ. ಮೊದಲನೆಯದು ಭಾವ ಸ್ಫುರಣ. ಎರಡನೆಯದು ಭಾವನಿರೂಪಣೆ. ಮೊದಲನೆಯದು ಅವನ ನಿಯಂತ್ರಣ ಕ್ಕೊಳಪಡುವುದಿಲ್ಲ ; ಅದು ಅನೈಚ್ಛಿಕ, ಅನಿರೀಕ್ಷಿತ, ಆಕಸ್ಮಿಕ. ಅದರಿಂದಲೇ ಇದನ್ನು ಸ್ಫೂರ್ತಿ, ಪ್ರತಿಭೆ, ಅಂತಃಪ್ರಜ್ಞೆ, ಅಪೌರುಷೇಯ, ದೈವಿಕ ಎಂದೆಲ್ಲಾ ಕರೆದಿರು ವುದು. ಎರಡನೆಯದು ಐಚ್ಛಿಕ ಕ್ರಿಯೆ. ಬೆವರು ಬರಿಸುವ ಶ್ರಮದ ಕೆಲಸ.

---

1. "No productivity of the highest kind, no remarkable conception, no discovery, no great thought that bears fruit and has results, is in the power of anyone; such things are above earthly control. Man must consider them as an unexpected gift from above—which he must receive and venerate with joyful thanks."
2. One hears—one does not seek, one takes—one does not ask who gives. A thought suddenly flashes up like lightning ; it comes with necessity, without faultering. I have never had any choice in the matter".
3. "I write blindly, hastily." "As these images come into my mind, my pen writes them down."

ಕವಿ ತನ್ನಲ್ಲಿ ಮಿಂಚಿದ ಭಾವನೆಗಳಿಗೆ ಭಾಷೆಯ ಉಡುಗೆಯನ್ನು ತೊಡಿಸಿ, ಅಲಂಕರಿಸುತ್ತಾನೆ.

## ಸಾಹಿತ್ಯ ಮತ್ತು ಸಿಗ್ಮಂಡ್ ಫ್ರಾಯ್ಡ್:

ಸಾಹಿತ್ಯವನ್ನು ಕುರಿತು ವಿಶಿಷ್ಟ ರೀತಿಯಲ್ಲಿ ಆಲೋಚಿಸಿದ ಮನೋವಿಜ್ಞಾನಿಗಳಲ್ಲಿ ಸಿಗ್ಮಂಡ್‌ಫ್ರಾಯ್ಡ್ ಮೊದಲಿಗ; ಮನೋವಿಶ್ಲೇಷಣೆ ಎಂಬ ಮನಶ್ಶಾಸ್ತ್ರ ಪ್ರಾಕಾರದ ಸೃಷ್ಟಿಕರ್ತ ; ಮಾನವನ ಮೂಲಭೂತ ಆಲೋಚನೆಗಳ ಅಡಿಪಾಯವನ್ನೇ ಅಲುಗಾಡಿಸಿದ ಮಹಾಪ್ರಾಜ್ಞ. ಫ್ರಾಯ್ಡ್ ಸಾಹಿತ್ಯವನ್ನು ವೈಜ್ಞಾನಿಕವಾಗಿ ಅಭ್ಯಾಸ ಮಾಡಲು ಎರಡು ಮುಖ್ಯ ಕಾರಣಗಳಿವೆ. ಮೊದಲನೆಯದಾಗಿ ಅವನೊಬ್ಬ ಸಾಹಿತ್ಯಪ್ರೇಮಿ. ಒಂದು ವೇಳೆ ಅವನು ಮನೋವಿಜ್ಞಾನಿಯಾಗದಿದ್ದರೆ ಖಂಡಿತವಾಗಿ ಒಬ್ಬ ಸಾಹಿತಿಯಾಗುತ್ತಿದ್ದ. ಅವನು ಬರೆದ ಸುಮಾರು ೬೦೦೦ ಪುಟಗಳು ಸಾಹಿತ್ಯ ಸಂಪುಟಗಳಷ್ಟೇ ಮನೋಜ್ಞವಾಗಿವೆ. ಎರಡನೆಯ ಕಾರಣ, ಫ್ರಾಯ್ಡ್ ಸಾಹಿತಿಗಳನ್ನು ಅನಧಿಕೃತ ಮನೋವಿಜ್ಞಾನಿಗಳೆಂದು ಭಾವಿಸಿರುವುದು. ಸಾಹಿತಿಯ ವಿಕಾಸದಲ್ಲಿ ಮತ್ತು ಕೃತಿರಚನೆಯಲ್ಲಿ ತನ್ನ ಸಿದ್ಧಾಂತಗಳಿಗೆ ಪರೋಕ್ಷ ಪುರಾವೆಗಳನ್ನು ಅವನು ಕಂಡುಕೊಂಡಿದ್ದಾನೆ. ತಾನು ಶ್ರಮವಹಿಸಿ ಕಂಡುಕೊಂಡ ವೈಜ್ಞಾನಿಕ ಸತ್ಯಗಳನ್ನು ಸಾಹಿತಿಗಳು ಒಂದೊಂದು ವೇಳೆ ಬಹಳ ಸಹಜವಾಗಿ, ಸುಲಭವಾಗಿ, ತಮಗರಿವಿಲ್ಲದಂತೆ ನಿರೂಪಿಸಿದ್ದಾರೆಂಬುದು ಫ್ರಾಯ್ಡ್‌ನ ನಂಬಿಕೆ.

ಸಾಹಿತ್ಯಕ್ಕೆ ಸಂಬಂಧಿಸಿದಂತೆ ಫ್ರಾಯ್ಡ್‌ನ ಬರಹಗಳಲ್ಲಿ ಮುಖ್ಯವಾದುದು ಸುಪ್ತಚೇತನ ಸಿದ್ಧಾಂತ. ಸುಪ್ತಚೇತನ ಮಾನವನ ಅತೃಪ್ತ ಆಕಾಂಕ್ಷೆಗಳ ಆಗರ. ಮಾನವನ ಮನಸ್ಸಿನಲ್ಲಿ ಚೇತನಾಂಶ ಒಂದಾದರೆ ಸುಪ್ತಚೇತನ ಒಂಬತ್ತರಷ್ಟು. ಅದು ವಿಶಾಲವಾಗಿರುವಷ್ಟೇ ಪ್ರಭಾವಪೂರ್ಣವೂ ಕೂಡ. ವರ್ತನೆಯ ಬಹ್ವಂಶ ಸುಪ್ತಚೇತನದಿಂದ ನಿರ್ಧರಿತವಾಗಿರುತ್ತದೆ. ಫ್ರಾಯ್ಡ್‌ನ ಪ್ರಕಾರ ಮಾನವನ ಮೂಲ ಪ್ರೇರಣೆಗಳು ಪ್ರಾಣಿಸಹಜವಾದುವು : ಹುಟ್ಟು-ಸಾವು, ಅಳಿವು-ಉಳಿವು, ಅನಿಬದ್ಧ ಲೈಂಗಿಕತೆ, ಹಿಂಸಾಚಾರ, ನಿರಂತರ ಸುಖಾಪೇಕ್ಷೆಗಳಿಗೆ ಸಂಬಂಧಿಸಿದವು. ಸುಸಂಸ್ಕೃತ ಸಮಾಜದಲ್ಲಿ ತೃಪ್ತಿಗೊಳಿಸಲಾಗದ, ತೃಪ್ತಿಗೊಳಿಸಬಾರದ, ಅನೈತಿಕವಾದ ಈ ಬಯಕೆಗಳು ಶೈಶವದಲ್ಲಿಯೇ ಸುಪ್ತಚೇತನಕ್ಕೆ ತಳ್ಳಲ್ಪಡುತ್ತವೆ. ಹೀಗೆ ತಳ್ಳಿದ ಬಯಕೆಗಳು ಅಲ್ಲಿ ಶಕ್ತಿಯುತವಾಗಿಯೇ ಉಳಿದಿದ್ದು, ಹೊರಬರಲು ಅವಕಾಶವನ್ನು ನಿರೀಕ್ಷಿಸುತ್ತಿರುತ್ತವೆ. ಇವು ಜಾಗೃತ ಮನಸ್ಸಿಗೆ ಸಹ್ಯವಾಗುವುದಿಲ್ಲವಾದ್ದರಿಂದ ವ್ಯಕ್ತಿ ಎಚ್ಚರವಿರುವಾಗ ಇವುಗಳು ಹೊರಬರುವ ಸಾಧ್ಯತೆಗಳು ಕಡಮೆ. ಆದುದರಿಂದ ವ್ಯಕ್ತಿ ಎಚ್ಚರತಪ್ಪಿದಾಗ ಕನಸಿನ ರೂಪದಲ್ಲಿ ಈ ಬಯಕೆಗಳು ಅಭಿವ್ಯಕ್ತಿಯಾಗುತ್ತವೆ. ಒಂದು ವೇಳೆ ಜಾಗೃತ ಮನಸ್ಸಿನ ಅಂಕೆಯನ್ನು ಮೀರಿ ಪೂರ್ಣ ಪ್ರಮಾಣದಲ್ಲಿ ಇವು ಪ್ರಕಟವಾದರೆ ವ್ಯಕ್ತಿ ಮನೋರೋಗಿಯಾಗುತ್ತಾನೆ. ಹಲವು ವೇಳೆ ಈ ಸುಪ್ತ

ಮನಸ್ಸಿನ ಅತೃಪ್ತಬಯಕೆಗಳೇ ಸಾಹಿತ್ಯರಚನೆಗೆ ಪ್ರೇರಣೆಯಾಗಬಹುದೆಂಬುದು ಫ್ರಾಯ್ಡ್‌ನ ಸಿದ್ಧಾಂತ.

ಜಾಗೃತ ಮನಸ್ಸಿನಿಂದ ನಿಗ್ರಹಿಸಲ್ಪಟ್ಟು ಸುಪ್ತಚೇತನದಲ್ಲಿ ಕ್ರಿಯಾಶೀಲವಾಗಿ ಉಳಿದು, ಪ್ರಬಲಶಕ್ತಿಯ ಕೇಂದ್ರಗಳಂತೆ ಕೆಲಸ ಮಾಡುತ್ತಾ, ಅಭಿವ್ಯಕ್ತಿಗಾಗಿ ಕಾದು ಕುಳಿತಿರುವ ಭಾವಸಮುಚ್ಚಯಗಳನ್ನು ಫ್ರಾಯ್ಡ್ ಕಾಂಪ್ಲೆಕ್ಸ್‌ಗಳೆಂದು ಕರೆಯುತ್ತಾನೆ. ಈ ಕಾಂಪ್ಲೆಕ್ಸ್‌ಗಳು ಸುಪ್ತವಾಗಿದ್ದರೂ ಒಂದಲ್ಲ ಒಂದು ರೀತಿಯಲ್ಲಿ ವ್ಯಕ್ತಿಯ ವರ್ತನೆ ಮತ್ತು ಚಿಂತನೆಗಳನ್ನು ಪರೋಕ್ಷವಾಗಿಯಾದರೂ ನಿರ್ದೇಶಿಸುತ್ತವೆ. ಇಂತಹ ಹಲವಾರು ಕಾಂಪ್ಲೆಕ್ಸ್‌ಗಳು ಸುಪ್ತಚೇತನದಲ್ಲಿ ಅಸ್ತಿತ್ವದಲ್ಲಿರುತ್ತವೆ. ಅವುಗಳಲ್ಲಿ ಮುಖ್ಯವಾದುದು ಈಡಿಪಸ್ ಕಾಂಪ್ಲೆಕ್ಸ್ (Oedipus Complex). ಈಡಿಪಸ್ ಕಾಂಪ್ಲೆಕ್ಸ್ ಉಳಿದೆಲ್ಲಾ ಕಾಂಪ್ಲೆಕ್ಸ್‌ಗಳಿಗಿಂತ ಪ್ರಬಲವಾಗಿದ್ದು, ಅವುಗಳ ಹುಟ್ಟು ಮತ್ತು ವಿಕಾಸವನ್ನೂ ನಿರ್ಣಯಿಸುತ್ತದೆ. ಈಡಿಪಸ್ ಕಾಂಪ್ಲೆಕ್ಸ್ ಸಾಹಿತ್ಯ ರಚನೆಗೆ ಒಂದು ಪ್ರಮುಖ ಪ್ರೇರಣೆಯಾದುದರಿಂದ ಅದರ ವಿಚಾರವನ್ನು ಸಂಕ್ಷಿಪ್ತವಾಗಿಯಾದರೂ ತಿಳಿದುಕೊಳ್ಳುವುದು ಆವಶ್ಯಕ.

ವ್ಯಕ್ತಿತ್ವಕ್ಕೆ ಅಸ್ತಿಭಾರ ಬಾಲ್ಯದಲ್ಲಿಯೇ ನಡೆದಿರುತ್ತದೆಂಬುದು ಫ್ರಾಯ್ಡ್‌ನ ಅಭಿಮತ. ಇದು ನಡೆಯುವುದು ಕೌಟುಂಬಿಕ ಪರಿಸರದಲ್ಲಿ. ಈ ಕಾಲದಲ್ಲಿ ತಂದೆ, ತಾಯಿ ಮತ್ತು ಮಗು, ಈ ಮೂವರ ನಡುವೆ ಉದ್ಭವಿಸುವ ಒಂದು ವಿಶಿಷ್ಟ ಸಂಕೀರ್ಣ ಭಾವತುಮುಲವೇ ಈಡಿಪಸ್ ಕಾಂಪ್ಲೆಕ್ಸ್[4]. ಪ್ರತಿಯೊಂದು ಗಂಡು ಮಗು ಸುಮಾರು ೪–೫ ವರ್ಷ ವಯಸ್ಸಿನವನಿರುವಾಗ ಅವನಿಗೆ ತಂದೆಯ ಮೇಲೆ ದ್ವೇಷ, ಹಾಗೆಯೇ ತಾಯಿಯ ಮೇಲೆ ಅಮಿತವಾದ ಪ್ರೇಮ ಉದ್ಭವಿಸುತ್ತದೆ. ಇದೇ ಈಡಿಪಸ್ ಕಾಂಪ್ಲೆಕ್ಸ್. ಮಗು ಹೆಣ್ಣಾದರೆ ಅವಳಿಗೆ ತಾಯಿಯ ಮೇಲೆ ದ್ವೇಷ ; ತಂದೆಯಲ್ಲಿ ಪ್ರೇಮ. ಇದು ಎಲೆಕ್ಟ್ರಾ ಕಾಂಪ್ಲೆಕ್ಸ್ (Electra Complex). ಮೇಲ್ನೋಟಕ್ಕೆ ತೋರುವಂತೆಯೇ ಇವು ಅಸಭ್ಯ, ಅನೈತಿಕ, ಹಾಗೂ ಅನಾಗರಿಕ, ಬಯಕೆಗಳು. ಸಾಮಾಜಿಕ–ಕೌಟುಂಬಿಕ ಪರಿಸರ ಈ ಭಾವನೆಗಳನ್ನು ಬೆಳೆಯಗೊಡುವುದಿಲ್ಲ. ಮಕ್ಕಳು ಬೆಳೆದಂತೆ ಒಂದು ವಿಶಿಷ್ಟ ರೀತಿಯಲ್ಲಿ ಈ ಭಾವಬಂಧದಿಂದ ಬಿಡುಗಡೆ ಹೊಂದಿ ಸ್ವಸ್ಥ ಜೀವನ ನಡೆಸುತ್ತಾರೆ. ಆದರೆ ಕೆಲವೊಂದು ಸಂದರ್ಭಗಳಲ್ಲಿ ಈಡಿಪಸ್ ಕಾಂಪ್ಲೆಕ್ಸ್ ಸುಪ್ತಚೇತನಕ್ಕೆ ದೂಡಲ್ಪಡುತ್ತದೆ. ಅಲ್ಲಿ ಅದು ಉಳಿದು, ಬೆಳೆದು, ಶಕ್ತಿಯುತವಾಗಿ, ಹಲವು ಬಗೆಯಲ್ಲಿ ವ್ಯಕ್ತಿಯ ಮೇಲೆ ಪ್ರಭಾವ ಬೀರುತ್ತದೆ. ಅವನ ಜಾಗೃತ ಮನಸ್ಸು ಶಕ್ತಿಯುತವಾಗಿದ್ದರೆ ಪರೋಕ್ಷ

---

೪. ಈಡಿಪಸ್ ಕಾಂಪ್ಲೆಕ್ಸ್ ಕುರಿತು ವಿವರವಾಗಿ ತಿಳಿಯ ಬಯಸುವವರು ಇದೇ ಲೇಖಕನ "ಈಡಿಪಸ್ ಕಾಂಪ್ಲೆಕ್ಸ್—ಒಂದು ಸರಳ ವಿವರಣೆ". ಸಾಧನೆ, ಸಂ. ೩, ೧೯೭೪, ಪು. ೬೪–೮೨, ನೋಡಿ.

ವಾಗಿ ಅವನ ವರ್ತನೆಯ ಮೇಲೆ ಪ್ರಭಾವ ಬೀರುತ್ತದೆ. ಅವನ ಕನಸಿನಲ್ಲಿ ಅದು ಅಭಿವ್ಯಕ್ತಗೊಳ್ಳುತ್ತದೆ. ಅವನ ಚೇತನ ಬಲಹೀನವಾಗಿದ್ದರೆ ಮನಸ್ವಾಸ್ಥ್ಯ ಕಳೆದುಕೊಳ್ಳುತ್ತಾನೆ. ಒಬ್ಬೊಬ್ಬರಲ್ಲಿ ಈ ಕಳವಳಕಾರಕ ಬಯಕೆಗಳು ಉದಾತ್ತೀಕರಣ ಗೊಂಡು (Sublimation) ಕಲೆಯ ರೂಪದಲ್ಲೂ, ಸಾಹಿತ್ಯದ ರೂಪದಲ್ಲೂ ಅಭಿವ್ಯಕ್ತಗೊಳ್ಳಬಹುದು. ಈ ಅರ್ಥದಲ್ಲಿ ಸಾಹಿತ್ಯ ಆಂತರಿಕ ಲೈಂಗಿಕ ತುಮುಲಗಳ, ಅನೈತಿಕ ಭಾವನೆಗಳ, ಅಸಭ್ಯ ಬಯಕೆಗಳ ಆಲಂಕೃತ ಅಭಿವ್ಯಕ್ತಿ.

ಸಾಹಿತ್ಯ ನಿರ್ಮಾಣದಲ್ಲಿ ಈಡಿಪಸ್ ತುಮುಲಗಳ ಪ್ರಭಾವವನ್ನು ಫ್ರಾಯ್ಡ್ ನಿದರ್ಶನಗಳೊಡನೆ ವಿವರಿಸಿದ್ದಾನೆ. ಈ ತುಮುಲಕ್ಕೆ ಇಟ್ಟಿರುವ ಹೆಸರೇ ಸಾಹಿತ್ಯ ದಿಂದ ಆರಿಸಿದುದು. ಈಡಿಪಸ್, ಗ್ರೀಕ್ ನಾಟಕಕಾರ ಸಾಫಕ್ಲೀಸ್ (sophocles)ನ ದುರಂತ ನಾಟಕದ ಕೇಂದ್ರ ಪಾತ್ರ. ಥೀಬ್ಸ್ ದೇಶದ ದೊರೆ ಲೇಯಸ್ (Laius) ಅವನ ರಾಣಿ ಜೊಕಾಸ್ಟ (Jocasta) ಇವರ ಮಗ ಈಡಿಪಸ್. ಇವನು ದುರಾದೃಷ್ಟ ವಶದಿಂದ ತನ್ನ ತಂದೆಯನ್ನು ಕೊಂದು, ತಾಯಿಯನ್ನು ವಿವಾಹವಾಗಿ, ಮಕ್ಕಳನ್ನು ಪಡೆದು, ವಿನಾಶ ಹೊಂದುವುದು ನಾಟಕದ ಕಥಾವಸ್ತು. ಈಡಿಪಸ್ ಕಾಂಪ್ಲೆಕ್ಸ್ ಹೀಗೆ ಸಾಹಿತ್ಯದಲ್ಲಿ ನೇರವಾಗಿ ಅಭಿವ್ಯಕ್ತಿಗೊಳ್ಳದೆ. ಪರೋಕ್ಷವಾಗಿ ಪ್ರಕಟವಾಗುವ ಸಾಧ್ಯತೆಗಳೇ ಹೆಚ್ಚು. ಅಂತಹ ಒಂದು ನಿದರ್ಶನ ಶೇಕ್ಸ್‌ಪಿಯರನ ಹ್ಯಾಮ್ಲೆಟ್ ನಾಟಕದಲ್ಲಿದೆ. ತನ್ನ ತಂದೆಯನ್ನು ಕೊಂದು ತಾಯಿಯನ್ನು ವರಿಸಿದ ದೊರೆ ಕ್ಲಾಡಿಯಸ್‌ನ ಮೇಲೆ ಸೇಡು ತೀರಿಸುವಲ್ಲಿ, ಹ್ಯಾಮ್ಲೆಟ್ ತೋರುವ ವಿಳಂಬ ಪ್ರವೃತ್ತಿ ಹಲವಾರು ಬಗೆಯ ವಿವರಣೆಗೊಳಗಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಹ್ಯಾಮ್ಲೆಟ್ ತೋರುವ ವಿಳಂಬಕ್ಕೆ ಇತ್ತಿರುವ ವಿವರಣೆಗಳನ್ನು ನಿರಾಕರಿಸಿದ ಫ್ರಾಯ್ಡ್ ಅದಕ್ಕೆ ಕಾರಣ ಹ್ಯಾಮ್ಲೆಟ್‌ನಲ್ಲಿ ಸುಪ್ತವಾಗಿರುವ ಈಡಿಪಸ್ ಕಾಂಪ್ಲೆಕ್ಸ್ ಎಂದು ವಾದಿಸುತ್ತಾನೆ. ಫ್ರಾಯ್ಡ್‌ನ ಪ್ರಕಾರ ಹ್ಯಾಮ್ಲೆಟ್ ತನ್ನ ತಾಯಿಯನ್ನು ಪ್ರೇಮಿಸಿ, ತಂದೆಯ ಸಾವನ್ನು ಹಾರೈಸಿರಬೇಕು. ಅಂದರೆ ಹ್ಯಾಮ್ಲೆಟ್ ತಾನೇ (ಅಪ್ರಜ್ಞಾತ್ಮಕ ವಾಗಿ) ಮಾಡಬಯಸಿದ್ದ ಕಾರ್ಯವನ್ನು ಕ್ಲಾಡಿಯಸ್ ಮಾಡಿರುವಾಗ ಅವನ ಮೇಲೆ ಸೇಡು ತೀರಿಸಿಕೊಳ್ಳುವುದಾದರೂ ಹೇಗೆ ? ಈ ಕಾರಣದಿಂದ ತನಗೆ ತನ್ನ ತಂದೆಯ ಭೂತ ನಿಯೋಜಿಸಿದ್ದ ಕಾರ್ಯವನ್ನು ಶೀಘ್ರವಾಗಿ ಹ್ಯಾಮ್ಲೆಟ್ ನೆರವೇರಿಸಲು ಇಷ್ಟ ಪಡುವುದಿಲ್ಲ. ಅವನು ಒಫೀಲಿಯಳೊಡನೆ ನಡೆದುಕೊಳ್ಳುವ ರೀತಿ ಅವನ ಈಡಿಪಸ್ ತುಮುಲವನ್ನು ದೃಢೀಕರಿಸುತ್ತದೆ. ಈ ನಾಟಕವನ್ನು ರಚಿಸುವಾಗ ಶೇಕ್ಸ್‌ಪಿಯರ್ ಈಡಿಪಸ್ ಭಾವನೆಗಳ ಪ್ರಭಾವದಲ್ಲಿದ್ದಿರಬೇಕೆಂದು ಫ್ರಾಯ್ಡ್ ವಾದಿಸಿದ್ದಾನೆ. ನಾಟಕ ರಚನೆಗೆ ಕೊಂಚಕಾಲ ಮೊದಲು ಶೇಕ್ಸ್‌ಪಿಯರನ ತಂದೆ ತೀರಿಕೊಂಡಿದ್ದನಂತೆ. ಮತ್ತು ಶೇಕ್ಸ್‌ಪಿಯರನ ಮಗನೊಬ್ಬ ಸಣ್ಣ ವಯಸ್ಸಿನಲ್ಲೇ ತೀರಿಕೊಂಡಿದ್ದನಂತೆ. ಅವನ ಹೆಸರು ಹ್ಯಾಮ್ನೆಟ್ (Hamnet). ಈ ಹಿನ್ನಲೆಯಲ್ಲೇ ಶೇಕ್ಸ್‌ಪಿಯರ್ ಹ್ಯಾಮ್ಲೆಟ್ ನಾಟಕವನ್ನು ರಚಿಸಿರಬೇಕೆನ್ನುತ್ತಾನೆ ಫ್ರಾಯ್ಡ್.

ಸಾಹಿತಿಗೆ ತನ್ನ ದೈನಂದಿನ ಜೀವನದಲ್ಲಿ ಜರುಗಿದ ಯಾವುದೋ ಒಂದು ತೀವ್ರವಾದ ಅನುಭವ, ಅವನ ಬಾಲ್ಯದಲ್ಲಿ ಉಂಟಾಗಿದ್ದು ಈಗ ಸುಪ್ತವಾಗಿರುವ ಬಯಕೆಯನ್ನು ಬಡಿದೆಬ್ಬಿಸುತ್ತದೆ. ಎಚ್ಚರಗೊಂಡ ಬಯಕೆ ತೃಪ್ತಿಗೊಳ್ಳಲು ಯತ್ನಿಸುತ್ತದೆ. ಜಾಗ್ರತ ಮನಸ್ಸು ಅದನ್ನು ಆಗಗೊಡುವುದಿಲ್ಲ. ಆದುದರಿಂದ ಅತೃಪ್ತಬಯಕೆ ಜಾಗ್ರತ ಮನಸ್ಸಿಗೆ ಒಪ್ಪಿಗೆಯಾಗುವಂತೆ ಮಾರ್ಪಟ್ಟು ಸುಸಂಸ್ಕೃತರೂಪದಲ್ಲಿ ಸುಂದರ ಸಾಹಿತ್ಯವಾಗಿ ಹೊರಬರುತ್ತದೆ. ಆಟದಲ್ಲಿ ಮಗ್ನವಾಗಿರುವ ಮಗುವಿನ ಹಾಗೆ ಸಾಹಿತಿ ಕಲ್ಪನೆಯ ಲೋಕ ಒಂದನ್ನು ನಿರ್ಮಿಸಿ ಅದರಲ್ಲಿ ವಿಹರಿಸುತ್ತಾನೆ. ಅವನ ಬಯಕೆಯ ಪೂರೈಕೆಗೆ ಒಂದು ಚಾರಿತ್ರಿಕ ಅಥವಾ ಪೌರಾಣಿಕ ಹಿನ್ನೆಲೆಯನ್ನು ಆರಿಸಿಕೊಳ್ಳುತ್ತಾನೆ. ಜಾಗ್ರತ ಮನಸ್ಸಿಗೆ ಒಪ್ಪಿಗೆಯಾಗುವ ಅಲಂಕಾರಗಳನ್ನು ಸುಪ್ತ ಬಯಕೆಗೆ ತೊಡಿಸುತ್ತಾನೆ. ಹೀಗೆ ಬಾಲ್ಯದ ಅನೈತಿಕ ಬಯಕೆಗಳು ವಯಸ್ಕನ ಉಡುಗೆಯುಟ್ಟು ಹೊರಹೊಮ್ಮುತ್ತವೆ. ಈಗ ಅವು ಸಾಹಿತಿ ಮತ್ತು ಓದುಗರಿಬ್ಬರಿಗೂ ರಂಜಕವಾಗಿರುತ್ತವೆ. ಸಾಹಿತಿ ತನ್ನ ನಿಷಿದ್ಧ ಲೈಂಗಿಕ ಬಯಕೆಯ ಅನೈತಿಕತೆಯನ್ನು ಬಚ್ಚಿಡುವುದರ ಮೂಲಕ ಅವುಗಳನ್ನು ಓದುಗನಿಗೆ ಸ್ವೀಕಾರಾರ್ಹವಾಗಿ ಮಾಡುತ್ತಾನೆ. ಅವನು ತನ್ನ ಬಯಕೆಗಳನ್ನು ಅಲಂಕೃತಗೊಳಿಸಿ ಓದುಗನಿಗೆ ಮನರಂಜನೆಯನ್ನುಂಟುಮಾಡುವುದನ್ನು ಫ್ರಾಯ್ಡ್ ಒಂದು ವಿಧವಾದ ಲಂಚವೆಂದು ಕರೆದಿದ್ದಾನೆ. ಲಂಚದ ರುಚಿಗೆ ತುತ್ತಾದ ಓದುಗನಿಗೆ ಸಾಹಿತಿಯ ಬಯಕೆಗಳ ಅನೈತಿಕತೆ, ಅಸಂಬದ್ಧತೆಗಳು ಗೋಚರಿಸುವುದಿಲ್ಲ. ಹಾಗೆ ನೋಡಿದರೆ ಓದುಗ ಅವನ್ನು ಆಹ್ವಾನಿಸಿ, ಆನಂದಿಸಿ, ಆಸ್ವಾದಿಸುತ್ತಾನೆ. ಅದಕ್ಕೆ ಕಾರಣವಿಷ್ಟೆ. ಸಾಹಿತಿಯ ಅನೈತಿಕ ಆಕಾಂಕ್ಷೆಗಳು ಓದುಗನವೂ ಕೂಡ. ಅವನ್ನು ತೃಪ್ತಿಗೊಳಿಸುವ ತವಕ ಓದುಗನಿಗೂ ಇರುತ್ತದೆ. ಈ ಕಳಂಕಪೂರಿತ ಆಸೆಗಳು ಸಾಹಿತಿಯಲ್ಲೂ ಇರುವುದು ಓದುಗನಿಗೆ ಸಮಾಧಾನಕರವಾದ ಸಂಗತಿ. ಕವಿಯ ಕಲ್ಪನೆಯಲ್ಲಿ ಓದುಗ ತನ್ನ ಅತೃಪ್ತಬಯಕೆಗಳನ್ನು ತೇಲಿಬಿಟ್ಟು ಪರೋಕ್ಷವಾಗಿ ಸುಖಿಸುತ್ತಾನೆ. ಅವು ತನ್ನ ಬಯಕೆಗಳು ಎನ್ನುವ ಭಾವನೆ ಓದುಗನಿಗೆ ಬರುವುದೇ ಇಲ್ಲ. ಈ ಕ್ರಿಯೆಗಳೆಲ್ಲಾ ಅಪ್ರಜ್ಞಾತ್ಮಕವಾಗಿಯೇ ನಡೆಯುತ್ತವೆ. ತನ್ನ ಕೃತಿಯ ಮೂಲಕ ಸಾಹಿತಿ "ಇದು ನನ್ನ ಅನುಭವ ; ನಿಮಗೇನನ್ನಿಸುತ್ತದೆ ?" ಎಂದು ಕೇಳುತ್ತಾನೆ. ಓದುಗ ಅವುಗಳನ್ನು ಸ್ವೀಕರಿಸಿದನೆಂಬುದು ತಿಳಿದಾಗ ಸಾಹಿತಿಗೂ ಕಳಂಕದ ಸೋಂಕು ತಗ್ಗುತ್ತದೆ. ಆದರೆ ಸಾಹಿತಿಯ ಸಮಸ್ಯೆಗೆ ಸಾಹಿತ್ಯ ರಚನೆ ಪೂರ್ಣ ಉತ್ತರವಾಗುವುದಿಲ್ಲ. ಅವನ ಅತೃಪ್ತ ಬಯಕೆಗಳು ವಾಸ್ತವವಾಗಿ ಪೂರೈಕೆಗೊಳ್ಳುವುದಿಲ್ಲ. ಆದುದರಿಂದ ಅವನು ಸಾಹಿತ್ಯ ರಚನೆಯನ್ನು ನಿರಂತರವಾಗಿ ಮಾಡುತ್ತಲೇ ಇರಬೇಕಾಗುತ್ತದೆ. ಒಟ್ಟಿನಲ್ಲಿ ಫ್ರಾಯ್ಡ್ ಪ್ರಕಾರ ಕನಸುಗಳಿಗೂ, ಮನೋವಿಕಾರಗಳಿಗೂ, ಸಾಹಿತ್ಯ ರಚನೆಗೂ ಪ್ರೇರಣೆಗಳು ಒಂದೇ ಬಗೆಯವು : ಸುಪ್ತ ಚೇತನದ ಅತೃಪ್ತ ಆಕಾಂಕ್ಷೆಗಳು. ಲೈಂಗಿಕ ತುಮುಲಗಳು.

ಒಟೊ ರ್ಯಾಂಕ್ (Otto Rank) ಪ್ರಕಾರ ಸಾಹಿತಿ ಕನಸಿಗನಿಗೂ, ಮನೋ ರೋಗಿಗೂ (Neurotic) ನಡುವೆ ಇರುತ್ತಾನೆ. ಈ ಮೂವರ ಮನೋವ್ಯಾಪಾರ ಗಳು ಒಂದೇ ತೆರನಾದುವು. ಅವುಗಳ ಅಭಿವ್ಯಕ್ತಿ ಮಾತ್ರ ಬೇರೆ ಬೇರೆ. ಮನೋ ರೋಗಿ ತನ್ನ ಪರಿಸರಕ್ಕೆ ಒಪ್ಪಿಗೆಯಾಗದ ಮನೋವಿಕಾರಗಳಿಂದಾಗಿ ವಾಸ್ತವ ಪ್ರಪಂಚ ದಿಂದ ವಿಮುಖನಾಗುತ್ತಾನೆ. ಸಾಹಿತಿ ವಾಸ್ತವಿಕತೆಯಿಂದ ಹಿಮ್ಮೆಟ್ಟಿದರೂ ಜನ ಮೆಚ್ಚುವಂತಹ ಒಂದು ಪ್ರತಿ ವಿಶ್ವವನ್ನು ತನ್ನ ಕಲ್ಪನೆಯಲ್ಲಿ ನಿರ್ಮಿಸಿಕೊಂಡು ಅದರಲ್ಲಿ ವಿಹರಿಸುತ್ತಾನೆ, ಹೀಗೆ ಮನೋರೋಗಿ ಸೋತಲ್ಲಿ ಸಾಹಿತಿ ಗೆಲ್ಲುತ್ತಾನೆ. ರ್ಯಾಂಕ್ ಪ್ರಕಾರ ಸಾಹಿತ್ಯವನ್ನೊಳಗೊಂಡಂತೆ ಸಕಲ ಸುಂದರ ಕಲಾ ಸೃಷ್ಟಿಗಳು ಉದಿಸುವುದು ನಮ್ಮ ಅತಿನೋವಿನ ಅನುಭವಗಳಲ್ಲಿಯೇ (Our sweetest expressions originate from our worst pains). ಸಾಹಿತಿಗೆ ನೋವುಂಟಾಗುವುದು ಅವನ ಆಂತರಿಕ ಸಮಸ್ಯೆಗಳಿಂದ. ಇವನ್ನು ಅವನು ಯಾವುದೇ "ಸಾಧಾರಣ" ರೀತಿಯಲ್ಲಿ ಪರಿಹರಿಸಿಕೊಳ್ಳಲಾರ. ಅದಕ್ಕಾಗಿ ಅಸಾಧಾರಣ ಸೃಜನಾತ್ಮಕ ಪರಿಹಾರ ಗಳನ್ನು ಕಂಡುಕೊಳ್ಳುತ್ತಾನೆ. ಒಂದು ರೀತಿಯಲ್ಲಿ ಸಾಹಿತಿ ತನ್ನ ಮನೋರೋಗಕ್ಕೆ ತಾನೇ ಚಿಕಿತ್ಸೆ ಕಂಡುಕೊಳ್ಳುತ್ತಾನೆ. (The writer is a self-cured neurotic) ರ್ಯಾಂಕ್ ಹೇಳುವಂತೆ "ಮನೋರೋಗಿ ಪೌರುಷವನ್ನು ಕಳೆದುಕೊಂಡ ಕಲಾವಿದ : ಕಲಾವಿದ ಪುರುಷತ್ವವನ್ನು ಬೆಳೆಸಿಕೊಂಡ ಮನೋರೋಗಿ"[5] ಹ್ಯಾನ್ಸ್ ಸ್ಯಾಕ್ಸ್ (Hanns Sachs) ಪ್ರಕಾರ. ಸಾಹಿತಿ ತನ್ನ ಅಂತರಂಗದ ಅಳುಕಿಗೆ ತನ್ನ ಕೃತಿಗಳ ಮೂಲಕ ಸಾರ್ವಜನಿಕ ಮನ್ನಣೆಯನ್ನು ನಿರೀಕ್ಷಿಸಿ, ಪಡೆಯುತ್ತಾನೆ. ಓದುಗರು ತನ್ನ ಅಭಿಪ್ರಾಯಗಳನ್ನು ಒಪ್ಪುವಂತೆ ಅವರ ಮನ ಒಲಿಸುತ್ತಾನೆ. ಓದುಗರು ಅವನ ಸಾಹಿತ್ಯವನ್ನು ಮೆಚ್ಚಿ ಸ್ವೀಕರಿಸಿದರೆ ಅವನಿಗೆ ಅಪರಾಧಿಪ್ರಜ್ಞೆಯಿಂದ ಮುಕ್ತಿ ದೊರೆತಂತಾಗುತ್ತದೆ. ಹೀಗೆ ಫ್ರಾಯ್ಡ್ ಮತ್ತು ಅವನ ಸಂಗಡಿಗರ ಪ್ರಕಾರ ಸಾಹಿತ್ಯಕ್ಕೆ ಪ್ರೇರಣೆ ಬರುವುದು ಸುಪ್ತ ಚೇತನದಿಂದ. ಜಾಗೃತ ಮನಸ್ಸಿಗೆ ಸಹ್ಯ ವಾಗದೆ ಸುಪ್ತಚೇತನಕ್ಕೆ ದೂಡಲ್ಪಟ್ಟು, ಅಲ್ಲಿ ಜೀವಂತವಾಗಿ, ಶಕ್ತಿಯುತವಾಗಿ ಉಳಿದು. ಅಭಿವ್ಯಕ್ತಿಗಾಗಿ ಕಾಯ್ದುಕುಳಿತಿರುವ ಅತೃಪ್ತ ಆಕಾಂಕ್ಷೆಗಳು ಸಾಹಿತ್ಯಕ್ಕೆ ಮೂಲವಸ್ತು. ಇವು ಸಾಮಾನ್ಯವಾಗಿ ಲೈಂಗಿಕ ಜೀವನಕ್ಕೆ ಸಂಬಂಧಿಸಿದವು. ಅದರಲ್ಲೂ ಮುಖ್ಯವಾಗಿ ಈಡಿಪಸ್ ಕಾಂಪ್ಲೆಕ್ಸ್‌ಗೆ ಸಂಬಂಧಿಸಿದವು. ಸಾಹಿತ್ಯಕ್ಕೆ ಬೇರೆ ಕಾರಣಗಳೂ ಇರಬಹುದು, ಆದರೆ ಅವುಗಳಲ್ಲೆಲ್ಲಾ ಪ್ರಬಲವಾದುದು ಈಡಿಪಸ್ ಕಾಮನೆಗಳೆಂಬುದು ಫ್ರಾಯ್ಡ್‌ನ ಅಭಿಮತ.

---

5. "The neurotic is an artist who has become an effeminate, and the artist a neurotic who has become more manly, and who has unconsciously effected his own cure."

ತನ್ನ ಸಾಹಿತ್ಯಕ್ಕೆ ಸಂಬಂಧಿಸಿದ ಸಿದ್ಧಾಂತಗಳಿಗೆ ಪೂರಕವಾಗಿ ಫ್ರಾಯ್ಡ್ ಹಲವಾರು ಸಾಹಿತ್ಯ ಸನ್ನಿವೇಶಗಳನ್ನು ಆಯ್ದು ವಿವರಿಸಿದ್ದಾನೆ. ಈಡಿಪಸ್ ಕಾಂಪ್ಲೆಕ್ಸ್‌ನ ನೇರವಾದ ಅಭಿವ್ಯಕ್ತಿ ಸಾಫಕ್ಲೀಸ್‌ನ ನಾಟಕದಲ್ಲೂ, ಪರೋಕ್ಷ ಅಭಿವ್ಯಕ್ತಿ ಹ್ಯಾಮ್ಲೆಟ್ ನಾಟಕದಲ್ಲೂ ಆಗಿರುವುದು ನಮಗೆ ಈಗಾಗಲೇ ತಿಳಿದಿದೆ. ಸಣ್ಣ ಮಕ್ಕಳ ಮನೋವ್ಯಾಪಾರಗಳನ್ನು ವರ್ಣಿಸುತ್ತಾ, ಫ್ರೆಂಚ್ ಬರಹಗಾರ ಡೆನಿಸ್ ಡೀಡ್ರೋ(Denis Diderot, 1713-1784) ಎಂಬುವವನು, "ಅವರನ್ನು ಅವರಿಷ್ಟದಂತೆ ಬಿಟ್ಟರೆ ತಂದೆಯನ್ನು ಕೊಂದು ತಾಯಿಯೊಡನೆ ಮಲಗುತ್ತಾರೆಂದು" ಹೇಳಿದ್ದಾನೆ.[6] ಇನ್ನೊಬ್ಬ ಫ್ರೆಂಚ್ ಸಾಹಿತಿ ಸ್ಟಂಡಾಲ್ ತನ್ನ ಈಡಿಪಸ್ ಭಾವನೆಗಳನ್ನು ಚಿತ್ರಿಸಿರುವ ರೀತಿ ಬೆರಗುಗೊಳಿಸುವಂತಹದು :[7] "ನನ್ನ ತಾಯಿಯೊಬ್ಬಳು ಮನೋಹರ ಮಹಿಳೆ ; ನಾನು ಅವಳನ್ನು ಪ್ರೇಮಿಸಿದ್ದೆ. ಅವಳು ಸತ್ತಾಗ ನನಗೆ ಏಳು ವರ್ಷ ವಯಸ್ಸು. ನನಗೆ ಅವಳ ಮೇಲೆ ಮುತ್ತಿನ ಮಳೆಗರೆಯಬೇಕೆಂಬ ಬಯಕೆ. ಆಗ ಅವಳ ಮೇಲೆ ಬಟ್ಟೆಗಳೇನೂ ಇರಬಾರದು. ಅವಳೂ ನನ್ನನ್ನು ಗಾಢವಾಗಿ ಪ್ರೇಮಿಸುತ್ತಿದ್ದಳು. ನನ್ನನ್ನು ಮುದ್ದಿಸುತ್ತಿದ್ದಳು. ನಾನು ಅವಳ ಪ್ರೀತಿಯನ್ನು ಹಿಂದಿರುಗಿಸುತ್ತಿದ್ದ ರೀತಿ ಹಲವು ವೇಳೆ ಅವಳು ನನ್ನಿಂದ ತಪ್ಪಿಸಿಕೊಂಡು ಓಡಿಹೋಗುವಂತೆ ಮಾಡುತ್ತಿತ್ತು. ನಮ್ಮಿಬ್ಬರ ನಡುವೆ ನನ್ನ ತಂದೆ ಬಂದಾಗ ನನಗೆ ಬಹಳ ಅಸಹ್ಯವಾಗುತ್ತಿತ್ತು." ಸ್ಟಂಡಾಲ್‌ನ ತಂದೆ ತೀರಿಕೊಂಡಾಗ "ನನ್ನ ಪರಿಸ್ಥಿತಿಯಲ್ಲಿ ಬದಲಾವಣೆಯಾಗಿರುವುದಾಗಿ ತಿಳಿದು ಬಂದಿದೆ" ಎಂದ ಮಾತು ಅವನ ಈಡಿಪಸ್ ಕಾಂಪ್ಲೆಕ್ಸನ್ನು ದೃಢೀಕರಿಸುತ್ತದೆ. ಡೀಡ್ರೊ ಮತ್ತು ಸ್ಟಂಡಾಲ್ ಹೀಗೆ ಬರೆದದ್ದು ಫ್ರಾಯ್ಡ್‌ನ ಕಾಲಕ್ಕೆ ಮುಂಚೆಯೇ ಎಂಬುದು ಗಮನಿಸಬೇಕಾದ ವಿಷಯ.

ಈಡಿಪಸ್ ಕಾಂಪ್ಲೆಕ್ಸ್ ತಂದೆ; ತಾಯಿ ಮತ್ತು ಮಗ ಈ ಮೂವರ ಅನುಬಂಧಕ್ಕೆ ಸಂಬಂಧಿಸಿದುದು. ಇವರು ಕೌಟುಂಬಿಕ ತ್ರಿಕೋನದ ಮೂರು ಶೃಂಗಗಳು. ಈ ಕಾಂಪ್ಲೆಕ್ಸಿನ ಅಭಿವ್ಯಕ್ತಿಯಲ್ಲಿ ಈ ಮೂರರಲ್ಲಿ ಯಾವುದೊಂದು ಬೇಕಾದರೂ ಪ್ರಧಾನವಾಗಬಹುದು. ಮಗುವಿನ ಶೃಂಗ ಪ್ರಧಾನವಾದರೆ, ಮಗು

---

6. "If the little boy were left alone, if he retained all his characteristic naivete, and if, to the slight reasoning powers of the infant in the cradle were adjoined the intensity of passion of the thirty year old, he would strangle his father and sleep with his mother."

7. "My mother...was a charming woman, and I was in love with her. I hasten to add that I lost her when I was seven years old...I wanted to cover my mother with kisses, and there should not be any dresses there. She loved me passionately, and kissed me often. I returned her caresses with such fire, that she often found it necessary to leave me. I despised my father when his arrival interrupted our kisses."

ಗಂಡಾಗಿದ್ದರೆ ಆಗ ಈಡಿಪಸ್ ಕಾಂಪ್ಲೆಕ್ಸ್ ಉದ್ಭವಿಸುತ್ತದೆ. ಮಗು ಹೆಣ್ಣಾದರೆ ಹುಟ್ಟುವುದು ಎಲೆಕ್ಟ್ರಾ ಕಾಂಪ್ಲೆಕ್ಸ್. ಎಲೆಕ್ಟ್ರಾ, ಗ್ರೀಕ್ ವೀರ ಅಗಮೆಮ್ನಾನ್‌ನ (Agamemnon) ಮಗಳು. ಅವನು ತನ್ನ ಹೆಂಡತಿ ಕ್ಲೈಟಮ್ನೆಸ್ಟ್ರ (Clytemnestra) ಳಿಂದ ಕೊಲ್ಲಲ್ಪಡುತ್ತಾನೆ, ತಂದೆಯ ಸಾವಿಗೆ ಸೇಡು ತೀರಿಸಿಕೊಳ್ಳುವ ಸಲುವಾಗಿ, ಎಲೆಕ್ಟ್ರಾ ತನ್ನ ಸೋದರ ಒರೆಸ್ಟಸ್‌ಗೆ ಸಹಾಯ ಮಾಡುತ್ತಾಳೆ. ಇದು ಗ್ರೀಕ್ ನಾಟಕಕಾರ ಈಸ್ಕಲಸ್‌ನ (Aeeschylus) ರುದ್ರ ನಾಟಕ "ಒರಿಸ್ಟೀಯ" ಮುಕ್ಕೂಟ ನಾಟಕದ (Oresteia) ದ ಮೊದಲ ಭಾಗವಾದ "ಅಗಮೆಮ್ನಾನ್' ಎಂಬ ಪ್ರಸಿದ್ಧ ನಾಟಕದ ಕಥಾವಸ್ತು. ತಂದೆಯನ್ನು ಪ್ರೇಮಿಸಿ ತಾಯಿಯನ್ನು ದ್ವೇಷಿಸಿದ ಮಗಳಚಿತ್ರ ವಿದು. ಇದೇ ವಸ್ತು ಅಮೆರಿಕಾದ ಖ್ಯಾತ ನಾಟಕಕಾರ ಯೂಜಿನ್ ಒನಿಲ್ Eugene o' Neill) ನ "ಮೌರ್ನಿಂಗ್ ಬಿಕಮ್ಸ್ ಎಲೆಕ್ಟ್ರಾ" (Mourning Becomes Electra) ಎಂಬ ನಾಟಕದಲ್ಲಿ ಆಧುನಿಕ ರೂಪದಲ್ಲಿ ಅಭಿವ್ಯಕ್ತಿಗೊಂಡಿದೆ.

ಕೌಟುಂಬಿಕ ತ್ರಿಕೋನದ ಪ್ರಧಾನಶೃಂಗ ತಂದೆಯಾದಾಗ ಅದು ಮಗಳನ್ನು ಪ್ರೇಮಿಸುವ ತಂದೆಯ ಪ್ರತಿಮೆಗೆ ಪ್ರೇರಕವಾಗುತ್ತದೆ. ಈ ಭಾವನೆ ಸಾಹಿತ್ಯಕ್ಕೆ ವಸ್ತು ವಾಗಿರುವ ನಿದರ್ಶನಗಳು ಹಲವಾರಿವೆ. ಅಷ್ಟೇ ಅಲ್ಲ, ಈ ಭಾವನೆ ನಿಷಿದ್ಧವೇ ಅಲ್ಲವೆನ್ನುವಷ್ಟರ ಮಟ್ಟಿಗೆ ಚಿತ್ರಿತವಾಗಿರುವುದೂ ಉಂಟು. ಗ್ರೀಕರ ಆಧಿದೈವ ಜ್ಯೂಸ್ (Zeus) ಮಗಳ ಜತೆ ಮಲಗಿ ಹೆಸರುವಾಸಿಯಾಗಿರುವ ಪ್ರತಿಮೆ. ಯೆಹೂದ್ಯರ ಕಾವ್ಯಗಳಲ್ಲಿ ಲಾಟ್ (Lot) ಎಂಬುವವನು ಮಗಳನ್ನು ಸಂಭೋಗಿಸಿದ ವಿಷಯ ಬಂದಿದೆ. ನಮ್ಮ ಪುರಾಣಗಳಲ್ಲಿ ಬ್ರಹ್ಮ ತನ್ನ ಮಗಳು ಸರಸ್ವತಿಯನ್ನು ವರಿಸಿದ ವಿಷಯ ಎಲ್ಲೂ ವಿವಾದಕ್ಕೆಡೆಯಾದಂತೆ ಕಂಡುಬರುವುದಿಲ್ಲ. ಸೀತೆ ರಾವಣನ ಮಗಳೆಂಬ ಭಾವನೆ ಬರುವ ಕಥೆಗಳು ನಮ್ಮಲ್ಲಿವೆ.

ಈಡಿಪಸ್ ತ್ರಿಕೋನದ ಪ್ರಧಾನಶೃಂಗ ತಾಯಿಯಾದಾಗ ಉಂಟಾಗುವ ಮನಃಸ್ಥಿತಿಗೆ ಫಿಡ್ರ ಕಾಂಪ್ಲೆಕ್ಸ್ (Phaedra Complex) ಎಂಬ ಹೆಸರು ಬಂದಿದೆ. ಇಲ್ಲಿ ಮಗನನ್ನು ಪ್ರೇಮಿಸಿ, ಗಂಡನನ್ನು ದ್ವೇಷಿಸುವ ಚಿತ್ರ ಬರುತ್ತದೆ. ಫಿಡ್ರ, ಗ್ರೀಕ್ ನಾಟಕಕಾರ ಯೂರಿಪಿಡೀಸ್ (Euripides) ನ ಕೃತಿಯೊಂದರ ನಾಯಕಿ. ಅವಳು ತನ್ನ ಮಲಮಗ ಹಿಪೊಲೈಟಸ್ (Hippolytus)ನನ್ನು ಪ್ರೇಮಿಸಿದ ವಿಷಯ ಯೂರಿಪಿಡೀಸನ ನಾಟಕದಲ್ಲಿದೆ. ಇದೇ ವಸ್ತು ಭಾರತದ ಅಶೋಕ ಚಕ್ರವರ್ತಿಯ ಮಗ ಕುನಾಲನ ಕಥೆಯಲ್ಲಿದೆ. ಕನ್ನಡದ ಕುಮಾರರಾಮ ಮತ್ತು ರತ್ನಾಜಿಯರ ಕಥೆಯಲ್ಲೂ ಇದೇ ವಿಷಯ ಬಂದಿದೆ. ಈ ಕಥೆಗಳಲ್ಲಿ ನೇರವಾಗಿ ಮಗನ ಚಿತ್ರವನ್ನು ಉಪಯೋಗಿಸದೆ ಮಲಮಗನ ಚಿತ್ರವನ್ನು ಅಳವಡಿಸಿಕೊಂಡಿರುವುದು ಗಮನಿಸಬೇಕಾದ ವಿಚಾರ. ತಾಯಿ ಮಗನನ್ನು ಕೂಡುವುದು ಎಷ್ಟು ನಿಷಿದ್ಧವಾದುದೆಂದರೆ ಅದನ್ನು ಪೌರಾಣಿಕ ಅಥವಾ ಚಾರಿತ್ರಿಕ ಕೃತಿಗಳಲ್ಲಿ ಚಿತ್ರಿಸಲು ಕೂಡ ಸಾಹಿತಿಯ ಜಾಗೃತಮನಸ್ಸು ಒಪ್ಪು

ವುದಿಲ್ಲ. ಈಡಿಪಸ್‌ನ ತಾಯಿ ಜೊಕಾಸ್ಟ ಮಗನ ಜೊತೆ ಸಂಸಾರ ಮಾಡಿದ್ದರಿಂದ ಇದಕ್ಕೆ ಜೊಕಾಸ್ಟ ಕಾಂಪ್ಲೆಕ್ಸ್ ಎಂಬ ಹೆಸರು ಕೂಡ ಬಂದಿದೆ.

ತಾಯಿ ಮಕ್ಕಳನ್ನು ದ್ವೇಷಿಸುವ ಮಾನಸಿಕ ತುಮುಲಕ್ಕೆ ಮಿಡೀಯ ಕಾಂಪ್ಲೆಕ್ಸ್ ಎಂಬ ಹೆಸರಿದೆ. ಮಿಡೀಯ (Medea) ಗ್ರೀಕ್ ಪುರಾಣದ ನಾಯಕಿ. ಜೇಸನ್ (Jason) ನ ಪತ್ನಿ. ಇವರು ಅರ್ಗೋನಾಟ್ಸ್ (Argonauts) ಪುರಾಣದ ಪ್ರಮುಖ ಪಾತ್ರಗಳು. ಗಂಡನಿಂದ ವಂಚಿತಳಾದ ಮಿಡೀಯ, ಅವನ ಮೇಲೆ ಸೇಡು ತೀರಿಸಿಕೊಳ್ಳಲು, ತನ್ನ ಮಕ್ಕಳನ್ನು ಕೊಂದು ಜೇಸನ್ನನ ಅವನತಿಗೆ ಕಾರಣಳಾಗುತ್ತಾಳೆ. ಈ ಕಥೆ ಯೂರಿಪಿಡೀಸನ ನಾಟಕ ವಸ್ತು. ಇದೇ ವಿಷಯ ಲ್ಯಾಟಿನ್‌ನಲ್ಲಿ ಸೆನೆಕ (Seneca), ಜರ್ಮನಿಯ ಗ್ರಿಲ್‌ಪಾರ್ಜರ್ (Grillparzer), ಇಟಲಿಯ ಚೆರೂಬಿನಿ (Cherubini) ಮುಂತಾದವರ ಕೃತಿಗಳಲ್ಲೂ ಮೂಡಿಬಂದಿದೆ. ಹೆಣ್ಣಿಗೆ ತನ್ನ ದೈಹಿಕ ಆಕರ್ಷಣೆ ಅಳಿದು, ತನ್ನ ಮಗಳ ಸೌಂದರ್ಯ ಅರಳುವಾಗ ಉಂಟಾಗುವ ಅಸೂಯೆ. ಮಿಡೀಯ ಕಾಂಪ್ಲೆಕ್ಸಿನ ಉಗಮಕ್ಕೆ ಕಾರಣವೆಂಬುದು ಕೆಲವರ ಅಭಿಪ್ರಾಯ.

ಈಡಿಪಸ್ ಕಾಂಪ್ಲೆಕ್ಸ್‌ನಷ್ಟೇ ನಿಷಿದ್ಧವಾದ ಸೋದರ ಸೋದರಿಯರ ನಡುವಣ ಲೈಂಗಿಕ ಕಾಮನೆಗಳ ಅಭಿವ್ಯಕ್ತಿಗಳೂ ಸಾಹಿತ್ಯದಲ್ಲಿವೆ. ಆಂಗ್ಲ ಸಾಹಿತಿ ಬೈರನ್ನನ ಮ್ಯಾನ್‌ಫ್ರೆಡ್ (Manfred)ನಲ್ಲಿ ಈ ವಸ್ತುವಿದೆ. ಷಿಲ್ಲರ್ (Schiller) ನ ಬ್ರೈಡ್ ಆಫ್ ಮೆಸ್ಸಿನ (Bride of Messina) ಎಂಬ ಕೃತಿಯಲ್ಲಿ ಸೋದರ ಸೋದರಿಯರ ನಡುವಿನ ದ್ವೇಷದ ಚಿತ್ರಣವಿದೆ. ಮಾನವನ ಅತಿಕಾಮುಕತೆ (Erotomania) ಡಾನ್‌ವಾನ್ (Don Jvan) ಕಥೆಯಲ್ಲಿ ರಸವತ್ತಾಗಿ ರೂಪುಗೊಂಡಿದೆ. ಅತಿಕಾಮುಕತೆ ಈಡಿಪಸ್ ಕಾಂಪ್ಲೆಕ್ಸ್‌ಗೆ ಸಂಬಂಧಿಸಿದೆ. ಡಾನ್‌ವಾನ್ ಒಬ್ಬ ಮಾತೃಪ್ರೇಮಿ. ಅವನು ಈ ಅತೃಪ್ತ ಕಾಮನೆಯನ್ನು ಬೇರೆ ಹೆಣ್ಣುಗಳಲ್ಲಿ ಅರಸಿ ಸಿಕ್ಕದೆ ಅರಸುತ್ತಲೇ ಇರುತ್ತಾನೆ. ಡಾನ್‌ವಾನ್ ಪ್ರವೃತ್ತಿ ಸಲಿಂಗರತಿ (Homosexuality)ಯ ಒಂದು ಪರೋಕ್ಷ ಅಭಿವ್ಯಕ್ತಿಯೂ ಇರಬಹುದು. ವ್ಯಕ್ತಿ ತನ್ನಲ್ಲಿ ಸುಪ್ತವಾಗಿರುವ ಸಲಿಂಗ ರತ್ಯಾಸಕ್ತಿಯ ಅಸ್ತಿತ್ವ ಇಲ್ಲವೆಂದು ಸಾಧಿಸಲು ಹೂಡುವ ಸ್ವರಕ್ಷಣಾ ತಂತ್ರ ಅತಿ ಕಾಮುಕತೆ. ಹೆಣ್ಣಿನ ಅತಿಕಾಮುಕತೆಯ ಚಿತ್ರಣ ಸಾಹಿತ್ಯದಲ್ಲಿ ಹೇರಳವಾಗಿದೆ. ಬೈಬಲ್ಲಿನ ಡಿಲೈಲ (Delilah), ಹೋಮರನ ಹೆಲೆನ್, ಅಬ್ಬೆ ಪ್ರೀವೋಸ್ಟನ ಮನನ್ ಲಾಸ್ಕ (Mannan Lescaut), ಜೋಲಾನ ನಾನ (Nana), ಶೇಕ್ಸ್‌ಪಿಯರನ ಕ್ರೆಸಿಡ (Cressida) ಇವರೆಲ್ಲಾ ಚಿರಯೌವ್ವನೆಯರು, ರೂಪಸರ್ಪಿಣಿಯರು. ಇವರ ಕಾಮ ಅನೈತಿಕ, ಭಯಂಕರ, ಅಪಾಯಕಾರಿ. ಇವರು ಯಾರನ್ನು ಪ್ರೀತಿಸಿ ಅರಿಯರು. ಸಾಮಾನ್ಯವಾಗಿ ಇವರು ಫಲಹೀನರು—ಬಂಜೆಯರು. ಇವರ ಸಹವಾಸ

ಗಂಡಿನ ವಿನಾಶಕ್ಕೆ ಕಾರಣ. ಈ ವಿನಾಶಕಾರಕ ಸುಂದರಿಯರೆಲ್ಲಾ ಬೈಬಲ್ಲಿನಲ್ಲಿ ಬರುವ ಲಿಲಿತ್ (Lilith) ಎಂಬ ಹೆಣ್ಣಿನ ಪ್ರತೀಕಗಳು. ಲಿಲಿತ್ ಆದಮನ (Adam) ಮೊದಲ ಹೆಂಡತಿ ; ಅನುಪಮ ಸುಂದರಿ ; ಬಂಜೆ. ಆದಮನೊಡನೆ ೧೩೦ ವರ್ಷ ಗಳಿದ್ದು ಓಡಿ ಹೋದವಳು. ಇಂಥ ಹೆಣ್ಣುಗಳಿಗೆ ಬಲಿಯಾಗುವ ಗಂಡಿನ ಸ್ಥಿತಿಗೆ ಲಿಲಿತ್–ಮನೋರೋಗವೆಂದೇ ಹೆಸರು. ಭಾರತೀಯ ಸಾಹಿತ್ಯದಲ್ಲಿ ಈ ವಸ್ತು ಕಾಮಿನಿ, ಮೋಹಿನಿಯರಾಗಿ ಒಡಮೂಡಿದೆ.

ಸಾಹಿತ್ಯಕ್ಕೆ ಪ್ರೇರಕವಾಗುವ ಸುಪ್ತ ಲೈಂಗಿಕ ಬಯಕೆಗಳು ಇನ್ನೂ ಹಲವಾರಿವೆ. ಸ್ವಾನುರಕ್ತಿ (Narcissism), ಪರಪೀಡನಾರತಿ (Sadism), ಸ್ವಪೀಡನಾರತಿ (Mesochism), ಪ್ರದರ್ಶನಾಸಕ್ತಿ (Exhibitionism), ಮುಂತಾದುವೆಲ್ಲ ಸಾಹಿತ್ಯ ದಲ್ಲಿ ಅಭಿವ್ಯಕ್ತಿಗೊಂಡಿವೆ. ಇವೆಲ್ಲವುಗಳ ಹಿನ್ನೆಲೆಯಲ್ಲಿ ಕಾಮದ ವಾಸನೆಯಿದೆ. ಕೆಲವು ವಸ್ತುಗಳು ನಮಗೆ ಏಕಕಾಲದಲ್ಲಿ ಬಹುವಾಗಿ ಬೇಕು ಮತ್ತು ಅಷ್ಟೇ ತೀವ್ರ ವಾಗಿ ಬೇಡವೆನಿಸುತ್ತವೆ. ಕಾಮ ಇಂತಹ ವಸ್ತುಗಳಲ್ಲೊಂದು. ಲೈಂಗಿಕ ಬಯಕೆ ಗಳಲ್ಲಿ ನಮಗೆ ಆಸಕ್ತಿ ಇರುವಷ್ಟೇ ನಿಷೇಧಗಳೂ ಇವೆ. ಫ್ರಾಯ್ಡನ ಪ್ರಕಾರ ನಾವು ಯಾವುದನ್ನು ಅತಿಯಾಗಿ ಪ್ರೀತಿಸುವೆವೋ ಅದನ್ನು ಅಷ್ಟೇ ತೀವ್ರವಾಗಿ ದ್ವೇಷಿಸು ತ್ತೇವೆ ಕೂಡ. ಹೀಗೆ ಪ್ರೀತಿ ದ್ವೇಷಗಳು ಒಂದೇ ನಾಣ್ಯದ ಎರಡು ಮುಖಗಳು, ಈ ದ್ವಂದ್ವ, ಸಮರ, ತುಮುಲ ಮಾನವನ ಜೀವನದಲ್ಲಿ ಅನಿವಾರ್ಯ. ಸಾಹಿತ್ಯ ನಿರ್ಮಾಣ ಈ ಸಮಸ್ಯೆಗಳ ಪರಿಹಾರಕ್ಕೆ ಸಾಹಿತಿ ಕಂಡುಕೊಂಡ ಒಂದು ಸುಸಂಸ್ಕೃತ ಮಾರ್ಗ. ಇದು ಫ್ರಾಯ್ಡನ ಸಂಕ್ಷಿಪ್ತ ಅಭಿಪ್ರಾಯ.

### ಯೂಂಗನ ದೃಷ್ಟಿಯಲ್ಲಿ ಸಾಹಿತ್ಯ :

ಸಿಗ್ಮಂಡ್ ಫ್ರಾಯ್ಡ್ ಒಬ್ಬ ಮಹಾ ಪ್ರತಿಭಾವಂತ ವಿಜ್ಞಾನಿ. ಅಂದಮಾತ್ರಕ್ಕೆ ಅವನು ಹೇಳಿದ್ದೆಲ್ಲವೂ ಸತ್ಯವೆಂದು ಯಾರೂ ಒಪ್ಪಿಕೊಳ್ಳಬೇಕಾಗಿಲ್ಲ. ಅವನು ಒಬ್ಬ ವ್ಯಕ್ತಿ ತನ್ನ ಜೀವಮಾನದಲ್ಲಿ ಹೇಳಬಹುದಾದುದಕ್ಕಿಂತ ಹೆಚ್ಚಿಗೆ ಹೇಳಿಬಿಟ್ಟಿದ್ದಾನೆ. ಒಂದು ತಲೆಮಾರು ಜೀರ್ಣಿಸಿಕೊಳ್ಳಲಾರದಷ್ಟನ್ನು ಬರೆದಿದ್ದಾನೆ. ಹಲವಾರು ವಿಷಯ ಗಳನ್ನು ಉತ್ಪ್ರೇಕ್ಷೆ ಮಾಡಿದ್ದಾನೆ. ಅವನು ಸೃಷ್ಟಿಸಿದ ಕೆಲವು ಪರಿಕಲ್ಪನೆಗಳಿಗೆ ಅವು ಭರಿಸಲಾರದಷ್ಟು ಅರ್ಥಾರೋಪ ಮಾಡಿದ್ದಾನೆ. ಫ್ರಾಯ್ಡನ ಕೆಲವು ಸಿದ್ಧಾಂತಗಳನ್ನು ಅವನ ಆಪ್ತರೂ ಪೂರ್ಣವಾಗಿ ಅಂಗೀಕರಿಸುವುದಿಲ್ಲ. ಅವರಲ್ಲಿ ಕಾರ್ಲ್ ಯೂಂಗ್ ಒಬ್ಬ. ಒಂದು ಕಾಲದಲ್ಲಿ ಫ್ರಾಯ್ಡನ ಅನುಯಾಯಿಯಾಗಿದ್ದು, ಅವನ ಸಿದ್ಧಾಂತ ಗಳನ್ನು ಒಪ್ಪದೆ, ತನ್ನದೇ ಆದ ವಿಚಾರ ಸರಣಿಯನ್ನು ಬೆಳೆಸಿಕೊಂಡು ಪ್ರಖ್ಯಾತಿ

ಹೊಂದಿದ ಒಬ್ಬ ಸ್ವಿಸ್ ಮನೋವಿಜ್ಞಾನಿ ಯೂಂಗ್ (Jung)[8]. ಸಾಹಿತ್ಯಕ್ಕೆ ಸುಪ್ತ ಚೇತನದ ಅತೃಪ್ತ ಲೈಂಗಿಕ ಬಯಕೆಗಳು ಕಾರಣವೆಂಬುದನ್ನು ಒಪ್ಪುವುದಿಲ್ಲ ವಾದರೂ, ಅದಕ್ಕೆ ಪ್ರೇರಣೆ ಸುಪ್ತಚೇತನದಿಂದ ಬರುತ್ತದೆಂಬುದನ್ನು ಯೂಂಗ್ ಅಲ್ಲಗಳೆಯುವುದಿಲ್ಲ. ಸಾಹಿತ್ಯ ಮಾನಸಿಕ ಅಸ್ವಸ್ಥತೆಯ ಅಭಿವ್ಯಕ್ತಿ ಎಂಬುವ ವಾದ ವನ್ನೂ ಅವನು ನಿರಾಕರಿಸುತ್ತಾನೆ. ಕಲೆ ಮನೋರೋಗದ ಸಂಕೇತವೂ ಅಲ್ಲ, ಮನೋರೋಗ ಕಲೆಯೂ ಅಲ್ಲ ಎನ್ನುವ ಯೂಂಗ್, ಸಾಹಿತ್ಯಕ್ಕೆ ಫ್ರಾಯ್ಡ್ ಹಚ್ಚಿದ್ದ ರೋಗದ ಕಳಂಕವನ್ನು ನಿವಾರಿಸುವ ಪ್ರಯತ್ನ ಮಾಡಿದ್ದಾನೆ. ಅವನ ಪ್ರಕಾರ ಸಾಹಿತ್ಯ ಮನಸ್ಸಿನ ವಿಕಾಸದ ದ್ಯೋತಕ, ಮನಃಸ್ವಾಸ್ಥ್ಯದ ಅಭಿವ್ಯಕ್ತಿ. ಕಲೆ ಮತ್ತು ಸಾಹಿತ್ಯ ಒಬ್ಬ ವ್ಯಕ್ತಿಯ ಮೂಲಕ ನಡೆಯುವ ಮಾನವೀಯತೆಯ ಸಂಯುಕ್ತ ಅಭಿವ್ಯಕ್ತಿ. ಸಾಹಿತ್ಯ ಮತ್ತು ಮನೋವ್ಯಾಧಿ ಒಂದೇ ಮೂಲದಿಂದ ಬಂದಿರಬಹುದಾದರೂ, ಅವೆರಡೂ ಒಂದೇ ಅಲ್ಲ. ಹಾಗೆ ನೋಡಿದರೆ, ಫ್ರಾಯ್ಡ್‌ನ ಪ್ರಕಾರ ಧರ್ಮ (Religion), ದರ್ಶನ (Philosophy), ಸಾಹಿತ್ಯ, ಹಾಗೂ ಮನೋವ್ಯಾಧಿ, ಇವುಗಳೆಲ್ಲದರ ಮೂಲವೂ ಒಂದೆ. ಆದರೆ ಅವೆಲ್ಲಾ ಒಂದೇ ಅಲ್ಲ ವೆಂಬುದು ಯೂಂಗನ ಅಭಿಮತ.

ಯೂಂಗ್ ಸಾಹಿತ್ಯವನ್ನು ಮನೋವೈಜ್ಞಾನಿಕ ಹಾಗೂ ದಾರ್ಶನಿಕವೆಂದು ವಿಂಗಡಿಸಿರುವ ವಿಚಾರ ಈಗಾಗಲೇ ಬಂದಿದೆ. ಅವನ ಆಸಕ್ತಿ ಇರುವುದೆಲ್ಲಾ ದಾರ್ಶನಿಕ ಕೃತಿಗಳಲ್ಲೆ. ಸಾಹಿತ್ಯಕ್ಕೆ ವಸ್ತು ಒದಗುವುದು ದರ್ಶನಾನುಭವಗಳಿಂದ. ಈ ದರ್ಶನಗಳು ಮೂಡಿಬರುವುದು ಸುಪ್ತಚೇತನದಿಂದ. ಯೂಂಗನ ಸುಪ್ತಚೇತನ ಸಿದ್ಧಾಂತ ಫ್ರಾಯ್ಡ್‌ನದಕ್ಕಿಂತ ಕೊಂಚ ಭಿನ್ನವಾದುದು. ಅವನ ಪ್ರಕಾರ ಸುಪ್ತ ಚೇತನದಲ್ಲಿ ಎರಡು ಪದರಗಳಿವೆ : ಒಂದು ವೈಯಕ್ತಿಕ ಸುಪ್ತಚೇತನ (personal unconscious) ; ಇನ್ನೊಂದು ಸಾಮೂಹಿಕ ಸುಪ್ತಚೇತನ (collective unconscious). ಒಬ್ಬ ವ್ಯಕ್ತಿಯ ಅನುಭವಗಳು ಮಾತ್ರ ಮೊದಲನೆಯದಲ್ಲಿರು ತ್ತವೆ. ಆದರೆ ಸಾಮೂಹಿಕ ಸುಪ್ತಚೇತನದ ವಿಷಯಗಳು ಹಾಗಲ್ಲ. ಅವು ಅನುವಂಶಿಕವಾದವು ; ಇಡೀ ಮಾನವ ಜನಾಂಗ ತನ್ನ ವಿಕಾಸದ ಹಾದಿಯಲ್ಲಿ ಅನುಭವಿಸಿದ ಘಟನೆಗಳ ಸಂಚಿತ ಸಾರ ಸಂಗ್ರಹ. ವಿಶ್ವದಲ್ಲಿ ಜೀವೋತ್ಪತ್ತಿಯಾದಂದಿ ನಿಂದ ಇಂದಿನವರೆಗೆ ಜೀವಿಗೆ ಆಗಿರಬಹುದಾದ ಅನುಭವಗಳ ಪಳೆಯುಳಿಕೆಗಳು ಅಲ್ಲಿರುತ್ತವೆ. ಸಾಮೂಹಿಕ ಸುಪ್ತಚೇತನ ಮಾನವರೆಲ್ಲರಲ್ಲೂ ಇರುವ ಸಾಮಾನ್ಯ ಪದರ ; ಮಾನವೀಯತೆಯ ಅಡಿಪಾಯ. ಯೂಂಗನ ಪ್ರಕಾರ ಸಾಹಿತ್ಯಕ್ಕೆ ಪ್ರೇರಣೆ ಬರುವುದು ಇಲ್ಲಿಂದ.

---

8. ಎಂ. ಬಸವಣ್ಣ: ಯೂಂಗನ ಮನೋವೈಜ್ಞಾನಿಕ ಸಿದ್ಧಾಂತಗಳು. ಬೆಂಗಳೂರು ವಿಶ್ವವಿದ್ಯಾಲಯ, ೧೯೭೪.

ದಾರ್ಶನಿಕ ಸಾಹಿತ್ಯಕ್ಕೆ ವೈಯಕ್ತಿಕ ಅನುಭವಗಳು ಕಾರಣವೆಂಬುದನ್ನು ಯುಂಗ್ ಒಪ್ಪುವುದಿಲ್ಲ. ಫ್ರಾಯ್ಡ್‌ನ ಸಿದ್ಧಾಂತಗಳು ಒಬ್ಬ ಸಾಹಿತಿ ಏಕೆ ಬರೆದ. ಹೇಗೆ ಬರೆದನೆನ್ನುವುದನ್ನು ಹೇಳಬಲ್ಲವೇ ಹೊರತು ಏನು ಬರೆದನೆಂಬುದನ್ನು ವಿವರಿಸಲಾರವು, ಸಾಹಿತ್ಯದ ವಸ್ತುವಿನ ಮೇಲೆ ಬೆಳಕು ಚೆಲ್ಲಲಾರವು ಎನ್ನುತ್ತಾನೆ ಯುಂಗ್. ಅವನ ಪ್ರಕಾರ. ಒಬ್ಬ ವ್ಯಕ್ತಿ ಕಲೆಯನ್ನು ನಿರ್ಮಿಸುವುದಕ್ಕಿಂತ ಹೆಚ್ಚಾಗಿ, ಕಲೆಯೇ ಒಬ್ಬ ವ್ಯಕ್ತಿಯನ್ನು ನಿರ್ಮಿಸುತ್ತದೆ. ಕಲೆ ಒಂದು ಬಗೆಯ ಸಹಜ ಸ್ವಾಭಾವಿಕ ಶಕ್ತಿಪ್ರವಾಹ ; ಕಲೆ ಒಂದು ಜನಾಂಗದ, ಒಂದು ಸಮಾಜದ ಸಾಮೂಹಿಕ ಚಿಂತನೆಗಳ ಸಂಯುಕ್ತ ಅಭಿವ್ಯಕ್ತಿ, ಯುಗಶಕ್ತಿಯ ಅಭಿವ್ಯಕ್ತಿ. ಕಲೆ ಒಬ್ಬ ಸಿದ್ಧವ್ಯಕ್ತಿಯನ್ನು ಆರಿಸಿಕೊಂಡು ಅವನ ಮೂಲಕ ಪ್ರವಹಿಸುತ್ತದೆ. ಈ ದೃಷ್ಟಿಯಲ್ಲಿ ಕಲಾವಿದನ ವೈಯಕ್ತಿಕ ಒಲವು, ಆಶೋತ್ತರಗಳೇನೇ ಇದ್ದರೂ ಅವನೊಬ್ಬ ಸಮಷ್ಟಿ ಮಾನವ (collective man). ಜನಾಂಗದ ಆಲೋಚನೆಗಳ ಅಭಿವ್ಯಕ್ತಿಗೆ ಅವನೊಂದು ಮಾಧ್ಯಮ. ಒಂದು ರೀತಿಯಲ್ಲಿ ಸಾಹಿತಿಯೊಬ್ಬ ಸಮಾಜ ಸೇವಕ. ಹೀಗೆ ಸಾರ್ವಜನಿಕ ಕಾರ್ಯದಲ್ಲಿ ನಿರತನಾದ ಸಾಹಿತಿ ಹಲವು ವೇಳೆ ವೈಯಕ್ತಿಕವಾಗಿ ಬಹಳ ತ್ಯಾಗಮಾಡಬೇಕಾಗಿ ಬರುತ್ತದೆ. ಅವನಲ್ಲಿ ಎರಡು ಪರಸ್ಪರ ವಿರೋಧಿ ಶಕ್ತಿಗಳು ಕಾರ್ಯನಿರತವಾಗಿರುತ್ತವೆ. ಒಂದು ವೈಯಕ್ತಿಕ ಸುಖ, ಶಾಂತಿ, ಭದ್ರತೆಗಳಿಗೆ ಸಂಬಂಧಿಸಿದ್ದು : ಇನ್ನೊಂದು ಅದಮ್ಯ ಸೃಜನಾತ್ಮಕ ಭಾವೋದ್ರೇಕಕ್ಕೆ ಸಂಬಂಧಿಸಿದ್ದು. ಈ ಎರಡನೆಯ ಪ್ರವೃತ್ತಿ ಮೊದಲನೆಯದನ್ನು ಮೆಟ್ಟಿ ನಿಲ್ಲುತ್ತದೆ. ಈ ಕಾರಣದಿಂದ ಸಾಹಿತಿಯ ವೈಯಕ್ತಿಕ ಜೀವನ ದುರ್ಭರವಾಗುತ್ತದೆ ; ದುಃಖಕರವಾಗುತ್ತದೆ ; ಒಂದೊಂದು ವೇಳೆ ದುರಂತಮಯವಾಗುತ್ತದೆ. ಸಾಹಿತಿಗಳ ಜೀವನ ಕೊರತೆಗಳಿಂದ ತುಂಬಿರುತ್ತದೆ. ಹೀಗೆ ಸೃಜನಾತ್ಮಕವರಕ್ಕೆ ಅವನು ತೆರುವ ಬೆಲೆ ಅಪಾರವಾದುದು. ಈ ಸಂದರ್ಭದಲ್ಲಿ ಎಮಿಲಿಜೋಲ ತನ್ನ ಕೃತಿಯೊಂದರ ನಾಯಕನ ಬಾಯಿಂದ ನುಡಿಸಿರುವ ಮಾತುಗಳು ಬಹಳ ಅರ್ಥಪೂರ್ಣವಾಗಿವೆ : "ನನ್ನ ಕೃತಿ ನನ್ನ ಜೀವನವನ್ನು ಅಪಹರಿಸಿತು. ಕೊಂಚ ಕೊಂಚವಾಗಿ ನನ್ನ ತಾಯಿ, ಪತ್ನಿ, ನಾನು ಪ್ರೀತಿಸುವ ಎಲ್ಲವನ್ನೂ ಕಸಿದುಕೊಂಡಿತು. ಅದೊಂದು ರೋಗಾಣುವಿನಂತೆ...ಬೆಳಗ್ಗೆ ಎದ್ದ ತಕ್ಷಣ ಅದು ನನ್ನನ್ನು ನನ್ನ ಮೇಜಿಗೆ ಕಟ್ಟಿ ಹಾಕುತ್ತದೆ ; ಉಸಿರಾಡಲೂ ಬಿಡುವುದಿಲ್ಲ. ನಾನು ಊಟಕ್ಕೆ ಹೋದರೆ ಅದು ಅಲ್ಲಿಗೂ ಹಿಂಬಾಲಿಸಿ ಬರುತ್ತದೆ ; ಬೆಪ್ಪನಂತೆ ಮಾತುಗಳನ್ನೆ ರೊಟ್ಟಿಯ ಜತೆ ಅಗಿಯುತ್ತೇನೆ. ನಾನು ಹೊರಗೆ ಹೋದಾಗ ಅದು ನನ್ನ ಹಿಂದೆ ಬರುತ್ತದೆ. ಮನೆಗೆ ಬಂದಾಗ ನನ್ನೊಡನೆ ಬಂದು ಒಂದೇ ತಟ್ಟೆಯಲ್ಲಿ ಊಟ ಮಾಡುತ್ತದೆ. ಸಾಯಂಕಾಲ ನನ್ನೊಡನೆ ಒಂದೇ ದಿಂಬಿನ ಮೇಲೆ ಮಲಗುತ್ತದೆ. ನಿದ್ದೆಯಲ್ಲೂ ಅದು ಬೆಳೆಯುತ್ತಲೇ ಇರುತ್ತದೆ. ನಾನು ರಚಿಸುತ್ತಿರುವ ಗ್ರಂಥವನ್ನು ತಡೆಹಿಡಿಯುವ

ಶಕ್ತಿ ನನ್ನಲಿಲ್ಲ"[9]. ಈ ಮಾತುಗಳು ಜೋಲಾನ ಸ್ವಂತ ಅನುಭವದ ವರ್ಣನೆ ಯೆಂದರೂ ತಪ್ಪಲ್ಲ.

ಮಹಾಕಾವ್ಯದ ವಸ್ತು ಒಂದು ಜನಾಂಗದ ಚಿಂತನೆಗಳ ಸಂಯುಕ್ತ ಅಭಿವ್ಯಕ್ತಿ ಎನ್ನುವ ಯುೂಂಗನ ಮಾತು ಬಹಳ ಮಟ್ಟಿಗೆ ಸತ್ಯ. ಉದಾಹರಣೆಗೆ ರಾಮ, ಕೃಷ್ಣ, ಹರಿಶ್ಚಂದ್ರ ಮುಂತಾದ ಪ್ರತಿಮೆಗಳು ವಾಲ್ಮೀಕಿ, ವ್ಯಾಸ, ರಾಘವಾಂಕರ ವೈಯಕ್ತಿಕ ಕಲ್ಪನೆಯ ಚಿತ್ರಗಳಲ್ಲ. ಅವು ಒಂದು ಜನಾಂಗದ, ಒಂದು ಕಾಲಧರ್ಮದ ಅಭಿಪ್ರಾಯಗಳ ಸಮಷ್ಟಿ ಚಿತ್ರಗಳು. ಸಾಹಿತಿಗಳ ಮೂಲಕ ಅವು ಅಭಿವ್ಯಕ್ತಿಗೊಳ್ಳು ತ್ತವೆ. ಪ್ರತಿಯೊಂದು ಜನಾಂಗಕ್ಕೂ ತನ್ನದೇ ಆದ ವಿಶಿಷ್ಟ ವ್ಯಕ್ತಿತ್ವವಿರುತ್ತದೆ ; ಮೌಲ್ಯಗಳಿರುತ್ತವೆ ; ಆಲೋಚನೆಗಳಿರುತ್ತವೆ. ಇವು ಜನಾಂಗದ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಸುಪ್ತವಾಗಿ ಉಳಿದಿರುತ್ತವೆ. ಅವಕಾಶ ದೊರಕಿದಾಗ ಪ್ರತಿಭಾವಂತ ನೊಬ್ಬನ ಮೂಲಕ ಸಾಹಿತ್ಯದ ರೂಪದಲ್ಲಿ ಹೊರಬೀಳುತ್ತವೆ. ಮಾಸ್ತಿಯವರು "ಒಂದೊಂದು ಜನಾಂಗಕ್ಕೂ ಅದರ ರಾಗದ ಅವಸ್ಥೆಗೆ ಅನುಗುಣವಾಗಿ ಸಾಹಿತ್ಯ ಬರುವುದು" ಎಂದಿರುವುದು, ಹಾಗೆಯೇ, ಕುರ್ತಕೋಟಿಯವರು "ಸಾಹಿತ್ಯ ಸ್ವರೂಪ, ಉದ್ದೇಶ, ಪ್ರಯೋಜನಗಳು ಒಬ್ಬ ಲೇಖಕನ ಪ್ರತಿಭೆಯಷ್ಟನ್ನೇ ಅವಲಂಬಿಸಿರದೆ ಒಂದು ನಾಡಿನ ಸಂಸ್ಕೃತಿ ಹಾಗೂ ವೈಚಾರಿಕತೆಯನ್ನು ಅವಲಂಬಿಸಿರುತ್ತದೆ" ಎಂದು ಹೇಳಿರುವುದು ಯುೂಂಗನ ಅಭಿಪ್ರಾಯವನ್ನೇ ಪ್ರತಿಬಿಂಬಿಸುತ್ತವೆ. ಅಂದ ಮೇಲೆ ಕೃಷ್ಣನೆಂಬ ಕಲ್ಪನೆ ಒಬ್ಬ ವ್ಯಕ್ತಿಯ ಅನುಭವದ ಫಲವಲ್ಲ ; ಅದು ಸಾರ್ವಜನಿಕವಾದ ಒಂದು ಮಾನವೀಯ ಅನುಭವದ ಪ್ರತೀಕ ; ಕೃಷ್ಣನೆಂಬುದು ಒಂದು ವಿಶ್ವಪ್ರತಿಮೆ. ಅದು ಹೊರಬೀಳಲು ವ್ಯಾಸ ಒಂದು ಮಾಧ್ಯಮ. ವ್ಯಾಸ ಕೃಷ್ಣನನ್ನು ಸೃಷ್ಟಿಸಿದ ನೆನ್ನುವುದಕ್ಕಿಂತ, ಕೃಷ್ಣ ವ್ಯಾಸನನ್ನು ಸೃಷ್ಟಿಸಿದನೆಂಬುದು ಬಹಳಮಟ್ಟಿಗೆ ಸತ್ಯ. ಕುವೆಂಪು ಅವರ "ಶ್ರೀ ಕುವೆಂಪುವ ಸೃಜಿಸಿದೀ ಮಹಾ ಛಂದಸ್ಸಿನ ಮೇರು ಕೃತಿ, ಮೇಣ್ ಜಗದ್ಭವ್ಯರಾಮಾಯಣಂ !" ಎನ್ನುವ ನುಡಿ ಈ ವಾದಕ್ಕೊಂದು ನಿದರ್ಶನ.

---

9. "Listen, my work has robbed me of my life. Little by little it has deprived me of my mother, of my wife, of all I love. It is a microbe---The moment I jump out of my bed in the morning, my work seizes hold of me and nails me to my desk, without allowing me a mouthful of fresh air. It follows me to lunch ; dumbly I masticate my phrases with my bread. It follows me when I go out ; comes home with me to dine off the same plate ; lies down again in the evening on my pillow—so pitiless that I have no power to stop the book I am composing—even in my sleep it continues its vegetable growth. No one Exists any more outside my self."—The writer Sandoz in Zola's L'OEuvre.

ಜನರಿಗೆ ಕೃಷ್ಣನ ಪರಿಚಯವಿರುವಷ್ಟು ವ್ಯಾಸನ ಪರಿಚಯವಿಲ್ಲ ; ರಾಮನ ಪರಿಚಯವಿರುವಷ್ಟು ವಾಲ್ಮೀಕಿ ಪರಿಚಯವಿಲ್ಲ. ವ್ಯಾಸನಿಗಿಂತ ಕೃಷ್ಣನ ಕಲ್ಪನೆ ಮಹತ್ತರವಾದುದು. ಕವಿಗಿಂತ ಕಾವ್ಯ ಹಿರಿದಾಗಿ ಬೆಳೆದು ನಿಲ್ಲುತ್ತದೆ, ತಾಯಿಗಿಂತ ಮಗು ಹಿರಿದಾಗಿ ಬೆಳೆದಂತೆ. ಆದುದರಿಂದ ಹೋಮರಿನಿಗಿಂತ ಇಲೀಯಡ್ ದೊಡ್ಡದು ; ಗಯಟೆಗಿಂತ ಫೌಸ್ಟ್ (Faust) ದೊಡ್ಡದು ; ವಾಲ್ಮೀಕಿಗಿಂತ ರಾಮಾಯಣ ದೊಡ್ಡದು ; ವ್ಯಾಸನಿಗಿಂತ ಭಾರತ ದೊಡ್ಡದು. ಇದರಲ್ಲಿ ಅನುಮಾನಕ್ಕೆ ಆಸ್ಪದವೇ ಇಲ್ಲ. ಜೀವಂತ ಕಾವ್ಯ ವಿಶ್ವಪ್ರತಿಮೆ (universal arche type) ಯೊಂದರ ಆವಿಷ್ಕಾರ. ಅದು ಅವತರಿಸಲು ಪ್ರೇರಣೆ ಹಾಗೂ ಪರಿಸರ ಬೇಕು. ಸಾಹಿತಿ ತನಗಾದ ದರ್ಶನಾನುಭವಕ್ಕೆ ಒಂದು ರೂಪಕೊಟ್ಟು, ಅದಕ್ಕೊಂದು ಹಿನ್ನಲೆಯನ್ನು ರಚಿಸಿ ಜನರಿಗೆ ನಿವೇದಿಸುತ್ತಾನೆ. ಅದನ್ನು ವಿವರಿಸು ವುದು, ಅರ್ಥೈಸುವುದು ಜನರಿಗೆ ಸೇರಿದ್ದು ಎಂಬುದು ಯೂಂಗನ ಅಭಿಪ್ರಾಯ.

## ಆಧುನಿಕ ಮನಶ್ಶಾಸ್ತ್ರದಲ್ಲಿ ಸಾಹಿತ್ಯ:

ಫ್ರಾಯ್ಡ್ ಮತ್ತು ಯೂಂಗನ ನಂತರ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ ಮನೋವಿಜ್ಞಾನಿಗಳು ಬಹಳ ವಿರಳ. ಅದರಲ್ಲೂ ಫ್ರಾಯ್ಡ್ ಮತ್ತು ಯೂಂಗನ ಮಟ್ಟಕ್ಕೆ ಏರಬಲ್ಲವರು ಯಾರೂ ಇಲ್ಲ. ಈ ಮೊದಲೇ ಹೇಳಿದಂತೆ, ಆಧುನಿಕ ಮನೋವಿಜ್ಞಾನಿಗಳ ಪ್ರಕಾರ ಸಾಹಿತ್ಯ ರಚನೆ ಒಂದು ಸಂಕೀರ್ಣವಾದ ಮಾನಸಿಕ ಕ್ರಿಯೆ. ಇದಕ್ಕೆ ನಿರ್ದಿಷ್ಟ ಕಾರಣಗಳನ್ನು ಹೇಳುವುದು ಕಷ್ಟ, ಮಾನವನ ಅನುಭವಗಳಿಗೆ ಕಾರಣಗಳು ಹಲವಾರು. ಯಾವುದೇ ಒಂದು ಅನುಭವ ಒಂದೇ ಕಾರಣದಿಂದ ಹುಟ್ಟಿಬರುವುದಿಲ್ಲ. ಒಂದೇ ಅನುಭವ ಬೇರೆ ಬೇರೆ ವ್ಯಕ್ತಿಗಳಲ್ಲಿ ಬೇರೆ ಬೇರೆ ಕಾರಣದಿಂದ ಹುಟ್ಟಲೂಬಹುದು. ಆದುದರಿಂದ ಫ್ರಾಯ್ಡ್ ಹೇಳಿದ ಸುಪ್ತಲೈಂಗಿಕ ಪ್ರವೃತ್ತಿಗಳಷ್ಟೇ ಸಾಹಿತ್ಯಕ್ಕೆ ಪ್ರೇರಣೆ ಎಂಬ ಮಾತನ್ನು ಆಧುನಿಕ ಮನೋವಿಜ್ಞಾನಿಗಳು ಒಪ್ಪುವುದಿಲ್ಲ. ಫ್ರಾಯ್ಡ್ ಹೇಳಿರುವುದು ಒಂದು ಕಾರಣ. ಯೂಂಗ್ ಹೇಳಿದ್ದು ಇನ್ನೊಂದು. ಫ್ರಾಯ್ಡ್ ಮತ್ತು ಯೂಂಗರಿಗೆ ತಿಳಿಯದ, ನಾವು ತಿಳಿದಿಲ್ಲದ ಹಲವು ಕಾರಣಗಳು ಸಾಹಿತ್ಯಸೃಷ್ಟಿಗೆ ಇರಬಹುದು. ಹಾಗೆ ನೋಡಿದರೆ, ಫ್ರಾಯ್ಡ್‌ನಿಂದ ಆರಂಭವಾದ ಮನೋವೈಜ್ಞಾನಿಕ ಸಾಹಿತ್ಯ ವಿಶ್ಲೇಷಣೆ ನಡೆದು ಬಂದ ಹಾದಿಯಲ್ಲಿ ಒಂದು ಕ್ರಮ ಕಂಡುಬರುತ್ತದೆ. ಫ್ರಾಯ್ಡ್ ಪ್ರಕಾರ ಸಾಹಿತ್ಯಕ್ಕೆ ಪ್ರೇರಣೆ ಸುಪ್ತಮನಸ್ಸಿನ ಲೈಂಗಿಕ ಸಮಸ್ಯೆಗಳು. ಯೂಂಗನ ಕಾಲಕ್ಕೆ ಅದು ಸುಪ್ತಮನಸ್ಸಿನ ಸಮಸ್ಯೆಗಳಷ್ಟೇ ಆಯಿತು. ಇಂದಿನವರ ಪ್ರಕಾರ ಕೇವಲ ಮನಸ್ಸಿನ ಸಮಸ್ಯೆಗಳಾಗಿ ಉಳಿದಿವೆ. ಅವು ವ್ಯಕ್ತಿಯ ಆಂತರಿಕ ಸಮಸ್ಯೆಗಳಾಗಿರ ಬಹುದು ಅಥವಾ ವ್ಯಕ್ತಿಗಳ ನಡುವಣ ಸಮಸ್ಯೆಗಳಾಗಿರಬಹುದು. ಅವು ಪ್ರಜ್ಞಾತ್ಮಕ ವಾಗಿರಬಹುದು ಇಲ್ಲವೇ ಅಪ್ರಜ್ಞಾತ್ಮಕವಾಗಿರಬಹುದು. ಸಮಸ್ಯೆಗಳು ಲೈಂಗಿಕ,

ಬೌದ್ಧಿಕ, ಧಾರ್ಮಿಕ, ಕೌಟುಂಬಿಕ, ಸಾಮಾಜಿಕ ಅಥವಾ ದಾರ್ಶನಿಕವಾಗಿರಬಹುದು. ಸಮಸ್ಯೆಗಳನ್ನು ಪರಿಹರಿಸಲು ಬೇರೆ ಬೇರೆ ವ್ಯಕ್ತಿಗಳು ಬೇರೆ ಬೇರೆ ಮಾರ್ಗವನ್ನವಲಂಬಿಸುತ್ತಾರೆ. ಕೆಲವರು ಸಾಹಿತ್ಯ ರಚನೆಯ ಮೂಲಕ ತಮ್ಮ ಸಮಸ್ಯೆಗಳಿಗೆ ಪರಿಹಾರ ಹುಡುಕುತ್ತಾರೆ. ಅವರು ಸಾಹಿತಿಗಳಾಗುತ್ತಾರೆ. ಆದರೆ ಯಾವ ಸಾಹಿತಿಯೂ ತನ್ನ ಸಮಸ್ಯೆಗೆ ಪೂರ್ಣ ಪರಿಹಾರವನ್ನು ಕಂಡುಕೊಂಡಾಗ ಬರೆಯಲಾರ. ಅವನು ಹೇಳುವುದೆಲ್ಲಾ ತನಗೊಂದು ಸಮಸ್ಯೆ ಇದೆ, ಅದಕ್ಕೊಂದು ಪರಿಹಾರ ಅವಶ್ಯಕವೆಂದು. ಅಂದರೆ ಸಾಹಿತ್ಯ ಮನಸ್ಸಿನ ತುಮುಲ ಅಥವಾ ಸಂಘರ್ಷಗಳ ಅಭಿವ್ಯಕ್ತಿ. ಆಂಡ್ರೆಮಾರ್ವ (Andre Maurois) ಎಂಬ ಫ್ರೆಂಚ್ ಬರೆಹಗಾರನ ಪ್ರಕಾರ, "ಬರೆಹದ ಮೂಲಕ ತನ್ನನ್ನು ತಾನು ಹೊರಸೂಸುವ ಬಯಕೆ, ಕಾರ್ಯರೂಪದಲ್ಲಿ ಪರಿಹರಿಸಿಕೊಳ್ಳಲಾಗದ ಜೀವನದ ಸಂದಿಗ್ಧಗಳು ಅಥವಾ ಆಂತರಿಕ ಸಂಘರ್ಷಗಳಿಂದ ಉದ್ಭವಿಸುತ್ತದೆ"[10]. ಈ ಮಾತನ್ನು ಆಧುನಿಕ ಮನೋವಿಜ್ಞಾನಿಗಳು ಒಪ್ಪುತ್ತಾರೆ. ಸಮಕಾಲೀನ ಮನೋವಿಜ್ಞಾನಿ ಹಾಗೂ ಕವಯಿತ್ರಿ ಹಾರೊವರ್‌ಳ (Horrower) ಮಾತುಗಳಲ್ಲಿ ಇದೇ ಅಭಿಪ್ರಾಯ ಪ್ರತಿಬಿಂಬಿತವಾಗಿದೆ : "ಪದ್ಯರಚನೆ ನನ್ನ ಆಂತರಿಕ ಸಂಘರ್ಷಗಳನ್ನು ಪರಿಹರಿಸುತ್ತದೆ : ನನ್ನ ಅನಿಸಿಕೆಗಳು, ಚಿಂತನೆಗಳನ್ನು ಸ್ಪಷ್ಟೀಕರಿಸುತ್ತದೆ ; ನನ್ನ ಅಂತರಂಗದ ಗೊಂದಲವನ್ನು ಪರಿಹರಿಸಿ ಅಲ್ಲಿ ಒಂದು ವ್ಯವಸ್ಥಿತ ಪರಿಸ್ಥಿತಿಯನ್ನುಂಟುಮಾಡುತ್ತದೆ. ಯಾವುದೋ ಒಂದು ಬಾಹ್ಯ ಪ್ರಚೋದನೆ ನನ್ನಲ್ಲಿ ಭಾವಗಳ ಮಹಾಪೂರವನ್ನುಂಟುಮಾಡಿ, ನಾನು ಅವುಗಳ ಕೈವಶವಾದಾಗ ಪದ್ಯ ಬರೆಯುತ್ತೇನೆ. ಭಾವೋದ್ವೇಗಗಳನ್ನು ತಗ್ಗಿಸಿ, ನಿಯಂತ್ರಣಕ್ಕೊಳಪಡಿಸಬೇಕಾದರೆ ನನಗೆ ಬರವಣಿಗೆಯಂತಹ ಬೌದ್ಧಿಕ ಕ್ರಿಯೆ ಅವಶ್ಯಕ. ಆಗ ಮಾತ್ರ ನನ್ನನ್ನು ನಿಯಂತ್ರಿಸ ಹೊರಟಿದ್ದ ಚಿಂತನೆಗಳನ್ನು ನಾನು ನಿಯಂತ್ರಿಸುವುದು ಸಾಧ್ಯವಾಗುತ್ತದೆ".[11]

---

10. "The need to express oneself in writing springs from a maladjustment to life, or from an inner conflict, which, man cannot resolve in action."

11. "I write poems because they solve a conflict, because I am ill at ease spiritually and I want to clarify my thoughts and feelings. I write poems because from some inner chaos, I am driven to create order. I write poems because I am flooded' over powered by feelings which have been provoked by some aspect of life or nature. The great bulk of feeling can only be subdued or brought under control if I allow some intellectual craftmanship to work on it, to produce a manageable thought which I can control in the place of all-pervading emotions which control me."

ಹೀಗೆ ಸಾಹಿತಿ ತನ್ನ ಸಾಹಿತ್ಯದ ಮೂಲಕ ಆತ್ಮಾಭಿವ್ಯಕ್ತಿಮಾಡುತ್ತಾನೆ. ತನ್ನ ಅನುಭವಗಳನ್ನು. ನೋವು ನಲಿವುಗಳನ್ನು ಇತರರೊಡನೆ ಹಂಚಿಕೊಳ್ಳುತ್ತಾನೆ. ತನ್ನ ಸಮಸ್ಯೆಗಳನ್ನು ಓದುಗರೊಡನೆ ಚರ್ಚಿಸುತ್ತಾನೆ. ಹೀಗೆ ಮಾಡಿದಾಗ ಮನಸ್ಸಿನ ದುಗುಡ ಹರಿದು ಹಗುರವಾಗುತ್ತದೆ; ದೃಷ್ಟಿಕೋನ ಸ್ಪಷ್ಟವಾಗುತ್ತದೆ. ಮನಸ್ಸು ನಿರ್ಮಲವಾಗುತ್ತದೆ. ಸಾಹಿತ್ಯ ಅಂತರಂಗದ ಕ್ಷೋಭೆಗೆ ಚಿಕಿತ್ಸೆಯಾಗುತ್ತದೆ. ಸಾಹಿತ್ಯದ ಚಿಕಿತ್ಸಾಗುಣ ಇಂದಿನ ಮನೋವಿಜ್ಞಾನಿಗಳಿಗೆ ಮನದಟ್ಟಾಗಿದೆ. ಈಗೀಗ ಸಾಹಿತ್ಯವನ್ನು ಮನೋವ್ಯಾಧಿಗಳಿಗೆ ಚಿಕಿತ್ಸೆಯಾಗಿ ಉಪಯೋಗಿಸಿಕೊಳ್ಳುವ ಪ್ರಯತ್ನಗಳು ಕಂಡುಬರುತ್ತಿವೆ. ನ್ಯೂಯಾರ್ಕಿನಲ್ಲಿ ಕವನ ಚಿಕಿತ್ಸಾಕೇಂದ್ರವೊಂದು ಅಸ್ತಿತ್ವದಲ್ಲಿದೆ. ಅಮೆರಿಕಾದ ಮನೋವಿಜ್ಞಾನಿಗಳ ಸಂಘ ಸಾಹಿತ್ಯಕ್ಕಿರುವ ಚಿಕಿತ್ಸಾ ಲಕ್ಷಣಗಳನ್ನು ಪರಿಶೀಲಿಸಲು ಇತ್ತೀಚೆಗೆ ಪರಿಣತರ ಸಮಾರೋಹ ಒಂದನ್ನು ಏರ್ಪಡಿಸಿತ್ತೆಂಬ ವಿಚಾರ ಆಧುನಿಕ ಮನೋವಿಜ್ಞಾನಿಗಳ ಸಾಹಿತ್ಯದ ಮೇಲಣ ಆಸಕ್ತಿಯನ್ನು ಎತ್ತಿತೋರಿಸುತ್ತದೆ.

# ಸಾಹಿತ್ಯ ಮತ್ತು ಮನೋವಿಜ್ಞಾನ

**ಗೌರೀಶ ಕಾಯ್ಕಿಣಿ**

ಪರಿಣಾಮದ ದೃಷ್ಟಿಯಿಂದಲೂ ಪ್ರೇರಣೆಯ ದೃಷ್ಟಿಯಿಂದಲೂ ಸಾಹಿತ್ಯಕ್ಕೂ ಮನೋಧರ್ಮಕ್ಕೂ ಘನಿಷ್ಠ ಸಂಪರ್ಕವಿದೆ ಮತ್ತು ಇದರ ರಹಸ್ಯವನ್ನು ನಮ್ಮ ಸಾಹಿತಿಗಳು ಪ್ರಾಚೀನ ಕಾಲದಿಂದಲೂ ಬಲ್ಲರು. ಅಂದು ಮನೋವಿಜ್ಞಾನವೆಂದು ಒಂದು ಶಾಸ್ತ್ರವಿಭಾಗ ಹುಟ್ಟಿ ಬೆಳೆದು ಬಂದಿದ್ದಿಲ್ಲ, ಮನಸ್ಸಿನ ಸಿಕ್ಕು-ಗಂಟುಗಳನ್ನು ಪರೆ-ಪದರಗಳನ್ನು ಅಶಾಂತ ಅಜಾಗೃತ ಜಾಗೃತ ಎಂಬೆಲ್ಲ ಪೃಥಃಕರಣದ ಪರಿಭಾಷೆಯನ್ನು ಸೊಫೋಕ್ಲಿಸ್ ಆಗಲಿ, ಭಾಸ-ಕಾಳಿದಾಸರಾಗಲಿ ಅರಿಯರು. ಆದಾಗ್ಯೂ ಅವರ ಕೃತಿಗಳಲ್ಲಿ ಇಂದಿನ ಅನೇಕ ಮನೋಗಂಡ (Complex)ಗಳ ವಿಕೃತಿ ವೈಶಿಷ್ಟ್ಯಗಳ ಹಾಗೂ ಸ್ವಪ್ನ ಉನ್ಮಾದ ಪ್ರಲೋಭಾದಿಗಳ ಪ್ರಭಾವಿಯಾದ ಪ್ರಯೋಗ ನಿರೂಪಣೆಯನ್ನು ನಾವು ಕಂಡು ಇಂದಿಗೂ ಚಕಿತರಾಗುತ್ತೇವೆ.

ಇಂದು ಮನೋವಿಶ್ಲೇಷಣತಜ್ಞರು ಕಂಡು ಹಿಡಿದ ಮುಖ್ಯ ಮನೋಗಂಡಗಳಿಗೆ ಹೆಸರು ಇಡುವಾಗ **ಫ್ರಾಯ್ಡ್ ಯುಂಗ್** ಪ್ರಭೃತಿಗಳಿಗೆ ಈಡಿಪಸ್‌ದೊರೆ, ಇಲೆಕ್ಟ್ರಾ ನಾಯಕಿಯರೇ ನೆನಪಾಗಿ ಯೋಗ್ಯ ಪ್ರಯೋಜನಕ್ಕೆ ಒದಗಿದರು. ಮಾನವನ ಮನದಾಳದ ಮಾತೃಗಾಮಿ ("ತಾಯ್ಗಂಡ") ಪ್ರವೃತ್ತಿಯ ಪರಿಜ್ಞಾನವಿಲ್ಲದೆ ಸೊಫೋಕ್ಲಿಸ್ ಈಡಿಪಸ್‌ದೊರೆಯ ದುರಂತವನ್ನು ಚಿತ್ರಿಸಿದನು. (ಕುಮಾರವ್ಯಾಸನು ದುರ್ಯೋಧನನು ತನ್ನ ಮಗಳನ್ನು ಮೋಹಿಸಿದ್ದನೆಂದು ಬಣ್ಣಿಸಿದ್ದುಂಟು. ಆದರೆ ಅದು ಒಂದು ಮನೋಗಂಡದ ಅವ್ಯಕ್ತ, ಅಜ್ಞಾತ ಪರಿಣಾಮವಲ್ಲ).

ಆತ್ಮ ಸಂಮೋಹನೆಗೆ 'ನಾರ್ಸಿಸಸ್' ಪ್ರಸಿದ್ಧ. ಅದನ್ನು ಮನೋವಿಜ್ಞಾನಿಗಳು ಅಂಥಾ ಮನೋಗಂಡಕ್ಕೆ ಸಂಜ್ಞೆಯಾಗಿ ಇಟ್ಟುಕೊಂಡರು. ಹಾಗೆಯೇ ಮುಟ್ಟಿದ್ದೆಲ್ಲ ಚಿನ್ನವಾಗುವ ದೊರೆ ಮಿದಾಸನ ಸ್ಪರ್ಶದುರಂತ, ಬಾಲಿಶ ಕಾಮದ ಉದ್ದೀಪನೆಯ ಒಂದು ವಿಕೃತಿಯ ಪ್ರತೀಕವಾದ ಈ ಚಿನ್ನದ ಮೋಹ ನಮ್ಮ ಪುರಾಣ ಪುಣ್ಯಕಥೆಗಳಲ್ಲಿಯೂ, ಆಖ್ಯಾಯಿಕೆಗಳಲ್ಲಿಯೂ ಭವಾಂತರಗಳ ಲೀಲಾಚರಿತ್ರೆಗಳಲ್ಲಿಯೂ ಅನೇಕ ಮನೋವೈಜ್ಞಾನಿಕ-ಮನೋವಿಶ್ಲೇಷಣೆಗೆ ಎಟುಕಬಲ್ಲ ಅಂಥ ಸಂಶೋಧನೆ

ಯನ್ನುಂಟುಮಾಡುತ್ತಿರುವ ಮನೋಗಂಡಗಳ ವಿಕಾರ ವಿಲಸಿತಗಳು ಅಡಗಿವೆ. ಪ್ರಪಂಚದ ಲಲಿತ ಸಾಹಿತ್ಯವೆಲ್ಲ : ಅದು ಕಾವ್ಯವೇ ಇರಲಿ, ಕಥೆಯೇ ಆಗಿರಲಿ, ನಾಟಕರೂಪವೇ ಆಗಿರಲಿ, ಅಂತರಂಗದಂದವನ್ನು ತೆರೆದು ತೋರುವ ಅಂತರ್ಲೋಕದ ದಶಾವತಾರಗಳೇ. ಅಲ್ಲಿ ಮಾನವನ ಜಾಗೃತ ಮನಸ್ಸಿನ ಹಾಗೂ ಬಹಿರಂಗ ಜೀವನದ ಪ್ರತಿಬಿಂಬಗಳಷ್ಟೇ ಸ್ಫುಟವಾಗಿ ನಿಚ್ಚಳವಾಗಿ ಅಂತರ್ಮನದ ಅಜಾಗೃತ ಬದುಕಿನ ಚರ್ಯೆ-ಚೇಷ್ಟೆಗಳ ಬಿಂಬಗಳೂ ಆವಿಷ್ಕಾರಗೊಳ್ಳುತ್ತವೆ. ಆದ್ದರಿಂದಲೇ ಈ ಸಾಹಿತ್ಯಕೃತಿಗಳಿಗೆ ಮಾನವೀಯತೆಯ ಸಂದರ್ಭದಲ್ಲಿ ಅಮರವೂ, ನಿತ್ಯನೂತನವೂ ಆದ ಸತ್ವವೂ ಶಕ್ತಿಯೂ ತುಂಬಿ ನಿಲ್ಲುತ್ತವೆ.

ಜನ್ನನ 'ಯಶೋಧರಚರಿತೆ' ಅದೆಂಥ ಅಮರ ಮನೋವೈಜ್ಞಾನಿಕ ಕೃತಿ ! ಅಮೃತಮತಿಯ ನಿಷಿದ್ಧ ನಿಕೃಷ್ಟ ನೀಚಜನಕಾಮಿಯಾದ ಪ್ರಣಯ ಒಂದು ಮನೋವೈಜ್ಞಾನಿಕ ಮಹತ್ವದ ಕಟುಸತ್ಯ, ವಾಸ್ತವತಥ್ಯ. ನಮ್ಮ ಲಾಕ್ಷಣಿಕರು ಜಿಗುಪ್ಸೆಯನ್ನು ಸ್ಥಾಯಿಯಾಗಿಟ್ಟುಕೊಂಡ 'ಬೀಭತ್ಸ'ವನ್ನು ಒಂದು ರಸವಾಗಿ ಒಪ್ಪಿಕೊಳ್ಳುವುದರಲ್ಲಿ ಅದರ ಹಿಂದಿನ ಆಳವಾದ ಅಷ್ಟೇ ಬಲವಾದ ಮನೋವೈಜ್ಞಾನಿಕ ಸೆಳೆತವನ್ನು ಗ್ರಹಿಸಿದ್ದರು.

ಭಾಸನ ನಾಟಕಗಳಲ್ಲಿ ವಿಶೇಷವಾಗಿ ಈ ಮನೋವೈಜ್ಞಾನಿಕ ಸೂಕ್ಷ್ಮತೆ ಅನೇಕ ಸನ್ನಿವೇಶಗಳಲ್ಲಿ ವ್ಯಕ್ತವಾಗಿದ್ದು ನಮಗೆ ಮೈನವಿರೇಳಿಸುತ್ತದೆ. 'ಸ್ವಪ್ನವಾಸವದತ್ತ'ದಲ್ಲಿಯ ಉದಯನ-ವಾಸವದತ್ತೆಯರ ಸ್ವಪ್ನಸಂದರ್ಶನದ ಪ್ರಯೋಗ ಒಂದೇ ಸಾಕು ಇದಕ್ಕೆ ಸಾಕ್ಷಿಯಾಗಿ. ಅದಕ್ಕೂ ಧಾರಾಳವಾಗಿ ಶೂದ್ರಕ ಕವಿಯ 'ಮೃಚ್ಛಕಟಿಕವಂತೂ ಆಧುನಿಕ ಮನೋವಿಶ್ಲೇಷಣೆಯ ದೃಷ್ಟಿಯಿಂದ ಅತ್ಯಂತ ಅಭ್ಯಾಸನೀಯವಾದ ನಾಟಕ. ಅಲ್ಲಿಯೂ ಶರ್ವಿಳಕ ಚಾರುದತ್ತನ ಮನೆಗೆ ಕನ್ನವಿಟ್ಟು ಕಳವು ಮಾಡಲು ಬಂದಾಗ ಮೈತ್ರೇಯ ಬ್ರಾಹ್ಮಣ ವಸಂತಸೇನೆಯ ಚಿನ್ನದ ಆಭರಣಗಳ ಇಡುಗಂಟನ್ನು ಅವನ ಕೈಗೆ ಒಪ್ಪಿಸುವುದು ಸ್ವಪ್ನತಂತ್ರದ ಪ್ರಯೋಗವೇ ಆಗಿದೆ. ಅದಕ್ಕೂ ಹೆಚ್ಚಾಗಿ ಶಕಾರನ ಪಾತ್ರದ ಸ್ವರೂಪ ಕಲ್ಪನೆ ಒಂದು ಸಂಕೀರ್ಣ ಮನೋವೈಜ್ಞಾನಿಕ ವಿಕೃತ ಪುಂಜದ ಆವಿಷ್ಕಾರ. ಇಂಥ ಮೂರ್ತಿಮಂತ ಜೀವಂತ ಮನೋವೈಜ್ಞಾನಿಕ ಗಂಡಗಳ 'ಗಂಡುಗಾಡಿ' ಪ್ರಪಂಚದ ಸಾಹಿತ್ಯದಲ್ಲಿಯೇ ಇನ್ನೊಂದು ಸಿಗಲಾರದು.

ಕಾಳಿದಾಸನೂ ಅಬಾಧಿತನಾಗಿ ಮನೋವೈಜ್ಞಾನಿಕ ಕ್ಲಪ್ತಗಳನ್ನು ತನ್ನ 'ಶಾಕುಂತಲ'ದಲ್ಲಿ, 'ವಿಕ್ರಮೋರ್ವಶೀಯ'ದಲ್ಲಿ ಬಳಸಿದ್ದಾನೆ. ಶಾಕುಂತಲದ ಕೇಂದ್ರ ಕೀಲವೇ ದುಷ್ಯಂತನ ವಿಸ್ಮರಣೆ. ಅದಕ್ಕೆ ಕವಿ ಅಂದಿನ ಕಾಲಮಾನ ಶ್ರದ್ಧಾಸಂಪ್ರದಾಯದಂತೆ ದೂರ್ವಾಸಮುನಿಯ ಶಾಪವನ್ನು ಉಪಯೋಗಿಸಿಕೊಂಡಿದ್ದಾನೆ. ಆದರೆ ಈ ಕಾರಣವೇನೇ ಇದ್ದರೂ ದುಷ್ಯಂತ ಬಲಿಯಾದದ್ದು Amnesia (ಆಕಸ್ಮಿಕ

ಆಘಾತದಿಂದ ದೀರ್ಘಕಾಲಿಕ ಮರೆವು) ವಿಕಾರಕ್ಕೆ. ಆಧುನಿಕ ಕಾಲದಲ್ಲಿ ಜೇಮ್ಸ್ ಹಿಲ್ಟನ್ ತನ್ನ ಪ್ರಸಿದ್ಧ ಕಾದಂಬರಿ Random Harvest ದಲ್ಲಿ ಅದನ್ನು ಪ್ರಥಮ ಸಲ ಪ್ರಯೋಗಿಸಿ ಖ್ಯಾತಿವೆತ್ತನು. ದೂರ್ವಾಸರ ಶಾಪದ ಬದಲು ಕಣ್ವಾಶ್ರಮದಿಂದ ಮರಳಿ ಅವಸರದಲ್ಲಿ ಹಸ್ತಿನಾಪುರಕ್ಕೆ ಹೋಗುವಾಗ ದುಷ್ಯಂತನ ರಥಕ್ಕೆ ಅಪಘಾತವಾಗಿ ಉರುಳಿಬಿದ್ದು ತಲೆಗೆ ಭಾರಿ ಪೆಟ್ಟಾಗಿ ಆಕಸ್ಮಿಕ ವಿಸ್ಮರಣೆ (Amnesia) ಅವನನ್ನು ಆವರಿಸಿಕೊಳ್ಳಬಹುದು. ಅದು ಮುಂದೆ ಪೂರ್ಣ ಅನುಭವದ ಉಂಗುರ ಕಂಡಾಗ ಹಿಂದಿನ ನೆನಪು ಮರುಕಳಿಸಿ, ಆ ವಿಸ್ಮೃತಿ ವಿಕಾರ ಅಳಿಸಿ ಹೋಗಿ ದುಷ್ಯಂತ ಶಕುಂತಲೆಯನ್ನು ಗುರುತಿಸಬಹುದು. ನಾಟಕದಲ್ಲಿ ನಡೆದದ್ದೂ ಅದೇ. ಅದೊಂದು ಪ್ರಚ್ಛನ್ನ 'ಅಮ್ನೀಶಿಯಾ' ತಂತ್ರಪ್ರಯೋಗ. ಕಾಳಿದಾಸನು 'ಅಶಿಕ್ಷಿತಪಟುತ್ವ'ದಿಂದ ಮನೋವಿಜ್ಞಾನಿಯಂತೆಯೇ ಯಶಸ್ವಿಯಾಗಿ ಬಳಸಿದ್ದಾನೆ ಎಂದರೆ ತಪ್ಪಾಗಲಾರದು.

ಇದಕ್ಕೂ ನೇರವಾಗಿ ಆತ ಇಂಥ ಒಂದು ಕ್ಲಪ್ತಿಯನ್ನು 'ವಿಕ್ರಮೋರ್ವಶೀಯ'ದಲ್ಲಿ ಪ್ರಯೋಗಿಸಿದ್ದು ಆಶ್ಚರ್ಯಕರ. ಸಿಗ್ಮಂಡ್‌ಫ್ರಾಯ್ಡ್ ದಮಿತ ಅಜಾಗೃತ ಮನಃಕಾಮನೆಗಳ ವಿಲಾಸ ಅನೇಕ ಸಲ ನಮ್ಮ ಮಾತಿನ ತಪ್ಪುಗಳಲ್ಲಿ-ಶಬ್ದಗಳ ಮರವು, ಅದಲು ಬದಲು ಇತ್ಯಾದಿಗಳಲ್ಲಿ ವ್ಯಕ್ತವಾಗುತ್ತದೆಂದು ಪ್ರತಿಪಾದಿಸಿ ಈ ಸ್ಖಾಲಿತ್ಯಕ್ಕೆ ಮನೋವಿಶ್ಲೇಷಣೆಯ ತಂತ್ರದಲ್ಲಿ ಒಂದು ಸ್ಥಾನವನ್ನು ಮೀಸಲಾಗಿಟ್ಟಿದ್ದಾನೆ. ಸಾವಿರಾರು ವರ್ಷಗಳ ಹಿಂದೆಯೇ ಕಾಳಿದಾಸ ಈ ತಂತ್ರವನ್ನು ತನ್ನ ನಾಟಕದ ವಸ್ತುವಿನ್ಯಾಸದಲ್ಲಿ ಬಳಸಿದ್ದಾನೆ. ರಾಜ ಪುರೂರವನು ದಾನವರನ್ನು ಸೋಲಿಸಲು ಇಂದ್ರನಿಗೆ ನೆರವಾಗುತ್ತಾನೆ. ಆ ವಿಜಯೋತ್ಸವದ ಸಂದರ್ಭದಲ್ಲಿ ಪುರೂರವನ ಸಂತೋಷಕ್ಕಾಗಿ ಇಂದ್ರಸಭೆಯು ಇದಿರು ಲಕ್ಷ್ಮೀಪರಿಣಯ ನಾಟಕ ನಡೆಯುತ್ತದೆ. ಅದರಲ್ಲಿ ಲಕ್ಷ್ಮಿಯ ಪಾತ್ರ ವಹಿಸಿದ ಊರ್ವಶಿ ರಂಗದಲ್ಲಿ 'ನಿನ್ನ ನಲ್ಲನಾರು ?' ಎಂಬ ಸಖಿಯ ಪ್ರಶ್ನೆಗೆ 'ಪುರುಷೋತ್ತಮ' ಎಂದು ಹೇಳುವ ಬದಲು ಸಂಭ್ರಮದಲ್ಲಿ 'ಪುರೂರವ' ಎಂದು ತನ್ನ ಅಂತರಂಗದ ಗುಟ್ಟನ್ನು ಬಾಯ್ತಪ್ಪಿ ಆಡಿ ಹೋಗುತ್ತಾಳೆ. ಈ ಬಾಯ್ತಪ್ಪು (Slip of the tongue) ಇಲ್ಲಿ ಎಷ್ಟು ನಾಟ್ಯಮಯವಾಗಿದೆ. ಪ್ರಯುಕ್ತ, ಫ್ರಾಯ್ಡ್‌ನ ಶೋಧವನ್ನು ಶತಮಾನಗಳ ಹಿಂದೆಯೇ ಕಾಳಿದಾಸನು ಎಡವಿದನು.

ಸಂಸ್ಕೃತ ನಾಟಕಗಳಲ್ಲಿ ಪ್ರಭಾವಿಯಾಗಿ ಪ್ರಯೋಗಿಸಲಾಗುವ 'ಪತಾಕಾಸ್ಥಾನ'ವೆಂಬ ಒಂದು ಪ್ರಾಸಂಗಿಕ ವ್ಯಂಗ್ಯ (Irany)ವೂ ಇದೇ ರೀತಿ ಮನೋವೈಜ್ಞಾನಿಕ ತಂತ್ರವಾಗಿ ತೋರಿಬರುತ್ತದೆ. ಈ ತಂತ್ರದಲ್ಲಿ ಆಗಂತುಕವಾಗಿ ನಡೆಯುವ ಒಂದು ಪ್ರಚಲಿತ ಘಟನೆಯಲ್ಲಿ ಭವಿಷ್ಯತ್ತಿನ ಒಂದು ಗಂಭೀರ ಭೀಕರ ಘಟನೆಯ ಪ್ರತಿಬಿಂಬವನ್ನು ತೋರಿಸುವುದು ನಾಟ್ಯಮಯವಾಗಿ ನಡೆಯುತ್ತದೆ.

ಒಂದು ಉದಾಹರಣೆ : 'ವೇಣೀಸಂಹಾರ' ನಾಟಕದಲ್ಲಿ ಸುಯೋಧನ—ಭಾನುಮತಿಯರ ಶೃಂಗಾರ ಸನ್ನಿವೇಶ. ಮುದ್ದು ಮಡದಿಯನ್ನು ಅಪ್ಪಿಕೊಂಡು ಸುಯೋಧನ ಲತಾವನದಲ್ಲಿ ದಾರುಪರ್ವತವೇರುತ್ತಾ ಹೋಗಿ ಅವಳನ್ನು ತನ್ನ ತೊಡೆಯಲ್ಲಿ ಕುಳ್ಳಿರಿಸಿಕೊಳ್ಳುವುದನ್ನು ವರ್ಣಿಸುವ ಶ್ಲೋಕವೊಂದನ್ನು ಹೇಳುತ್ತಾನೆ. ಆ ಶ್ಲೋಕದ ಕೊನೆಯ ಶಬ್ದ 'ಮಮ ಊರು', ಅದನ್ನು ಆಡಿದೊಡನೆಯೇ ಭಟನೊಬ್ಬ ಓಡಿ ಬಂದು "ಭಗ್ನಃ" ಅನ್ನುತ್ತಾನೆ. ಆ ಮಾತಿನ ಸಂದರ್ಭ ಬೇರೆ. ಆದರೆ ಆ ಮಾತು ಈ ಮಾತು ಕೂಡಿ "ಮಮ ಊರುಃ ಭಗ್ನಃ" ಎಂದಾಗುತ್ತದೆ ! ಸುಯೋಧನ ಗಾಬರಿಯಿಂದ ಕೇಳುತ್ತಾನೆ—'ಕಸ್ಯ ?' ಆ ದೂತ ಕೂಗುತ್ತಾನೆ : 'ಭವತಃ', ಸುಯೋಧನ ಮತ್ತೆ ಕನಲಿ ಕೇಳುತ್ತಾನೆ—"ಕೇನ ?" : ಆ ಭಟ ಹೇಳುತ್ತಾನೆ—'ಭವೇಣ'. ಅವ ಹೇಳಲಿದ್ದ ಸಮಾಚಾರವೇ ಬೇರೆ—ತಮ್ಮ ಧ್ವಜಸ್ತಂಭವು ಭಯಂಕರ (ಭೀಮ) ಚಂಡಮಾರುತದಿಂದ ಮುರಿದುಬಿತ್ತು ಎಂದು. ಅದೂ ಒಂದು ಅಪಶಕುನ. ಆದರೂ ಪ್ರತ್ಯಕ್ಷ ಸಂದರ್ಭದಲ್ಲಿ ಕೂಡಿ ಬಂದ ವಾಕ್ಯಾಂಶ "(ನನ್ನ) ತೊಡೆಯು ಭೀಮನಿಂದ ಮುರಿಯಿತು". ದೂತನ ಬಾಯಿಯಿಂದ ಧ್ವಜಸ್ತಂಭದ ಮಾತು ಬರುವನಕ ಆಡಿದ ಮಾತೆಲ್ಲ ಸುಯೋಧನನು ಆಡಿದ 'ಮಮ ಊರು' ಪದಗಳೊಂದಿಗೆ ಕೂಡಿ, ಆ ಅಪಾರ್ಥವನ್ನು ಸೂಚಿಸಿ ಸುಯೋಧನನಿಗೆ ಕರಾಳದುರಂತ ('ಊರುಭಂಗ'ದ) ಭವಿತವ್ಯವನ್ನು ಸೂಚಿಸುವಂತೆ ಆಗುತ್ತವೆ. ಸುಯೋಧನನ ಅಂತರ್ಮನದ ಭೀತಿಯ ಭೂತಕ್ಕೆ ರಾಮಗನ್ನಡಿಯಲ್ಲಿ ಪ್ರತಿಬಿಂಬ ಕಂಡಂತೆ ಆಗುತ್ತದೆ.

ನಮಗೆ ಸುಪರಿಚಿತವಾದ ಅರ್ವಾಚೀನ ಆಂಗ್ಲ ಸಾಹಿತ್ಯದಲ್ಲಿಯೂ ವಿಕ್ಟರ್ ಹ್ಯೂಗೋ, ಚಾರ್ಲಸ್ ಡಿಕನ್ಸ್, ಥಾಮಸ್ ಹಾರ್ಡಿ ಪ್ರಭೃತಿಗಳ ಮಹಾಕೃತಿಗಳಲ್ಲಿಯ ಲಾಫಿಂಗ್ ಮ್ಯಾನ್, ಜೀನ್‌ವಾಲ್ಜೀಗ್, ಫ್ಯಾಗಿನ್, ಉರಿಯಾಹೀಪ್, ವ್ಯಾಗಿ ಮುಂತಾದ ಪಾತ್ರಗಳಲ್ಲಿ ಆಳವಾದ ಮನೋವೈಜ್ಞಾನಿಕ ನೋಟ-ನಿಲುಕು ಕಂಡುಬರುತ್ತದೆ. ಕೆಲಸಲ ಕಂಗೆಡಿಸುವಷ್ಟು ಕಂಗೊಳಿಸುತ್ತದೆ. ಎಮಿಲಿಬ್ರಾಂಟೆಯ ವೂದರಿಂಗ್ ಹೈಟ್ಸ್, ಜಾರ್ಜ್ ಮೆರಿಡಿತ್‌ನ ಇಗೋಯಿಸ್ಟ್. ಸ್ಟೀವನ್‌ಸನ್‌ನ ಡಾ. ಜಾಕಿಲ್ ಎಂಡ್ ಮಿಸ್ಟರ್ ಹೈಡ್-ಇಂಥಾ ನೂರಾರು ಉತ್ತಮೋತ್ತಮ ಕೃತಿಗಳು ಮನೋವಿಜ್ಞಾನಕ್ಕೆ ಸಾಹಿತಿ ಸಲ್ಲಿಸಿದ ಉಡುಗೊರೆಗಳು. ಆಸ್ಕರ್ ವೈಲ್ಡನ 'ಪಿಕ್ಚರ್ ಆಫ್ ಡೋರಿಯನ್ ಗ್ರೇ' ಅಂತರ್ಮನದ ಒತ್ತಡದಲ್ಲಿ ಒಡಮೂಡುವ ದ್ವಿಧಾ ವ್ಯಕ್ತಿತ್ವಕ್ಕೆ ಕೆತ್ತಿನಿಲ್ಲಿಸಿದ ಪ್ರತಿಮೆ.

ಇದಕ್ಕೂ ಈಚೆಗೆ ಬಂದರೆ ಮಾಡಂ ಬೊವೇರಿ ಮನೋವಿಜ್ಞಾನದ ಅತಿಕಾಮುಕ ಹೆಣ್ಣಿನ ಆತ್ಮಸಂಮೋಹಿತ ಮಾದರಿಗೆ 'ಬೊವೇರಿಸಂ' ಎಂಬ ಒಂದು ಹೆಸರನ್ನೆ ಕೊಡುವಷ್ಟು ಪ್ರಭಾವಿಯಾಯಿತು. ಜೇಮ್ಸ್ ಹಿಲ್ಟನ್, ಸಾಮರಸೆಟ್‌ಮಾಮ್, ಅದಕ್ಕೂ ಹಿಂದೆ ಡಿ. ಎಚ್. ಲಾರೆನ್ಸ್ ಪ್ರಭೃತಿಗಳು ಮನೋವೈಜ್ಞಾನಿಕ ದರ್ಶನದಿಂದ ತಮ್ಮ ಕಥೆ ಕಾದಂಬರಿ ನಾಟಕಗಳನ್ನು ರೂಪಿಸಿ ದೀಪಿಸಿಕೊಂಡರು.

ಸಾಹಿತ್ಯ ಮತ್ತು ಮನೋವಿಜ್ಞಾನಗಳನ್ನು ಒಟ್ಟಾಗಿ ಪರಿಶೀಲಿಸಿದಾಗ ನಾವು ಗಮನದಲ್ಲಿ ಇಟ್ಟುಕೊಳ್ಳುವ ಸಾಹಿತ್ಯ ಮೇಲೆ ಕಾಣಿಸಿದಂತೆ ಲಲಿತಸಾಹಿತ್ಯ. ಇನ್ನು ವಿಚಾರಸಾಹಿತ್ಯದಲ್ಲಿಯೂ ಮನೋವಿಜ್ಞಾನ – ಮನೋವಿಶ್ಲೇಷಣೆಗಳನ್ನು ನೆಲೆಗೊಂಡು, ಒಳಗೊಂಡು ಪ್ರಕಟವಾದ ನೂರಾರು ಗ್ರಂಥಗಳು ಇಂದು ಬಿಸಿ ಬಿಸಿ ಇಡ್ಲಿ ದೋಸೆಗಳಂತೆ ದಿಢೀರಾಗಿ ಮಾರಿ ಹೋಗಿ ಉತ್ತಮೋತ್ತಮ ಕಥೆ ಕಾದಂಬರಿಗಳಂತೆ Best sellers ಆಗುತ್ತಿವೆ. ಒಂದೆಡೆಗೆ ನಮ್ಮ ಆಧುನಿಕ, ಇಲ್ಲವೇ ನವ್ಯಕಥೆ–ಕಾದಂಬರಿಕಾರರ ಕೃತಿಗಳು ಹೆಚ್ಚುಹೆಚ್ಚಾಗಿ ಮನೋವಿಕೃತಿಗಳ ಹಾಗೂ ಮನೋರೋಗಗಳ case-historyಗಳಂತೆ ಓದುತ್ತಿರುವಂತೆಯೇ ಅಂಥ ಅನೇಕ ರುಗ್ಣ ವಿಕೃತ ವ್ಯಾಪ್ತಿಗಳ ಅವಸ್ಥಾ ಚಿತ್ರಣಗಳನ್ನು ಆಧರಿಸಿ ಬರೆದ ಇಂದಿನ ಮನೋವೈಜ್ಞಾನಿಕ ಜನಪ್ರಿಯ ಲೇಖಕರ ಗ್ರಂಥಗಳು ಕಾದಂಬರಿಗಳಂತೆ ವಾಚನೀಯವಾಗ ಹತ್ತಿವೆ. ವಿಲಿಯಂ ಜೇಮ್ಸ್ ತತ್ತ್ವಜ್ಞಾನವನ್ನು ಕಾದಂಬರಿಯಷ್ಟು ರಮ್ಯವಾಗಿ ಬರೆದರೆ ಜೇಮ್ಸ್ ವಿಲಿಯಂ ಕಾದಂಬರಿಗಳನ್ನು ತತ್ತ್ವಜ್ಞಾನದಷ್ಟು ನೀರಸವಾಗಿ ಬರೆಯುತ್ತಿದ್ದನೆಂದು ಪ್ರಸಿದ್ಧಿ. ಜೇಮ್ಸ್ ಜೊಯ್ಸ್ ಆಧುನಿಕ ಮನೋವೈಜ್ಞಾನಿಕ ಕಥೆ–ಕಾದಂಬರಿಗಳ ಹಿರಿಯ 'ಜೋಯಿಸ'. ಅವನ ಜಗದ್ವಿಖ್ಯಾತ 'ಯೂಲಿಸಿಸ್' ಅದೆಷ್ಟು ಗಡುಚು, ನೀರಸ ! ಹಾಗೆಯೇ ಈ ಮಾದರಿಯ ಕೃತಿಗಳ ಪಥ ಪ್ರದರ್ಶಕರೆನಿಸಿದ, ಕಾಮೂ, ಕಾಫ್ಕಾ ಪ್ರಭೃತಿಗಳ ಲಲಿತ ಸಾಹಿತ್ಯವೆಲ್ಲ ಮನೋವೈಜ್ಞಾನಿಕ ಅಂತಃಪ್ರಪಂಚವೆಲ್ಲ ಬಿಚ್ಚಿ ಬಿಡಿಸಿ ನಿರೂಪಿಸಲಾಗಿದ್ದ ನಮ್ಮ ಇಂದಿನ ಲಲಿತ ವಾಙ್ಮಯಕ್ಕೆ ಅದೇ ಮೂಲ ಪ್ರೇರಣೆಯೂ, ಮುಖ್ಯ ಪ್ರಾಣವೂ ಆಗಿದೆ.

ಕಾದಂಬರಿಯ ಕಥನದಲ್ಲಿಯ ಹೊಸ (ಈಗ ಹಳೆಯದಾಗುತ್ತಿರುವ ?) ತಂತ್ರವು ಸಂಜ್ಞಾಪ್ರವಾಹ ಪದ್ಧತಿ (stream of consciousness method). ನಾನು ತಿಳಿದಮಟ್ಟಿಗೆ ಆಧುನಿಕ ಕನ್ನಡದಲ್ಲಿ ಇದನ್ನು ಸದ್ದಿಲ್ಲದೆ ನವೀನವಾಗಿಯೂ ಅಷ್ಟೇ ಪ್ರವೀಣನಾಗಿಯೂ ಪ್ರಯೋಗಿಸಿದವರು ಶ್ರೀರಂಗರು: ಅವರ ಪ್ರಪ್ರಥಮ ಕಾದಂಬರಿ 'ವಿಶ್ವಾಮಿತ್ರಸೃಷ್ಟಿ'ಯಲ್ಲಿ. ಮುಂದೆ ಈಚೆಗೆ ಪೂಚಂತೇ ಅವರ 'ಸ್ವರೂಪ' ದಲ್ಲಿಯೂ, ಪಿ. ಲಂಕೇಶರ 'ಬಿರುಕು'ನಲ್ಲಿಯೂ ಯಶಸ್ವಿಯಾಗಿ ಕಾಣಿಸಿಕೊಂಡ ಈ ಪದ್ಧತಿಯ ಹಿಂದೆ ಮನೋವೈಜ್ಞಾನಿಕ ತಂತ್ರವೇ ಇದೆ.

ಹಾಗೆಯೇ ನಮ್ಮ ನವ್ಯಕಾವ್ಯದಲ್ಲಿ sur-realist ತಂತ್ರದ ವಾಸ್ತವ ಚಿತ್ರಣ ಅಜಾಗೃತ ಮನದಾಳಕ್ಕೆ ಕಡಲನ್ನೊ, ಕಾಮಕ್ಕೆ ಮಳೆಯನ್ನೋ, ಹಾವನ್ನೊ, ಹೋರಿಯನ್ನೊ–ಹೀಗೆಲ್ಲ ಪ್ರತೀಕವಾಗಿಟ್ಟುಕೊಂಡು ವಸ್ತು ಪ್ರತಿರೂಪಾಂತರನ್ಯಾಸವನ್ನು ಸಾಧಿಸುವ ರೀತಿ ಸಾಹಿತ್ಯವು ಮನೋವಿಜ್ಞಾನಕ್ಕೆ ಮಾಡುವ ಮರ್ಯಾದೆಯ ಮುಜುರೆಯೇ.

ದಿ. ದೇವುಡು ನರಸಿಂಹಶಾಸ್ತ್ರಿಗಳ ‘ಅಂತರಂಗ’ದಿಂದ ಡಾ. ಯು. ಆರ್. ಅನಂತಮೂರ್ತಿಯವರ ‘ಸಂಸ್ಕಾರ’ದವರೆಗೂ ಕಾಮವಾಸನೆಯ ಶಕ್ತಿ ವಿಲಾಸ, ವ್ಯಕ್ತಿ ಚಾರಿತ್ರ್ಯದಲ್ಲಿ ಹೇಗೆ ಎಷ್ಟು ಕಾಣಿಸಿಕೊಳ್ಳುವುದೆಂಬುದನ್ನು ನಮ್ಮ ಸಾಹಿತಿಗಳು ದಿಟ್ಟತನದಿಂದ ದಿಟವಾಗಿ ಚಿತ್ರಿಸುತ್ತಲೇ ಬಂದಿದ್ದಾರೆ. ಹಾಗೆಯೇ ಶ್ರೀನಿವಾಸ ಇಟಗಿ (ಇಂದು ಶ್ರೀನಿವಾಸ ಹಾವನೂರ) ಬರೆದ ‘ಅವರು ಮತ್ತು ದೇವಕ್ಕ’ ಈ ಕಥೆಗಳಿಂದ ನಮ್ಮ ಕಥಾಪ್ರಪಂಚದಲ್ಲಿ ಮನೋವೈಜ್ಞಾನಿಕ ದೃಷ್ಟಿ–ಸೃಷ್ಟಿಗಳು ಪ್ರಜ್ಞಾಪೂರ್ವಕವಾಗಿ ಪ್ರವೇಶ ಪಡೆದವೆಂದು ನನ್ನ ಗ್ರಹಿಕೆ.

ಅಂದಿನಿಂದ ಇಂದಿನತನಕವೂ ಕಾಮ, ಕ್ರೌರ್ಯ (ಹಿಂಸೆ), ಪಾಪಪ್ರಜ್ಞೆ, ಮೃತ್ಯುಭಯ, ಅಹಂಕಾರ ಇತ್ಯಾದಿ ಆಳದ ಬಲಿಷ್ಠವಾದ ಮನೋವಿಕೃತಿಗಳ ಚರ್ಯೆ–ಚೇಷ್ಟಿತಗಳೆಲ್ಲ ಶಾಂತಿನಾಥ ದೇಸಾಯಿ, ಪಿ. ವಿ. ಶಾಸ್ತ್ರಿ, ಯು.ಆರ್. ಅನಂತಮೂರ್ತಿ. ಪಿ. ಲಂಕೇಶ, ಯಶವಂತ ಚಿತ್ತಾಲ, ಕಂಬಾರ, ತ್ರಿವೇಣಿ, ದಿ. ಗೌರಮ್ಮ ಪ್ರಭೃತಿಗಳ ಮಾದರಿಯ ಕೃತಿಗಳಲ್ಲಿ ಪರಿಣಾಮಕಾರಿಯಾಗಿ ಪರಿಸ್ಫುಟವಾಗಿ ಪರಿಪರಿಯ ಬಗೆಗಳಿಂದ ರೂಪುಗೊಳ್ಳುತ್ತಾ ಬಂದಿವೆ. ‘ತ್ರೈಗುಣ್ಯೋದ್ಭವಂ ಅತ್ರ ಲೋಕಚರಿತಂ ನಾನಾವಿಧಂ ದೃಶ್ಯತೇ’ ಎಂಬ ಕವಿಕುಲಗುರುವಿನ ಉಕ್ತಿಯು ಹೊಸ ಅರ್ಥದಲ್ಲಿ ಹೊಸ ಸಾಹಿತ್ಯ ಸೃಷ್ಟಿಗೆ ಹೊಂದಿಕೊಳ್ಳುತ್ತದೆ. (ಆತ ‘ಮರಣಂ ಪ್ರಕೃತಿಃ ಶರೀರಿಣಾಂ’ ಎಂದಾಗಲೇ ಸಿಗ್ಮಂಡ್ ಫ್ರಾಯ್ಡನ ‘Death wish’ ತತ್ತ್ವವನ್ನು ಎಂದೋ ತರ್ಕಿಸಿದಂತಿದೆ !)

ಆಡಿಗರಿಂದ ಆರಂಭವಾದ ನವ್ಯಕಾವ್ಯ ಪರಂಪರೆಯಲ್ಲಿ ಶ್ರೀರಾಮಚಂದ್ರ ಶರ್ಮರಿಂದ ಶ್ರೀ ಎ. ಕೆ. ರಾಮಾನುಜಂವರೆಗೂ ಕಂಬಾರ, ಅರವಿಂದ ನಾಡಕರ್ಣಿ, ಜಯಂತ ಕಾಯ್ಕಿಣಿ. ಜಿ. ಎಸ್ ಅವಧಾನಿ, ‘ಸಂಕ್ರಮಣ’ ಬಳಗದ ಕವಿಗಳು—ಹೀಗೆ ಅನೇಕ ಹಿರಿ ಕಿರಿ ಕವಿಗಳು ಅಂತರ್ಮನದ ಕಾಮಪ್ರವೃತ್ತಿ—ತೃಪ್ತಿಗಳ ಬಿಂಬ—ಪ್ರತಿಬಿಂಬಗಳ ತಿಂತಿಣಿಯನ್ನು ಕಟ್ಟಿ ನಿಲ್ಲಿಸಿದ್ದಾಗಿದೆ. ಇದಕ್ಕೂ ಹಿಂದೆಯೇ ನಮ್ಮ ಕವಿಕುಲಗುರು ಅಂಬಿಕಾತನಯದತ್ತರ ಕಾಮಕಸ್ತೂರಿ, ಏಳು ಕನ್ನಿಕೆಯರು ಮುಂತಾದ ಪ್ರಸಿದ್ಧ ಕೃತಿಗಳಲ್ಲಿ ಲೈಂಗಿಕ ಸ್ಫುರಣ ‘ಬಾಲ ಸುತ್ತಿ ಹೆಡೆ ಎತ್ತಿ’ ನಿಂತುದರ ದರ್ಪ ನಮಗೆ ಬಡಿಯುತ್ತದೆ.

ಇಲ್ಲಿ ಹೆಚ್ಚಾಗಿ ಮನೋವೈಜ್ಞಾನಿಕತೆ ಅಂದಾಗ ಮನೋವಿಶ್ಲೇಷಣೆ ಅದರ ತಳಹದಿಯ ಫ್ರಾಯ್ಡ್. ಯುಂಗ್, ಎಡ್ಲರ ಪ್ರಭೃತಿಗಳ ತತ್ತ್ವ ಸಂಪ್ರದಾಯಗಳೇ ಧ್ವನಿತವಾಗುತ್ತವೆ. ಈ ವಿಭಾಗವಲ್ಲದಿದ್ದರೆ ಮನಸ್ಸಿನ ಸೂಕ್ಷ್ಮ ವ್ಯಾಪಾರಗಳ ಅಭಿವ್ಯಂಜನೆ ಬಂದೇ ಇಲ್ಲ. ನಮ್ಮ ಹಿಂದಿನ ಕಥೆಗಾರರಲ್ಲಿಯೂ, ಕವಿಗಳಲ್ಲಿಯೂ ಅಲ್ಲಲ್ಲಿ ಮನೋಜ್ಞವಾಗಿ ರೂಪಗೊಂಡಿದೆ. ಬಾಣಭಟ್ಟನ ಕಾದಂಬರಿ ಇರಲಿ, ರತ್ನಾಕರವರ್ಣಿಯ ‘ಭರತೇಶ ವೈಭವ’ವಿರಲಿ, ಯಾವ ಕಾವ್ಯಪ್ರಕಾರದಿಂದಲೂ

ಈ ಮನೋಧರ್ಮದ ಸ್ವಾರಸ್ಯಪೂರ್ಣವಾದ ಕ್ರಿಯಾಚಿತ್ರಣವನ್ನು ನಾವು ಕಾಣಬಹುದು.

ಆದರೆ ಒಂದು ಸಾಹಿತ್ಯದಲ್ಲಿ ಪ್ರಸ್ತುತವಾದ ಮನೋವಿಜ್ಞಾನದ ಅಂಗ—ಅಂತರ್ಮನದ ಅಜಾಗೃತಸ್ತರಗಳ, ದಮಿತಕಾಮದ ನೂರು ವಿನ್ಯಾಸಗಳ ಚಿತ್ರವಿಚಿತ್ರ. ಗಿರೀಶ ಕಾರ್ನಾಡರ 'ಅಂಜುಮಲ್ಲಿಗೆ', ಚಂದ್ರಶೇಖರ ಕಂಬಾರರ ಜೋಕುಮಾರಸ್ವಾಮಿ, ಚಂದ್ರಶೇಖರ ಪಾಟೀಲರ 'ಗೋಕರ್ಣದ ಗೌಡಸಾನಿ'—ಇಂಥ ನಾಟಕಗಳು ರಂಗದಲ್ಲಿ ಕುಣಿದಾಡುವ 'ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ ಅಥ ತೇನ ಪ್ರಯುಕ್ತೋನ ಪಾಪಂ ಚರತಿ ಪೂರುಷಃ' ಎಂದು ಅರ್ಜುನನು ಕೇಳಿದ ಮಾರ್ಮಿಕ ಪ್ರಶ್ನೆಗೆ ಶ್ರೀ ಕೃಷ್ಣನು ನೀಡಿದ ಈ ಉತ್ತರ ನಮ್ಮ ಆಧುನಿಕ ನವ್ಯ ಸಾಹಿತ್ಯದ ಅಂತರಂಗ—ಬಹಿರಂಗಗಳನ್ನು ವ್ಯಾಪಿಸಬಲ್ಲ ವ್ಯಾಖ್ಯಾನವಾಗಿದೆ.

ಹೀಗೆ ತಂತ್ರವಾಗಿ, ಪ್ರತೀಕವಾಗಿ, ವಸ್ತುವಿನ್ಯಾಸದ ಅಂತರಂಗವಾಗಿ, ಸಾಹಿತ್ಯ ಗುಣದ ಸತ್ವವಾಗಿ ಇಂದು ಮನೋವಿಜ್ಞಾನ, ಅದರಲ್ಲಿಯೂ ಮನೋವಿಶ್ಲೇಷಣೆಯ ಅಜ್ಞಾಗೃತ ಅಂತರ್ಮನಸ್ಸಿನ ಧರ್ಮ ಕರ್ಮಗಳ ಮರ್ಮಜ್ಞತೆ ನಮ್ಮ ಸಾಹಿತ್ಯದ ಅವಿಭಾಜ್ಯ ಅಂಗವಾಗಿ ಬಿಟ್ಟಿದೆ. ಅದರ ಉತ್ತಮತೆ, ಉತ್ತಾನತೆ, ಅದರ ಸೀತ್ಕಾರ ಚೀತ್ಕಾರ, ನವ್ಯತೆ ಭವ್ಯತೆಗಳಿಗೆಲ್ಲ ಮೊನೆಯನ್ನು, ಮೆರುಗನ್ನು, ಮನೋಹಾರಿತ್ವವನ್ನು ತುಂಬುವ ಅಂತಃಸತ್ವ ಒಂದು ಮನೋವಿಜ್ಞಾನವೇ ಆಗಿದೆ. ಹಿಂದೆ ಸಾಹಿತ್ಯ ಅಂತರ್ಮುಖವಾದಂತೆ ತಾತ್ವಿಕ ಆತ್ಮಾನ್ವೇಷಣೆ ಹೆಚ್ಚಾಗುತ್ತಿತ್ತು—ಅದು ಅಧ್ಯಾತ್ಮದ ಅನುಭವಾಮೃತವಾಗುತಿತ್ತು. ಆದರೆ ಇಂದು ಸಾಹಿತ್ಯ ಅಂತರ್ಮುಖವಾದಂತೆ ಸಾತ್ವಿಕ ಮನೋವಿಶ್ಲೇಷಣೆಯ ಜಾಡು ಹಿಡಿಯುತ್ತಿದೆ. 'ಸ್ವಭಾವವೇ ಆಧ್ಯಾತ್ಮ' ಎಂಬ ಗೀತೆಯ ವಚನದಂತೆ ಮಾನವ ಸ್ವಭಾವದ ಒಳಕಟ್ಟು, ಒಳಗುಟ್ಟುಗಳನ್ನು ಅದು ಪರಿಷ್ಕರಿಸುತ್ತದೆ, ಆವಿಷ್ಕರಿಸುತ್ತದೆ.

# ಜನಪದ ಸಾಹಿತ್ಯದಲ್ಲಿ ಅನುಭವ ಮತ್ತು ಅಭಿವ್ಯಕ್ತಿ

ಡಾ. ಸಂಧ್ಯಾರೆಡ್ಡಿ

ಜನಪದ ಸಾಹಿತ್ಯ ಜನಪದರು ತಮ್ಮ ಅನಿಸಿಕೆಗಳನ್ನು ಅಭಿವ್ಯಕ್ತಿಸುವುದಕ್ಕಾಗಿ ಸೃಷ್ಟಿಸಿಕೊಂಡ ಸಾಹಿತ್ಯ. ಜನಪದ ಗೀತೆಗಳ ರಚನೆಯಲ್ಲಿ ಸಾಹಿತ್ಯಪ್ರಜ್ಞೆಯನ್ನು ಕಂಡಂತೆ ಒಗಟು ಅಥವಾ ಕಥೆ ಅಥವಾ ಗಾದೆಗಳಲ್ಲಿ ಕಾಣಲಾಗುವುದಿಲ್ಲ. ಜನಪದ ಗೀತೆಗಳಲ್ಲಿ ಅನಿಸಿಕೆಗಳನ್ನು ಅನುಭವಗಳನ್ನು ಕಲಾತ್ಮಕವಾಗಿ ಹೇಳಿಕೊಳ್ಳುವುದೇ ಮುಖ್ಯ ಉದ್ದೇಶವಾದರೆ ಗಾದೆಗಳಲ್ಲಿ ಮೌಲ್ಯಗಳನ್ನು ಸಾರುವುದು, ಸಮಾಜದ ಓರೆ ಕೋರೆಗಳನ್ನು ವಿಮರ್ಶಿಸುವುದು ಹಾಗೂ ತಿಳುವಳಿಕೆ ನೀಡುವುದು ಮುಖ್ಯ ಉದ್ದೇಶ ವಾಗುತ್ತದೆ. ಕಥೆ ಹಾಗೂ ಒಗಟುಗಳಲ್ಲಿ ಮನರಂಜನೆಯೇ ಮುಖ್ಯ ಉದ್ದೇಶ. ಆದ್ದರಿಂದ ಜನಪದ ಸಾಹಿತ್ಯದ ಗುಂಪಿಗೆ ಸೇರುವ ಕಥೆ, ಗಾದೆ ಒಗಟುಗಳಲ್ಲಿ ಸಾಹಿತ್ಯಿಕ ಗುಣಕ್ಕೆ ಎರಡನೇ ಸ್ಥಾನ. ಇಲ್ಲಿ ನಾವು ಸಾಹಿತ್ಯಿಕ ಗುಣವನ್ನು ವಿವೇಚಿಸು ವುದು ಅನುಷಂಗಿಕವಾಗಿ, ಆದರೂ ಈ ಎಲ್ಲ ಪ್ರಕಾರಗಳಿಗೂ ಭಾಷೆಯೇ ಮಾಧ್ಯಮ ವಾಗಿರುವುದರಿಂದ ಆಯಾ ಪ್ರಕಾರ ಎಷ್ಟರ ಮಟ್ಟಿಗೆ ತನ್ನ ಉದ್ದೇಶದ ಪೂರೈಕೆಗೆ ಭಾಷೆಯನ್ನು ಬಳಸಿಕೊಂಡಿದೆ ಎಂಬುದರ ಮೇಲೆ ಅದರ ಯಶಸ್ಸನ್ನು ಅಳೆಯ ಬಹುದು. ಈ ದೃಷ್ಟಿಯಿಂದ ನಾವು ಜನಪದ ಸಾಹಿತ್ಯದ ವಿವಿಧ ಪ್ರಕಾರಗಳ ಸಾಹಿತ್ಯಕ ಗುಣವನ್ನು ನೋಡಬೇಕಾಗುತ್ತದೆ.

ಜನಪದರಿಗೆ ತಮ್ಮ ಹಾಗೂ ತಮ್ಮ ಸುತ್ತಮುತ್ತಲಿನ ಜೀವನದ ಅನುಭವ ಹಾಗೂ ಪ್ರಕೃತಿಯೊಂದಿಗೆ ನಿಕಟ ಸಂಪರ್ಕ ಇವುಗಳೇ ಸಕಲ ಭಾವನೆಗಳ ಹಾಗೂ ಜ್ಞಾನದ ಆಕರ. ಇವರ ಅಭಿವ್ಯಕ್ತಿಯಲ್ಲಿ ಹೊರಸೂಸುವುದು ಇವರು ಅನುಭವಿಸಿದ ಜೀವನದ ಅಂತಃಸತ್ವವೇ. ಈ ಅನುಭವವನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಿಸಲು ಅವರು ಬಳಸುವ ಭಾಷೆ, ಹೇಳುವ ಧಾಟಿ, ಕೊಡುವ ಅಲಂಕಾರಗಳು ಎಲ್ಲವೂ ಸರಳ ಹಾಗೂ ಸಹಜವಾಗಿರುತ್ತವೆ. ಕೃತಿಮತೆ ಎಲ್ಲೂ ಕಂಡುಬರುವುದಿಲ್ಲ. ತಾವು ಆಡುವ ಭಾಷೆಯನ್ನೇ ಸಾಹಿತ್ಯದಲ್ಲಿ ಬಳಸುತ್ತಾರೆ. ತಮ್ಮ ಪರಿಸರದಲ್ಲಿರುವ ಗಿಡ, ಮರ, ಹೂವು, ಹಣ್ಣು ವಸ್ತುಗಳನ್ನೇ ಹೋಲಿಕೆಗೆ ಆಯ್ದುಕೊಳ್ಳುತ್ತಾರೆ. ಇದನ್ನು

ಜನಪದ ಸಾಹಿತ್ಯದಲ್ಲೆಲ್ಲ ಕಾಣಬಹುದು, ಈ ಕಾರಣದಿಂದ ಅವರ ಇಡೀ ಪರಿಸರದ ಚಿತ್ರವೇ ನಮಗೆ ದೊರೆಯುತ್ತದೆ. ಈ ಸಹಜ ಪರಿಸರ ಈ ಸಾಹಿತ್ಯಕ್ಕೆ ವಿಶಿಷ್ಟತೆಯನ್ನೂ ವಾಸ್ತವತೆಯನ್ನೂ ತಂದು ಕೊಡುತ್ತದೆ. ಆಡುಮಾತು, ತೀವ್ರ ಸಂವೇದನಾ ಪ್ರಜ್ಞೆ, ಹಾಗೂ ಸಮುಚಿತವಾದ ಹೋಲಿಕೆಗಳು ಇವುಗಳಿಂದಾಗಿ ಇದು ಉತ್ತಮ ಸಾಹಿತ್ಯವಾಗಿದೆ. ಒಂದು ಜನಪದ ಗೀತೆಯನ್ನು ಉದಾಹರಿಸುವುದರ ಮೂಲಕ ಜನಪದರ ಅನುಭವ ಹೇಗೆ ಮೈತಳೆದಿದೆ ಎಂಬುದನ್ನು ನೋಡಬಹುದು.

ಸಕ್ಕರಿ ಹೇರಿಕೊಂಡು ಸೊಲಗಕ್ಹೋಗೊ ಜಾಣ
ನಮ್ಮವ್ವಗ್ಹೇಳೊ ಮರಿಬ್ಯಾಡ, ಅತ್ತಿಮನಿ
ಬೆಳದಿಂಗಳು ನಮಗ ಬಿಸಿಲಾಯ್ತು.

ಈ ಪದ್ಯದಲ್ಲಿ ಅತ್ತೆಮನೆಯಲ್ಲಿ ನೊಂದ ಹೆಣ್ಣು ಮಗಳು 'ಅತ್ತಿಮನಿ ಬೆಳದಿಂಗಳು ನಮಗೆ ಬಿಸಿಲಾಯ್ತು' ಎನ್ನುವ ಹೋಲಿಕೆಯ ಮೂಲಕ ತನ್ನ ಕಷ್ಟ ಕಾರ್ಪಣ್ಯಗಳನ್ನೂ, ಸಂಕಟಗಳನ್ನೂ ಅತ್ಯಂತ ಸಮರ್ಥವಾಗಿ ಹೇಳಿದ್ದಾಳೆ. ಈ ಪದ್ಯದ ಸಂಭಾಷಣಾ ಧಾಟಿ ಸಹಜವಾಗಿದೆ, ಆತ್ಮೀಯವಾಗಿದೆ. ಈ ಕಾರಣದಿಂದಲೇ ಅದು ನಮಗೆ ಹತ್ತಿರವಾಗಿದೆ. ಶಿಷ್ಟಕಾವ್ಯದಲ್ಲಿ ವಿರಹಿಗಳ ಪಾಲಿಗೆ ಮಾತ್ರ ಬಿಸಿಲಾಗಿ ಕಾಣುವ ಬೆಳದಿಂಗಳು ಒಂದು ಕವಿಸಮಯವಾಗಿಬಿಟ್ಟಿದೆ. ಆದರೆ ಇಲ್ಲಿನ ಬಿಸಿಲಾದ ಬೆಳದಿಂಗಳು ಈ ಹೆಣ್ಣಿನ ಬೇಗೆಯನ್ನು ಅಭಿವ್ಯಕ್ತಿಸುವಲ್ಲಿ ಪರಿಪೂರ್ಣ ಯಶಸ್ಸನ್ನು ಪಡೆದಿದೆ. ಜನಪದ ಗೀತೆಗಳಲ್ಲಿ ವ್ಯಕ್ತವಾಗಿರುವ ಅನಿಸಿಕೆಗಳು ಮಾನವನ ತೀರ ಮೂಲಭೂತವಾದ ಅನಿಸಿಕೆಗಳು. ಆದ್ದರಿಂದ ಇವು ಎಂದೆಂದಿಗೂ ನಮಗೆ ಹತ್ತಿರವಾಗೇ ಇರುತ್ತವೆ.

ಬಾಲ ಹನುಮನ ಮುಂದ ಬಾಗಿ ಚಂಡಾಡ್ಯಾನ
ಬಾವೂಲಿ ಗಿಲಿಯು ನನ ಬಾಲನ ಕಂಡರ
ಬಾಲ್ಯರು ಬಸಿರು ಬಯಸ್ಯಾರ.

ಎಲ್ಲ ತಾಯಂದಿರಿಗೂ ತಮ್ಮ ಮಕ್ಕಳು ಮುದ್ದಾಗಿಯೇ ಇರುತ್ತಾರೆ. ಸೌಂದರ್ಯದ ಪ್ರತಿರೂಪವೇ ಆಗಿರುತ್ತಾರೆ. ಆದರೆ ಆ ಮಗು ಉಂಟುಮಾಡುವ ಆನಂದವನ್ನೂ ಅದರ ಬಗೆಗಿನ ತಾಯಿಯ ಅಭಿಮಾನವನ್ನೂ ಮೇಲಿನ ಪದ್ಯ ಯಾವುದೇ ಅಲಂಕಾರವೂ ಇಲ್ಲದೆ ಅತ್ಯಂತ ಸಮರ್ಥವಾಗಿ ಹೇಳಿದೆ.

ಇಲ್ಲಿನ ಅನುಭವವನ್ನು ಹಾಡಾಗಿ ಮೂಡಿಸಿದ ಕವಿ ಅಥವಾ ಕವಯಿತ್ರಿ ಪ್ರಜ್ಞಾಪೂರ್ವಕವಾಗಿ ಕೆಲಸ ಮಾಡಿರಬಹುದಾದರೂ ಇವುಗಳನ್ನು ಕೇಳಿದಾಗ ಸಾಮಾನ್ಯ ಹೆಣ್ಣುಮಗಳೊಬ್ಬಳು ತನ್ನ ನೋವನ್ನೋ ಸುಖವನ್ನೊ ತೋಡಿಕೊಂಡಂತೆ ಕಾಣುತ್ತದೇ ಹೊರತು ಯಾವ ರೀತಿಯಲ್ಲೂ ಅದು ಪ್ರಜ್ಞಾಪೂರ್ವಕವಾಗಿ ಹೇಳಿಕೊಂಡಂತೆ

ಕಾಣುವುದಿಲ್ಲ. ಆಂದರೆ ಇಲ್ಲಿನ ಅನುಭವದೊಂದಿಗೆ ಹೋಲಿಕೆಗಳು, ಧಾಟಿ, ಭಾಷೆ ಎಲ್ಲವೂ ಅವಿನಾಭಾವದಿಂದ ಹೊಂದುಕೊಂಡು ಬಿಟ್ಟಿವೆ.

ಜನಪದ ಕಥೆಗೆ ಪರಂಪರೆಯೇ ಹಾಕಿಕೊಟ್ಟ ಒಂದು ಸುಂದರವಾದ ಶಿಲ್ಪವಿದೆ. ಇದು ಕಥೆಗೆ ಒಂದು ವಿಶಿಷ್ಟರೂಪವನ್ನು ಕೊಟ್ಟರೆ, ಇದರ ಜೊತೆಗೆ ಪ್ರಕಟವಾಗುವ ಕಥೆಗಾರನ ವೈಯಕ್ತಿಕ ಅನುಭವ, ಹಾಗೂ ಅವನು ಬಳಸುವ ಆಡುಮಾತು ಕಥೆಗೆ ಜೀವಂತಿಕೆಯನ್ನೂ, ವೈವಿಧ್ಯವನ್ನೂ ತಂದುಕೊಡುತ್ತವೆ. ಪ್ರತಿಯೊಬ್ಬ ಕಥೆಗಾರನೂ ತನ್ನದೇ ಅನುಭವದ ಆಧಾರದಮೇಲೆ ಕಥೆಯ ಘಟನೆಗಳನ್ನು ವ್ಯಾಖ್ಯಾನಿಸುತ್ತಾನೆ. ಆದರೆ ಗೀತೆಗಳಲ್ಲಿ ಇದು ಸಾಧ್ಯವಿಲ್ಲ. ವೈಯಕ್ತಿಕ ಅನುಭವ ಮತ್ತು ಪ್ರತಿಭೆಗಳಿಂದ ಜನಪದ ಕಥೆ ಪ್ರತಿಯೊಂದು ಬಾರಿ ನಿರೂಪಣೆಯಾಗುವಾಗಲೂ ಹೊಸರೂಪು ವೈವಿಧ್ಯಗಳನ್ನು ತಳೆಯುತ್ತದೆ. ಅಲ್ಲಿ ಪ್ರಕಟವಾಗಿರುವ ಕಥೆಗಾರನ ವೈಯಕ್ತಿಕ ಅನುಭವ ಹಾಗೂ ಪ್ರತಿಕ್ರಿಯೆಗಳು ಅವನ ಸಂಸ್ಕೃತಿಯ ಚಿತ್ರವನ್ನು ಕೊಡುತ್ತವೆ. ಕಥೆಯ ಹಂದರವನ್ನು ತುಂಬುಗೊಳಿಸಲು ಕಥೆಗಾರನ ಅನುಭವ ವಿಸ್ತಾರ, ಕಲ್ಪನಾ ಶಕ್ತಿ, ಕಥೆಯ ಕ್ರಿಯೆಯಲ್ಲಿ ಆತನ ಪಾಲ್ಗೊಳ್ಳುವಿಕೆ ಎಲ್ಲವೂ ಕಾರಣವಾಗುತ್ತವೆ. ಜನಪದ ಕಥೆ ಪ್ರಜ್ಞಾಪೂರ್ವಕವಾಗಿ ಮನರಂಜಕವಾಗುತ್ತದೆ. ಆದರೆ ನಮಗೆ ನಿಜಕ್ಕೂ ಸ್ವಾರಸ್ಯ ಎನ್ನಿಸುವುದು ಕಥೆಯಲ್ಲಿ ಅಪ್ರಜ್ಞಾಪೂರ್ವಕವಾಗಿ ಮಿಂಚಿರುವ ಶುದ್ಧ ಗ್ರಾಮೀಣ ಕಥೆಗಾರನ ಅನುಭವಗಳು.

ಜನಪದ ಕಥೆಗಳ ಪ್ರತಿಯೊಂದು ಪ್ರಕಾರಕ್ಕೂ ತನ್ನದೇ ಆದ ಸೌಂದರ್ಯ ವಿದೆ. ನಿತ್ಯ ಜೀವನದ ಅನುಭವದ ಪ್ರಕಟನೆಗೆ ಹೆಚ್ಚು ಅವಕಾಶವಿರುವ ರಮ್ಯ ಕಥೆ ಗಳಲ್ಲಿ ಸ್ವಾರಸ್ಯ, ಸೌಂದರ್ಯ ಅಡಗಿರುವುದೇ ಈ ಅನುಭವದ ಪ್ರಕಟನೆಯಲ್ಲಿ.

ಒಂದು ಕಥಾ ಭಾಗವನ್ನು ಪರಿಶೀಲಿಸೋಣ :

ಗಂಡನ ಮನೆಯಲ್ಲಿ ಎಲ್ಲರ ಅನಾದರಕ್ಕೆ ಪಾತ್ರಳಾದ ಹೆಣ್ಣೊಬ್ಬಳು ಕೊನೆಗೊಮ್ಮೆ ತನ್ನ ಗಂಡನ ಪ್ರೀತಿಯನ್ನು ಪಡೆದು ತನ್ನ ಶಪಥವನ್ನು ಈಡೇರಿಸಿಕೊಳ್ಳುವುದು ಒಂದು ಕಥೆಯ ವಸ್ತು, ಈ ಕಥೆಯಲ್ಲಿ ಕಥೆಗಾರನ ದೃಷ್ಟಿ ಆಕೆಯ ಕಠಿಣ ಜೀವನ, ಅಸಹಾಯಕತೆ, ಒಳ್ಳೆಯತನ, ಮುಗ್ಧತೆಗಳತ್ತಲೇ ಕೇಂದ್ರಿಕೃತ. ಅವಳ ಹೀನಾಯ ಸ್ಥಿತಿಯನ್ನು ವರ್ಣಿಸುವ ಒಂದು ಸನ್ನಿವೇಶ ಹೀಗಿದೆ : "ಒಂದು ಸಂತರ್ಪ ಣೆಯ ದಿನ. ಅತ್ತಿಗೇರು ಎಲ್ಲ ಎಲ್ಲ ಮ್ಯಾಲೆ ಬಿದ್ದಿದ್ದ ಅನ್ನವ ಒಂದು ಬಟ್ಟಲಿಗೆ ಹಾಕಿ ಮಡಿಕತ್ತರೆ. ಮಜ್ಜಿಗೆ ಕಡೆದು ಕೊಟ್ಟಿಗೇಲಿದ್ದ ಪಾನಿಗೆ ಹುಯ್ಸಿದಾಗ ಅದರ ಮೇಲೆ ತೇಲುತ್ತಿದ್ದ ಜಿಡ್ಡನ್ನೆಲ್ಲ ಗೋರಿ ದೀಪಕ್ಕೆಹಾಕಿ ಬಟ್ಟೆಯಿಂದ ಬತ್ತಿಮಾಡಿ, ದೀಪ ಹತ್ತಿಸಿ, "ಇವತ್ತು ಊರಿನವರಿಗೆಲ್ಲ ಊಟ, ನಂಗೆ ಇವೊತ್ತು ಒಳ್ಳೆ ಅನ್ನ ಇಕ್ಕೋದು" ಅಂತ ನೋಡ್ತಿದ್ದಾಗ ಎಂಜಲನ್ನು ಹಾಕಿ ಹೊರಟೋಯ್ತಾರೆ, ಆಗ ಅವಳು "ಅಯ್ಯೋ ದಿನಾ ಭಾವ, ಅಕ್ಕ, ಗಂಡನ ಎಂಜಲ್ನ ತಿನ್ನುತ್ತಿದ್ದೆ, ಇವೊತ್ತು

ಊರಿನವರ್ದ್ದೆಲ್ಲ ತಿನ್ಬೇಕಲ್ಲಾ ಅಂತ ಹಸುಗಳಿಗೆ ಹಾಕಿ ಅಳ್ತಾ ಕೂರ್ತ್ತಾಳೆ." ಈ ವಿವರಗಳು ಹಿರಿಯರ ಕ್ರೂರತನ, ದಬ್ಬಾಳಿಕೆಗಳನ್ನೂ, ಕಿರಿಯುವಳ ಅತ್ಯಂತ ದಾರುಣ ಪರಿಸ್ಥಿತಿಯನ್ನೂ ಸಮರ್ಥವಾಗಿ ಚಿತ್ರಿಸಿವೆ. ಮಜ್ಜಿಗೆಯ ಜಿಡ್ಡಿನಲ್ಲಿ ಅವಳು ದೀಪ ಹತ್ತಿಸಿದ್ದು ಅವಳ ಹೀನಾಯ ಪರಿಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ. ಕಥೆಗಾರ ಕೊಡುವ ಇಂತಹ ವಾಸ್ತವ ಅನುಭವದ ಚಿತ್ರಣ ಗಾಢವಾದ ಪರಿಣಾಮ ಬೀರುತ್ತದೆ. ಕಥಾನಾಯಕಿಯ ಬಗ್ಗೆ ಮರುಕ ಹುಟ್ಟಿಸುತ್ತದೆ. ಆಯಾ ವಿಷಯವನ್ನು ವ್ಯಾಖ್ಯಾನಿಸುವಲ್ಲಿ ಕಥೆಗಾರನ ಅನುಭವ ಪ್ರಪಂಚವೇ ನೆರವಿಗೆ ಬರುವುದು. ಕಥೆಗಾರ ಅನುಭವಿಯಾದಷ್ಟು ಆಯಾ ಪ್ರಕಾರ ಸತ್ವಯುತವಾಗಿ ಮೈದಾಳುತ್ತದೆ. ಶಿಷ್ಟ ಸಾಹಿತ್ಯದಲ್ಲಿ ಪ್ರಯತ್ನಪೂರ್ವಕವಾಗಿಯೂ ಸಾಧಿಸಲು ಅಸಾಧ್ಯವಾದಂತಹ ಸತ್ವಭರಿತ ಹಾಗೂ ವೈವಿಧ್ಯಪೂರ್ಣ ಭಾಷೆ ಜನಪದ ಕಥೆಗಾರನಿಗೆ ಸಹಜವಾಗೇ ಕೈಗೂಡಿದೆ. ಸಾಹಿತ್ಯದ ಮೂಲಭೂತ ಅವಶ್ಯಕತೆಗಳಾದ ಅನುಭವ, ಭಾಷೆ ಹಾಗೂ ಇವೆರಡನ್ನೂ ಬೆಸೆಯುವ ಪ್ರತಿಭೆ ಇವುಗಳನ್ನು ಜನಪದ ಕಥೆಗಳಲ್ಲಿ ಕಾಣಬಹುದಾಗಿದೆ.

ಗಾದೆಗಳು ಜನಪದದ ಜೀವನಾನುಭವ ಹರಳುಗಟ್ಟಿದ ನುಡಿಕಟ್ಟುಗಳು. ನಿತ್ಯ ಜೀವನದ ಅನುಭವಗಳನ್ನು ಕೆಲವೇ ಕೆಲವು ಮಾತುಗಳಲ್ಲಿ ಪರಿಣಾಮಕಾರಿಯಾಗಿ ರೂಪಿಸಿದಂತಹ ಪ್ರಕ್ರಿಯೆಯನ್ನು ಇಲ್ಲಿ ಕಾಣಬಹುದು. ಯಾವುದಾದರೂ ಗಾದೆಯನ್ನು ಮೊದಲು ಸೃಷ್ಟಿಸಿದಾತ ಅಪೂರ್ವ ಲೋಕನಿರೀಕ್ಷಣಾ ದೃಷ್ಟಿಯುಳ್ಳವನೂ, ಪ್ರತಿಭಾವಂತನೂ ಆಗಿರಬೇಕು. ಹೀಗೆ ಸೃಷ್ಟಿಯಾದ ಗಾದೆ ಜನರ ಮನ್ನಣೆಯನ್ನು ಪಡೆದು ಚಲಾವಣೆಗೆ ಬರುತ್ತದೆ. ಇಂತಹ ನುಡಿಕಟ್ಟಿನಲ್ಲಿ ಹರಳುಗಟ್ಟಿದ ಅನುಭವವನ್ನು ಸಂದರ್ಭಾನುಸಾರವಾಗಿ ಬಳಸಿ ಬುದ್ಧಿ ಹೇಳುವುದು, ನೀತಿ ಬೋಧಿಸುವುದು, ಲೋಕ ವಿಮರ್ಶೆ ಮಾಡುವುದು ಗಾದೆಯ ಮುಖ್ಯ ಉದ್ದೇಶ. ಆದ್ದರಿಂದ ಇದು ನಿತ್ಯ ಜೀವನಕ್ಕೆ ನೇರವಾಗಿ ಸಂಬಂಧಿಸಿದುದು. ಇಲ್ಲಿ ಅನುಭವವೇ ಮುಖ್ಯ. ಹೀಗೆ ಅನುಭವವನ್ನು ವ್ಯಕ್ತಪಡಿಸುವ ಗಾದೆಯ ಭಾಷೆ ಸಾಂಕೇತಿಕವಾಗಿರಬಹುದು, ಅಲಂಕಾರಿಕವಾಗಿರಬಹುದು, ಸ್ವಭಾವೋಕ್ತಿ ಸಂಪನ್ನವಾಗಿರಬಹುದು. ಉದಾಹರಣೆಗೆ 'ಎಳಗರು ಎತ್ತಲ್ಲ ದಳವಾಯಿ ದೊರೆಯಲ್ಲ' ಎಂಬ ಗಾದೆ ವಾಸ್ತವ ಅನುಭವದ ನೇರ ಮಾತೂ ಆಗಿದೆ, ಅದೇ ಸಮಯದಲ್ಲಿ ಅದು ಅಂತಹುದೇ ಸಂದರ್ಭವನ್ನು ಸೂಚಿಸುವ ಅಲಂಕಾರಿಕ ಮಾತೂ ಆಗಿದೆ. 'ಇಕ್ಕೊಂಡುಣ್ಣುವ ಜಾಗದಲ್ಲಿ ಕದ್ದುಕೊಂಡು ತಿಂದರು' ಎಂಬ ಗಾದೆ ಸಂಕುಚಿತ ಮನಸ್ಸಿನ, ನೇರ ನಡವಳಿಕೆಯಿಲ್ಲದ ವ್ಯಕ್ತಿಗಳ ಸ್ವಭಾವ, ವರ್ತನೆಗಳನ್ನು ಯಾವ ಅಲಂಕಾರವೂ ಇಲ್ಲದೆ ಅತ್ಯಂತ ಪರಿಣಾಮಕಾರಿಯಾಗಿ ಹೇಳಿದೆ. ಅಚ್ಚರಿಪಡುವಷ್ಟು ತೀವ್ರ ಅರ್ಥವನ್ನು ಈ ಗಾದೆ ಒಳಗೊಂಡಿದೆ. ಗಾದೆಯ ರಚನೆಯಲ್ಲಿ ಸಾಹಿತ್ಯಿಕ ದೃಷ್ಟಿಯಿಲ್ಲದಿದ್ದರೂ ಅನುಭವವೇ ಇಲ್ಲಿ ಸಾಹಿತ್ಯವಾಗಿ ಮೈತಳೆದಿದೆ. ಅನುಭವ ಮತ್ತು ಅಭಿವ್ಯಕ್ತಿ ಇವೆರಡನ್ನೂ ಇಲ್ಲಿ ಬೇರ್ಪಡಿಸಿ ವಿಶ್ಲೇಷಿಸುವುದೇ ಅಸಾಧ್ಯ ಎನಿಸುವಷ್ಟು ಅವಿನಾಭಾವ ಕಂಡುಬರುತ್ತದೆ.

ಒಗಟು ಒಂದು ಮನರಂಜನಾ ಆಟ. ಇಲ್ಲಿ ಬುದ್ಧಿಯ ಕಸರತ್ತು ಪ್ರಧಾನವಾಗಿದೆ. ಆದರೆ ಎಷ್ಟೋ ಒಗಟುಗಳ ನಿರೂಪಣೆಯಲ್ಲಿ ಜನಪದ ಜೀವನದ ಚಿತ್ರಣ ನಮಗೆ ದೊರೆಯುತ್ತದೆ.

ಅಕ್ಕ ತೌರಿಗೆ ಹೋಗುವಾಗ
ಸರ್‍ರನೆ ಹೋಗ್ತಾಳೆ
ಗಂಡನ ಮನೆಗೆ ಬರುವಾಗ
ಹೆಜ್ಜೆ ಹೆಜ್ಜೆಗೂ ಕಣ್ಣೀರು ಸುರಿಸುತ್ತಾ
ನಿಧಾನವಾಗಿ ಬರುತ್ತಾಳೆ.

ಎಂಬ ಒಗಟು ಬಾವಿಯಿಂದ ನೀರು ಸೇದುವುದನ್ನು ಕುರಿತದ್ದು. ಇದನ್ನು ನಿರೂಪಿಸಲು ಒಗಟುಕಾರ ಬಳಸಿರುವ ವಿವರಗಳು ನಮ್ಮ ನಿತ್ಯ ಜೀವನದ ಅನುಭವವನ್ನೇ ಒಳಗೊಂಡಿವೆ. ಆದರೆ ಹೀಗೆ ಅನುಭವವನ್ನು ಮೈಗೂಡಿಸಿಕೊಂಡಂಥಾ ಒಗಟುಗಳ ಸಂಖ್ಯೆ ಕಡಿಮೆ.

ಇದೇ ಸಂಸ್ಕೃತಿಯ ಅನುಭವಗಳು ಅನಿಸಿಕೆಗಳು ಜನಪದ ಗೀತೆಯಲ್ಲಿ ಸುಂದರವಾಗಿ ಪ್ರಕಟವಾಗಿದ್ದರೆ, ಕಥೆಗಳಲ್ಲಿ ಪ್ರಕಟವಾಗುವುದು ಆಯಾ ನಿರೂಪಣಾಕಾರನ ಅನುಭವ. ಗಾದೆಗಳಲ್ಲಿ ಯಾರೋ ಒಬ್ಬ ವ್ಯಕ್ತಿಯಿಂದ ಮೊನೆಯಾಗಿ ಬಂದ ಸಾಮಾಜಿಕ ವಿಮರ್ಶೆಯು ಮಾತು ಜನರ ಮನ್ನಣೆಯನ್ನು ಪಡೆದುಕೊಂಡು ಚಲಾವಣೆಗೆ ಬರುತ್ತದೆ. ಆ ವ್ಯಕ್ತಿಯ ಅನುಭವ ಇಡೀ ಸಮುದಾಯದ ಅನುಭವವೇ ಆಗಿರುತ್ತದೆ. ಒಗಟುಗಳಲ್ಲಿ ಮಿಂಚುವ ಅನುಭವ ಸಂಪೂರ್ಣವಾಗಿ ಅಪ್ರಜ್ಞಾಪೂರ್ವಕವಾದದ್ದು.

# ಸಾಹಿತ್ಯದ ಮೂಲ ಪ್ರೇರಣೆ

ಡಾ ಜಿ. ಎಸ್. ಶಿವರುದ್ರಪ್ಪ

ಮನುಷ್ಯರಾದ ನಮಗೆ, ನಮ್ಮಲ್ಲಿ ಸಂಚಯನಗೊಳ್ಳುವ ಅನುಭವಗಳನ್ನು ಬೇರೆಯವರೆದುರು ತೋಡಿಕೊಳ್ಳುವುದರಲ್ಲಿ ಒಂದು ಬಗೆಯ ಸುಖವಿದೆ. ಈ ಸುಖಕ್ಕೆ ನಮ್ಮೊಳಗಿನ ಅನುಭವಗಳ ಒತ್ತಡದ ವೇದನೆಗೆ ಒದಗುವ ಬಿಡುಗಡೆ ಒಂದು ಕಾರಣ ವಾದರೆ, ಅದನ್ನು ಹತ್ತು ಜನದ ಜತೆಗೆ ಹಂಚಿಕೊಳ್ಳುವುದರಿಂದ ಬರುವ ಸಮಾಧಾನ ಇನ್ನೊಂದು ಕಾರಣವಿರಬಹುದು. ಹೀಗೆ ತನ್ನಲ್ಲಿನ ಅನುಭವಗಳನ್ನು ಸಮುಚಿತ ವಾದ ಭಾಷಾ ಮಾಧ್ಯಮದ ಮೂಲಕ ಪರಿಣಾಮಕಾರಿಯಾಗಿ ಬಿಡುಗಡೆ ಮಾಡಿ ಕೊಳ್ಳುವ ಕಲೆಗಾರಿಕೆಯನ್ನು ಸಾಹಿತ್ಯ ಎಂದು ಕರೆಯಬಹುದು.

ಅನುಭವಗಳನ್ನು ಬಹುಶಃ ಯಾರೂ ಹುಡುಕಿಕೊಂಡು ಹೋಗುವುದಿಲ್ಲ. ಲೋಕಕ್ಕೂ ನಮಗೂ ಒದಗುವ ನಿರಂತರ ಸಂಪರ್ಕ ಹಾಗೂ ಸಂಘರ್ಷಗಳ ಪರಿಣಾಮ ಗಳೇ ಅನುಭವಗಳಾಗಿ ಲಭಿಸುತ್ತವೆ. ಆದರೆ ಹೀಗೆ ನಮ್ಮಲ್ಲಿ ಬಂದು ಒದಗುವ ಎಷ್ಟೋ ಅನುಭವಗಳು, ನಮ್ಮ ಕ್ರಿಯೆ-ಪ್ರತಿಕ್ರಿಯೆಗಳ ಮೂಲಕ ಅಭಿವ್ಯಕ್ತವಾದರೆ, ಇನ್ನೆಷ್ಟೋ ನಮ್ಮ ಅಂತರಂಗದ ತಲಾತಲದಲ್ಲಿ ಮುಳುಗಿ ಹೋಗುತ್ತವೆ. ಆದರೆ ಯಾರು ತನ್ನಲ್ಲಿ ಸಂಚಯಗೊಂಡ ಅನುಭವಗಳನ್ನು ಒಂದು ವ್ಯವಸ್ಥೆಗೆ ತಂದು, ಉಚಿತವಾದ ರೀತಿಯಲ್ಲಿ ಅಭಿವ್ಯಕ್ತಪಡಿಸುವ ಕುಶಲತೆಯನ್ನು ಸಾಧಿಸಿಕೊಳ್ಳು ತ್ತಾನೆಯೋ ಅಂಥವನನ್ನು ಕವಿ, ಕಲೆಗಾರ ಎಂದು ಕರೆಯಬಹುದು. ಕಾವ್ಯ ಅಥವಾ ಕಲೆ ಎಂದರೆ, ತೀವ್ರವಾದ ಅನುಭವಗಳನ್ನು ಒಂದು ವ್ಯವಸ್ಥೆಗೆ ಒಳಪಡಿಸಿ, ರಮಣೀಯವಾದ ಒಂದು ಆಕಾರವನ್ನು ಕೊಡುವ ಸಾಮರ್ಥ್ಯದ ಪರಿಣಾಮ ಎಂದಂತಾ ಯಿತು. ಯಾಕೆಂದರೆ ಮೂಲತಃ ನಮ್ಮಲ್ಲಿ ಸಂಚಯನಗೊಳ್ಳುವ ಅನುಭವಗಳಿಗೆ ಒಂದು ವ್ಯವಸ್ಥೆ ಇರುವುದಿಲ್ಲ. ಒಂದರ ಹಿಂದೊಂದು ಒಂದರ ಮೇಲೊಂದು ಬಂದು ಮನಸ್ಸಿನ ಉಗ್ರಾಣದಲ್ಲಿ ಜಮಾಯಿಸುವ ಅನುಭವಗಳು, ಅಸ್ತವ್ಯಸ್ತವೂ, ಅಖಚಿತವೂ ಆದ ಸಮೂಹ ಸ್ಥಿತಿಯಲ್ಲಿರುತ್ತವೆ. ಅವುಗಳಲ್ಲಿ ಯಾವುದನ್ನು ತಾನು ಅಭಿವ್ಯಕ್ತಿಗೆ ಅಳವಡಿಸಬಹುದು, ಯಾವುದು ಅಭಿವ್ಯಕ್ತಿಗೆ ಯೋಗ್ಯವಲ್ಲ ಎಂಬ

ಮೂಲಭೂತ ವಿವೇಚನೆಗೆ ಅಥವಾ ಆಯ್ಕೆಗೆ ಒಳಪಡಿಸುವುದೇ ಕಲೆಗಾರನ ವೈಶಿಷ್ಟ್ಯವಾಗಿದೆ. ಅನಂತರ ಅಭಿವ್ಯಕ್ತಿಗೆ ತಕ್ಕ ಅನುಭವಗಳಿಗೆ ಒಂದು ಆಕಾರ ಕೊಡುವ ಕಸುಬಿನಲ್ಲಿ ಕವಿ, ಕಲಾವಿದ ತೊಡಗುತ್ತಾನೆ. ಆದರೆ ಹೀಗೆ ಅನುಭವಕ್ಕೆ ಆಕಾರ ಕೊಡುವಾಗ, ಬಂದಂಥ ಅನುಭವಗಳನ್ನು ಯಥಾವತ್ತಾಗಿ ಬಿಡುಗಡೆ ಮಾಡುವ ಒಂದು ಮಾಧ್ಯಮವಾಗುವುದಿಲ್ಲ ಕವಿ ; ಅದರ ಬದಲು ಅನುಭವಗಳನ್ನು ಪುನರನುಭವಿಸುವ ಅತ್ಯಂತ ಮುಖ್ಯವಾದ ಒಂದು ಕಾರ್ಯ ನಡೆಯುತ್ತದೆ ಅವನ ಮನಸ್ಸಿನಲ್ಲಿ. ಇದನ್ನೆ ಸೃಜನ ಪ್ರಕ್ರಿಯೆ ಎಂದು ಕರೆಯಬಹುದು, ಈ ದೃಷ್ಟಿಯಿಂದ ಸಾಹಿತ್ಯದ ಮೂಲ ದ್ರವ್ಯ ಅನುಭವಗಳೇ ಆದರೂ ಸಾಹಿತ್ಯಾಭಿವ್ಯಕ್ತಿ ಎನ್ನುವುದು ಕೇವಲ ಅನುಭವಗಳ ಅಭಿವ್ಯಕ್ತಿ ಅಲ್ಲ. ಇದು ಅನುಭವಗಳ ಪುನರನುಭವಗಳ ಪರಿಣಾಮ. ಹೀಗೆ ಲೋಕಾನುಭವಗಳನ್ನು ಕಾವ್ಯಾನುಭವವನ್ನಾಗಿ ಪರಿವರ್ತಿಸುವ ಕ್ರಿಯೆ ನಡೆಯದ ಹೊರತು ಅಲ್ಲಿ ಸಾಹಿತ್ಯವೆಂಬುದು ಸಂಭವಿಸುವುದಿಲ್ಲ.

ಹಾಗಾದರೆ, ಕವಿ ತನಗಾಗುವ ಅನುಭವಗಳನ್ನು ಯಾಕೆ ಅಭಿವ್ಯಕ್ತಿಸದೆ ಸುಮ್ಮನಿರುವುದಿಲ್ಲ ; ತನ್ನ ಅನುಭವಗಳನ್ನು ಆವರಿವರೊಡನೆ ಹಂಚಿಕೊಳ್ಳುವುದಷ್ಟೇ ಇದರ ಹಿಂದಿರುವ ಪ್ರೇರಣೆಯೇ ? ಅಥವಾ ಅದಕ್ಕಿಂತ ಮೂಲಭೂತವಾದದ್ದು ಬೇರೆ ಏನಾದರೂ ಇದೆಯೇ ? –ಎಂಬ ಪ್ರಶ್ನೆ ಉದ್ಭವಿಸುತ್ತದೆ.

ನಮಗೆ ತೋರುವ ಮಟ್ಟಿಗೆ, ಮನುಷ್ಯನಿಗೆ ಕಾಲವನ್ನು ಕುರಿತ ಭಯ ಮತ್ತು ಅದರಿಂದ ಪಾರಾಗುವ ಪ್ರಯತ್ನಗಳೇ ಕಲಾನಿರ್ಮಿತಿಯ ಹಿಂದಿರುವ ಮೂಲ ಪ್ರೇರಣೆಯಾಗಿದೆ. ಕಾಲ ಎಂಬುದೊಂದು ನಿರಂತರ ಪ್ರವಾಹ. ನಾವು ಕಾಣುವ ಬದುಕು ನೋಡುನೋಡುತ್ತಲೇ ಈ ಕಾಲಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿದೆ ; ಅದರ ನಿಷ್ಠುರ ಸೆಳೆತಕ್ಕೆ ಯಾವುದೂ ಹೊರತಲ್ಲ. ಕಾಲಗರ್ಭದ ಅಗಸ್ತ್ಯ ಜೀರ್ಣಾಗ್ನಿಯಲ್ಲಿ ಶತಶತಮಾನಗಳ ನಾಗರೀಕತೆ, ಸಂಸ್ಕೃತಿಗಳು ಕರಗಿಹೋಗಿವೆ. ಕ್ಷಣಕ್ಷಣವೂ ನಾವು ಹಳಬರಾಗುತ್ತಾ, ಗೋರಿಯ ದಾರಿಯಲ್ಲಿ ಸಾಗುತ್ತಿದ್ದೇವೆ. ಕಣ್ಣೆದುರು ಕಂಡದ್ದು, ಮನಸ್ಸು ಉಂಡದ್ದು ಎಲ್ಲವೂ ಹೀಗೆ ಈ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿರುವಾಗ ನಾವು ಕಂಡದ್ದನ್ನು ನಮಗೆ ಅನಿಸಿದ್ದನ್ನು ಒಟ್ಟಿನಲ್ಲಿ ನಮ್ಮ ವ್ಯಕ್ತಿತ್ವದ ಒಂದಷ್ಟು ಭಾಗವನ್ನಾದರೂ ಈ ಕಾಲದ ಉಪಹತಿಯಿಂದ ಉಳಿಸಿ, ನಿಲ್ಲಿಸಲು ಸಾಧ್ಯವಿಲ್ಲವೆ ? ಸಾಧ್ಯವಾಗುವುದಾದರೆ ದಾರಿ ಯಾವುದು ? ಈ ಅನ್ವೇಷಣೆಯ ಸಾಹಸದ ಪರಿಣಾಮದ ಕನಸುಗಳೇ ನಿರ್ಮಿಸಿವೆ ಸ್ವರ್ಗಲೋಕದ ಕಲ್ಪನೆಯನ್ನು ; ಕ್ಷೀರಸಾಗರ ಮಂಥನದಿಂದ ಅಮೃತವನ್ನು ಪಡೆದು ಅಮರರಾದ ನಿರ್ಜರರ ಕತೆಯನ್ನು ; ಕಳೆದು ಹೋಗುವ ಯೌವನವನ್ನು. ತನ್ನ ಮಗನಿಂದ ಪಡೆದುಕೊಂಡ ಯಯಾತಿಯ ವೃತ್ತಾಂತವನ್ನು. ಈ ಪ್ರಯತ್ನವೇ ಸೃಜಿಸಿದೆ ಸಾಹಿತ್ಯ ಎಂಬ ಸಾಧನವನ್ನು. ಇಂದು ಇದ್ದು ನಾಳೆ ಕಾಲವಶವಾಗುವ ಕವಿ ಎಂಬ ವ್ಯಕ್ತಿಯ ಅಂತರಂಗದ

ಕ್ರಿಯೆ-ಪ್ರತಿಕ್ರಿಯೆಗಳನ್ನು, ಭಾವ-ಭಾವನೆಗಳನ್ನು, ಅನಿಸಿಕೆ-ಆಲೋಚನೆಗಳನ್ನು, ಕಲಾತ್ಮಕ ಅಭಿವ್ಯಕ್ತಿಗಳ ಮೂಲಕ, ಕಾಲದ ಉಪಹತಿಯಿಂದ ಪಾರುಮಾಡಿ, ಅನಂತ ಕಾಲದ ಆಸ್ವಾದದ ಸಾಮಗ್ರಿಯನ್ನಾಗಿ ಮಾಡುವುದು ಸಾಹಿತ್ಯ, ಕಲೆಗಳ ಮೂಲಕ ಸಾಧ್ಯವಾಗಿದೆ. ವ್ಯಾಸ-ವಾಲ್ಮೀಕಿಗಳಾಗಲಿ, ಕಾಳಿದಾಸ-ಪಂಪರಾಗಲಿ ಇವತ್ತು ಇಲ್ಲ ; ಅವರು ಬಾಳಿಬದುಕಿದ ಪರಿಸರವಾಗಲಿ, ಅವರು ಚಿತ್ರಿಸಿದ ವ್ಯಕ್ತಿಗಳಾಗಲಿ ಇವತ್ತು ಇಲ್ಲ. ಆದರೆ ಅವರ ಕೃತಿಗಳ ಮೂಲಕ, ಅಂದು ಅವರು ಕಂಡು ಉಂಡ ಬದುಕು, ಅವರ ಅನುಭವಗಳು ಎಲ್ಲ ಕಾಲದ ಓದುಗರ ಅನುಭವಗಳಲ್ಲಿ ಮತ್ತೆ ಹೊಸಹೊಸದಾಗಿ ಮೂಡಿ ನಿಲ್ಲುವ ನಿರಂತರತೆಯನ್ನು ಪಡೆದುಕೊಂಡಿವೆ. ಬೇರೊಂದು ಮಾತಿನಲ್ಲಿ ಹೇಳುವುದಾದರೆ, ಕಾಲದ ಉಪಹತಿಯಿಂದ ಪಾರಾಗಿ, ಕಾಲಾತೀತದ ನೆಲೆಗೆ, ತಮ್ಮ ಅನುಭವಗಳನ್ನು ನಿಲ್ಲಿಸುವ ಸಾಮರ್ಥ್ಯ ಅವರಿಗೆ ಸಿದ್ಧಿಸಿದೆ. ಈ ಅರ್ಥದಲ್ಲಿ ಸಾಹಿತ್ಯ ಕಾಲವನ್ನು ಗೆದ್ದು ನಿಲ್ಲುವ ಒಂದು ಮುಖ್ಯವಾದ ಪ್ರಯತ್ನವಾಗಿದೆ.

# ಅನುಬಂಧ ೧

## ಡಾ. ಪುರಾಣಿಕರ ಬಾಳಿನ ಹಾದಿಯಲ್ಲಿ

| | |
|---|---|
| ೧೮-೮-೧೯೧೮ | ಜನನ, ರಾಯಚೂರು ಜಿಲ್ಲೆಯ ಯಲಬುರಗಿ ತಾಲೂಕಿನ ದ್ಯಾಂಪುರದಲ್ಲಿ. ತಂದೆ ಕಲ್ಲಿನಾಥಶಾಸ್ತ್ರಿಯವರು, ತಾಯಿ ದಾನಮ್ಮನವರು. |
| ೫-೧೨-೧೯೪೩ | ವಿವಾಹ, ಗಿರಿಜಾದೇವಿಯವರೊಡನೆ |
| ೨-೮-೧೯೪೪ | ಅಸಿಸ್ಟೆಂಟ್ ಕಲೆಕ್ಟರ್, ನಾಂದೇಡ |
| ೨೨-೮-೧೯೪೫ | ಅಸಿಸ್ಟೆಂಟ್ ಕಲೆಕ್ಟರ್, ಲ್ಯಾಂಡ್ ರಿಕಾರ್ಡ್ಸ್ ವಿಭಾಗ ಗುಲ್ಬರ್ಗ |
| ೧೪-೮-೧೯೪೮ | ಅಸಿಸ್ಟೆಂಟ್ ಕಮೀಷನರ್, (ಜಾಗೀರಾತ್) |
| ೨೫-೯-೧೯೫೧ | ಅಸಿಸ್ಟೆಂಟ್ ರೆವಿನ್ಯೂ ಸೆಕ್ರೆಟರಿ, ಹೈದರಾಬಾದ್ ಸಂಸ್ಥಾನ |
| ೭-೨-೧೯೫೨ | ಸ್ಥಾನಿಕ ಸ್ವರಾಜ್ಯ ಆಡಳಿತ ಸಚಿವರ ಕಾರ್ಯದರ್ಶಿ |
| ೮-೧-೧೯೫೩ | ಕೃಷಿ ಯೋಜನೆ ಹಾಗೂ ಪೂರೈಕೆ ಇಲಾಖೆಯ ಸಚಿವರ ಕಾರ್ಯದರ್ಶಿ |
| ೯-೧೯೫೫ | ಡೆಪ್ಯೂಟಿ ಕಲೆಕ್ಟರ್, ತಾಂಡೂರು |
| ೫-೬-೧೯೫೭ | ಡೆಪ್ಯೂಟಿ ಕಲೆಕ್ಟರ್, ಯಾದಗಿರಿ |
| ೨೯-೩-೧೯೫೮ | ಭಾರತೀಯ ನಾಗರಿಕ ಸೇವೆ (ಐ.ಎ.ಎಸ್) |
| ೩೦-೩-೧೯೬೦ | ವಿದ್ಯಾ ಇಲಾಖೆಯ ಡೆಪ್ಯೂಟಿ ಸೆಕ್ರೆಟರಿ |
| ೬-೭-೧೯೬೨ | ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ನಿರ್ದೇಶಕರು |
| ೧೮-೨-೧೯೬೪ | ಅರ್ಥಶಾಖೆಯಲ್ಲಿ ಡೆಪ್ಯೂಟಿ ಸೆಕ್ರೆಟರಿ, ಚಿನ್ನ ನಿಯಂತ್ರಣಾಧಿಕಾರಿಗಳು |
| ೩-೭-೧೯೬೫ | ಡೆಪ್ಯೂಟಿ ಕಮೀಷನರ್, ಮಡಿಕೇರಿ |
| ೫-೫-೧೯೬೭ | ಸಾರಿಗೆ ಕಮೀಷನರ್, ಬೆಂಗಳೂರು |
| ೨೮-೯-೧೯೭೦ | ಡೆಪ್ಯೂಟಿ ಕಮೀಷನರ್, ಬೆಳಗಾವಿ |
| ೧-೧೨-೧೯೭೨ | ಲೇಬರ್ ಕಮೀಷನರ್, ಬೆಂಗಳೂರು |
| ೧೯೭೬ | ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ |
| ೩೦-೬-೧೯೭೬ | ನಿವೃತ್ತಿ ಹಾಗೂ ವಿಶ್ರಾಂತ ಜೀವನ |
| ೧೯೭೮ | ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ |
| ೧೯೮೦ | ಭಿಲ್ವಾರ ಪ್ರಶಸ್ತಿ (ಭಾರತೀಯ ಭಾಷಾ ಪರಿಷತ್ತು, ಕಲ್ಕತ್ತಾ) |
| ೧೯೮೧ | ಮಾಳವಾಡ ಪ್ರಶಸ್ತಿ |

# ಅನುಬಂಧ ೨

## ಡಾ. ಸಿದ್ಧಯ್ಯ ಪುರಾಣಿಕರ ಸಾಹಿತ್ಯ ಸಂಪದ

| ಕ್ರ.ಸಂ. | ಪುಸ್ತಕದ ಹೆಸರು | ಸ್ವರೂಪ | ಪ್ರಕಟವಾದ ವರ್ಷ |
|---|---|---|---|
| ೧. | ಸುಬೋಧಸಾರ | ಸಂಪಾದಿತ ಕೃತಿ (ಹರ್ಡೇಕರ ಮಂಜಪ್ಪನವರೊಡನೆ) | ೧೯೩೯ |
| ೨. | ಆತ್ಮಾರ್ಪಣ | ೩ ಅಂಕದ ರಂಗನಾಟಕ | ೧೯೪೨ |
| ೩. | ಶ್ರೀಕಾರ ಹಾಗೂ ಪ್ರಬಂಧ ಮಾಲೆ | ಸಂಪಾದಿತ ಕೃತಿ (ಶ್ರೀ ಇಟಗಿ ರಾಘವೇಂದ್ರ ಅವರೊಡನೆ) | ೧೯೫೨ |
| ೪. | ಜಲಪಾತ | ಕವನ ಸಂಕಲನ | ೧೯೫೩ (ದ್ವಿ. ೧೯೬೪) |
| ೫. | ಕರುಣಾಶ್ರಾವಣ | ಕವನ ಸಂಕಲನ | ೧೯೫೫ (ದ್ವಿ. ೧೯೬೭) |
| ೬. | ತುಷಾರ ಹಾರ | ಕಿರುಗತೆಗಳು | ೧೯೫೬ |
| ೭. | ಪದ್ಯ ರತ್ನಾಕರ | ಸಂಪಾದನೆ (ನರಸಿಂಗರಾವ್ ಮಾನ್ವಿ ಮತ್ತು ಎಫ್.ಜಿ. ಮಠದ ಇವರೊಡನೆ) | ೧೯೫೬ |
| ೮. | ಮಾನಸ ಸರೋವರ | ಕವನ ಸಂಕಲನ | ೧೯೫೯ |
| ೯. | ಭಾರತವೀರ | ೩ ಅಂಕದ ರಂಗನಾಟಕ | ೧೯೬೩ |
| ೧೦. | ಶರಣ ಚರಿತಾಮೃತ | ಜೀವನ ಚರಿತ್ರೆ | ೧೯೬೪ (ದ್ವಿ. ೧೯೭೭) |
| ೧೧. | ಮಹಾತ್ಮ ಕನಕದಾಸ ಪ್ರಶಸ್ತಿ | ಸಂಪಾದಕ ಸಮಿತಿಯ ಅಧ್ಯಕ್ಷರಾಗಿ | ೧೯೬೫ |
| ೧೨. | ರಜತ ರೇಖೆ | ಪ್ರಸಾರ ನಾಟಕಗಳು | ೧೯೬೫ |
| ೧೩. | ಕಲ್ಲೋಲ ಮಾಲೆ | ಅನುಭಾವ ಗೀತಗಳು | ೧೯೬೮ |
| ೧೪. | ಶರಣ ಪ್ರಸಾದ | ಸಂಪಾದಿತ ಕೃತಿ (ಬಿ. ಎ. ಸನದಿಯವರೊಂದಿಗೆ) | ೧೯೬೯ |
| ೧೫. | ಮೊದಲು ಮಾನವನಾಗು | ಕವನ ಸಂಗ್ರಹ | ೧೯೬೯ |
| ೧೬. | ತುಪ್ಪಾರೊಟ್ಟಿ ಗೇ ಗೇ ಗೇ | ಮಕ್ಕಳ ಪದಗಳು | ೧೯೭೩ |
| ೧೭. | ಸಿದ್ಧರಾಮ | ಜೀವನ ಚರಿತ್ರೆ | ೧೯೭೪ |
| ೧೮. | ನಿರ್ಬಂಧನ | ೨ ಏಕಾಂಕ ನಾಟಕಗಳು | ೧೯೭೪ |
| ೧೯. | ತ್ರಿಭುವನ ಮಲ್ಲ | ಐತಿಹಾಸಿಕ ಕಾದಂಬರಿ | ೧೯೭೪ |
| ೨೦. | ಬಸವಣ್ಣನವರ ಜೀವನ ಹಾಗೂ ಸಂದೇಶ | ಉಪನ್ಯಾಸ | ೧೯೭೭ |
| ೨೧. | ವಚನೋದ್ಯಾನ | ವಚನಗಳು | ೧೯೭೭ |
| ೨೨. | ನಜೀರ್ ಅಕಬರಾಬಾದಿ | ಜೀವನ ಚರಿತ್ರೆ | ೧೯೭೮ |
| ೨೩. | ಗಿಲ್ ಗಿಲ್ ಗಿಲಗಚ್ಚಿ | ಮಕ್ಕಳ ಪದಗಳು | ೧೯೭೮ |
| ೨೪. | ಹರ್ಡೇಕರ್ ಮಂಜಪ್ಪನವರು | ಜೀವನ ಚರಿತ್ರೆ | ೧೯೭೮ |
| ೨೫. | ಮಿರ್ಜಾ ಗಾಲಿಬ್ | ಜೀವನ ಚರಿತ್ರೆ | ೧೯೭೯ |

# ಅನುಬಂಧ ೩

## ಇವರು ನಮ್ಮ ಲೇಖಕರು

೧. ಶ್ರೀ ಕುವೆಂಪು,
'ಉದಯರವಿ', ವಾಣೀವಿಲಾಸಪುರಂ,
ಮೈಸೂರು–570 002

೨. ಡಾ. ಸಿದ್ಧಯ್ಯ ಪುರಾಣಿಕ
'ಶ್ರೀ ಗಿರಿ'
4–5 ಎ, ಆಲಿ ಆಸ್ಕರ್ ರಸ್ತೆ
ಬೆಂಗಳೂರು–560 052

೩. ಡಾ. ಎಸ್. ಜಿ. ಥಿವಾರಿ
ಪ್ರಾಂಶುಪಾಲರು,
ಕೆ.ಎಲ್.ಇ. ಸಂಸ್ಥೆಯ ಸಂಜೆ
ಮಹಾವಿದ್ಯಾಲಯ, ರಾಜಾಜಿನಗರ
ಬೆಂಗಳೂರು–560 010

೪. ಶ್ರೀ ಚೆನ್ನವೀರ ಕಣವಿ
ನಿರ್ದೇಶಕರು, ಪ್ರಸಾರಾಂಗ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

೫. ಡಾ. ಎಂ. ಶಶಿಕಲಾ ಮೋಳದಿ
ಕನ್ನಡ ಪಾಧ್ಯಾಪಕಿ,
ಗುಲ್ಬರ್ಗ ವಿಶ್ವವಿದ್ಯಾಲಯ,
ಗುಲ್ಬರ್ಗ

೬. ಶ್ರೀಮತಿ ನೀಲಮ್ಮ ಕತ್ನಳ್ಳಿ
ಕನ್ನಡ ಪ್ರಾಧ್ಯಾಪಕಿ,
ಎಸ್.ಎಸ್. ಮರಗೋಳ ಕಾಲೇಜು,
ಶಹಾಬಾದ, ಗುಲ್ಬರ್ಗಾ ಜಿಲ್ಲೆ

೭. ಶ್ರೀ ಬೈರಮಂಗಲ ರಾಮೇಗೌಡ
ಉಪಸಂಪಾದಕ,ಜಾನಪದ ವಸ್ತುಕೋಶ
ಕನ್ನಡ ಸಾಹಿತ್ಯ ಪರಿಷತ್ತು,
ಚಾಮರಾಜಪೇಟೆ, ಬೆಂಗಳೂರು-18

೮. ಪ್ರೊ. ವಸಂತ ಕುಷ್ಟಗಿ
ಪ್ರಾಂಶುಪಾಲರು,
ಎಂ.ಎಸ್.ಐ. ಡಿಗ್ರಿ ಕಾಲೇಜು,
ಗುಲ್ಬರ್ಗ

೯. ಶ್ರೀ ಎಂ.ಆರ್. ಬುದ್ಧಿವಂತಶೆಟ್ಟಿ
ರಂಗಂಪೇಟೆ,
ಸುರಪುರ, ಗುಲ್ಬರ್ಗಾ ಜಿಲ್ಲೆ

೧೦. ಡಾ. ಶೈಲಜಾ ಉಡಚಣ
ಕನ್ನಡ ವಿಭಾಗದ ಮುಖ್ಯಸ್ಥರು,
ಸರಕಾರಿ ಕಾಲೇಜು, ಗುಲ್ಬರ್ಗ

೧೧. ವಿದ್ವಾನ್ ಎಂ.ಜಿ.
ನಂಜುಂಡಾರಾಧ್ಯ
ಪ್ರಬೋಧ ಮುದ್ರಣ ಮತ್ತು
ಪ್ರಕಟನಾಲಯ, ಬಸವೇಶ್ವರ ರಸ್ತೆ,
ಮೈಸೂರು–570004

೧೨. ಶ್ರೀ ಷಣ್ಮುಖಯ್ಯ ಅಕ್ಕೂರಮಠ
67. ದೇವಗಂಗೋತ್ರಿ,
ಶಂಕರಮಠದ ರಸ್ತೆ, ಶಂಕರಪುರಂ,
ಬೆಂಗಳೂರು-560 004

೧೩. ಡಾ. ದ.ರಾ. ಬೇಂದ್ರೆ
'ಶ್ರೀ ಮಾತಾ'
ಸಾಧನಕೇರಿ, ಧಾರವಾಡ

೧೪. ಶ್ರೀ ಸಿಂಪಿ ಲಿಂಗಣ್ಣ
ಚಡಚಣ
ವಿಜಾಪುರ ಜಿಲ್ಲೆ

೧೫. ಡಾ. ಡಿ.ಎಸ್. ಕರ್ಕಿ
ಹೊಸೂರು, ಹುಬ್ಬಳ್ಳಿ

೧೬. ಡಾ. ಬಿ.ಸಿ. ಜವಳಿ
ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

೧೭. ಶ್ರೀ ಬಿ.ಎ. ಸನದಿ
Extension Officer F.P.
All India Radio,
BOMBAY–20

೧೮. ಡಾ. ಮಲ್ಲಿಕಾರ್ಜುನ ಲಠ್ಠೆ
ಕನ್ನಡ ಪ್ರಾಧ್ಯಾಪಕರು,
ಗುಲ್ಬರ್ಗ ವಿಶ್ವವಿದ್ಯಾಲಯ,
ಗುಲ್ಬರ್ಗ

೧೯. ಶ್ರೀ ಬಿ. ಪಾಂಡುರಂಗರಾವ್
825, ಕುಮಾರವ್ಯಾಸ ಕೃಪ,
2ನೇ ಸ್ಟೇಜ್, ರಾಜಾಜಿನಗರ,
ಬೆಂಗಳೂರು–560 010

೨೦. ಶ್ರೀ ಪಂಚಾಕ್ಷರಿ ಹಿರೇಮಠ
ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

೨೧. ಪ್ರೊ. ಶಾಂತರಸ,
ಪ್ರಾಂಶುಪಾಲರು,
ಜಿ.ಎಂ.ಎ. ಜ್ಯೂನಿಯರ್ ಕಾಲೇಜು,
ರಾಯಚೂರು

೨೨. ಪ್ರೊ. ಎಲ್.ಎಸ್.
ಶೇಷಗಿರಿರಾವ್
'ಜ್ಯೋತಿ' 262, 3ನೇ ಬ್ಲಾಕ್,
ಜಯನಗರ, ಬೆಂಗಳೂರು–560 011

೨೩. ಪ್ರೊ. ಕೊರಟಿ ಶ್ರೀನಿವಾಸರಾವ್
ಆನಂದ ನಿಲಯ,
ಸಮೀರಪುರಂ ಬಡಾವಣೆ,
ಚಾಮರಾಜಪೇಟೆ, ಬೆಂಗಳೂರು–18

೨೪. ಡಾ. ಎಂ.ಜಿ. ಬಿರಾದಾರ
ಕನ್ನಡಪ್ರಾಧ್ಯಾಪಕ,
ಗುಲ್ಬರ್ಗ ವಿಶ್ವವಿದ್ಯಾಲಯ,
ಗುಲ್ಬರ್ಗ

೨೫. ಡಾ. ಬಿ.ವ್ಹಿ. ಮಲ್ಲಾಪುರ
ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

೨೬. ಡಾ. ಕೆ. ಕೃಷ್ಣಮೂರ್ತಿ
ಸಂಸ್ಕೃತ ವಿಭಾಗದ ಮುಖ್ಯಸ್ಥರು,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

೨೭. ಡಾ. ಪಾ.ಶ. ಶ್ರೀನಿವಾಸ
Madhurai Kamaraj
University.
(old Buildings)
Algan Koil Road,
MADHURAI–625 002

೨೮. ಪ್ರೊ. ಎಂ.ವಿ. ಸೀತಾರಾಮಯ್ಯ
54, ಅರವಿಂದ, 3ನೆಯ ಬೀದಿ,
ಬೆಂಗಳೂರು–560 019

೨೯. ಪ್ರೊ. ಸೀತಾರಾಮ
ಜಾಗೀರ್‌ದಾರ್
9, 3ನೆಯ ಮುಖ್ಯರಸ್ತೆ,
ಸರಸ್ವತಿಪುರಂ, ಮೈಸೂರು–9

೩೦. ಪ್ರೊ. ಗುಂಡ್ಮಿ ಚಂದ್ರಶೇಖರ ಐತಾಳ
ಕನ್ನಡ ವಿಭಾಗ,
ಮಂಗಳೂರು ವಿಶ್ವವಿದ್ಯಾಲಯ,
ಮಂಗಳ ಗಂಗೋತ್ರಿ, ಕೊಣಾಜೆ,
ಮಂಗಳೂರು

೩೧. ಡಾ. ಸಿ.ಪಿ.ಕೆ.
ಕನ್ನಡ ಪ್ರಾಧ್ಯಾಪಕರು
2275–19, 'ಭಾರತಿ',
2ನೇ ಮುಖ್ಯರಸ್ತೆ, ಜಯಲಕ್ಷ್ಮೀಪುರಂ,
ಮೈಸೂರು–5700 12

೩೨. ಶ್ರೀ ಅ.ರಾ. ಮಿತ್ರ
ಕನ್ನಡ ವಿಭಾಗದ ಮುಖ್ಯಸ್ಥರು,
ಸರಕಾರಿ ಕಲಾ ಕಾಲೇಜು,
ಬೆಂಗಳೂರು–5600 01

೩೩. ಪ್ರೊ. ಗಿರಡ್ಡಿ ಗೋವಿಂದರಾಜು
ಇಂಗ್ಲಿಷ್ ವಿಭಾಗ,
ಗುಲ್ಬರ್ಗ ವಿಶ್ವವಿದ್ಯಾಲಯ,
ಗುಲ್ಬರ್ಗ

೩೪. ಡಾ. ಎಂ. ಚಿದಾನಂದಮೂರ್ತಿ
ಕನ್ನಡ ಪ್ರಾಧ್ಯಾಪಕರು,
ಜ್ಞಾನಭಾರತಿ,
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು–560 056

೩೫. ಡಾ. ಪು.ತಿ. ನರಸಿಂಹಾಚಾರ್
78, 2ನೆಯ ಮುಖ್ಯರಸ್ತೆ,
ಜಯಲಕ್ಷ್ಮೀಪುರಂ, ಮೈಸೂರು–12

೩೬. ಡಾ. ದೇವೇಂದ್ರಕುಮಾರ ಹಕಾರಿ
ಕನ್ನಡ ಅಧ್ಯಯನಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

೩೭. ಡಾ. ಕೆ. ಕುಶಾಲಪ್ಪ ಗೌಡ
Head of the Dept. of
Kannada, University of
Madras (Annexe)
Marina,
MADRAS–600 005

೩೮. ಡಾ. ಪಿ.ವಿ. ನಾರಾಯಣ
ಕನ್ನಡ ವಿಭಾಗದ ಮುಖ್ಯಸ್ಥರು,
ವಿಜಯ ಕಾಲೇಜು, ಬೆಂಗಳೂರು

೩೯. ಪ್ರೊ. ಎಸ್.ಕೆ. ರಾಮಚಂದ್ರರಾವ್
305–12, 6ನೆಯ ಕ್ರಾಸ್,
1ನೆಯ ಬ್ಲಾಕ್, ಜಯನಗರ,
ಬೆಂಗಳೂರು-560 011

೪೦. ಪ್ರೊ. ಎನ್. ಬಾಲಸುಬ್ರಹ್ಮಣ್ಯ
1552, ವಾಣೀವಿಲಾಸ ರಸ್ತೆ,
ಮೈಸೂರು–570 004

೪೧. ಡಾ. ಶಾಂತಿನಾಥ ದೇಸಾಯಿ
Head of the Dept. of
English, Shivaji
University, KOLHAPUR

೪೨. ಡಾ. ಪಿ.ವ್ಹಿ. ಮಲ್ಲಾಪುರ
ಕನ್ನಡ ವಿಭಾಗ,
ಎಸ್. ಬಿ. ಕಾಲೇಜು, ಗುಲ್ಬರ್ಗ

೪೩. ಶ್ರೀ ಬನ್ನಂಜೆ ಗೋವಿಂದಾಚಾರ್ಯರ್
ಸಂಪಾದಕರು,
"ಉದಯವಾಣಿ"
ಉಡುಪಿ, ದಕ್ಷಿಣ ಕನ್ನಡ ಜಿಲ್ಲೆ

೪೪. ಡಾ. ಕೋ. ಶಿವರಾಮಕಾರಂತ
ಸಾಲಿಗ್ರಾಮ,
ಉಡುಪಿ ತಾಲೂಕು,
ದಕ್ಷಿಣ ಕನ್ನಡ ಜಿಲ್ಲೆ

೪೫. ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ
ಕನ್ನಡ ಅಧ್ಯಯನ ಸಂಸ್ಥೆ,
ಮಾನಸ ಗಂಗೋತ್ರಿ,
ಮೈಸೂರು-6

೪೬. ಡಾ. ಎಂ. ಬಸವಣ್ಣ
Reader in psychology,
Sri Venkateswara Unvty.
TIRUPATHI

೪೭. ಶ್ರೀ ಗೌರೀಶ ಕಾಯ್ಕಿಣಿ
ಪತ್ರಿಕೋದ್ಯಮಿ,
ಗೋಕರ್ಣ, ದ.ಕ.ಜಿಲ್ಲೆ

೪೮. ಡಾ. ಸಂಧ್ಯಾರೆಡ್ಡಿ
ಉಪ ಸಂಪಾದಕಿ,
ಜಾನಪದ ವಿಶ್ವಕೋಶ,
ಕನ್ನಡ ಸಾಹಿತ್ಯ ಪರಿಷತ್ತು,
ಚಾಮರಾಜಪೇಟೆ, ಬೆಂಗಳೂರು-18

೪೯. ಡಾ. ಜಿ.ಎಸ್. ಶಿವರುದ್ರಪ್ಪ
ನಿರ್ದೇಶಕರು,
ಕನ್ನಡ ಅಧ್ಯಯನ ಪೀಠ,
ಜ್ಞಾನಭಾರತಿ,
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು-560056

೫೦. ಕುಮಾರಿ ಎಂ. ರಾಗಿಣಿ
60-1, 4ನೆಯ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು-18





ನ, ಅಧಿಕಾರ, ವಿನಯ, ಸೌಜನ್ಯ, ಸೃಜನಶೀಲತೆ-
ವು ಏಕತ್ರ ಸಮಾವೇಶಗೊಳ್ಳುವುದು ತುಂಬ
ಪರೂಪ ಎಂಬುದು ನಮ್ಮೆಲ್ಲರ ಅನುಭವಕ್ಕೆ ಬಂದ
ಷಯವಾಗಿದೆ. ಇದಕ್ಕೆ ಅಪರೂಪವಾಗಿ ನಿಂತ
ತಿಭಾಶೀಲ-ಸತ್ಪುರುಷರ ವಿರಳ ಪಂಕ್ತಿಯಲ್ಲಿ
ತಿದ್ದಾರೆ ಶ್ರೀ ಪುರಾಣಿಕರು.

* ಕುವೆಂಪು